# ಶ್ರೀ ವಿಷ್ಣುತೀರ್ಥರು

ಶ್ರೀ ವಿಷ್ಣುತೀರ್ಥರ ಚರಿತ್ರೆಯು ಅತೀವ ರಹಸ್ಯವಾಗಿದೆ, ರೋಮಾಂಚಕಾರಿಯಾಗಿದೆ, ಉದ್ಬೋಧಕವಾಗಿ ಹೃದಯಸ್ಪರ್ಶಿಯಾಗಿದೆ. ಶ್ರೀಭಾಗವತಸಾರೋದ್ಧಾರವೆ ಅನೇಕವರ್ಷಗಳವರೆಗೆ ಅಜ್ಞಾತವಾಗಿ ಉಳಿದಿತ್ತು. ಶ್ರೀಹರಿ ಭಕ್ತರ ಪರಮಭಾಗ್ಯದಿಂದ, ಮುಕ್ತಿಪಥದಲ್ಲಿ ಬೆಳಕನ್ನು ನೀಡಿ ಸಾಧಕರನ್ನು ಮುನ್ನಡೆಸುವ ಆಗ್ರಂಥ ಇಂದು ಪ್ರಚಾರ ವಾಗಹತ್ತಿದೆ, ಜನಾದರಣೀಯವಾಗ ಹತ್ತಿದೆ. ಆದರೆ ಆ ಗ್ರಂಥದ ಲೇಖಕರ ಪರಿಚಯವು ಮಾತ್ರ ಇಲ್ಲವೆನ್ನುವಷ್ಟು ಕಡಿಮೆಯಾಗಿತ್ತು. ಭಾಗವತಸಾರೋದ್ಧಾರವನ್ನು ರಚಿಸಿದವರು ಶ್ರೀಜಯತೀರ್ಥಾಚಾರ್ಯರು. ಅವರು ಸನ್ಯಾಸ ಆಶ್ರಮವನ್ನು ಸ್ವಿಕರಿಸುವ ಪೂರ್ವದಲ್ಲಿ ಪೂರ್ವಾಶ್ರಮದ ಹೆಸರಿದು. ಆಶ್ರಮಗ್ರಹಣದ ನಂತರ ಶ್ರೀ ಜಯತೀರ್ಥಾಚಾರ್ಯರು ಶ್ರೀವಿಷ್ಣುತೀರ್ಥರಾದರು: ಆಶ್ರಮ-ಸ್ವೀಕರಿಸುವ ಪೂರ್ವದಲ್ಲಿಯೆ, 'ಶ್ರೀಮದ್ಭಾಗವತಸಾರ' ವೆಂಬ ಹೆಸರಿನಿಂದ ಈ ಗ್ರಂಥವನ್ನು ರಚಿಸಿದರು. 'ಭಾಗವತಸಾರೋದ್ಧಾರ'-ವೆಂಬ ಈಗಿನ ಹೆಸರು ಹೇಗೋ ನಡುವಿನ ಅವಧಿಯಲ್ಲಿ ರೂಢವಾಗಿದೆ.

ಶ್ರೀ ಜಯತೀರ್ಥಾಚಾರ್ಯರ,-ಅನಂತರದ ಶ್ರೀ ವಿಷ್ಣುತೀರ್ಥರ-ಗೃಹಸ್ಥ ಹಾಗೂ ಸನ್ಯಸ್ತ ಜೀವನಗಳೆರಡೂ ಅಷ್ಟೇ ಉಜ್ವಲವಾಗಿವೆ. ಹರಳಿನ ತಳದಲ್ಲಿ ಹೊಳಪಿನ ವಸ್ತುವನ್ನಿಟ್ಟು, (foil) ಅದರ ಕಾಂತಿಯು ಒಡೆದು ತೋರುವಂತೆ ಮಾಡುವರು. ಜಯತೀರ್ಥಾಚಾರ್ಯರ ಸಮೃದ್ಧ ಸುಖಸಂಪತ್ತಿನ, ಭೋಗದಾಗರದ ಗೃಹಸ್ಥಜೀವನವು, ಮುಂದಿನ ಅವರ ಸನ್ಯಸ್ತ ವಿರಕ್ತ ಅವಧೂತ ಜೀವನದ ಉಜ್ವಲತೆಯನ್ನು ಎತ್ತಿತೋರಿಸಲು ಸಮರ್ಪಕವಾದ ಹಿನ್ನೆಲೆಯಾಗಿದೆ. ಶ್ರೀ ವಿಷ್ಣುತೀರ್ಥರ ವೈರಾಗ್ಯ-'ದ್ರಾಕ್ಷೆಹಣ್ಣು ಹುಳಿ' ಯೆಂದು ಹೇಳಿದ ನರಿಯ ವೈರಾಗ್ಯವಲ್ಲ 'ಅಭಾವ ವೈರಾಗ್ಯ' ವಾಗಿರಲಿಲ್ಲ. ಮುದಿ ಬದನೇಕಾಯಿ ಪಲ್ಯೆ ಮಾಡಲಿಲ್ಲ ವೆಂಬ ತಾಮಸ ಉದ್ರೇಕದ, ಉತಾವಳಿಯ 'ಬದನೇಕಾಯಿ ಸನ್ಯಾಸಿತ್ವವೂ' ಅವರದಾಗಿರಲಿಲ್ಲ. ಶ್ರೀ ವಿಷ್ಣುತೀರ್ಥರದು ವೀರ ವೈರಾಗ್ಯ. ಐಹಿಕ ವಿಷಯಗಳ ಅಸಾರತೆಯನ್ನೂ, ಅವುಗಳ ಆಸಕ್ತಿಯಿಂದ ಒದಗುವ ಅಮೂಲ್ಯಮಾನವ ಜೀವನದ ನಷ್ಟವನ್ನೂ ಅರಿತುಕೊಂಡು ನಿಚ್ಚಳವಾದ ಪ್ರಜ್ಞೆಯಿಂದ, ಅಂತಃಪ್ರೇರಣೆಯಿಂದ ಜನಿಸಿದ ವೈರಾಗ್ಯವು ಅವರದಾಗಿತ್ತು. ಅಂತಃಸ್ಫೂರ್ತವಾದ ಆ ಬಗೆಯ ವೈರಾಗ್ಯವು ಭಕ್ತಿಜನಕವಾದುದು, ಅವಿಚಲವಾದದು, ಮುಕ್ತಿಮಂದಿ

ರಕೆ ಸ್ಥಿರವಾದ ಸೋಪಾನವಾದುದು. ಜ್ಞಾನ ಹಾಗೂ ಆಚರಣೆಗಳನ್ನು ಜೀವನದಲ್ಲಿ ಹಾಸು ಹೊಕ್ಕಾಗಿ ಹೊಂದಿಸಿಕೊಂಡವರು ಅಪರೂಪ. ಜ್ಞಾನ-ಆಚರಣೆಗಳನ್ನು ಹಾಲು **ಸಕ್ಕರೆ**ಯಂತೆ ಜೀವನದಲ್ಲಿ ಬೆರಿಸಿಕೊಂಡು, ಅಮೃತತ್ವವನ್ನು ಪಡೆದ ಕೆಲವೇ ಮಹರ್ಷಿಯರಲ್ಲಿ ಶ್ರೀವಿಷ್ಣುತೀರ್ಥರೂ ಒಬ್ಬರು.

ಶ್ರೀ ವಿಷ್ಣುತೀರ್ಥರ ಪೂರ್ವಾಶ್ರಮ ಹಾಗೂ ಸನ್ಯಾಸಾಶ್ರಮಗಳಲ್ಲಿಯ ಘಟನೆಗಳನ್ನು ಪರಿಶ್ರಮದಿಂದ ಸಂಶೋಧಿಸಿ, 'ಶ್ರೀಹರಿಭಕ್ತವಿಜಯ' ವೆಂಬ ತಮ್ಮ ಗ್ರಂಥದಲ್ಲಿ ಪರಮವಂದ್ಯರಾದ ಶೀ ಗುರುಗೋವಿಂದ ವಿಠಲದಾಸರು ಶೇಖರಿಸಿ, ಶ್ರೀವಿಷ್ಣುತೀರ್ಥರ ಭಕ್ತವೃಂದದ ಬಹುದಿನದ ಬೇಡಿಕೆಯನ್ನು ಪೂರೈಸಿದ್ದಾರೆ, ಅವರ ಕೃತಜ್ಞತೆಗೆ ಪಾತ್ರರಾಗಿದ್ದಾರೆ. ಅವರು ನಿರೂಪಿಸಿರುವ ಘಟನೆಗಳನ್ನೇ ಮೂಲವಾಗಿ ಇಟ್ಟುಕೊಂಡು ಶ್ರೀ ವಿಷ್ಣುತೀರ್ಥರ ಚರಿತ್ರೆಯನ್ನು ಸಾರೋದ್ಧಾರದ ಅನುವಾದಕ್ಕೆ ಪೀಠಿಕೆಯಾಗಿ, ಗ್ರಂಥಕರ್ತರ ಮಹಿಮೆಯು ಓದುಗರಿಗೆ ತಿಳಿಯಲ್ಲಿ, ಶ್ರೀ ವಿಷ್ಣುತೀರ್ಥರ ಬಗ್ಗೆ ಅವರ ಭಕ್ತಿಗೌರವಗಳು ಇಮ್ಮಡಿಯಾಗಲಿ-ಎಂದು ಇಲ್ಲಿ ಅತಿಸಂಕ್ಷೇಪವಾಗಿ ಕೊಟ್ಟಿದೆ.

ಶಿರಹಟ್ಟಿ ತಾಲೂಕಿನ ಭೂಪ್ರದೇಶವು ಒಳ್ಳೇ ಫಲವತ್ತಾದುದು, ಹಸಿರು ಮುರಿವ ಹೊಲಗದ್ದೆಗಳಿಂದ, ಸರ್ವದಾ ಫಲಭರಿತ ತೋಟಗಳ ಬನಸಿರಿಯಿಂದ ಕಣ್ಮನಗಳಿಗೆ ಕಮನೀಯವಾದುದು, ಇಂಥಪ್ರದೇಶದಲ್ಲಿ ೧೭ನೇ ಶತಮಾನದ ಆದಿಭಾಗದಲ್ಲಿ ತಿರುಮಲಾಚಾರ್ಯ ರೆಂಬ ಖ್ಯಾತಪಂಡಿತರಿದ್ದರು, ಅವರದು ಧರ್ಮನಿಷ್ಠವಾದ ತಪಸ್ವಿಜೀವನ. ಅವರ ಲೋಕಪ್ರಿಯತೆಗೆ ಮತ್ಸರಿಸುವ ಕುಹಕಿಗಳೂಕೂಡ ಪರಮಾತ್ಮಚಿಂತನೆಯಲ್ಲಿ ಅವರ ತಲ್ಲೀನತೆಯನ್ನೂ ಅವರ ತೇಜಸ್ಸನ್ನೂ ಕಂಡು ತಲೆಬಾಗುತ್ತಿದ್ದರು.

ಕೈಹಿಡಿದ ಮಡದಿಯನ್ನು ಕಳಕೊಂಡು, ಮುಪ್ಪಿನಂಚಿನಲ್ಲಿದ್ದರೂ, ಸಂತಾನದಿಂದ ಪಿತೃಋಣ ತೀರಿಸಬೇಕೆಂಬ ಅತೃಪ್ತ ಆಕಾಂಕ್ಷೆ ಅವರಲ್ಲಿ ಬಲವಾಯಿತು. ಈ ಆಕಾಂಕ್ಷೆಯಿಂದ ಪ್ರೇರಿತರಾಗಿ, ಆ ಭಾಗದ ದೊರೆಯಾದ ರಾಜನೃಸಿಂಹನ ಅರಮನೆಗೆ ಹೋದರು ಹಿಂದಿನರಾತ್ರಿಯಲ್ಲಿಯೆ ಶ್ರೀ ವೆಂಕಟೇಶನು ನಾಳೆ ಬೆಳಗ್ಗೆ ಬರುವ ಕನ್ಯಾರ್ಥಿಯಾದ ಬ್ರಾಹ್ಮಣನಿಗೆ ತನ್ನ ಮಗಳನ್ನು ಧಾರೆಯೆರೆದು ಕೊಡಬೇಕೆಂಬ ಆದೇಶವನ್ನು ಕನಸಿನಲ್ಲಿ ಆ ರಾಜನಿಗೆ ನೀಡಿದ್ದನು. ಶ್ರೀ ವೆಂಕಟೇಶನ ಕೃಪೆಯಿಂದ ಮುಪ್ಪಿನಲ್ಲಿಯೆ ಸಂಸಾರಿಗಳಾಗಿ ನಾಲ್ಕು ಗಂಡುಮಕ್ಕಳಿಗೆ, ಒಂದು ಹೆಣ್ಣುಮಗುವಿಗೆ ಅವರು ತಂದೆಯಾದರು ತಿರುಮಲಾಚಾರ್ಯರು ತ್ರಿಕರಣ

ಶುದ್ಧರು, ತ್ರಿಕಾಲಜ್ಞರು ವಾಕ್‌ಸಿದ್ಧಿಯನ್ನು ಪಡೆದು ಅವರಾಡುವ ಮಾತು ಎಂದಿಗೂ ಸುಳ್ಳಾಗುತ್ತಿರಲಿಲ್ಲ. ಇತ್ತ, ಶ್ರೀಮತ್ ಟೀಕಾಚಾರ್ಯರ ತಮ್ಮ ಮೇರುಕೃತಿಯಾದ ಶ್ರೀಮನ್ನ್ಯಾಯ ಸುಧಾ ಗ್ರಂಥದ ತಾತ್ಪರ್ಯ-ಸಾರಾಂಶಗಳನ್ನು ಸಾಮಾನ್ಯ ಬುದ್ಧಿಯ ಜನರಿಗೂ ತಿಳಿಯುವಂತೆ ಬೋಧಿಸಲು ಸಮರ್ಥನಾದ ತಮ್ಮ ಶಿಷ್ಯ ನಿಗೆ ಶ್ರೀ ತಿರುಮಲಾಚಾರ್ಯರ ಪವಿತ್ರ ವಂಶದಲ್ಲಿ ಹುಟ್ಟಿಬರಲು ಆಜ್ಞೆಯಿತ್ತರು. ಅಂಥ ಮಹಾನುಭಾವನು ತಮ್ಮ ಮೊಮ್ಮಗನಾಗಿ ಅವತರಿಸುವನೆಂಬುದು ತ್ರಿಕಾಲ ಜ್ಞರಾದ ತಿರುಮಲಾಚಾರ್ಯರಿಗೆ ತಿಳಿದಿತ್ತು. ಆತನ ಬರುವಿಕೆಯನ್ನು ಆಚಾ ರ್ಯರು ಆತುರತೆಯಿಂದ ದಾರಿಕಾಯುತ್ತಿದ್ದರು.

ತಿರುಮಲಾಚಾರ್ಯರ ಮಗ ನರಹರಿ ಆಚಾರ್ಯರು, ಬಾಳಾಚಾರ್ಯರೆಂ ಬುದೂ ಅವರಿಗೆ ಇನ್ನೊಂದು ರೂಢವಾದ ಹೆಸರು. ಅವರ ಮಡದಿ ಭಾಗೀರಥಿ ಯೆಂಬವಳು ಭಾಗೀರಥಿ ನದಿಯಂತೆಯೆ ಪಾವನಳು. ಪತಿ ಪರಾಯಣೆಯಾದ ಅವಳು ತನ್ನ ಮಾವನ ಸೇವೆಯನ್ನು ಭಕ್ತಿ-ಆದರಗಳಿಂದ ಮಾಡುತ್ತಿದ್ದಳು. ಅವಳ ಉದರದಲ್ಲಿ, ಶ್ರೀ ಟೀಕಾಚಾರ್ಯರೆ ಜನಿಸುವರೆಂದೂ, ಸೊಸೆಯ ಸೇವೆಯಿಂದ ಸಂತುಷ್ಟರಾದ ತಿರುಮಲರು ಅವಳಿಗೆ ಮುಂಬರುವದನ್ನು ತಿಳಿಸಿದರು. ಆ ಮಗು ವಿಗೆ ಜಯತೀರ್ಥರ ಹೆಸರನ್ನೇ ಇಡಬೇಕೆಂದು ಸೂಚಿಸಿದರು. ಭಾಗೀರಥೀಬಾ ಯಿಯ ಬಸುರಿನ ಬಯಕೆಯೂ ಅಲೌಕಿಕವಾದುದು. ಅವಳ ಮನಸ್ಸು ಮಿಷ್ಟಾ ನ್ನಗಳ ಕಡೆಗೆ ಹರಿಯಲಿಲ್ಲ. ಬೆಡಗಿನ ಬಟ್ಟೆ ತೊಡುವುಗಳಿಗಾಗಿ ಹಂಬಲಿಸಲಿಲ್ಲ. ದೇವದೇವತೆಗಳ ಪೂಜೆ ಪುರಸ್ಕಾರಗಳಲ್ಲಿ ಪಾಲುಗೊಳ್ಳುವದು. ಭಾರತ-ಭಾಗವತ ಗಳಲ್ಲಿಯ ಶ್ರೀಹರಿ ಕಥಾಶ್ರವಣದಲ್ಲಿ ತೊಡಗುವದು. ಇವುಗಳಿಂದಲೆ, ಅವಳು ಅತೀವ ಸಂತಸಪಡುತ್ತಿದ್ದಳು. ತನ್ನ ಗರ್ಭದಿಂದ ಜನಿಸುವ ಮಹಾಮಹಿಮನ ಬರುವಿಕೆಗೆ ಇವೆಲ್ಲ ಪೂರ್ವಸೂಚನೆಗಳು 'ನ ಪ್ರಭಾತರಲಂಜ್ಯೋತಿಃ ಉದೇತಿ ವಸುಧಾತಲಾತ್' ಮಿಂಚಿನ ಉತ್ಪತ್ತಿ ಭೂಮಿಯಿಂದಲ್ಲ. ದೈವಿಕ ಶಿಶುವಿಗೆ ತಕ್ಕಂತೆ ಗರ್ಭವು ಪಾತ್ರತೆಯನ್ನು ಪಡೆಯಬೇಕು. ಅದೇ ಸಮಯದಲ್ಲಿ ಸುರ ಲೋಕದ ಸಾರಭವನ್ನು ಬೀರುತ್ತ ಸರ್ಪಶ್ರೇಷ್ಠರು ಅವಳಿಗೆ ಕಾಣಿಸಿಕೊಂಡರು 'ಶೇಷಾವೇಶರಾದ ಜಯತೀರ್ಥರು ದರ್ಶನಕೊಟ್ಟಿದ್ದಾರೆ. ಅವರೇ ಜಯತೀರ್ಥ ನೆಂಬ ಹೆಸರಿನಿಂದ ನಿನಗೆ ಮಗನಾಗಿ, ವೈಷ್ಣವ ವೃಂದವನ್ನು ಉದ್ಧರಿಸುತ್ತಾರೆ. ಎಂಬ ಮಾವನವರ ಭವಿಷ್ಯ, ಹಾಗೂ ಅಶರೀರವಾಣಿಯು ಅವಳ ಭೀತಿಯನ್ನು ಕಳೆದು ಸಾಂತ್ವನಗೊಳಿಸಿತು. ಮುಂದೆ ಕೆಲವೇ ದಿನಗಳಲ್ಲಿ, ಅವಳ ಮಾವನವರು ಕಾಲವಶರಾದರು.

ಬೆಳೆಯುವ ಕುಟುಂಬಕ್ಕೆ ಮನೆಯು ಚಿಕ್ಕದಾದ್ದರಿಂದ, ಬಾಳಾಚಾರ್ಯರು ಆಸ್ಥಳವನ್ನು ಬಿಟ್ಟು ಸಿದ್ಧಾಪೂರವೆಂಬ ಗ್ರಾಮಕ್ಕೆ ಬಂದು ಅಲ್ಲಿಯೆ ನೆಲಿಸಿದರು ಸಿದ್ಧಾಪೂರವು ಸವಣೂರಿನಿಂದ ೧೫ ಮೈಲು ದೂರದಲ್ಲಿದೆ. ಇದೇ ಚಿಕ್ಕ ಗ್ರಾಮದಲ್ಲಿ ಶಕೆ ೧೬೦೮ರ ಈಶ್ವರ ಸಂವತ್ಸರದಲ್ಲಿ ಶ್ರಾವಣ ಮಾಸದ ಕೃಷ್ಣಪಕ್ಷ ಅಷ್ಟಮಿ ಚಂದ್ರೋದಯ ಕಾಲಕ್ಕೆ, ಭಗವಂತನು ಶ್ರೀಕೃಷ್ಣಾವತಾರ ಮಾಡಿದ ಕಾಲಕ್ಕೆ ಸಮನಾಗಿಯೆ ಶ್ರೀಜಯತೀರ್ಥರು ಜನಿಸಿದರು. ವೈಷ್ಣವಾಗ್ರಣಿಗೆ ಜನ್ಮಕೊಟ್ಟ ಪರಮಪುಣ್ಯ ಆ ಚಿಕ್ಕಹಳ್ಳಿಗೆ ದೊರೆತಿತು. ಆಪುಣ್ಯದ ಫಲವೇ ಎಂಬಂತೆ ಇಂದಿಗೂ ಆ ಗ್ರಾಮದ ಸುತ್ತುಮುತ್ತಲೂ ಸಮೃದ್ಧವಾದ ತುಳಸೀವನ ಕಂಡುಬರುತ್ತಿದೆ.

ಜಯತೀರ್ಥರು ಬಿದಿಗೆಯ ಚಂದ್ರನಂತೆ ಬೆಳೆದರು. ಬಾಳಾಚಾರ್ಯರು ಸಮಯೋಚಿತವಾಗಿ ಎಲ್ಲ ಸಂಸ್ಕಾರಗಳನ್ನು ಜರುಗಿಸಿದರು. ಬಾಲ್ಯದಲ್ಲಿಯೂ ತಮ್ಮ ರೂಪ-ಗುಣ-ಬುದ್ಧಿಮತ್ತೆಗಳಿಂದ ಅವರು ಎಲ್ಲರ ಕಣ್ಮಣಿಗಳಾಗಿದ್ದರು. ಮುದ್ದಾದ ಬಾಲ ಲೀಲೆಗಳಿಂದ ತಾಯಿ-ತಂದೆಗಳಿಗೆ ಮಾತ್ರವಲ್ಲದೆ, ಎಲ್ಲರಿಗೂ ಮೋದವನ್ನು ಬೀರಿದರು. ಅವರು ಜನ್ಮತಾಳಿದ ಮನೆಯನ್ನು ಆನಂತರ ಕೊಂಡಿರುವ ಕುರುಬ ಕುಟುಂಬವೂ 'ಅಡವಿ'ಯೆಂಬ ಅಡ್ಡ ಹೆಸರನ್ನೇ ಇಟ್ಟುಕೊಂಡಿದೆ. ಎಂಟನೆಯ ವರುಷದಲ್ಲಿ ಅವರಿಗೆ ಉಪನಯನವಾಯಿತು. ತಂದೆಯಿಂದ ಗಾಯತ್ರೀ ಮಂತ್ರದ ಉಪದೇಶವನ್ನು ಪಡೆದರು. ಬಾಲ್ಯದಿಂದಲೂ ಶ್ರೀಸುಮಧ್ವವಿಜಯದ ಪಾರಾಯಣ. ಆಗಲೇ ಕೆಲವು ಸಿದ್ಧಿಗಳೂ ಅವರಿಗೆ ಪ್ರಾಪ್ತವಾದವು. ಮುಂದಿನ ಅಧ್ಯಯನಕ್ಕಾಗಿ ಗುರುವಿನ ಶೋಧದಲ್ಲಿ ತೊಡಗಿದರು. ಶ್ರೀ ಮಂತ್ರಾಲಯದಲ್ಲಿ ಶ್ರೀ ರಾಘವೇಂದ್ರ ಸ್ವಾಮಿಗಳ ಸೇವೆ ಮಾಡಿ, ಹೆಚ್ಚಿನ ವಿದ್ಯೆಗಾಗಿ, ಗದ್ವಾಲಿ ಸೀಮೆಯಲ್ಲಿರುವ ಪ್ರಕಾಂಡಪಂಡಿತರಾದ ಐಜೀ ವೆಂಕಟರಾಮಾಚಾರ್ಯರನ್ನು ಆಶ್ರಯಿಸಲು ಅವರಿಂದ ಆದೇಶವನ್ನು ಪಡೆದರು. ಐಜೀ ಆಚಾರ್ಯರು ಮಹಾನ್ ಪಂಡಿತರಿದ್ದಂತೆ, ಮಹಾನ್ ತಪಸ್ವಿಗಳೂ ಆಗಿದ್ದರು. ಅಂತಃಪ್ರೇರಣೆಯಿಂದ ಬೀಚಿಪಲ್ಲಿ ಯೆಂಬಲ್ಲಿಯ ಪ್ರಾಣದೇವರನ್ನು ದೀರ್ಘಕಾಲ ಆರಾಧಿಸಿ, 'ವಾಸುದೇವವಿಠಲ' ನೆಂಬ ಅಂಕಿತವನ್ನು ಅವರು ಪಡೆದು 'ಮಾನಸಸ್ಮೃತಿ' ಮುಂತಾದ ಅನೇಕ ಪ್ರೌಢಗ್ರಂಥಗಳನ್ನು ರಚಿಸಿರುವರು, ಸನ್ಯಾಸವನ್ನು ಸ್ವೀಕರಿಸಿದ ನಂತರ, 'ವ್ಯಾಸತಂತ್ರಜ್ಞ'ರೆಂದು ಅವರು ವಿಖ್ಯಾತರಾಗಿರುವರು. ದೇವಾಂಶರಾದ ಜಯತೀರ್ಥರು ಮಾನವರಾಗಿ ಅವತರಿಸಿದ ಮೇಲೆ, ಶಿಷ್ಯತ್ವವನ್ನು ವಹಿಸಿ, ಲೋಕರೀತಿಯನ್ನೇ ಅನುಸರಿಸಿದರು. ದೇವಾಂಶರಾದ ಶಿಷ್ಯನು ದೊರೆತಿದ್ದರಿಂದ, ಅಪರೋಕ್ಷಿಗಳಾದ ಐಜೀ ಆಚಾರ್ಯರಿಗೆ ಪರಮ ಧನ್ಯತೆಯೆನಿಸಿತು.

ಒಂದು ಸಮಯ, ಐಜೀ ಆಚಾರ್ಯರು ತಮ್ಮ ಶಿಷ್ಯನ ಮನೆಗೆ ಹೊರಟಿದ್ದರು. ನಡುಬೇಸಿಗೆಯ ಬಿಸಿಲು, ಶಿಷ್ಯೋತ್ತಮರಾದ ಜಯತೀರ್ಥರು ಬರಿಗಾಲಿನಿಂದಲೆ ಆಚಾರ್ಯರ ಕುದುರೆಯ ಜೊತೆಯಾಗಿ ಬರುತ್ತಿದ್ದರು. ಕಾಲುಸುಡಬಾರದೆಂದು ತಮ್ಮ ಪಾದ ರಕ್ಷೆಗಳನ್ನು ತೊಡಲು ಜಯತೀರ್ಥರಿಗೆ ಕೊಟ್ಟರು. ಆದರೆ ಅವುಗಳನ್ನು ತೊಡದೆ ಭಕ್ತಿಯಿಂದ ತಮ್ಮ ತಲೆಯಮೇಲಿಟ್ಟುಕೊಂಡು ಜಯತೀರ್ಥರು ಮುಂದುವರಿದರು.ಗುರುಗಳ ಪರಮಾನುಗ್ರಹಕ್ಕೆ ಪಾತ್ರರಾದರು,

ವಿದ್ಯಾಭ್ಯಾಸವನ್ನು ಮುಗಿಸಿಕೊಂಡು ಜಯತೀರ್ಥಾಚಾರ್ಯರು ವಿವಾಹಿತರಾದರು. ಪತಿಭಕ್ತೆಯಾದ ಮಡದಿಯೊಡನೆ ಸ್ವಗ್ರಾಮದಲ್ಲಿ ಪಾಠ ಪ್ರವಚನ ಮಾಡುತ್ತ ನೆಲಸಿದರು. ಶಿಷ್ಯರಿಂದ ಬರುವ ವಿಪುಲ ಸಂಪತ್ತಿಯಿಂದ ಸುಖೋಪಭೋಗಕ್ಕೆ ಕೊರತೆಯಿರಲಿಲ್ಲ. ತುಸು ತಡವಾಗಿ ಪುತ್ರ ಸಂತಾನವೂ ಆಯಿತು, ಪತ್ನಿಯ ಆಕಾಂಕ್ಷೆಯೂ ಈಡೇರಿತು, ಮಗನಿಗೆ ಕೃಷ್ಣನೆಂಬ ಹೆಸರನ್ನಿಟ್ಟರು.

ಶ್ರೀ ಜಯತೀರ್ಥರು ಶ್ರೀ ಟೀಕಾಕೃತ್‌ಪಾದರ ಆದೇಶವನ್ನು ವಹಿಸಿಕೊಂಡು ಜನಿಸಿದರು ಆದನ್ನು ಈಡೇರಿಸುವ ಕಾಲ ಸನ್ನಿಹಿತವಾಯಿತು. ಆಚಾರ್ಯರನ್ನು ಪ್ರವೃತ್ತಮಾರ್ಗದಿಂದ ನಿವೃತ್ತಮಾರ್ಗಕ್ಕೆ ತಿರುಗಿಸಲು ಒಂದು ಸಂದರ್ಭವು ಒದಗಿತು. ಸಂದರ್ಭವು ತೀರ ಸಾಮಾನ್ಯವೆನಿಸಿದರೂ, ಜಯತೀರ್ಥಾಚಾರ್ಯರ ಜೀವನವನ್ನೇ ಅದು ಪೂರ್ಣವಾಗಿ ಪಲ್ಲಟಿಸಿತು, ಆದಕ್ಕೆ ಹೊಸ ತಿರುವನ್ನು ತಂದು ಕೊಟ್ಟಿತು. ದೇಹಾಲಸ್ಯದಿಂದ ಹಂಸ ತುಪ್ಪಳದ ಸುಪ್ಪತ್ತಿಗೆಯ ಮೇಲೆ ಅವರು ಪವಡಿಸಿದ್ದರು. ಸಾಧ್ವಿಯಾದ ಪತ್ನಿಯು ಆರೈಕೆ ಮಾಡುತ್ತಿದ್ದರು. 'ಮಂಚ ಬಾರದು, ಮಡದಿ ಬಾರಳು, ಕಂಚು ಕನ್ನಡಿ ಬಾರದು ... ಗೋವಿಂದಾ, ನಮ್ಮ ರಕ್ಷಿಸೊ' – ಬೀದಿಗುಂಟ ಹಾಡುತ್ತ ನಡೆದಿದ್ದ ದಾಸಯ್ಯನ ನುಡಿಯು ಅವರ ಕಿವಿಗೆ ಬಿದ್ದಿತು, ಹೃದಯವನ್ನು ತಾಕಿತು. ಅಂತರಂಗದಲ್ಲಿ ಹುದುಗಿಕೊಂಡಿದ್ದ ವೈರಾಗ್ಯದ ಒಲವನ್ನು ಹೊಡೆದೆಬ್ಬಿಸಿದಂತಾಯಿತು. ತಾವು ಯಾವ ಕಾರ್ಯಕ್ಕಾಗಿ ಜನಿಸಿರುವೆವೆಂಬುದರ ನೆನಪು ಉಕ್ಕಿಬಂದಿತು. ತತ್‌ಕ್ಷಣವೇ, ಉಟ್ಟಬಟ್ಟೆಯೊಡನೆ ಮಡದಿ, ಮಗನೊಂದಿಗೆ ಮನೆಯನ್ನು ಬಿಟ್ಟರು. ತಮ್ಮ ಸಿರಿಸಂಪತ್ತನ್ನೆಲ್ಲಿ ಅಗತಿಕರಿಗೆ ದಾನಮಾಡಿದರು. ವಿರಾಗಿಗಳಾಗಿ, ಸಚ್ಛಾಸ್ತ್ರಪ್ರವರ್ತಕರಾಗಿ ದೇಶಸಂಚಾರ ಕೈಕೊಂಡರು. ಒಂದು ಚಿಕ್ಕ ಘಟನೆ ಜೀವನವನ್ನೇ ಪಲ್ಲಟಿಸಿದ ಉದಾಹರಣೆಗಳು ಅನೇಕ ಮಹಾತ್ಮರ ಜೀವನದಲ್ಲಿ ಕಂಡುಬರುವವು. ಮಹಾಪುರುಷರ ಜೀವನವನ್ನು ಪಲ್ಲಟಿಸಲು ಆಕಸ್ಮಿಕ ಚಿಕ್ಕಘಟನೆ ಒಂದು ನಿಮಿತ್ತಮಾತ್ರ. ಜನ್ಮಜನ್ಮಾಂತರಗಳಲ್ಲಿ ಅವರು ಮಾಡಿದ ವೈರಾಗ್ಯದ ಸಾಧನೆ ಗೈದ ತಪಸ್ಸು ಪರಿಪಾಕಪಡೆದು ಅಂಥ ಮಹಾ

ಪುರುಷರ ಅಂತರಂಗದಲ್ಲಿ ಮದ್ದಿನ ಕೋಣೆ (arsenal) ಯಂತೆ ಸಂಗ್ರಹೀತವಾಗಿ ರುತ್ತದೆ, ಸ್ಫೋಟಕ್ಕಾಗಿ ದಾರಿಕಾಯುತ್ತಿದೆ. ಚಿಕ್ಕಘಟನೆಯ ರೂಪದಲ್ಲಿಯು ಒಂದು ಬೆಂಕಿಯ ಕಿಡಿ, ವೈರಾಗ್ಯದ ಮದ್ದಿನ ಸಂಗ್ರಹಕ್ಕೆ ತಾಕಿ, ಅದನ್ನು ಸ್ಫೋಟಗೊಳಿ ಸುತ್ತಿದೆ. ಜನ್ಮಜನ್ಮಾಂತರಗಳ ಹಿಂದಿನ ಸಂಗ್ರಹವಿಲ್ಲದಿದ್ದರೆ, ಈ ಬಗೆಯ ವೀರ ವೈರಾಗ್ಯವು ಒಮ್ಮೆಲೆ ಹೊರಹೊಮ್ಮಲಾರದು. ಕಲಿಯುಗದಲ್ಲಿ ಶ್ರೀ ಹರಿನಾಮ ಸಂಕೀ ರ್ತನೆಯು ಪುರುಷಾರ್ಥಪ್ರಾಪ್ತಿಗೆ ಅತಿಸುಲಭ ಸಾಧನವಾದರೂ, ಎಲ್ಲರೂ ಅದರಲ್ಲಿ ಪ್ರವೃತ್ತರಾಗುವದಿಲ್ಲ. ಜನ್ಮಜನ್ಮಾಂತರಗಳಲ್ಲಿ ಭಾಗವತ ಧರ್ಮಗಳ ಆಚ ರಣೆಯನ್ನು ಮಾಡಿ, ಅವರು ಪುಣ್ಯ ಸಂಚಯ ಮಾಡದಿರುವದೇ ಅದಕ್ಕೆ ಕಾರಣ ವೆಂದು ಶ್ರೀ ವಿಷ್ಣುತೀರ್ಥರೂ ಇದೇ ವಿಚಾರವನ್ನೇ ಹೇಳಿರುವದು.

ಸುಜೀವಿಗಳಾದ ಸಾಧಕುಲಕ್ಕೆ ಸಚ್ಛಾಸ್ತ್ರವನ್ನು ಉಪದೇಶಿಸುವದೇ ಅವಧೂತ ಚರ್ಯೆಯನ್ನು ಕೈಕೊಂಡ ಶ್ರೀ ಜಯತೀರ್ಥಾಚಾರ್ಯರ ಮುಖ್ಯ ಕಾರ್ಯ ವಾಯಿತು. ಸಂಚಾರ ಕ್ರಮದಲ್ಲಿ ಸವಣೂರಿಗೆ ಬಂದು, ಶ್ರೀ ಸತ್ಯಬೋಧತೀರ್ಥ ರಿಂದ ಅನುಗೃಹೀತರಾಗಿ, ಮೊದಲಿನಿಂದಲೂ ಪರಿಚಿತವಾದ ಕಿನ್ಹಾಳ ಕಿನ್ನರರ ಆಲಯಕ್ಕೆ ಬಂದರು. ಬದರೀ ಯಾತ್ರೆಯನ್ನು ಮಾಡಬೇಕೆಂಬ ಪ್ರಬಲ ಆಕಾಂಕ್ಷೆ ಯಾಗಲು, ಗುರಗಳಾದ ಶ್ರೀ ಟೀಕಾಚಾರ್ಯರು ಕನಸಿನಲ್ಲಿ ಕಾಣಿಸಿಕೊಂಡರು,- ಶ್ರೀಮನ್ನ್ಯಾಯಸುಧೆಯ ಸಾರವನ್ನು ಸುಜನರಿಗೆ ಸುಗಮವಾಗಿ ಹೇಳುವದೇ ಜೀವನ ದಲ್ಲಿ ನಿನಗೆ ಮುಖ್ಯ ಕಾರ್ಯ- ಶ್ರೀ ಬದರೀಯಾತ್ರೆಯ ಫಲವೆಲ್ಲ ನಿನಗೆ ಅದರಿಂದಲೆ ದೊರೆಯುವದು. ಎಂದು ಹೇಳಿ ಆ ಕಾರ್ಯಕ್ಕೆ ಅಗತ್ಯವಿದ್ದ ಶಕ್ತಿ-ಪಾತ್ರತೆ ಗಳನ್ನೂ ಅನುಗ್ರಹಿಸಿದರು. ಅದಲ್ಲದೆ ಶ್ರೀ ಬದರೀಕ್ಷೇತ್ರದ ಸಮಗ್ರದರ್ಶನವನ್ನೂ ಸ್ವಪ್ನದಲ್ಲಿಯೆ ಅವರಿಗೆ ಮಾಡಿಸಿದರು. ಗುರುಗಳಿಂದ ಹೀಗೆ ಅನುಗ್ರಹೀತರಾದ ಜಯತೀರ್ಥರು ಸುಧಾ ಗ್ರಂಥಕ್ಕೆ ವ್ಯಾಖ್ಯಾನವನ್ನು ಬರೆಯುವ ದೃಢನಿರ್ಧಾರ ಮಾಡಿದರು. ಸುಧಾ ಪ್ರವಚನವೇ ಅವರಿಗೆ ಸಕಲ ತೀರ್ಥಯಾತ್ರೆ ಆಯಿತು.

ಕೃಷ್ಣಾತೀರದಲ್ಲಿ 'ಮೊರಬ' ವೆಂಬದೊಂದು ಗ್ರಾಮ, ಪರಶಿವನೇ ಸೂಚಿ ಸಿದ ಒಬ್ಬ ಸದ್ವಿಪ್ರನಿಗೆ ಗಂಗೆಯು 'ಮೊರದಬಾಗಿಣ' ವನ್ನು ಕೊಟ್ಟಿದ್ದರಿಂದ, ಆಸ್ಥಳಕ್ಕೆ 'ಮೊರಬ' ವೆಂಬಹೆಸರು. ಮೊರಬದಲ್ಲಿ ಶೇಷಾಚಾರ್ಯರೆಂಬವರು ಮಹಾಪಂಡಿತರು, ಮಹಾತಪಸ್ವಿಗಳು ತಮ್ಮ ಸ್ವರೂಪೋದ್ಧಾರಕ ಗುರುವನ್ನು ಪಡೆಯಲು ಅವರು ಹಂಬಲಿಸುತ್ತಿದರು. ನೆರೆಯ ಗುರ್ಲಹೊಸೂರಿನಲ್ಲಿ (ಗುರುನ ವೀನಗ್ರಾಮದಲ್ಲಿ) ಇರುವ ಜಾಗೃತ ಪ್ರಾಣದೇವನ್ನು ಅಂಥ ಗುರುವಿನಪ್ರಾಪ್ತಿ ಗಾಗಿ ಶೇಷಾಚಾರ್ಯರು ಆರಾಧಿಸುತ್ತಿದ್ದರು. ಅದೇ ಸಮಯಕ್ಕೆ ಶ್ರೀಜಯತೀ

ರ್ಥರು ಸಂಚಾರಕ್ರಮದಲ್ಲಿ ಅಲ್ಲಿಗೆಬಂದರು. ಜಯತೀರ್ಥರನ್ನೇ ತಮ್ಮ ಉದ್ಧಾರಕ ಗುರುವನ್ನಾಗಿ ಮಾಡಿ ಕೊಳ್ಳಬೇಕೆಂಬ ಪ್ರಾಣದೇವರ ಆದೇಶವನ್ನು ಪಡೆದು, ಶೇಷಾಚಾರ್ಯರು ಅವರನ್ನೇ ತಮ್ಮ ಆರಾಧ್ಯಗುರುವನ್ನಾಗಿ ಮಾಡಿಕೊಂಡರು. ಶೇಷಾಚಾರ್ಯರನ್ನು ನಿಮಿತ್ತವಾಗಿ ಮಾಡಿಕೊಂಡು ತಮ್ಮ ಅನೇಕ ಶಿಷ್ಯರಿಗೆ ಜಯತೀರ್ಥರು ಶ್ರೀಮದಾಚಾರ್ಯರ ಸಚ್ಛಾಸ್ತ್ರದ ಸದುಪದೇಶಮಾಡುತ್ತಿದ್ದರು. ದೂರದಲ್ಲಿರುವ 'ವಿದ್ಯಾಕುಮಾರರಾದ' ತಮ್ಮ ಶಿಷ್ಯರಿಗಾಗಿ (ಶ್ರೀವಿಷ್ಣುತೀರ್ಥರ ಉಪದೇಶಪತ್ರವೆಂದು ಕರೆಯಲ್ಪಡುವ) ಒಂದು 'ಆಜ್ಞಾಪತ್ರ' ವನ್ನು ಬರೆದರು. ಈ ಆಜ್ಞಾ ಪತ್ರವು ಜೀವನದ ಸಫಲತೆಗೆ ಮಾರ್ಗದರ್ಶಕವಾಗಿದೆ. ಆಯುಷ್ಯದಗಳಿಗೆ ಗಳಿಗೆಯನ್ನು ಜೀವನದ ಸಫಲತೆಗಾಗಿ ಹೇಗೆ ಸದ್ವಿನಿಯೋಗ ಮಾಡಬೇಕೆಂಬುದನು ಆ ಪತ್ರದಲ್ಲಿ ವಿವರಿಸಿದ್ದಾರೆ. ಯುಗಾಧಿಪನಾದ ಕಲಿಯು ಮಡದಿಮಕ್ಕಳಲ್ಲಿ ಆವಿಷ್ಟನಾಗಿ (ಒಳಗೆನಿಂತು) ನಮ್ಮನ್ನು ಹೇಗೆ ಅಡ್ಡದಾರಿಗೆ ಸೆಳೆಯುವನೆಂಬುದನ್ನೂ ಎತ್ತಿ ತೋರಿಸಿದ್ದಾರೆ. ಅಲ್ಲಿರುವಾಗಲೆ, ವೈಷ್ಣವಾಗ್ರಣಿ, ವೃಷಭವಾಹನನಾದ ರುದ್ರದೇವರ ಹಾಗೂ ಪ್ರಾಣದೇವರ ದರ್ಶನವನ್ನು ತಮ್ಮ ಶಿಷ್ಯರಿಗೆ ಮಾಡಿಸಿದರು, ಕಲಿಯ ಸ್ವರೂಪವನ್ನೂ ತೋರಿಸಿದರು. ತಮ್ಮ ಪ್ರವಚನ ಸ್ಥಳದಲ್ಲಿ ದೀಪ ಹಚ್ಚುವ ಸೇವೆಯಿಂದ, ಪ್ರೀತಿಯ ಸೊಸೆಯಾದ ಸತ್ಯಾಬಾಯಿಯ ಸಂತಾನಾಕಾಂಕ್ಷೆಯನ್ನು ಪೂರೈಸಿದರು. ಅವರು ಸದಾ ಪ್ರವಚನಮಾಡುವಾಗ ಸುತ್ತಲೂ ಸುಗಂಧಹರಡುತ್ತಿತ್ತು. ಅವರು ಶ್ರೀಸುಧಾ ಪ್ರವಚನದ ಮಂಗಳೋತ್ಸವವನ್ನು ಮಾಡಿದರು.

ಶ್ರೀ ಜಯತೀರ್ಥರು, ತ್ರಿಕಾಲಜ್ಞರು, ದೇವಾಂಶಸಂಭೂತರೆಂಬುವದಕ್ಕೆ ಒಂದು ಸಂಗತಿಯನ್ನು ಇಲ್ಲಿ ಹೇಳಬಹುದು. 'ಇಂದು ಅಡಿಗೆ ಮಾಡುವದು ಬೇಡ' ಎಂದು ಅವರು ಒಂದು ದಿನ ಅಜ್ಞೆಮಾಡಿದರು-ಶಿಷ್ಯರಿಗೆ ದಿಗಿಲು.. ಕಾರಣವನ್ನು ವಿಚಾರಿಸಿದಾಗ,- "ತಮ್ಮ ಐವರು ಮಕ್ಕಳಲ್ಲಿ ಒಬ್ಬರಿಗೆ ಅಪಮೃತ್ಯುವಿದೆ. ಅದರ ನಿವಾರಣೆಗಾಗಿ ನೀವೆಲ್ಲರೂ ಉಪವಾಸಮಾಡಿ ಶ್ರೀಶನ ಅನುಗ್ರಹ ಪಡೆಯಬೇಕು" ಎಂದು ಹೇಳಿದರು. ಶಿಷ್ಯರು ಹಾಗೆ ಮಾಡುತ್ತಿರಲು, ಮಾರನೆಯ ದಿನ, ಮಕ್ಕಳಾದ ಕೃಷ್ಣಾಚಾರ್ಯರು ತಂದೆಗೆ ತಮ್ಮ ಕನಸನ್ನು ಹೇಳಿದರು.. ಯಮದೂತರು ತಮ್ಮನ್ನು ಸೆಳೆದೊಯ್ಯುತ್ತಿದ್ದರು. ತಂದೆಯ ದರ್ಶನದಿಂದ ತಮಗೆ ಬಿಡುಗಡೆ ಆಯಿತೆಂದು ತಿಳಿಸಿದರು. ಅಪಮೃತ್ಯು ಯಾರಿಗಾಗಿ ಯೆಂಬುದು ಆಗ್ಗೆ ಎಲ್ಲರಿಗೂ ಹೊಳೆಯಿತು- ವಿಷ್ಣುತೀರ್ಥರು ಸ್ಥಿತಪ್ರಜ್ಞರು, ಇಷ್ಟ-ಅನಿಷ್ಟಗಳೆರಡರಲ್ಲಿಯೂ ಸಮಚಿತ್ತರಾಗಿರುತ್ತಿದ್ದರು.

ಅವಧೂತರಾದ ಜಯತೀರ್ಥರಿಗೆ ಪಾಠಪ್ರವಚನಕ್ಕಾಗಿ, ತಪಸ್ಸಿಗಾಗಿ, ಗ್ರಂಥಲೇಖನಕ್ಕಾಗಿ ದುರ್ಜನರಿಂದ ದೂರವಾದ ಪ್ರಶಾಂತ, ಏಕಾಂತ ಸ್ಥಳ

ಬೇಕಾಗಿತ್ತು. ಮಲಾಪಹಾರಿತೀರದ ಮುನಿವಳ್ಳಿ ಎಂಬ ಗ್ರಾಮವು ಅವರಿಗೆ ಒಪ್ಪಿಗೆಯಾಯಿತು. ಅಲ್ಲಿಯೆ ನಿಸರ್ಗದ ಶಾಂತಿಸೊಬಗುಗಳು ಅವರ ಮನಸ್ಸನ್ನು ಸೆರೆಹಿಡಿದವು. ಆಪ್ತಶಿಷ್ಯರೊಡನೆ, ಅಶ್ವತ್ಥವೃಕ್ಷದ ಸನ್ನಿಧಿಯಲ್ಲಿ ಪರ್ಣಕುಟಿಯಲ್ಲಿ ಅವರು ವಾಸಿಸಿದರು. ಸಮೀಪದಲ್ಲಿಯೆ, ಒಂದು ಚಿಕ್ಕ ಈಶ್ವರ ದೇವಾಲಯ. ವಿರಕ್ತ ಜೀವನದಲ್ಲಿ, ಮಲಪ್ರಭೆಯ ನೀರಿನಿಂದ ಪಾವನಗೊಳಿಸಿದ ಮಧುಕರೀ ಅನ್ನವೇ ನಿತ್ಯದ ಆಹಾರ, ಪೂಜೆ, ಪ್ರವಚನ, ಗ್ರಂಥಲೇಖನಗಳ ಎಡೆಬಿಡದ ಕಾರ್ಯವೇ ದಿನಚರ್ಯೆ. ಶ್ರೀಮನ್ ಮಧ್ವರ, ಶ್ರೀಟೀಕಾರ್ಯರ ಸ್ಮರಣೆ ಗ್ರಂಥಾನುವಾದಗಳಿಗೇನೆ ಪ್ರಾಧಾನ್ಯತೆ 'ಅಸಿಪತ್ರವ್ರತ' ವೆಂಬ ಪ್ರಖರ ಇಂದ್ರಿಯ ನಿಗ್ರಹವನ್ನು ವಿರಾಗಿಗಳಾದ ಪತಿಪತ್ನಿಯರು ಆಚರಿಸಿದರು. ವಾನಪ್ರಸ್ಥಾಶ್ರಮ ವನ್ನು ನಿಷ್ಠೆಯಿಂದ ಆಚರಿಸಿ, 'ಆರಣ್ಯಕಾಚಾರ್ಯರು'–'ಅಡವೀಆಚಾರ್ಯ'ರು ಎಂಬ ಸಾರ್ಥಕವಾದ ಹೆಸರನ್ನು ಪಡೆದರು. ಅಂದಿನ ಪೇಶವೆಯೂ ಬಹುದೊಡ್ಡ ಜಹಾಗೀರನ್ನು ಕೊಡಮಾಡಿದರೂ ಅದನ್ನು ನಿರಾಕರಿಸಿ, ಪೇಶವೆಯವರ ಸಂತೋಷಕ್ಕಾಗಿ ಪರ್ಣಶಾಲೆಯ ಸುತ್ತಲಿನ ಎರಡು ಎಕರೆಗಳಷ್ಟು ಭೂಮಿಯನ್ನು ಸ್ವೀಕರಿಸಿದರು. ಮುನವಳ್ಳಿಯ ಪರ್ಣಕುಟಿಯಲ್ಲಿರುವಾಲೆ, ಆಚಾರ್ಯರಿಗೆ ಪತ್ನೀ ವಿಯೋಗವಾಯಿತು. ಅವರು ಶೋಕಮಾಡಲಿಲ್ಲ. 'ಪುರುಷ ಜೀವನವೆಂಬ ಯಜ್ಞ ದಲ್ಲಿ ಮರಣವನ್ನು ಅವಭೃತಸ್ನಾನ'ವೆಂಬುದಾಗಿ ಬಗೆಯಬೇಕು – ಎಂದು ಆ ಸಂದರ್ಭದಲ್ಲಿ ಶಿಷ್ಯರಿಗೆ ಉಪದೇಶಿಸಿದರು.

ತುರೀಯಾಶ್ರಮ–ಸನ್ಯಾಸಾಶ್ರಮವನ್ನು ಸ್ವೀಕರಿಸಲು ಆರಣ್ಯಕಾಚಾರ್ಯರು ಆಲೋಚನೆ ಮಾಡಿದರು. ಗೋರಿಬಿದೂರು ತಾಲೂಕಿನಲ್ಲಿ 'ನಾಮಗೊಂಡಲು' ಎಂಬ ಒಂದು ಗ್ರಾಮದಲ್ಲಿ ಜಗದ್ಗುರು ಶ್ರೀ ಮದುತ್ತರಾದಿ ಮಠದ ಶ್ರೀಶ್ರೀಸತ್ಯವರ ಶ್ರೀ ಪಾದಂಗಳು ಬಿಡಾರಮಾಡಿದ್ದರು. ಶ್ರೀ ಅರಣ್ಯಕಾಚಾರ್ಯರು ಶ್ರೀ ಪಾದಂ ಗಳಿಗೆ ಬಿನ್ನವಿಸಿಕೊಂಡು ಅವರಿಂದ ಸನ್ಯಾಸದೀಕ್ಷೆಪಡೆದರು. ಶ್ರೀ ಅರಣ್ಯಾಚಾರ್ಯ ರಿಗೆ – ' ಶ್ರೀ ವಿಷ್ಣುತೀರ್ಥ ' ರೆಂಬುದು ಆಶ್ರಮನಾಮವಾಯಿತು.

ಶ್ರೀ ವಿಷ್ಣುತೀರ್ಥರು ಮೂಲ ಸಂಸ್ಥಾನದಲ್ಲಿ ಸ್ಥಾಯಿಕರಾಗಿ ನಿಲ್ಲಲಿಲ್ಲ. ಸಜ್ಜನರ ಉದ್ಧಾರಕ್ಕಾಗಿ, ಶ್ರೀ ಟೀಕಾಕೃತ್ ಪಾದರ ಸುಧಾದಿ ಗ್ರಂಥಗಳ ಪ್ರಚಾ ರಕ್ಕಾಗಿ ಅಂದೇ ಸಂಚಾರ ಪ್ರಾರಂಭಿಸಿದರು. ಅದೇ ಅವರ ಗುರುಗಳ ಆಜ್ಞೆ ಯಾಗಿತ್ತು. ಮಧುಕರೀವೃತ್ತಿಯಿಂದಲೇ ದೇಹಧಾರಣೆ. ಜನಸಂದಣಿಯಿಂದ ದೂರವಾಗಿರುವ ಅಡವಿಗಳೇ ಅವರಿಗೆ ಪ್ರೀತಿಯ ನೆಲೆಗಳಾದವು. ಸಂಚರಿಸುತ್ತ ಶ್ರೀ ವಿಷ್ಣುತೀರ್ಥರು ಕಿನ್ಹಾಳಕ್ಕೆ ಆಗಮಿಸಿದರು. ಅಲ್ಲಿಯ ದೇಸಾಯಿಯು ಅವ ರನ್ನು ಭಕ್ತಿಯಿಂದ ಸ್ವಾಗತಿಸಿದರು. ದೇಸಾಯಿಗೆ ಒಂದು ಮಹಾಕ್ಲೇಶವಿತ್ತು

ಉಣ್ಣುವಾಗ್ಗೆ, ಆಹಾರದಲ್ಲಿ ಆತನಿಗೆ ಕ್ರಿಮಿಗಳೇ ಕಾಣಿಸುತ್ತಿದ್ದವು. ಶ್ರೀ ವಿಷ್ಣು ತೀರ್ಥರು ತಮ್ಮ ಎಲೆಯೊಳಗಿನ ಒಂದು ಹಿಡಿ ಅನ್ನವನ್ನು ದೇಸಾಯಿಯ ಎಲೆಯಲ್ಲಿ ಹಾಕಿ, ಕ್ರಿಮಿಗಳ ಪೀಡೆಯಿಂದ ಆತನನ್ನು ಮುಕ್ತಗೊಳಿಸಿದರು. ಪೂರ್ವಾಶ್ರಮ ದಲ್ಲಿ ಶ್ರೀ ಅಡವೀ ಆಚಾರ್ಯರಾಗಿ ತನಗೆ ಹಾಗೂ ತನ್ನ ಪ್ರಜೆಗಳಿಗೆ ಮಾಡಿದ ಮಹೋಪಕಾರವನ್ನು ದೇಸಾಯಿಯು ಮರೆಯುವಂತಿರಲಿಲ್ಲ. ಅಂದು ಭೀಕರವಾದ ಬರಗಾಲ ಆ ಭಾಗದ ಜನರನ್ನು ತಳಮಳಿಸುತ್ತಿತ್ತು. ಜನತೆಗೆಬದಗಿದ ಅನ್ನದ ಕೊರತೆಯನ್ನುಕಂಡು ಕರುಣಾಳುಗಳಾದ ಅವರು ಮರುಗಿದರು. ಜನರಿಗೆ ಸಹಾಯ ಮಾಡಲು ಶ್ರೀ ಹರಿಯ ಕೃಪೆಯನ್ನು ಬೇಡಿಕೊಂಡರು. ಒಂದು ತಾಮ್ರದ ನಾಣ್ಯ ವನ್ನು ಅರ್ಚಾವಿಗ್ರಹದ ಕೆಳಗೆ ಪೂಜಾಕಾಲದಲ್ಲಿ ಇಡುತ್ತಿದ್ದರು. ತಾವೇ ರಚಿಸಿದ 'ರಮಾಸ್ತೋತ್ರ' ವನ್ನು ಪಠಿಸುತ್ತಿದ್ದರು. ಪೂಜೆ ಮುಗಿದ ಮೇಲೆ ತಾಮ್ರದ ನಾಣ್ಯವು ಬಂಗಾರದ ನಾಣ್ಯವಾಗುತ್ತಿತ್ತು. ಅದನ್ನು ಮಾರಿ ಹಸಿದವ ರಿಗೆ ಅನ್ನ ನೀಡಿದರು. ಬರಗಾಲ ಮುಗಿದು ಸುಭಿಕ್ಷೆ ಸಮೀಪಿಸಲು, ಅಪದ್ಧರ್ಮದ ಈ ವಿಧಾನವನ್ನು ಮುಂದುವರಿಸಲಿಲ್ಲ; ಕುಹಕಿಗಳು ಯಾವ ಕಾಲದಲ್ಲಿಯಾದರೂ ಇರು ವವರೆ. ಶ್ರೀವಿಷ್ಣುತೀರ್ಥರಿಗೆ ಸನ್ಯಾಸದೀಕ್ಷೆಯನ್ನಿತ್ತ ಶ್ರೀ ಶ್ರೀಸತ್ಯವರ ಶ್ರೀಪಾದರು ಬಿಂಬಮೂರ್ತಿಯ ಧ್ಯಾನದಲ್ಲಿ ಮೈಮರೆತ ಸಮಯದಲ್ಲಿ, ಶ್ರೀ ವಿಷ್ಣುತೀರ್ಥರು ಶ್ರೀ ಮೂಲರಾಮದೇವರ ಪೂಜೆಯನ್ನು ತಾವೇ – ಒಮ್ಮೆಯಾದರೂ–ಮಾಡಲು ಹವಣಿಸುತ್ತಾರೆಂದು ಶ್ರೀ ಪಾದರ ಕಿವಿಯಲ್ಲಿ ಊದಿದರು. ಧ್ಯಾನಾಸಕ್ತರಾದ ಶ್ರೀಪಾದರು ತಿಳಿಯದೆಯೆ 'ಬಹಿಷ್ಕಾರವಾಗಲಿ'–ಎಂದರು. ಶ್ರೀ ಪಾದರ ಆಜ್ಞೆ ಯನ್ನು ಶ್ರೀ ರಾಮದೇವರ ಆಜ್ಞೆಯೆಂದೇ ಶ್ರೀ ವಿಷ್ಣುತೀರ್ಥರು ಶಿರಸಾಗ್ರಹಿಸಿದರು ಬಹಿಷ್ಕೃತರು ಶೂದ್ರರಿದ್ದಂತೆ. ಅಂದಿನಿಂದ ಶ್ರೀ ವಿಷ್ಣುತೀರ್ಥರು ಬ್ರಾಹ್ಮೀ ಮುಹೂರ್ತದಲ್ಲಿ ಶ್ರೀ ಮಠದ ಅಂಗಣವನ್ನು ಅರ್ಥಾನುವಾದ ಸಹಿತ ಶ್ರೀ ಸುಧಾ ಗ್ರಂಥದ ಶ್ಲೋಕಗಳನ್ನು ಪಠಿಸುತ್ತ ಕಸಗೂಡಿಸತೊಡಗಿದರು. ಹೀಗೆ ಮಾಡುವರು ಯಾರೆಂಬುವದನ್ನು ಶ್ರೀಪಾದರು ವಿಚಾರಿಸಿ ಸ್ವತಃ ಕಂಡು ಹಿಡಿದರು. ಶ್ರೀಪಾದ ರಿಗೆ ಈ ಬಹಿಷ್ಕಾರದ ಅರಿವೇ ಇರಲಿಲ್ಲ. ಪ್ರಮಾದವಾಯಿತೆಂದು, ಶ್ರೀ ವಿಷ್ಣು ತೀರ್ಥರನ್ನು ಮಠಕ್ಕೆ ಆಮಂತ್ರಿಸಿ, ಬಹಿಷ್ಕಾರವನ್ನು ತೆಗೆದು, ಮಠದ ಮಾನ ಮರ್ಯಾದೆಗಳಿಂದ ಗೌರವಿಸಿದರು. ಬಹಿಷ್ಕಾರದ ಘಟನೆಯು ಕೇವಲ ಒಂದು ಐತಿಹ್ಯವೆಂದು ಹೇಳುವರು. ತುರ್ಯಾಶ್ರಮದ ಪೂರ್ವದಲ್ಲಿಯೆ ಈ ಘಟನೆ ನಡೆ ಯಿತೆಂದೂ ಒಂದು ಐತಿಹ್ಯವಿದೆ.

ಶ್ರೀವಿಷ್ಣುತೀರ್ಥರು ಶ್ರೀಮತ್ ಸುಧಾ ಗ್ರಂಥದ ಪಾಠ ಪ್ರವಚನಗಳಲ್ಲಿ ಅನೇಕ ಶಿಷ್ಯರನ್ನು ಪರಿಣತರನ್ನಾಗಿ ಮಾಡಿದರು. ಶ್ರೀ ಭಾಗವತ ಸಾರೋದ್ಧಾರವಲ್ಲದೆ, ಸುಧಾಟಿಪ್ಪಣಿ, ಷೋಡಶೀ- ಚತುರ್ದಶೀ-ಗೀತಾಸಾರೋ

ದ್ಧಾರ-ಮುಂತಾಗಿ ಒಟ್ಟು ಹನ್ನೆರಡು ಗ್ರಂಥರತ್ನಗಳ ಮಾಲಿಕೆಯನ್ನು ತಮ್ಮ ಗುರುಗಳಾದ ಶ್ರೀ ಟೀಕಾಚಾರ್ಯರಿಗೆ ಸಮರ್ಪಿಸಿರುವರು ಒಮ್ಮೆ ಸುಧಾ ಗ್ರಂಥದ ಮಂಗಳದ ಕೊನೆಗೆ ಅವರಿಗೆ ದಿವ್ಯಸ್ವಪ್ನವಾಯಿತು. 'ಇಂಥಸ್ಥಳದಲ್ಲಿ ನಾನು ಇರುವೆ'-ಎಂದು ಹೇಳಿ ಶ್ರೀಬದರೀನಾಥನು ಅದೃಶ್ಯನಾದನು. ಆ ಸ್ಥಳದಲ್ಲಿ ಅಗಿದು ನೋಡಲು ಶ್ರೀ ಬದರೀನಾಥನ ಸುಂದರ ವಿಗ್ರಹವು ದೊರೆತಿತು. ಶ್ರೀ ವಿಷ್ಣುತೀರ್ಥರು ವಾಸಿಸುತಿದ್ದ ಭೂಮಿಯೆ ಶ್ರೀ ಬದರೀಕ್ಷೇತ್ರವೆಂದು ಭಾವುಕರು ಭಾವಿಸುವರು.

ಶ್ರೀಮತ್ ಟೀಕಾಕೃತ್‌ಪಾದರು ತಮಗೆ ಒಪ್ಪಿಸಿದ ಕಾರ್ಯದಲ್ಲಿ ಕೃತಕೃತ್ಯರಾದೆವೆಂದು ಶ್ರೀವಿಷ್ಣುತೀರ್ಥರಿಗೆ ಅನಿಸಿತು. ತಮ್ಮ ಪಾರ್ಥಿವಶರೀರವನ್ನು ಪರಮಾತ್ಮನ ಪಾದಾರವಿಂದದಲ್ಲಿ ಅರ್ಪಿಸಲು ಅವರು ನಿಶ್ಚಯಿಸಿದರು. ಅಣ್ಣಿಗೇರಿಯ ಅಮೃತೇಶ್ವರನ ಗುಡಿಯಲ್ಲಿಯ ಒಂದು ಉತ್ತಮ ಶಿಲೆಯನ್ನು ತರಿಸಿ, ತಮ್ಮ ವೃಂದಾವನವನ್ನು ಮಾಡಿಸಿದರು ಶಾ. ಶ. ೧೭೦೦ರ ಮಹಾಶಿವರಾತ್ರಿಯ ಪರ್ವಕಾಲ ವೃಂದಾವನ ಪ್ರವೇಶಕ್ಕೆ ನಿಯಮಿತವಾದ ದಿನ. ಅಂದು ಬೆಳಗ್ಗೆ ನಿತ್ಯದ ಅಹ್ನಿಕವನ್ನು ಮುಗಿಸಿ, ಹನ್ನೆರಡು ಸಾವಿರ ಪ್ರಣವ ಮಂತ್ರದ ಜಪ ಮಾಡಿದರು. ಗುರುಗಳು ಅನುಗ್ರಹಿಸಿದ ಶ್ರೀ ಗೋಪಾಲಕೃಷ್ಣದೇವರನ್ನು ಪೂಜಿಸಿದರು. ಅಂತಿಮ ದರುಶನಕ್ಕಾಗಿ ಧಾವಿಸಿ ಬಂದ ಸಾವಿರಾರು ಶಿಷ್ಯರಿಗೆ, ಭಕ್ತರಿಗೆ ಸುಧಾಪ್ರವಚನದ ಅಮೃತ ವಾಣಿಯಿಂದ ತಣಿಸಿದರು. ತಮ್ಮಿಂದಲೆ ಪ್ರತಿಷ್ಠಾಪಿತವಾದ ಶ್ರೀ ಬದರೀನಾರಾಯಣನ ಸಮ್ಮುಖದಲ್ಲಿ ವೃಂದಾವನವು ಸಿದ್ಧವಾಗಿತ್ತು. ತಾವೇರಚಿಸಿದ 'ಅಂತ್ಯಕಾಲ ಸ್ಮರಣೆ'-ಯಲ್ಲಿಯ ಶ್ಲೋಕಗಳನ್ನು ಪಠಿಸುತ್ತ, ಪದ್ಮಾಸನದಲ್ಲಿಕುಳಿತು ಶ್ರೀಹರಿ ಧ್ಯಾನದಲ್ಲಿ ಶ್ರೀವಿಷ್ಣುತೀರ್ಥರು ಸಮಾಧಿಸ್ಥರಾದರು. ದಿವ್ಯತೇಜಸ್ಸು ಮುಖದಲ್ಲಿ ಮಿನುಗುತ್ತಿತ್ತು. ಅಂತ್ಯಕಾಲದ ಶ್ರೀಹರಿಸ್ಮರಣೆಯ ಮಹದಾನಂದವು ಮುಗುಳುನಗೆಯಾಗಿ ಹೊರಸೂಸುತ್ತಿತ್ತು. ಶರೀರವು ನಿಶ್ಚೇತನವಾದ ಮೇಲೆ, ವೃಂದಾವನದ ಮೇಲ್ಭಾಗವನ್ನು ವೇದ ಘೋಷದ ಗರ್ಜನೆಯಲ್ಲಿ ವೈದಿಕಸಂಪ್ರದಾಯದಂತೆ ಮುಚ್ಚಲಾಯಿತು, ಭಗವದ್ಭಕ್ತರಿಗೆ ಅಭೀಷ್ಟಪ್ರದರಾಗಿ, ಶ್ರೀವಿಷ್ಣುತೀರ್ಥರು ಮಾದಿನೂರಿನ ವೃಂದಾವನದಲ್ಲಿ ಇಂದಿಗೂ ವಿರಾಜಿಸುತ್ತಿದ್ದಾರೆ.

ಸಕಲಜನರೂ ಸರ್ವದಾ ಸ್ಮರಿಸಬೇಕಾದ ಶ್ರೀವಿಷ್ಣುತೀರ್ಥರ ಕೊನೆಯ ದಿವ್ಯ ಸಂದೇಶವಿದು:-

"ಶ್ರೀಮನ್ನಾರಾಯಣನ ನಾಮಸ್ಮರಣೆ ಮಾಡಿರಿ. ಶ್ರೀಮನ್ ಮಧ್ವಸಿದ್ಧಾಂತದಂತೆನಡೆಯಿರಿ. ಶ್ರೀಮತ್ ಟೀಕಾಚಾರ್ಯರ ಹಿತವಾಕ್ಯ ಅನುಸರಿಸಿರಿ. ಶ್ರೀಹರಿಗುರುಗಳು ನಿಮ್ಮನ್ನು ಅನುಗ್ರಹಿಸುತ್ತಾರೆ"

# ಅನುಕ್ರಮಣಿಕೆ


| ಪ್ರಕರಣ | | ಪುಟಗಳು |
|---|---|---|
| 1 | ಭಾಗವತಾಗತಿ | 1–13 |
| 2 | ರಾಜವಿರಾಗ | 14–25 |
| 3 | ಶುಕಾಗಮನ | 26–35 |
| 4 | ಸಂಕ್ಷಿಪ್ತ ಶಾಸ್ತ್ರಾರ್ಥ ಪ್ರಕರಣ | 36–51 |
| 5 | ವೈರಾಗ್ಯ ಪ್ರಕರಣ | 52–91 |
| 6 | ಮಹತ್ಸಮಾಗಮ ಪ್ರಕರಣ | 92–100 |
| 7 | ಮಹತ್ಸೇವಾ ಪ್ರಶಂಶಾ | 101–116 |
| 8 | ಮಹನ್ನಿಂದಾ ವರ್ಜನ | 117–137 |
| 9 | ಆತ್ಮಪ್ರಶಂಸಾ ವರ್ಜನ | 138–143 |
| 10 | ಇಂದ್ರಿಯ ಜಯಪ್ರಕರಣ | 144–151 |
| 11 | ಬ್ರಹ್ಮೋಪದೇಶ ಪ್ರಕರಣ | 152–182 |
| 12 | ಪ್ರವೃತ್ತಕರ್ಮತ್ಯಾಗ ಪ್ರಕರಣ | 183–191 |
| 13 | ನಿವೃತ್ತಕರ್ಮಕರಣ | 192–196 |
| 14 | ದೇಶಪ್ರಶಂಸಾ | 197–205 |
| 15 | ಕಾಲಪ್ರಶಂಸಾ | 206–208 |
| 16 | ದೇಹಪ್ರಶಂಸಾ | 209–213 |
| 17 | ಧ್ಯಾನಪ್ರಕರಣ | 214–225 |
| 18 | ಬಿಂಬೋಪಾಸಕ ಗುರುಪ್ರಾಪ್ತಿ | 226–244 |
| 19 | ಅಧ್ಯಾತ್ಮ ಪ್ರಕರಣ | 245–265 |
| 20 | ಧರ್ಮೋಪದೇಶ | 266–442 |
| 21 | ಬಿಂಬೋಪದೇಶ | 443–457 |
| 22 | ಬಿಂಬೋಪಾಸನಾಪರ ಪರ್ಯಾಯ ಆತ್ಮ ಸಮರ್ಪಣ | 458–472 |
| 23 | ಭಕ್ತಿ ಸ್ತುತಿ ಪ್ರಕರಣ | 478–480 |
| 24 | ಭಕ್ತಿ ಕಾರ್ಯ | 481–486 |
| 25 | ಅನ್ಯಥಾಮತ್ಯಕರಣ | 487–491 |
| 26 | ಗುರುವಿಚಾರ | 492–496 |
| 27 | ಅಪರೋಕ್ಷ | 497–500 |
| 28 | ಗುಣನಿವೃತ್ತಿ | 501–506 |
| 29 | ನಾಮಪ್ರಶಂಸಾ | 507–525 |
| 30 | ಗುರುದಕ್ಷಿಣಾ | 526–531 |
| 31 | ಸಾರೋದ್ಧಾರದ ಉಪಸಂಹಾರ | 532–546 |
| | ತಾತ್ಪರ್ಯ | 537–546 |
| | **ಪುರವಣಿ** | |
| | ಶ್ರೀ ವಿಷ್ಣುತೀರ್ಥರ ಚರಿತ್ರೆ | I–X |

# ಪರಿಶಿಷ್ಟ ೧

ಶ್ರೀಮದ್ಭಾಗವತವು ಸಾಗಿಬಂದ ಎರಡು ಪರಂಪರೆಗಳು.

ಶ್ರೀಮನ್ನಾರಾಯಣ




(ಚತುರ್ಮುಖ ಬ್ರಹ್ಮನಿಗೆ ಹೇಳಿದುದನ್ನೇ ಶೇಷದೇವರಿಗೆ ಉಪದೇಶಮಾಡಿದುದು)

---

( ನಿವೇದನೆ ಪುಟದಿಂದ ಬಂದದ್ದು )

ಈ ಪುಸ್ತಕದ ಪ್ರಕಟನೆಗೆ ಮೊಟ್ಟಮೊದಲು ಚಾಲನೆಯನ್ನಿತ್ತ ಪರಮಪೂಜ್ಯ ಶ್ರೀ ಶ್ರೀ ವಿಶ್ವೇಶ್ವ ತೀರ್ಥ ಶ್ರೀಪಾದರಿಗೆ ನನ್ನ ಅನಂತ ದಂಡ ಪ್ರಣಾಮಗಳು. ಪ್ರಾರಂಭದಿಂದಲೂ ನನಗೆ ಆತ್ಮೀಯತೆಯ ಸಹಾಯ ನೀಡಿದ ಪಂಡಿತ ಪ್ರೊ|| ಶ್ರೀಮಾನ್ ಕೆ. ಟಿ. ಪಾಂಡುರಂಗಿಯವರಿಗೆ ನನ್ನ ಹೃತ್ಪೂರ್ವಕ ಕೃತಜ್ಞತೆಗಳು.

ತಾನು ಓದಿ, ಉಳಿದವರಿಗೂ ಅಲ್ಲಲ್ಲಿ ಓದಿ ತೋರಿಸಿ ಅನುವಾದವು ಸುಬೋಧವಾಗಿದೆಯೆಂಬ ಸಮಾಧಾನವನ್ನು ನನಗೆ ತಂದುಕೊಟ್ಟ ನನ್ನ ಸಹೋದರಿಯಾದ ಸೌ. ರಾಧಾದೇವಿ ರಂಗನಾಥ ಮುಗಳಿಯವರಿಗೆ ನನ್ನ ಶುಭಾಶಯಗಳು.

ಮುದ್ರಣ ಕಾರ್ಯದಲ್ಲಿ ನನಗೆ ಸರ್ವತೋಮುಖ ಸಹಾಯ-ಸಹಕಾರಗಳನ್ನಿತ್ತ ವಿಜಾಪೂರದ ಶ್ರೀ ವೀರಭದ್ರೇಶ್ವರ ಪ್ರಿಂಟಿಂಗ ಪ್ರೆಸ್‌ದ ಒಡೆಯರಾದ ಶಾಂತಮೂರ್ತಿ ಶ್ರೀ ವೀರಣ್ಣ ವರ್ತಿಯವರಿಗೆ ನನ್ನ ಧನ್ಯವಾದಗಳು.

ವಿಜಾಪೂರ, ೩-೫-೧೯೮೭. — ಗಜೇಂದ್ರಗಡ ಶಾಮರಾಯ

॥ ಓಂ ॥

## ಶ್ರೀ ವಿಷ್ಣು ತೀರ್ಥರಿಂದ ರಚಿತವಾದ

# ಶ್ರೀ ಭಾಗವತ ಸಾರೋದ್ಧಾರಃ

( ಕನ್ನಡದಲ್ಲಿ ಭಾವಾರ್ಥ )

**ಶ್ರೀ ಮದ್ಗುರೂಪಾಸ್ಯ, ಗುರ್ವಂತಸ್ಥ, ಶ್ರೀಭಾರತೀರಮಣ ಮುಖ್ಯ ಪ್ರಾಣಾಂತರ್ಗತ ಶ್ರೀ ಬಾದರಾಯಣ ಮೂರ್ತಯೆ ಶ್ರೀ ಲಕ್ಷ್ಮೀ ವೆಂಕಟವೆಂಕಟೇಶಾಯನಮ:**
**ಶ್ರೀಮದ್ ಹನುಮಭೀಮಮಧ್ವಾಂತರ್ಗತ ರಾಮಕೃಷ್ಣವೇದವ್ಯಾಸಾತ್ಮಕ ಶ್ರೀ ಲಕ್ಷ್ಮೀಹಯಗ್ರೀವಾಯನಮಃ ॥**

॥ ಶ್ರೀ ಹರಿಃ ಓಂ ॥

**೧॥ ನಮಃ ಪರಸ್ಮೈ ಪುರುಷಾಯ ಭೂಯಸೇ**
**ಸದುದ್ಭವಸ್ಥಾನನಿರೋಧಲೀಲಯಾ ।**
**ಗೃಹೀತಶಕ್ತಿತ್ರಿತಯಾಯ ದೇಹಿನಾ-**
**ಮಂತರ್ಭವಾಯಾನುಪಲಭ್ಯವರ್ತ್ಮನೇ ॥೨-೪-೧೨॥**

( ಅಸದೃಶ ಹಾಗೂ ಯಾವ ಆತಂಕವೂ ಇಲ್ಲದೆ ಸನಾತನವಾಗಿ ವಾಸಿಸುವ ಹ್ಮನ ಪ್ರಸಾದದಿಂದ ಪರಾಧೀನ ಅಸ್ತಿತ್ವವುಳ್ಳ ಹಾಗೂ ಅಮುಖ್ಯರಾದ, ಹ್ಮನಿಂದ ಭಿನ್ನರಾದ-ಮೋಕ್ಷಾಪೇಕ್ಷಿಗಳಾದ ಜೀವಿಗಳಿಗೆ, ನಿತ್ಯವೂ ಹಾಗೂ ರೂಪಾನಂದಾನುಭವಲಕ್ಷಣವಾದ ಮೋಕ್ಷವೆಂಬ ಕಲ್ಯಾಣವು ಅವರವರ ೋಗ್ಯತೆಗನುಗುಣವಾಗಿ ಭಕ್ತಿ ಮುಂತಾದ ಸಂಕ್ಷಿಪ್ತ ಹಾಗೂ ವಿಸ್ತೃತ ಸಾಧನ ಳಿಂದ ಉಂಟಾಗುವದು. ಆದುದರಿಂದ ಶ್ರೀ ವಿಷ್ಣುವಿನ ಬಗ್ಗೆ ಮುಕ್ತಿ ಸಾಧನ ಾದ ಭಕ್ತಿ ಮುಂತಾದ ಅಸದೃಶ ಹಾಗೂ ನಿರಾತಂಕವಾದ ಸಂಪತ್ತು ನಗೆ ಒದಗಲಿ. )

(೧) ಸಂಸಾರದ ಬಗೆಬಗೆಯ ನೋವು ಪೀಡೆಗಳಿಂದ ಸಜ್ಜನರು ನೊಂದು ಳ್ಳುವರು. ಅವುಗಳನ್ನು ತಪ್ಪಿಸಲು ಹಾಗೂ ಜೀವನದ ಅಂತಿಮ ಗುರಿ ಾಗಿರುವ ಪುರುಷಾರ್ಥವನ್ನು ಅವರು ಪಡೆಯಬೇಕೆಂಬ ಉದ್ದೇಶದಿಂದ

ಭಗವಂತನಾದ ಬಾದರಾಯಣರು ಕರುಣೆಯಿಂದ ಶ್ರೀ ಮದ್ ಭಾಗವತನ್ನು ರಚಿಸಿರುವರು. ಅದರಲ್ಲಿರುವ ಹನ್ನೆರಡು ಸ್ಕಂಧಗಳಿಂದ ಕೆಲವೊಂದು ಪದ್ಯಗಳನ್ನು ಆಪತ್ಕಾಲದಲ್ಲಿಯೂ ನಿತ್ಯವೂ ಓದಿ ಮನೋಗತ ಮಾಡಿಕೊಳ್ಳಬಹುದೆಂದು ಹಾಗೂ ಮಂದ ಮತಿಗಳಿಗೂ ಅನುಕೂಲವಾಗಬೇಕೆಂದು ಅವಧೂತ ಶಿರೋಮಣಿಗಳಾದ ಶ್ರೀ ಜಯತೀರ್ಥರೆಂಬ ಮುನಿವರ್ಯರು ಇದರಲ್ಲಿ ಸಂಗ್ರಹಿಸಿ ಹೇಳುವಾಗ್ಗೆ ದೇವತಾ ವಂದನರೂಪವಾದ ಪ್ರಾರಂಭದ ಪದ್ಯವಿದು:-

**ಅರ್ಥ:**- ಈ ವಿಶ್ವದ ಹುಟ್ಟು, ರಕ್ಷಣೆ ಹಾಗೂ ನಾಶ-ಇವು ಭಗವಂತನಿಗೆ ಕ್ರೀಡಾ ರೂಪವಾದ ಕಾರ್ಯಗಳು, ಲೀಲೆಗಳು. ಇವುಗಳನ್ನು ಸಾಧಿಸಲು ಆತನು "ಇಚ್ಛಾ-ಜ್ಞಾನ-ಕ್ರಿಯಾ"-ಯೆಂಬ ತನ್ನ ಸ್ವರೂಪಭೂತವಾದ ನಿತ್ಯ ಶಕ್ತಿಗಳನ್ನು ಕಾಲಾನುಗುಣವಾಗಿ ಪ್ರಕಟಿಸುವನು. ಅನಾದಿ ಕಾಲದಿಂದಲೂ ಜೀವಿಗಳ ಅಂತರಂಗದಲ್ಲಿ ಬಿಂಬರೂಪವಾಗಿ ನೆಲೆಸಿರುವನು. ಹೀಗಿದ್ದರೂ ಆತನ ಪೂರ್ಣ ಕೃಪೆಯಿಲ್ಲದೆ ಆತನ ಸಾಕ್ಷಾತ್ಕಾರವಾಗದು. ಆತನು ಸಂಪೂರ್ಣವಾಗಿ ಸರ್ವತಂತ್ರ ಸ್ವತಂತ್ರನು, ಅಂತೆಯೇ ದೇವೋತ್ತಮನು, ಪುರುಷನೆಂದು ಕರೆಯಲ್ಪಡುವ ಪರಬ್ರಹ್ಮಸ್ವರೂಪನಾದ ಪರಮಾತ್ಮನಿಗೆ ವಂದನೆಗಳು.

**||೨|| ಭೂಯೋ ನಮಃ ಸದ್ವೃಜಿನಚ್ಛಿದೇ ಸತಾ-**
**ಮಸಂಭವಾಯಾಖಿಲಸತ್ತ್ವಮೂರ್ತಯೇ |**
**ಪುಂಸಾಂ ಪುನಃ ಪಾರಮಹಂಸ್ಯ ಆಶ್ರಮೇ**
**ವ್ಯವಸ್ಥಿತಾನಾಮನುಮೃಗ್ಯದಾಶುಷೇ ||** ೨|೪-೧೩

**ಪೀಠಿಕೆ:**- ಅನಿಷ್ಟಗಳ ನಿವಾರಣೆ ಹಾಗೂ ಅಪೇಕ್ಷಿತ ವಸ್ತುಗಳನ್ನು ಪಡೆಯುವದು-ಇದು ಪುರುಷಾರ್ಥವೆನಿಸುವದು. ಈ ಪುರುಷಾರ್ಥವನ್ನು ಭಗವಂತನು ತನ್ನ ಭಕ್ತರಿಗೆ ಯೋಗ್ಯವಾದ ಸಾಧನಗಳನ್ನು ಕೊಟ್ಟು ತಂದುಕೊಡುವನು. ಅದರಿಂದ ಮುಕ್ತಿಯನ್ನು ಬಯಸುವದು ಕರುಣಾಳುವಾದ ಈ ಮುಕುಂದನ ಉಪಾಸನೆಯನ್ನೇ ಮಾಡಬೇಕು-ಎಂಬ ಅಭಿಪ್ರಾಯದಿಂದ ನಮನ ರೂಪವಾದ ಇನ್ನೊಂದು ಪದ್ಯವನ್ನು ಹೇಳಿರುವರು.

**ಅರ್ಥ:**- ಸಜ್ಜನರ ಪಾಪಗಳನ್ನು ಕಡಿದು ಹಾಕುವವನು, ದುರ್ಜನರಿಗೆ ಕಾಣದಂಥವನು, ಸತ್ತ್ವಗುಣ ಯುಕ್ತವಾಗಿರುವ ಸಂಪೂರ್ಣ ಜ್ಞಾನ ಮುಂತಾದ ಅನಂತ ಕಲ್ಯಾಣ ಗುಣಗಳುಳ್ಳವನು, ಭಾಗವತ ಧರ್ಮದಲ್ಲಿ ನಿರತರಾದ ಪರಮ-ಹಂಸರು- ಯತಿಶ್ರೇಷ್ಠರು ಅರಸುತ್ತಿರುವ ತನ್ನ ಸ್ವರೂಪವನ್ನು ಅವರಿಗೆ ಪ್ರಕಟಗೊಳಿಸುವ ಪರಮಾತ್ಮನಿಗೆ ಮತ್ತೆ ಮತ್ತೆ ನಮಸ್ಕಾರವು.

೩॥ ಪುರಾ ಮಯಾ ಪ್ರೋಕ್ತಮಜಾಯ ನಾಭ್ಯೇ
ಪದ್ಮೇ ನಿಷಣ್ಣಾಯ ಮಮಾದಿಸರ್ಗೇ ।
ಜ್ಞಾನಂ ಪರಂ ಮನ್ಮಹಿಮಾವಭಾಸಂ
ಯತ್ಸೂರಯೋ ಭಾಗವತಂ ವದಂತಿ ॥ ೩-೪-೧೩

ವೇ.:- ಭಾಗವತ ತತ್ವಪ್ರವರ್ತಕರನ್ನು ಸ್ಮರಿಸಿಕೊಂಡು ಭಾಗವತ ಶ್ರವಣ-ಮಾಡಿದರೆ ಅಧಿಕ ಪುಣ್ಯ ಬರುವದೆಂದು ಸೂಚಿಸಲು ಭಾಗವತಶಾಸ್ತ್ರವು ಹೇಗೆ-ಯಾರಿಂದ ಬಂದಿತೆಂಬ ಪರಂಪರೆಯನ್ನು ಹೇಳಲಾಗಿದೆ. ಮೊಟ್ಟಮೊದಲು ಶ್ರೀಮನ್ ನಾರಾಯಣನು ಬ್ರಹ್ಮದೇವರಿಗೆ ಭಾಗವತವನ್ನು ನಿರೂಪಿಸಿದನು, ಈ ಶ್ಲೋಕದಲ್ಲಿ ಶ್ರೀ ಕೃಷ್ಣನು ಉದ್ಧವನಿಗೆ ಹೇಳಿದ ಮಾತು. ಬ್ರಹ್ಮ-ನಾರಾಯಣರ ನಡುವಿನ ಸಂವಾದ ರೂಪವಾದ 'ನಾಲ್ಕು' ಶ್ಲೋಕಗಳ ಭಾಗವತವನ್ನು ಶ್ರೀ ವ್ಯಾಸರು ಭಾಗವತದಲ್ಲಿ ಸೇರಿಸಿರುವರು :-

ಅಹಮೇವಾಸಮೇವಾಗ್ರೇ ನಾನ್ಯದ್ಯತ್ ಸದಸತ್ಪರಂ ।
ಪಶ್ಚಾದಹಂ ಯದೇತಚ್ಚ ಯೋಽವಶಿಷ್ಯೇತ ಸೋಽಸ್ಮ್ಯಹಂ ॥೧॥
ಋತೇಽರ್ಥಂ ಯತ್ಪ್ರತೀಯೇತ ನ ಪ್ರತೀಯೇತ ಚಾತ್ಮನಿ
ತದ್ವಿದ್ಯಾತ್ ಆತ್ಮನೋ ಮಾಯಾಂ ಯಥಾ ಭಾಸೋ
ಯಥಾತಮಃ ॥೨॥
ಯಥಾ ಮಹಾಂತಿ ಭೂತಾನಿ ಭೂತೇಷೂಚ್ಚಾವಚೇಷು ಚ
ಪ್ರವಿಷ್ಟಾನಿ ಅಪ್ರವಿಷ್ಟಾನಿ ತಥಾ ತೇಷು ನ ತೇಷ್ವಹಂ ॥೩॥
ಏತಾವದೇವ ಜಿಜ್ಞಾಸ್ಯಂ ತತ್ವಜಿಜ್ಞಾಸುನಾತ್ಮನಃ
ಅನ್ವಯವ್ಯತಿರೇಕಾಭ್ಯಾಂ ಯತ್ ಸ್ಯಾತ್ ಸರ್ವತ್ರ ಸರ್ವದಾ ॥೪॥

ಅರ್ಥ:- ಶ್ರೀ ಕೃಷ್ಣನು ಉದ್ಧವನಿಗೆ ಹೀಗೆ ಹೇಳಿದನು:-

ಪೂರ್ವದಲ್ಲಿ ಅಂದರೆ ಪಾದ್ಮಕಲ್ಪದಲ್ಲಿ ಇನ್ನೂ ಸೃಷ್ಟಿಯ ಉತ್ಪತ್ತಿ-ಯಾಗಿರಲಿಲ್ಲ. ನನ್ನ ನಾಭಿ ಕಮಲದಲ್ಲಿ ನೆಲೆಸಿದ ಬ್ರಹ್ಮನಿಗೆ ನನ್ನ ಮಹಿಮೆಯನ್ನು ಪ್ರಕಟಿಸುವ ಶ್ರೇಷ್ಠ ಜ್ಞಾನವನ್ನೂ, ಆ ಜ್ಞಾನವನ್ನು ಸಂಪಾದಿಸಲು ಉತ್ತಮ ಸಾಧನವನ್ನು ನಾನು ಹೇಳಿದೆನು. ಅದನ್ನೇ ಜ್ಞಾನಿಗಳು ಭಾಗವತವೆಂಬ ಹೆಸರಿನಿಂದ ಕರೆಯುವರು :- ನಿನಗೋಸ್ಕರ ಅದನ್ನು ಹೇಳುವೆ.

॥೪॥ ವಿಷ್ಣೋರ್ನು ವೀರ್ಯಗಣನಾಂ ಕತಮೋಽರ್ಹತೀಹ
ಯಃ ಪಾರ್ಥಿವಾನ್ಯಪಿ ಕವಿರ್ವಿಮಮೇ ರಜಾಂಸಿ ।
ಚಸ್ಕಂಭ ಯಃ ಸ್ವರಭಸಾ ಸ್ಖಲಿತಂ ತ್ರಿಪೃಷ್ಠಂ
ಯಸ್ಮಾತ್ರಿಸಾಮ್ಯ ಸದನಾದುರುಕಂಪಯಾನಂ ॥ ೨-೭-೪೦

**ಟೀ. :-** ಆ ಮೇಲೆ ಬ್ರಹ್ಮನು ನಾರದನಿಗೆ ಇದನ್ನು ಹೇಳಿದನು ಭಗವಂತನ ಮಹಿಮೆಯನ್ನು ಸಾಕಲ್ಯೇನ-ಸಂಪೂರ್ಣವಾಗಿ-ಯಾರಿಂದಲೂ ನಿರೂಪಿಸುವದು ಅಶಕ್ಯವೆಂಬುದನ್ನು ಉದಾಹರಣೆಯಿಂದ ತೋರಿಸಿಕೊಡುವನು.

**ಅರ್ಥ :-** ತ್ರಿವಿಕ್ರಮಾವತಾರದಲ್ಲಿ ವಾಮನ ರೂಪ ವಿಷ್ಣುವಿನ (ಮೇಲಕ್ಕೆ ಎತ್ತಿದ) ಪಾದದ ರಭಸದಲ್ಲಿ ನನ್ನ ಸತ್ಯ ಲೋಕವು ನಾಶವಾಗಬಹುದು, ನಾನು-ಕೆಳಗೆ ಬೀಳಬಹುದು-ಎಂಬ ಭೀತಿಯಿಂದ ನಾನು ಗಡಗಡ ನಡುಗುತ್ತಿರಲು, ಅದನ್ನು ಸ್ಥಿರವಾಗಿ ನಿಲ್ಲಿಸಿದನು, ನನ್ನನ್ನೂ ರಕ್ಷಿಸಿದನು. ಈ ಬಗೆಯ ವಿಷ್ಣುವಿನ ಅಪಾರ-ಅನಂತ-ಮಹಿಮೆಯನ್ನು-ಭೂಮಿಯ ಧೂಳಿಕಣಗಳನ್ನೆಣಿಸುವಷ್ಟು ಅತಿ-ಬಲ್ಲಿದನೂ ಕೂಡ-ಅನಂತನ ಅನಂತಗುಣಗಳನ್ನು ಇಷ್ಟೇಯೆಂದು ಎಣಿಸಿ ಹೇಳಲಾರನು.

-ಇಲ್ಲಿ 'ಕತಮ' - ಎಂಬ ಆರ್ಷಶಬ್ದವು ಭಾಗವತವು ವೇದಕ್ಕೆ ಸರಿಸಮ-ವಾದುದೆಂಬುದನ್ನು ಸೂಚಿಸುತ್ತದೆ.

||೫|| **ಅಸ್ತ್ಯೇವ ಮೇ ಸರ್ವಮಿದಂ ತ್ವಯೋಕ್ತಂ**
**ತಥಾಪಿ ನಾತ್ಮಾ ಪರಿತುಷ್ಯತೇ ಮೇ**
**ತನ್ಮೂಲಮವ್ಯಕ್ತಮಗಾಧಬೋಧಂ**
**ಪೃಚ್ಛಾಮಹೇ ತ್ವಾತ್ಮಭವಾತ್ಮಭೂತಂ** ||೧-೫-೫

**ಟೀ. :-** ನಾರದರು ಶ್ರೀ ವ್ಯಾಸರಿಗೆ ಹೇಳಿದರೆಂದು ನಿರೂಪಿಸುವಾಗ್ಗೆ ಶ್ರೋತೃಗಳಿಗೆ ಭಾಗವತದ ಬಗ್ಗೆ ಆದರ ಉಂಟಾಗಬೇಕು-ಮೋಕ್ಷಕ್ಕೆ ಸಾಧನವಾದ ವಿಷಯವು ಅದರಲ್ಲಿ ವಿವೇಚಿಸಲಾಗಿದೆ-ಎಂಬುದನ್ನು ನೆನಪಿಗೆ ತಂದು ಕೊಡಲು, ಶ್ರೀ ವ್ಯಾಸರು ನಾರದರಿಗೆ ಕೇಳಿದ ಪ್ರಶ್ನೆಯನ್ನು ತೋರಿಸಿಕೊಟ್ಟಿರುವರು.

ಈ ಸಂದರ್ಭದಲ್ಲಿ ಒಂದು ಕಥೆ ಇದೆ :- ಒಂದು ಸಮಯ ಶ್ರೀ ವ್ಯಾಸರು ಸರಸ್ವತೀ ನದಿಯ ದಡದಲ್ಲಿ ಕುಳಿತು ಹೀಗೆ ಆಲೋಚಿಸಿದರು: 'ಉಪನಯನದನಂತರ ವೇದಾಧ್ಯಯನ, ವೇದ ವಿಭಾಗ ಕಾರ್ಯಗಳನ್ನು ಮುಗಿಸಿದೆ. ಶಿಷ್ಯರಿಗೆ ಉಪದೇಶ, ಗುರುಸೇವೆ, ಅಗ್ನಿಪೂಜೆ ಗುರುವಿನ ಆಜ್ಞೆಯನ್ನು ಪಾಲಿಸುವದು, ವೇದಗಳಲ್ಲಿ ಅಧಿಕಾರವಿಲ್ಲದ ಸ್ತ್ರೀಯರು-ಶೂದ್ರರು ಇವರಿಗೆ ಉಪಯುಕ್ತವಾಗಬೇಕೆಂದು ಭಾರತ ಗ್ರಂಥ ರಚನೆ-ಇವೆಲ್ಲ ಕಾರ್ಯಗಳನ್ನೂ ನೆರವೇರಿಸಿದ್ದಾಯಿತು. ಆದಾಗ್ಯೂ ನನ್ನ ಮನಸ್ಸಿನಲ್ಲಿ ತೃಪ್ತಿಯಭಾವನೆ ಇಲ್ಲ. ಅದರಿಂದ ನನಗೆ ಹೀಗೆ ತೋರುತ್ತಿದೆ. ಭಾರತದಲ್ಲಿ ಹೆಚ್ಚಾಗಿ ಧರ್ಮಗಳೇ ನಿರೂಪಿತವಾಗಿವೆ. ಆದರೂ ನನ್ನ ಭಕ್ತರಿಗೆ ಪ್ರೀತಿಕರವಾದ ಭಾಗವತ ಧರ್ಮಗಳು ಮಂದಬುದ್ಧಿಯವರಿಗೆ ಸುಬೋಧವಾಗು-ವಂತೆ, ಬೇರೆ ವಿಷಯಗಳನ್ನು ಅವುಗಳಲ್ಲಿ ಬೆರಿಸದಂತೆ ಹೇಳಲ್ಪಟ್ಟಿಲ್ಲವೆಂದು ನನಗೆ

ಅನಿಸುತ್ತದೆ.' ಶ್ರೀ ವೇದವ್ಯಾಸರು ಹೀಗೆ ಯೋಚಿಸುತ್ತಿರುವಾಗಲೆ, ನಾರದರು ಅಲ್ಲಿಗೆ ಬಂದರು. ಶ್ರೀ ವೇದವ್ಯಾಸರಿಂದ ಸತ್ಕಾರವನ್ನು ಹೊಂದಿ. ಅವರಲ್ಲಿ ಉಂಟಾದ ಅಸಮಾಧಾನದ ಬಗ್ಗೆ ಹೀಗೆ ಹೇಳಿದರು :– 'ವೇದ ವಿಭಾಗ, ಭಾರತದ ರಚನೆ, ಮುಂತಾದ ನಿಮ್ಮ ಅವತಾರದ ಕಾರ್ಯಗಳೆಲ್ಲ ಕೊನೆಗೊಂಡವು. ಹೀಗಿದ್ದರೂ ನಿಮ್ಮ ಮುಖದಲ್ಲಿ ಅತೃಪ್ತಿಯು ಕಾಣುತ್ತದೆ.' ನಾರದರ ಮಾತು ಕೇಳಿ ಶ್ರೀ ವೇದ ವ್ಯಾಸರು ನಾರದರಿಗೆ ಪ್ರತಿಯಾಗಿ ಹೇಳಿದರು–' ನಾರದರೇ ನೀನು ಹೇಳಿದಂತೆ ಗುರುಸೇವೆ, ವೇದವಿಭಾಗ, ಭಾರತದ ರಚನೆ–ಮುಂತಾದ ಕಾರ್ಯಗಳೆಲ್ಲವೂ ಯಥಾಸಾಂಗವಾಗಿ ಕೊನೆಗೊಂಡಿವೆ. ಆದರೂ ಏಕೋ ನನ್ನ ಮನಸ್ಸಿಗೆ ತೃಪ್ತಿ ಯುಂಟಾಗಿಲ್ಲ. ನೀನು ಬ್ರಹ್ಮ ದೇವರ ಮಗನು, ನಿನ್ನ ಜ್ಞಾನವು ಅಗಾಧವಾದುದು. ನನ್ನ ಈ ಅತೃಪ್ತಿಗೆ ಸೂಕ್ಷ್ಮವಾದ ಕಾರಣವೇನಿರಬಹುದೆಂಬುದನ್ನು ನಿನ್ನನ್ನೇ ಕೇಳುವೆ ' –ಶ್ರೀ ವೇದವ್ಯಾಸರ ಪ್ರಶ್ನೆಗೆ ನಾರದರ ಉತ್ತರವಿದು–'ಭಾಗವತ ಧರ್ಮ ಗಳನ್ನು ನೀವು ಉಳಿದ ಗ್ರಂಥಗಳಲ್ಲಿ ಮುಖ್ಯತಃ ಪ್ರತಿಪಾದಿಸದಿರುವದೇ ನಿಮ್ಮ ಅತೃಪ್ತಿಯ ಕಾರಣವಾಗಿದೆ' ಆದುದರಿಂದ, ಆ ಕಾರ್ಯವನ್ನೇ ನೀವು ಮಾಡಬೇಕು. ಎಂದು ನಾರದರ ಪ್ರಾರ್ಥನೆ. ಬೇಡಿಕೆಯಿಲ್ಲದೆ ಉಪದೇಶ ಮಾಡುವದು ಉಚಿತವಲ್ಲ. ನಾರದರು ಪ್ರಾರ್ಥನೆ ಮಾಡಿದ ನಂತರವೆ, ಶ್ರೀ ವೇದವ್ಯಾಸರು ಭಾಗವತ ಗ್ರಂಥದ ರಚನೆಯನ್ನು ಕೈಕೊಂಡರೆಂಬುದು ಮೇಲಿನ ಕಥೆಯಿಂದ ಸೂಚಿತವಾಗಿದೆ.

**ಅರ್ಥ** :– ನಾರದಾ, ನೀನು ಹೇಳುವಂತೆ ವೇದವಿಭಾಗ, ಭಾರತ ರಚನೆ ಮುಂತಾದ ಕಾರ್ಯವು ನನ್ನಿಂದ ಆಗಿರುವದು ನಿಜ, ಆದರೂ ನನ್ನ ಮನಸ್ಸಿಗೆ ಸಂತೃಪ್ತಿಯಿಲ್ಲ. ಕಮಲಸಂಭವ (ಬ್ರಹ್ಮನ ಮಗನಾದ ನೀನು ಈ ಅತೃಪ್ತಿಗೆ ಯಾವ ಗೂಢ ಕಾರಣ ವೆಂಬುದನ್ನು ತಿಳಿಸಲು ನಿನ್ನನ್ನು ಕೇಳುತ್ತೇನೆ.

||೬|| **ಅತೋ ಮಹಾಭಾಗ ಭವಾನಮೋಘದೃಕ್**
**ಶುಚಿಶ್ರವಾ: ಸತ್ಯರತೋ ಧೃತವ್ರತಃ |**
**ಉರುಕ್ರಮಸ್ಯಾಖಿಲ ಧರ್ಮಗುಪ್ತಯೇ**
**ಸಮಾಧಿನಾನುಸ್ಮರ ಯದ್ವಿಚೇಷ್ಟಿತಂ || ||** ೧-೫-೧೩

ನಾರದಾ
ವ್ಯಾಸರಿಗೆ

ಶ್ರೀ ವೇದವ್ಯಾಸರ ಪ್ರಶ್ನೆಗೆ, ಅವರ ಅಸಂತೃಪ್ತಿಗೆ ನಾರದರು ಕೊಟ್ಟ ಉತ್ತರವಿದು :

**ಅರ್ಥ** :– 'ಪೂಜ್ಯರೆ, ನೀವು ಶುಚಿಶ್ರವಾ,–ನಾರಾಯಣನ ಅವತಾರರು, ಚ್ಯುತಿಯಿಲ್ಲದ ಜ್ಞಾನವುಳ್ಳವರು, ಸತ್ಯವನ್ನೇ ಮೆಚ್ಚುವವರು. ಭಾಗವತ ಧರ್ಮ ಪ್ರತಿಪಾದನೆಯೊಂದನ್ನುಳಿದು ಸಕಲ ಭಾಗವತ ಧರ್ಮಗಳಲ್ಲಿ ನಿಷ್ಣಾತರು, ಶ್ರೀ ವಿಷ್ಣುವು

ಭಾಗವತ ಧರ್ಮದ ರಕ್ಷಣೆಗಾಗಿ, ಸಕಲ ಸಜ್ಜನರ ಬಂಧ ವಿಮೋಚನೆಗಾಗಿ ತನ್ನ ಅವತಾರಗಳಲ್ಲಿ ಪ್ರಕಟಿಸಿದ ಸಕಲ ಲೀಲಾಕೃತಿಗಳನ್ನು ವಾಸ್ತವತೆಗೆ ಭಿನ್ನವಾಗದಂತೆ ಸುಬೋಧವಾದ ಶೈಲಿಯಲ್ಲಿ ನಿರೂಪಿಸಬೇಕು. ಈ ಕಾರ್ಯವು ನಿಮ್ಮಿಂದಲೆ ಸಾಧ್ಯ ಇದನ್ನು ಮಾಡುವದರಿಂದಲೆ ನಿಮ್ಮ ಮನಸ್ಸಿಗೆ ಸಂತೋಷ ಉಂಟಾಗುವದು. ಹೀಗೆ ಹೇಳಿ ಬ್ರಹ್ಮದೇವರು ತನಗೆ ಉಪದೇಶಿಸಿದ ಭಾಗವತವನ್ನು ನಿರೂಪಿಸಿದರು.

||೭|| **ಸ್ವಸುಖನಿಭೃತಚೇತಾಸ್ತದ್ವ್ಯುದಸ್ತಾನ್ಯಭಾವೋ-** ಸೂತರು
**ಪ್ಯಜಿತರುಚಿರಲೀಲಾಕೃಷ್ಟಸಾರಸ್ತದೀಯಂ |** ಶುಕ ಸ್ತುತಿ
**ವ್ಯತನುತ ಕೃಪಯಾ ಯಸ್ತತ್ತ್ವದೀಪಂ ಪುರಾಣಂ**
**ತಮಖಿಲವೃಜಿನಘ್ನಂ ವ್ಯಾಸಸೂನುಂ ನತೋಽಸ್ಮಿ ||**

೧೨-೧೨-೬೯

ಶ್ರೀ ವೇದವ್ಯಾಸರು ಭಾಗವತವನ್ನು ರಚಿಸಿ ತಮ್ಮ ಮಕ್ಕಳಾದ ಶುಕಮುನಿಗೆ ಹೇಳಿದರು. ಶ್ರೀ ಶುಕಮುನಿಗಳು ಪ್ರಾಯೋಪವೇಶದಲ್ಲಿದ್ದ ಪರೀಕ್ಷಿತ ರಾಜರಿಗೆ, ಅದೇ ಕಾಲಕ್ಕೆ ಅಲ್ಲಿ ಸನ್ನಿಧರಾಗಿದ್ದ ಸೂತರಿಗೆ ಹೇಳಿದರು. ಭಾಗವತದ ಪ್ರಸ್ತಾಪದಲ್ಲಿ ಶ್ರೀ ಶುಕಮುನಿಗಳಿಗೆ ವಂದಿಸುತ್ತ ಸೂತರು ಆಡಿದ ಮಾತು ಇದು :-

ಶುಕರು ದೇಹಾಭಿಮಾನರಹಿತರು ಭಾಗವತ ಪುರಾಣದ ಅಭ್ಯಾಸವನ್ನು ತಂದೆಯಿಂದ ಅವರು ಹೇಗೆ ಮಾಡಿದರು ? ನಿರಪೇಕ್ಷಿಗಳಾದ ಶುಕರು ಆ ಕಾಲಕ್ಕೆ ಪರೀಕ್ಷಿತ ಮಹಾರಾಜರ ಬಳಿಗೆ ಹೇಗೆ ಬಂದರು ? ಭಗವಚ್ಚಿಂತನೆಯಲ್ಲಿ ಮೈಮರೆತು ಹುಚ್ಚರಂತೆ, ಅಜ್ಞಾನಿಗಳಂತೆ ಸಂಚರಿಸುವಾಗ್ಗೆ ಕುರುರಾಜ್ಯದ ಜನರ ಕಣ್ಣಿಗೆ ಹೇಗೆ ಬೀಳಲಿಲ್ಲ ? ಗೃಹಸ್ಥರ ಮನೆಯ ಎದುರಿನಲ್ಲಿ ಆಕಳದ ಮೊಲೆಯ ಒಂದು ಧಾರೆಯನ್ನು ತೆಗೆಯುವ ಕಾಲ ಮಾತ್ರ ಅವರು ನಿಲ್ಲುವವರು. ಪರೀಕ್ಷಿತ ಮಹಾರಾಜರಿಗೂ ಶುಕಮುನಿಗಳಿಗೂ ಸಂಭಾಷಣೆಯು ಜರುಗಿ ಶಾಶ್ವತ ಶ್ರುತಿಯಾದ ಭಾಗವತ ಗ್ರಂಥದ ನಿರ್ಮಾಣವು ಹೇಗೆ ಉಂಟಾಯಿತು ?- ಇದೆಲ್ಲವೂ ಸರಿ. ಹೀಗಿದ್ದರೂ, ಶ್ರೀ ಹರಿಯ ಅನುಪಮವಾದ ಗುಣಗಳು, ಲೀಲೆಗಳು ಶ್ರೀ ಶುಕಮುನಿಗಳ ಮನ-ಹೃದಯಗಳನ್ನು ತುಂಬಾ ಆಕರ್ಷಿಸಿದ್ದವು. ಆದುದರಿಂದಲೇ ಅವರು ಭಾಗವತದ ಅಭ್ಯಾಸವನ್ನು ಮಾಡಿದರು.

**ಅರ್ಥ :-** ಭಗವಂತನ ಸಾಕ್ಷಾತ್ಕಾರದಿಂದ ಉಂಟಾದ ಅಮಿತ ಆನಂದದಿಂದ ಮನಸ್ಸು ತುಂಬಿದವರು, ಈ ಆನಂದದಲ್ಲಿ ಮೈಮರೆತು ಬೇರೆ ಯಾವ ವಿಷಯಗಳ ಬಗ್ಗೆಯೂ ಗಮನ ಕೊಡದವರು, ಹೀಗಿದ್ದರೂ ಅಜಿತನಾಮಕ ಶ್ರೀ ಹರಿಯ ಅತಿ ಮನೋಹರವಾದ ಗುಣ-ಲೀಲೆಗಳಿಂದ ಆಕರ್ಷಕವಾದ

ಮನಸ್ಸುಳ್ಳವರಾಗಿ, ಜೀವ, ಪ್ರಕೃತಿ ಮುಂತಾದ ತತ್ವಗಳನ್ನು ತಿಳಿದುಕೊಳ್ಳಲು ಸಹಾಯವಾಗುವ ಬೆಳಕನ್ನು ಕೊಡುವ ದೀಪದಂತಿರುವ ಭಾಗವತವನ್ನು ತಾವು ಅಧ್ಯಯನ ಮಾಡಿದರು. ಜನರ ಮೇಲಿನ ಕೃಪೆಯಿಂದ ಅದನ್ನು ವಿವರಿಸಿ ಹೇಳಿದರು. (ಜನರಿಗೆ ನಿರೂಪಿಸುವಲ್ಲಿ ಎರಡು ಉದ್ದೇಶಗಳು- ಭಗವಂತನ ಗುಣಗಳಿಂದ ತಾವು ಸ್ವಂತವಾಗಿ ಆಕರ್ಷಿತರಾದುದು - ಜನರ ಮೇಲೆ ಅನುಗ್ರಹ ಮಾಡುವದು) ಹೀಗೆ ಭಾಗವತವನ್ನು ವಿವರಿಸಿದ, ಸಕಲ ಪಾಪಗಳ ಪರಿಹಾರಕರಾದ, ವ್ಯಾಸಪುತ್ರರಾದ ಶ್ರೀ ಶುಕ ಮುನಿಗಳಿಗೆ ನನ್ನ ಪ್ರಣಾಮಗಳು.

**॥೮॥ ಅಥಾಭಿಧೇಹ್ಯಂಗ ಮನೋನುಕೂಲಂ**
**ಪ್ರಭಾಷಸೇ ಭಾಗವತಪ್ರಧಾನಃ ।**
**ಯದಾಹ ವೈಯಾಸಕಿರಾತ್ಮವಿದ್ಯಾ-**
**ವಿಶಾರದೋ ನೃಪತಿಂ ಸಾಧುಪೃಷ್ಟಃ ॥ ೨-೩-೨೫**

ಸೂತ ಪುರಾಣಿಕರು ಶೌನಕಾದಿ ಮುನಿಗಳಿಗೆ ಹೇಳಿದರು ಎಂಬ ಸಂದರ್ಭದಲ್ಲಿ, ಶೌನಕರು ಕೇಳಿದ ಪ್ರಶ್ನೆಯು ಈ ಶ್ಲೋಕದಲ್ಲಿ.

**ಅರ್ಥ :**- ಪ್ರಿಯರೇ! ನೀವು ಭಾಗವತೋತ್ತಮರು ಆದ್ದರಿಂದ ನಮಗೆ ಸುಗಮವಾಗಿ ಬೋಧವಾಗುವಂತೆ ನಿರೂಪಿಸಲು ಸಮರ್ಥರಾದವರು. ಆತ್ಮವಿದ್ಯೆಯಲ್ಲಿ ಪರಿಣತರಾದ ವ್ಯಾಸಪುತ್ರರಾದ ಶುಕರು ಪರೀಕ್ಷಿತರಾಜರು ಕೇಳಿದ ಸೂಕ್ತವಾದ ಪ್ರಶ್ನೆಗೆ ಯಾವ ಪ್ರಮೇಯಗಳನ್ನು ನಿರೂಪಿಸಿದರೊ ಅವುಗಳನ್ನೇ ನಮಗಾಗಿಯೂ ಹೇಳಿರಿ.

- ಈ ಮಾತಿನಿಂದ, ಶ್ರೀ ಶುಕರು ಪರೀಕ್ಷಿತ ರಾಜನಿಗೆ ಭಾಗವತವನ್ನು ನಿರೂಪಿಸಿದರು-ಎಂಬ ಸಂಗತಿಯು ವಿದಿತವಾಗುವದು. ಭಾಗವತವು ವೇದಕ್ಕೆ ಸಮಾನವಾದುದು. ಭಗವಂತನ ಚರಿತ್ರೆಯಿಂದ ಕೂಡಿದುದು, ಜಗತ್ತಿಗೆ ಮುಕ್ತಿ ಮಾರ್ಗದರ್ಶಕವಾದುದು, ಕಲ್ಯಾಣಕರವಾದುದು. ಸಕಲ ವೇದಗಳ-ಇತಿಹಾಸಗಳ ಸಾರದಿಂದ ತುಂಬಿರುವದು. ಜಿತೇಂದ್ರಿಯರಲ್ಲಿ ಶ್ರೇಷ್ಠರಾದ ತಮ್ಮ ಮಗನಿಗೆ- ಶ್ರೀ ಶುಕರಿಗೆ-ಶ್ರೀ ವೇದವ್ಯಾಸರು ಅದನ್ನು ಹೇಳಿಕೊಟ್ಟರು. ಪ್ರಾಯೋಪವೇಶಕ್ಕೆ ಕುಳಿತ ಪರೀಕ್ಷಿತರು ಶ್ರೀ ಶುಕರಿಂದೇ ಅದನ್ನು ಕೇಳಿಕೊಂಡರು. ಸೂತರು ಅದೇ ಕಾಲಕ್ಕೆ ಅವರ ಅನುಜ್ಞೆ ಪಡೆದು ಅಲ್ಲಿಯೇ ನಿಂತು ಕೇಳಿಕೊಂಡರು. ಅಲ್ಲಿ ತಾವು ಕೇಳಿದ್ದನ್ನೇ ಯಥಾಮತಿ - ಯಥಾಶಕ್ತಿಯಾಗಿ ನಿರೂಪಿಸುವೆವೆಂದು ಅವರ ಅಭಿಪ್ರಾಯ.

||೯|| ಮುನಿರ್ವಿವಕ್ಷುರ್ಭಗವದ್ಗುಣಾನಾಂ
ಸಖಾಪಿ ತೇ ಭಾರತಮಾಹ ಕೃಷ್ಣಃ |
ಯಸ್ಮಿನ್ ನೃಣಾಂ ಗ್ರಾಮ್ಯಸುಖಾನುವಾದೈ
ರ್ಮತಿರ್ಗೃಹೀತಾ ನ ಹರೇಃ ಕಥಾಯಾಂ || ೩-೫-೧೨

ಶ್ರೀಮನ್ನಾರಾಯಣನು ಬ್ರಹ್ಮನಿಗೆ, ಬ್ರಹ್ಮನು ನಾರದರಿಗೆ, ನಾರದರು ಶ್ರೀ ವೇದವ್ಯಾಸರಿಗೆ, ವ್ಯಾಸರು ಶುಕಮುನಿಗಳಿಗೆ, ಶುಕರು ಪರೀಕ್ಷಿತ ಹಾಗೂ ಆ ಕಾಲಕ್ಕೆ ಅಲ್ಲಿಯೇ ಇದ್ದ ಸೂತರಿಗೆ, ಸೂತರು ಶೌನಕಾದಿಗಳಿಗೆ – ಭಾಗವತವು ಸಾಗಿಬಂದಿತೆಂಬುದು ಲೋಕದಲ್ಲಿ ಒಂದು ಪ್ರತೀತಿ. ಇನ್ನೊಂದು ರೀತಿಯಿಂದಲೂ ಭಾಗವತವು ಸಾಗಿಬಂದ ಪರಂಪರೆಯನ್ನು ತಿಳಿಸಲೋಸುಗ – ಮೈತ್ರೇಯರು ವಿದುರನಿಗೆ ಕೇಳಿದ ಪ್ರಶ್ನೆಯ ಮೂಲಕ ನಿರೂಪಿಸುವರು. 'ಭಾಗವತವನ್ನೇ ಹೇಳು'–ಎಂದು ಒಮ್ಮೆಲೆ ಪ್ರಶ್ನೆ ಕೇಳಿದರೆ, –'ಪುರಾತನ ಗ್ರಂಥಗಳನ್ನು ಬಿಟ್ಟು ಕೊಟ್ಟು, ಇದನ್ನೇ ಏಕೆ ಕೇಳುವೆ ?'–ಎಂದು ಮೈತ್ರೇಯನು ಪ್ರಶ್ನಿಸಬಹುದು. ಅದಕ್ಕಾಗಿ ಇಲ್ಲಿ ಕಾರಣವನ್ನು ಹೇಳಬೇಕಾಗುವದು. ಆದುದರಿಂದ, – 'ಈ ಮೊದಲಿನ ಗ್ರಂಥ ಗಳಿಂದ ಮಂದಮತಿಗಳಿಗೆ ಪ್ರಯೋಜನವಾಗುವದಿಲ್ಲ'– ಎಂದು ತಾನೇ ಮೊದಲು ಹೇಳಿಬಿಡುತ್ತಾನೆ.

**ಅರ್ಥ** :– ಮೈತ್ರೇಯರೆ, ನಿಮ್ಮ ಗೆಳೆಯರಾದ ಶ್ರೀ ವ್ಯಾಸರು ಶ್ರೀ ಹರಿಯ ಗುಣಗಳನ್ನೇ ನಿರೂಪಿಸಲು ಬಯಸಿದ್ದರೂ, ಅವುಗಳನ್ನೇ (ತೃಪ್ತಿಕರವಾಗಿ) ನಿರೂಪಿಸಲಿಲ್ಲ. ಪ್ರತಿಯಾಗಿ ಮಹಾನ್ ಅಧಿಕಾರಿಗಳಿಗೆ ಮಾತ್ರ ಆಕಲನವಾಗುವಂತೆ ಅನೇಕ ಅಸದೃಶ ಅರ್ಥಗಳಿಂದ ತುಂಬಿದ ಶ್ರೀಮನ್ ಮಹಾಭಾರತ ಗ್ರಂಥವನ್ನು ರಚಿಸಿದರು. ಸಮರ್ಥ ಅಧಿಕಾರಿಗಳಾದವರು ಆ ಗ್ರಂಥದಲ್ಲಿಯ ಭಗವಂತನ ಗುಣಗಳನ್ನೇ ಎತ್ತಿಕೊಂಡು, ತುಂಬಿ ತುಳುಕುವ ಅಲೌಕಿಕ ಆನಂದದಿಂದ – ತಮಗೆ ಲಭ್ಯವಾದ ಮುಕ್ತಿಯನ್ನು ಕೂಡ ಕಡೆಗಣಿಸಿದರು. ಮಧ್ಯಮಾಧಿಕಾರಿಗಳಾದವರು ಆ ಗ್ರಂಥದಲ್ಲಿಯ ಎರಡೋ ಮೂರೊ ಶ್ರೀ ಹರಿ ಗುಣಗಳನ್ನು ತಮ್ಮ ತಮ್ಮ ಶಕ್ತಿಗನುಗುಣವಾಗಿ, ಕೆಲವೆಡೆ ಸಾಕ್ಷಾತ್ತಾಗಿ, ಕೆಲವೆಡೆ ಅವಾಂತರ ವಿಷಯಗಳ ಸಾರಭೂತವಾಗಿ – ಹೀಗೆ ಎರಡೂ ಬಗೆಯಿಂದಲೂ ಶ್ರೀ ಹರಿ ಹಾಗೂ ಶ್ರೀ ಹರಿ ಭಕ್ತರ ಗುಣಗಳನ್ನು ತಿಳಿದುಕೊಂಡು ಸಂತುಷ್ಟಚಿತ್ತರಾದರು, ಉತ್ತಮವಾದ ಪುರುಷಾರ್ಥವನ್ನು ಪಡೆದರು. ಇನ್ನು ಯಥಾಶ್ರುತರು–ಶಬ್ದಾರ್ಥವನ್ನೇ ಮಾಡಿಕೊಂಡವರು ಈ ಎರಡೂ ಬಗೆಯ ಅಧಿಕಾರಿಗಳಂತೆ ಅರ್ಥಜ್ಞಾನವುಳ್ಳ ಜಾಣರಾಗಿರುವದಿಲ್ಲ. ಸ್ವಾಭಾವಿಕವಾಗಿಯೇ ವಿಷಯ ಸುಖದಲ್ಲಿ ಆಸಕ್ತರಾದವರು, ಸ್ವರ್ಗಸುಖಕ್ಕಿಂತಲೂ ಅಧಿಕವಾಗಿ ವಿಷಯ ಸುಖಗಳನ್ನೇ ಗ್ರಹಿಸುವ ಅವರ

ಮನಸ್ಸು ವಿಷಯ ಸುಖದಲ್ಲಿಯೇ ಬಂಧಿತವಾಗಿರುವದು. ಆದುದರಿಂದ ಅವರ ಮನಸ್ಸು ಭಾರತದಲ್ಲಿ ಪ್ರತಿಪಾದಿತವಾದ ಶ್ರೀ ಹರಿಯ ಗುಣಗಳನ್ನು ತಿಳಿದು ಕೊಳ್ಳುವದರಲ್ಲಿ ಆಸಕ್ತಿಯನ್ನು ತಾಳುವದಿಲ್ಲ.

ಅಂತೆಯೇ, ಅಂಥವರಿಗೆ ಪ್ರಯೋಜನವಾಗದ್ದರಿಂದ ಭಾರತವನ್ನು ರಚಿಸಿದರೂ ಅವರಿಗಾಗಿ ರಚಿಸದಂತೆಯೆ ಆಗಿದೆ.

[ 'ಭಾರತಾತ್ ನ ಪರಂ ವಿಷ್ಣೋಃ ಮಹಿಮಾವಾಚಕವ್ಮ್' – ಎಂಬ ಶ್ರೀ ಮಧ್ವಾಚಾರ್ಯರ ತಾತ್ಪರ್ಯದಲ್ಲಿಯ ಉಕ್ತಿಗೂ – ಮೇಲೆ ಹೇಳಿದ್ದಕ್ಕೂ ವಿರೋಧವಿರುವಂತೆ ಭಾಸವಾಗಬಹುದು. ಆದರೆ ಇಲ್ಲಿ ಉತ್ತಮ–ಮಧ್ಯಮ–ಅಧಿಕಾರಿಗಳನ್ನು ಅನುಲಕ್ಷಿಸಿ, ಹೇಳಿದ್ದಾಗಿದೆ. 'ನ ತಥಾಪಿ ಈಶಂ ಜಾನಂತಿ ಅಜ್ಞಾ ಜನಾರ್ದನಮ್'– ಶ್ರೀಮಧ್ವಾಚಾರ್ಯರು ಅಲ್ಲಿ ಉದಹರಿಸಿದ 'ಸ್ಕಾಂದ' ಪುರಾಣದ ವಚನದಿಂದ ವಿಷಯಾಸಕ್ತರಿಗೆ ಭಗವದ್ಗುಣಗಳ ಕಡೆಗೆ ಮನಸ್ಸು ಹರಿಯುವದಿಲ್ಲವೆಂಬದು ವಿದಿತವಾಗುವದು, ಆದುದರಿಂದ ಅವಧೂತ ಶಿರೋಮಣಿ–ಗಳು ಶ್ರೀ ಮಧ್ವಾಚಾರ್ಯರಿಗೆ ಸಮ್ಮತವಾಗಿರುವ ವಿವರಣೆಯನ್ನೇ ಕೊಟ್ಟಿರುವರು,]

॥೧೦॥ **ತದಸ್ಯ ಕೌಷಾರವ ಶರ್ಮದಾತು-**
**ರ್ಹರೇಃ ಕಥಾಮೇವ ಕಥಾಸು ಸಾರಂ ।**
**ಉದ್ಧೃತ್ಯ ಪುಷ್ಪೇಭ್ಯ ಇವಾರ್ತಬಂಧೋ**
**ಶಿವಾಯ ನಃ ಕೀರ್ತಯ ತೀರ್ಥಕೀರ್ತೇಃ ॥** ೩-೫-೧೫

ಮೈತ್ರೇಯನ ಮನಸ್ಸಿನಲ್ಲಿರುವ ಸಂದೇಹವನ್ನು ಹೀಗೆ ಹೋಗಲಾಡಿಸಿ, ವಿದುರನು ತನ್ನ ಅಭಿಪ್ರಾಯವನ್ನು ಹೇಳುತ್ತಾನೆ.

**ಅರ್ಥ:–** 'ಮೈತ್ರೇಯರೆ! ಸಾಮಾನ್ಯ ಜನರಿಗೆ ಭಾರತ ಗ್ರಂಥದಿಂದ ವಿಶೇಷ ಉಪಯೋಗವಾಗುವದಿಲ್ಲ. ಆದುದರಿಂದ ಮಂದಮತಿಗಳಾದ ನಮ್ಮೆಲ್ಲರ ಕಲ್ಯಾಣ ಹಾಗೂ ಪುರುಷಾರ್ಥ ಸಿದ್ಧಿಗಾಗಿ ಪಾವನ ಕೀರ್ತಿಯ, ನಿತ್ಯ ಸುಖದಾಯಕನಾದ ಶ್ರೀಹರಿಯ ಚರಿತ್ರೆಯಲ್ಲಿಯ ಸಾರಭೂತವಾದುದನ್ನು–ಭ್ರಮರವು ಹೂಗಳಿಂದ ಮಕರಂಡವನ್ನು ಸಂಗ್ರಹಿಸುವಂತೆ -ಶ್ರೀ ಹರಿಯ ಕಥೆಗಳ ಸಾರಭೂತವಾದುದನ್ನು ನಿರೂಪಿಸಿರಿ.' ಆರೀತಿಯಾಗಿರುವ ಭಾಗವತವನ್ನು ಪ್ರತಿಪಾದಿಸಿರಿ, ಎಂಬುದೇ ಆಶಯ.

ಹೇಳುವವರ ಬಗ್ಗೆ ಆದರವನ್ನು ಹುಟ್ಟಿಸಲು ಅವರನ್ನು ಸ್ತುತಿಸುವದಂಟು. ಭವದುಃಖದಿಂದ ಬಳಲುವವರಿಗೆ ವಿದುರರ ನಿರೂಪಣೆಯಿಂದ ಹಿತವಾಗುವದರಿಂದ–

'ಬಂಧೋ'-ಹಿತಕರ್ತರೇ-ಎಂದು ಸಂಬೋಧನೆ. ಭಾಗವತವೂ ಕೂಡ ದೇವತೆಗಳಿಗೂ ದುರ್ಬೋಧವಾದ ಅನೇಕ ಅರ್ಥದಿಂದ ಯುಕ್ತವಾದುದು. ಆದರೂ ಸಕಲವೇದ, ಇತಿಹಾಸ, ಬ್ರಹ್ಮಸೂತ್ರ ಮುಂತಾದ ಸಕಲ ಗ್ರಂಥಗಳಿಂದಲೂ ಸಾರವಾದುದನ್ನು ಅದರಲ್ಲಿ ಸಂಗ್ರಹಿಸಿ ಹೇಳಿದುದರಿಂದ,-ವಿಷಯಾಸಕ್ತರಾದ ಮಂದಾಧಿಕಾರಿಗಳು ಮೇಲೆ ಮೇಲೆ ಸ್ಫುಟವಾಗಿ ತೋರುವ ಅರ್ಥವನ್ನು ಸುಲಭವಾಗಿ ತಿಳಿದುಕೊಳ್ಳ-ಬಹುದು. ಅಂತೆಯೆ ಮಂದಾಧಿಕಾರಿಗಳ ಬಗ್ಗೆ ಇಲ್ಲಿ ಉಲ್ಲೇಖವಿರುವದು.-ಕೇವಲ ಮಂದಾಧಿಕಾರಿಗಳಿಗೆ ಎಂಬ ಮಾತಿನಿಂದ ಬ್ರಹ್ಮಾದಿಗಳಿಗೆ ಅದು ಅಪ್ರಯೋಜಕವೆಂಬ ವಿಪರೀತ ಅರ್ಥವಾದೀತು.

||೧೧|| **ಕಲಿಮಲಸಂಸ್ಕೃತಿಕಾಲನೋಽಖಿಲೇಶೋ**
**ಹರಿರಿತರತ್ರ ನ ಗೀಯತೇ ಹ್ಯಭೀಕ್ಷ್ಣಂ |**
**ಇಹ ತು ಪುನರ್ಭಗವಾನಶೇಷಮೂರ್ತಿಃ**
**ಪರಿಪಠಿತೋಽನುಪದಂ ಕಥಾಪ್ರಸಂಗೈಃ** || ೧೨-೧೨-೬೫

ವೈಷಯಿಕ, ಲೌಕಿಕ ಕಥೆಗಳಿರುವವೆಂದು, ಭಾರತದ ಬಗ್ಗೆ ಅತೃಪ್ತಿಯಿಂದ, ನೀವು ಭಾಗವತಕ್ಕಾಗಿ ಪ್ರಾರ್ಥಿಸಿಕೊಂಡದ್ದಾಯಿತು. ಭಾಗವತದಲ್ಲಿಯೂ ಗ್ರಾಮ್ಯ ಕಥೆಗಳೇ ಇರುವದಾದರೆ,-ಸುಂಕವನ್ನು ತಪ್ಪಿಸಲು ಸುತ್ತು ಸುತ್ತಾಡಿ ತಿರುಗಿ ಸುಂಕದ ಕಟ್ಟೆಗೇನೆ ಬರುವಂತೆ-ಎಂಬಂತಾದೀತು ಆದರೆ ಈ ಭೀತಿಯು ನಿರಾಧಾರವಾದುದು. ಅದು ಭಾಗವತಕ್ಕೆ ಅನ್ವಯಿಸುವದಿಲ್ಲ.

**ಅರ್ಥ:**-ಕಲಿಯುಗದ ಅನಿಷ್ಟ ಪರಂಪರೆಯ ಬಂಧನವನ್ನು ನಾಶಗೊಳಿಸುವ ಜಗದೊಡೆಯನಾದ ಶ್ರೀ ಹರಿಯು ಉಳಿದ ಗ್ರಂಥಗಳಲ್ಲಿ ಪುನಃ ಪುನಃ ಪ್ರತಿಪಾದಿಸ-ಲ್ಪಡುವದಿಲ್ಲ. ಆದರೆ ಈ ಭಾಗವತ ಗ್ರಂಥದಲ್ಲಿ ಶ್ರೀ ಹರಿಯ ಬಗ್ಗೆ ಅತ್ಯಧಿಕವಾದ ಪ್ರತಿಪಾದನೆ ಇರುವದು. ಅದು ಹೇಗೆಂದರೆ, ಸರ್ವತ್ರವಾಗಿ ಪ್ರತಿಯೊಂದು ಶಬ್ದವೂ ಶ್ರೀ ಹರಿಯ ಬಗ್ಗೆ ಹೇಳುವದು. ಭಾಗವತದಲ್ಲಿಯೂ ಅನೇಕ ಕಥಾ ಪ್ರಸಂಗಗಳು ಇರುವವು. ಅಂದ ಮೇಲೆ, ಅದರ ಅಗತ್ಯವೇನು ? – ನೀವು ಹೇಳುವದು ಸರಿ. ಅನೇಕ ಕಥೆಗಳು ಇರುವುವು. ಆದರೆ ಭಾಗವತದಲ್ಲಿ ಬರುವ ಕಥೆಗಳಿಗೆಲ್ಲ ಶ್ರೀ ಹರಿಯೆ ಮುಖ್ಯವಾದ ವಿಷಯನಾಗಿರುವನು. ಉಳಿದ ಗ್ರಂಥಗಳಲ್ಲಿ ಶ್ರೀ ಹರಿಯ ಬಗ್ಗೆ ಸಂಕುಚಿತವಾದ ಪ್ರತಿಪಾದನೆ. ಭಗವಂತನ ಅನಂತ ಗುಣ-ರೂಪಗಳು ಭಾಗವತದಲ್ಲಿ ನಿರೂಪಿಸಲ್ಪಡುವವು. ಭಗವಂತನ ಅನಂತ ವಿಭೂತಿಗಳನ್ನು ವಿವರವಾಗಿ ನಿರೂಪಿಸಲೆಂದೇ ಭಾಗವತದ ರಚನೆ. ಭಾಗವತದಲ್ಲಿ ಇನ್ನೂ ಒಂದು ವಿಶೇಷವಿದೆ. ಈ ಗ್ರಂಥದಲ್ಲಿ ಶ್ರೀ ಹರಿಯ ಮಹಿಮೆಯು ಮತ್ತೆ ಮತ್ತೆ ಅನೇಕ ಸಲ ಹೇಳಲ್ಪಡುತ್ತದೆ. ಹೇಳಿದ್ದನ್ನೇ ಹೇಳುವದು ಪುನರುಕ್ತಿದೋಷವಲ್ಲವೆ, ಎಂದರೆ,-

ಬೇರೆ ಬೇರೆ ಕಥೆಗಳಲ್ಲಿ ಬೇರೆ ಬೇರೆ ಸಂದರ್ಭಗಳಲ್ಲಿ ಹೇಳಿರುವದರಿಂದ ಪುನರುಕ್ತಿ ಯೆನಿಸದು. ಹೇಳುವವರು ಬೇರೆ, ಕೇಳುವವರು ಬೇರೆ, ಸನ್ನಿವೇಶಗಳು ಬೇರೆ,—ಹೀಗೆ ಸಂದರ್ಭಗಳು ಭಿನ್ನವಾಗಿರುವದರಿಂದ ಮತ್ತೆ ಮತ್ತೆ ಹೇಳಿರುವದು ಪುನರುಕ್ತಿ ಎನಿಸದು.

||೧೨|| **ಸೋऽಹಂ ನೃಣಾಂ ಕ್ಷುಲ್ಲಸುಖಾಯ ದುಃಖಂ**
**ಮಹದ್ಗತಾನಾಂ ವಿರಮಾಯ ತುಭ್ಯಂ |**
**ಪ್ರವರ್ತಯೇ ಭಾಗವತಂ ಪುರಾಣಂ**
**ಯದಾಹ ಸಾಕ್ಷಾದ್ಭಗವಾನೃಷಿಭ್ಯಃ || ೩-೮-೨**

ತನ್ನ ಮನಸ್ಸಿನಲ್ಲಿಯ ಅಭಿಪ್ರಾಯವನ್ನು ಒಳ್ಳೇ ಕುಶಲತೆಯಿಂದ ತಿಳಿಸಿದ ವಿದುರನಿಗೆ ಮೈತ್ರೇಯರು ಹೇಳಿದ ಮಾತು ಇದು :—

**ಅರ್ಥ** :— ಪೂಜ್ಯತಮರಾದ ಶೇಷ ದೇವರು ಸನಕಾದಿ ಋಷಿಗಳಿಗೆ ನಿರೂಪಿಸಿದ ಭಾಗವತವನ್ನೇ—ಅಲ್ಪ ವಿಷಯಕ್ಕಾಗಿ ಅತಿದುಃಖವನ್ನು ಅನುಭವಿಸು-ತ್ತಿರುವ ಜನರ ದುಃಖಪರಿಹಾರಕ್ಕಾಗಿ—ನಿನಗಾಗಿ ನಾನು ಹೇಳುವೆನು.

||೧೩|| **ಆಸೀನಮುರ್ವ್ಯಾಂ ಭಗವಂತಮಾದ್ಯಂ**
**ಸಂಕರ್ಷಣಂ ದೇವಮಕುಂಠಸತ್ವಂ |**
**ವಿವಿತ್ಸವಸ್ತತ್ತ್ವಮತಃ ಪರಸ್ಯ**
**ಕುಮಾರಮುಖ್ಯಾ ಮುನಯೋऽನ್ವಪೃಚ್ಛನ್ || ೩-೮-೩**

ಋಷಿಗಳಿಗೆ ಭಾಗವತವನ್ನು ನಿರೂಪಿಸಿದ ಭಗವಂತನು ಯಾರು ?. ಆತನು ಹೇಳಿದ್ದನ್ನು ಯಾವ ಋಷಿಗಳು ಕೇಳಿದರು ? —ಅದಿರಲಿ. ಭಾಗವತದ ಉಪದೇಶವು ನಿನಗೆ ಹೇಗೆ ಉಂಟಾಯಿತು ? —ವಿದುರನ ಮನಸ್ಸಿನಲ್ಲಿರುವ ಈ ಮೂರು ಸಂದೇಹ-ಗಳನ್ನು ನಾಲ್ಕು ಶ್ಲೋಕಗಳಿಂದ ನಿವಾರಿಸುವರು. ಮೊದಲುಎರಡು ಸಂದೇಹಗಳನ್ನು ಕಳೆದು,ಮೂರನೆಯ ಸಂದೇಹದ ನಿವಾರಣೆಗೆ ಪೀಠಿಕೆಯನ್ನು ರಚಿಸುವದು.

**ಅರ್ಥ** :— (ಸನತ್ಕುಮಾರರೇ ಮುಖ್ಯರಾದ ಋಷಿಗಳು :— (ಋಷಿಗಳು ಯಾರು ? ಎಂಬ ಎರಡನೆಯ ಪ್ರಶ್ನೆಗೆ ಉತ್ತರ -) ಯಾರೂ ತಡೆಯಲಾರದ ಶಕ್ತಿಯುಳ್ಳವನು ಸನಕಾದಿಗಳಿಗಿಂತಲೂ ಮೊದಲು ಸಂಭೂತನಾದವನು, ಅಂತೆಯೇ ಆದ್ಯನೂ—ಜೀವೋತ್ತಮನೂ, ಪಾತಾಳ ಲೋಕದಲ್ಲಿ ಸನ್ನಿಧರಾದ ಸಂಕರ್ಷಣ ನಾಮಕ ದೇವನ ಬಳಿಗೆ (ಭಗವಂತನು ಯಾರು ? ಎಂಬ ಪ್ರಶ್ನೆಗೆ ಉತ್ತರ )—ಈ ಋಷಿಗಳು ಬಂದರು. ಪರಮಾತ್ಮನ ಮಹಿಮೆಯನ್ನು ತಿಳಿಯಬೇಕೆಂಬ ಬಯಕೆಯಿಂದ ಅವರು

ಸಂಕರ್ಷಣ ದೇವರ್ರಿಗೆ ಪ್ರಶ್ನೆ ಮಾಡಿದರು. (ಇದರಿಂದ ಮೂರನೆಯ ಸಂದೇಹ ನಿವಾರಣೆಗೆ ದಾರಿ ಮಾಡಿ ಕೊಟ್ಟಂತಾಯಿತು.)

॥೧೪॥ **ಪ್ರೋಕ್ತಂ ಕಿಲೈತದ್ ಭಗವತ್ತಮೇನ**
**ನಿವೃತ್ತಧರ್ಮಾಽಭಿರತಾಯ ತೇನ ।**
**ಸನತ್ಕುಮಾರಾಯ ಯದಾಹ ಪೃಷ್ಟಃ**
**ಸಾಂಖ್ಯಾಯನಾಯಾಂಗ ಧೃತವ್ರತಾಯ** ॥ ೩-೮-೪ 3-8-7

**ಅರ್ಥ** :–ಹೀಗೆ ಋಷಿಗಳು ಪ್ರಶ್ನೆ ಮಾಡಲು, ಪೂಜ್ಯತಮರಾದ ಸಂಕರ್ಷಣ ದೇವರು ನಿವೃತ್ತಧರ್ಮದಲ್ಲಿ (ನಿಷ್ಕಾಮಕರ್ಮದಲ್ಲಿ) ನಿರತರಾದ ಸನತ್ಕುಮಾರರಿಗೂ ಉಳಿದ ಋಷಿಗಳಿಗೂ ಹೇಳಿದುದೇ ಭಾಗವತವು.

॥೧೫॥ **ಸಾಂಖ್ಯಾಯನಃ ಪಾರಮಹಂಸ್ಯಮುಖ್ಯಃ**
**ವಿವಕ್ಷಮಾಣೋ ಭಗವದ್ವಿಭೂತೀಃ ।**
**ಜಗಾದ ಸೋಽಸ್ಮದ್ಗುರವೇಽನ್ವಿತಾಯ**
**ಪರಾಶರಾಯಾಥ ಬೃಹಸ್ಪತೇಶ್ಚ** ॥ ೩-೮-೭ 3-8-8 ?

॥೧೬॥ **ಪ್ರೋವಾಚ ಮಹ್ಯಂ ಸದಯಾಲುರುಕ್ತೋ**
**ಮುನಿಃ ಪುಲಸ್ತ್ಯೇನ ಪುರಾಣಮಾದ್ಯಂ ।**
**ಸೋಽಹಂ ತವೈತತ್ಕಥಯಾಮಿ ವತ್ಸ**
**ಶ್ರದ್ಧಾಲವೇ ನಿತ್ಯಮನುವ್ರತಾಯ** ॥ ೩-೮-೯ 3-8-9 ?

**ಅರ್ಥ** :– ಸಂಕರ್ಷಣ ದೇವನು ತಮಗೆ ಹೇಳಿದುದನ್ನೇ, ವ್ರತನಿಷ್ಠರಾದ ಸಾಂಖ್ಯಾಯನರಿಗೆ ಹೇಳಿದರು. ಸಾಂಖ್ಯಾಯನರು ಪರಮಹಂಸರಲ್ಲಿ–ಯತಿಗಳಲ್ಲಿ ಶ್ರೇಷ್ಠರು. ಭಗವಂತನ ವಿಭೂತಿಗಳನ್ನು, ವಿವಿಧ ಮಹಿಮೆಯನ್ನು ವಿಸ್ತಾರವಾಗಿ, ವಿವರವಾಗಿ ನಿರೂಪಿಸುವ ಅಪೇಕ್ಷೆಯಿಂದ, ಗುರುಭಕ್ತಿ ಮುಂತಾದ ಶಿಷ್ಯೋಚಿತ ಗುಣಗಳಿಂದ ಯುಕ್ತರಾದ ನನ್ನ ಗುರು–ಪರಾಶರ ಮುನಿಗಳಿಗೂ ಹಾಗೂ ಬೃಹಸ್ಪತ್ಯಾಚಾರ್ಯರಿಗೂ ಅದನ್ನೇ ಸಾಂಖ್ಯಾಯನರು ನಿರೂಪಿಸಿದರು.

ತಮ್ಮ ತಂದೆ ರಾಕ್ಷಸನಿಂದ ಹತನಾದುದನ್ನು ಕೇಳಿ ಕುಪಿತರಾದ ಪರಾಶರರು ರಾಕ್ಷಸ ಕುಲವನ್ನೇ ನಾಶಗೊಳಿಸಲು ಯಜ್ಞ ಹೂಡಿದರು. ವಶಿಷ್ಠರ ಮಾತನ್ನು ಕೇಳಿ ಅದನ್ನು ಬಿಟ್ಟುಕೊಟ್ಟರು. ಇದರಿಂದ ತಮ್ಮ ಸಂತತಿಯ ರಕ್ಷಣೆಯಾದುದನ್ನು ಕಂಡು ಪುಲಸ್ತ್ಯರಿಗೆ ಸಂತೋಷವಾಯಿತು 'ಪುರಾಣ ಪ್ರವರ್ತಕರಾಗಿರಿ', ಎಂಬ ವರವನ್ನು ಪರಾಶರರಿಗೆ ಅವರು ಕೊಟ್ಟರು. ಕಾರುಣಿಕರಾದ ನನ್ನ ತಂದೆ ಪರಾಶರರು ಆದ್ಯ

ಪುರಾಣವಾದ ಭಾಗವತವನ್ನು ನನಗೆ ಉಪದೇಶಿಸಿದರು. ಹೇ ವಿದುರ ! ಶ್ರದ್ಧಾ-ಯುತನಾದ ನಿನಗೆ ಅವರಿಂದ ಉಪದಿಷ್ಟವಾದುದನ್ನೇ ಹೇಳುವೆ. ಭಾಗವತದ ನಿವೇದನೆಯು ಆದರಣೀಯವಾದುದು, ಆನಂದಕರವಾದುದು.

( ಭಾಗವತದ ಉಪದೇಶವು ನಿನಗೆ ಹೇಗೆ ದೊರೆತಿತು ?–ಎಂಬ ಮೂರನೆಯ ಸಂದೇಹವು ಇದರಿಂದ ಪರಿಹಾರವಾಯಿತು )

ಹೀಗಿರುವದರಿಂದ, ಸಾಕ್ಷಾತ್ ಶ್ರೀ ಮನ್ನಾರಾಯಣನು ಬ್ರಹ್ಮನಿಗೆ ಭಾಗವತ-ವನ್ನು ಉಪದೇಶಿಸುವ ಸಮಯದಲ್ಲಿಯೆ ಶೇಷ ದೇವರಿಗೂ ಹೇಳಿಕೊಟ್ಟನು. ಶೇಷ ದೇವರಿಂದ ಸನತ್ಕುಮಾರರಿಗೆ, ಅವರಿಂದ ಸಾಂಖ್ಯಾಯನರಿಗೆ ಅವರಿಂದ ಪರಾಶರಮುನಿಗಳಿಗೆ ಅವರಿಂದ ಮೈತ್ರೇಯರಿಗೆ,–ಮೈತ್ರೇಯರಿಂದ ವಿದುರನಿಗೆ – ಈ ಪರಂಪರೆಯಿಂದ ಲೋಕದಲ್ಲಿ ಭಾಗವತವು ಸಾಗಿ ಬಂದಿತು.

ಶ್ರವಣ, ಕೀರ್ತನ, ಸ್ಮರಣ, ಪಾದಸೇವನ, ಅರ್ಚನ ವಂದನ, ದಾಸ್ಯ, ಆತ್ಮನಿವೇದನ, ಈ ಒಂಬತ್ತು ಸಾಧನಗಳಲ್ಲಿ 'ಸ್ಮರಣ'ವೆಂಬ ಭಾಗವತ ಧರ್ಮವನ್ನು ಇದರಿಂದ ಸೂಚಿಸಿದಂತಾಯಿತು.



# ಪ್ರಕರಣ—೨ (ರಾಜವಿರಾಗ)

ಶ್ರೀ ಕಪಿಲಾಯ ನಮಃ :– ಶ್ರೀ ಶುಕಮುನಿಗಳು ಪರೀಕ್ಷಿತ ರಾಜನಿಗೆ ಭಾಗವತವನ್ನು ಹೇಳಿದರು – ಎಂದು ಹಿಂದಿನ ಪ್ರಕರಣದಲ್ಲಿ ಹೇಳಿದೆ. ಆ ಬಗ್ಗೆ ಈ ಸಂದೇಹ ಬರಬಹುದು. :–ಪರೀಕ್ಷಿತ ರಾಜನು ತನ್ನ ಮಹಾ ಸಾಮ್ರಾಜ್ಯವನ್ನೂ ಬದುಕುವ ಅಪೇಕ್ಷೆಯನ್ನೂ ಬಿಟ್ಟುಕೊಟ್ಟು ಗಂಗಾ ತೀರದಲ್ಲಿ ಅನ್ನ ನೀರು ತೊರೆದು ಭಾಗವತದ ಶ್ರವಣ ಮಾಡಿದನೆಂಬುದು ಎಲ್ಲರಿಗೂ ತಿಳಿದ ಸಂಗತಿ. ರಾಜ್ಯ ಹಾಗೂ ಜೀವವನ್ನು ಬಿಟ್ಟು ಕೊಡಲು, ಎರಡು ಕಾರಣಗಳನ್ನು ಕಲ್ಪಿಸಬಹುದು. ಅನ್ಯ ರಾಜರು ಆತನ ರಾಜ್ಯವನ್ನು ಗೆದ್ದು ಕೊಂಡಿರುವದು; ಸ್ವಾರ್ಥಕ್ಕಾಗಿ, ಸ್ವಜನರ ಸುಖಕ್ಕಾಗಿ ಎರಡನೆಯವರ ಸರ್ವಸ್ವ ಹಾಗೂ ಜೀವ ನಾಶಗೊಳಿಸಿ ಅಪಕೀರ್ತಿ ಯನ್ನು ಪಡೆದು ನಾಚಿಕೆಯಿಂದ ಕೂಡಿದ್ದಕ್ಕಾಗಿ – ಏಕಛತ್ರಾಧಿಪತಿಯಾಗಿದ್ದರಿಂದ ಶತ್ರುಗಳ ಆಕ್ರಮಣದ ಭೀತಿಯೆಂಬುದೆ ಆತನಿಗೆ ಇರಲಿಲ್ಲ. ಶ್ರೀಮನ್ನಾರಾಯಣನ ಭಕ್ತನೂ, ಪರಮ ಭಾಗವತನೂ ಆಗಿದ್ದರಿಂದ ಆತನು ಪಾಪಕೃತ್ಯವನ್ನು ಮಾಡಿರ ಬಹುದೆಂಬುದು ಮನಸ್ಸಿನಲ್ಲಿ ಕೂಡಬರಲಾರದು. ಎರಡೂ ನಿಮಿತ್ತಗಳು ಅಸಂಭವ ನೀಯವಾದವುಗಳು. ಹೀಗಿದ್ದರೂ ಯಾವ ಕಾರಣದಿಂದ ಆತನು ರಾಜ್ಯವನ್ನು ತ್ಯಜಿಸಿದನು ?– ಎಂಬುವದೇ ಈ ಶ್ಲೋಕದಲ್ಲಿಯ ಪ್ರಶ್ನೆಯ ಅಭಿಪ್ರಾಯವಾಗಿದೆ.

॥೧೭॥ **ಶಿವಾಯ ಲೋಕಸ್ಯ ಭವಾಯ ಭೂತಯೇ**
**ಯ ಉತ್ತಮಶ್ಲೋಕಪರಾಯಣಾ ಜನಾಃ ।**
**ಜೀವಂತಿ ನಾತ್ಮಾರ್ಥಮಸೌ ಪರಾಂ ಶ್ರಿಯಂ**
**ಮುಮೋಚ ನಿರ್ವಿದ್ಯ ಕುತಃ ಕಲೇವರಂ** ॥ ೧-೪-೧೧

**ಅರ್ಥ** :– ಅಲೌಕಿಕ ಕೀರ್ತಿಸಂಪನ್ನನಾದ, ಬ್ರಹ್ಮಾದಿಶ್ರೇಷ್ಠ ದೇವತೆಗಳಿಂದ ಹೊಗಳಲ್ಪಡುವ ನಾರಾಯಣನ ಭಕ್ತರಾದವರು ಜಗತ್ತಿಗೆ ಕಲ್ಯಾಣವನ್ನು ಮಾಡುವ ಗೋಸುಗವೆ ಜೀವಿಸುತ್ತಾರೆ. ಅವರು ಸ್ವಹಿತಕ್ಕಾಗಿ ಜೀವಿಸುವದಿಲ್ಲ. ಮೂರು ಬಗೆಯ ಉಪದ್ರವಗಳ ಉಚ್ಚಾಟಣೆಯಾಗಬೇಕು, ಜನರಿಗೆ ಸಂತಾನ ಸಂಪತ್ತು ಗಳು ಲಭಿಸಬೇಕೆಂದ್ಹೇ, ಈ ಪುಣ್ಯ ಪುರುಷರ ಜೀವನದ ಉದ್ದೇಶವಾಗಿದೆ. ಅಪಾರ ಸಂಪತ್ತನ್ನು – ಎಂದರೆ, ಅಖಂಡ ಪೃಥ್ವಿಯ ಸಾರ್ವಭೌಮತ್ವವನ್ನು ಹೇಯಬುದ್ಧಿಯಿಂದ (ವೈರಾಗ್ಯದಿಂದ) ಯಾವ ಕಾರಣಕ್ಕಾಗಿ ಬಿಟ್ಟುಕೊಟ್ಟನು.

॥೧೮॥ **ಯದಾ ಪರೀಕ್ಷಿತ್ಕುರುಜಾಂಗಲೇ ವಸನ್**
**ಕಲಿಂ ಪ್ರವಿಷ್ಟಂ ನಿಜಚಕ್ರವರ್ತಿತೇ ।**

**ನಿಶಮ್ಯ ವಾರ್ತಾಮನತಿಪ್ರಿಯಾಂ ತತಃ**
**ಶರಾಸನಂ ಸಂಯುಗಶೌಂಡಿರಾದದೇ ॥೧-೧೬-೧೦** 1-16-10

ರಾಜ್ಯ ಹಾಗೂ ಜೀವನವನ್ನು ತ್ಯಜಿಸಲು ಕಾರಣವೇನು ?- ಈ ಪ್ರಶ್ನೆಗೆ ಉತ್ತರ ಹೇಳುವಾಗ್ಗೆ, 'ಪರೀಕ್ಷಿತನು ಭಾಗವತೋತ್ತಮನು, ಏಕಛತ್ರಾಧಿಪತಿಯು' ಎಂದು ವರ್ಣಿಸಿದೆ. ಇವೆರಡೂ ಸಂಗತಿಗಳು ಸತ್ಯವೆಂದು ಸಿದ್ಧಪಡಿಸಲು-ಅತನು ಮಾಡಿದ ಕಲಿಯ ನಿಗ್ರಹ, ಆತನ ಮಹಿಮೆ, ಕಲಿನಿಗ್ರಹದ ವೃತ್ತಾಂತವನ್ನು ಕೇಳುವುದರಿಂದ ಕಲಿಬಾಧೆಯಿಂದ ಬಿಡುಗಡೆ, - ಇವುಗಳನ್ನು ಮೂರು ಶ್ಲೋಕಗಳಲ್ಲಿ ಹೇಳಿದೆ. ಕಲಿಯ ಆಗಮನದ ಸುದ್ದಿಯನ್ನು ತಿಳಿದು, ರಾಜನು ಯುದ್ಧಾರ್ಥಿಯಾಗಿ ದಿಗ್ವಿಜಯಕ್ಕಾಗಿ ಹೊರಟ ವೃತ್ತಾಂತವು ಮೊದಲು ಬಂದಿದೆ.

**ಅರ್ಥ :-** ಕುರುಕ್ಷೇತ್ರದ ಹಸ್ತಿನಪುರದಲ್ಲಿ ಇರುವಾಗ್ಗೆ ತನ್ನ ಆಳಿಕೆಗೆ ಒಳಪಟ್ಟ ಪ್ರದೇಶದಲ್ಲಿ ಕಲಿಯು ಪ್ರವೇಶಮಾಡಿದ ಸಂಗತಿಯನ್ನು ಪರೀಕ್ಷಿತ್ ರಾಜನು ಕೇಳಿದನು. ಈ ಅಪ್ರಿಯವಾದ ಸುದ್ದಿಯು ಕಿವಿಗೆ ಬಿದ್ದಕೂಡಲೇ, ಯುದ್ಧ ಸೂಚಕವಾದ, ಹಾಗೂ ಯುದ್ಧ ಕಾರ್ಯದಲ್ಲಿ ಭೂಷಣವಾದ ಬಿಲ್ಲನ್ನು ತೆಗೆದುಕೊಂಡನು. ದಿಗ್ವಿಜಯ ಮಾಡಿ, ಎಲ್ಲೆಡೆಗಳಲ್ಲಿಯೂ ಕಪ್ಪ ಕಾಣಿಕೆಗಳನ್ನು ಸ್ವೀಕರಿಸಿದನು, ಶ್ರೀ ಕೃಷ್ಣನ ಮಹಿಮೆಯನ್ನು ಹೊಗಳುತ್ತಿರುವ ಜನರಿಗೆ ಅವರು ಅಪೇಕ್ಷಿಸುವ ವಸ್ತುಗಳನ್ನು ಕೊಟ್ಟು, ಸಾಗಿದನು. ಈ ದಿಗ್ವಿಜಯದಲ್ಲಿ ಕಲಿಯು ಅವನಿಗೆ ಎಲ್ಲಿಯೂ ಕಾಣಬರಲಿಲ್ಲ. ರಥವನ್ನೇರಿ ಮರಳಿ ಬರುವಾಗ್ಗೆ, ಪೂರ್ವಾಭಿಮುಖವಾಗಿ ಹರಿಯುವ ಸರಸ್ವತೀ ನದಿಯ ದಂಡೆಗೆ ತಲ್ಪಿದನು. ಆ ಸ್ಥಳದಲ್ಲಿ ಆಯುಧವನ್ನು ಹಿಡಿದು ರಾಜವೇಷಧಾರಿಯಾಗಿ ಶೂದ್ರನಂತಿರುವ ವ್ಯಕ್ತಿಯನ್ನು ಕಂಡನು. ಹಸಿವೆಯಿಂದ ಬಳಲುತ್ತಿರುವ, ಕಣ್ಣೀರು ಸುರಿಸುತ್ತಿರುವ, ಕರುವನ್ನು ಕಳೆದುಕೊಂಡ ಆಕಳನ್ನು ಆ ಶೂದ್ರನು ಹಿಂಸಿಸುತ್ತಿದ್ದನು. ಅದೇ ವೇಳೆಗೆ ತನ್ನ ಮೂರು ಕಾಲುಗಳನ್ನು ಕಳೆದುಕೊಂಡು ಒಂದೇ ಕಾಲಿನಿಂದ ಕುಂಟುತ್ತಿರುವ ಹಾಗೂ ಮೂತ್ರ ಶಗಣಿಗಳನ್ನು ಸುರಿಸುತ್ತಿರುವ ಎತ್ತನ್ನು ರಾಜನು ಕಂಡನು. ಕೇಳಿದರೂ ಕೂಡ ಅವುಗಳ ಬಗ್ಗೆ ಸ್ಪಷ್ಟವಾದ ವಿವರಗಳು ತಿಳಿಯದೇ,- ಸ್ವಂತ ಬುದ್ಧಿಯಿಂದಲೇ ಇವೆರಡೂ ಏನಿರಬೇಕೆಂಬುದನ್ನು ಊಹಿಸುತ್ತಾನೆ. ತಪಸ್ಸು, ಶೌಚ, ದಯಾ, ಸತ್ಯ - ಈ ನಾಲ್ಕು ಪಾದಗಳಿಂದ ಯುಕ್ತವಾದ ಧರ್ಮವೇ ಎತ್ತು. ಭೂಮಿಯಲ್ಲಿ ತನ್ನ ಅವತಾರಕಾಲವು ಕೊನೆಗೊಳ್ಳುವವರೆಗೆ ಶ್ರೀಕೃಷ್ಣನು ಧರ್ಮವನ್ನು ರಕ್ಷಿಸಿದನು. ಆ ನಂತರ ಸೊಕ್ಕು, ವಿಷಯಾಸಕ್ತಿ, ದರ್ಪ, ಅಧರ್ಮದ ಹೀನವಾದ ಈ ಅಂಗಗಳು ಧರ್ಮದ ಮೂರು ಪಾದಗಳನ್ನು ಮುರಿದು ಬಿಟ್ಟವು. ಅಧರ್ಮದ ನಾಲ್ಕನೆಯ ಅಂಗವಾದ ಅಸತ್ಯವು ಧರ್ಮದ ನಾಲ್ಕನೆಯ ಪಾದವನ್ನು

ಕೊರೆಯುತ್ತಿತ್ತು. ಇಲ್ಲಿರುವ ಎತ್ತೇ ಧರ್ಮ ದೇವತೆಯಾಗಿರಬೇಕೆಂದು ಆತನು ಭಾವಿಸಿದನು. ಇದೇ ಮೇರೆಗೆ ಅಲ್ಲಿ ನಿಂತಿದ್ದ ಆಕಳು ಭೂದೇವಿಯು. ಶ್ರೀ ಹರಿಯು ಅವತರಿಸಿ ಭೂಭಾರವನ್ನು ಇಳಿಸಿದನು. ಈಗ್ಗೆ ಶ್ರೀ ಹರಿಯ ಹೆಜ್ಜೆಯ ಚಿನ್ನಗಳಿಂದ ಭೂಷಿತಳಾದ ಭೂದೇವಿಯು ಮೂರು ಲೋಕಗಳಿಗಿಂತಲೂ ಮಿಗಿಲೆನಿಸಿದಳು. ಶ್ರೀ ಹರಿಯು ಪರಂಧಾಮಕ್ಕೆ ತೆರಳಿದ ನಂತರ, ಅಧಾರ್ಮಿಕರಾದ ರಾಜರು ಆಳುವರೆಂದು, ಮುಂದೆ ತನಗೆ ಒದಗುವ ದುಃಖಕ್ಕಾಗಿ ಕಣ್ಣೀರು ಸುರಿಸುತ್ತಿದ್ದಳು. ಈ ಆಕಳೇ ಭೂದೇವಿಯು ಆಗಿರಬೇಕು. ಧರ್ಮದೇವತೆ ಹಾಗೂ ಭೂದೇವತೆಗಳಿಬ್ಬರಿಗೂ ಹಿಂಸೆ ಮಾಡುತ್ತಿರುವ ಈ ಶೂದ್ರ ಪುರುಷನು ಸಾಕ್ಷಾತ್ ಕಲಿಯೇ ಆಗಿರಬೇಕು. ಹೀಗೆ ನಿರ್ಧರಿಸಿ, ಖಡ್ಗವನ್ನೆತ್ತಿಕೊಂಡು ಆತನ ತಲೆಯನ್ನು ಕಡಿದು ಬಿಡಲು ರಾಜನು ಸಿದ್ಧನಾದನು, ಅದನ್ನು ಕಂಡು ಗಾಬರಿಯಾದ ಆ ಶೂದ್ರನು ತಾನು ಧರಿಸಿದ ರಾಜ ಚಿನ್ಹಗಳನ್ನೆಲ್ಲ ಬಿಸುಟಿಹಾಕಿ ರಾಜನ ಪಾದಕ್ಕೆ ಎರಗಿದನು. ದೀನವತ್ಸಲನಾದ ರಾಜನು ಆತನನು ಕೊಲ್ಲಲಿಲ್ಲ. ಇದಲ್ಲದೆ,–ಭಯಗ್ರಸ್ತರಾದವರಿಗೆ ಅಭಯವನ್ನು ಕೊಡುವದು ರಾಜರಿಗೆ ಶ್ರೇಷ್ಠ ಧರ್ಮವೆಂದು ತಿಳಿದವನಾದ್ದರಿಂದ ರಾಜನು ಆತನಿಗೆ ಅಭಯವನ್ನು ಕೊಟ್ಟನು. "ಸಕಲವೇದ, ತಪಸ್ಸು, ದಾನಗಳು–ಪ್ರಾಣ ರಕ್ಷಣೆಗೆ ತಿಲ ಮಾತ್ರವೂ ಸರಿಯಾಗವು".

–"ಎಲವೋ"!– ಎಂದು ರಾಜನು ಆತನನ್ನು ತುಚ್ಛತೆಯಿಂದ ಕರೆಯುವನು ಅರ್ಜುನನ ಕೀರ್ತಿಯಿಂದ ಭೂಷಿತರಾದ ಅವನ ಅನುಯಾಯಿಗಳಲ್ಲಿ ನಾನೊಬ್ಬನು ಕೈಜೋಡಿಸಿ ಶರಣು ಬಂದ ನಿನಗೆ ನನ್ನಿಂದ ಯಾವ ಹೆದರಿಕೆಯೂ ಇಲ್ಲ. ಅವಯುವಗಳನ್ನು ಕಡಿದು ಹಾಕುವ ಇಲ್ಲವೆ ಜೀವವನ್ನೇ ತೆಗೆದು ಹಾಕುವ, ಯಾವುದನ್ನೂ ನಾನು ಮಾಡುವದಿಲ್ಲ. ಆದರೆ, ಈ ದೇಶದಿಂದ ನೀನು ತೊಲಗಬೇಕು. ನನಗೆ ಪ್ರತಿಕೂಲನಾಗಿ ಇಲ್ಲವೆ ಅನುಕೂಲನಾಗಿ, ಶ್ರೇಷ್ಠನಾಗಿ ಇಲ್ಲವೆ ದಾಸನಾಗಿ–ಯಾವ ಬಗೆಯಿಂದಲೂ ನೀನು ನನಗೆ ಅಧೀನವಾಗಿರುವ ಪ್ರದೇಶದಲ್ಲಿ, ರಾಜ್ಯದಲ್ಲಿ ವಾಸಿಸಕೂಡದು. ಏಕೆಂದರೆ, ನೀನು ಅಧರ್ಮಕ್ಕೆ ಪ್ರೀತಿಯ ಆಪ್ತನಾಗಿರುವಿ"

**||೨೦|| ತ್ವಾಂ ವರ್ತಮಾನಂ ನರದೇವದೇಹೇ-**
**ಷ್ವನುಪ್ರವೃತ್ತೋಽಯಮಧರ್ಮಯೂಥಃ |**
**ಲೋಭೋಽನೃತಂ ಚೌರ್ಯಮನಾರ್ಯಮಂಹೋ**
**ಜ್ಯೇಷ್ಠಾ ಚ ಮಾಯಾ ಕಲಹಶ್ಚ ದಂಭಃ ||** ೧-೧೭-೩೨

**ಅರ್ಥ** :- ನೀನು ಲೋಕದಲ್ಲಿ ನೆಲಿಸಿದರೆ, ರಾಜನ ಶರೀರವನ್ನೇ ಮೆಲ್ಲ-ಮೆಲ್ಲಗೆ ವ್ಯಾಪಿಸಿ ಬಿಡುವಿ. ನಿನ್ನನ್ನೇ ಹಿಂಬಾಲಿಸಿ. ಲೋಭ ಮೊದಲುಮಾಡಿಕೊಂಡು ದಂಭದವರೆಗಿನ ಅಧರ್ಮದ ಬಳಗವು ತಮ್ಮ ಕಾರ್ಯವನ್ನು ಪ್ರಾರಂಭಿಸುವವು. ಅಂತೆಯೆ; ನಿನಗೆ 'ಅಧರ್ಮಬಂಧು' ವೆಂದು ಹೇಳುವದು. 'ಮಹಾತ್ಮರ ಚರಣಸೇವೆಯನ್ನು ಮಾಡದವನೆ, ಅನಾರ್ಯನೇ,'-ಎನ್ನುವದರಿಂದ ಮಹಾತ್ಮರ ಸಾನ್ನಿಧ್ಯದಲ್ಲಿ ಇರಲು ನಿನಗೆ ಯೋಗ್ಯತೆಯೆ ಇಲ್ಲ'-ಎಂಬುದರ ಅರಿವನ್ನು ಅವನಿಗೆ ಉಂಟು ಮಾಡುವಂತಿದೆ. ಹೀಗೆ ಕಲಿಯು ರಾಜ್ಯದಿಂದ ಹೊರದೂಡಲ್ಪಡುವನು. ಆಗ್ಗೆ ಯಾವದಿಕ್ಕಿನಲ್ಲಿ ನೋಡಿದರೂ, ಆಯುಧ ಧಾರಿಯಾದ ಪರೀಕ್ಷಿತರಾಜನೇ ಆತನ ಕಣ್ಣಿಗೆ ಬೀಳುವನು: ತನಗೆ ಬೇರೆ ರಕ್ಷಕರನ್ನು ಪಡೆಯದೆ, ತುಂಬಾ ಹೆದರಿಕೊಂಡು ಕಲಿಯು ರಾಜನಿಗೆ ಪ್ರಾರ್ಥಿಸಿಕೊಳ್ಳುವನು.- "ನನಗೆ ಸ್ಥಳವನ್ನು ತೋರಿಸು; ನಾನು ಅಲ್ಲಿಯೇ ನೆಲಿಸುವೆನು. ಎಲ್ಲೆಡೆಯಲ್ಲಿಯೂ ಆಯುಧಧಾರಿಯಾಗಿ ನೀನು ನನಗೆ ಕಾಣುವಿ. ನಿನ್ನ ಆಜ್ಞೆಯನ್ನು ನಾನು ಹೇಗೆ ಮೀರುವೆನು?" - ರಾಜನು ದ್ಯೂತ (ಜೂಜಾಟ), ಮದ್ಯ, ಸ್ತ್ರೀಯರು ಹಿಂಸೆ,-ಎಂಬ ನಾಲ್ಕುಸ್ಥಾನಗಳನ್ನು ಕೊಟ್ಟನು. ಕಲಿಯು ಮತ್ತೆ ಬೇಡಿಕೊಳ್ಳಲು ಐದನೆಯ ನೆಲೆಯಾಗಿ ಬಂಗಾರವನ್ನು ಕೊಟ್ಟನು. ಇವುಗಳಿಂದಲೆ ಅಸತ್ಯ, ಅಹಂಕಾರ, ದುರಾಶೆ, ಅಜ್ಞಾನ ಹಾಗೂ ಹಗೆತನ,-ಇವು ಅಧರ್ಮದ ಬಳಗವಾದವು. - ಅಧರ್ಮಬಂಧುವಾದ ಕಲಿಗೆ ನೆಲೆವೀಡಾದವು.

ಇದೆಲ್ಲ ಸರಿ. ಹೀಗಿದ್ದರೂ ಕಲಿಯನ್ನು ಕೊಂದುಬಿಡಬೇಕಾಗಿತ್ತು. ರಾಜನು ಆತನನ್ನು ಕೊಲ್ಲದೇಬಿಟ್ಟದ್ದು ಸರಿಯಾದುದಲ್ಲ. ನೆಲೆಸಲು ಆತನಿಗೆ ಸ್ಥಾನಗಳನ್ನು ಕೊಟ್ಟದ್ದಂತೂ ಅದಕ್ಕೂ ಹೆಚ್ಚಿಗೆ ಅನುಚಿತವಾದಕಾರ್ಯ-ಹೀಗೆ ನಮಗೆ ತೋರುವದು. ಎಂದರೆ, ಇದು ನಿಜವಾಗಿಯೂ ಅನುಚಿತ ಕಾರ್ಯವಾಗಿಲ್ಲ, ಹೀಗಿದ್ದರೆ ಪರೀಕ್ಷಿತರಾಜನು ವಿಚಾರಶೂನ್ಯನೆಂದು ಹೇಳಬೇಕಾದೀತು. ಯಾರ ಕೃತಿಯಿಂದ ಸಜ್ಜನರಿಗೆ ಕೆಡಕು ಉಂಟಾಗುವದೊ, ಅಂಥವನಿಗೆ ವಿಚಾರಶೂನ್ಯನೆಂದು ಹೇಳುವದುಂಟು. ಸಜ್ಜನರಿಗೆ ಕಲಿಯು ಅಪೇಕ್ಷಿತನಾದವನು. ಏಕೆಂದರೆ, ಕಲಿಯಿಂದ ಅನೇಕ ಪ್ರಯೋಜನಗಳಿವೆ, 'ಗುಣಗ್ರಾಹಿಗಳು, ಸಾರಭೂತವಾದುದನ್ನೇ ತೆಗೆದುಕೊಳ್ಳುವ ಸಜ್ಜನರು ಕಲಿಯನ್ನು ಸ್ವಾಗತಿಸುವರು. ಹರಿನಾಮಸಂಕೀರ್ತನೆಯಿಂದಲೇ, ಸಕಲ ಪುರುಷಾರ್ಥಗಳು ಕಲಿಕಾಲದಲ್ಲಿ ಲಭಿಸುವವು. ಕೃತಯುಗದ ಜನರು ಕಲಿಯುಗದಲ್ಲಿ ಹುಟ್ಟಬರಬೇಕೆಂದು ಹಂಬಲಿಸುವರು- 'ಕಲಿಯುಗದಲ್ಲಿ ಹರಿನಾಮದ ಸಂಕೀರ್ತನೆಯಿಂದಲೇ ಜನನ - ಮರಣರಹಿತವಾದ ಮೋಕ್ಷವನ್ನು ಶ್ರೀ ಹರಿಯು ಕೊಡುವನು. ಹೀಗಿರುವದರಿಂದ, ಕಲಿಯನ್ನು ಕೊಲ್ಲದಿರುವದ

ರಿಂದ ಸಜ್ಜನರಿಗೆ ಯಾವ ಅನಿಷ್ಟವೂ ಉಂಟಾಗುವದಿಲ್ಲ; ಸಜ್ಜನರಿಗೆ ಅಪೇಕ್ಷಿತವಾದ ಕಲಿಯಲ್ಲಿಯ ಗುಣವನ್ನು ಕಂಡುಹಿಡಿದೇ ಪರೀಕ್ಷಿತ ರಾಜನು ಕಲಿಯನ್ನು ಕೊಲ್ಲಲೂ ಇಲ್ಲ; ಆತನಿಗೆ ವಾಸಿಸಲು ನೆಲೆಗಳನ್ನೂ ಕೊಟ್ಟನು. ಪರೀಕ್ಷಿತ ರಾಜನು ಕಲಿಯ ಬಗ್ಗೆ ಹಗೆತದವನ್ನು ಸಾಧಿಸಲಿಲ್ಲ. ಹೂವಿನ ಸಾರಭೂತವಾದ ಮಕರಂದವನ್ನು ಮಾತ್ರ ಭ್ರಮರವು ತೆಗೆದುಕೊಳ್ಳುವಂತೆ, ಆತನಿಂದ ಒದಗುವ ಕಲ್ಯಾಣವನ್ನು ಮಾತ್ರ ಕಂಡು ಹಿಡಿದನು. ಕಲಯುಗದಲ್ಲಿ ಪುಣ್ಯದ ಕಾರ್ಯಗಳು ಕೂಡಲೇ ಫಲಿಸುತ್ತವೆ, ಪಾಪಕೃತ್ಯಗಳು ಹಾಗಲ್ಲ. ಕಲಿಯು (ಬಾಲೇಷು) ದುರ್ಬಲರಿಗೆ ಮಾತ್ರ ಶೂರನು, ಶೂರರಿಗೆ ಹೇಡಿಯು. ವಿವೇಚನದಿಂದ ಸಕಲ ಕಾರ್ಯಗಳನ್ನು ಪರೀಕ್ಷಿಸಿ ಮಾಡುತ್ತಿದ್ದರಿಂದ, ಆತನಿಗೆ ಇರುವ ಉಳಿದ ಹೆಸರುಗಳನ್ನು ಬಿಟ್ಟು, ರಾಜನಿಗೆ 'ಪರೀಕ್ಷಿತ'ನೆಂತಲೆ ಇಲ್ಲಿ ಕರೆಯಲಾಗಿದೆ. ಅಂತಃಶತ್ರುವಾದ ಕಲಿಯನ್ನು ನಿಗ್ರಹಿಸಿದನೆಂದು ಹೇಳುವದರಿಂದ, ಪರೀಕ್ಷಿತ ರಾಜನು ಅತ್ಯಂತ ಭಗವದ್ಭಕ್ತನು, ಅಖಂಡ ಭೂಮಿಯನ್ನು ಆಳುವ ಸಮ್ರಾಟನೂ ಎಂಬುದನ್ನು ನಿವೇದಿಸಲಾಗಿದೆ.

ಪರೀಕ್ಷಿತ ರಾಜನು ಕಲಿಯನ್ನು ನಿಗ್ರಹಿಸಿದ ಈ ಪುಣ್ಯಕರವಾದ, ಶ್ರೀ ಕೃಷ್ಣ ಮಹಿಮೆಯಿಂದ ಕೂಡಿದ ಈ ಕಥೆಯನ್ನು ಕೇಳುವವರಿಗೆ ಮಹತ್ತರವಾದ ಪುಣ್ಯವು ಲಭಿಸುವದು.

ಪರೀಕ್ಷಿತನು ಭಾಗವತೋತ್ತಮನು, ಏಕಛತ್ರಾಧಿಪತಿಯು, ಎಂಬುವದನ್ನು, ಆತನು ಕಲಿನಿಗ್ರಹಮಾಡಿದ ವೃತ್ತಾಂತದಿಂದ ತಿಳಿಸಿದಂತಾಯಿತು. ಹೀಗಿದ್ದರೂ, ರಾಜ್ಯಾದಿಗಳನ್ನು ಆತನು ಏಕೆ ಬಿಟ್ಟುಕೊಟ್ಟನು ? ಎಂಬ ಪ್ರಶ್ನೆಗೆ ಉತ್ತರವನ್ನು ಮುಂದಿನ ಎರಡು ಶ್ಲೋಕಗಳಲ್ಲಿ ಹೇಳುವರು.

ಈ ಸಂದರ್ಭದಲ್ಲಿ ಕಥೆಯು ಹೀಗಿರುವದು :- ಒಮ್ಮೆ ಪರೀಕ್ಷಿತ ರಾಜನು ಬಿಲ್ಲುಬಾಣಗಳನ್ನು ತೆಗೆದುಕೊಂಡು ಬೇಟೆಗಾಗಿ ಅಡವಿಗೆ ಹೋದನು. ಬೇಟೆಗಾಗಿ ಅಲೆದಾಡಿ ದಣಿದನು; ನೀರಡಿಸಿದನು. ಬಾಯಾರಿಕೆಗಾಗಿ ಒಬ್ಬ ಋಷಿಯ ಆಶ್ರಮದಲ್ಲಿ ಪ್ರವೇಶಿಸಿದನು. ಅಲ್ಲಿ ಸಮಾಧಿಸ್ಥನಾಗಿ ಕಣ್ಣುಮುಚ್ಚಿಕೊಂಡು ಕುಳಿತಿರುವ ಋಷಿಯನ್ನು ರಾಜನು ಕಂಡನು. ನೀರಡಿಕೆಯಿಂದ ಗಂಟಲು ಒಣಗಿ, ನೀರಿಗಾಗಿ ಕೇಳಿಕೊಂಡನು. ಆದರೆ ಆ ಋಷಿಯಿಂದ ನೀರು ದೊರೆಯಲಿಲ್ಲ, ಆಸನಾದಿ ಆತಿಥ್ಯವೂ ಲಭಿಸಲಲ್ಲ. ಇದರಿಂದ ತನಗೆ ಅಪಮಾನವಾಯಿತೆಂದು ರಾಜನು ಭಾವಿಸಿದನು. 'ಈ ಋಷಿಯು ನಿಜವಾಗಿಯೂ ಸಮಾಧಿಸ್ಥನಾಗಿದ್ದರೆ, ನಾನು ಕೂಗಿಕೊಂಡರೆ, ಎಚ್ಚರವಾಗುತ್ತಿದ್ದನು. ಎಚ್ಚರವಾಗದ್ದರಿಂದ, ಆತನ ಸಮಾಧಿಯು ಮೋಸದ್ದೆಂದು ತೋರುತ್ತದೆ. ಈ ಹೀನ ಕ್ಷತ್ರಿಯನಿಂದ ನನಗೇನಾಗಬೇಕಾಗಿದೆ ? ಎಂದು ಅವನ ಭಾವನೆಯಾಗಿರಬೇಕು. ಏನೇ ಇರುವಲ್ಲದೇಕೆ ? ಈ ಋಷಿಯ

ಪರಿವೆ ನನಗೇಕೆ ? ಎಂದು ನುಡಿದು, ಅಲ್ಲಿಯೇ ಸತ್ತುಬಿದ್ದ ಹಾವಿನ ಶರೀರವನ್ನು ತನ್ನ ಬಿಲ್ಲಿನ ಮೊನೆಯಿಂದ ಎತ್ತಿ, ಋಷಿಯ ಕೊರಳಿಗೆ ಹಾಕಿ ತನ್ನ ರಾಜಧಾನಿಗೆ ಹೊರಟನು. ಆ ಮೇಲೆ ಓರಿಗೆಯವರೊಡನೆ ಆಡಲು ಹೋಗಿದ್ದ ಆ ಋಷಿಯ ಮಗನಿಗೆ ಕಾಣದಂತೆ ದೂರ ನಿಂತ ಪುರುಷನೊಬ್ಬನು ರಾಜನು ಋಷಿಯ ಕೊರಳಿಗೆ ಮೃತಸರ್ಪವನ್ನು ಹಾಕಿದ ಅಪರಾಧವನ್ನು ನಿವೇದಿಸಿದನು. 'ಇಂದಿನಿಂದ ಏಳನೆಯ ದಿವಸ, ತಕ್ಷಕನಿಂದ ರಾಜನ ದೇಹವು ಸುಟ್ಟು ಬೂದಿಯಾಗಲಿ'– ಎಂದು ತಾನು ನಿಂತ ಸ್ಥಳದಲ್ಲಿಯೇ ಆ ಋಷಿಕುಮಾರನು ಶಾಪ ಕೊಟ್ಟನು. ತನ್ನ ಆಶ್ರಮಕ್ಕೆ ಬರಲಾಗಿ, ಕೊರಳಲ್ಲಿ ಮೃತಸರ್ಪವುಳ್ಳ ತಂದೆಯನ್ನು ಕಂಡು ಸಮಾಧಿಯಿಂದ ತಂದೆಯನ್ನು ಎಚ್ಚರಿಸಲು ಅಳತೊಡಗಿದನು. ಮಗನು ಅಳುವ ದನಿಯನ್ನು ಕೇಳಿ ಋಷಿಯು ಸಮಾಧಿಯಿಂದ ಎಚ್ಚತ್ತು ಕೊರಳಲ್ಲಿ ಹಾಕಿದ್ದ ಸರ್ಪ ಶರೀರವನ್ನು ದೂರತಃ ಚೆಲ್ಲಿಕೊಟ್ಟನು. ಮಗನು ಅಳುವ ಕಾರಣವನ್ನು ಕೇಳಿ, ಆತನು ಹೇಳುವದನ್ನೆಲ್ಲ ಕೇಳಿಕೊಂಡನು. "ಮಗುವೆ ! ತಪ್ಪಿಗಿಂತಲೂ ಬಹಳೇ ಹೆಚ್ಚಿಗೆ ನೀನು ಶಿಕ್ಷಿಸಿರುವಿ"– ಎಂದು ಮಗನಿಗೆ ಸಿಟ್ಟು ಮಾಡಿದನು. ಆಗ ಋಷಿಯು ಆಡಿದ ಮಾತುಗಳಿವು :–

॥೨೧॥ **ನ ವೈ ನೃಭಿರ್ನರದೇವೋಽಪರಾಧ್ಯ-**
**ಸ್ತಂ ಶಪ್ತುಮರ್ಹಸ್ಯವಿಪಕ್ವಬುದ್ಧೇ ।**
**ಯತ್ತೇಜಸಾ ದುರ್ವಿಷಹೇಣ ಗುಪ್ತಾ**
**ವಿಂದಂತಿ ಭದ್ರಾಣ್ಯಕುತೋಭಯಾಃ ಪ್ರಜಾಃ ॥** ೧-೧೮-೪೨

**ಅರ್ಥ** :– ಸಮಾಧಿಯಿಂದ ಎಚ್ಚತ್ತ ಶಮೀಕ ಋಷಿಗಳು ರಾಜನಿಗೆ ಶಾಪ ಕೊಟ್ಟ ತಮ್ಮ ಮಗನಾದ ಶೃಂಗಿಗೆ ಹೇಳುತ್ತಾರೆ :–

'ವಿಶೇಷವಾಗಿ (ಅನುಭವದಿಂದ) ವಿಕಾಸ ಹೊಂದದ ಬುದ್ಧಿಯುಳ್ಳವನೇ. ಅಜ್ಞಾನಿಯೆ ! ರಾಜನ ಅಪ್ರತಿಹತವಾದ (ಯಾರೂ ತಡೆಯಲಾರದ) ಅಸಹನೀಯವಾದ, ಬಲಪೌರುಷಗಳಿಂದ ರಕ್ಷಿತರಾಗಿ ಪ್ರಜೆಗಳು ನಿರ್ಭೀತರಾಗಿ ಬಾಳುತ್ತಾರೆ, ಹಾಗೂ ಕಲ್ಯಾಣವನ್ನು ಪಡೆಯುತ್ತಾರೆ. ಅಂಥ ರಾಜನಿಂದ ಆಗುವ (ಸಣ್ಣ) ತಪ್ಪನ್ನು ಪ್ರಜೆಗಳು ಎಣಿಸಕೂಡದು. ಅವಿಕಸಿತ ಬುದ್ಧಿಯುಳ್ಳವನಾದ (ಅಜ್ಞಾನಿಯಾದ) ನೀನು ಅಂಥ ರಾಜನಿಗೆ ಶಾಪವನ್ನು ಕೊಟ್ಟಿರುವಿ. ಆದುದರಿಂದ ನೀನು ಮಾಡಿದ ಕೃತಿಯು ಬಹಳೇ ಅಯೋಗ್ಯವಾಗಿದೆ. ಪರೀಕ್ಷಿತನು ತುಂಬಾ ಧರ್ಮದಿಂದ ರಾಜ್ಯವನ್ನಾಳುವ ಭಾಗವತೋತ್ತಮನು. ಹಸಿವೆ ನೀರಡಿಕೆಗಳಿಂದ ಬಳಲಿ ನಮ್ಮ ಆಶ್ರಮಕ್ಕೆ ಆಗಮಿಸಿದ. ಇಂಥ 'ನರದೇವ'ನಿಗೆ ಆಸನ, ನೀರು, ಹಣ್ಣು ಹಂಪಲುಗಳನ್ನು ಕೊಟ್ಟು ಗೌರವಯುತವಾಗಿ ಸತ್ಕರಿಸುವದು ಕರ್ತವ್ಯವಾಗಿದೆ.

||೨೨|| ಅರಕ್ಷ್ಯಮಾಣೇ ನರದೇವನಾಮ್ನಿ
ರಥಾಂಗಪಾಣಾವಯಮಂಗ ಲೋಕಃ |
ತದಾ ಹಿ ಚೋರಪ್ರಚುರೋ ವಿನಂಕ್ಷ್ಯ-
ತ್ಯರಕ್ಷ್ಯಮಾಣೋ ವಿವರೂಥವತ್ ಕ್ಷಣಾತ್ || ೧-೧೮-೪೩

'ನೀನು ಮಹಾಪಾಪದ ಕೃತಿಯನ್ನೇ ಮಾಡಿರುವಿ',- ಎಂದು ಶಮೀಕರು ಶೃಂಗಿಗೆ ಹೇಳುತ್ತಾರೆ.

**ಅರ್ಥ :**_ ಶ್ರೀಹರಿಯು (ಚಕ್ರಪಾಣಿ) ರಾಜನ ಶರೀರದಲ್ಲಿ ನಿಂತುಕೊಂಡು ಆತನ ಹೆಸರನ್ನು ಧರಿಸಿ ಪ್ರಜೆಗಳನ್ನು ಕಾಪಾಡುವನು. ಆತನು ಹೀಗೆ ಮಾಡದೆ ಹೋದರೆ, ಜಗತ್ತು ಕಳ್ಳರು – ಕುಜನರಿಂದ ತುಂಬಿ ಬಿಡುವದು; ಜನರ ಸಂಪತ್ತನ್ನೆಲ್ಲ ಅಪಹರಿಸಿ, ಅವರು ಜಗತ್ತನ್ನು ಹಾಳುಗೆಡುಹುವರು. ರಾಜನೇ ಇಲ್ಲದಾಗ್ಗೆ ಅವರನ್ನು ತಡೆಯಲು ಯಾವ ರಕ್ಷಕನೂ ಇಲ್ಲದಂತಾಗುವನು. ಸೇನಾಪತಿಯನ್ನು ಕಳೆದುಕೊಂಡ ಸೈನ್ಯಕ್ಕೆ ರಕ್ಷಕರೇ ಇಲ್ಲದಿದ್ದರೆ, ಶತ್ರುಗಳು ಅದನ್ನು ಸೋಲಿಸಿ ಸಕಲವನ್ನೂ ಸುಲಿಗೆ ಮಾಡಿಬಿಡುವದು – ಈ ಮಾತಿಗೆ ಉಧಾಹರಣೆಯಾಗಿದೆ.

ಅಜ್ಞಾನಿಯಾದ ಶೃಂಗಿಯು ಮಾಡಿದ ತಪ್ಪನ್ನು ಭಗವಂತನೆ ಕ್ಷಮಿಸಬೇಕು. ಎಂಬುದನ್ನು ಸೂಚಿಸಲು, 'ರಾಜನು'ಎನ್ನುವ ಬದಲಾಗಿ ರಾಜನಲ್ಲಿ ಸನ್ನಿಹಿತನಾದ ಶ್ರೀ ಹರಿಯು – ಎಂಬ ಪದವನ್ನು ಪಶ್ಚಾತ್ತಾಪದಿಂದ ಕೂಡಿದ ಶಮೀಕರು ಬಳಸಿರುವರು.

ಜಾತಕಶಾಸ್ತ್ರದಲ್ಲಿ ನಿಷ್ಣಾತರಾದ ಬ್ರಾಹ್ಮಣರು, ತನಗೆ ತಕ್ಷಕನಿಂದ ಮರಣ ಒದಗುವದೆಂಬುದನ್ನು ಹೇಳಿದ್ದನ್ನು ನೆನೆಸಿ, ಅದನ್ನೇ ಯಾವಾಗಲೂ ಪರಾಮರ್ಶಿಸುತ್ತಿದ್ದರಿಂದ ಜನರು ರಾಜನಿಗೆ 'ಪರೀಕ್ಷಿತ' – (ಪರೀಕ್ಷಿಸಿ ನೋಡುವವನು) ಎಂಬ ಹೆಸರಿನಿಂದ ಕರೆಯುತ್ತಿದ್ದರು. ತಾಯಿಯ ಗರ್ಭದಲ್ಲಿರುವಾಗ್ಗೆ ಶ್ರೀವಿಷ್ಣುವಿನಿಂದ ರಕ್ಷಿತನಾದ್ದರಿಂದ 'ವಿಷ್ಣುರಾತ' ನೆಂಬುದು ಆತನಿಗೆ ವಾಸ್ತವಿಕವಾದ ಹೆಸರು. ಪರೀಕ್ಷಿತನು ಭಾಗವತೋತ್ತಮನು. ಜಂಬೂದ್ವೀಪದ ಸಮ್ರಾಟನು. ಅಂಥವನು ಬ್ರಾಹ್ಮಣಗೆ ಅವಮಾನವನ್ನೆಸಗಿದುದು ಕೇವಲ ದೈವ ಲೀಲೆ. ಆದುದರಿಂದ ಶಮೀಕರ ಆಶ್ರಮದಿಂದ ತನ್ನ ನಗರಕ್ಕೆ ತಿರುಗಿ ಬರುವಾಗ್ಗೆ– ಅಯ್ಯೋ! ನಾನು ಎಂಥ ಅನುಚಿತಕೃತಿಯನ್ನು ಮಾಡಿದೆನು!'–ಎಂಬ ಅನುತಾಪದಿಂದ ಅವನ ಹೃದಯವು ಪರಿತಪಿಸಿತು. ಋಷಿಕುಮಾರನಾದ ಶೃಂಗಿಯ ಶಾಪವು ಒಂದು ನಿಮಿತ್ತಮಾತ್ರ. ಪ್ರಾರಬ್ಧಕರ್ಮದ ಪ್ರಭಾವದಿಂದಲೇ ಪರೀಕ್ಷಿತನಿಗೆ ರಾಜ್ಯತ್ಯಾಗ, ಪ್ರಾಣತ್ಯಾಗಗಳು ಒದಗಿದವು.–ಅವುಗಳಿಗೆ ಕಾರಣವೇನು?–ಎಂಬ ಪ್ರಶ್ನೆಗೆ ಇದೇ ಉತ್ತರ.

॥೨೩॥ ಅಥೋ ವಿಹಾಯೇಮಮಮುಂ ಚ ಲೋಕಂ
ವಿಮೃಶ್ಯ ತೌ ಹೇಯತಯಾ ಪುರಸ್ತಾತ್ ।
ಕೃಷ್ಣಾಂಘ್ರಿಸೇವಾಮಭಿಮನ್ಯಮಾನ
ಉಪಾವಿಶತ್ಪ್ರಾಯಮಮರ್ತ್ಯನದ್ಯಾಂ ॥೧-೧೯-೫

ರಾಜಧಾನಿಗೆ ಮರಳಿಬಂದಮೇಲೆ ಋಷಿಪುತ್ರನು ಕೊಟ್ಟ ಶಾಪವು ರಾಜನಿಗೆ ಗೊತ್ತಾಯಿತು. ಶಾಪತಿಳಿದ ಮೇಲೆ ಆತನು ಏನು ಮಾಡಿದನೆಂಬುವದು ಮುಂದಿನ ಶ್ಲೋಕಗಳಲ್ಲಿ.

**ಅರ್ಥ:** ಶಾಪದ ವಾರ್ತೆ ತಿಳಿದಕೂಡಲೇ ಪರೀಕ್ಷಿತನು ಒಂದರಗಳಿಗೆ ಕೂಡ ವ್ಯರ್ಥ ಕಾಲಹರಣ ಮಾಡಲಿಲ್ಲ. ಇಹಲೋಕ-ಪರಲೋಕ ಉಭಯ ಲೋಕಗಳ ಭೋಗದ ಬಯಕೆಯನ್ನು ಬಿಟ್ಟುಕೊಟ್ಟನು-ಎಂದರೆ, ಅವೆರಡನ್ನೂ ಹೇಯವಾಗಿ, ಹೀನವಾಗಿ ಭಾವಿಸಿದನು. ಈ ಭಾವನೆಯು ಅವನಿಗೆ ಅಂದೇ ಉಂಟಾದುದಲ್ಲ; ಪರಮ ಭಾಗವತನಾದ ಅವನಲ್ಲಿ ಅದು ಮೊದಲಿನಿಂದಲೂ ಇದ್ದಿತು. ಶ್ರೀಕೃಷ್ಣನ ಪಾದಸೇವೆಯನ್ನೇ ಇನ್ನು ಕೈಕೊಳ್ಳಬೇಕೆಂದು ನಿರ್ಧರಿಸಿದನು. ಸುರನದಿಯಾದ ಗಂಗಾಪ್ರವಾಹದಲ್ಲಿ ರಚಿಸಿದ ಮಹಲಿನಲ್ಲಿ ಆಮರಣ ನಿರಶನವ್ರತವನ್ನು ಧರಿಸಿ ಕುಳಿತುಕೊಂಡನು.

॥೨೪॥ ಯಾ ವೈ ಲಸಚ್ಛ್ರೀತುಲಸೀವಿಮಿಶ್ರ-
ಕೃಷ್ಣಾಂಘ್ರಿರೇಣ್ವಭ್ಯಧಿಕಾಂಬುನೇತ್ರಿ ।
ಪುನಾತ್ಯಶೇಷಾನುಭಯತ್ರ ಲೋಕಾನ್
ಕಸ್ತಾಂ ನ ಸೇವೇತ ಮರಿಷ್ಯಮಾಣಃ ॥೧-೧೯-೬

ಉಳಿದ ತೀರ್ಥಗಳಿಗಿಂತಲೂ ಗಂಗಾನದಿಯೇ ಶ್ರೇಷ್ಠವೆಂಬುದಕ್ಕೆ, ಆ ಸುರನದಿಯ ಮಹಿಮೆಯನ್ನು ಕಿಂಚಿತ್ತಾಗಿ ಹೇಳುವರು.

**ಅರ್ಥ:** ಶ್ರೀಕೃಷ್ಣನ ಪಾದಧೂಳಿಯ ಕಣಗಳು ಕಮನೀಯವಾದ ತುಲಸೀದಳಗಳಿಂದ ಮಿಶ್ರವಾದವುಗಳು. ಶ್ರೀಹರಿಯ ಪಾದಧೂಳಿಯಿಂದ ಅತ್ಯಂತ ಪವಿತ್ರವಾದ ನೀರಿನಿಂದ ಹರಿಯುವ ನದಿಯು ಗಂಗಾನದಿಯು. ಅಂತೆಯೇ, ಸುರಲೋಕ ಹಾಗೂ ನರಲೋಕವೆರಡರಲ್ಲಿಯ ಜನರನ್ನೂ ಆ ನದಿಯು ಪಾವನರನ್ನಾಗಿ ಮಾಡುವದು. ಸ್ನಾನಪಾನಗಳಿಗಾಗಿ ಇಂಥ ಪವಿತ್ರತಮವಾದ ನದಿಯನ್ನು ಯಾರು ಆಶ್ರಯಿಸುವದಿಲ್ಲ ?. ಮಹಾಮಹಿಮಾಶಾಲಿಯಾದ ಗಂಗಾನದಿಯ ಆಸರವನ್ನು ಪಡೆಯುವದು ಅಗತ್ಯವಾದುದು. ಅದರಲ್ಲಿಯೂ ಮರಣ ಸಮೀಪಿಸಿದವನಂತೂ ಅವಶ್ಯವಾಗಿ ಈ ನದಿಯನ್ನು ಆಶ್ರಯಿಸಬೇಕು.

ಶ್ರೀ ಹರಿಯ ಪಾದಕಮಲಗಳ ಅಭಿಷೇಕದಿಂದ ಕಮಲದ ಎಸಳುಗಳ ಕಿಂಚಿತ್ ಕೆಂಪು ಕಾಂತಿಯಿಂದ ಯುಕ್ತವಾದ; ಸಕಲ ಜಗತ್ತಿನ ಪಾಪದ ಹೊಲಸನ್ನು ಹೊಡೆದು ಹಾಕುವ; ಸ್ಪರ್ಶಮಾತ್ರದಿಂದಲೇ ಪಾವನಗೊಳಿಸುವ, 'ಸಾಕ್ಷಾತ್ ಭಗವತ್ಪದೀ'-ಎಂಬ ಪ್ರಕಟವಾದ ಹೆಸರಿನಿಂದ ಕರೆಸಿಕೊಳ್ಳುವ; ಈ ಸುರನದಿಯು ಸಾವಿರಾರು ಯುಗಗಳ ಪೂರ್ವದಲ್ಲಿ ಸ್ವರ್ಗಲೋಕದ ಮೇಲ್ಭಾಗಕ್ಕೆ ಇಳಿದು ಬಂದಳು. ಅದಕ್ಕೇನೆ 'ವಿಷ್ಣುಪದ' ವೆಂಬ ಹೆಸರು. ಇದೇ ಸ್ಥಾನದಲ್ಲಿಯೆ ಉತ್ತಾನಪಾದರಾಜನ, ಮಗ ಪರಮಭಾಗವತನೂ ಆದ ಧ್ರುವನು-ಈ ನದಿಯ ನೀರು ತಮ್ಮ ಕುಲದೈವನಾದ ಶ್ರೀ ಹರಿಯ ಪಾದೋದಕವೆಂದು ಪರಮಾದರದಿಂದ ಇಂದಿಗೂ ಶಿರಸಾಧರಿಸುವನು. ಆನಂತರ, ಈ ನದಿಯ ಮಹಿಮೆಯನ್ನರಿತ ಸಪ್ತರ್ಷಿಗಳು-ಮುಕ್ತಿಯನ್ನು ಬಯಸುವವರಿಗೆ, ಮುಕ್ತಿಯೇ ಮನೆಗೆ ಬಂದಿತೆಂದು- ಈ ಜಲವನ್ನು ತಮ್ಮ ಜಟೆಗಳಲ್ಲಿ ಇಂದಿಗೂ ಧರಿಸುವರು. ಆನಂತರ ಸಾವಿರಾರು ದೇವವಿಮಾನಗಳ ಸಾಗಾಟದಿಂದ ತುಂಬಿದ ದೇವಮಾರ್ಗದಿಂದ ಇಳಿದು ಬಂದು, ಚಂದ್ರಮಂಡಲಕ್ಕೆ ನೆಗೆದು, ಬ್ರಹ್ಮಸದನಕ್ಕೆ (ಬ್ರಹ್ಮಲೋಕಕ್ಕೆ) ಇಳಿದುಬರುವದು. ಅಲ್ಲಿ ಅದು-ಸೀತಾ ಅಲಕನಂದಾ, ಭದ್ರಾ, ಚಕ್ಷು - ಈ ಹೆಸರುಗಳಿಂದ ನಾಲ್ಕು ಶಾಖೆಗಳಾಗಿ ಒಡೆದು ನಾಲ್ಕುದಿಕ್ಕುಗಳಲ್ಲಿ ಹರಿಯುತ್ತ ನದೀಪತಿಯಾದ ಸಮುದ್ರವನ್ನು ಸೇರುವದು. ಇವುಗಳಲ್ಲಿ ಸೀತಾನದಿಯು ಭದ್ರಾಶ್ವ ಪ್ರದೇಶದಲ್ಲಿ ಪೂರ್ವದಿಕ್ಕಿಗೆ ಕ್ಷಾರಸಮುದ್ರವನ್ನು ಸೇರುವದು. ಕೇತುಮಾಲದಲ್ಲಿ ಹರಿದು ಚಕ್ಷುನದಿಯು ಪಶ್ಚಿಮದಿಕ್ಕಿಗೆ ಸಮುದ್ರವನ್ನು ಪ್ರವೇಶಿಸುವದು. ಭದ್ರಾನದಿಯು ಉತ್ತರಕುರುಪ್ರದೇಶವನ್ನು ದಾಟಿ ಉತ್ತರಕ್ಕೆ ಲವಣಸಮುದ್ರಕ್ಕೆ ಕೂಡುವದು. ಹೀಗೆಯೇ ಅಲಕನಂದಾ ನದಿಯು ಭಾರತದಲ್ಲಿಯೇ ದಕ್ಷಿಣದಿಕ್ಕಿಗೆ ಸಮುದ್ರವನ್ನು ಸೇರುವದು.

ಭಗೀರಥನ ಬಿನ್ನಹಕ್ಕೆ ಒಪ್ಪಿಕೊಂಡು, ಸಕಲ ಜಗತ್ತಿಗೆ ಹಿತಕರ್ತನಾದ ಮಹಾದೇವನು, ವಿಷ್ಣುಪಾದದಿಂದ ಪವಿತ್ರವಾದ ಜಲವುಳ್ಳ ಗಂಗಾನದಿಯನ್ನು ಜಟೆಯಲ್ಲಿ ಧರಿಸಿದನು. ಲೋಕಪಾವನಳಾದ ಗಂಗೆಯನ್ನು ಭಗೀರಥನು ತನ್ನ ಪೂರ್ವಜರು ಬೂದಿಯಾಗಿ ಬಿದ್ದಸ್ಥಳಕ್ಕೆ ಕರೆದೊಯ್ದನು. ಗಾಳಿಯ ವೇಗದಿಂದ ಓಡುತ್ತಿರುವ ಆತನ ರಥದ ಹಿಂದೆ ಹಿಂದೆ ಬರುವಾಗ್ಗೆ ಗಂಗೆಯು ದಾರಿಯಲ್ಲಿಯ ದೇಶಗಳನೆಲ್ಲ ಪಾವನಗೊಳಿಸಿದಳು; ಸುಟ್ಟುಬೂದಿಯಾಗಿದ್ದ, ಸಗರ ರಾಜನ ಮಕ್ಕಳನ್ನೆಲ್ಲ ತನ್ನ ನೀರಿನಿಂದ ಸಿಂಪಡಿಸಿದಳು. ಬ್ರಹ್ಮದಂಡದಿಂದ ನಷ್ಟರಾಗಿ ಕೇವಲ ಬೂದಿಯಾಗಿ ಉಳಿದಿದ್ದ ಸಗರರಾಜನ ಮಕ್ಕಳು ಆ ಜಲದ ಸ್ಪರ್ಶ, ಮಾತ್ರದಿಂದ ಸ್ವರ್ಗಲೋಕವನ್ನು ಪಡೆದರು, ವ್ರತಬದ್ಧರಾಗಿ, ಭಕ್ತಿಪೂರ್ವಕವಾಗಿ ಗಂಗಾದೇವಿಯನ್ನು ಆರಾಧಿಸುವರಿಗೆ ಯಾವದು ದೊರೆಯಲಿಕ್ಕಿಲ್ಲ? ಗಂಗಾ

ನದಿಯ ಈ ಬಗೆಯ ಮಹಿಮೆಗೆ ನಾವು ಸೋಜಿಗಪಡಬೇಕಿಲ್ಲ. ಈ ನದಿಯು ಅನಂತನ–ಶ್ರೀವಿಷ್ಣುವಿನ–ಪಾದಕಮಲಗಳಿಂದ ಜನಿಸಿದವಳು, ಸಂಸಾರದ ಬಂಧನ್ನ ವನ್ನು ಕಡಿದು ಹಾಕುವಳು.

**||೨೫|| ತತ್ರೋಪಜಗ್ಮುರ್ಭುವನಂ ಪುನಾನಾ**
**ಮಹಾನುಭಾವಾ ಮುನಯಃ ಸಶಿಷ್ಯಾಃ ।**
**ಪ್ರಾಯೇಣ ತೀರ್ಥಾಭಿಗಮಾಪದೇಶೈಃ**
**ಸ್ವಯಂ ಹಿ ತೀರ್ಥಾನಿ ಪುನಂತಿ ಸಂತಃ ||** ೧-೧೯-೮

ಭಾಗೀರಥಿಯ ಮಹಾಮಹಿಮೆಯು ವಾಸ್ತವವಾದುದು; ಉಳಿದ ನದಿಗಳನ್ನು ಬಿಟ್ಟುಕೊಟ್ಟು ಭಾಗೀರಥಿಯನ್ನೇ ಆಶ್ರಯಿಸಬೇಕೆಂಬುದೂ ಕೂಡ ಅಷ್ಟೇ ಸತ್ಯ ವಾದುದು. ಭಾಗೀರಥೀ ತೀರದಲ್ಲಿ ಶ್ರೀ ಹರಿಕಥೆಯಲ್ಲಿ ನಿರತರಾಗಬೇಕು; ಭಗವದ್ಭಕ್ತರ ಸತ್ಸಂಗತಿಯನ್ನು ಪಡೆಯಬೇಕು. ಹೀಗೆ ಮಾಡದೇ ಹೋದರೆ, ಮರಣೋನ್ಮುಖನಾದವನಿಗೆ ಶ್ರೀ ಹರಿಯಲ್ಲಿ ಹೆಚ್ಚಿನ ಭಕ್ತಿಯು ಉಂಟಾಗುವದಿಲ್ಲ, ಯಾವ ಪುರುಷಾರ್ಥವೂ ಸಾಧಿಸುವದಿಲ್ಲ. ಭಾಗೀರಥೀನದಿಯ ತೀರದಲ್ಲಿ ದೊರೆ ಯುವ ಸತ್ಸಂಗದಿಂದ ಹರಿಭಕ್ತಿಯ ಹೆಚ್ಚಳವಾಗುವದು. ಹಾಲಿಗೆ ಸಕ್ಕರೆ ಬೆರೆಸಿ ದಂತಾಗುವದು.

**ಅರ್ಥ :–** ಜಗತ್ತನ್ನೇ ಪಾವನಗೊಳಿಸುವ ಮಹಾಮಹಿಮಾಶಾಲಿಗಳಾದರೂ ತೀರ್ಥಯಾತ್ರೆಯ ನೆಪದಿಂದ ತೀರ್ಥಗಳಿಗೆ ಬರುವರು; ಈ ಸಾಧುಗಳು ತಾವೇ ತೀರ್ಥಗಳನ್ನು ಪವಿತ್ರಗೊಳಿಸುವರು. ಇಂಥ ಮಹಾನುಭಾವರು ಶಿಷ್ಯರೊಡನೆ ಆ ಸ್ಥಳಕ್ಕೆ ಬಂದರು.

'ನಾವು ಗಂಗಾ ಸ್ನಾನಕ್ಕೆ ಹೋಗುವೆವು'–ಎಂದು ಹೇಳುವ ಅವರ ಸೌಜನ್ಯವು ಸೋಜಿಗವಾದುದು. ಭಗೀರಥನು ಕೂಡಾ ಹೀಗೆಯೆ ಹೇಳಿದಾಗ್ಗೆ, ಆತನ ತಪಸ್ಸಿ ನಿಂದ ಸಂತುಷ್ಟಳಾದ ಭಾಗೀರಥಿಯು ಹೇಳುವಳು:– 'ನಿನ್ನ ವಿಷಯದಲ್ಲಿ ನನಗಿರುವ ಅನುಗ್ರಹಕ್ಕಾಗಿ ನಾನು ಭೂಮಿಗೆ ಬರುವೆ. ಆಗ್ಗೆ ನನ್ನ ವೇಗವನ್ನು ಯಾರು ತಾಳಿಕೊಳ್ಳುವರು? ಇಲ್ಲವಾದರೆ, ನಾನು ಭೂಮಿಯನ್ನು ಭೇದಿಸಿ ಪಾತಾಳ ಲೋಕಕ್ಕೆ ಹೋಗಿಬಿಡುವೆನು. ಹೀಗಾದರೆ, ನಿನ್ನ ತಪಸ್ಸು, ನಿನ್ನ ಸಾಹಸವೆಲ್ಲವೂ ನಿರರ್ಥಕವಾಗುವದು. ಇದೂ ಅಲ್ಲದೆ, ನಾನು ಭೂಲೋಕಕ್ಕೆ ಬಂದರೆ, ನನ್ನಲ್ಲಿ ಸ್ನಾನಮಾಡುವ ಪಾಪಿಗಳು ತಮ್ಮಪಾಪದ ರಾಶಿಯನ್ನೆಲ್ಲ ನನ್ನಲ್ಲಿ ಬಿಟ್ಟುಬಿಡುವರು. ಈ ಪಾಪದ ರಾಶಿಯನ್ನು ನನಗಾಗಿ ನಿವಾರಣೆ ಮಾಡುವವರು ಯಾರು ? ಗಂಗೆಯ ಈ ಪ್ರಶ್ನೆಗಳಿಗೆ ಭಗೀರಥನು ಸಮಾಧಾನ ಹೇಳುವನು :– 'ಮಹಾದೇವನು ನಿನ್ನ

ರಭಸವನ್ನು ಶಿರಸಾ ಧರಿಸುವನು. ನಿನ್ನಲ್ಲಿ ಸ್ನಾನ ಮಾಡುವ ಮಹಾತ್ಮರು ಈ ಪಾಪವನ್ನೆಲ್ಲ ಕಳೆದುಬಿಡುವರು. ಈ ಮಹಾತ್ಮರು ನಿರಪೇಕ್ಷಿಗಳು, ಶಾಂತರು, ಬ್ರಹ್ಮನಿಷ್ಠರು, ಲೋಕಪಾವನರು.

॥೨೬॥ **ಅತ್ರಿರ್ವಸಿಷ್ಠಶ್ಚ್ಯವನಃ ಶರದ್ವಾ-**
**ನರಿಷ್ಟನೇಮಿರ್ಭೃಗುರಂಗಿರಾಶ್ಚ ।**
**ಪರಾಶರೋ ಗಾಧಿಸುತೋಽಥ ರಾಮ**
**ಉತಥ್ಯ ಇಂದ್ರಪ್ರಮದೇಧ್ಮವಾಹೌ ॥**

॥೨೭॥ **ಮೇಧಾತಿಥಿರ್ದೇವಲ ಆರ್ಷ್ಟಿಷೇಣ**
**ಭರದ್ವಾಜೋ ಗೌತಮಃ ಪಿಪ್ಪಲಾದಃ ।**
**ಮೈತ್ರೇಯ ಔರ್ವಃ ಕವಷಃ ಕುಂಭಯೋನಿ**
**ರ್ದ್ವೈಪಾಯನೋ ಭಗವಾನ್ನಾರದಶ್ಚ ॥**

॥೨೮॥ **ಅನ್ಯೇ ಚ ದೇವರ್ಷಿಬ್ರಹ್ಮರ್ಷಿವರ್ಯಾ**
**ರಾಜರ್ಷಿವರ್ಯಾ ಅರುಣಾದಯಶ್ಚ**
**ನಾನಾರ್ಷೇಯಪ್ರವರಾನ್ ಸಮೇತಾ-**
**ನಭ್ಯರ್ಚ್ಯ ರಾಜಾ ಶಿರಸಾ ವವಂದೇ ॥**

೧-೧೯-(೯-೧೦-೧೧)

ಪರೀಕ್ಷಿತ ರಾಜನು ಪ್ರಾಯೋಪವೇಶಕ್ಕೆ ಕುಳಿತ ಸ್ಥಳಕ್ಕೇನೆ, ಅನೇಕ ಋಷಿ ಮುನಿಗಳು ಬಂದರೆಂದು ಹೇಳಿದೆ. ಆ ಮುನಿಋಷಿಗಳು ಯಾರ್ಯಾರು ? ಅವರಲ್ಲಿ ಪ್ರಧಾನರಾದ ಕೆಲವರ ಹೆಸರುಗಳನ್ನು ಮಾತ್ರ ಮೂರು ಶ್ಲೋಕಗಳಿಂದ ಇಲ್ಲಿ ಹೇಳಿರುವರು :-

**ಅರ್ಥ** :- ಅತ್ರಿ, ವಶಿಷ್ಠ, ಚ್ಯವನ, ಶರದ್ವಾನ್, ಅರಿಷ್ಠನೇಮಿ, ಭೃಗು, ಅಂಗಿರಸ, ಪರಾಶರ, ವಿಶ್ವಾಮಿತ್ರ, ಭಾರ್ಗವರಾಮ, ಉತಥ್ಯ ಇಂದ್ರಪ್ರಮದ, ಇಧ್ಮವಾಹ, ಮೇಧಾತಿಥಿ, ದೇವಲ, ಆರ್ಷ್ಟಿಷೇಣ, ಭರದ್ವಾಜ, ಗೌತಮ, ಪಿಪ್ಪಲಾದ, ಮೈತ್ರೇಯ, ಔರ್ವ, ಕವಷ, ಅಗಸ್ತ್ಯ, ವೇದವ್ಯಾಸರು, ನಾರದ- ಇವರೇ ಮುಂತಾದ ಉಳಿದ ದೇವಋಷಿ, ಬ್ರಹ್ಮಋಷಿ, ರಾಜಋಷಿಗಳು ಹಾಗೂ ಅರುಣ ಮುಂತಾದವರು ಶ್ರೇಷ್ಠವಾಗಿದ್ದ ನಾನಾ ಋಷಿ-ಗೋತ್ರ-ಪ್ರವರಗಳಿಗೆ ಹೊಂದಿದವರು ಆಸ್ಥಳದಲ್ಲಿ ಕೂಡಿಕೊಂಡರು. ಭಾಗೀರಥೀಸ್ನಾನದ ನಿಮಿತ್ತದಿಂದ ಅಲ್ಲಿಗೆ ಬಂದಿರುವ ಅವರೆಲ್ಲರನ್ನೂ ಪರೀಕ್ಷಿತರಾಜನು ಸತ್ಕರಿಸಿದನು, ತಲೆಬಾಗಿಸಿ ವಂದಿಸಿದನು.

**೯॥ ಸಮಾಗತಾಃ ಸರ್ವತ ಏವ ಸರ್ವೇ**
**ದೇವಾ ಯಥಾ ಮೂರ್ತಿಧರಾಸ್ತ್ರಿಪೃಷ್ಠೇ**
**ನೇಹಾಥವಾಮುತ್ರ ಚ ಕಶ್ಚನಾರ್ಥ** 1-19-23
**ಋತೇ ಪರಾನುಗ್ರಹಮಾತ್ಮಶೀಲಾಃ** ॥ ೧-೧೯-೨೪

**೦॥ ಪುನಶ್ಚ ಭೂಯಾದ್ಭಗವತ್ಯನಂತೇ**
**ರತಿಃ ಪ್ರಸಂಗಶ್ಚ ತದಾಶ್ರಯೇಷು ।**
**ಮಹತ್ಸು ಯಾಂ ಯಾಮುಪಯಾಮಿ ಸೃಷ್ಟಿಂ**
**ಮೈತ್ರ್ಯಸ್ತು ಸರ್ವತ್ರ ನಮೋ ದ್ವಿಜೇಭ್ಯಃ** ॥ ೧-೧೯-೧೬ 1-18-16

ಬಂದಿರುವ ಋಷಿಗಳನ್ನು ಸತ್ಕರಿಸಿ, ರಾಜನು ಅವರನ್ನು ಸ್ತುತಿಸುವನು.

**ಅರ್ಥ :-** ಸಾಕ್ಷಾತ್ ಮೂರ್ತಿಮಂತರಾದ ದೇವತೆಗಳು ಸತ್ಯಲೋಕದಲ್ಲಿ ಂದೆಡೆಗೆ ಕೂಡುವಂತೆ, ನೀವೆಲ್ಲರೂ ಎಲ್ಲ ದಿಕ್ಕುಗಳಿಂದಲೂ ಇಲ್ಲಿಗೆ ಬಂದಿರುವಿರಿ. ೀವು ಪರಮಾತ್ಮನಿಗಾಗಿಯೆ ಸರ್ವಸ್ವವನ್ನು ಸಮರ್ಪಿಸಿದವರು. ಪರರಿಗೆ ನುಗ್ರಹ ಮಾಡುವದಲ್ಲದೆ, ನಿಮಗೆ ಬೇರೆ ಯಾವ ಪ್ರಯೋಜನವೂ ಇಹಪರಗಳಲ್ಲಿ ರುವದಿಲ್ಲ. ನನಗೆ ಅನುಗ್ರಹ ಮಾಡಲೆಂದೇ ನೀವು ಇಲ್ಲಿಗೆ ಬಂದಿರುವಿರಿ, ನಿಮಗೆ ುಂಬಾ ಸ್ವಾಗತವು, ಹೀಗೆ ಅವರನ್ನು ಸ್ತುತಿಸಿ ಪ್ರಾರ್ಥನೆ ಮಾಡಿಕೊಳ್ಳುವನು.

ನಾನು ಯಾವದೇ ಯೋನಿಯಲ್ಲಿ ಜನಿಸಲಿ. ಅನಂತ ಕಲ್ಯಾಣಗುಣಯುಕ್ತ ಾದ ಪರಮಾತ್ಮನಲ್ಲಿ ನನಗೆ ಭಕ್ತಿಯು ಉಂಟಾಗಲಿ. ಆತನನ್ನು ಆಶ್ರಯಿಸಿದ ುಹಾತ್ಮರ ಸತ್ಸಂಗತಿಯು ನನಗೆ ಆಗಾಗ್ಗೆ ಲಭಿಸಲಿ. ನಿಮ್ಮಂಥ ಶ್ರೇಷ್ಠ ಿಪ್ರರಿಗೆ ನನ್ನ ಅನೇಕ ವಂದನೆಗಳು.

ಭಗವಂತನಲ್ಲಿ ವಹಿಸಬೇಕಾದ ನವವಿಧ ಭಕ್ತಿಯಲ್ಲಿ,- ಆತನ ಮಹಿಮೆ ಹಾಗೂ ನಾಮಗಳನ್ನು ಕೇಳುವದು, ಅರ್ಚನೆ, ವಂದನೆ ಹಾಗೂ ಸಖ್ಯವೆಂಬ ಐದು ಅಂಗಗಳು ಇಲ್ಲಿ ಸೂಚಿತವಾಗಿವೆ.



# ಪ್ರಕರಣ—೩—ಶುಕಾಗಮನ

ಮುನಿಗಳೆಲ್ಲರೂ ಬಂದರು. ಪರೀಕ್ಷಿತರಾಜನು ಅವರನ್ನು ಸತ್ಕರಿಸಿದನು, ಎಂದು ಹೇಳಿದೆ. ಅದರಲ್ಲಿ ಶುಕಾಚಾರ್ಯರು ಬಂದ ಉಲ್ಲೇಖವೇಕಿಲ್ಲ ? ಶುಕರು ಬರಲೇ ಇಲ್ಲವೆಂದು ಹೇಳುವದು ಬಹಳೇ ಅನರ್ಥಕರವಾದೀತು. ಈಗ್ಗೆ ಬರಲಿಲ್ಲ ವಾದರೂ, ಆನಂತರದಲ್ಲಿ ಬರುವರೆಂದು ಹೇಳಬೇಕೆಂದರೆ, ಈಗ್ಗೆ ಬಾರದಿರುವ ಕಾರಣವೇನು ? ಬೇರೆಡೆಗೆ ಅವರಿಗೆ ಪ್ರಯೋಜನವಿತ್ತು, ಇಲ್ಲಿ ಪ್ರಯೋಜನವಿರಲಿಲ್ಲ ವೆಂದು ಹೇಳಬಹುದೆ ? ನಿಸ್ಪೃಹಿಗಳಾದ ಅವರಿಗೆ ಎಲ್ಲಿಯೂ, ಯಾರಿಂದಲೂ ಪ್ರಯೋಜನವಿಲ್ಲ, ಇಲ್ಲಿಗೆ ಬರಲು ಪ್ರಯೋಜನವಿರಲಿಲ್ಲವೆಂದರೆ, ಆನಂತರವೂ ಅವರು ಇಲ್ಲಿಗೆ ಬರುತ್ತಿರಲಿಲ್ಲ. ಆದುದರಿಂದ ಶುಕರು ರಾಜನಿರುವೆಡೆಗೆ ಬಂದರು, ಎಂದೇ ಹೇಳಬೇಕು- ರಾಜನಿಂದ ಸತ್ಕಾರ ಪಡೆದ ಮುನಿಗಳಲ್ಲಿ ಶ್ರೀ ಶುಕರ ಹೆಸರು ಏಕಿಲ್ಲ ? ರಾಜನು ಅವರಿಗೆ ಸತ್ಕಾರ ಮಾಡಲಿಲ್ಲವೆ ? ಹೀಗೆ ತಿಳಿ ಯುವದು ಅನರ್ಥಕಾರಿಯಾದೀತು. ಈ ಸಂದೇಹಗಳಿಗೆ ಸಮಾಧಾನವನ್ನು ಹೇಳುವರು:- ಶ್ರೀ ಶುಕರು ಒಬ್ಬ **ಸಾಮಾನ್ಯ** ಮುನಿಗಳೆಂದು ತಿಳಿಯಬಾರದು. ದೇಹಧಾರಿಗಳಾದ ಸಕಲ ಜೀವಿಗಳಿಗೂ ಶ್ರೀ ಶುಕರು ಗುರುಗಳಾಗಿರುವರು. ಗುರುತ್ವವು ಎರಡು ಬಗೆಯಾಗಿದೆ – ಅಂತರ್ಗುರು, ಬಹಿರ್ಗುರು – ಎಂದು. ಅಂತರ್ಗುರುತ್ವವನ್ನು ಕೆಳಗಿನ ಶ್ಲೋಕದಲ್ಲಿ ಪ್ರದರ್ಶಿಸಿರುವರು.

||೩೧|| **ಯಂ ಪ್ರವ್ರಜಂತಮನುಪೇತಮಪೇತಕೃತ್ಯಂ**
**ದ್ವೈಪಾಯನೋ ವಿರಹಕಾತರ ಆಜುಹಾವ |**
**ಪುತ್ರೇತಿ ತನ್ಮಯತಯಾ ತರವೋಽಪಿ ನೇದು-**
**ಸ್ತಂ ಸರ್ವಭೂತಹೃದಯಂ ಮುನಿಮಾನತೋಽಸ್ಮಿ||೧-೨-೨**

ಪ್ರಾರಂಭದಲ್ಲಿ ಸೂತರು ಶುಕಮುನಿಗಳಿಗೆ ವಂದಿಸುತ್ತಾರೆ.

**ಅರ್ಥ** :– ನದಿಯ ನಡುಗಡ್ಡೆಯಲ್ಲಿ–ದ್ವೀಪದಲ್ಲಿ–ಜನಿಸಿದ ದ್ವೈಪಾಯನರು, ಶ್ರೀ ವೇದವ್ಯಾಸರು. ಅವರ ಮಕ್ಕಳಾದ ಶ್ರೀ ಶುಕರು 'ಅನುಪೇತರು',–ದೇಹಾದಿ ಅಭಿಮಾನ ರಹಿತರು; ಅಂತೆಯೆ ಮಾಡಬೇಕಾದ ಯಾವದೇ ಕಾರ್ಯವೆಂಬುದು ಅವರಿಗೆ ಇರಲಿಲ್ಲ – ಅವರು 'ಅಪೇತಕೃತ್ಯರು'–ಕೃತಕೃತ್ಯರು. ಸರ್ವಸ್ವವನ್ನು ಬಿಟ್ಟುಕೊಟ್ಟು ವಿರಕ್ತಶಿರೋಮಣಿಗಳಾಗಿ ಆಶ್ರಮದಿಂದ ಹೊರಹೊರಟಾಗ್ಗೆ, ಅವರ ಅಗಲುವಿಕೆಯಿಂದ ಚಿಂತಾಕುಲರೆಂಬಂತೆ ತೋರುವ ಶ್ರೀ ವ್ಯಾಸರು ಶ್ರೀ ಶುಕರನ್ನು 'ಮಗನೇ !'– ಎಂದು ಕೂಗಿ ಕರೆಯುವರು. ಆ ಕಾಲಕ್ಕೆ ಮಾತನಾಡಲಾರದ ಗಿಡಗಳೂ ಕೂಡ ಅವರ ಕರೆಗೆ ಮಾರುತ್ತರವನ್ನು ಕೊಡುವವು. ಏಕೆಂದರೆ, ಗಿಡ

ಳೂ ಕೂಡ ಶುಕರಿಂದ 'ತನ್ಮಯ'ರಾಗಿರುವವು. ಗಿಡಗಳಲ್ಲಿಯೂ ಕೂಡ ಅಧಿಷ್ಠಾತ'ರಾಗಿದ್ದರಿಂದ – ಸನ್ನಿಧರಾಗಿದ್ದರಿಂದ, ಗಿಡಗಳ ಮಾದನಿಯು ಅಧಿಷ್ಠಾತೃವಾದ ಶುಕರದೇ ಧ್ವನಿ, ಅವರದೇ ಉತ್ತರ. ಗಿಡಗಳಲ್ಲಿ ಶ್ರೀ ಶುಕರು ಹೀಗೆ ಸನ್ನಿಹಿತರೆಂದರೆ, ಅವರು "ಸರ್ವ ಭೂತಹೃದಯರು" – ಮನೋನಿ ಯಾಮಕರಾದ ರುದ್ರಾವತಾರರು. ಸಕಲ ಪ್ರಾಣಿಗಳ ಮನಸ್ಸಿನಲ್ಲಿ ನೆಲಿಸಿದ ರರು. ಆದರಿಂದ ಸಚೇತನರಾದ ಗಿಡಗಳಿಗೂ ಅವರು ಅಧಿಷ್ಠಾತೃಗಳು – ಈ ಗೆಯ ಮಹಾನುಭಾವರಾದ ಶ್ರೀ ಶುಕಮುನಿಗಳಿಗೆ – ಸೂತರು ಭಕ್ತಿಪೂರ್ವಕ ನಂದನೆಗಳನ್ನು ಅರ್ಪಿಸುವರು. ಈ ವಿವರಣೆಯಿಂದ ಅಂತರಂಗದಲ್ಲಿ ನೆಲಿಸಿ, ಸಕಲ ಗೂ ಉಪದೇಶ ಮಾಡುವ ಅಂತರ್ಗುರುತ್ವವು ನಿವೇದಿಸಲ್ಪಟ್ಟಿದೆ.

೩೨ ॥ **ಯಃ ಸ್ವಾನುಭಾವಮಖಿಲಶ್ರುತಿಸಾರಮೇಕ-**
**ಮಧ್ಯಾತ್ಮದೀಪಮತಿತಿತೀರ್ಷತಾಂ ತಮೋಂಧಂ ॥**
**ಸಂಸಾರಿಣಾಂ ಕರುಣಯಾಽಽಹ ಪುರಾಣಗುಹ್ಯಂ**
**ತಂ ವ್ಯಾಸಸೂನುಮುಪಯಾಮಿ ಗುರುಂ ಮುನೀನಾಂ॥**

೧-೨-೩-(೨)

– ಎರಡನೆಯದಾದ ಬಹಿರ್ಗುರುತ್ವವನ್ನು ನಿರೂಪಿಸುವರು.

**ಅರ್ಥ** :– ಎಲ್ಲ ವೇದಗಳಿಗೂ ಮುಖ್ಯ ಪ್ರತಿಪಾದ್ಯ ವಿಷಯನು– ಮುಖ್ಯ ವಾಗಿ ಪ್ರತಿಪಾದಿಸಲ್ಪಡುವವನು– ಅಂತೆಯೇ ಪ್ರಧಾನನಾಗಿರುವವನು, ಆಳವಾಗಿ ಆವರಿಸಿದ ಅಜ್ಞಾನವೆಂಬ ಕತ್ತಲೆಯನ್ನು ದಾಟಿ ಹೋಗಬೇಕೆಂದು ಬಯಸುವ ಸಂಸ್ಸಾರಿಗಳಾದ ಜನರಿಗೆ ಅವರ ಅಂತರಂಗದಲ್ಲಿಯೇ ನೆಲಿಸಿ ದೀಪದಂತೆ ಬೆಳಕನ್ನು ಕೊಡುವವನು, ಭಾರತಾದಿ ಪುರಾಣಗಳಲ್ಲಿ ಅಸ್ಫುಟವಾಗಿ, ಗೂಢವಾಗಿ ನಿರೂಪಿಸ ಲ್ಪಟ್ಟವನೂ, ಸ್ವತಂತ್ರನೂ, ಆಗಿರುವ ಜ್ಞಾನಾತ್ಮಕ ಪರಬ್ರಹ್ಮನ ಸ್ವರೂಪವನ್ನು ಸಂಸಾರಿಗಳ ಮೇಲೆ ಕೃಪೆ ಮಾಡಿ ಭಾಗವತ ಪುರಾಣ ರೂಪದಲ್ಲಿ ವಿಶದಗೊಳಿಸಿದ– ತಿಳಿಯಾಗಿ ಹೇಳಿದ– ಎಲ್ಲ ಜ್ಞಾನಿಗಳಿಗೂ ಗುರುವೆನಿಸಿದ, ವ್ಯಾಸಪುತ್ರರಾದ ಶ್ರೀ ಶುಕಮುನಿಗಳಿಗೆ ಮೊರೆ ಹೋಗುವೆನು, ವಂದಿಸುವೆನು.

ಸಂಸಾರಿಗಳಾದ ಜನರಿಗೆ ಉದ್ಧಾರಕವಾದ ಭಾಗವತಶಾಸ್ತ್ರವನ್ನು ಭಾಗ ವತಪುರಾಣದಿಂದ ಉಪದೇಶ ಮಾಡುವದರಿಂದ ಶ್ರೀ ಶುಕಮುನಿಗಳಿಗೆ ಎರಡನೆಯ ಬಗೆಯ ಬಾಹ್ಯಗುರುತ್ವವನ್ನೂ ಹೇಳಿದಂತಾಯಿತು.

॥ ೩೩ ॥ ತತ್ರಾಽಭವದ್ಭಗವಾನ್ ವ್ಯಾಸಪುತ್ರೋ
ಯದೃಚ್ಛಯಾ ಗಾಮಟಮಾನೋಽನಪೇಕ್ಷಃ ।
ಅಲಕ್ಷ್ಯಲಿಂಗೋ ನಿಜಲಾಭತುಷ್ಟೋ
ವೃತಶ್ಚ ಬಾಲೈರವಧೂತವೇಷಃ ॥ ೧-೨೦-೧ 1-19-25

ಶ್ರೀ ಶುಕಮುನಿಗಳ ಬಗ್ಗೆ ಆದರವನ್ನು ಹುಟ್ಟಿಸಲು, ಮೇಲಿನ ಶ್ಲೋಕ
ದಲ್ಲಿ ಅವರ ಮಹಿಮೆ ಹೇಳಿ,– ಅವರ ಬರುವಿಕೆಯನ್ನು ಈಗ್ಗೆ ಬಣ್ಣಿಸುವರು

ಟೀ:– ರಾಜನು ಪ್ರಾಯೋಪವೇಶಕ್ಕಾಗಿ ಕುಳಿತ ಸ್ಥಳದಲ್ಲಿ ಶ್ರೀ ಶುಕಮು
ನಿಗಳು ಕಂಡುಬಂದರು. ಅವರ ಬರುವಿಕೆಯು ಭಗವದಿಚ್ಛೆಯಿಂದ; ಆಕಸ್ಮಿಕವಾ
ಪದು – ಪೂರ್ವಯೋಜಿತವಾದುದಲ್ಲ. ಅಂತೆಯೇ, 'ಬಂದರು' ಎಂದು ಹೇಳುವ
ಬದಲು–'ಅಭವತ್' – ಕಂಡು ಬಂದರು, ಎಂಬ ಪದವನ್ನು ಉಪಯೋಗಿಸಿರು
ವರು. ಇನ್ನು ಮುಂದೆ ಪರೀಕ್ಷಿತರಾಜರಿಗೆ ಉಪದೇಶಮಾಡಲು ಜ್ಞಾನಾದಿಗಳಿಂದ
ಅರ್ಹರಾದವರು–ಎಂಬುದನ್ನು ಸೂಚಿಸಲು 'ಭಗವಾನ್' – ಎಂದು ಅವರಿಗೆ
ಕರೆಯಲಾಗಿದೆ. ಪ್ರಯೋಜನವನ್ನಿಟ್ಟುಕೊಂಡೇ ಬಂದರು,–ಎಂದು ಹೇಳಬಾರ
ದೇಕೆ?–ಹೀಗೆ ಹೇಳುವದು ತಪ್ಪಾಗುವದು. ಏಕೆಂದರೆ, ಅವರು 'ಅನಪೇಕ್ಷರು'–
ಅಪೇಕ್ಷಾರಹಿತರು. ನಿರಪೇಕ್ಷಿಗಳು ಏಕೆ, – ಎಂದರೆ 'ನಿಜಲಾಭ ತುಷ್ಟರು'–ಹರಿ
ಭಕ್ತರಿಗೆ ಭಕ್ತಿಯೊಂದೇ ಅತಿಶ್ರೇಷ್ಠವಾದ 'ನಿಜಲಾಭ'ವಾಗಿದೆ, ಅಪೇಕ್ಷಿಸುವ
ವಸ್ತುವಾಗಿದೆ. ಬ್ರಹ್ಮಚರ್ಯಾದಿ ನಾಲ್ಕು ಆಶ್ರಮಗಳಲ್ಲಿ, ಯಾವ ಆಶ್ರಮದ
ಚಿನ್ಹೆಗಳೂ ಅವರ ದೇಹದ ಮೇಲೆ ಕಾಣುತ್ತಿರಲಿಲ್ಲ. ಅವರದು 'ಅವಧೂತವೇಷ'
ದಿಗಂಬರ ಮುಂತಾದ ಅವಧೂತ ಚಿನ್ಹೆಗಳಿಂದ ಯುಕ್ತರು, ಅಸಾಮಾನ್ಯ–
ವಿಚಿತ್ರ ವೇಷವಾದ್ದರಿಂದ, ಕುತೂಹಲಿಗಳಾದ ಹುಡುಗರು ಅವರನ್ನು ಸುತ್ತು
ಗಟ್ಟಿದ್ದರು.

॥ ೩೪ ॥ ತಂ ದ್ವ್ಯಷ್ಟವರ್ಷಂ ಸುಕುಮಾರಪಾದ
ಕರೋರುಬಾಹ್ವಂ ಸಕಪೋಲಗಾತ್ರಂ ।
ಚಾರ್ವಾರುಣಾಕ್ಷೋನ್ನಸತುಲ್ಯಕರ್ಣಂ
ಶುಭ್ರಾನನಂ ಕಂಬುಸುಜಾತಕಂಠಂ ॥ 1-19-26

॥ ೩೫ ॥ ನಿಗೂಢಜತ್ರುಂ ಪೃಥುತುಂಗವಕ್ಷಸ-
ಮಾವರ್ತನಾಭಿಂ ವಲಿವಲ್ಗೂದರಂ ಚ
ದಿಗಂಬರಂ ವಕ್ತ್ರವಿಕೀರ್ಣಕೇಶಂ
ಪ್ರಲಂಬಬಾಹುಂ ಸ್ವಮರೋತ್ತಮಾಭಂ ॥ 1-19-27

॥36॥ ಶ್ಯಾಮಂ ಸದಾಪೀಚ್ಯವಯೋಂಗಲಕ್ಷ್ಮ್ಯಾ

1-19-29

||೨೮|| ಸ ವಿಷ್ಣುರಾತೋಽತಿಥಯ ಆಗತಾಯ
ತಸ್ಮೈ ಸಪರ್ಯಾಂ ಶಿರಸಾ ಜಹಾರ-
ತತೋ ನಿವೃತ್ತಾ ಹ್ಯಬುಧಾಃ ಸ್ತ್ರಿಯೋಽರ್ಭಕಾ
ಮಹಾಸನೇ ಸೋಪವಿವೇಶ ಪೂಜಿತಃ ೧-೧೯-೨೮

ಈ ರೀತಿಯಲ್ಲಿ ಶುಕಮುನಿಗಳು ರಾಜನಿರುವಲ್ಲಿಗೆ ಬಂದರು. ರಾಜನು ಅವರನ್ನು ಹೇಗೆ ಸತ್ಕರಿಸಿದನೆಂಬುದನ್ನು ಇಲ್ಲಿ ಹೇಳಿದೆ:-

**ಅರ್ಥ** :- ತಾಯಿಯಾದ ಉತ್ತರೆಯ ಗರ್ಭದಲ್ಲಿರುವಾಗಲೆ ಅಶ್ವತ್ಥಾಮರ ಬ್ರಹ್ಮಾಸ್ತ್ರದ ಭಯದಿಂದ ರಾಜನನ್ನು ಕೃಷ್ಣರೂಪಿಯಾದ ಶ್ರೀ ವಿಷ್ಣು ರಕ್ಷಿಸಿದನು. ಆದುದರಿಂದ, 'ವಿಷ್ಣುರಾತ'-ನೆಂದು ಜನರು ಕರೆಯುತ್ತಿದ್ದರು-ಶ್ರೀಹರೀಚ್ಛೆಯಿಂದ ಅಲ್ಲಿಗೆ ಬಂದಿರುವ,-ಅತಿಥಿಸ್ವರೂಪರಾದ ಶುಕಮುನಿಗಳಿಗೆ ಸತ್ಕರಿಸಲು ಪೂಜಾಸಾಮಗ್ರಿಗಳನ್ನು ರಾಜನು ತಾನೇ ತನ್ನತಲೆಯಮೇಲೆ ಇಟ್ಟುಕೊಂಡು ತೆಗೆದುಕೊಂಡು ಬಂದನು-ಶ್ರೀಶುಕರನ್ನು ಸತ್ಕರಿಸುವಲ್ಲಿ ರಾಜನಿಗಿರುವ ಅತ್ಯಾದರವು ಇದರಿಂದ ತಿಳಿದುಬರುತ್ತದೆ. ಅನಂತರ, ಅಲ್ಲಿ ನೆರೆದಿದ್ದ ಅಜ್ಞಾನಿಗಳಾದ ಪಾಮರರು, ಸ್ತ್ರೀಯರು ಅಲ್ಲಿಂದ ಬೇರೆ ಕಡೆಗೆ ಹೊರಟು ಹೋದರು. ಆ ಮೇಲೆ ಶ್ರೀ ಶುಕರು ಉನ್ನತವಾದ ಆಸನದಲ್ಲಿ ಕುಳಿತುಕೊಂಡರು, ರಾಜನು ಮಾಡುವ ಪೂಜೆಯನ್ನು ಸ್ವೀಕರಿಸಿದರು.

ಉಳಿದ ಮುನಿಗಳೊಡನೆಯೇ ಬಂದು, ಅವರೊಡನೆಯೇ ಶ್ರೀ ಶುಕರಿಗೂ ಸತ್ಕಾರವಾಗಲಿಲ್ಲವೆ? ಎಂಬ ಸಂದೇಹಕ್ಕೆ ಉತ್ತರವನ್ನು ಇಲ್ಲಿ ಹೇಳಿದೆ.- ಶ್ರೀ ಹರೀಚ್ಛೆಯಿಂದ, ಅನಿರೀಕ್ಷಿತವಾಗಿ ಶ್ರೀ ಶುಕರು ಉಳಿದ ಮುನಿಗಳು ಅಲ್ಲಿಗೆ ಬರುವ ಸಮಯದಲ್ಲಿಯೇ ಬಂದರು. ಆದರೂ ಅವರೊಡನೆ ರಾಜನ ಬಳಿಗೆ ಬರಲಿಲ್ಲ. ದಿಗಂಬರರಾದ ಅವರ ಅಲೌಕಿಕ ಅವಧೂತ ಸ್ವರೂಪವನ್ನು ಕುತೂಹಲಿಗಳಾದ ಪುರಜನರು ನೋಡುತ್ತಿರಲು, ಸ್ವೇಚ್ಛೆಯಿಂದ ಅಲ್ಲಲ್ಲಿ ಕೆಲ ನಿಮಿಷ ನಿಂತುನಿಂತು ತುಸು ತಡವಾಗಿ ರಾಜನಲ್ಲಿಗೆ ಬಂದರು. ಇದರಿಂದ ರಾಜನ ಬಳಿಗೆ ಅವರು ಬರುವದಕ್ಕೂ, ಅವರ ಸತ್ಕಾರಕ್ಕೂ ಕೂಡ ಕಿಂಚಿತ್ ವಿಳಂಬವಾಯಿತು. ಅಂತೆಯೇ ಉಳಿದ ಮುನಿಗಳ ಬರುವಿಕೆ, ಸತ್ಕಾರಗಳ ನಿರೂಪಣೆಯಲ್ಲಿ ಶ್ರೀ ಶುಕರ ಹೆಸರಿಗೆ ಸ್ಥಾನವಿಲ್ಲ. ಮೇಲಿನ ಸಂದೇಹಕ್ಕೆ ಇದೇ ಉತ್ತರವಾಗಿದೆ.

ದಿಗಂಬರಂ ವಕ್ರವಿಕೀರ್ಣಕೇಶಂ
ಪ್ರಲಂಬಬಾಹುಂ ಸ್ವಮರೋತ್ತಮಾಭಂ ॥

॥೩೬॥ ಶ್ಯಾಮಂ ಸದಾಪೀಚ್ಯವಯೋಂಗಲಕ್ಷ್ಮ್ಯಾ
ಸ್ತ್ರೀಣಾಂ ಮನೋಜ್ಞಂ ರುಚಿರಸ್ಮಿತೇನ ।
ಪ್ರತ್ಯುತ್ಥಿತಾ ಮುನಯಃ ಸ್ವಾಸನೇಭ್ಯ-
ಸ್ತಲ್ಲಕ್ಷಣಜ್ಞಾ ಅಪಿ ಗೂಢವರ್ಚಸಂ ॥೧-೨೦-೨, ೩.೪

ಮುಕ್ತಿಯನ್ನು ಬಯಸುವವರು, ಸರ್ವರಿಗೂ ಅಂತರ್ಬಾಹ್ಯ ಗುರುಗಳಾದ ಶ್ರೀ ಶುಕಮುನಿಗಳ ಧ್ಯಾನವನ್ನು ಅಗತ್ಯವಾಗಿ ಮಾಡಬೇಕೆಂದು, – ಪಾದದಿಂದ ಪ್ರಾರಂಭಿಸಿ, ಮುಖದಲ್ಲಿ ಮಿನುಗುವ ಮುಗುಳು ನಗೆಯವರೆಗಿನ ಅವರ ಅವಯವಗಳನ್ನು ಬಣ್ಣಿಸಿರುವರು

**ಅರ್ಥ :–** ಶ್ರೀ ಶುಕರು ಹದಿನಾರು ವರುಷದ ಯುವಕರಂತೆ ತೋರಿದರು. ಬಳ್ಳಿಕೋಮಲವಾದ ಪಾದ–ಹಸ್ತ–ತೊಡೆ–ತೋಳು–ಹೆಗಲು–ಕೆನ್ನೆ–ಗಳಿಂದ ಅವರ ಶರೀರವು ಯುಕ್ತವಾದುದು. ಕಿಂಚಿತ್ ಕೆಂಪಾದ ಕಣ್ಣುಗಳು, ನೇಟಾದ ಮೂಗು' ಸಮ_ಜೋಡಿಯಾದ ಕಿವಿಗಳು, ತೇಜಸ್ವಿಯಾದ ಮುಖ, ಮೂರು ನಿರಿಗೆಗಳಿಂದ ಸಮೇತವಾಗಿ ಶಂಖದಂತೆ ಕಂಗೊಳಿಸುವ ಕಂಠ, ಹೆಗಲು–ಎದೆಗಳ ನಡುವಿನ ಪುಷ್ಟವಾದಭಾಗ (ಜತ್ರು); ಹರವಾಗಿ ಉನ್ನತವಾದ ಎದೆಯಭಾಗ, ತೆಗ್ಗಾದ ಹೊಕ್ಕಳು, ಮೂರು ಮಡಿಕೆಗಳಿಂದ ಮಂಡಿತವಾದ ಹೊಟ್ಟೆ,–ಶರೀರದ ಇವೆಲ್ಲ ಅವಯವಗಳು ರಮಣೀಯವಾಗಿದ್ದವು. ಅವಧೂತ ವೇಷದ ಶ್ರೀಶುಕರು ದಿಗಂಬರರು. ಹರಡಿದ ಉಂಗುರುಗೂದಲು, ನೀಳ್ದೋಳುಗಳು,–ಹೀಗಿದ್ದರೂ ದೇವೋತ್ತಮರಂತೆ ಶೋಭಿಸುವವರು. ಅವರದು ಶಾಮವರ್ಣ- ಸ್ತ್ರೀಯರಿಗೆ ಆಕರ್ಷಕವೆನಿಸಬಹುದಾದ ಹದಿನೆಂಟನೆಯ ವಯೋಮಾನದ, ಎಂದಿಗೂ ಕುಂದದ ಅಂಗಸೌಷ್ಠವ ಹಾಗೂ ಮನೋಹಾರಿಯಾದ ಮುಗುಳುನಗೆ–ಸುಂದರವಾದ ಅವಯವಗಳಿಂದ ಕೂಡಿದ ಶ್ರೀ ಶುಕಮುನಿಗಳ ದಿವ್ಯತೇಜಸ್ಸು ಸ್ಫುಟವಾಗಿ ಕಾಣದಿದ್ದರೂ ಅದನ್ನರಿತವರಾದ ಮುನಿಗಳು, ತಮ್ಮ ಆಸನಗಳಲ್ಲಿ ಎದ್ದುನಿಂತು ಅವರನ್ನು ಗೌರವಿಸಿದರು.

೩೮|| ಪ್ರಶಾಂತಮಾಸೀನಮಕುಂಠಮೇಧಸಂ
ಮುನಿಂ ನೃಪೋ ಭಾಗವತೋಽಭ್ಯುಪೇತ್ಯ |
ಪ್ರಣಮ್ಯ ಮೂರ್ಧ್ನಾಽವಹಿತಃ ಕೃತಾಂಜಲಿ-
ರ್ನತ್ವಾ ಗಿರಾ ಸೂನೃತಯಾನ್ವಪೃಚ್ಛತ || ೧-೨೦-೭ 1-19-31

ಪರೀಕ್ಷಿತನು ಶುಕಮುನಿಗಳಿಗೆ ಕೇಳಿದ ಪ್ರಶ್ನೆ ಇದು :-

**ಅರ್ಥ** :- ಶ್ರೀ ಶುಕರು ಆಸನದಲ್ಲಿ ಕುಳಿತರು. ಅವರು ಅತ್ಯಂತ ಶಾಂತರು. ವರ ಬುದ್ಧಿಯು ಅಪ್ರತಿಹತವಾದುದು, ಭಾಗವತ ಶಿರೋಮಣಿಯಾದ ರಾಜನು ವರ ಸಮೀಪಕ್ಕೆ ಬಂದರು, ಸಾಂಷ್ಟಾಂಗವಾಗಿ ಪ್ರಣಾಮ ಮಾಡಿದನು. ಕೈಜೋ ಸಿಕೊಂಡು ನಿಂತು, ತನ್ನ ಮನಸ್ಸಿನಲ್ಲಿರುವ ಪ್ರಶ್ನೆಯನ್ನು ಮೃದುಮಧುರವಾದ ಾಣಿಯಿಂದ ಕೇಳಿದನು.

ನಿಮ್ಮ ಸ್ಮರಣ ಮಾತ್ರದಿಂದಲೇ, ಮನೆಮನೆತನಗಳು ಪವಿತ್ರವಾಗುವವು. ರ್ಶನ, ಸ್ಪರ್ಶ ಹಾಗೂ ಪೂಜಾದಿ ಸತ್ಕಾರ ಮಾಡಲುವದರಿಂದ ಎಲ್ಲ ಪುರುಷಾರ್ಥ ಳೂ ಲಭಿಸುವದು, ಏನು ಆಶ್ಚರ್ಯವಿದೆ? ನೀವು ಸಿದ್ಧಿಯ ಶಿಖರವನ್ನು ಮುಟ್ಟಿ ವರು. ಯೋಗಿಗಳಿಗ ಪರಮ ಗುರುಗಳು. ಮರಣೋನ್ಮುಖನಾದ ಜೀವಿಯು ಲೋಕದಲ್ಲಿ ಸಂತತವಾಗಿ ಮಾಡಬೇಕಾದ ಕಾರ್ಯವು ಯಾವುದು ? ಅದನ್ನು ನಗೆ ತಿಳಿಸಿರಿ - ಎಂದು ರಾಜನು ಶ್ರೀ ಶುಕರಿಗೆ ಬಿನ್ನವಿಸಿಕೊಂಡನು.

೩೯|| ಪಿತಾಮಹಾ ಮೇ ಸಮರೇಽಮರಂಜಯೈಃ
ರ್ದೇವವ್ರತಾದ್ಯಾತಿರಥೈಸ್ತಿಮಿಂಗಿಲೈಃ |
ದುರತ್ಯಯಂ ಕೌರವಸೈನ್ಯಸಾಗರಂ
ಕೃತ್ವಾತರನ್ವತ್ಸಪದಂ ಸ್ಮ ಯತ್ಪ್ಲವಾಃ ||೧೦-೧-೫

ಹೀಗೆ ರಾಜನು ಸರ್ವಸಾಮಾನ್ಯವಾಗಿ, ಸಂಕ್ಷೇಪವಾಗಿ ಕೇಳಿದ ಪ್ರಶ್ನೆಯನ್ನು ಮುಂದಿನ ಮೂರು ಶ್ಲೋಕಗಳಲ್ಲಿ ವಿವರವಾಗಿ ನಿರೂಪಿಸುವರು. ಹೊರಗಿನ ಐಹಿಕ ಷಯಗಳ ಕಡೆಗೆ ಹರಿಯುವಂತೆ ಬ್ರಹ್ಮದೇವನು ಇಂದ್ರಿಯಗಳನ್ನು ಸೃಷ್ಟಿಸಿರುವನು. ಷಯಗಳಲ್ಲಿ ಆಸಕ್ತಿಯನ್ನು ಹುಟ್ಟಿಸುವದರಿಂದ ಅವು ಬಹಳ ದುಃಖವನ್ನು ಂಟುಮಾಡುವವು. ಗೆಲ್ಲಲು, ಅಂಕಿತದಲ್ಲಿ ಇಟ್ಟುಕೊಳ್ಳಲು ಬಹು ಕಠಿಣವಾದ

ಇಂದ್ರಿಯಗಳು ಮುಕ್ತಿಯನ್ನು ಪಡೆಯಬೇಕೆಂಬುವವರಿಗೆ ಕಡುವೈರಿಗಳಾಗಿವೆ. ಪ್ರಬಲವಾಗಿರುವ ಇಂಥ ಇಂದ್ರಿಯಗಳನ್ನು ಹೇಗೆ ನಿಗ್ರಹಿಸಬೇಕು ? ಈ ಅಭಿಪ್ರಾಯವನ್ನು ಮನದಲ್ಲಿಟ್ಟುಕೊಂಡು, ತನ್ನ ಪೂರ್ವಿಕರಿಗೆ ಮಾಡಿದ ಅಗಣಿತ ಉಪಕಾರವನ್ನು ನೆನೆದು, ಶ್ರೀ ಹರಿಯ ಸ್ತೋತ್ರವನ್ನು ಮಾಡುವನು.

**ಅರ್ಥ** :–ದೇವತೆಗಳನ್ನು ಜಯಿಸಲು ಶಕ್ತರಾದ ಭೀಷ್ಮ ಮುಂತಾದ ಅತಿರಥ ಮಹಾರಥರಾದ ವೀರರು ಸಾಗರೋಪಮವಾದ ಕೌರವರ ಪ್ರಚಂಡ ಸೈನ್ಯದಲ್ಲಿ ಪ್ರಬಲವಾದ ತಿಮಿಂಗಿಲುಗಳಿದ್ದಂತೆ. ಅಂಥ ವೀರರಿಂದ ಕೂಡಿದ ಈ ಸೈನ್ಯವೆಂಬ ಸಾಗರವು ದಾಟಲು ಬಹು ಕಠಿಣವಾದುದು. ಅಂಥ ಸೇನಾಸಾಗರವನ್ನು ಕೂಡ, ಆಕಳ ಕರುವಿನ ಹೆಜ್ಜೆಯಿಂದ ಉಂಟಾದ ಚಿಕ್ಕ ತೆಗ್ಗಿನಂತೆ ಮಾಡಿ ನನ್ನ ಪೂರ್ವಜರಾದ ಧರ್ಮಾದಿಗಳು ಶ್ರೀ ಕೃಷ್ಣನ ಅನುಗ್ರಹವೆಂಬ ನಾವೆಯಿಂದ ಅನಾಯಾಸವಾಗಿ ದಾಟಿದರು.

||೪೦|| **ದ್ರೌಣ್ಯಸ್ತ್ರವಿಪ್ಲುಷ್ಟಮಿದಂ ಮದಂಗಂ**
**ಸಂತಾನಬೀಜಂ ಕುರುಪಾಂಡವಾನಾಂ |**
**ಜುಗೋಪ ಕುಕ್ಷಿಗತ ಆತ್ತಚಕ್ರೋ**
**ಮಾತುಶ್ಚ ಮೇ ಯಃ ಶರಣಂ ಗತಾಯಾಃ ||** ೧೦-೧-೬

ಮುಕ್ತಿಯನ್ನು ಬಯಸುವವರು ಮುಖ್ಯವಾಗಿ ಎರಡು ಸಂಗತಿಗಳನ್ನು ಸಾಧಿಸಬೇಕು. ೧) ಭಗವಂತನ ವಿಷಯದಲ್ಲಿ ಆಸ್ಥೆಯನ್ನು ತಾಳುವದು ೨) ಉಳಿದ ಐಹಿಕ ವಿಷಯಗಳ ಬಗ್ಗೆ ಆಸಕ್ತಿಯನ್ನು ಬಿಟ್ಟು ಕೊಡುವದು. ಎರಡನೆಯದನ್ನು ಹೇಗೆ ಸಾಧಿಸಬೇಕೆಂಬುವದನ್ನು ರಾಜನು ಈ ಮೊದಲೇ ಕೇಳಿರುವನು. ಭಗವಂತನಲ್ಲಿ ಹೇಗೆ ಆಸಕ್ತಿಯು ಉಂಟಾಗುವದೆಂಬ ಭಾವನೆಯನ್ನು ಮನಸ್ಸಿನಲ್ಲಿ ಇಟ್ಟುಕೊಂಡು, ಆತನು ಮಾಡಿದ ಉಪಕಾರವನ್ನು ಸ್ಮರಿಸಿ ಸ್ತೋತ್ರ ಮಾಡುವನು.–

**ಅರ್ಥ** :–ತಾಯಿಯ ಗರ್ಭದಲ್ಲಿ ನೆಲೆಸಿದ ನನ್ನ ದೇಹವು ಕೌರವ–ಪಾಂಡವರ ಒಟ್ಟಿಗೆ ಕುರುವಂಶದ ಉಳುವಿಗೇನೆ ಬೀಜರೂಪವಾದುದು. ಅಶ್ವತ್ಥಾಮರು ಬಿಟ್ಟ ಬ್ರಹ್ಮಾಸ್ತ್ರದಿಂದ ನನ್ನ ಶರೀರವು ಸುಟ್ಟು ಹೋಗುವ ಅಪಾಯದಲ್ಲಿರಲು ಮೊರೆಹೊಕ್ಕ ನನ್ನ ತಾಯಿಯ ಗರ್ಭದಲ್ಲಿ ಚಕ್ರಧಾರಿಯಾಗಿ ನಿಂತು ಶ್ರೀ ಕೃಷ್ಣನು ಅದನ್ನು ರಕ್ಷಿಸಿದನು.

ಕೌರವರು – ಪಾಂಡವರು ಸಂದರ್ಭಾನುಗುಣವಾಗಿ ಬೇರೆ ಬೇರೆಯಾದರೂ 'ಸಜಾತಿಯರು' – ಒಂದೇ ವಂಶಕ್ಕೆ ಸೇರಿದವರು. ಆದುದರಿಂದ ಇಲ್ಲಿ ಒಟ್ಟಿಗೆ ಕೂಡಿಸಲಾಗಿದೆ.

ಈ ಸಂಗತಿಗೆ ಸಂದರ್ಭವನ್ನು ಹೀಗೆ ಹೇಳಿರುವರು :- ಕುರುಕ್ಷೇತ್ರದ ಯುದ್ಧವು ಮುಗಿಯಿತು. ರಥವನ್ನೇರಿ ದ್ವಾರಕೆಗೆ ಹೋಗಲು ಶ್ರೀ ಕೃಷ್ಣನು ಸಿದ್ಧನಾಗಿದ್ದನು. ಅಷ್ಟರಲ್ಲಿ ಭೀತಿಯಿಂದ ಕಾತರಳಾದ ಉತ್ತರೆಯು ಶ್ರೀ ಕೃಷ್ಣನಿದ್ದಲ್ಲಿಗೆ ಧಾವಿಸಿ ಬಂದಳು-"ದೇವದೇವ, ಜಗತ್ಪತೆ, ಯೋಗೀಶ್ವರನೇ! ನನ್ನನ್ನು ರಕ್ಷಿಸು. ನಿನ್ನನ್ನುಳಿದು ನನಗೆ ರಕ್ಷಕರಿಲ್ಲ, ಬ್ರಹ್ಮಾಸ್ತ್ರರೂಪವಾದ ಮೃತ್ಯು ನನ್ನನ್ನು ಬೆನ್ನಟ್ಟಿ ಬರುತ್ತಿದೆ. ನನ್ನನ್ನು ಬೇಕಿದ್ದರೆ ಕೊಲ್ಲಲಿ, ನನ್ನ ಗರ್ಭವು ಸುರಕ್ಷಿತವಾಗಿರಲಿ. ಪಾಂಡವರನ್ನೇ ಅಳಿದು ಬಿಡಬೇಕೆಂದು ಅಗ್ನಿಯಂತಿರುವ ಐದು ಅಸ್ತ್ರಗಳು ಅವರನ್ನು ಗುರಿಯಿಟ್ಟು ಬಂದವು. ಈ ಕ್ರೂರ ಕಾರ್ಯವು ಅಶ್ವತ್ಥಾಮನದೆಂದು ಸರ್ವಾಂತರ್ಯಾಮಿಯಾದ ಶ್ರೀ ಕೃಷ್ಣನಿಗೆ ತಿಳಿಯಿತು. ತನ್ನನ್ನೇ ಪೂರ್ಣವಾಗಿ ಆಶ್ರಯಿಸಿದ ಸ್ವಜನರಾದ ಪಾಂಡವರನ್ನು ತನ್ನ ಸುದರ್ಶನಚಕ್ರದಿಂದ ರಕ್ಷಿಸಿದನು. ಸರ್ವಾಂತರ್ಯಾಮಿಯೂ, ಯೋಗೇಶ್ವರನೂ ಆದ ಶ್ರೀ ಹರಿಯು ತನ್ನ ಯೋಗಮಾಯೆಯಿಂದ ಉತ್ತರೆಯ ಗರ್ಭಕ್ಕೆ ರಕ್ಷಾಕವಚವನ್ನೊದಗಿಸಿದನು. ವೈಷ್ಣವತೇಜಸ್ಸಿನ ಮುಂದೆ ಆ ಬ್ರಹ್ಮಾಸ್ತ್ರದ ಆಟ ನಡೆಯಲಿಲ್ಲ. ಅದು ಬಲಹೀನವಾಯಿತು. ಆ ಸಮಯದಲ್ಲಿ ತಾಯಿಯ ಗರ್ಭದಲ್ಲಿದ್ದ ಶಿಶು ಗದಾಧಾರಿಯಾಗಿ, ಗದೆಯನ್ನು ತಿರುಗಿಸುತ್ತ ತನ್ನನ್ನು ರಕ್ಷಿಸುತ್ತಿರುವ ದಿವ್ಯ ಪುರುಷನನ್ನು ನಿರೀಕ್ಷಿಸುತ್ತಿತ್ತು. ಆತನ ಶರೀರ ಹೆಬ್ಬೆರಳಿನಷ್ಟು-ಕೊರಳಲ್ಲಿ ಹೊಳೆಯುವ ಚಿನ್ನದ ಸರವನ್ನು ಧರಿಸಿದವನು. ಶ್ಯಾಮವರ್ಣದವನು, ಮಿಂಚಿನಂತೆ ಹೊಳೆಯುವ ಪೀತಾಂಬರವನ್ನು ಧರಿಸಿದವನು, ನೀಳ್ತೋಳುಗಳುಳ್ಳವನು, ಸುವರ್ಣ ಕುಂಡಲಗಳನ್ನು ಧರಿಸಿದವನು. ಕಿಂಚಿತ್ ಆರಕ್ತಕಣ್ಣು. ಉಲ್ಕೆಯಂತಿರುವ ಗದೆಯನ್ನು ತನ್ನ ಸುತ್ತಲೂ ಆಗಾಗ್ಗೆ ತಿರುಗಿಸುತ್ತಿರುವವನು. ಸೂರ್ಯನು ಹಿಮವನ್ನು ಚದರಿಸುವಂತೆ, ಬ್ರಹ್ಮಾಸ್ತ್ರದ ತೇಜಸ್ಸನ್ನು ಹೊಡೆದೋಡಿಸುತ್ತಿರುವ ದಿವ್ಯ ಪುರುಷನನ್ನು-ಇವರು ಯಾರಿರಬಹುದು?-ಎಂಬ ಕುತೂಹಲದಿಂದ ಗರ್ಭದಲ್ಲಿಯ ಶಿಶು ನಿರೀಕ್ಷಿಸುತ್ತಿತ್ತು ಅಪ್ರಮೇಯನೂ, ವಿಶ್ವರಕ್ಷಕನೂ ಆದ ಶ್ರೀ ಹರಿಯು ಹತ್ತು ತಿಂಗಳು ತುಂಬಿದ ನಂತರ, ಅಲ್ಲಿಯೇ ಅದೃಶ್ಯನಾದನು.

॥೪೧॥ **ವೀರ್ಯಾಣಿ ತಸ್ಯಾಖಿಲದೇಹಭಾಜಾ-**
**ಮಂತರ್ಬಹಿಃ ಪೂರುಷಕಾಲರೂಪೈಃ** ।

**ಪ್ರಯುಚ್ಛತೋ ಮೃತ್ಯುಮನಾಮಯಂ ಚ**
**ಮಾಯಾಮನುಷ್ಯಸ್ಯ ವದಸ್ವ ವಿದ್ವನ್** ॥ ೧೦-೧-೭

– ಶ್ರೀ ಕೃಷ್ಣ ಪರಮಾತ್ಮನು ನನಗೆ, ನನ್ನ ತಾಯಿಗೆ, ನನ್ನ ಪೂರ್ವೀಕರಿಗೆ, ಈ ಮೂವರಿಗೆ ಮಾತ್ರ ಹಿತಕರ್ತೃವಾಗಿಲ್ಲ. ದೇಹ ಧಾರಿಗಳಾದ ಸಕಲ ಪ್ರಾಣಿಗಳಿಗೂ ಆತನು ಹಿತವನ್ನು ಮಾಡುವವನು-ಮೂವರಿಗೆ ಉಪಕಾರ ಮಾಡಿದ್ದನ್ನು ನೀನೇ ಹೇಳಿದ್ದರಿಂದ ಅದು ಸತ್ಯ ಸಂಗತಿಯಾಗಿದೆ. ಆದರೆ ಪ್ರಾಣಿಗಳಿಗೂ ಆತನು ಹಿತ ಮಾಡುವವನೆಂದು ಹೇಳುವದು ಹೇಗೆ ಸತ್ಯವಾಗಿದೆ?– ಆತನು ಹೀಗೆ ಮಾಡುವದು ನಮ್ಮ ಕಣ್ಣಿಗೆ ಕಾಣುವದಿಲ್ಲವಲ್ಲ?– ಎಂದರೆ, ಅದಕ್ಕೆ ಉತ್ತರವಿದು. ಶ್ರೀ ಕೃಷ್ಣನು ನಮಗೆ ಬಳಗವಾಗಿರುವ ಒಬ್ಬ ಸಾಮಾನ್ಯ ಮಾನವನಲ್ಲ. ಆದರೆ ಆತನು ಸಕಲ ಪ್ರಾಣಿಗಳ ಅಂತರಂಗದಲ್ಲಿ ನೆಲಿಸಿ, ನಿಯಾಮಕನಾಗಿ 'ಪುರುಷ' ನೆಂದು ಕರೆಯಲ್ಪಡುವನು. ಹೊರಗೆ 'ಕಾಲ'-ರೂಪನಾಗಿ 'ಕಾಲ'ನೆಂದು ಕರೆಯಿಸಿಕೊಳ್ಳುವನು. ಅಂತರಂಗದಲ್ಲಿ 'ಪುರುಷ' ನಾಗಿ, ಹೊರಗೆ 'ಕಾಲ'ನೆಂದು ಆತನು ಮಾಡುವ ಉಪಕಾರವು ಎಲ್ಲರಿಗೂ ಅನುಭವಸಿದ್ಧವಾಗಿದೆ. ಈ ಅಭಿಪ್ರಾಯವನ್ನು ಮನಸ್ಸಿನಲ್ಲಿ ಇಟ್ಟುಕೊಂಡು, ಶ್ರೀ ಕೃಷ್ಣಪರಮಾತ್ಮನ ಮಹಿಮೆಯನ್ನು ನಿರೂಪಿಸಬೇಕೆಂದು ಪರೀಕ್ಷಿತನು ಶ್ರೀ ಶುಕಮುನಿಗಳಿಗೆ ಪ್ರಾರ್ಥಿಸುತ್ತಾನೆ

**ಅರ್ಥ**:– ಬಿಂಬರೂಪನಾಗಿ, ದೇಹಧಾರಿಗಳಾದ ಜೀವಿಗಳ ಅಂತರಂಗದಲ್ಲಿ ನೆಲಿಸಿ ಪರಮಾತ್ಮನು ಮೋಕ್ಷವನ್ನು ಕೊಡುವನು; ಹೊರಗೆ ಕಾಲರೂಪನಾಗಿದ್ದುಕೊಂಡು ಮೃತ್ಯು-ಮರಣವನ್ನು ತಂದುಕೊಡುವನು. ಕೇವಲ ತನ್ನಲೀಲೆಗಾಗಿ ಮಾನವರೂಪದಲ್ಲಿ ಅವತರಿಸಿದ ಭಗವಂತನ ಅದ್ಭುತಲೀಲೆಗಳನ್ನು, ವೀರ್ಯವತ್ತಾದ ಕಾರ್ಯಗಳನ್ನು ನನಗೆ ನಿರೂಪಿಸಿರಿ–ಎಂದು ಪರೀಕ್ಷಿತನು ಜ್ಞಾನಿ ಶ್ರೇಷ್ಠರಾದ ಶುಕಮುನಿಗಳಿಗೆ ಪ್ರಾರ್ಥಿಸಿಕೊಳ್ಳುತ್ತಾನೆ.

ಸಾತ್ವಿಕ–ರಾಜಸ–ತಾಮಸ, ತ್ರಿವಿಧ ಜೀವಿಗಳಿಗೆ ತ್ರಿವಿಧಗತಿಯನ್ನು ಅವರವರ ಯೋಗ್ಯತೆಗೆ ಅನುಗುಣವಾಗಿ ಸಾಧನವನ್ನು ಮಾಡಿಸಿ ಕೊಡುವದು–ಅಂತರ್ಯಾಮಿಯಾದ 'ಬಿಂಬ'ರೂಪ ಪರಮಾತ್ಮನ ಕಾರ್ಯ. 'ಕಾಲ'–ರೂಪನಾಗಿ ಮೃತ್ಯುವನ್ನು ತಂದುಕೊಡುವವನೂ ಪರಮಾತ್ಮನೇ. ಈ ಎರಡೂ ರೂಪಗಳಲ್ಲಿಯ್ಯ ಪರಮಾತ್ಮನ ಅದ್ಭುತ ಕೃತಿಗಳನ್ನು, ಲೀಲೆಗಳನ್ನು, ತಿಳಿದುಕೊಳ್ಳಲು ರಾಜನು ಅಪೇಕ್ಷಿಸುವನು. ಪರೀಕ್ಷಿತನ ಈ ಪ್ರಶ್ನೆಯು ತುಂಬಾ ವ್ಯಾಪಕವಾಗಿದೆ, ವಿವಿಧ ವಿಷಯಗಳನ್ನು ಒಳಗೊಂಡಿರುತ್ತದೆ.

ಶ್ರೀ ಕೃಷ್ಣನು ಪುರುಷ ಹಾಗೂ ಕಾಲರೂಪದಿಂದ ನಿಯಾಮಕನಾದ ಪರಮಾತ್ಮನೇ ಆಗಿದ್ದರೆ,– ಯಾದವರಲ್ಲಿ ಒಬ್ಬನಾಗಿ ಅಲ್ಲಲ್ಲಿ ಆತನು ಏಕೆ ಅಲೆದಾಡುತ್ತಿರುವನು ? ಎಂದರೆ, ತನ್ನ 'ಮಾಯೆ'ಯಿಂದ, ಸ್ವೇಚ್ಛೆಯಿಂದ ಪರಮಾತ್ಮನಾದ ಶ್ರೀ ಕೃಷ್ಣನು ವಂಚಿಕೆಯ–ತೋರಿಕೆಯ ಮಾನವ ವೇಷವನ್ನು ಧರಿಸಿರುವನು, ಹೀಗೆ ಹೇಳಿದೆ :– ತನ್ನ ಸ್ವರೂಪಭೂತವಾದ ಐಶ್ವರ್ಯದಿಂದ, ಮಾಯೆಯ ಬಲದಿಂದ, ಅಲೌಕಿಕ ದೇವಲೀಲೆಗಳನ್ನು ಆಚರಿಸುವನು.

**||೪೨|| ಏವಂ ನಿಶಮ್ಯ ಭೃಗುನಂದನ ಸಾಧುವಾದಂ**
**ವೈಯಾಸಕಿಃ ಸ ಭಗವಾನಥ ವಿಷ್ಣುರಾತಂ |**
**ಪ್ರತ್ಯರ್ಚ್ಯ ಕೃಷ್ಣಚರಿತಂ ಕಲಿಕಲ್ಮಷಘ್ನಂ**
**ವ್ಯಾಹರ್ತುಮಾರಭತ ಭಾಗವತಪ್ರಧಾನಃ ||೧೦-೧-೧೪**

**ಅರ್ಥ :–** ಅರ್ಥಗರ್ಭಿತವಾದ, ಈ ಶ್ರೇಷ್ಠ ಪ್ರಶ್ನೆಯನ್ನು ಕೇಳಿದ್ದಕ್ಕಾಗಿ ಪೂಜ್ಯರಾದ, ಭಾಗವತ ಶಿರೋಮಣಿಗಳಾದ ಶುಕಮುನಿಗಳು ಪರೀಕ್ಷಿತ ರಾಜನನ್ನು ಸಂತೋಷದಿಂದ ಅಭಿನಂದಿಸಿದರು. ಆತನ ಅಪೇಕ್ಷೆಯಂತೆ, ಕಲಿಜನಿತವಾದ ಪಾಪವನ್ನು ಕಳೆದುಬಿಡುವ ಶ್ರೀ ಕೃಷ್ಣನ ಚರಿತ್ರೆಯನ್ನು ನಿರೂಪಿಸಲು ಪ್ರಾರಂಭಿಸಿದರು.



# ೪—ಸಂಕ್ಷಿಪ್ಯ ಶಾಸ್ತ್ರಾರ್ಥ ಪ್ರಕರಣ

**॥೪೩॥ ಪಿಬಂತಿ ಯೇ ಭಗವತ ಆತ್ಮನಃ ಸತಾಂ**
**ಕಥಾಮೃತಂ ಶ್ರವಣಪುಟೇಷು ಸಂಭೃತಂ ।**
**ಪುನಂತಿ ತೇ ವಿಷಯವಿದೂಷಿತಾಶಯಂ**
**ವ್ರಜಂತಿ ತಚ್ಚರಣಸರೋರುಹಾಂತಿಕಂ ॥ ೨-೨-೪೦** 2-2-37

ಶ್ರೀ ಶುಕಮುನಿಗಳು ಪರೀಕ್ಷಿತ ರಾಜನು ಕೇಳಿದ ಪ್ರಶ್ನೆಗೆ ಉತ್ತರವನ್ನು ಕೊಡಲು ಪ್ರಾರಂಭಿಸಿದರು – ಎಂದು ಹೇಳಿದ್ದಾಯಿತು. ಅವರು ಆತನಿಗೆ ಯಾವ ವಿಷಯವನ್ನು ನಿವೇದಿಸಿದರೆಂಬುದು ಇನ್ನು ಮುಂದೆ ನಿರೂಪಿಸಲಾಗುವದು. ಆ ಮೊದಲು ಅದನ್ನು ಕೇಳಿ ತಿಳಿದುಕೊಳ್ಳುವ ಅಧಿಕಾರಿಗಳಿಗೆ ಆ ವಿಷಯದ ಬಗ್ಗೆ ಅವರ ಮನಸ್ಸಿನಲ್ಲಿ ಆದರವನ್ನು ಹುಟ್ಟಿಸಲು, ಶ್ರೀ ಹರಿಕಥಾಶ್ರವಣದಿಂದ ಒದಗುವ ಮಹಾಫಲವನ್ನು ಇಲ್ಲಿ ಹೇಳುವರು.

**ಅರ್ಥ :–** ಪರಮಾತ್ಮನ ಲೀಲಾವತಾರಗಳ ಚರಿತ್ರೆಯೆಂಬ ಅಮೃತವನ್ನು ಸಜ್ಜನರ ಮುಖದಿಂದ ಕೇಳಿ, ತಮ್ಮ ಕಿವಿಗಳೆಂಬ ಪಾತ್ರೆಯಲ್ಲಿ ತುಂಬಿಕೊಂಡು ಪಾನಮಾಡುವವರು,–ಶ್ರದ್ಧಾಭಕ್ತಿಗಳಿಂದ ಕೇಳುವವರು,–ವಿಷಯಗಳ ಲೋಲುಪತೆಯಿಂದ ಕಲುಷಿತವಾದ ತಮ್ಮ ಅಂತಃಕರಣವನ್ನು ಪಾವನಗೊಳಿಸುವರು; ಅವರು ಪರಮಾತ್ಮನ ಪಾದಕಮಲಗಳನ್ನು ಸೇರುವರು.

**॥೪೪॥ ಜ್ಞಾನಂ ಯದಾ ಪ್ರತಿನಿವೃತ್ತಗುಣೋರ್ಮಿಚಕ್ರ-**
**ಮಾತ್ಮಪ್ರಸಾದ ಉಭಯತ್ರ ಗುಣೇಷ್ವಸಂಗಃ ।**
**ಕೈವಲ್ಯಸಂಭೃತಪಥಸ್ತ್ವಥ ಭಕ್ತಿಯೋಗಃ**
**ಕೋ ನಿರ್ವೃತೋ ಹರಿಕಥಾಸು ರತಿಂ ನ ಕುರ್ಯಾತ್ ॥**

**೨-೩-೧೨**

ಶ್ರವಣದಿಂದ ಜನಿಸುವ ಅಂತರಂಗಶುದ್ಧಿಯದ್ವಾರಾ ಮುಕ್ತಿಯು ಉಂಟಾಗುವದೆಂದು ಈ ಮೊದಲು ಹೇಳಿದ್ದಾಯಿತು.–ಮುಕ್ತಿಗೆ ಇದಲ್ಲದೆ ಬೇರೊಂದು ದಾರಿಯೂ ಅದೆ–ಎಂಬ ಅಭಿಪ್ರಾಯವನ್ನು ಈ ಶ್ಲೋಕದಲ್ಲಿ ಹೇಳಿರುವರು.

**ಅರ್ಥ:–** ಹರಿಕಥೆಗಳನ್ನು ಕೇಳುವದರಿಂದ, ತನ್ನ ಮನಸ್ಸು ಪ್ರಸನ್ನತೆಯನ್ನು ಪಡೆಯುವದು, ಮನಸ್ಸು ಚಂಚಲವಾಗದಿರುವದರಿಂದ ಉಂಟಾಗುವ

ಸಂತೋಷವೇ ಪ್ರಸನ್ನತೆ. ಆ ಮೇಲೆ, ಈ ಲೋಕ, ಪರಲೋಕಗಳಲ್ಲಿಯ ವಿಷಯಭೋಗದ ಬಗ್ಗೆ ಆಸಕ್ತಿಯು ಇಲ್ಲದಂತಾಗುವದು-ಇದುವೇ ವೈರಾಗ್ಯ. ನಂತರ ಜ್ಞಾನ ಉಂಟಾಗುವದು. ಈ ಜ್ಞಾನವು-ದುಃಖ, ಮೋಹ, ಮುಪ್ಪು, ಮೃತ್ಯು, ಹಸಿವೆ, ನೀರಡಿಕೆಗಳು, ಆರು ತೆರೆಗಳಂತೆ ಮಾನವನನ್ನು ಬಾಧಿಸುವ ಉಪದ್ರವಗಳ ಗುಂಪಿನಿಂದ ಮುಕ್ತವಾಗಿ ಮಾಡುವದು. ಅಗ್ಗೆ, ಈ ಆರೂ ಉಪದ್ರವಗಳು ಬಾಧಿಸುವ ತಮ್ಮ ತಮ್ಮ ಶಕ್ತಿಯನ್ನೇ ಕಳೆದುಕೊಳ್ಳುವವು. ವೈರಾಗ್ಯದಿಂದ ಒದಗುವ ಜ್ಞಾನವು ಈ ಬಗೆಯದು. ಆನಂತರದಲ್ಲಿ ಆತನು ಭಕ್ತಿಯೋಗವನ್ನು ಪಡೆಯುವನು. ಬಹುಜನರು ಓಡಾಡುವ ರಹದಾರಿಯಂತೆ, ಮುಕ್ತಿಗೆ ಭಕ್ತಿಯೋಗವು ನಿರ್ಭಯವಾದ ದಾರಿಯಾಗಿದೆ. ಈ ಮುಂಚೆಯೇ ಆತನಲ್ಲಿ ಭಕ್ತಿ ಇರುವದೆಂಬದು ಸತ್ಯವಾದುದು, ಆದರೂ ಭಕ್ತಿ ಉಂಟಾಗುವದೆಂದು ಮತ್ತೆ ಹೇಳುವಲ್ಲಿ-'ಭಕ್ತಿಯ ಅಭಿವೃದ್ಧಿ-ಹೆಚ್ಚಳವಾಗುವದೆಂಬುದೇ ಅಭಿಪ್ರಾಯವಾಗಿದೆ. ಆದುದರಿಂದ, ಇವೆಲ್ಲ ಕಾರಣಗಳಿಗಾಗಿ, ನಿರ್ಮಲ-ನಿರೋಗಿ-ಯಾದ ಮನಸ್ಸುಳ್ಳ ಯಾವ ಮಾನವನು ಶ್ರೀಹರಿಯ ಕಥೆಗಳಲ್ಲಿ ಆಸಕ್ತಿಯನ್ನು ವಹಿಸಲಾರನು?-ನಿಶ್ಚಿತವಾಗಿಯೂ ವಹಿಸುವನು, ಎಂಬ ಅಭಿಪ್ರಾಯ.

||೪೫|| **ನಿವೃತ್ತತರ್ಷೈರುಪಗೀಯಮಾನಾ-**
**ದ್ಭವೌಷಧಾತ್ ಶ್ರೋತ್ರಮನೋಭಿರಾಮಾತ್ |**
**ಕ ಉತ್ತಮಶ್ಲೋಕಗುಣಾನುವಾದಾತ್**
**ಪುಮಾನ್ ವಿರಜ್ಯೇತ ವಿನಾ ಪಶುಘ್ನಾತ್** ||೧೦-೧-೪

**ಅರ್ಥ**:-ಭಗವಂತನ ಕಥೆಯಲ್ಲಿ ಆಸ್ಥೆಯಿಲ್ಲದಿದ್ದ ಬಹಳ ಜನರು ಇರುವರಲ್ಲ!-ಎಂದರೆ, ಅಂಥವರು ಸಾವಿರಾರು ಜನರು ಇರವಲ್ಲರೇಕೆ! ಹಾಗಾದರೆ ಭಗವಂತನ ಕಥೆಯಲ್ಲಿ ಹೃತ್ಪೂರ್ವಕ ಆಸಕ್ತಿಯುಳ್ಳಜನರು ಯಾರು?-ಎಂದರೆ, ವಿಷಯಗಳಲ್ಲಿ ವಿರತಿಯನ್ನು ಹೊಂದಿದ ವಿರಕ್ತರಾದ ಜನರು-ಎಂದು ಹೇಳುವೆವು ಇಂದ್ರಿಯಗಳಿಗೆ ಭೋಗ್ಯವಸ್ತುವೆನಿಸುವ ವಿಷಯಗಳ ಬಗ್ಗೆ ಅವರು ಆಸ್ಥೆ-ಅಪೇಕ್ಷೆಗಳನ್ನು ಪೂರ್ಣವಾಗಿ ಬಿಟ್ಟುಕೊಟ್ಟಿರುವರು. ಈ ಬಗೆಯ ವಿರಕ್ತರು ಭಗವಂತನ ಗುಣಗಾನವನ್ನು ಮಾಡಿ, ಕೇಳಿ ಆನಂದಿಸುವರು. ಇಂಥವರು ಪಶುಗಳೆ? ಹೌದು, ಸತ್ಯವೇ. ಕುರ್ವನ್ನೇಹ ಕರ್ಮಾಣಿ! ಎಂಬಲ್ಲಿ ವರ್ಣಾಶ್ರಮೋಚಿತವಾದ ವಿಹಿತಕರ್ಮ ವಿಹಿತವಾಗಿದೆ. ಕಾಮ್ಯಕರ್ಮಮಾತ್ರ ನಿಷಿದ್ಧವಾಗಿದೆ. ಆದುದರಿಂದ ಕರ್ಮವನ್ನೇ ತ್ಯಜಿಸುವದು ನಿವೃತ್ತಿಮಾರ್ಗ, ಕರ್ಮಾಚರಣೆ. ಪ್ರವೃತ್ತಿಮಾರ್ಗ-ಎಂಬ ಅಭಿಪ್ರಾಯವು ಸರಿಯಾದುದಲ್ಲ. ಹುಟ್ಟು ಸಾವುಗಳ

ರೂಪವಾದ ಸಂಸಾರವೆಂಬ ರೋಗದಿಂದ ಪಾರಾಗಲು, ಭಗವಂತನ ಗುಣಗಾನವು ಮಹೌಷಧಿಯಾಗಿದೆ; ಕೇಳುವವರ ಮನಸ್ಸಿಗೆ ಅದು ಅಲೌಕಿಕವಾದ ಆನಂದವನ್ನು ಕೊಡುವದು. ಪಶುವಧೆಯನ್ನು ಮಾಡುವವನು ಮಾತ್ರ ಪುಣ್ಯಕರಕೀರ್ತಿಯಾದ ಭಗವಂತನ ಕಥೆಯಲ್ಲಿ ಆಸಕ್ತಿ ವಹಿಸುವದಿಲ್ಲ.

ನಿತ್ಯಪುರುಷಾರ್ಥವಾದ ಮೋಕ್ಷಕ್ಕೆ ಸಾಧನವಾಗಿರುವ ನಿವೃತ್ತಿಮಾರ್ಗವನ್ನು, ನಿಷ್ಕಾಮ ಕರ್ಮಯೋಗವನ್ನು ಇಂಥವರು ಬಿಟ್ಟು ಕೊಡುವರು, ಬಹಳ ಪ್ರಯಾಸ ಹಾಗೂ ಹಣವು ಬೇಕಾಗುವ, ಪಶುವಧ ರೂಪವಾದ ಯಜ್ಞಗಳನ್ನು ಕೈಕೊಳ್ಳುವರು ಈ ಪ್ರವೃತ್ತಿಮಾರ್ಗದಿಂದ, ಇಷ್ಟೊಂದು ಶ್ರಮ ಹಾಗೂ ವೆಚ್ಚ ವಹಿಸಿದರೂ ಅದರಿಂದ ಲಭಿಸುವ ಸುಖವು ಅಸ್ಥಿರವಾದುದು ಆಗಿದೆ. ಈ ಅಭಿಪ್ರಾಯವನ್ನು ಸೂಚಿಸುವದಕ್ಕಾಗಿಯೇ – ವಿಷಯಾಸಕ್ತಿರಹಿತರಾದವರು, ಎಂದು ಹೇಳುವ ಬದಲಾಗಿ – 'ಪಶುಘ್ನರು' – ಪ್ರಾಣಿ ಹಿಂಸೆಯನ್ನು ಮಾಡುವವರು, ಎಂಬ ಪದವನ್ನು ಇಲ್ಲಿ ಉಪಯೋಗಿಸಿರುವರು. ಪ್ರವೃತ್ತಿಮಾರ್ಗದಲ್ಲಿ ನಿರತನಾದವನು ವಿವೇಕಿಯಾಗಿಲ್ಲವೆಂತಲೂ ಸೂಚಿತವಾಗಿದೆ. ಯಜ್ಞಯಾಗಾದಿಗಳನ್ನು ಮಾಡಲೇ ಬಾರದು – ಎಂಬುದನ್ನು ಇಲ್ಲಿ ಹೇಳಿಲ್ಲ. ಆದರೆ, ಕಾಮ್ಯಕರ್ಮಗಳನ್ನು ಮಾಡಬಾರದೆಂಬುದೇ ಮುಖ್ಯ ಅಭಿಪ್ರಾಯವಾಗಿದೆ.

**॥೪೬॥ ಕೋ ನಾಮ ಲೋಕೇ ಪುರುಷಾರ್ಥಸಾರವಿತ್**
**ಪುರಾ ಕಥಾನಾಂ ಭಗವತ್ಕಥಾಸುಧಾಂ ।**
**ಆಪೀಯ ಕರ್ಣಾಂಜಲಿಭಿರ್ಭವಾಪಹಾ-**
**ಮಹೋ ವಿರಜ್ಯೇತ ವಿನಾ ನರೇತರಂ ॥** ೩-೧೩-೫೦ 3-13-50

ಭಗವಂತನ ಕಥಾಶ್ರವಣಕ್ಕೆ ಕಿವಿಗೊಡದವರು, ಆಸಕ್ತರಿಲ್ಲದವರು, ಇಲ್ಲಿ ಹೇಳಿದಂತೆ ಪಶುಸಮಾನರಾಗಿ ಇರುವಲ್ಲರೇಕೆ ! ಆದರೆ ಭಗವತ್ ಕಥೆಯನ್ನು ಒಂದು ಸಲ ಕೇಳಿ ಮತ್ತೆ ಅದರ ಗೊಡವೆಗೆ ಹೋಗದಿರುವ ಜನರೂ ಇರುವರು, ಅವರು ಸಂಸಾರದ ಐಹಿಕ ಸುಖ–ಸಂಪತ್ತುಗಳ ಬೆನ್ನು ಹತ್ತುವರು. ಇಂಥವರ ಬಗ್ಗೆ ಏನೆಂದು ಹೇಳಬೇಕು ?

**ಅರ್ಥ :–** ಪುರಾತನ ಗ್ರಂಥಗಳಾದ ಪುರಾಣಗಳಲ್ಲಿ ಹೇಳಿರುವ ಭಗವತ್‌ಕಥೆಯೆಂಬ ಅಮೃತವನ್ನು ಕಿವಿಗಳಿಂದ ಕೇಳಿ, ಅದರ ರುಚಿಯನ್ನು ಸವಿದು, ತಿಳಿದುಕೊಂಡವನಾದ ಯಾವ ಮಾನವನು ಅದರಲ್ಲಿ ಆಸಕ್ತಿಯನ್ನು ವಹಿಸದೆ ಇರಬಲ್ಲನು? ಪುರಾಣಗಳಲ್ಲಿ ನಿರೂಪಿತವಾಗಿರುವ ಎಲ್ಲ ಕಥೆಗಳ ಸಾರಸರ್ವಸ್ವವೂ ಭಗವತ್‌ಕಥೆ

ಗಳಲ್ಲಿ ತುಂಬಿದೆ, ಅದು ಭವಬಂಧನದಿಂದ ಬಿಡುಗಡೆಯನ್ನು ತಂದು ಕೊಡಬಲ್ಲದು, ಅಮೃತದ ಸವಿಯನ್ನು ಒಮ್ಮೆ ಅನುಭವಿಸಿದ ವ್ಯಕ್ತಿಯು ಎಂದಿಗಾದರೂ ಅದನ್ನು ಬಿಟ್ಟುಕೊಡಬಹುದೆ ? ಭಗವತ್‌ಕಥಾಮೃತವೂ ಹೀಗೆಯೇ ! ಒಮ್ಮೆ ಅದರ ಮಾಧುರ್ಯವನ್ನು ಅನುಭವಿಸಿದ ಮೇಲೆ ಮತ್ತೆ ಎಂದಿಗೂ ಅದನ್ನು ಯಾರೂ ಬಿಟ್ಟು ಕೊಡಲಾರರು. ಅದನ್ನು ಬಿಟ್ಟುಕೊಡುವವರು ಮನುಷ್ಯರೇ ಅಲ್ಲ.

**||೪೭|| ನಿಗಮಕಲ್ಪತರೋರ್ಗಲಿತಂ ಫಲಂ**
**ಶುಕಮುಖಾದಮೃತದ್ರವಸಂಯುತಂ |**
**ಪಿಬತ ಭಾಗವತಂ ರಸಮಾಲಯಂ**
**ಮುಹುರಹೋ ರಸಿಕಾ ಭುವಿ ಭಾವುಕಾಃ || ೧-೧-೩**

ಭಗವತ್‌ಕಥೆಯನ್ನು ಕೇಳುವದರಿಂದ ದೊರಕುವ ಫಲವನ್ನು ಹೇಳಿ ಅದರಲ್ಲಿ ಜನರಿಗೆ ಆದರ ಉಂಟುಮಾಡಿರುವರು. ಹೀಗೆ ಆದರ ಉಂಟಾದ ಜನರಿಗೆ ಶ್ರೀಮದ್ ಭಾಗವತಶ್ರವಣದ ಬಗ್ಗೆ ಏನೂ ವಿಳಂಬವಾಗದೆ ಪ್ರವೃತ್ತಿ ಉಂಟಾಗ ಬೇಕೆಂಬ ಉದ್ದೇಶದಿಂದ, ಶ್ರೀಮದ್ ಭಾಗವತ ಗ್ರಂಥದ ಹಿರಿಮೆಯನ್ನು ಎತ್ತಿ ತೋರಿಸಿ, ಆ ಗ್ರಂಥದ ಶ್ರವಣಾದಿಗಳನ್ನು ಮಾಡಲು ಅವರಲ್ಲಿ ಒಲವನ್ನು ಹುಟ್ಟಿಸುತ್ತಾರೆ.

ಅರ್ಥ :– ಭಗವತ್‌ಸೇವೆಗೆ ಸಾಧನಗಳೆನಿಸಿದ ಸಕಲ ವಸ್ತುಗಳ ಬಗ್ಗೆ, ಈ ಭರತ ಖಂಡದ ಅನೇಕ ಶ್ರದ್ಧಾಳುಗಳಾದ ಭಾವಿಕ ಜನರು ಅಖಂಡವಾಗಿ, ನಿರಾತಂಕವಾಗಿ ಕುತೂಹಲಿಗಳಾಗಿರುವರು: ಇವರೇ 'ಭಾವುಕರು'–ಇದಲ್ಲದೆ ಈ ಶ್ರದ್ಧಾಳುಗಳು ಸಾರವನ್ನೇ, ಸತ್ವಯುಕ್ತವಾದುದನ್ನೇ ಸ್ವೀಕರಿಸುವರು, ಅಂತೆಯೇ 'ರಸಿಕರು' ಇಂಥ ಜನರಿಗೆ ಈ ಶ್ಲೋಕದಲ್ಲಿ ಕರೆ ಇರುತ್ತದೆ.

'ಭಾವುಕರಾದ, ರಸಿಕರಾದ ಮಹನೀಯರೇ! ನಾನು ಹೇಳುವ ಈ ಮಾತನ್ನು ಆದರಪೂರ್ವಕ ಆಲಿಸಿರಿ ವೇದಶಾಸ್ತ್ರವೆಂಬ ಕಲ್ಪವೃಕ್ಷಕ್ಕೆ 'ಭಾಗವತ' ವೆಂಬ ಒಂದು ಹಣ್ಣು ಇರುವದು. ಭಗವಂತನು ಆ ಹಣ್ಣನ್ನು ಮೊದಲು ಕೆಳಗೆ ಉದುರಿ ಬೀಳುವಂತೆ ಮಾಡಿದನು. ಪಕ್ವವಾದ, ರಸಭರಿತವಾದ ಹಣ್ಣನ್ನೇ ಗಿಳಿಯು ಕಚ್ಚುವಂತೆ, ಭಾಗವತವೆಂಬ ಪಕ್ವವಾದ ಹಣ್ಣಿನ ಅಮೃತ ಸದೃಶವಾದ ರಸವನ್ನು ಶ್ರೀ ಶುಕಮುನಿಗಳು ತಾವು ಸವಿದು ಹೊರಹೊಮ್ಮಿಸಿದರು. ಶ್ರೀ ಮದ್ಭಾಗವತದ ಅಮೃತ ರಸವನ್ನು ಪ್ರತಿಕ್ಷಣವೂ ಸೇವಿಸಿರಿ, 'ಆ–ಲಯಂ'– ಲಿಂಗಭಂಗವಾಗುವವರೆಗೆ, ಮುಕ್ತಿಯ ಬಾಗಿಲು ತೆರೆಯುವವರೆಗೆ ಸೇವಿಸಿರಿ.

'ಶುಕ'ವೆಂಬ ಶಬ್ದಕ್ಕೆ ಈ ಶ್ಲೋಕದಲ್ಲಿ ಎರಡು ಅರ್ಥಗಳು, ಶುಕವೆಂದರೆ ಗಿಳಿ, ಶುಕವೆಂದರೆ ಶ್ರೀ ಶುಕಮುನಿಗಳು.

'ಎಲ್ಲರೂ ರಸದ ಪಾನ ಮಾಡಿರಿ'-ಎಂದು ಇಲ್ಲಿ ಹೇಳಿದೆ. ಇದು ಹೇಗೆ ಸುಸಂಗತ ವಾಗುತ್ತದೆ? ಏಕೆಂದರೆ, ಯಾವುದೇ ಒಂದು ಹಣ್ಣಿನಲ್ಲಿ ಒಂದೇ ಒಂದು ಬಗೆಯ ರಸವಿರುವದು. ಮಧುರ, ಹುಳಿ ಮುಂತಾದ ಆರು ಬಗೆಯ ರಸಗಳಲ್ಲಿ ಭಾಗವತದ ಅಮೃತರಸವು ಯಾವುದೇ ಒಂದು ಬಗೆಯದಾಗಿರಬೇಕು. ಈ ರಸವನ್ನು ಪಾನ ಮಾಡ ಬಯಸುವ, ಜಗತ್ತಿನಲ್ಲಿಯ ಭಾವುಕರಾದ ರಸಿಕರು ಬಹು ಸಂಖ್ಯಾಕರು, ಮೇಲಾಗಿ ಭಿನ್ನಭಿನ್ನ ರಸಗಳಲ್ಲಿ ಅವರು ಅಭಿರುಚಿಯುಳ್ಳವರು. ತಮತಮಗೆ ಅಪೇಕ್ಷಿತವಾದ ರಸವಿರದಿದ್ದರೂ ಒಂದೇ ಬಗೆಯ ರಸವನ್ನು ಅಖಂಡವಾಗಿ ಆಮರಣ ಸೇವಿಸಿರಿ-ಎಂದು ಎಲ್ಲರಿಗೆ ಹೇಳುವದು ಅನುಚಿತವಾಗಬಹುದು. ಒಂದು ಸಲ ಮಾತ್ರ ಅವರು ಯಾವದೊಂದು ರಸವನ್ನು ಹೇಗಾದರೂ ಆಸ್ವಾದಿಸಬಹುದು.- ಸರಿ ನೀವು ಎತ್ತಿದ ಈ ಆಕ್ಷೇಪವು ಶ್ರೀಮದ್ ಭಾಗವತಕ್ಕೆ ಮಾತ್ರ ಖಂಡಿತವಾಗಿ ಅನ್ವಯಿಸುವದಿಲ್ಲ. ಏಕೆಂದರೆ, ಶ್ರೀಮದ್ ಭಾಗವತವೆಂಬ ರಸಭರಿತವಾದ ಈ ಹಣ್ಣಿನಲ್ಲಿ ಎಲ್ಲರಿಗೂ ತಮತಮಗೆ ಅಪೇಕ್ಷಿತವಾಗಿರುವ ವಿಧವಿಧದ ಅನಂತ ರಸಗಳು ತುಂಬಿ ಕೊಂಡಿರುವವು. ಏಕೆಂದರೆ, ಭಾಗವತವು ನಿಖಿಲ ನಿಗಮಗಳೆಂಬ, ಬಯಸಿದ್ದನ್ನು ಕೊಡುವ ಕಲ್ಪವೃಕ್ಷದ ಶ್ರೇಷ್ಠವಾದ ಹಣ್ಣು ಆಗಿದೆ. ನಿಮ್ಮ ಆಕ್ಷೇಪಕ್ಕೆ ಇಲ್ಲಿ ಸ್ಥಾನವಿಲ್ಲ. ಅಂತೆಯೆ, ಭಾಗವತವೆಂಬ ಈ ಫಲವು ಅತ್ಯಂತ ಸೋಜಿಗವಾದುದು,- ಎಂಬುದನ್ನು ಸೂಚಿಸಲು 'ಅಹೊ'! -ಎಂದು ಉದ್ಗಾರವಿರುವದು.

ಹಣ್ಣು ಗಿಡದ ಸರ್ವಸ್ವವಾಗಿದೆ. ರಸಭರಿತ ಪಕ್ವಹಣ್ಣನ್ನು ಗಿಳಿಯು ಕಚ್ಚಲು, ರಸವು ಹೊರಸೂಸುವದು; ಈ ಹಣ್ಣು ಕೆಳಗೆ ಭೂಮಿಯ ಮೇಲೆ ಬೀಳಲು ಅದರ ರಸವು ಪ್ರವಾಹದಂತೆ ಹರಿಯತೊಡಗುವದು. ಇಲ್ಲಿಯ ಸಂದರ್ಭದಲ್ಲಿ, ಶ್ರೀವೇದವ್ಯಾಸರು ವೇದಗಳಲ್ಲಿಯ ಸಾರವನ್ನು ಸಂಗ್ರಹಿಸಿ ಭಾಗವತನ್ನು ರಚಿಸಿದರು; ಶುಕಮುನಿಗಳಿಗೆ ಅದನ್ನು ಬೋಧಿಸಿದರು. ಅಧ್ಯಯನ ಕಾಲದಲ್ಲಿ ಚತುರವಾದ ಪ್ರಶ್ನೆ ಉಪಪ್ರಶ್ನೆಗಳಿಂದ ಅದರಲ್ಲಿಯ ವಿಷಯಗಳನ್ನು ನಿಶದಗೊಳಿಸಿದರು. ಆನಂತರ ಕುರುಕ್ಷೇತ್ರದಲ್ಲಿ ಪರೀಕ್ಷಿತರಾಜನಿಗೆ ಅದನ್ನು ಹೆಚ್ಚುತಿಳಿಯಾಗಿ, ಸುಬೋಧವಾಗಿ ಮಾಡಿದರು.

||೪೮|| **ಶೃಣ್ವನ್ ಗೃಣನ್ ಸಂಸ್ಮರಯಂಶ್ಚ ಚಿಂತಯನ್**
**ನಾಮಾನಿ ರೂಪಾಣಿ ಚ ಮಂಗಲಾನಿ ತೇ |**
**ಕ್ರಿಯಾಸು ಯಸ್ತ್ವಚ್ಚರಣಾರವಿಂದಯೋಃ**
**ರಾವಿಷ್ಟಚಿತ್ತೋ ನ ಭವಾಯ ಕಲ್ಪತೇ** ||೧೦-೩-೩೮

2

ಭಾಗವತಗ್ರಂಥದ ಬಗ್ಗೆ ಭಾವಿಕರಲ್ಲಿ ಆಸ್ಥೆಯನ್ನು [illegible] ಸಂಕ್ಷೇಪವಾಗಿ ತಿಳಿದುಕೊಂಡವರಿಗೆ ಮಾತ್ರ ವಿವರವಾಗಿ [illegible] ಲವಲವಿಕೆಯೂ ಉಂಟಾಗುವದು. ಅಂಥವರಿಗೆ ಮಾತ್ರ ವಿವರವಾಗಿ [illegible] ಹೇಳುವದು ಉಚಿತವಾದುದು. ಅದಕ್ಕಾಗಿ, ಮೊದಲು ಭಾಗವತದ [illegible] ವನ್ನು ಇಲ್ಲಿ ಸಂಕ್ಷೇಪವಾಗಿ ಹೇಳಿರುವರು. ಪರಮಾತ್ಮನ ಅವ[illegible]ಕ್ಕಾಗಿ ಬ್ರಹ್ಮಾದಿ ದೇವತೆಗಳು ತಮ್ಮ ಪ್ರಾರ್ಥನೆಯಲ್ಲಿ ಹೀಗೆ ಹೇಳಿರುವರು.

**ಅರ್ಥ** :– 'ತಾನು ಕೇಳಬೇಕು, ಇತರರು ಕೇಳುವಂತೆ ಮಾಡಬೇಕು'– ಎಂದು, ಈ ಶ್ಲೋಕದಲ್ಲಿ ಹೇಳಿದ ಮಾತುಗಳೆಲ್ಲ ಸ್ವಂತಕ್ಕೂ ಇತರರಿಗೂ ಉಭಯತಃ ಅನ್ವಯಿಸುವವು. ಹರಿಯೆ! ತಾನು ಮಾಡುತ್ತಿರುವ ನಿತ್ಯದ ಕಾರ್ಯ ಗಳಲ್ಲಿ ಯಾವ ಮಾನವನ ಮನಸ್ಸು ನಿನ್ನ ಪಾದಕಮಲದಲ್ಲಿ ವಿಲೀನವಾಗು ವದೋ, ಅವನು ಸಂಸಾರಬಂಧದಲ್ಲಿ ಸಿಲುಕಲಾರನು. ಅಂಥ ಮಾನವನು ಮಂಗಳಕರವಾದ ನಿನ್ನ ನಾಮುಗಳನ್ನು ಸ್ವತಃ ತಾನು ಕೇಳುವದಲ್ಲದೆ, ಇತರರೂ ಕೇಳುವಂತೆ ಮಾಡುವನು. ಅವುಗಳ ಉಚ್ಚಾರವನ್ನು ತಾನು ಮಾಡುವದಲ್ಲದೆ, ಇತರರಿಂದಲೂ ಮಾಡಿಸುವನು. ನಿನ್ನ ಮಂಗಳಕರವಾದ ರೂಪಗಳನ್ನು ತಾನು ಕಣ್ಮುಂದೆ ತಂದುಕೊಳ್ಳುವನು. ಇತರರಿಂದಲೂ ಹಾಗೆ ಮಾಡಿಸುವನು; ಅವುಗಳನ್ನು ಕುರಿತು ತಾನು ಸ್ವತಃ ಧ್ಯಾನಿಸುವನು, ಇತರರನ್ನೂ ಹಾಗೆ ಮಾಡಲು ಹಚ್ಚುವನು:–

– ಪ್ರತಿ ದಿನವೂ ಆದರ ಪೂರ್ವಕವಾಗಿ ಶ್ರೀ ಹರಿ ಕಥಾ ಶ್ರವಣವನ್ನು ಮಾಡುತ್ತ, ಶ್ರೀ ಹರಿಯ ಚರಣಕಮಲದಲ್ಲಿ ತನ್ನ ಮನಸ್ಸು ಪೂರ್ಣವಾಗಿ ನೆಲಿಸುವಂತೆ ಮಾಡುವ ಮಾನವನು ಪುರುಷಾರ್ಥವನ್ನು ಪಡೆಯುವನು, ಶ್ರೀ ಪರೀಕ್ಷಿತನ ಸಂಕ್ಷಿಪ್ತ ಪ್ರಶ್ನೆಗೆ ಶ್ರೀ ಶುಕರು ಕೊಟ್ಟ ಸಂಕ್ಷಿಪ್ತ ಉತ್ತರದಿಂದ ಈ ಮಾತು ಶಾಸ್ತ್ರನಿರ್ಣೀತವಾದುದೆಂಬುದು ಸ್ಪಷ್ಟವಾಗುತ್ತಿದೆ.

'ಮಾನವರು ನಿರಂತರವಾಗಿ ಯಾವುದನ್ನು ಕೇಳಬೇಕು, ಜಪಿಸಬೇಕು, ಧ್ಯಾನಿಸಬೇಕು, ಪೂಜಿಸಬೇಕು?– ಅಥವಾ ಇದಕ್ಕೆ ವಿರುದ್ಧವಾದುದು ಯಾವುದು?'– ಎಂಬುದು ಪರೀಕ್ಷಿತನ ಪ್ರಶ್ನೆ.– 'ಸರ್ವಾಂತರ್ಯಾಮಿಯಾದ, ಸರ್ವೇಶ್ವರನಾದ ಶ್ರೀ ಹರಿಯನ್ನು ಕುರಿತೇ ಭಯರಹಿತವಾದ ಮೋಕ್ಷವನ್ನು ಅಪೇಕ್ಷಿಸುವ ಮಾನ ವನು ಶ್ರವಣ, ಕೀರ್ತನ ಹಾಗೂ ಸ್ಮರಣಗಳನ್ನು ಮಾಡಬೇಕು.' – ಇದು ಆ ಪ್ರಶ್ನೆಗೆ ಶುಕಮುನಿಗಳ ಸಂಕ್ಷೇಪವಾದ ಉತ್ತರ. ಇದಲ್ಲದೆ, ಜ್ಞಾನಿಗಳಿಗೆ ಇದೇ

ಅರ್ಥವೇ ಅನುಭವಸಿದ್ಧವಾದುದು. ಮಾನವರು ಯಾವುದರ ಪ್ರಾಪ್ತಿಗಾಗಿ ಹಂಬಲಿಸಬೇಕೋ, ಅದುವೇ ಪುರುಷಾರ್ಥ. ಅದೆಂದರೆ, ಮೊದಲಿಗೆ ದುಃಖದಿಂದ ಬಿಡುಗಡೆ. ತಾವು ಹೊತ್ತಿದ್ದ ಭಾರವನ್ನು ಇಳಿಸಬೇಕೆಂಬುದೇ, ಭಾರ ಹೊತ್ತವರು ಮೊದಲು ಬಯಸುವದು, ಬೇಡಿಕೊಳ್ಳುವದು. ಶ್ರವಣಾದಿಗಳಿಂದ ಭಗವಂತನಲ್ಲಿ ಮನಸ್ಸು ಸ್ಥಿರವಾಗಿ ನೆಲಿಸಿದರೆ, ದುಃಖ ನಿವೃತ್ತಿಯು ನಿಶ್ಚಿತವಾಗಿ ಆಗುವದು. ಅಂಥವನಿಗೆ ಸಂಸಾರದ ಬಾಧೆಯು ಎಂದಿಗೂ ಆಗುವದಿಲ್ಲವೆಂಬುದು ಜ್ಞಾನಿಗಳು ಸ್ವಾನುಭವದಿಂದ ಕಂಡುಕೊಂಡ ಸಂಗತಿ. ಅಥವಾ, ಶ್ರೀಮದ್ ಭಾಗವತದಲ್ಲಿ ಭಕ್ತಿಯೋಗವೇ ಮುಕ್ತಿಗೆ ಸಾಧನವೆಂದು ಪ್ರತಿಪಾದಿಸಲ್ಪಡುತ್ತದೆ. ಅದರಂತೆಯೇ ಜ್ಞಾನಯೋಗ, ಕರ್ಮಯೋಗಗಳೂ ಕೂಡ ಈ ಮೂರು ಯೋಗಗಳಲ್ಲಿ ಯಾವುದು ಹೆಚ್ಚು ಶ್ರೇಷ್ಠ ?— ಭಗವಂತನಲ್ಲಿ ಮನಸ್ಸು ನೆಲೆಸುವಂತೆ ಮಾಡುವ ಯೋಗವೇ ಅತಿ ಶ್ರೇಷ್ಠವಾದುದು, ಭಕ್ತಿಯೋಗವೆ ಈ ಕಾರ್ಯವನ್ನು ಹೆಚ್ಚಾಗಿ ಮಾಡುವದು. ಅದರಿಂದ ಭಕ್ತಿಯೋಗವನ್ನೇ ಆದರದಿಂದ ಅನುಸರಿಸಬೇಕು. ಎಲ್ಲ ಬಗೆಯ ಐಹಿಕ ವಿಷಯಗಳಿಂದ ಮನಸ್ಸನ್ನು ಎಳೆದು ತಂದು, ಭಗವಂತನಲ್ಲಿ ನೆಲೆಸುವಂತೆ ಮಾಡಲು ಭಕ್ತಿಯೋಗದ ವಿನಹ ಕಲ್ಯಾಣಕರವಾದ ಬೇರೆ ಮಾರ್ಗವಿಲ್ಲ. ಅಥವಾ ಭಕ್ತಿಯೋಗಕ್ಕೆ ಸಾಧನರೂಪವಾಗಿ ಮೂವತ್ತು ಪ್ರಕಾರದ ಭಾಗವತ ಧರ್ಮಗಳು ಭಾಗವತದಲ್ಲಿ ಪ್ರತಿಪಾದಿಸಲ್ಪಡುತ್ತವೆ. ಅಂತೆಯೆ, ಸಕಲ ಧರ್ಮದ ರಕ್ಷಣೆಗಾಗಿ, 'ಅಖಿಲ ಧರ್ಮಗುಪ್ತಯೆ' – ಎಂದು ಪ್ರಾರಂಭದಲ್ಲಿಯೇ ಹೇಳಿರುವರು. ಭಕ್ತಿಯೋಗದ ಬಗ್ಗೆ ಆದರವನ್ನು ಉಂಟುಮಾಡಲು, – ಶ್ರೀ ಹರಿಯಲ್ಲಿ 'ಆವಿಷ್ಟ ಚಿತ್ತತ್ವ'ವನ್ನು ಇಲ್ಲಿ ಪ್ರಧಾನವಾಗಿ ಹೇಳಿರುವರು. ಉಳಿದ ಯೋಗಗಳಿಂದಲೂ ಈ ಕರ್ಮ ಸಾಧಿಸುವಂತಿದ್ದರೆ, ಭಕ್ತಿಯೋಗವೇ ಏಕೆ ಶ್ರೇಷ್ಠ ? ಭಗವಂತನ ಬಗ್ಗೆ ಮನಸ್ಸಿನ ಒಲವನ್ನು, ಉತ್ಸುಕತೆಯನ್ನು ಭಕ್ತಿಯೋಗವೇ ಅತ್ಯಧಿಕವಾಗಿ ಮಾಡುವದು, ಅಂತೆಯೇ ಅದಕ್ಕೆ ಪ್ರಾಶಸ್ತ್ಯ.

ಅಥವಾ, ಮುಕ್ತಿಗೆ ದಾರಿಗಳಾದ ಎಲ್ಲ ಸಾಧನಗಳಲ್ಲಿ ಭಕ್ತಿಯು ಇರುತ್ತದೆ, ಸಾಧ್ಯವೂ – ಪಡೆಯಬೇಕಾದ ವಸ್ತುವೂ – ಆಗಿದೆ. ಭಾಗವತ ಧರ್ಮಗಳ ಅನುಷ್ಠಾನದಿಂದ ದೊರೆಯುವ ಭಕ್ತಿಯೋಗವು ಎಂಥದು ? ಭಗವಂತನ ಪಾದಾರವಿಂದದಲ್ಲಿ ಚಿತ್ತವನ್ನು ಲೀನಗೊಳಿಸುವ ಭಕ್ತಿಯೋಗವೇ ಭಾಗವತ ಧರ್ಮಾನುಷ್ಠಾನದಿಂದ ದೊರೆಯುವಂತಹದು.

ಮೋಕ್ಷಕ್ಕೆ ಸಾಧನವಾದ ಭಕ್ತಿಯೋಗದ ಲಕ್ಷಣವನ್ನು ಹೀಗೆ ವಿವರಿಸುವರು ಗುಣಪೂರ್ಣನಾದ ಪರಮಾತ್ಮನ ಗುಣಗಳು ಕಿವಿಗೆ ಬಿದ್ದಾಯಿತು. ಗಂಗಾ

ನದಿಯ ನೀರು ಸಮುದ್ರವನ್ನು ಸೇರುವಂತೆ, ಚಿತ್ತವೃತ್ತಿಯು ಭಗವಂತನ ಪಾದಾರ ವಿಂದದಲ್ಲಿ ಅಡೆತಡೆಯಿಲ್ಲದೆ ಲೀನವಾಗಬೇಕು. ಮುಕ್ತಿಸಾಧನವಾದ ಭಕ್ತಿ ಯೋಗಕ್ಕೆ ಇದೇ ಲಕ್ಷಣವಾಗಿದೆ'. ಈ ಬಗೆಯ ಭಕ್ತಿಯೋಗಕ್ಕೆ ಸಾಧನವಾಗಿರುವ ಭಾಗವತಧರ್ಮವು ಹೇಗಿರುವದು?- ಅದನ್ನು ತಿಳಿದುಕೊಳ್ಳಬೇಕೆಂಬ ಶ್ರೋತೃ ಗಳ ಆತುರತೆಯನ್ನು ಪೂರ್ತಿಗೊಳಿಸಲು,-ನಿದರ್ಶನಕ್ಕಾಗಿ ಮಾತ್ರ ಕೆಲವೊಂದು ಭಾಗವತ ಧರ್ಮಗಳನ್ನು ಹೇಳುವರು.-ಶ್ರವಣ, ಸಂಕೀರ್ತನ, ಮುಂತಾಗಿ ಇಲ್ಲಿ ಹೇಳಿರುವಗಳೇ ಭಾಗವತಧರ್ಮಗಳು-ಲೌಕಿಕವಿಷಯಕ್ಕೆ ಮಾತನಾಡುವದು, ಇದೇಮುಂತಾದ ಸಕಲಕಾರ್ಯಗಳನ್ನು ಮಾಡುತ್ತಿರುವಾಗ್ಗೆ ಭಗವಚ್ಚರಣದಲ್ಲಿ ಮನಸ್ಸು ಲೀನವಾಗಿರುವದೇ ವೈರಾಗ್ಯವು. ಈ ರೀತಿಯಿಂದ ನಡೆದರೆ, ಮನಸ್ಸು ಬೇರೆವಿಷಯಗಳಲ್ಲಿ ತೊಡಗದಿದ್ದರಾಯಿತು. ಅದು ಭಗವತ್ ಚರಣದಲ್ಲಿಯೇ ಲೀನ ವಾದಂತಿರುವದು. ಮನಸ್ಸು ಭಗವಂತನನ್ನು ಬಿಟ್ಟು ಉಳಿದ ವಿಷಯಗಳಲ್ಲಿ ಆಸಕ್ತಿಯನ್ನು ತಾಳದಿರುದೇ ವೈರಾಗ್ಯವೆನಿಸುವದು. ಶ್ರೀಹರಿಪಾದದಲ್ಲಿ ಚಿತ್ತವು 'ಆವಿಷ್ಟ'ವಾಗಬೇಕು,-ಎಂದು ಹೇಳಿದೆ. ಆದರಿಂದ ಒದಗುವ ಶ್ರೀಹರಿಯ ಅನು ಗ್ರಹವು ಎಲ್ಲಸಾಧನಗಳಲ್ಲಿ ಹಿರಿದಾದ ಸಾಧನ ಮಾತ್ರವಲ್ಲದೆ, ಪ್ರಾಪ್ಯವಸ್ತು- ಸಾಧ್ಯವೂ ಆಗಿದೆ-ಎಂಬುದೇ ಇಲ್ಲಿ ಸೂಚಿತವಾಗಿದೆ.

ಅಥವಾ, ಭಾಗವತಧರ್ಮದ ಅನುಷ್ಠಾನದಿಂದ ಜನಿಸುವ ಜ್ಞಾನವು ಈ ದೃಶ ವಾದುದು-ಎಂಬುದನ್ನು ತೋರಿಸಿರುವರು - ಶ್ರವಣಾದಿಗಳನ್ನು ಮಾಡುವಾಗಲು ಭಗವಂತನ ಪಾದಕಮಲದಲ್ಲಿ ಭ್ರಮರದಂತೆ ಚಿತ್ತವು ಲೀನವಾಗುವದೇ, ತನ್ಮ ಯವಾಗುವದಕ್ಕೇನೆ 'ಜ್ಞಾನ' ವೆಂದು ಹೇಳುವರು. - ಲೀನವಾಗಿರುವದಕ್ಕೇನೆ,- ಎಂದು ಜೋರಾಗಿ ಹೇಳುವದರಿಂದ, ಉಳಿದ ವಿಷಯಗಳಲ್ಲಿ ಮನಸ್ಸು ಹರಿಯಂ ವದಿಲ್ಲವೆಂಬುದು ಸೂಚಿತವಾಗುವದಂ.

'ನಾನೇ ಈ ಕಾರ್ಯವನ್ನು ಮಾಡುವೆನು', - ಎಂದು ಸಾಮಾನ್ಯವಾಗಿ ಸಕಲರು ಹೇಳಿಕೊಳ್ಳುವದುಂಟು. ಆದರೆ ಜ್ಞಾನಿಯಾದವನು - 'ನಾನು'-ಎಂಬ ಅಂಶವನ್ನು ಪೂರ್ಣವಾಗಿ ಬಿಟ್ಟುಕೊಟ್ಟು, 'ಶ್ರೀ ಹರಿಃಕರ್ತಾ' - ಶ್ರೀಹರಿಯೆ ಮಾಡುವನು-ಎಂದು ಶ್ರೀಹರಿಯಲ್ಲಿಯೆ ಮುಖ್ಯಕರ್ತೃತ್ವದ ಅನುಸಂಧಾನವನ್ನು ಮಾಡುವನು. ತನ್ನಕೃತಿಗಾಗಿ ಯಾವ ಫಲವನ್ನೂ ಬಯಸುವದಿಲ್ಲ. ಮಾಡುವ ಸಕಲ ಕೃತಿಗಳೂ ಶ್ರೀಹರಿಪೂಜಾತ್ಮಕವಾದವು. ಶ್ರೀಹರಿಪೂಜೆಯೆ ಅವುಗಳಿಗೆ ಉದ್ದೇಶ ಅಂತೆಯೆ, ಊಟಮಾಡಿದಮೇಲೆ- 'ಶ್ರೀವಿಷ್ಣುಪೂಜಾಸ್ತು'-ಇದು ಶ್ರೀ ಹರಿಯ ಪೂಜೆ ಯಾಗಲಿ,-ಎಂದು ಜ್ಞಾನಿಗಳು ಇಂದಿಗೂ ಹೇಳುವದುಂಟು.

'ಶ್ರೀಹರಿಯೆ ಮಾಡುವವನು, ಇದು ಶ್ರೀಹರಿಯ ಪೂಜೆ'-ಎಂದು ಕರ್ತೃತ್ವ-ಪೂಜ್ಯತ್ವಧರ್ಮಗಳಿಂದ ತಾನು ಮಾಡುವ ಪ್ರತಿಯೊಂದು ಕೃತಿಯಲ್ಲಿಯೂ ಶ್ರೀ ಹರಿಯನ್ನೇ ಸ್ಮರಿಸುವ ಜ್ಞಾನವು ಭಾಗವತ ಧರ್ಮಾನುಷ್ಠಾನದಿಂದ ಲಭಿಸುವದು.

ಅಥವಾ, ಶ್ರೀ ಹರಿಚರಣದಲ್ಲಿ 'ಆವಿಷ್ಟಚಿತ್ತ'ನಾದವನಿಗೆ, ಸಂಸಾರದ ಬಾಧೆಯಾಗುವದಿಲ್ಲವೆಂದು ಹೇಳಿದೆ. ಸಂಸಾರಭಯವನ್ನು ನೀಗಿಸುವ, ಶ್ರೀಹರಿಯಲ್ಲಿ ಈ 'ಆವಿಷ್ಟ ಚಿತ್ತತ್ವವು'-ಮಂದಭಾಗ್ಯರಾದ ನಮಗೆ ಹೇಗೆ ಸಾಧಿಸುವದು?-ಎಂದು ಅಧಿಕಾರಿಗಳಾದ ವ್ಯಕ್ತಿಗಳು ವಿಚಾರಿಸಬಹುದು.-ಅದಕ್ಕೆ 'ಶೃಣ್ವನ್ ....' ಎಂಬ ಮಾತುಗಳಲ್ಲಿ ಉತ್ತರವಿದೆ: ಭಗವಂತನ ಮಂಗಳಕರವಾದ ನಾಮುಗಳನ್ನು ಕೇಳುವಾಗ, ರೂಪಗಳನ್ನು ಸ್ಮರಿಸುವಾಗ, ಮನಸ್ಸು ಹೇಗೆ ಪರಮಾತ್ಮನ ಪಾದ ಕಮಲಗಳಲ್ಲಿ(ಆವಿಷ್ಟ) ಲೀನವಾಗುವದೋ, ಅದೇ ರೀತಿಯಲ್ಲಿ ಬೇರೆ ಯಾವುದೇ ಕೆಲಸ ಮಾಡುವಾಗಲೂ ಶ್ರೀ ಹರಿ ಪಾದಕಮಲದಲ್ಲಿ ಮನಸ್ಸುವಿಲೀನವಾಗಬಲ್ಲದು. ಒಟ್ಟಿನಲ್ಲಿ ಹೀಗೆ ಹೇಳಿದೆ :- ಭಗವಂತನ ಗುಣ, ಲೀಲೆ ಹಾಗೂ ನಾಮುಗಳನ್ನು ಕೇಳುವಾಗ್ಗೆ, ಶ್ರೀ ಕೃಷ್ಣಾದಿರೂಪಗಳನ್ನು ಸ್ಮರಿಸುವಾಗ್ಗೆ - ಆತನ ಪಾದಕಮಲದಲ್ಲಿ ಚಿತ್ತವು ಹರಿಯುವದು ಜ್ಞಾನಿಗಳಿಗೆ ಅನುಭವಸಿದ್ಧವಾದ ಸಂಗತಿ. ಅಂತೆಯೆ ಬೇರೆ ವಿಷಯದಕಡೆಗೆ ಹರಿಯುವ ಮನಸ್ಸಿನ ಒಲವನ್ನು ಭಗವಂತನು ಬಲುಮೆಯಿಂದ ಎಳೆದುಕೊಂಡು ಬರುವನೆಂದು ಸೂಚಿಸಲು, ಆತನ ರೂಪ-ಗುಣಗಳು ಮಂಗಳಕರವಾದವು, ಎಂದು ಹೇಳಿರುವರು. ಈ ರೀತಿಯಲ್ಲಿ ಬಹು ಕಾಲದವರೆಗೆ, ಶ್ರವಣಾದಿಗಳ ರೂಢಿಯನ್ನು ಮಾಡಿಕೊಂಡ ಚಿತ್ತವು, ಆ ಸಂಸ್ಕಾರ ಬಲದಿಂದ ಉಳಿದ ಕೃತಿಗಳನ್ನು ಮಾಡುವಾಗಲೂ ಭಗವತ್ ಪಾದದಲ್ಲಿ ಲೀನವಾಗಬಲ್ಲದು. ಸುರುಳಿಯಾದ ಚಾಪಿಯು ದೀರ್ಘಕಾಲದ ಯತ್ನದಿಂದ ಸರಳವಾಗಬಲ್ಲದು.

ಅಥವಾ, ರೂಢಿಯ ಅಭಾವದಿಂದ ಶ್ರವಣಾದಿಗಳನ್ನು ಬಿಟ್ಟು, ಬೇರೆ ಕಾರ್ಯಗಳನ್ನು ಮಾಡುವಾಗ್ಗೆ ಶ್ರೀ ಹರಿಪಾದಕಮಲದತ್ತ ಮನಸ್ಸು ಹರಿಯದಿರುವವರೆಗೆ, ಬೇರೆಯವರ ಮುಖಾಂತರ ಶ್ರವಣಾದಿಗಳನ್ನು ಮಾಡಬೇಕು. ಅದರಿಂದ ಶ್ರೀ ಹರಿಪಾದದತ್ತ ಮನಸ್ಸಿನ ಒಲವು ಉಂಟಾಗುವದು. ಅಗ್ನಿಹೋತ್ರಾದಿ ಕಾರ್ಯಗಳನ್ನೂ ಮಾಡಬೇಕು. ಮನಸ್ಸಿನ ಚಂಚಲತೆಯು ಇರುವವರೆಗೆ, ಭಗವಂತನ ಮಂಗಳಕರವಾದ ನಾಮರೂಪಗಳ ಶ್ರವಣ-ನಿರೀಕ್ಷಣ ಮಾಡುತ್ತಿರಬೇಕು, ಸ್ಮರಿಸುತ್ತಿರಬೇಕು. ಆದರಿಂದ ಭಗವಂತನ ಪಾದಕಮಲ

ದಲ್ಲಿ ಆತನ ಚಿತ್ತವು 'ಆವಿಷ್ಟ' (ಲೀನ) ವಾಗುವದು. ಹೀಗಿರಲು ಅಗ್ನಿ ಹೋತ್ರಾದಿ ಕಾರ್ಯಗಳಲ್ಲಿ ತೊಡಗಿದ ಮಾನವನು ಸಂಸಾರದ ಬಾಧೆಗೆ ಒಳಗಾಗುವದಿಲ್ಲ. 'ಭವಾಯ ನ ಕಲ್ಪತೆ'– ಎಂಬುದದರ ಅನ್ವಯವನ್ನು ಈ ರೀತಿಯಲ್ಲಿ ಯೋಜಿಸಬೇಕು.

**||೪೯|| ಸಕೃನ್ಮನಃ ಕೃಷ್ಣಪದಾರವಿಂದಯೋ-**
**ರ್ನಿವೇಶಿತಂ ತದ್ಗುಣರಾಗಿ ಯೈರಿಹ -**
**ನ ತೇ ಯಮಂ ಪಾಶಭೃತಶ್ಚ ತದ್ಭಟಾನ್**
**ಸ್ವಪ್ನೇऽಪಿ ಪಶ್ಯಂತಿ ಹಿ ಚೀರ್ಣನಿಷ್ಕೃತಃ** ೬-೧-೧೧

ಇದಲ್ಲದೆ, ದಿನದಿನವೂ ಶ್ರೀ ಹರಿಪಾದಕಮಲದಲ್ಲಿ ಲೀನವಾದ ಮನಸ್ಸುಳ್ಳವರಿಗೆ ಸಂಸಾರಿಕ ದುಃಖಗಳ ನಿವಾರಣೆಯಾಗುವದೆಂದು ಬೇರೆ ಹೇಳಬೇಕಿಲ್ಲ. ಏಕೆಂದರೆ ಭಗವಂತನ ಚರಣದಲ್ಲಿ ಒಂದೇ ಸಲವಾದರೂ ತಮ್ಮ ಮನಸ್ಸನ್ನು ನಿಲ್ಲಿಸಿದವರಿಗೆ –ಯಮಯಾತನೆಯಂಥ ಪರಲೋಕದಲ್ಲಿಯ ಘೋರವಾದ ಯಾತನೆಗಳ ಪರಿಹಾರವಾಗುವದು. ಮೇಲಿನ ಪದ್ಯವು ಈ ಅಭಿಪ್ರಾಯವನ್ನು ಹೇಳುವದು :–

**ಅರ್ಥ :–** ಶ್ರೀ ಕೃಷ್ಣನ ಕಲ್ಯಾಣಕರ ಗುಣಗಳ ಬಗ್ಗೆ ಅನುರಾಗವುಳ್ಳರಾಗಿ ಆತನ ಪಾದಕಮಲದಲ್ಲಿ ತಮ್ಮ ಮನಸ್ಸನ್ನು ಒಮ್ಮೆ ಮಾತ್ರ ನಿಲ್ಲಿಸಿದವರೂ ಕೂಡ ಯಮನನ್ನೂ, ಪಾಶಧಾರಿಗಳಾದ ಯಮದೂತರನ್ನೂ ಸ್ವಪ್ನದಲ್ಲಿಯೂ ಕಾಣುವದಿಲ್ಲ. ಏಕೆಂದರೆ, ಶ್ರೀ ಕೃಷ್ಣನ ಪಾದದಲ್ಲಿ ಮನಸ್ಸಿಟ್ಟು, ಶ್ರೀ ಕೃಷ್ಣನ ಸ್ಮರಣೆ-ಯನ್ನು ಮಾಡುವದರಿಂದ, ಈ ಲೋಕದಲ್ಲಿ–ಜೀವಿಸುವಾಗಲೆ–ಪ್ರಾಯಶ್ಚಿತ್ತವನ್ನು ಮಾಡಿಕೊಂಡು ತಮ್ಮ ಪಾಪಗಳಿಂದ ಅವರು ಮುಕ್ತರಾಗುವರು. ಅಂಥವರಿಗೆ ಯಮನ, ಯಮಭಟರ ದರ್ಶನವೆ ಆಗದಿರಲು, ಯಮಪಾಶದಿಂದ ಬಂಧನ ಮತ್ತು ಯಮಲೋಕದಲ್ಲಿಯ ಶಿಕ್ಷೆ ಎಂದಿಗೂ ಆಗುವದಿಲ್ಲವೆಂಬುದನ್ನು ('ಪಾಶಭೃತಃ') ಪಾಶಧಾರಿಗಳು, ಎಂಬ ಶಬ್ದದಿಂದ ಸೂಚಿಸಿರುವರು. ಈ ವಿಷಯದಲ್ಲಿ ಕಿಂಚಿತ್ತಾದರೂ ಸಂಶಯವಿಲ್ಲ,–ಎಂಬುದನ್ನು (ಸ್ವಪ್ನೇऽಪಿ) 'ಕನಸಿನಲ್ಲಿಯೂ ಕೂಡ' –ಎಂಬ ಮಾತಿನಿಂದ ಹೇಳಿಕೊಟ್ಟಿರುವರು.

**||೫೦|| ಧರ್ಮಃ ಪ್ರೋಜ್ಝಿತಕೈತವೋಽತ್ರಪರಮೋ ನಿರ್ಮತ್ಸರಾಣಾಂ ಸತಾಂ**
**ವೇದ್ಯಂ ವಾಸ್ತವಮತ್ರ ವಸ್ತು ಶಿವದಂ ತಾಪತ್ರಯೋನ್ಮೂಲನಂ |**

**ಶ್ರೀಮದ್ಭಾಗವತೇ ಮಹಾಮುನಿಕೃತೇ ಕಿಂ ವಾ ಪರೈರೀಶ್ವರಃ**
**ಸದ್ಯೋ ಹೃದ್ಯವರುಧ್ಯತೇಽತ್ರ ಕೃತಿಭಿಃ**
**ಶುಶ್ರೂಷುಭಿಸ್ತತ್ಕ್ಷಣಾತ್** ೧-೧-೨

ಶ್ರೋತೃಗಳ ಬುದ್ಧಿಗೆ ನಿಲುಕುವಂತೆ, ಶಾಸ್ತ್ರಾರ್ಥವನ್ನು ಸಂಕ್ಷೇಪವಾಗಿ ಹೇಳಿದುದಾಯಿತು. ಶಬ್ದಗಳ ಅರ್ಥವನ್ನು ಎಳೆದೆಳೆದು ನಾವು ಹೀಗೆ ನಿರೂಪಿಸಿಲ್ಲ. ಇಲ್ಲಿ ನಿರೂಪಿಸಿದ ಅರ್ಥವು-ಅದೇ ಅರ್ಥವನ್ನು ಪ್ರತಿಪಾದಿಸುವ ಪದ್ಯದಿಂದಲೇ ತೆಗೆದುಕೊಳ್ಳಲಾಗಿದೆ. ಇದನ್ನು ಸ್ಪಷ್ಟಗೊಳಿಸಲು ಆ ಪದ್ಯವನ್ನು ಇಲ್ಲಿ ಎತ್ತಿ-ಕೊಳ್ಳಲಾಗಿದೆ :–

**ಅರ್ಥ** :– ಭಗವಾನ್ ವೇದವ್ಯಾಸ ಮುನಿಗಳಿಂದ ರಚಿತವಾದ ಶ್ರೀಮದ್-ಭಾಗವತದಲ್ಲಿ ಧರ್ಮವು ಪ್ರತಿಪಾದಿಸಲ್ಪಟ್ಟಿದೆ. ಇಲ್ಲಿ ಹೇಳಿರುವ ಧರ್ಮವು ಎಂತಹುದು ? –ಅದು ನಿಷ್ಕಪಟವಾದುದು, ಮೋಸವಿಲ್ಲದಿರುವದು. ಮೋಕ್ಷ-ಶಾಸ್ತ್ರವನ್ನು ಹೇಳುವೆನೆಂದು ಮಾತಿನಲ್ಲಿ ಹೇಳುವದು, ಮನಸ್ಸಿನಲ್ಲಿ ಹಣದ ಆಶೆಯನ್ನು ಮಾಡುವದು.–ಇದಕ್ಕೇನೆ ಕಪಟ, ಮೋಸವೆನ್ನುವದು. ಫಲಾಪೇಕ್ಷೆಯಿಲ್ಲದೆ ಮಾಡುವ ಕೃತಿಯು ನಿಷ್ಕಪಟವಾದುದು. ಮಾತು–ಮನಸ್ಸುಗಳಲ್ಲಿಯ ವಿಷಯವು ಒಂದೇಯಾಗಿರುವದೆ, ಕಪಟವಿಲ್ಲದಿರುವದು. ಭಗವಂತನಲ್ಲಿ ಸಮರ್ಪಿತವಾಗಿರುವದರಿಂದ ಈ ಗ್ರಂಥದಲ್ಲಿ ಪ್ರತಿಪಾದಿತವಾದ ವಿಷಯವು ಅತೀವಶ್ರೇಷ್ಠ (ಪರಮ) ವಾದುದು. ಭಗವಂತನೇ ಇಲ್ಲಿ ಪ್ರತಿಪಾದ್ಯವಾದ ವಿಷಯ. ಭಗವಂತನು ನಿತ್ಯವಾಗಿ ನಿರಾತಂಕವಾಗಿ ಅನಂತಕಲ್ಯಾಣ ಗುಣಗಳಿಂದ ಪೂರ್ಣನೂ, ಸಕಲ ದೋಷಗಳಿಂದ ಮುಕ್ತನಾದವನು. ಕಲ್ಯಾಣಪ್ರದನು, ಬಯಸಿದುದನ್ನು ಕೊಡುವವನು. ಭಗವಂತನನ್ನೇ ವಿಷಯವಾಗಿ ಇಟ್ಟುಕೊಂಡು ಶ್ರೀ ವೇದವ್ಯಾಸರು ಭಾಗವತದಲ್ಲಿ ನಿರೂಪಿಸಿದ ಧರ್ಮವು ಆಧ್ಯಾತ್ಮಿಕ, ಆಧಿಭೌತಿಕ ಹಾಗೂ ಆಧಿದೈವಿಕವೆಂಬ ಮೂರು ಬಗೆಯ ತಾಪಗಳನ್ನು ಹೊಡೆದೋಡಿಸುವಂತಹುದು. ಮತ್ಸರ(ಹೊಟ್ಟೆಕಿಚ್ಚು) ರಹಿತರಾದ ಭರತಖಂಡದಲ್ಲಿಯ ಸಜ್ಜನರಿಗಾಗಿ ಈ ಧರ್ಮವು ಹೇಳಲ್ಪಟ್ಟಿದೆ. ವಿಹಿತ ಕರ್ಮಗಳನ್ನು ಭಗವತ್‌ಪೂಜೆಯೆಂದು ತಿಳಿದು ಮಾಡುವದೇ ಇಲ್ಲಿ ಹೇಳಿದ ಶ್ರೇಷ್ಠ(ಪರಮ)ಧರ್ಮ. ಈ ಬಗೆಯ ಧರ್ಮವನ್ನು ಆಚರಿಸುವವರಿಗೆ, ಇಂಥ ಭಗವದ್ಭಕ್ತರಿಗೆ, ಶ್ರೀ ಹರಿಯು ಕೂಡಲೇ ಅವರ ಹೃದಯದಲ್ಲಿ ಸನ್ನಿಹಿತನಾಗುವನು. ಅಂತೆಯೇ ಅವರ ಅಪೇಕ್ಷೆಗಳೆಲ್ಲ ಈಡೇರುವವು. ಶ್ರೀ ಮದ್ ಭಾಗವತದಲ್ಲಿ ನಿರೂಪಿತವಾದ ಧರ್ಮದಿಂದ ಭಿನ್ನವಾಗಿರುವ ಬೇರೆ ಧರ್ಮಗಳ ಆಚರಣೆಯಿಂದ ಯಾವ ಸತ್‌ಫಲವೂ ದೊರೆಯದು, –ಶ್ರೀ ಹರಿಪಾದದಲ್ಲಿ ಚಿತ್ತವು ನೆಲೆಸುವಂತೆ ಮಾಡು

ನೇ, ಸಂಸಾರಬಾಧೆಯಿಂದ ಬಿಡುಗಡೆ,-ಎಂಬ ಶಾಸ್ತ್ರಾರ್ಥವು ಇದರಿಂದಲೂ ಳಿದಂತಾಯಿತು.

**೧|| ಶಾಸ್ತ್ರೇಷ್ವಿಯಾನೇವ ಸುನಿಶ್ಚಿತೋ ನೃಣಾಂ**
**ಕ್ಷೇಮಸ್ಯ ಸಮ್ಯಗ್ವಿಮೃಶೇಷು ಹೇತುಃ |**
**ಅಸಂಗ ಆತ್ಮವ್ಯತಿರಿಕ್ತವಸ್ತುನಿ**
**ದೃಢಾ ರತಿರ್ಬ್ರಹ್ಮಣಿ ನಿರ್ಗುಣೇ ಚ ಯಾ | ೪-೨೨-೨೧**

ಸಂಕ್ಷಿಪ್ತ ಶಾಸ್ತ್ರಾರ್ಥವನ್ನು ಈ ರೀತಿಯಾಗಿ ನಿರೂಪಿಸಿದ್ದಾಯಿತು. ಇದುವೆ ಸ್ತ್ರಾರ್ಥವೆಂದು ಶಬ್ದಗಳಲ್ಲಿ ಸಾರಿ ಹೇಳುವದಕ್ಕಾಗಿ ಆರು ಶ್ಲೋಕಗಳನ್ನು ಳಿರುವರು :-ಇದುವೇ ಶಾಸ್ತ್ರಾರ್ಥವೆಂದು ಮೊದಲು ನಿಶ್ಚಿತಗೊಳಿಸುವರು.

**ಅರ್ಥ** :- ಪರಮಾತ್ಮನನ್ನು ಬಿಟ್ಟು ಯಾವುದೇ ಸಕಲ ಅನ್ಯ ವಿಷಯದಲ್ಲಿ ಸಕ್ತಿಯನ್ನು ವಹಿಸದಿರುವದೇ ವೈರಾಗ್ಯ; ಸತ್ವಾದಿ ಗುಣಗಳಿಂದ ಅಲಿಪ್ತನಾಗಿ, ಗುಣಾತೀತನಾದ ಪರಮಾತ್ಮನಲ್ಲಿ ಸುದೃಢವಾದ ಅನುರಾಗವನ್ನು ತಾಳುವದು. ಇವೆರಡೇ ಸಂಗತಿಗಳೆ ಮಾನವನ ಕ್ಷೇಮಕ್ಕಾಗಿ-ಶಾಶ್ವತ ಕಲ್ಯಾಣಕ್ಕಾಗಿ-ಏಕ ೀವ ಸಾಧನವೆಂದು ಉಪಕ್ರಮಾದಿ ನಿರ್ಣಾಯಕ ಸಾಧನಗಳಿಂದ ತುಂಬಾ ಮರ್ಶೆ ಮಾಡಿ ಶಾಸ್ತ್ರಗಳಲ್ಲಿ ನಿಶ್ಚಿತಗೊಳಿಸಲ್ಪಟ್ಟಿವೆ. ಇವೆರಡನ್ನು ಬಿಟ್ಟು ಚ್ಚಿನ ಬೇರೆ ಸಾಧನಗಳಿಲ್ಲ ಎಂಬುದೂ ನಿರ್ಣೀತವಾಗಿದೆ.

**೨|| ತಚ್ಛ್ರದ್ಧಯಾ ಭಗವದ್ಧರ್ಮಚರ್ಯಯಾ**
**ಜಿಜ್ಞಾಸಯಾಽಽಧ್ಯಾತ್ಮಿಕಯೋಗನಿಷ್ಠಯಾ |**
**ಯೋಗೇಶ್ವರೋಪಾಸನಯಾ ಚ ನಿತ್ಯಂ**
**ಪುಣ್ಯಶ್ರವಣಕಥಯಾ ಪುಣ್ಯಯಾ ಚ ||**

ಇವೆರಡೇ ಮಾನವರಿಗೆ ಅನನ್ಯ ಪುರುಷಾರ್ಥ ಸಾಧನಗಳೆಂದು ಹೇಗೆ ೀಳುವಿರಿ ? ಭಗವಂತನಲ್ಲಿಶ್ರದ್ಧೆ. ಆತ್ಮವಿವೇಚನೆ. ಮಹಾತ್ಮರ ಸೇವೆ ಹಾಗೂ ವರ ನಿಂದೆ ಮಾಡದಿರುವದು, ಐಹಿಕ ಸುಖೋಪಭೋಗಗಳಲ್ಲಿ ನಿರತರಾಗದಿರು ದು, ಇಂದ್ರಿಯನಿಗ್ರಹ, ಏಕಾಂತ ಪ್ರದೇಶದಲ್ಲಿ ವಾಸ, ಎಲ್ಲ ಇಂದ್ರಿಯಗಳನ್ನು ಗವತ್ಕಾರ್ಯದಲ್ಲಿ ತೊಡಗಿಸುವದು, ಅಹಿಂಸಾ, ಯಮ-ನಿಯಮಗಳು, ಶ್ರೀಹರಿಯ

ಇಚ್ಛೆಯಿಂದ ದೊರೆತದ್ದರಲ್ಲಿಯೇ ತೃಪ್ತಿ, ಸುಖದುಃಖ ಮುಂತಾದ ವಿಷಮ ಸ್ಥಿತಿಗಳನ್ನು ಸಹಿಸಿಕೊಳ್ಳುವದು, ಶ್ರವಣ, ಆರಾಧನೆ, ಭಗವಂತನ ಮಹಿಮೆ, ಹಾಗೂ ಆತನ ಗುಣನಾಮಕರ್ಮಗಳ ಸಂಕೀರ್ತನ, ಇವೆಲ್ಲ ಅನ್ಯ ಭಾಗವತ ಧರ್ಮಗಳೂ ಪುರುಷಾರ್ಥಪ್ರಾಪ್ತಿಗೆ ಸಾಧನವಾಗಿಲ್ಲವೆ ?- ಎಂಬ ಆಕ್ಷೇಪಕ್ಕೆ ಉತ್ತರವನ್ನು ಈ ರೀತಿಯಾಗಿ ಹೇಳಿರುವರು–ಮೇಲೆ ನಿರೂಪಿಸಿದ ಭಾಗವತ ಧರ್ಮಗಳು ಪುರುಷಾರ್ಥಪ್ರಾಪ್ತಿಗೆ ಪ್ರತ್ಯಕ್ಷವಾದ, ನೇರವಾದ ಸಾಧನಗಳಾಗಿಲ್ಲ – ಅವು ಪರಂಪರೆಯಿಂದ ಸಾಧನಗಳಾಗಿವೆ. ಭಗವಂತನನ್ನು ಬಿಟ್ಟು ಉಳಿದ ಸಕಲ ವಿಷಯಗಳಲ್ಲಿ ವೈರಾಗ್ಯ ಭಾವನೆ, ಹಾಗೂ ಭಗವಂತನಲ್ಲಿ ದೃಢವಾದ ರತಿ-ಅನುರಾಗ,–ಇವೆರಡನ್ನು ಪಡೆಯಲು ಮಾತ್ರ ಇವು ಸಾಧನಗಳೆಂಬುದನ್ನು ನಾಲ್ಕು ಶ್ಲೋಕಗಳಿಂದ ತೋರಿಸಿ ಕೊಡುವರು :–

೭೬ :– (ತತ್) ಪರಮಾತ್ಮನಲ್ಲಿ ಶ್ರದ್ಧೆ, ಭಾಗವತ ಧರ್ಮಗಳ ಅನುಷ್ಠಾನ, ಅಧ್ಯಾತ್ಮಯೋಗವಿಷಯದಲ್ಲಿ ಜ್ಞಾನಾಪೇಕ್ಷೆ, ಶಾಪಾನುಗ್ರಹ ಶಕ್ತಿಯುಳ್ಳ (ಯೋಗೇಶ್ವರ) ಮಹಾತ್ಮರ ಸಂತತವಾದ ಸೇವೆ, ಪುಣ್ಯಕೀರ್ತಿಯಾದ ಪರಮಾತ್ಮನ ಪುಣ್ಯಪ್ರದವಾದ ಕಥೆಗಳನ್ನು ನಿತ್ಯವೂ ಕೇಳುವದು.

||೨೩|| **ಅರ್ಥೇಂದ್ರಿಯಾರಾಮಗುಣೇಷ್ವತೃಷ್ಣಯಾ**
**ತತ್ಸಮ್ಮತಾನಾಮಪರಿಗ್ರಹೇಣ ಚ|**
**ವಿವಿಕ್ತರುಚ್ಯಾಽಪರಿತೋಷ ಆತ್ಮ-**
**ನ್ಯಿನಾ ಹರೇರ್ಗುಣಪೀಯೂಷಪಾನಾತ್ ||**

**ಅರ್ಥ :**– ಐಹಿಕದ್ರವ್ಯ,ಅದರಂತೆ ಸ್ವರ್ಗದ ಪರಲೋಕಗಳಲ್ಲಿ ಇಂದ್ರಿಯಗಳಿಗೆ ಸಂತೋಷ ಕೊಡುವ ವಸ್ತುಗಳಲ್ಲಿ ಆಶೆಯಿಲ್ಲದಿರುವದು, ಐಹಿಕ ಪಾರತ್ರಿಕ ಸುಖಗಳಲ್ಲಿ ಅತಿಯಾಗಿ ಲೋಭವಿರುವ ಜನರಿಂದ ದೂರವಾಗಿರುವದು, ಏಕಾಂತಪ್ರಿಯತೆ, ಪರಮಾತ್ಮನ ಗುಣಗಳ ಅಮೃತಸದೃಶ ಶ್ರವಣವಿರದಿದ್ದರೆ ಸಂತೋಷವಿಲ್ಲದಿರುವದು,

||೨೪|| **ಅಹಿಂಸಯಾ ಪಾರಮಹಂಸ್ಯಚರ್ಯಯಾ**
**ಸ್ಮೃತ್ಯಾ ಮುಕುಂದಾಚರಿತಾಗ್ರ್ಯಸೀಧುನಾ |**
**ಯಮೈರಕಾಮೈರ್ನಿಯಮೈಶ್ಚಾಪ್ಯನಿಂದಯಾ**
**ನಿರೀಹಯಾ ದ್ವಂದ್ವತಿತಿಕ್ಷಯಾ ಚ||**

**ಅರ್ಥ** :- ಅಹಿಂಸೆ, ಪರಮಹಂಸರಾದ ಮಹಾತ್ಮರ ಸೇವೆ, ಮುಕುಂದನ ಶ್ರೇಷ್ಠವಾದ ಲೀಲೆಗಳ, ಅದ್ಭುತ ಕೃತಿಗಳ ಸ್ಮರಣವೆಂಬ ಅಮೃತ ಪಾನದಿಂದ ಸಂತೋಷ, ಫಲಾಪೇಕ್ಷೆಯಿಲ್ಲದ ಯಮನಿಯಮಗಳು, ನಿಂದೆ ಮಾಡದಿರುವದು, ಹುಟ್ಟು-ಮುಪ್ಪು, ಸಾವು ಇವು ನಿಶ್ಚಿತವಾದವುಗಳೆಂಬುದು -ಐಹಿಕ ವಿಷಯಗಳ ಬಗ್ಗೆ ಸರ್ವದಾ ಈ ನೆನವು (ಸ್ಮೃತ್ಯಾ), ಅದರಂತೆಯೆ ಭಗವಂತನ ಗುಣಗಳ ಸ್ಮರಣ -ಹೀಗೆ ಎರಡು ವಿಧವಾದ ಸ್ಮೃತಿ, ಕಾಮ್ಯಕರ್ಮಗಳನ್ನು ಬಿಟ್ಟುಕೊಡುವದು (ನಿರೀಹಾ) ಸುಖ ದುಃಖ ಮುಂತಾದ ದ್ವಂದ್ವಗಳನ್ನು ಸಹಿಸುವದು,

ಮುಕುಂದನ ಚರಿತ್ರೆಯ ಶ್ರವಣ, ಹಾಗೂ ಏಕಾಂತ - ಪ್ರಿಯತೆಗಳಿಂದ, ಸಂತೋಷ ಸಕಲ ಇಂದ್ರಿಯಗಳನ್ನು ಭಗವಂತನಲ್ಲಿ ತೊಡಗಿಸುವದು, ಎಂಬ ಅರ್ಥವು ಸೂಚಿತವಾಗುವದು. ಬೇರೆ ವಿಷಯಗಳಲ್ಲಿ ಇಂದ್ರಿಯಗಳನ್ನು ಹರಿಯದಂತೆ ಮಾಡುವದೇ ವೈರಾಗ್ಯ. ಸಕಲ ಪ್ರಾಣಿಗಳಿಗೆ ಕೇಡು ಬಯಸದೆ, ಲೇಸನ್ನು ಬಯಸುವದೇ-ಅಹಿಂಸೆ.

||೫೫|| **ಹರೇರ್ಮುಹುಸ್ತತ್ಪರಕರ್ಣಪೂರಯಾ**
**ಗುಣಾಭಿಧಾನೇನ ವಿಜೃಂಭಮಾಣಯಾ ।**
**ಭಕ್ತ್ಯಾ ಹ್ಯಸಂಗಃ ಸದಸತ್ಯನಾತ್ಮನಿ**
**ಸ್ಯಾನ್ನಿರ್ಗುಣೇ ಬ್ರಹ್ಮಣಿ ಚಾಂಜಸಾ ರತಿಃ ॥**

**೪-೨೨-(೨೨, ೨೩, ೨೪, ೨೫)**

ಯಮನಿಯಮಗಳು-('ಅಕಾಮ್ಯ') ನಮ್ಮಿಚ್ಛೆಗೆ ಒಳಗಾಗದಂತೆ ಇರಬೇಕು; ಅಂದರೆ ಬೇಕಾದರೆ ಮಾಡಿದೆ, ಬೇಡವೆಂದರೆ ಬಿಟ್ಟೆ -ನಮ್ಮ ಇಚ್ಛೆಯಂತೆ ಅವುಗಳನ್ನು ಆಚರಿಸಬಾರದು; ನಿತ್ಯವಾಗಿಯೂ, ನಿಷ್ಠಾಪೂರ್ವಕವಾಗಿಯೂ ಅವುಗಳನ್ನು ಆಚರಿಸಬೇಕು.

ಅಹಿಂಸಾ, ಸತ್ಯ, ಅಸ್ತೇಯ (ಕಳವು ಮಾಡದಿರುವದು), ಅಸಂಗ, ಹ್ರೀ, (ವಿನಯ) ಅಸಂಚಯ ಆಸ್ತಿಕ್ಯ, ಬ್ರಹ್ಮಚರ್ಯ, ಮೌನ, ಸ್ಥೈರ್ಯ, ಕ್ಷಮಾ, ಅಭಯ-ಇವು ಹನ್ನೆರಡುಯಮಗಳು. - ಶೌಚ, ಜಪ, ತಪ, ಹೋಮ, ಶ್ರದ್ಧಾ, ಆತಿಥ್ಯ, ಶ್ರೀಹರಿಪೂಜೆ, ತೀರ್ಥಯಾತ್ರೆ, ಪರೋಪಕಾರ, ಸಂತುಷ್ಟಿ, ಗುರುಗಳ ಸೇವೆ, ಇವು ನಿಯಮಗಳು. - ನಿಯಮಗಳ ಆಚರಣೆ ನಿತ್ಯವಾದುದಲ್ಲ. ಅದು ಸಮಯೋಚಿತವಾದುದು.-

**ಅರ್ಥ:**– ಶ್ರೀಹರಿಯನ್ನೇ ಪೂರ್ಣವಾಗಿ ಆಶ್ರಯಿಸಿದ ಭಗವದ್ಭಕ್ತರ ಕಿವಿಗಳಿಗೆ ಅಲಂಕಾರಗಳಂತಿರುವ ಶ್ರೀ ಹರಿಯ ಗುಣ ಕರ್ಮಗಳನ್ನು ಶ್ರೀಹರಿ ಭಕ್ತರಿಗೆ ವಿವರಿಸಿ ಹೇಳುವದರಿಂದ,– ಭಗವಂತನು ಉಪದೇಶಿಸಿದ ಈ ಬಗೆಯ ಭಾಗವತ ಧರ್ಮಗಳನ್ನು ನಿರಂತರವೂ ಆಚರಿಸುವದರಿಂದ ಭಕ್ತಿಯ ಅಭಿವೃದ್ಧಿಯಾಗುವದು. ಪರಮಾತ್ಮನ ವಿನಹ, ಬೇರೆ ವಿಷಯಗಳಲ್ಲಿ ಆಸಕ್ತಿಯು ತೊಲಗುವದು. ಸತ್– ಎಂದರೆ ಕಾರ್ಯರೂಪವಾದ ದೇಹದಲ್ಲಿಯೂ, ಅಸತ್ ಎಂದರೆ ಕಾರಣ ರೂಪವಾದ ಇಂದ್ರಿಯಗಳಲ್ಲಿಯೂ ಅಂತಃ ಪ್ರೇರಕನಾಗಿ ನಿಂತುಕೊಂಡು ಸರ್ವ ಕಾರ್ಯಗಳನ್ನು ಮುಖ್ಯ ಕರ್ತೃವಾದ, ಪ್ರಾಕೃತ ಗುಣ ರಹಿತನಾದ ಪರಮಾತ್ಮನಲ್ಲಿ ಸಮರ್ಪಿಸುವದರಿಂದ ಕೂಡಲೇ ಭಕ್ತಿಯು ಉಂಟಾಗುವದು. ಪರಮಾತ್ಮನಲ್ಲಿ ರತಿ, ಅನ್ಯ ವಿಷಯಗಳಲ್ಲಿ ವಿರತಿ,– ಇವುಗಳಿಗೇನೆ ಶ್ರದ್ಧಾದಿ ಧರ್ಮಗಳು ಸಾಧನವಾಗಿವೆ. ಅದರಿಂದ, ಶಾಸ್ತ್ರಗಳಲ್ಲಿ ಇದೇ ಅಭಿಪ್ರಾಯವೇ ನಿರ್ಣಯಾತ್ಮಕವಾಗಿ ಹೇಳಲ್ಪಟ್ಟಿದೆ.

॥೫೬॥ **ಯದಾ ರತಿರ್ಬ್ರಹ್ಮಣಿ ನೈಷ್ಠಿಕೀ ಪುಮಾನ್**
**ಆಚಾರ್ಯವಾನ್ ಜ್ಞಾನವಿರಾಗರಂಹಸಾ ।**
**ದಹತ್ಯಬೀಜಂ ಹೃದಯಂ ಜೀವಕೋಶಂ**
**ಪಂಚಾತ್ಮಕಂ ಯೋನಿಮಿವೋತ್ಥಿತೋಽಗ್ನಿಃ ॥** ೪-೨೨-೨೬

– ಶ್ರದ್ಧಾದಿ ಧರ್ಮಗಳು, ಪರಮಾತ್ಮನಲ್ಲಿ 'ರತಿ', (ಆಸಕ್ತಿ) ಹಾಗೂ ಅನ್ಯ ವಿಷಯಗಳಲ್ಲಿ 'ವಿರತಿ' ಇವೆರಡಕ್ಕೇನೆ ಸಾಧನಗಳಾಗಿ ಇರವಲ್ಲವೇಕೆ, ಆದರೆ ಇವುಗಳಿಂದ ಪಡೆಯಬೇಕಾದ ವಸ್ತು–ಸಾಧ್ಯವು ಯಾವುದು ? ಅದು ಎಂತಹದು?– ಆ ಗುರಿಯನ್ನೇ ಈ ಶ್ಲೋಕದಲ್ಲಿ ನಿರೂಪಿಸಿದೆ.

ಅರ್ಥ – ಗುರುವಿನ ಅನುಗ್ರಹವನ್ನು ಪಡೆದ ಮಾನವನಲ್ಲಿ, ಜ್ಞಾನ ವೈರಾಗ್ಯಗಳ ಹುಮ್ಮಸದಿಂದ ಭಕ್ತಿಯು ಪರಿಪಕ್ವದೆಸೆಯನ್ನು ಹೊಂದುವದು. ಆಗ್ಗೆ ಅಂಥ ಭಕ್ತಿಯು ಪಂಚ ಮಹಾಭೂತಗಳಿಂದ ಯುಕ್ತವಾದ ಜೀವಕೋಶವನ್ನು ಅಂದರೆ ಅಂತಃಕರಣವೆಂಬ ಹೊರಗಿನ ಹೃದಯವನ್ನು 'ಅಬೀಜವಾಗಿ' ಅಂದರೆ ಮುಂದೆ ಎಂದಿಗೂ ಚಿಗುರದಂತೆ ಸುಟ್ಟುಬಿಡುವದು. ಕಟ್ಟಿಗೆಯ ತುಂಡುಗಳಿಂದ (ಅರಣಿಯಿಂದ) ಉತ್ಪನ್ನವಾಗುವ ಅಗ್ನಿಯು ತನ್ನ ಉತ್ಪತ್ತಿಗೆ ಕಾರಣವಾದ ಅರಣಿಯನ್ನೇ ಸುಟ್ಟು ಬಿಡುವಂತೆ, ಈ ಭಕ್ತಿಯು, ತನ್ನ ಉತ್ಪತ್ತಿಗೆ ಕಾರಣ (ಯೋನಿ)

ವಾದ ಬಾಹ್ಯ ಅಂತಃಕರಣವನ್ನೇ ನಾಶಗೊಳಿಸುವದು. ಭಗವಂತನಲ್ಲಿ ನೆಲೆಸಿದ ಸುದೃಢವಾದ ಅನುರಾಗವು ಅನ್ಯ ವಿಷಯಗಳ ಬಗ್ಗೆ ಅನುರಾಗವು ಉಂಟಾಗದಂತೆ, ಅನುರಾಗದ ಉತ್ಪತ್ತಿ ಸ್ಥಾನವಾದ ಬಾಹ್ಯ ಹೃದಯವನ್ನೇ ನಿರ್ಮೂಲಗೊಳಿಸುವದು. ಉಳಿದ ವಿಷಯಗಳ ಬಗ್ಗೆ ರತಿಯು, ಆಸಕ್ತಿಯು ಉಂಟಾಗದಂತೆ ಮಾಡುವದೇ, ಭಗವಂತನಲ್ಲಿ ಸುದೃಢವಾಗಿ ನೆಲೆಸುವ ಪ್ರೀತಿಗೆ-ಆವಿಷ್ಟ ಚಿತ್ತತ್ವಕ್ಕೆ - ಅತಿ ಶ್ರೇಷ್ಠವಾದ ಫಲವಾಗಿದೆ. 'ಶೃಣ್ವನ್'- ಇತ್ಯಾದಿ ಸಾಧನಗಳಿಂದ ಸಂಸಾರದ ಬಾಧೆಯು ತಪ್ಪುವದು.- ಎಂಬುದೇ ಶಾಸ್ತ್ರಗಳ ಸಾರ, ಸಂಕ್ಷೇಪವಾಗಿದೆ.

---



# ೫ಃ— ವೈರಾಗ್ಯ ಪ್ರಕರಣ

**॥೫೭॥ ನ ತಸ್ಯ ತತ್ವ ಗ್ರಹಣಾಯ ಸಾಕ್ಷಾ-**
**ದ್ವರೀಯಸೀರಪಿ ವಾಚಃ ಸಮಾಸನ್ ।**
**ಸ್ವಪ್ನೇ ನಿರುಕ್ತ್ಯಾ ಗೃಹಮೇಧಸೌಖ್ಯಂ**
**ನ ಯಸ್ಯ ಹೇಯಾನುಮಿತಂ ಸ್ವಯಂ ಸ್ಯಾತ್** ॥ ೫-೧೧-೩

– ಭಗವಂತನಲ್ಲಿ ಆಸಕ್ತಿ (ರತಿ), ಅನ್ಯ ವಿಷಯಗಳಲ್ಲಿ ವಿರಕ್ತಿ (ವಿರಾಗ), ಮುಕ್ತಿಗೆ ಇವೆರಡೇ ಮುಖ್ಯ ಸಾಧನಗಳು. ಉಳಿದ ಭಾಗವತ ಧರ್ಮಗಳು ಇವೆರಡಕ್ಕೇನೆ ಸಾಧನಗಳೆಂದು ಹಿಂದಿನ ಪ್ರಕರಣದಲ್ಲಿ ನಿರೂಪಿಸಿದೆ. ವೈರಾಗ್ಯವು ಹೇಗೆ ಉಂಟಾಗಬಲ್ಲದೆಂಬುದನ್ನು ಹೇಳಲು ಸಂಸಾರದ ಹೀನತೆಯನ್ನು ಈ ಪ್ರಕರಣದಲ್ಲಿ ವಿಶದಗೊಳಿಸುವರು. ಮನೆ, ಮಡದಿ, ಮಕ್ಕಳು – ಇವರ ಬಗ್ಗೆ ಇರುವ ಆಸಕ್ತಿಯೇ ಸಂಸಾರವಾಗಿದೆ. ಸಂಸಾರಬಂಧನಕ್ಕೆ ಮೂರು ಅವಸ್ಥೆಗಳು- ಅವಧಿಗಳು. ಹುಟ್ಟುವ ಮೊದಲು, ಗರ್ಭದಲ್ಲಿ ವಾಸ, ಹುಟ್ಟಿದ ನಂತರ ಎಂಬಿವು. ಈ ಮೂರೂ ಅವಸ್ಥೆಗಳ ಬಗ್ಗೆ ಚೆನ್ನಾಗಿ ವಿಚಾರ ಮಾಡಿದರೆ, ಅವೆಲ್ಲ ಕಷ್ಟ ಕಾರ್ಪಣ್ಯಗಳ ಪರಂಪರೆಯಿಂದ ತುಂಬಿಕೊಂಡಿರುವದು ಕಂಡುಬರುವದು. ಆದುದರಿಂದ ಅವುಗಳ ಬಗ್ಗೆ ಆಸಕ್ತಿಯನ್ನು ತಾಳದಿರುವದರಿಂದಲೇ ಅವುಗಳಲ್ಲಿ ತುಂಬಿದ ದುಃಖಗಳಿಂದ ಬಿಡುಗಡೆಯಾಗುವದು. ಅನಾಸಕ್ತಿಯೆ – ವೈರಾಗ್ಯವೆ, ಜ್ಞಾನ ಹಾಗೂ ಭಕ್ತಿಗಳನ್ನು ದೃಢವಾಗಿ ಮಾಡುವದರಿಂದ, ಪರಮಾತ್ಮನ ಅನುಗ್ರಹಕ್ಕೆ ಸಾಧನವಾಗಿರುವದರಿಂದಲೂ ಮಹಾ ಪುರುಷಾರ್ಥವಾದ ಮೋಕ್ಷಕ್ಕೆ ಸಾಧನವಾಗಿರುವದು. ಆದುದರಿಂದ, ಈ ವೈರಾಗ್ಯದ ವಿಷಯದಲ್ಲಿ ದಕ್ಷತೆಯನ್ನು ವಹಿಸಬೇಕೆಂಬ ಅಭಿಪ್ರಾಯವುಳ್ಳವರಾಗಿ,- ಈ ವೈರಾಗ್ಯವು ಜ್ಞಾನವನ್ನು ಸ್ಥಿರಗೊಳಿಸಲು ಹೇಗೆ ಸಾಧನವಾಗಿರುವದೆಂಬುದನ್ನು ಮೊದಲು ತೋರಿಸಿ ಕೊಡುವರು.

**ಅರ್ಥಃ**– ಈ ಸಂಸಾರದಲ್ಲಿಯ ಸುಖವು ಸ್ವಪ್ನದಲ್ಲಿ ಅನುಭವಿಸುವ ಸುಖದಂತೆ ಅನಿತ್ಯವಾಗಿದೆ,-ಸ್ವಪ್ನದ ಈ ಉದಾಹರಣೆಯಿಂದ ಯಾರಿಗೆ ಸಂಸಾರದ ಬಗ್ಗೆ ಹೇಯ ಬುದ್ಧಿಯು, ತಿರಸ್ಕಾರ ಭಾವನೆಯು ಉಂಟಾಗುವದಿಲ್ಲವೊ, ಅಂಥವರಿಗೆ ಅಪೌರೇಷಯವಾದ, ಅತಿಶ್ರೇಯಸ್ಕರಗಳಾದ ವೇದೋಕ್ತವಾದ ಉಪದೇಶಗಳೂ ಕೂಡ ವೇದಾಂತದ ಪರತತ್ವಗಳನ್ನು ತಿಳಿಸಿ ಕೊಡಲು ಸಮರ್ಥವಾಗವು.

– ಆಸಕ್ತಿಯನ್ನು ತೊರೆಯುವದರಿಂದ ದುಃಖವು ತಾನಾಗಿಯೇ ತೊಲಗುವದೆಂಬುದು ಅನುಭವಸಿದ್ಧವಾದುದು. ಉಪದೇಶ ಪಡೆದ ತತ್ವವು ವೈರಾಗ್ಯವುಳ್ಳವನ

ಹೃದಯದಲ್ಲಿ ನೆಲಿಸುವದು. ವೈರಾಗ್ಯವು ಹೀಗೆ ಜ್ಞಾನ ಹಾಗೂ ಭಕ್ತಿಗಳನ್ನು ದೃಢ ಗೊಳಿಸಲು ಸಾಧನವಾಗಿರುವದೆಂಬುದನ್ನು ಈ ಮೊದಲಿನ ಪ್ರಕರಣದಲ್ಲಿ ಹೇಳಿರುವರು. ಏಕತ್ರಿತವಾದ ಈ ಮೂರು ಸಾಧನಗಳಿಂದ ಪರಮಾತ್ಮನ ಅನುಗ್ರಹ ಒದಗುವದೆಂಬುದು ಶಾಸ್ತ್ರಗಳ ಆಧಾರದಿಂದ ನಿಶ್ಚಿತವಾದ ಸಂಗತಿಯಾಗಿದೆ-

- ಮಡದಿ, ಮನೆ ಮಕ್ಕಳನ್ನು, ಪ್ರಾಣ, ಧನಕನಕಗಳನ್ನು ಈ ಶ್ರೇಷ್ಠವಾದ ದೇಹವನ್ನು ಕೂಡ ನನಗೆ ಸಮರ್ಪಿಸಿ ನನಗೆ ಶರಣು ಬರುವ ಜನರನ್ನು ನಾನೆಂದಿಗೂ ಕೈ ಬಿಡುವದಿಲ್ಲ'- ಎಂಬುದು ಪರಮಾತ್ಮನ ಅಭಯವಚನವಾಗಿದೆ.

- ಮೇಲೆ ಹೇಳಿರುವದು ಸ್ವಂತದ ವಿರಕ್ತಿಯ ಬಗ್ಗೆ, ಅಂತೆಯೆ- (ಸ್ವಯಂ ಸ್ಯಾತ್) ತಾನಾಗಿಯೆ ವಿರಕ್ತಿಯನ್ನು ಪಡೆಯಬೇಕು- ಎಂದು ಹೇಳಿದೆ-ಸ್ವಂತದ ತಿಳುವಳಿಕೆಯಿಂದ ವೈರಾಗ್ಯವನ್ನು ತಾಳದ ಜನರನ್ನು ಬಲುಮೆಯಿಂದ ವಿರಕ್ತರನ್ನಾಗಿ ಮಾಡಿ ಪರಮಾತ್ಮನು ಅವರ ಮೇಲೆ ಅನುಗ್ರಹ ಮಾಡುವನು- 'ಯಾರ ಮೇಲೆ ನಾನು ಅನುಗ್ರಹವನ್ನು ಮಾಡುವೆನೊ, ಅವರ ಸಂಪತ್ತನ್ನು ನಾನು ಕಳೆದು ಬಿಡುವೆನು'- ಎಂಬುದು ಪರಮಾತ್ಮನ ವಚನವಾಗಿದೆ.-

- ಅಜ್ಞಾನದಿಂದ ತನ್ನ ಮೇಲೆ ಪಲ್ಲಕ್ಕಿಯನ್ನು ಹೊರಿಸಿ ಪಶ್ಚಾತ್ತಾಪವನ್ನು ಪಡುತ್ತಿರುವ ರಹೂಗಣ ರಾಜನಿಗೆ ಅವಧೂತ ಶಿರೋಮಣಿಯಾದ ಜಡ ಭರತನು ಮಾಡಿರುವ ಉಪದೇಶದಲ್ಲಿ ಮೇಲಿನ ಶ್ಲೋಕವು ಇರುವದು.

||೩೮|| **ದೇಹ್ಯನ್ಯದೇಹವಿವರೇ ಜಠರಾಗ್ನಿನಾऽಸೃ-**
**ಗ್ವಿಣ್ಮೂತ್ರಕೂಪಪತಿತೋ ಭೃಶತಪ್ತದೇಹಃ |**
**ಇಚ್ಛನ್ನಿತೋ ವಿವಸಿತುಂ ಗಣಯನ್ ಸ್ವಮಾಸಾನ್**
**ನಿರ್ವಾಸ್ಯತೇ ಕೃಪಣಧೀರ್ಭಗವನ್ ಕದಾನು ||** ೩-೩೧-೧೯ 3-31

- ಜೀವಿಯು ಪರಲೋಕದಿಂದ ಈ ಭೂಲೋಕಕ್ಕೆ ಸಾಗಿ ಬರುವ ಕ್ರಮವು ಹೀಗಿರುವದು. ಪೂರ್ವ ಜನ್ಮದಲ್ಲಿ ಮಾಡಿದ ಕರ್ಮದ ಅವಶೇಷದಿಂದ ಜೀವಿಯು ಅಕ್ಕಿ ಮುಂತಾದ ಅನ್ನ ಧಾನ್ಯಗಳಲ್ಲಿ ಸೇರುವನು-ಅನ್ನದ ದ್ವಾರಾ ಅನ್ನವನ್ನು ಸೇವಿಸುವ ಪುರುಷನ ದೇಹದಲ್ಲಿ ಪ್ರವೇಶಿಸಿ ಮೂರು ತಿಂಗಳು ಕಾಲ ನೆಲಿಸಿ

ಕಷ್ಟಪಡುವನು. ಪುರುಷನ ರೇತಸ್ಸಿನ ದ್ವಾರಾ ಸ್ತ್ರೀಯಳ ಗರ್ಭವನ್ನು ಪ್ರವೇಶಿಸುವನು. ಅಲ್ಲಿ ಕಲಲ-ಬುದ್ಬುದ ಮುಂತಾದ ರೂಪಗಳಲ್ಲಿ ತಲೆ ಮುಂತಾದ ಅವಯುವಗಳಿಂದ ಯುಕ್ತ ದೇಹವನ್ನು ಪಡೆಯುತ್ತ ಆರು ತಿಂಗಳು ಅಲ್ಲಿ ಕಷ್ಟ ವನ್ನು ಅನುಭವಿಸುವನು. ಆ ನಂತರ ಏಳನೆಯ ತಿಂಗಳಿನಲ್ಲಿ ಜನ್ಮಾಂತರದಲ್ಲಿ ಮಾಡಿದ ಪುಣ್ಯಬಲದಿಂದ ಮುಂಚಿನ ಜನ್ಮಗಳ ನೆನಪು ಆತನಿಗೆ ಆಗುವದು. ತಾಯಿಯು ಉಣ್ಣುತ್ತಿರುವ ಆಹಾರದಲ್ಲಿಯ ಕಹಿ-ಉಪ್ಪು-ಖಾರಗಳಿಂದ ಆತನ ದೇಹವೆಲ್ಲಪೂ ನೋವಿನಿಂದ ಬಳಲುವದು. ಮಲಮೂತ್ರಗಳಲ್ಲಿಯ ಕ್ರಿಮಿಗಳು ದೇಹದ ತುಂಬ ಕಚ್ಚುವವು. ಗಳಿಗೆಗಳಿಗೆಗೂ ಮೂರ್ಛೆ ಹೊಂದುವನು. ಪಂಜರ ದಲ್ಲಿ ಬಂಧಿಸಿದ ಪಕ್ಷಿಯಂತೆ, ತನ್ನ ಅಂಗಾಂಗಳನ್ನು ಚಲಿಸಲು ಅಸಮರ್ಥನಾಗಿರು ವನು. ನೂರಾರು ಹಿಂದಿನ ಜನ್ಮಗಳಲ್ಲಿ ಅನುಭವಿಸಿದ ದುಃಖಗಳ ನೆನಪು ಆತ ನಿಗೆ ಉಂಟಾಗುವದು. ನಿಟ್ಟುಸಿರನ್ನು ಬಿಡುವನು- ಇನ್ನೊಮ್ಮೆ ಇಂಥ ಕಾರ್ಯ ವನ್ನು ಎಂದೆಂದಿಗೂ ಮಾಡುವದಿಲ್ಲವೆಂದು ಪಶ್ಚಾತ್ತಾಪ ಪಡುತ್ತಿದ್ದರೂ, ತನ್ನ ದುಃಖದ ನಿವಾರಣೆಗೆ ದಾರಿಯನ್ನು ಕಾಣದೆ ಹೀಗೆ ಯೋಚಿಸತೊಡಗುವನು.-

**ಅರ್ಥ** :- ದೇಹ ಧಾರಿಯಾದ ಜೀವನು ಬೇರೊಂದು ದೇಹದ ಒಳಭಾಗ ದಲ್ಲಿ ರಕ್ತ ಮಲಮೂತ್ರಗಳ ತೆಗ್ಗಿನಲ್ಲಿ ನೆಲಿಸಿ, ಜಠರಾಗ್ನಿಯು ದೇಹವನ್ನು ಸುಡುತ್ತಿರಲು, ತಳಮಳಿಸುತ್ತಿರುವನು. ತಾಯಿಯ ದೇಹದಿಂದ ಹೊರಬರಲು ಆತುರನಾಗಿರುವನು. ತನಗೆ ನಿರ್ದಿಷ್ಟವಾದ ಹತ್ತು ತಿಂಗಳುಗಳಲ್ಲಿ ಕಳೆದ ತಿಂಗಳು ಗಳ, ಇನ್ನುಳಿದ ತಿಂಗಳುಗಳ ಲೆಕ್ಕ ಮಾಡುತ್ತಿರುವನು. ಭಗವಂತನು ತನ್ನನ್ನು ಅಲ್ಲಿಂದ ಎಂದು ಹೊರಗೆ ಹಾಕುತ್ತಾನೆಂದು ಯೋಚಿಸುತ್ತಿರುವನು.-

- ಸ್ವಂತ ಮನೆಯುಳ್ಳ ವ್ಯಕ್ತಿಗೆ, ಇನ್ನೊಬ್ಬರ ಮನೆಯಲ್ಲಿ ನೆಲಿಸುವ ಪ್ರಸಂಗ ಬಂದಲ್ಲಿ, ತನಗೆ ಇರಲು ಕೀಳು ಸ್ಥಳ ಕೊಟ್ಟರೆ ಬಹಳೇ ವ್ಯಥೆ ಪಡುವನು. ತಾಯಿಯ ಗರ್ಭದಲ್ಲಿರುವ ಜೀವಿಯು ಹೀಗೆಯೆ ವ್ಯಥೆ ಪಡುವನು. ಅಂತೆಯೆ 'ಜೀವಿ'-ಎಂದು ಹೇಳುವ ಬದಲಾಗಿ 'ದೇಹಿ'-ದೇಹವೆಂಬ ಸ್ವಂತ ಮನೆ ಯುಳ್ಳವನು, ಇನ್ನೊಬ್ಬರ 'ಹೊಟ್ಟೆ'(ಕುಕ್ಷಿ)ಯಲ್ಲಿ -ಎಂದು ಹೇಳುವದಕ್ಕೆ ಪ್ರತಿ 'ಅನ್ಯದೇಹವಿವರೆ' -ಇನ್ನೊಬ್ಬರ ಮನೆಯಾದ ದೇಹದಲ್ಲಿ-ಎಂದು ಹೇಳಿರುವರು.

ಪುರುಷನ ರೇತಸ್ಸಿನ ದ್ವಾರಾ ಸ್ತ್ರೀ ಗರ್ಭವನ್ನು ಸೇರಿದ ಜೀವನು ಒಂದು ರಾತ್ರಿ ಯಲ್ಲಿ 'ಕಲಲ', ಐದು ರಾತ್ರಿಗಳಲ್ಲಿ 'ಬುದ್ಬುದ', ಹತ್ತು ದಿನಗಳಲ್ಲಿ 'ಕರ್ಕಂಧೂ'- ಎಂದು ಹೇಳುವರು. ಒಂದು ತಿಂಗಳಿಗೆ ತಲೆಯೂ, ಎರಡು ತಿಂಗಳಿಗೆ ತೋಳುಪಾದ ಗಳಿಂದ ಕೂಡಿದ ಆಕೃತಿ, ಉಗುರು, ಕೂದಲು, ಎಲುಬು, ತೊಗಲು,-ಲಿಂಗ ಲಕ್ಷಣ

ಳಾದ ದ್ವಾರಗಳು, ಮೂರನೇಯ ತಿಂಗಳಿನಲ್ಲಿ :- ನಾಲ್ಕನೇಯ ತಿಂಗಳಿನಲ್ಲಿ ೇಹಕ್ಕೆ ಆಧಾರವಾದ ರಸಾತ್ಮಕ ಸಪ್ತಧಾತುಗಳು (ರಸ, ರಕ್ತ, ಮಾಂಸ, ಮೇಧಸ್ಸು, ಮಿದುಳು), ಎಲುಬು, ನೆಣ(ಮಜ್ಜಾ) ಹಾಗೂ ಶುಕ್ರ,) :- ಐದನೇಯ ತಿಂಗಳಿನಲ್ಲಿ ರಸಿವೆ ನೀರಡಿಕೆಗಳು;- ಆರನೇಯ ತಿಂಗಳಿನಲ್ಲಿ ಗರ್ಭಬಂಧದಿಂದ ಮುಕ್ತನಾಗಿ ತಾಯಿಯ ದಕ್ಷಿಣ ಹೊಟ್ಟೆಯಲ್ಲಿ ಸುತ್ತಲು ಚಲಿಸತೊಡಗುವನು. ಏಳನೇಯ ತಿಂಗ ಿನಲ್ಲಿ ಜನ್ಮಾಂತರಗಳ ನೆನಪಿನಿಂದ, ಪರಮಾತ್ಮನ ಮಾಯೆಯಿಂದ, ತನಗಾಗಿರುವ ಬಂಧನದ ಬಗ್ಗೆ ಯೋಚಿಸುವನು. ತಾಯಿ ಉಣ್ಣುವ ಅನ್ನ, ಕುಡಿಯುವ ಪೇಯಗ ಳಿಂದ ತುಂಬಾ ಕಷ್ಟಕ್ಕೊಳಗಾಗಿ ಮಲಮೂತ್ರಗಳ ಚೀಲದಲ್ಲಿ, ಅಲ್ಲಿ ಕ್ರಿಮಿಜಂತುಗಳು ತನ್ನ ಕೋಮಲಾಂಗವೆನ್ನೆಲ್ಲ ಕಚ್ಚುತ್ತಿರಲು, ಗಳಿಗೆಗಳಿಗೆಗೆ ಮೂರ್ಛೆ ಹೊಂದುತ್ತ, ತಾಯಿಯ ಆಹಾರದಲ್ಲಿಯ ಉಪ್ಪು, ಕಾರ, ಕಹಿಗಳ ಬಾಧೆಯಿಂದ, ಇಡೀ ದೇಹವೇ ನೋವಿನಿಂದ ಕೂಡಿದ್ದಾಗಿ ಗರ್ಭಕೋಶದಲ್ಲಿ ಮುಸುಕಿಕೊಂಡು, ನರಗಳಿಂದ ಬಿಗಿ-ಯಲ್ಪಟ್ಟು ತಲೆಯನ್ನು ಹೊಟ್ಟೆಯಲ್ಲಿ ಸೇರಿಸಿಕೊಂಡು, ಮಲಮೂತ್ರಗಳ ಚೀಲದಲ್ಲಿ ಮಲಗಿಕೊಂಡಿರುವನು. ಪಂಜರದಲ್ಲಿಯ ಪಕ್ಷಿಯಹಾಗೆ ತನ್ನ ಅವಯವಗಳನ್ನು ಅಲ್ಲಾಡಿಸಲು ಅಸಮರ್ಥನಾಗಿರುವನು. ನೂರಾರು ಹಿಂದಿನ ಜನ್ಮಗಳ, ಕರ್ಮ ಗಳ, ದೈವಬಲದಿಂದ ಹಿಂದಿನ ಜನ್ಮಗಳ ನೆನಪು ಉಂಟಾಗುವದು. ಆಗ್ಗೆ ಪಶ್ಚಾತ್ತಾಪದ ದುಃಖದಿಂದ ನಿಟ್ಟುಸುರನ್ನು ಬಿಡುವನು. ಈ ಬಗೆಯ ಗರ್ಭ ವಾಸದಲ್ಲಿ ಏನು ಸುಖ ಪಡೆಯುವನು ?

॥೫೪॥ **ಅಹೋ ವಿಧಾತಸ್ತ್ವಮತೀವ ಬಾಲಿಶೋ**
**ಯಸ್ತ್ವಾತ್ಮಸೃಷ್ಟೇಃ ಪ್ರತಿರೂಪಮೀಹಸೇ ।**
**ಪರೇ ತು ಜೀವತ್ಯಪರಸ್ಯ ಯಾ ಮೃತಿ**
**ರ್ವಿಪರ್ಯಯಶ್ಚೇತ್ತ್ವಮಸಿ ಧ್ರುವಂ ಪರಃ ॥** ೬-೧೪-೫೩

ಈ ರೀತಿಯಾಗಿ ಸಂಸಾರದಲ್ಲಿ ಪ್ರವೇಶಕ್ಕಿಂತಲೂ ಮೊದಲು ಜೀವನಿಗೆ ಆಗುವ ದುಃಖವನ್ನು ತೋರಿಸಿಕೊಟ್ಟು ಕೊನೆಯ ಅವಸ್ಥೆಯಲ್ಲಿ ಆತನು ಅನು ಭವಿಸಬೇಕಾದ ದುಃಖವನ್ನು ನಿರೂಪಿಸುವರು.- ಗರ್ಭವಾಸದಲ್ಲಿ ಅನುಭವಿಸುವ ದುಃಖವನ್ನು ಬಣ್ಣಿಸಿದ ನಂತರ, ಬಾಲ್ಯ-ಪ್ರಾಯದಲ್ಲಿ ಒದಗುವ ಕಷ್ಟಗಳನ್ನು ಮೊದಲು ಹೇಳಿ, ಕೊನೆಯದಾದ ಮರಣದೆಸೆಯ ದುಃಖವೇದನೆಗಳನ್ನು ಹೇಳಬೇಕಿತ್ತು. ಹೀಗಿದ್ದರೂ, ಹುಟ್ಟಿದ ಮಗುವಿಗೆ ಚಿಕ್ಕಂದಿನಲ್ಲಿಯೇ ಒಮ್ಮೊಮ್ಮೆ ಮರಣ ಬರಬಹುದು. ಆದುದರಿಂದ ಅಂಥ ಮರಣದ ದುಃಖವನ್ನು ಎತ್ತಿ ತೋರಿಸುವದರಿಂದ ಸಂಸಾರದ ಬಗ್ಗೆ ಹೇಯಬುದ್ಧಿಯು ವಿಶೇಷವಾಗಿ ಉತ್ಪನ್ನ

ನಾಗುವದು, ಈ ಉದ್ದೇಶದಿಂದಲೇ ಚಿತ್ರಕೇತುರಾಜನ ಮಡದಿಯು ಮರಣ ಹೊಂದಿದ ತನ್ನ ಚಿಕ್ಕಮಗನಿಗಾಗಿ ಶೋಕಿಸುವದನ್ನು ಇಲ್ಲಿ ತೋರಿಸಿರುವರು. ಇದಲ್ಲದೆ, ಈ ಮೂರು ಅವಸ್ಥೆಗಳು ಮುಗಿದ ಮೇಲೆ ಆನಂತರದ ದುಃಖಗಳನ್ನು ಮುಂದೆ ತೋರಿಸಿಕೊಡುವರು.

**ಅರ್ಥ** :- ಸೃಷ್ಟಿಕರ್ತನಾದ ಹೇ ಬ್ರಹ್ಮನೆ ! ನೀನೇ ನಿರ್ಮಿಸಿದ ಸೃಷ್ಟಿ ಕ್ರಮಕ್ಕೆ ವಿರುದ್ಧವಾಗಿ ನೀನು ವರ್ತಿಸುತ್ತಿರುವೆ. ಆದುದರಿಂದ ನೀನು ಬಾಲಕರಂತೆ ಅಜ್ಞಾನಿಯಾಗಿರುವೆ; ಯಾರೂ ಮೆಚ್ಚದ ಕಾರ್ಯವನ್ನು ಮಾಡುತ್ತಿರುವೆ. ( ಬ್ರಹ್ಮನನ್ನು ನಿಂದೆಗೆ ಗುರಿಮಾಡುವ, ಸ್ವಂತ ಸೃಷ್ಟಿಕ್ರಮಕ್ಕೆ ವಿರುದ್ಧವಾದ ಕೃತಿಯು ಯಾವುದೆಂದರೆ- ( ಪರೆ ) ವಯಸ್ಸಿನಲ್ಲಿ ಹಿರಿಯನಾದವನು ಇನ್ನೂ ಜೀವಿಸುತ್ತಿರುವಾಗಲೇ (ಅಪರ) ಕಡಿಮೆ ವಯಸ್ಸಿನ ಚಿಕ್ಕವನು ಮರಣ ಹೊಂದುವದು. ಹೀಗೆ ಮಾಡುವದನ್ನು ಬಿಟ್ಟುಕೊಟ್ಟು, ಇದಕ್ಕೆ ಪ್ರತಿಯಾಗಿ- ಹಿರಿಯನಾದವನು ಮೊದಲು, ಆನಂತರ ಚಿಕ್ಕವನು ಮರಣಹೊಂದುವ ಕಾಲಕ್ರಮವನ್ನು ನೀನು ಆಚರಣೆಯಲ್ಲಿ ತರಬೇಕು. ಅಂದರೆ ಮಾತ್ರ ನೀನು ಖಂಡಿತವಾಗಿ ಎಲ್ಲರ ಪ್ರಶಂಶೆಗೆ ಪಾತ್ರನಾಗುವಿ.

||೬೦|| **ನ ಹಿ ಕ್ರಮಶ್ಚೇದಿಹ ಮೃತ್ಯುಜನ್ಮನೋಃ**
**ಶರೀರಿಣಾಮಸ್ತು ತದಾತ್ಮಕರ್ಮಭಿಃ |**
**ಯಃ ಸ್ನೇಹಪಾಶೋ ನಿಜಸರ್ಗವೃದ್ಧಯೇ**
**ಸ್ವಯಂ ಕೃತಸ್ತೇ ತಮಿಮಂ ವಿವೃಶ್ಚಸಿ** || ೬-೧೪-೫೪ 55

**ಅರ್ಥ** :- ದೇಹಧಾರಿಗಳಾದ ಜೀವಿಗಳಿಗೆ ಹುಟ್ಟು-ಸಾವುಗಳಿಗಾಗಿ ಮುಂದು ಹಿಂದೆಂಬ ಸ್ವಾಭಾವಿಕ ಕಾಲಕ್ರಮವು ಒಂದು ವೇಳೆ ಇಲದಿದ್ದರೂ ಸರಿ. ಆ ಮೇಲೆ, ಅವರವರ ಪಾಪ-ಪುಣ್ಯಕೃತಿಗಳಿಗೆ ಅನುಗುಣವಾಗಿ, ಸೃಷ್ಟಿಕ್ರಮಕ್ಕೆ ವಿಸಂಗತವಾದ ಮರಣವು ಒದಗಲಿ.- ಈ ಮೊದಲು ನಿಷೇಧಿಸಲ್ಪಟ್ಟ ಸೃಷ್ಟಿಗೆ ವಿಸಂಗತವಾದ ಮರಣದ ಕಾಲಕ್ರಮವನ್ನು ಹೇಗೆ ಒಪ್ಪುವಿರಿ ? ಎಂದು ಆಕ್ಷೇಪಿಸಬಹುದು. ಸೃಷ್ಟಿಗೆ ವಿರುದ್ಧವಾಗಿರುವ ಮರಣವನ್ನು ಹಿಂದೆ ನಾವು ನಿಷೇಧಿಸುವಲ್ಲಿ ಸಾಕಷ್ಟು ಕಾರಣವಿದೆ. ಹಿರಿಯರು ಬದುಕಿರುವಾಗ್ಗೆ, ಅವರಿಗೂ ಚಿಕ್ಕವರು ಸಾಯುವದು ಅತ್ಯಧಿಕವಾದ ದುಃಖವನ್ನುಂಟು ಮಾಡುವದು. ಈ ದುಃಖವು ಒದಗಬಾರದೆಂಬ ಅಭಿಪ್ರಾಯದಿಂದಲೇ ಹಾಗೆ ಹೇಳಿದೆ, ಹಾಗೂ ಮರಣದ ವಿಪರೀತ ಕ್ರಮವನ್ನು ಒಪ್ಪಿಕೊಂಡಿದೆ.

ನಿನ್ನ ಸ್ವಂತದ ಸೃಷ್ಟಿಯ ಅಭಿವೃದ್ಧಿಗೆ, ಪೋಷಣೆಗೆ, ಎಲ್ಲರನ್ನೂ ಬಂಧಿಸುವ ಮತೆ, ಪ್ರೀತಿಯೆಂಬ ಸ್ನೇಹಪಾಶವೇ ಮುಖ್ಯಸಾಧನವಾಗಿದೆ, ಈ ಪ್ರೀತಿ ಗಿಯೆ ತಾಯಿತಂದೆಗಳು ತಮ್ಮ ತಮ್ಮ ಸಂತಾನದ ಆರೈಕೆ ಹಾಗೂ ರಕ್ಷಣೆ ಡುವರು. ಈ ಮಮತೆಯ ರಕ್ಷಣೆಯಿಲ್ಲದಿದ್ದರೆ ಜೀವಿಗಳ ಸಂಥಾನವೇ ಅಳಿದು ಗುತ್ತಿತ್ತು.

ಪ್ರಜಾಭಿವೃದ್ಧಿಗಾಗಿ ಈ ಸ್ನೇಹಪಾಶವನ್ನು ರಚಿಸಿದವನೂ ನೀನೇ, ಅದನ್ನು ದುಬಿಡುವವನೂ ನೀನೇ- ಅದರಿಂದ ನಿನ್ನ ಈ ಕೃತಿಯು ಬುದ್ಧಿವಂತರು ಪ್ಪುವಂಥದಾಗಿಲ್ಲ- 'ಸ್ವಯಂ'-ಕೃತವಾದ್ದರಿಂದ, ಅದನ್ನು ಕಡಿದುಬಿಡುವ ಶ್ತಿಯು ಬ್ರಹ್ಮನಿಗೆ ಇರುವದೆಂದು ಸೂಚಿತವಾಗಿದೆ.

೦॥ **ಅಹೋ ವಯಂ ಧನ್ಯತಮಾ ಯದತ್ರ**
**ತ್ಯಕ್ತಾಃ ಪಿತೃಭ್ಯಾಂ ನ ವಿಚಿಂತಯಾಮಃ ।**
**ಅಭ್ಯಕ್ಷ್ಯಮಾಣಾ ಅಬಲಾ ವೃಕಾದಿಭಿಃ**
**ಸ ರಕ್ಷಿತಾ ರಕ್ಷತಿ ಯೋ ಹಿ ಗರ್ಭೇ ॥ ೭-೨-೩೮**

೨॥ **ಪಥಿ ಚ್ಯುತಂ ತಿಷ್ಠತಿ ದಿಷ್ಟರಕ್ಷಿತಂ**
**ಗೃಹೇ ಸ್ಥಿತಂ ತದ್ವಿಹತಂ ವಿನಶ್ಯತಿ ।**
**ಜೀವತ್ಯನಾಥೋಽಪಿ ತದೀಕ್ಷಿತೋ ವನೇ**
**ಗೃಹೇಽಪಿ ಗುಪ್ತೋಽಸ್ಯ ಹತೋ ನ ಜೀವತಿ ॥ ೭-೨-೪೦**

**ಅರ್ಥ:**- ರಾಜನ ಮಡದಿಯರು ಬಾಲಕನ ಮರಣಕ್ಕಾಗಿ ಶೋಕಿಸುತ್ತಿರಲು ಲಕವೇಷದಲ್ಲಿ ಆ ಕಾಲಕ್ಕೆ ಬಂದ ಪ್ರೇತರಾಜನು ನುಡಿದ ವಯೋವೃದ್ಧರೂ, ಜ್ಞಾನವೃದ್ಧರೂ ಕೂಡ ಮೆಚ್ಚುವಂತಿರುವ ಮಾತುಗಳನ್ನು ಕೇಳಿ ರಾಜನ ಡದಿಯರು ಬೆರಗಾದರು. 'ದಿಷ್ಟ'-ನೆಂದು ಕರೆಯಿಸುವ ಶ್ರೀ ಹರಿಕೃಪೆಯು ರುವಿಕೆ, ಅಥವಾ ಇಲ್ಲದಿರುವಿಕೆಗಳಿಂದ ಒದಗುವ ಘಟನೆಗಾಗಿ ದುಃಖಿಸಿದರೆ ನು ಪ್ರಯೋಜನ ? – ಎಂಬ ಅಭಿಪ್ರಾಯವನ್ನು ಅವರಿಗೆ ಮನಗಾಣಿಸಿ ಾಡಲು, ಉಚಿತವಾದ ಉದಾಹರಣೆಯನ್ನು ಕೊಟ್ಟಿರುವನು. ಶ್ರೀಹರಿಕೃಪೆಯು, ಷ್ಟನಾಮಕ ದೇವನ- ರಕ್ಷಣೆ ಇದ್ದರೆ. ಬೀದಿಯಲ್ಲಿ ಕಳಿಚಿ ಬಿದ್ದಿದ್ದ ಕಂಕಣಾದಿ ಳು ಮರಳಿ ದೊರೆಯುವವು. ಆತನ ರಕ್ಷಣೆ ಇರದಿದ್ದರೆ, ಮನೆಯಲ್ಲಿ ಒಳ್ಳೆ ರಕ್ಷಿತವಾಗಿ ಪೆಟ್ಟಿಗೆಯಲ್ಲಿ ಕಾಯ್ದಿಟ್ಟ ವಸ್ತುಕೂಡ ನಷ್ಟವಾಗುವದು, ೀಗೆಯೆ, ದಿಷ್ಟನಾಮಕ ಪರಮಾತ್ಮನ ಕೃಪಾದೃಷ್ಟಿಯನ್ನು ಪಡೆದ ಬಾಲಕನು,

ಅಡವಿಯಲ್ಲಿ ತೋಳ ಮುಂತಾದ ಹಿಂಸ ಪಶುಗಳ ಬಾಯಿಗೆ ಬೀಳುವದಿಲ್ಲ. ತಂದೆ ತಾಯಿಗಳ ರಕ್ಷಣೆಂಬ ಕವಚವಿಲ್ಲದಿದ್ದರೂ ಬದುಕಿ ಬಾಳುವನು. ತಾಯಿಯ ಗರ್ಭದಲ್ಲಿ ರಕ್ಷಿಸಿದ ಪರಮಾತ್ಮನೇ ನಮ್ಮನ್ನು ಯಾವಾಗಲೂ ರಕ್ಷಿಸುವನು. ಅಂತೆಯೇ ನಾವು ಬಹು ಭಾಗ್ಯವಂತರು.

ಚಿಕ್ಕಬಾಲಕನ ಅಕಾಲ ಮೃತ್ಯುವಿನಿಂದ ಒದಗುವ ದುಃಖವನ್ನು ನಿವಾರಿಸಲು ಸ್ವಯಂ ಪ್ರೇತರಾಜನೊಬ್ಬನೇ ಸಮರ್ಥನಾದನು; ಎಂಬ ಈ ದೃಷ್ಟಾಂತದಿಂದ ಸಂಸಾರದ ಹೀನತೆಯನ್ನು ಹೆಚ್ಚು ವಿಶದಗೊಳಿಸಿದಂತಾಯಿತು. ಸಂಸಾರದಲ್ಲಿ ಅನರ್ಥವು ಬಹು ತೀವ್ರವಾಗಿ ಒದಗುವದೆಂಬುದನ್ನೂ ಹೇಳಿಕೊಟ್ಟಂತಾಯಿತು.

||೬೩|| **ಕಥಂ ಪ್ರಿಯಾಯಾ ಅನುಕಂಪಿತಾಯಾಃ**
**ಸಂಗಂ ರಹಸ್ಯಂ ರುಚಿರಾಂಶ್ಚ ಮಂತ್ರಾನ್ ।**
**ಸುಹೃತ್ಸು ತತ್ಸ್ನೇಹವಶಃ ಶಿಶೂನಾಂ**
**ಕಲಾಕ್ಷರಾಣಾಮನುರಕ್ತ ಚಿತ್ತಃ ೭-೬-೧೭** // ?

ಈ ರೀತಿಯಾಗಿ ಅನಂತರ ಕಾಲದ, ಬಾಲ್ಯದ, ಕಷ್ಟಗಳನ್ನು ನಿರೂಪಿಸಿದ್ದಾಯಿತು. ಮೂರು ಅವಸ್ಥೆಗಳಲ್ಲಿ ಕೌಮಾರಾವಸ್ಥೆಯ ಕಷ್ಟವು ಹಲ್ಲು ಅಂಕುರಿಸುವ ನೋವಿನಂತೆ ಜನರಿಗೆ ಪ್ರಕಟವಾಗಿ ಗೋಚರಿಸುವದಿಲ್ಲ. ಆದುದರಿಂದ ಅದನ್ನು ವಿವರಿಸುವ ಪ್ರಯಾಸ ಅನಗತ್ಯ. ಎರಡನೆಯದಾದ ಪ್ರಾಯದ ಸಂಕಷ್ಟಗಳನ್ನೇ ವಿವರವಾಗಿ ಏಳು ಶ್ಲೋಕಗಳಲ್ಲಿ ನಿರೂಪಿಸುವರು. – ಪ್ರಲ್ಹಾದರು ದೈತ್ಯಬಾಲಕರಿಗೆ ಮಾಡಿದ ಉಪದೇಶದಲ್ಲಿ ಈ ಮಾತುಗಳು ಬಂದಿವೆ.

**ಅರ್ಥ:**– ತನ್ನ ಕರುಣೆಯನ್ನು ಪಡೆದಿರುವ ಹಾಗೂ ಪ್ರೀತಿ ಪಾತ್ರಳಾದ ಮಡದಿಯು ಏಕಾಂತ ಸಮಾಗಮವನ್ನು, ಮೋಹಕವಾದ ಅವಳ ಸರಸಸಲ್ಲಾಪವನ್ನು, ಗೆಳೆಯರ ಹಾಗೂ ಮಕ್ಕಳ ಮಮತೆಗೆ ಅಧೀನನಾಗಿ, ಎಳೆಯಮಗುವಿನ ಮೃದುಮಧುರ ತೊದಲ್ನುಡಿಗಳಲ್ಲಿ ಆಸಕ್ತನಾದ ಮನಸ್ಸುಳ್ಳವನು – (ಅವುಗಳನ್ನು ಹೇಗೆ ಬಿಟ್ಟುಕೊಡುವನು ?)

–ಮುಂದಿನ ಶ್ಲೋಕದಲ್ಲಿ ಬರುವ –'ಕಥಂತ್ಯಜೇತ್'– ಇವುಗಳನ್ನೆಲ್ಲ ಹೇಗೆ ಬಿಟ್ಟು ಕೊಡುವನು ?" ಎಂಬುದಕ್ಕೆ ಅನ್ವಯಿಸಿಕೊಳ್ಳಬೇಕು.–

||೬೪|| **ಪುತ್ರಾಂಃ ಸ್ಮರಂಸ್ತಾ ದುಹಿತೄರ್ಹೃದಯ್ಯಾ**
**ಭ್ರಾತೄನ್ ಸ್ವಸೄರ್ವಾ ಪಿತರೌ ಚ ದೀನೌ**

**ಗೃಹಾನ್ ಮನೋಜ್ಞಾನ್ ರುಚಿರಚ್ಛದಾಂಶ್ಚ**
**ವೃತ್ತೀಶ್ಚ ಕುಲ್ಯಾಃ ಪಶುಭೃತ್ಯವರ್ಗಾನ್** || ೭-೬-೧೮ 12

**ಅರ್ಥ:-** ತನಗೆ ಸಮಾನ ಸಿರಿವಂತರ ಮನೆತನಕ್ಕೆ ಧಾರೆಯೆರೆದುಕೊಟ್ಟ, ಅತ್ಯಂತ ಆತ್ಮೀಯರಾದ ಹೆಣ್ಣುಮಕ್ಕಳನ್ನು, ಅಣ್ಣ ತಮ್ಮಂದಿರು-ಅಕ್ಕತಂಗಿಯರನ್ನು ಮರೆಯಲಾರದೆ, ಸಂಸಾರದಲ್ಲಿ ಅನುಭವಿಸಿದ ದುಃಖ ಶೋಕಗಳಿಂದ ದುಃಖಿತರಾದ ತಾಯಿ ತಂದೆಗಳನ್ನು, ರಮಣೀಯವಾಗಿ ಕಟ್ಟಿಸಿದ, ಸುಖ ಸೌಕರ್ಯಗಳಿಂದ ಸಮೃದ್ಧವಾದ ಮನೆಗಳನ್ನು, ಕುಲ ಪರಂಪರೆಯಿಂದ ಸಾಗಿ ಬಂದಿರುವ ಆಸ್ತಿ ದುಡಿಮೆಗಳನ್ನು ದನಕರು ಹಾಗೂ ಆಳು ಹೋಳುಗಳನ್ನು- (ಹೇಗೆ ಬಿಟ್ಟು ಕೊಡುವನು?)

- ಹೆಣ್ಣು ಮಕ್ಕಳ ಅಕ್ಕ ತಂಗಿಯರ ನೆನಪಾಗಲು ಕಾರಣವೆಂದರೆ- ಕೊಟ್ಟ ಮನೆಯಲ್ಲಿ ಅವರು ಸುಖಿಯಾಗಿ ಬಾಳುವರೆ ? ಅಥವಾ ನಮ್ಮ ಮನೆಗೆ ಅವರನ್ನು ಎಂದು ಕರೆತರಬೇಕು- ಇವೇ ಮುಂತಾದ ಯೋಚನೆಗಳು -

||೬೫|| **ತ್ಯಜೇತ್ ಕೋಶಸ್ಥ ಇವೇಹಮಾನಃ**
**ಕರ್ಮಾಣಿ ಲೋಭಾದವಿತೃಪ್ತಕಾಮಃ |**
**ಔಪಸ್ಥ್ಯ ಜೈಹ್ವ್ಯಂ ಬಹುಮನ್ಯಮಾನಃ**
**ಕಥಂ ವಿರಜ್ಯೇತ್ ದುರಂತಮೋಹಃ** || ೭-೬-೧೯ 13

**ಅರ್ಥ:-** ಆತ್ಯಾಶೆಯಿಂದ ಬಯಕೆಗಳನ್ನು ತೃಪ್ತಿಗೊಳಿಸಲಾರದೆ, ತನಗೆ ಬಂಧಕವಾದ ಕೋಶವನ್ನು ತಾನೇ ರಚಿಸಿಕೊಳ್ಳುವ ಕೀಟದಂತೆ, ಲೋಭಕ್ಕೆ ಎಳೆಸುವ ಕೃತಿಗಳನ್ನೆ ಮತ್ತೆ ಮತ್ತೆ ಮಾಡುತ್ತ, ನಾಲಿಗೆಯ ಹಾಗೂ ಲೈಂಗಿಕ ಬಯಕೆಗಳನ್ನು ತೃಪ್ತಿಪಡಿಸುವದರಲ್ಲಿಯೇ ಅಪಾರ ಆಸ್ಥೆಯುಳ್ಳವನಾಗಿ, ಅವುಗಳ ತೃಪ್ತಿಯನ್ನೇ ಮಹಾ ಪುರುಷಾರ್ಥವೆಂದು ಭಾವಿಸುವ ಮಾನವನು- ಹಿಂದೆ ಹೇಳಿದ ಮನೆ-ಮಡದಿ-ಮಕ್ಕಳು ಮುಂತಾದವುಗಳ ಬಗ್ಗೆ ತನ್ನ ಆಸಕ್ತಿಯನ್ನು ಹೇಗೆ ಬಿಟ್ಟು ಕೊಡುವನು? -ಅವನೆಂದಿಗೂ ವಿರಕ್ತನಾಗಲಾರನು. - ' ಮನೆಮಾರುಗಳಲ್ಲಿ ಆಸಕ್ತನಾಗಿ, ಇಂದ್ರಿಯಗಳನ್ನು ಗೆಲ್ಲಲಾರದ ಯಾವ ವ್ಯಕ್ತಿಯೂ ತನ್ನನ್ನು ಬಲವಾಗಿ ಬಿಗಿದಿರುವ ಮೋಹದ ಬಂಧನದಿಂದ ಬಿಡುಗಡೆಯಾಗಲು ಹವಣಿಸುವದಿಲ್ಲ.

||೬೬|| **ಕುಟುಂಬಪೋಷಾಯ ಚ ಯನ್ನಿ-**
**ಜಾಯುರ್ನ ಬುಧ್ಯತೇಽರ್ಥಂ ವಿಹತಂ ಪ್ರಮತ್ತ ||**
**ಸರ್ವತ್ರ ತಾಪತ್ರಯದುಃಖಿತಾತ್ಮಾ**
**ನಿರ್ವಿದ್ಯತೇ ನ ಸ್ವಕುಟುಂಬರಾಮಃ** || ೭-೬-೨೦ 14

ಪ್ರಾಯದ ಕಾಲಕ್ಕೆ ಇಂದ್ರಿಯಗಳನ್ನು ತೃಪ್ತಿಪಡಿಸುವ ತೊಳಲಾಟದಲ್ಲಿ ವೈರಾಗ್ಯವು ಜನಿಸದಿರಬಹುದು. ಆದರೆ ಮುಪ್ಪಿನ ಕಾಲದಲ್ಲಿ ಇಂದ್ರಿಯಗಳ ಶಕ್ತಿಯು ಕುಗ್ಗಿ ಹೋಗುವದು; ಹಣ ಗಳಿಸುವ ಸಾಮರ್ಥ್ಯವು ಇಲ್ಲದಂತಾಗುವುದು –ಅದ ರಲ್ಲಿಯೂ ವಿಶೇಷತ: ಭೋಗದ್ರವ್ಯಗಳಿಗೆ ಅಗತ್ಯವಾದ ದ್ರವ್ಯದ ಕೊರತೆಯಾಗು ವದು. ಆ ಸಮಯಕ್ಕೆ ಹೀಗೆ ಮನಸ್ಸು ಯೋಚಿಸಬಹುದು.– 'ಇಷ್ಟೊಂದು ಕಾಲು ಪಾರತ್ರಿಕವಾದ ಆತ್ಮೋದ್ಧೃತಿಗೆ ಸಾಧನವಾದುದನ್ನು ಕಿಂಚಿತ್ತಾದರೂ ನಾನು ಮಾಡಲಿಲ್ಲ' ಹೀಗೆ ಪಶ್ಚಾತ್ತಾಪಭಾವನೆಯಿಂದ ಬಂಧುಗಳ, ಯಜಮಾನನ ಇಲ್ಲವೆ ಗೆಳೆಯನ ಬಳಿಗೆ – ಎಲ್ಲಿಡೆಗೆ ಹೋದರೂ ತಾಪತ್ರಯಗಳನ್ನೆಲ್ಲ ಅನುಭವಿಸಿ, ನೊಂದುಕೊಂಡಾಗಲೂ, ಕೊನೆಗೊಮ್ಮೆ ಉಪರತಿಯು ಸಾಂಸಾರಿಕ ಸುಖಗ ಬಗ್ಗೆ ಹೇಯ ಬುದ್ಧಿಯು, ಉಂಟಾಗಲೇಬೇಕಲ್ಲವೆ ? – ಎಂದರೆ,– 'ನೀವು ಹೇಳು ವದು ಸರಿ. ಜನ್ಮ ಜನ್ಮಗಳಲ್ಲಿ ಪುಣ್ಯ ಗಳಿಸಿದ ಕೆಲವೊಂದು ಜನರಿಗೆ ಮಾತ್ರ ಇಳಿ ವಯಸ್ಸಿನಲ್ಲಿ ಈ ಬುದ್ಧಿಯು ಒದಗಬಹುದು. – ಪಶುಗಳಂತಿರುವವರು, ಡಾಂಭಿಕರು, ಕೌಟುಂಬಿಕ ವಿಷಯಗಳಲ್ಲಿಯೆ ತಮ್ಮ ಮನಸ್ಸನ್ನು ಸಂಪೂರ್ಣ ವಾಗಿ ತೊಡಗಿಸುವರು. ಅಂಥವರಿಗೆ ಸಾಯುವವರೆಗೂ ಇಂಥ ಬುದ್ಧಿಯು, ಉಂಟಾಗುವದಿಲ್ಲ.–

ಅರ್ಥ:– ಕುಂಟುಂಬದ ಪಾಲನೆಯಲ್ಲಿಯೆ ನಿಯತವಾದ ತನ್ನ ಆಯುಷ ವನ್ನು ವ್ಯಯಿಸಿದವನು ವಿವೇಕವನ್ನು ಕಳೆದುಕೊಳ್ಳುವನು. ಜೀವನದ ಮುಖ್ಯ ಪ್ರಯೋಜನವಾದ ಪುರುಷಾರ್ಥವು ನಾಶವಾಗುವುದನ್ನು ಆತನು ತಿಳಿದುಕೊಳ್ಳು ದಿದಿಲ್ಲ. ಕುಟುಂಬದಲ್ಲಿಯೆ ಆಸಕ್ತನಾಗಿ, ನಾಲ್ಕು ನಿಟ್ಟಿನ ತಾಪತ್ರಯಗಳಿಂದ ಮನಸ್ಸು ನೊಂದುಕೊಂಡರೂ, ಆತನಲ್ಲಿ ವಿರಕ್ತಿಯು ಉಂಟಾಗುವದಿಲ್ಲ.

–' ತಿಳುವಳಿಕೆ ಬಾರದ ಬಾಲ್ಯ ಕೌಮಾರಾವಸ್ಥೆಗಳಲ್ಲಿ, ಆಟಪಾಟಗಳಲ್ಲಿಯೆ ಇಪ್ಪತ್ತು ವರುಷಗಳು ಕಳೆದುಹೋಗುವವು. ದೇಹಕ್ಕೆ ಮುಪ್ಪು ಅದರಿ, ದುರ್ಬ ಲನಾದಾಗ್ಗೆ ಇಪ್ಪತ್ತು ವರುಷಗಳು ಕಳೆಯುವವು. ಪ್ರಬಲವಾದ ಮೋಹಕ್ಕೆ, ತೃಪ್ತಿಪಡಿಸಲಾರದ ಕಾಮಕ್ಕೆ ಬಲಿಯಾಗಿ ಮನೆ ಮಾರುಗಳಲ್ಲಿಯೆ ಆಸಕ್ತನಾಗಿ ತಪ್ಪು ದಾರಿಯನ್ನು ಹಿಡಿದಾಗ್ಗೆ ಆಯುಷ್ಯದ ಉಳಿದ ಅವಧಿಯೆಲ್ಲ ವೆಚ್ಚವಾಗು ವದು.

**||೬೬|| ವಿತ್ತೇಷು ನಿತ್ಯಾಭಿನಿವಿಷ್ಟಚೇತಾ**
**ವಿದ್ವಾಂಶ್ಚ ದೋಷಂ ಪರವಿತ್ತಹರ್ತುಃ|**
**ಪ್ರೇತ್ಯೇಹ ಚಾಥಾಪ್ಯಜಿತೇಂದ್ರಿಯಸ್ತ-**
**ದಶಾಂತಕಾಮೋ ಹರತೇ ಕುಟುಂಬೀ|| ೭-೬-೨೧** 15

– ಪರಮಪುರುಷಾರ್ಥಕ್ಕೆ ಆತಂಕವಾಗಿರುವ ಅನೇಕ ವಿಷಯಗಳಲ್ಲಿ ಎರಡು ಮಾತ್ರ ಮಹಾ ಬಂಧಕಗಳು. – ಮೊದಲನೆಯದು ಹೊನ್ನು, ಎರಡನೆಯದು ಹೆಣ್ಣು, ಮೊದಲಿನದಾದ ದ್ರವ್ಯದ ಆಶೆಯನ್ನು ಬಿಟ್ಟುಕೊಡಲು ಯಾರಿಗೂ ಶಕ್ಯವಿಲ್ಲ. – ಆದುದರಿಂದ ಹಣವಿಲ್ಲದಿದ್ದರೂ ವೈರಾಗ್ಯ ಉಂಟಾಗುವದಿಲ್ಲ, ಹಣದ ಆಶೆಯು ಅಳಿಯುವದಿಲ್ಲ

ಅನ್ಯರ ಸೊತ್ತನ್ನು ಅಪಹರಿಸುವದರಿಂದ ಒದಗುವ ಇದೇ ಲೋಕದಲ್ಲಿ ಹೊಡೆತ ಬಂದಿವಾಸ ಮುಂತಾದವುಗಳನ್ನು, ಪರಲೋಕದಲ್ಲಿ ಯಮಯಾತನೆಗಳನ್ನೂ – ಅರಿತವನಾದರೂ ಕುಟುಂಬ ಪೋಷಣೆಯಲ್ಲಿಯೇ ಆಸಕ್ತನಾಗಿ ಇಂದ್ರಿಯಗಳನ್ನು ಅಂಕಿತದಲ್ಲಿ ಇಟ್ಟುಕೊಳ್ಳಲಾರದೆ, ಮನಸ್ಸಿನ ನೆಮ್ಮದಿಯನ್ನು ಕಳೆದುಕೊಳ್ಳುವನು. ಕುಟುಂಬ ಪೋಷಣೆಗಾಗಿ ಹಣ ಗಳಿಸುವದರಲ್ಲಿಯೇ ಆತನ ಮನಸ್ಸು ನಿರತವಾಗುವದು. ಈ ಲೋಕದಲ್ಲಿ ಇಲ್ಲವೆ ಪರಲೋಕದ ತನಗೆ ಒದಗಬಹುದಾದ ಶಿಕ್ಷೆಯನ್ನು ಕಡೆಗಣಿಸಿ ಅನ್ಯರ ಸೊತ್ತನ್ನು ಅಪಹರಿಸುವನು.

– 'ಪ್ರಾಣಕ್ಕಿಂತಲೂ ಅಧಿಕವಾಗಿ ತಿಳಿದಿರುವ ಹಣದ ಲೋಭವನ್ನು ಯಾರಾದರೂ ಬಿಟ್ಟುಕೊಡುವರೇ ? ಕಳ್ಳರು, ಸೇವಕರು, ವರ್ತಕರು ತಮ್ಮ ಪ್ರಾಣವನ್ನೇ ತೆತ್ತಾದರೂ ಹಣ ಗಳಿಸುವರು "

||೭೮|| **ಯತೋ ನ ಕಶ್ಚಿತ್ ಕ್ವ ಚ ಕುತ್ರ ವಿದ್ವಾನ್**
**ದೀನಂ ಸ್ವಮಾತ್ಮಾನಮಲಂ ಸಮರ್ಥಃ |**
**ವಿಮೋಚಿತುಂ ಕಾಮದೃಶಾಂ ವಿಹಾರ-**
**ಕ್ರೀಡಾಮೃಗೋಽಯಂ ನಿಗಡೋಽಸ್ಕ್ರಿಸರ್ಗಃ** || ೭-೬-೨೨ 17

– ಎರಡನೆಯ ಮಹಾಬಂಧಕವಾದ ಸ್ತ್ರೀ ವ್ಯಾಮೋಹವನ್ನೂ ಬಿಟ್ಟುಕೊಡಲು ಯಾರಿಗೂ ಶಕ್ಯವಿಲ್ಲವೆಂದು ಹೇಳಿದೆ–

**ಅರ್ಥ**– ವೇದಶಾಸ್ತ್ರಗಳಲ್ಲಿ ಬಲ್ಲಿದನಾಗಿರಬಹುದು. ಅಂಥವನೂ ಸ್ತ್ರೀ ಕೂಡ ಮೋಹದಿಂದ ಅವರಿಗೆ ಮನರಂಜನೆಗಾಗಿ ಸಾಕಿದ ಪ್ರಾಣಿಯಂತಾಗುವನು. ಸ್ತ್ರೀಯರ ಓರೆ ನೋಟಗಳೇ ಅವನನ್ನು ಕಟ್ಟಿಹಾಕುವ ಸರಪಳಿ. ಅವನು ಯಾರೇ ಆಗಿರಲಿ, ಎಲ್ಲಿಯೇ ಇರಲಿ, ಯಾವ ಕಾಲದಲ್ಲಿಯೇ ಜೀವಿಸಲಿ. ಅಸಹಾಯನಾಗಿ, ದುಃಖಿತನಾಗಿ ಈ ಬಂಧನದಿಂದ ತನ್ನನ್ನು ಬಿಡಿಸಿಕೊಳ್ಳಲು ಅವನಿಗೆ ಶಕ್ತಿ ಸಾಲದು. –

–" ಸ್ತ್ರೀ ರೂಪವಾದ ನನ್ನ ಮಾಯಾ ಶಕ್ತಿಯು ಅಗಾಧವಾದುದು. ಸಕಲ ದಿಕ್ಕುಗಳನ್ನು ಅದು ಗೆಲ್ಲುವದು. ಕೇವಲ ತನ್ನ ಕುಡಿನೋಟದಿಂದ ಸ್ತ್ರೀಯು ಸಕಲರನ್ನೂ ತನಗೆ ಅಂಕಿತರಾಗಿ ಮಾಡಿಕೊಳ್ಳುವಳು "–

||೬೯|| ನಿರ್ಜಿತ್ಯ ದಿಕ್ಚಕ್ರಮಭೂತವಿಗ್ರಹೋ
ವರಾಸನಸ್ಥಃ ಸಮರಾಜವಂದಿತಃ |
ಗೃಹೇಷು ಮೈಥುನ್ಯಸುಖೇಷು ಯೋಷಿತಾಂ
ಕ್ರೀಡಾಮೃಗಃ ಪೂರುಷ ಈಶ ನೀಯತೇ || ೧೦-೫೧-೫೩

– ಈ ವಿಷಯದಲ್ಲಿ ಹೀಗೆ ಕೇಳಬಹುದು. ಕಡುಬಡವನಾದ ಬ್ರಾಹ್ಮಣನು ದೈವವಶಾತ್ ಸುಂದರ ಸ್ತ್ರೀಯರನ್ನು ಪಡೆದು, ಅತೀ ಮೋಹದಿಂದ ಅವಳಿಗೆ ಕ್ರೀಡೆಗಾಗಿ ಸಾಕಿದ ಪ್ರಾಣಿಯಂತಾಗಬಹುದು. ಇದಲ್ಲದೆ ಸ್ವಭಾವತಃ ಅವನು ಬಲಹೀನನು. ಸ್ತ್ರೀಯರ ಕಟಾಕ್ಷದ ಸೆರೆಯಿಂದ ಬಿಡಿಸಿಕೊಳ್ಳಲು ಅಸಮರ್ಥನಾಗುವನು. ಆದರೆ ರಾಜರ ಮಾತು ಬೇರೆ. ಅವರು ಹತ್ತೂ ದಿಕ್ಕುಗಳನ್ನು ಗೆದ್ದ ದಿಗ್ವಿಜಯಿಗಳು. ವಾರಾಂಗನೆಯರೊಡನೆ ಸಾಕಷ್ಟು ಭೋಗ ಸುಖವನ್ನು ಪಡೆದವರು. ರಮಿಸಿದವರು. ತಮ್ಮ ತೋಳಿನ ಬಲದಿಂದ ಎಲ್ಲ ವೈರಿಗಳನ್ನು ಗೆದ್ದು ಧಿಃಕರಿಸಿದವರು. ಇಂಥ ಬಲಶಾಲಿಗಳು ಸ್ತ್ರೀಯರಿಗೆ ಸಾಕಿದ ಕ್ರೀಡಾ ಮೃಗಗಳು ಹೇಗೆ ಆಗಬಲ್ಲರು ? – ಅವರ ಕುಡಿನೋಟವೆಂಬ ಸಂಕೋಲೆಯಿಂದ ತಮ್ಮನ್ನು ಬಿಡಿಸಿಕೊಳ್ಳಲು ಹೇಗೆ ಅಸಮರ್ಥರಾಗುವರು ?" ಈ ಪ್ರಶ್ನೆಗೆ ಉತ್ತರವಿದು.

– ಬೇಕಾದವರವನ್ನು ಬೇಡಲು ಹೇಳಿದಾಗ, ಮುಚಕುಂದ ಮಹಾರಾಜನು ಶ್ರೀಕೃಷ್ಣನಿಗೆ ಮಾಡಿಕೊಂಡ ಬಿನ್ನಹವಿದು.–

**ಅರ್ಥ:**– ಸಕಲ ದಿಕ್ಕುಗಳನ್ನು ಗೆದ್ದು, ತನ್ನೊಡನೆ ಯುದ್ಧ ಮಾಡಲು ಯಾರೂ ಉಳಿಯದಂತೆ ದಿಗ್ವಿಜಯಿಯಾದವನ್ನು, ಅಖಂಡ ಸಾರ್ವಭೌಮತ್ವದ ಸಿಂಹಾಸನವನ್ನೇರಿದವನು, ಐಶ್ವರ್ಯಾದಿಗಳಲ್ಲಿ ತನಗೆ ಸರಿಸಮರಾದ ರಾಜರಿಂದ ವಂದಿಸಲ್ಪಡುವವನು – ಹೀಗಿದ್ದರೂ ಕೂಡ ಸ್ತ್ರೀ ಸುಖದ ಕ್ರೀಡೆಗಳ ಸಾಧನಗಳಿಂದ ತುಂಬಿದ ಅರಮನೆಗಳಲ್ಲಿ ಪ್ರವೇಶ ಮಾಡುವದರಿಂದಲೇ ರಾಜರು ಮುಂತಾದವರು ಸ್ತ್ರೀಯರಿಗೆ ವಿಹಾರಕ್ಕೆಂದು ಸಾಕಿದ ಪ್ರಾಣಿಗಳಾಗಿಬಿಡುವರು. ಎಂದು ವಂದಿ ಮಾಗಧರು ಜಗತ್ತಿನಲ್ಲಿ ಪರೋಕ್ಷವಾಗಿ ಹೇಳುವರು.

– ಸರಪಳಿಯಿಂದ ಕಟ್ಟಲ್ಪಟ್ಟ ಮೃಗುವು ತನ್ನನ್ನು ತಾನೇ ಬಿಡುಗಡೆ ಮಾಡಿಕೊಳ್ಳಲಾರರು. ಕ್ರೀಡಾ ಮೃಗಗಳಾಗುವ ರಾಜರು ಕೂಡ ಸ್ತ್ರೀಯರಿಗೆ ಅಷ್ಟೇ ಅಂಕಿತರಾಗುವರು. – ಎಂಬುದು ಇಲ್ಲಿ ತಾತ್ಪರ್ಯವಾಗಿದೆ. –

– 'ಅಹಾ! ನನ್ನ ಮನಸ್ಸು ಎಷ್ಟು ಮಂಕಾಗಿದೆ ! ಚಕ್ರವರ್ತಿಯೂ, ನರಶ್ರೇಷ್ಠನೂ ಆದ ನಾನು ಸ್ತ್ರೀಯರಿಗೆ ಮನಸೋತು ಅವರ ಕ್ರೀಡಾ ಮೃಗವಾಗಿ ಬಿಟ್ಟಿರುವೆನು."–

॥೭೦॥ ವಿದ್ವಾನಪೀತ್ಥಂ ದನುಜಾಃ ಕುಟುಂಬಂ
ಪುಷ್ಣನ್ ಸ್ವಲೋಕಾಯ ನ ಕಲ್ಪತೇ ವೈ ।
ಯಃ ಸ್ವೀಯ ಪಾರಕ್ಯವಿಭಿನ್ನ ಭಾವ-
ಸ್ತಮಃ ಪ್ರಪದ್ಯೇತ ಯಥಾ ವಿಮೂಢಃ ॥ ೭-೬-೧೧

– ಪ್ರಾಯದ ಅವಸ್ಥೆಯ ಕಷ್ಟ-ನೋವುಗಳನ್ನು ನಿರೂಪಿಸಿದ್ದಾಯಿತು. ಅನಂತರದ ಅವಸ್ಥೆಯಾದ ಮುಪ್ಪಿನ ಅವಸ್ಥೆಯ ವ್ಯಥೆಗಳನ್ನು ತೋರಿಸುವರು–

– ದೈತ್ಯ ಬಾಲಕರಿಗೆ ಪ್ರಲ್ಹಾದರು ಹೇಳಿದ ಮಾತು.–

– ದೈತ್ಯ ಬಾಲಕರೆ, – ವೇದ ಶಾಸ್ತ್ರಗಳಲ್ಲಿ ಪಾರಂಗತನಾದ ಜ್ಞಾನಿಯಾಗಿದ್ದರೂ, ದೇಹದ ಅಂಗಾಂಗಗಳಲ್ಲಿ ಶಕ್ತಿಯಿರುವವರೆಗೂ ತನ್ನ ಮಡದಿ ಮಕ್ಕಳು ದ್ರವ್ಯ–ದನಕರು, ಅಪ್ತೇಷ್ಟರು – ಸೇವಕರು, ಇವರೆಲ್ಲರಲ್ಲಿ ದೃಢವಾದ ಮಮತೆಯುಳ್ಳವನಾಗಿ, ಅವರ ಪೋಷಣೆ ಮುಂತಾದವುಗಳಿಗಾಗಿ ಹಣ ಗಳಿಸಲು ಅಲ್ಲಲ್ಲಿ ಅಲೆದಾಡುವನು. ತನ್ನ ಮನೋರಥ ಒಂದೆಡೆಗೆ ಈಡೇರಿದಾಗ ಆನಂದ ಪಡುವನು ದೊರೆಯದಿರುವಲ್ಲಿ ಕೊರಗುವನು ಮುಂದೆ ಮುಪ್ಪಿನಿಂದ ದೇಹವು ದುರ್ಬಲವಾಗುವದು. ಆ ಕಾಲಕ್ಕೂ ಕೂಡ ಹಣ ಗಳಿಸಲು ಆಯಾಸದಿಂದ ಅಲ್ಲಲ್ಲಿಗೆ ಹೋಗುವನು. ಏನೂ ದೊರೆಯದಂತಾಗುವದು. ಮುಪ್ಪು ಆವರಿಸುವದು. ದೈನ್ಯ ಭಾವನೆಯಿಂದ ಭಿಕ್ಷುಕರಂತೆ ಮುಖ ಮಾಡಿಕೊಂಡು ಮನೆಯಲ್ಲಿಯೇ ಇರುವನು. ನಾಯಿಗೆ ಹಾಕಿದಂತೆ ಅನಾದರದಿಂದ ಅನ್ನವನ್ನೇ ಉಣ್ಣುವನು. ಬೇನೆ ರೋಗಗಳಿಗೆ ಬಲಿಯಾಗುವನು. ಜಠರಾಗ್ನಿಯು ಮಂದವಾಗುವದು. ಆಹಾರ ಕಟ್ಟಾಗುವದು. ತಿರುಗಾಡಲು ಶಕ್ತಿ ಸಾಲದು. ಆದರೂ ಕುಟುಂಬದ ಚಿಂತೆಯಿಂದಲೇ ಮನಸ್ಸು ಕೊರಗುವದು. – ‘ ನಾನು ತೀರಿಕೊಂಡನಂತರ, ನನ್ನ ತಂದೆ ತಾಯಿಗಳು, ಮಡದಿ ಮಕ್ಕಳು, ಉಳಿದ ಪರಿವಾರದವರು ಹೇಗೆ ಬದುಕಬೇಕು ?– ಈ ಉದ್ದಿಮೆ, ಇದೆಲ್ಲ ಆಸ್ತಿ, ಮನೆ ದನಕರು – ಇವೆಲ್ಲವೂ ಅವರಿಗಾಗಿ ಬಿಟ್ಟುಕೊಡುವೆ. ಆದರೆ ನನ್ನ ಅಣ್ಣ ತಮ್ಮಂದಿರಿಗೆ ಇವುಗಳಲ್ಲಿ ಅಲ್ಪ ಪಾಲನ್ನೂ ಕೊಡಕೂಡದು. ಒಂದು ವೇಳೆ ಕೊಟ್ಟರೂ ಇಂತಿಷ್ಟೇ ಮಾತ್ರ.’– ಹೀಗೆ ‘ ನನ್ನವರು –ಬೇರೆಯವರು’ – ಎಂಬ ಭೇದಭಾವವನ್ನು ಕಲ್ಪಿಸುವ ಕಾರಣದಿಂದ ಅವನ ಮನಸ್ಸು ತೊಡಕಿನಲ್ಲಿ ಸಿಲುಕಿ ತೊಳಲಾಡುವದು. ಮರಣವು ಸಮೀಪಿಸುವದು, ಶ್ವಾಸ ಕಟ್ಟಾಗುವದು. ಗ್ಲಾನಿಯುಂಟಾಗುವದು. ತನ್ನವರು ಅಳುತ್ತಿರುವ ದನಿಯನ್ನು ಕೇಳಿದಾಗ, ಆಕಡೆ ಮನಸ್ಸು ಹರಿಯುವದು. ಅದರಲ್ಲಿಯೇ ಮಗ್ನನಾಗುವನು. ಮರಣಾಧೀನನಾಗುವನು. ಪರಲೋಕದ ಬಗ್ಗೆ ಆತನಿಗೆ ಯೋಚನೆಯೇ

ಇರುವದಿಲ್ಲ, ಪುರುಷಾರ್ಥ ಯಾವ ಸಾಧನೆಯನ್ನೂ ಮಾಡಿಕೊಂಡಿರುವದಿಲ್ಲ. ಆದ್ದರಿಂದ ಅದು ಅವನಿಗೆ ಲಭಿಸುವದಿಲ್ಲ. ಇದು ಮಾತ್ರವಲ್ಲದೆ, ಅಜ್ಞಾನಿಯು, ಮೂರ್ಖನು ನರಕಕ್ಕೆ ಹೋಗುವಂತೆ, ಕೀಳು ಯೋನಿಗಳಲ್ಲಿ ಜನ್ಮತಾಳುವಂತೆ, ಅವನಿಗಾದರೂ ಅದೇ ಗತಿಯು ಒದಗುವದು.

ಹೀಗೆ ಹೇಳಿರುವರು :- ಮಡದಿ ಮಕ್ಕಳು, ಮನೆಮಾರುಗಳಲ್ಲಿ ಅತ್ಯಾಸಕ್ತನಾದ ಜೀವಿಯು ತನ್ನನ್ನೇ ತಾನು ಮೆಚ್ಚಿಕೊಳ್ಳುತ್ತಾನೆ. ಅವರ ಪೋಷಣೆಗಾಗಿಯೇ ಆತನ ದೇಹವು ಕಷ್ಟ-ದುಃಖಗಳಿಂದ ತಳಮಳಿಸುವದು. ಅತೀ ಲೋಭಿಯಾದ ಈ ಮೂರ್ಖನು ನಿರಂತರ ಪಾಪಕೃತ್ಯಗಳನ್ನೇ ಮಾಡುವನು. ಅಸಾಧುಗಳಾದ ಸ್ತ್ರೀಯರು ತಮ್ಮ ಮಾಯೆಯಿಂದ, ಏಕಾಂತದ ಸರಸಸಲ್ಲಾಪಗಳಿಂದ ಮಕ್ಕಳ ಮುಗ್ಧಮಾತುಗಳಿಂದ ಆತನ ಮೈಮನಗಳನ್ನು ಸೆಳೆಯುವರು. ದುಃಖಕ್ಕೆ ಕಾರಣವಾಗುವ ಕಪಟಗೃಹಕೃತ್ಯಗಳಲ್ಲಿ ಆತನು ಬೇಸರವಿಲ್ಲದೆ ತೊಡಗುವನು. ಈ ಗೃಹಸ್ಥನು ದುಃಖವನ್ನು ಎದುರಿಸುವ ಕೃತಿಯಲ್ಲಿಯೇ ಸುಖವನ್ನು ಕಾಣುತ್ತಾನೆ. ಮುಪ್ಪಿನ ಸ್ಥಿತಿಯಲ್ಲಿ ಬಲಹೀನನಾಗಿ ಕುಟುಂಬ ಪೋಷಣೆಯನ್ನು ಮಾಡಲು ಆತನು ಅಸಮರ್ಥನಾಗುವನು. ಸಂಪತ್ತನ್ನು ಕಳೆದುಕೊಂಡು ದೈನ್ಯದಿಂದ ಚಿಂತಿಸುತ್ತ ನಿಟ್ಟುಸಿರುಹಾಕುವನು, ಈ ಪರಿಸ್ಥಿತಿಯಲ್ಲಿಯೂ ಆತನಿಗೆ ಸಂಸಾರದ ಬಗ್ಗೆ ಹೇಯಬುದ್ಧಿ - ವೈರಾಗ್ಯಭಾವನೆ ಉಂಟಾಗುವದಿಲ್ಲ. ತಾನು ಪೋಷಿಸಿದವರೆ ಈಗ್ಗೆ ತನಗೆ ಹೊಟ್ಟೆಗೆ ಹಾಕುವಂತಾಗುವದು. ಮುಪ್ಪಿನಿಂದ ದೇಹವು ಅಂದಗೆಡುವದು, ಮನೆಯಲ್ಲಿಯೇ ಮರಣದ ದಾರಿಯನ್ನು ಕಾಯುವನು. ಮಕ್ಕಳೇ ಮೊದಲಾದವರು ನಾಯಿಗೆ ನೀಡುವಂತೆ, ಇವನಿಗೂ ಅನಾದರದಿಂದ ಹೊಟ್ಟೆಗೆ ಹಾಕುವರು. ಹೀಗಿದ್ದರೂ ಇಂದ್ರಿಯಗಳನ್ನು ಅಂಕಿತದಲ್ಲಿ ಇಟ್ಟುಕೊಳ್ಳಲಾರದೆ, ಕುಟುಂಬ ಪೋಷಣೆಯ ಚಿಂತೆಯಲ್ಲಿಯೇ ಮುಳಗಿಕೊಂಡು,- 'ಅಯ್ಯೋ, ಮುದುಕರಾದ ನನ್ನ ತಾಯಿತಂದೆ, ನನ್ನ ಚಿಕ್ಕಸಾಧ್ವಿ ಹೆಂಡತಿ, ಮಕ್ಕಳು ನಾನು ತೀರಿಕೊಂಡ ನಂತರ ಅನಾಥರಾಗಿ, ಅಸಹಾಯರಾಗಿ ಹೇಗೆ ಜೀವಿಸುವರು ?' - ಎಂದು ಮಿಡಕುವನು.-ಬೇನೆ ಬಲಿಯಲು ಹಸಿವ ಕಳಕೊಂಡು ಓಡಾಡುವ ಶಕ್ತಿಯಿಲ್ಲದವನಾಗುವನು. ಪ್ರಾಣವಾಯು ಹೊರಹೊರಡಲು, ಕಫದಿಂದ ಮೂಗು ಬಂದಾಗುವದು. ಆಯಾಸದಿಂದ ಉಸಿರಾಡವದು. ಕಂಠದಿಂದ ಘೋರಘೋರ ಸ್ವರವು ಬರುವದು. ಸಾಯುವ ಕ್ಷಣದಲ್ಲಿ ತನ್ನವರು ಅಳುವ ಶಬ್ದದಿಂದ ಬುದ್ಧಿಯು ಮಂಕಾಗುವದು. ನರಕದಲ್ಲಿ - ಅಧೋಲೋಕದಲ್ಲಿ-ಸಕಲ-ಯಾತನೆಗಳನ್ನೂ ಒಂದೊಂದಾಗಿ ಪೂರ್ಣವಾಗಿ ಅನುಭವಿಸಿ ಪಾಪ

ಪ್ರಾಯಶ್ಚಿತ್ತವನ್ನು ಮಾಡಿಕೊಂಡು ಶುಚಿಯಾಗಿ ಮತ್ತೆ ಇದೇ ಲೋಕಕ್ಕೆ ತಿರುಗಿ ಬರುವನು.

**ಅರ್ಥ :-** ದೈತ್ಯ ಬಾಲಕರೆ ! ವೇದಶಾಸ್ತ್ರಗಳಲ್ಲಿ ಪಾರಂಗತನಾದ ಜ್ಞಾನಿಯೂ ಕೂಡ ತನ್ನ ಆಸ್ತಿಯಲ್ಲಿ—ಇದು ನನ್ನವರಿಗೆ, ಇಷ್ಟೇ ಉಳಿದವರಿಗೆ ಎಂಬ ಸ್ವಕೀಯ – ಪರಕೀಯ ಭಾವನೆಯಿಂದ ಕಲುಷಿತ ಮನಸ್ಸಿನವನಾಗಿ ತನ್ನ ಕುಟುಂಬದ ಪೋಷಣೆಯಲ್ಲಿಯೆ ನಿರತನಾಗಿ ಪರಲೋಕಕ್ಕೆ ಎರವಾಗುವನು, ( ಇದು ಮಾತ್ರವಲ್ಲದೆ ), ತುಂಬಾ ಅಜ್ಞಾನಿಯಂತೆ ಅಂಧಂತಮಸ್ಸನ್ನು – ನರಕ ವನ್ನು ಹೊಂದುವನು.

ಮುಚುಕುಂದ ಶಿಕ್ಷೆನಾಳ್ಗ

**॥ ೭೧॥ ವಿಮೋಹಿತೋಽಯಂ ಜನ ಈಶಮಾಯಯಾ**
**ತ್ವದೀಯಯಾ ತ್ವಾಂ ನ ಭಜತ್ಯನರ್ಥದೃಕ್ ।**
**ಸುಖಾಯ ದುಃಖಪ್ರಭವೇಷು ಸಜ್ಜತೇ**
**ಗೃಹೇಷು ಯೋಷಿತ್ಪುರುಷಶ್ಚ ವಂಚಿತಃ ॥ ೧೦-೫೧-೪೭** 10-5

ಈ ರೀತಿಯಾಗಿ ತಾಯಿಯ ಹೊಟ್ಟೆಯಲ್ಲಿ ಮೂಡಿದಂದಿನಿಂದ ಮರಣದ ವರೆಗೂ ಒದಗುವ ವಿಶಿಷ್ಟವಾದ ದುಃಖವನ್ನು, ವೈರಾಗ್ಯವನ್ನು ಹುಟ್ಟಿಸಲು ಹೇಳಿದ್ದಾಯಿತು. ಈ ವಿಷಯದಲ್ಲಿ ಆದರವನ್ನುಂಟುಮಾಡಲು ಪೂರ್ವಿಕರ ಉದಾಹರಣೆಯನ್ನು ಇಪ್ಪತ್ತೊಂದು ಶ್ಲೋಕಗಳಲ್ಲಿ ತೋರಿಸಿಕೊಡುವರು. ಅವು ಗಳಲ್ಲಿ ಮೊದಲನೆಯದಾಗಿ ಮುಚುಕುಂದರಾಜನ ವೈರಾಗ್ಯದ ಬಗೆಯನ್ನು ಐದು ಶ್ಲೋಕಗಳಲ್ಲಿ ಹೇಳುವರು.

**ಅರ್ಥ :-** ಪ್ರಭುವೆ ! ಸಂಸಾರದ ಕಷ್ಟ-ದುಃಖಗಳು ಕಣ್ಣಿಗೆ ಕಾಣುತ್ತಿದ್ದರೂ ಕೂಡ, ನಿನ್ನ ಅಧೀನವಾದ ಮಾಯೆಯಿಂದ ಭ್ರಾಂತರಾದ ಈ ಸ್ತ್ರೀಪುರುಷರು ಮನೆ–ಮಡದಿಯೆಂಬ ವಿಷಯ ಭೋಗಗಳಿಂದ ಮೋಸಹೋಗಿ ಅವುಗಳಲ್ಲಿಯೆ ಆಸಕ್ತರಾಗುತ್ತಾರೆ. ಆದರೆ ಸಂಸಾರದುಃಖದಿಂದ ಬಿಡುಗಡೆಮಾಡುವ ನಿನ್ನನ್ನು ಆಶ್ರಯಿಸುವದಿಲ್ಲ.

ಸಂಸಾರ ಸುಖಗಳಿಂದ ವಂಚಿತರಾಗುವದು ಹಾಗೂ ನಿನಗೆ ಶರಣುಬಾರದಿರುವವದು, ಇವೆರಡಕ್ಕೂ ನಿನಗೆ ಅಧೀನವಾದ ಮಾಯೆಯೇ ಕಾರಣ.

||೭೨|| ಮಮೈಷ ಕಾಲೋಽಜಿತ ನಿಷ್ಫಲೋ ಗತೋ
ರಾಜ್ಯಶ್ರಿಯೋನ್ನದ್ಧಮದಸ್ಯ ಭೂಪತೇಃ |
ಮರ್ತ್ಯಾತ್ಮಬುದ್ಧೇಃ ಸುತದಾರಕೋಶಭೂ-
ಷ್ವಾಸಜ್ಜಮಾನಸ್ಯ ದುರಂತಚಿಂತಯಾ || ೧೦-೫೧-೪೭ 10-51-47

**ಅರ್ಥ** :– ಅಜಿತನಾಮಕ ಪರಮಾತ್ಮನೆ! ರಾಜ್ಯ ಹಾಗೂ ಐಶ್ವರ್ಯಗಳಿಂದ ನಾನು ಅತಿ ಗರ್ವಿಷ್ಟನಾದೆನು. ಈ ಭೌತಿಕ ದೇಹವೇ 'ಆತ್ಮಾ-ನಾನು' ಯೆಂಬ ಭ್ರಾಂತಿಯನ್ನು ತಾಳಿದೆನು. ಮಡದಿಮಕ್ಕಳಲ್ಲಿ, ಧನಕನಕಾದಿಗಳಲ್ಲಿಯೇ ತುಂಬಾ ತಲ್ಲೀನನಾದೆನು. ಅವುಗಳ ಬಗ್ಗೆ ಚಿಂತಸುತ್ತಿರುವಂತೆಯೆ ನನ್ನ ಆಯುಷ್ಯವು ವ್ಯರ್ಥವಾಗಿ ಕಳೆದುಹೋಯಿತು.

||೭೩|| ಕಲೇವರೇಽಸ್ಮಿನ್ ಘಟಕುಡ್ಯಸನ್ನಿಭೇ
ನಿರೂಢಮಾನೋ ನರದೇವ ಇತ್ಯಹಂ |
ವೃತೋ ರಥೇಭಾಶ್ವಪದಾತ್ಯನೀಕಪೈ-
ರ್ಗಾಂ ಪರ್ಯಟನ್ ತ್ವಾಮಗಣಯ್ಯ ದುರ್ಮದಃ || 10-51-48

ಹಿಂದೆ ಹೇಳಿದುದನ್ನೇ ಹೆಚ್ಚಿಗೆ ಸ್ಪಷ್ಟಗೊಳಿಸುವರು–

**ಅರ್ಥ** :–ಮಣ್ಣಿನ ಗಡಿಗೆ–ಗೋಡೆಗಳಿಗೆ ಸದೃಶವಾದ ಈ ಭೌತಿಕದೇಹದ ಬಗ್ಗೆ 'ರಾಜ'ನೆಂಬ ಅತಿಯಾದ ಅಭಿಮಾನವನ್ನು ತಾಳಿದೆನು. ರಥ, ಆನೆ. ಕುದುರೆ, ಕಾಲಾಳು, ಸೇನಾಪತಿಗಳು – ಇವರಿಂದ ಸುತ್ತಲೂ ಕೂಡಿಕೊಂಡು, ಮದೋನ್ಮತ್ತನಾಗಿ, ನಿನ್ನನ್ನು (ಪರಮಾತ್ಮನನ್ನು) ಕಡೆಗಣಿಸಿ ಈ ಲೋಕದಲ್ಲೆಲ್ಲ ಅಲೆದಾಡಿದೆನು.

ಪರಮಾತ್ಮನನ್ನು ಕಡೆಗಣಿಸುವದೆಂದರೆ, ಆತನ ಪೂಜೆಮಾಡದಿರುವರು–

||೭೪|| ಪುರಾ ರಥೈರ್ಹೇಮಪರಿಷ್ಕೃತೈಶ್ಚರನ್
ಮತಂಗಜೈರ್ವಾ ನರದೇವಸಂಜ್ಞಿತಃ |
ಸ ಏವ ಕಾಲೇನ ದುರತ್ಯಯೇನ
ಕಲೇವರೋ ವಿಟ್ಕೃಮಿಭಸ್ಮಸಂಜ್ಞಿತಃ || ೧೦-೫೧-೫೧
10-51-51

**ಅರ್ಥ** :– ( ಕುಡಿಕೆ–ಗೊಡೆಗಳಿಗೆ ಸದೃಶವಾದ ) ಈ ಭೌತಿಕ ದೇಹವೇ ರಾಜನೆಂಬ ಅಂಕಿತದಿಂದ, ಚಿನ್ನದ ಒಡವೆಗಳಿಂದ ಅಲಂಕೃತವಾದ ರಥಗಳಲ್ಲಿ ಕುಳಿತು, ಇಲ್ಲವೇ ಆನೆಯ (ಅಂಬಾರಿಯು) ಮೇಲೆ ಕುಳಿತು ಮೊದಲು ಸಂಚರಿಸಿತು. ಅದೇ ದೇಹವೆ ಯಾರೂ ಮೀರಲಾರದ ಕಾಲನ ಪ್ರಭಾವಕ್ಕೆ ಒಳಗಾಗಿ ಮಲ, ಕ್ರಿಮಿ, ಇಲ್ಲವೆ ಬೂದಿಯಾಗಿ ಪರಿಣಮಿಸುವದು – ಆ ಹೆಸರುಗಳಿಂದ ಕರೆಯಲ್ಪಡುವದು.

ಹೀಗೆ ಹೇಳಿರುವರು :– 'ದೇವ–ಪ್ರಭುವೆಂಬ ಬಿರುದುಳ್ಳವನೂ ಕೊನೆಯಲ್ಲಿ (ಮರಣದಲ್ಲಿ) ಕ್ರಿಮಿ, **ಮ**ಲ, ಬೂದಿಯೆಂಬ ಹೆಸರುಗಳಿಗೆ ಪಾತ್ರನಾಗುವನು. ಸ್ವಹಿತಕ್ಕಾಗಿ ಪ್ರಾಣಿಗಳಿ**ಗೆ** ದ್ರೋಹವನ್ನು ಬಗೆದರೆ ನರಕವು ತಪ್ಪದೆಂಬದು ಅವನಿಗೆ ತಿಳಿದಿರುವದೆ ?'–

**||೭೫|| ಮನ್ಯೇ ಮಮಾನುಗ್ರಹ ಈಶ ತೇ ಕೃತೋ**
**ರಾಜ್ಯಾನುಬಂಧಾಪಗಮೋ ಯದೃಚ್ಛಯಾ |**
**ಯಃ ಪ್ರಾರ್ಥ್ಯತೇ ಸಾಧುಭಿರೇಕಚರ್ಯಯಾ**
**ವನಂ ವಿವಿಕ್ಷುದ್ಭಿರಖಂಡಭೂಮಿಪೈಃ** || ೧೦-೫೪-೫೬    10 – 51 –

**ಅರ್ಥ** :– ಭಗವಂತಾ! **ಈ ಅರ**ಸೊತ್ತಿಗೆಯ ಜಂಜಾಟವು ನಿನ್ನ ಸಂಕಲ್ಪ, ನಿನ್ನ ಇಚ್ಛೆಯಿಂದಲೇ ತೊಲಗಿದುದು ನನ್ನ ಮೇಲಿನ ನಿನ್ನ ಕೃಪೆಯೆಂತಲೇ ನಾನು ಭಾವಿಸುವೆ. ಏಕೆಂದರೆ, ಏಕಾಂತಿಕವಾಗಿ ನಿನ್ನ ಆರಾಧನೆ ಗೈಯಲು ವನದಲ್ಲಿ ನೆಲೆಸಬೇಕೆಂಬ ಹಂಬಲವುಳ್ಳ ಸಜ್ಜನರಾದ ಏಕಛತ್ರಾಧಿಪತಿಗಳು ಅರಸೊತ್ತಿಗೆಯ ಬಂಧನದಿಂದ ಬಿಡುಗಡೆಯಾಗಲು ತಾವಾಗಿಯೆ ನಿನ್ನನ್ನು ಬೇಡಿಕೊಳ್ಳುವರು.

**||೭೬|| ಯದ್ವಾಚಿತಂತ್ಯಾಂ ಗುಣಕರ್ಮನಾಮಭಿಃ**
**ಸ್ವದಾಮಭಿರ್ವತ್ಸ ವಯಂ ಸುಯೋಜಿತಾಃ |**
**ಸರ್ವೇ ವಹಾಮೋ ಬಲಿಮೀಶ್ವರಾಯ**
**ಪ್ರೋತಾ ನಸೀವ ದ್ವಿಪದೇ ಚತುಷ್ಪದಃ** || ೫-೧-೪    14

ಬ್ರಹ್ಮದೇವರು
ಪ್ರಿಯವ್ರತನಿಗೆ

ಈ ರೀತಿಯಾಗಿ ಮುಚಕುಂದ ಮಹಾರಾಜನು ವೈರಾಗ್ಯವನ್ನೇ ಬಯಸಿದನು, ಆದುದರಿಂದ ವೈರಾಗ್ಯದಲ್ಲಿಯೇ ಆಸ್ಥೆಯುಳ್ಳವರಾಗಬೇಕೆಂದು ಹೇಳಿದ್ದಾಯಿತು.

ಈಗ್ಗೆ ಇದೇ ಸಂದರ್ಭದಲ್ಲಿ ಪ್ರಿಯವ್ರತ ಮಹಾರಾಜನು ನಡೆದುಕೊಂಡ ರೀತಿಯನ್ನು ತೋರಿಸಿಕೊಡುವರು,– ಅಥವಾ, ಮುಚಕುಂದರಾಜನು ಇಕ್ಷ್ವಾಕು ವಂಶದಲ್ಲಿ ಹುಟ್ಟಿದವನು. ಮಾಂಧಾತೃ ರಾಜನ ಮಗನು. ಮಹಾಬಲಶಾಲಿಯು- ದೈತ್ಯರ ಉಪಟಳದಿಂದ ಭೀತಿಗೊಂಡ ಇಂದ್ರನೇ ಮುಂತಾದ ಶ್ರೇಷ್ಠ ದೇವತೆಗಳು ಸ್ವಂತದ ರಕ್ಷಣೆಗಾಗಿ ಬಿನ್ನವಿಸಿಕೊಂಡಾಗ ಅವರನ್ನು ಕಾಪಾಡಿದನು. ಬಹು ದೀರ್ಘ ಕಾಲ ದೇವತೆಗಳ ರಕ್ಷಣೆಯಲ್ಲಿ ತೊಡಗಿದ ಮುಚಕುಂದ ರಾಜನ ಮಡದಿ ಮಕ್ಕಳ ಮಂತ್ರಿ–ರಾಜ್ಯ ಮುಂತಾದವು ಕಾಲನ ಪ್ರವಾಹದಲ್ಲಿ ಕೊಚ್ಚಿಹೋಗಿದ್ದವು. ರಾಜನ ಈ ಸ್ಥಿತಿಗತಿಯನ್ನು ತಿಳಿದು ದೇವತೆಗಳು 'ಮೋಕ್ಷವನ್ನು ಬಿಟ್ಟು' ಬೇಕಾದ ವರವನ್ನು ಕೇಳಿಕೊಳ್ಳಲು ಆತನಿಗೆ ಹೇಳಿದರು. ಬಹುಕಾಲದ ಪರಿಶ್ರಮ ಡಿಂದ ದಣಿದು ಬೆಂಡಾದ ರಾಜನು ಬೇರೆ ಯಾವುದನ್ನು ಕೇಳದೆ, ಚಿರಕಾಲದ ನಿದ್ರೆಯನ್ನು ಬೇಡಿಕೊಂಡನು, 'ಹಾಗೆ ಆಗಲಿ,' ಎಂದು ದೇವತೆಗಳು ಒಪ್ಪಿ ಕೊಂಡರು ಒಂದು ಗುಹೆಯಲ್ಲಿ ಆತನ ಸುದೀರ್ಘವಾದ ನಿದ್ರೆಯು ಸಾಗಿರಲು (ಎಚ್ಚರಿಸಿದ) ಕಾಲಯವನನನ್ನು ತನ್ನ ನೋಟದಿಂದಲೆ ಸುಟ್ಟುಬೂದಿಮಾಡಿದನು. ಅಲ್ಲಿ ಶ್ರೀ ಹರಿಯನ್ನು ಪ್ರತ್ಯಕ್ಷವಾಗಿ ಕಂಡು ಹೀಗೆ ಸ್ತೋತ್ರ ಮಾಡಿದನೆಂಬುದು ಈ ಶ್ಲೋಕದ ಆಶಯ. ಅಲ್ಲಿಯೂ ಕೂಡ, ಹಿಂದೆ ದೇವತೆಗಳು ಹೇಳಿದಂತೆ, ಶ್ರೀಹರಿಯು ಕೂಡ ವರವನ್ನು ಬೇಡಲು ಆತನಿಗೆ ಹೇಳಿದನು. ಆದರೆ ಆತನು ಮಹಾಭಗವದ್ಭಕ್ತನು. ಐಹಿಕ ಭೋಗಗಳ ಅನುಭವವನ್ನು ಪಡೆದವನು. ಶ್ರೀಹರಿ ಸೇವೆಯನ್ನೇ ಅತ್ಯಧಿಕವಾಗಿ ಮನ್ನಿಸಿ ನರನಾರಾಯಣಾಶ್ರಮಕ್ಕೆ (ಬದರಿಕಾಶ್ರ ಮಕ್ಕೆ) ಆತನು ಹೊರಟುಹೋದನು. – ಇದಲ್ಲದೆ ಯಾವದೇ ನೆಪದಿಂದಾಗಲಿ, ಕಾಲಚಕ್ರದಲ್ಲಿ ಆತನಿಗೆ ರಾಜ್ಯಾದಿಗಳು ನಷ್ಟವಾಗಿಯೆ ಬಿಟ್ಟಿದ್ದವು ಆದುದರಿಂದ ಅವುಗಳನ್ನೇ ಆತನು ಮತ್ತೆ ಬಯಸಲಿಲ್ಲ. ಮುಚಕುಂದ ರಾಜನು ಸದ್ಯಃ ಆಳುತ್ತಿ ರುವ – ಅಸ್ತಿತ್ವದಲ್ಲಿರುವ – ತನ್ನ ರಾಜ್ಯವನ್ನು ಬಿಟ್ಟುಕೊಡಲಿಲ್ಲ. ಆದುದರಿಂದ ಆತನ ರಾಜ್ಯತ್ಯಾಗ ಆಶ್ಚರ್ಯಪಡುವಂಥ ಸಂಗತಿ ಎನಿಸದು. ಐಹಿಕ ಭೋಗಗಳ ಸವಿಯನ್ನು ಇನ್ನೂ ಅನುಭವಿಸದೆ, ಅಸ್ತಿತ್ವದಲ್ಲಿರುವ ಸ್ವಾಧೀನ ರಾಜ್ಯವನ್ನು ತ್ಯಾಗ ಮಾಡುವದು ಮಾತ್ರ ಆಶ್ಚರ್ಯಕರವಾದ ಸಂಗತಿ ಎನಿಸುವದು. ಆದುದ ರಿಂದ, ಅಂಥವರೂ ನಿಮಗೆ ನೋಡಲು ಸಿಗುವರು – ಎಂಬುದೂ ಇಲ್ಲಿ ಅಭಿ ಪ್ರಾಯ. – ಅಥವಾ ಏಕ ಛತ್ರಾಧಿಪತಿ ರಾಜರೂ ಕೂಡ ಭಗವಂತನ ಆರಾಧನೆ ಗಾಗಿ, ರಾಜ್ಯದ ಬಂಧನದಿಂದ ಬಿಡುಗಡೆಗಾಗಿ ಪ್ರಾರ್ಥಿಸುವರೆಂದು ಹೇಳಿದೆ. ಅಂತಹ ಏಕಚಕ್ರಾಧಿಪತಿಗಳು ಯಾರು ? ಅವರು ತಮ್ಮ ರಾಜ್ಯವನ್ನು ಯಾವ ರೀತಿಯಲ್ಲಿ ಬಿಟ್ಟುಕೊಟ್ಟರು ? – ಎಂಬುದನ್ನು ಹೇಳುವರು.-

– ಸ್ವಾಯಂಭುವಮನುವಿನ ಮಗನು ಪ್ರಿಯವ್ರತನು. ನಾರದರ ಸೇವೆಯಿಂದ ಆತನು ಪರತತ್ವವನ್ನು ತಿಳಿದುಕೊಂಡವನು. ತನ್ನ ಸಕಲ ಇಂದ್ರಿಯಗಳ ಕಾರ್ಯವನ್ನೆಲ್ಲ ಪರತತ್ವದ ಉಪಾಸನೆಗಾಗಿಯೇ ಆತನು ಮೀಸಲು ಮಾಡಿದವನು. ಪರಮಹಂಸರ ಮಾರ್ಗದಲ್ಲಿಯೇ ನಡೆಯುವವನು. ತಂದೆಯಾದ ಸ್ವಾಯಂಭುವ ಮನು ರಾಜ್ಯ ಭಾರವನ್ನು ಕೈಕೊಳ್ಳಲು ಪ್ರೀತಿ ಪೂರ್ವಕವಾಗಿ ಮಗನನ್ನು ಆಮಂತ್ರಿಸಿದನು, ಆದರೂ ಅದನ್ನು ಒಪ್ಪಿಕೊಳ್ಳಲಿಲ್ಲ. ಅದರಲ್ಲಿ ಆಸಕ್ತಿಯನ್ನು ತೋರಿಸಲಿಲ್ಲ. ಅದೇ ಸಮಯಕ್ಕೇನೆ, ಸಕಲ ಜನರ ಅಂತರಂಗದ ಅಭಿಪ್ರಾಯವನ್ನು ತಿಳಿಯಬಲ್ಲವರಲ್ಲಿ ಅತೀ ಶ್ರೇಷ್ಠನಾದ ಬ್ರಹ್ಮನು ಸ್ವಾಯಂಭುವಮನು ಇರುವಲ್ಲಿಗೆ ಬಂದನು. ತಂದೆ ಹಾಗೂ ಮಗನು ನಮಸ್ಕರಿಸಿದರು. ಪ್ರಿಯವ್ರತನನ್ನು ಕೃಪಾದೃಷ್ಟಿಯಿಂದ ನೋಡಿ, ಬ್ರಹ್ಮದೇವರು ಆತನಿಗೆ ಹೀಗೆ ನುಡಿದರು.

**ಅರ್ಥ**;– ವತ್ಸಾ! ಪರಮಾತ್ಮನ ವಾಣಿಯೇ ವೇದ. ವೇದವೆಂಬ ತಂತಿಯಿಂದ ನಮ್ಮ ನಮ್ಮ ನಾಮ, ಗುಣ, ಕರ್ಮಗಳಿಂದ ನಮನಮಗೆ ಅನುಗುಣವಾದ ಕೃತಿಗಳಲ್ಲಿ ಚನ್ನಾಗಿ ತೊಡಗಿಸಲ್ಪಟ್ಟ ನಾವೆಲ್ಲರೂ – ನಾಲ್ಕು ಪಾದದ ಎತ್ತು–ಮೊದಲಾದ ಪ್ರಾಣಿಗಳು ಮೂಗದಾಣವನ್ನು ಕಟ್ಟಿಸಿಕೊಂಡು, ಎರಡು ಕಾಲುಗಳ ಮನುಷ್ಯನಿಗೆ ತಮ್ಮ ಸೇವೆ ಸಲ್ಲಿಸುವಂತೆ – ನಾವು ಪರಮಾತ್ಮನಿಗೆ ಸೇವಾ ರೂಪವಾದ ಬಲಿಯನ್ನು ಅರ್ಪಿಸುವೆವು.

– ಬ್ರಾಹ್ಮಣ, ಕ್ಷತ್ರಿಯ – ಇತ್ಯಾದಿ ನಾಮಗಳು, ಸತ್ವ, ರಾಜಸ, ತಾಮಸ, ಗುಣಗಳು, ನಾವು ಮಾಡುವ ಕರ್ಮಗಳೆ ಪರಮಾತ್ಮನಿಗೆ ಸೇವಾರೂಪ ಬಲಿ. ಪಶುಗಳನ್ನು ರಾತ್ರಿಯಲ್ಲಿ ಅವುಗಳ ಕಣ್ಣಿಯಿಂದ ಕಟ್ಟುವರು. ಬೆಳಿಗ್ಗೆ ಮೂಗದಾಣ ಹಾಕಿಸಿಕೊಂಡು ಚೀಲ ಹೊರುವದು ಮುಂತಾದ ಕಾರ್ಯಗಳನ್ನು ಅವು ಮಾಡುವವು. ಹಗ್ಗದಿಂದ ಬಂಧಿತರಾದ ಪಶುಗಳಂತೆ, ನಾವೆಲ್ಲರೂ ಪರಮಾತ್ಮನ ಆಜ್ಞಾನುಸಾರವಾಗಿ, ನಮಗೆ ಆತನು ನೇಮಿಸಿಕೊಟ್ಟ ಕಾರ್ಯಗಳನ್ನು ಮಾಡಿ ಆತನಿಗೆ ಸಮರ್ಪಿಸುವೆವು – ಎಂದು ಬ್ರಹ್ಮದೇವರೇ ಸಾಕ್ಷಾತ್ತಾಗಿ ಪ್ರಿಯವ್ರತನಿಗೆ ಹೇಳುವರು. –ಹೀಗೆ ಹೇಳಿರುವರು.:– ' ಎತ್ತುಗಳು ಮೂಗದಾಣ ಹಾಕಿಸಿಕೊಂಡು ತಮ್ಮ ತಮ್ಮ ಕಣ್ಣಿಗಳಿಂದ ಕಟ್ಟಲ್ಪಡುವಂತೆ, ಪರಮಾತ್ಮನ ವಾಣಿಯಾದ, ವೇದವೆಂಬ ತಂತಿಯಿಂದ, ಬಂಧಿತರಾಗಿ ಪ್ರಭುವಾದ ಪರಮಾತ್ಮನಿಗೆ ಸೇವಾ ರೂಪವಾದ ಬಲಿಯನ್ನು ನಾವೆಲ್ಲರೂ ಅರ್ಪಿಸುವೆವು. –

||೭೭|| ಭಯಂ ಪ್ರಮತ್ತಸ್ಯ ವನೇಷ್ವಪಿ ಸ್ಯಾತ್
ಯತೋ ವಸಂತೇ ಸಹ ಷಟ್ ಸಪತ್ನಾಃ |
ಜಿತೇಂದ್ರಿಯಸ್ಯಾತ್ಮರತೇರ್ಬುಧಸ್ಯ
ಗೃಹಾಶ್ರಮಃ ಕಿನ್ನು ಕರೋತ್ಯವದ್ಯಂ || ೫-೧-೧೭

– ಬ್ರಹ್ಮದೇವರು ಪ್ರಿಯವ್ರತನಿಗೆ ಹೇಳುವರು. – ' ನನ್ನ ತಂದೆಯಾದ ಪರಮಾತ್ಮನ ಆಜ್ಞೆಯನ್ನು ನಾನು ಪಾಲಿಸುವಂತೆ ನನ್ನ ಮಗನಾದ ಸ್ವಾಯಂಭುವನು ನನ್ನ ಮಾತು ನಡೆಸುವಂತೆ, ನೀನಾದರೂ ನಿನ್ನ ತಂದೆಯ ಆಜ್ಞೆಯಂತೆ ನಡೆದುಕೊಳ್ಳಬೇಕು' – ಎಂಬ ತನ್ನ ಅಭಿಪ್ರಾಯವನ್ನು ಸ್ಪಷ್ಟವಾಗಿ ತಿಳಿಸುವನು ಆದಾಗ್ಯೂ– 'ರಾಜ್ಯ ಪರಿಪಾಲನೆಯಲ್ಲಿ ನಾನು ತೊಡಗಿದರೆ, ನನಗೆ ವೇದವಿಹಿತವಾದ ಪುರುಷಾರ್ಥಕ್ಕೆ ಹಾನಿಯೊದಗುವದು' –ಎಂಬ ಪ್ರಿಯವ್ರತನ ಮನೋಗತವನ್ನು ತಿಳಿದು, ವನದಲ್ಲಿಯೂ ಈ ಭಯವು ಇರುವದೆಂದು ತೋರಿಸಿಕೊಟ್ಟು ಮನದಲ್ಲಿ ಹುದುಗಿದ ಆತನ ಶಂಕೆಯನ್ನು ನಿವಾರಿಸುವರು–

**ಅರ್ಥ**:– ತನಗೆ ಶಾಸ್ತ್ರ ವಿಹಿತವಾಗಿರುವ ಕರ್ತವ್ಯ ಕರ್ಮವನ್ನು ಮರೆತು ಬಿಟ್ಟು, ಅಡವಿಗೆ ಹೋದವನಿಗೆ, ಅಲ್ಲಿಯೂ ಭಯವು ತಪ್ಪಿದ್ದಲ್ಲ– ಇದ್ದೇ ಇರುವದು. ಏಕೆಂದರೆ, ಕಾಮಕ್ರೋಧಾದಿ ಆರು ವೈರಿಗಳು– (ಅಥವಾ–ವಿಷಯಾಸಕ್ತವಾದ ಐದು ಇಂದ್ರಿಯಗಳು ಹಾಗೂ ಚಂಚಲವಾದ ಮನಸ್ಸೆಂಬ ಆರು ವೈರಿಗಳು) – ಅರಣ್ಯದಲ್ಲಿ ಇರುವಾಗಲೂ ಆತನಿಗೆ ಸಂಗಾತಿಗಳಾಗಿಯೇ ಇರುವವು. ಅರಣ್ಯದಲ್ಲಿಯೂ ಅವುಗಳ ಭಯದಿಂದ ಬಿಡುಗಡೆ ಇಲ್ಲ. ಆದುದರಿಂದ, ಇಂದ್ರಿಯಗಳನ್ನು ತನ್ನ ಅಂಕಿತದಲ್ಲಿ ಇಟ್ಟುಕೊಂಡು, ಪರಮಾತ್ಮನಲ್ಲಿಯೆ ಮನಸ್ಸನ್ನು ವಿಲೀನಗೊಳಿಸಿದ ಜ್ಞಾನಿಯಾದವನು ಮನೆಯಲ್ಲಿಯೆ ಇದ್ದುಕೊಂಡು ಕೌಟುಂಬಿಕ ಜೀವನವನ್ನು ನಡೆಸುವಲ್ಲಿ ಯಾವ ದೋಷವೂ ಇಲ್ಲ–

||೭೮|| ಯಃ ಷಟ್ಸಪತ್ನಾನ್ ವಿಜಿಗೀಷಮಾಣೋ
ಗೃಹೇಷು ನಿರ್ವಿದ್ಯ ಯತೇತ ಪೂರ್ವಂ |
ಯುದ್ಧ್ಯೇತ ದುರ್ಗಾಶ್ರಿತ ಊರ್ಜಿತಾರೀನ್
ಕ್ಷೀಣೇಷು ಕಾಮಂ ವಿಚರೇದ್ವಿಪಶ್ಚಿತ್ || ೫-೧-೧೮

ತಾನೇ ಸೃಜಿಸಿದ ಸೃಷ್ಟಿಯನ್ನು ಸರ್ವತೋಮುಖವಾಗಿ ಬೆಳೆಸುವ ಲೋಭದಿಂದ ಪಿತಾಮಹಬ್ರಹ್ಮನು ಹೀಗೆ ಹೇಳುವನು. ಕರ್ಮಭೂಮಿಯಾದ ಈ

ಭೂಲೋಕದಲ್ಲಿ ಅಂತಿಮ ಪುರುಷಾರ್ಥಕ್ಕೆ, ಮೋಕ್ಷಕ್ಕೆ, ಸಾಧನವಾಗಿರಬೇಕಾಗಿರುವ ಈ ಮಾನವ ಶರೀರವನ್ನು ಬೇರೊಂದು ಉದ್ದೇಶಕ್ಕಾಗಿ ಉಪಯೋಗಿಸುವದನ್ನು ಜ್ಞಾನಿಗಳ ಮನಸ್ಸು ಒಪ್ಪಲಾರದು. ಎಂಬ ಸಂದೇಹವು ಮೊಮ್ಮಗನಾದ ಪ್ರಿಯವ್ರತನ ಮನಸ್ಸಿನಲ್ಲಿ ಮೂಡಬಾರದೆಂಬ ಉದ್ದೇಶದಿಂದ ಬ್ರಹ್ಮನು ತನ್ನ ಅಭಿಪ್ರಾಯವನ್ನು ಸ್ಪಷ್ಟವಾಗಿ ತಿಳಿಸುವನು.

**ಅರ್ಥ** :– (ಆರು) ವೈರಿಗಳನ್ನು ಗೆಲ್ಲಬಯಸುವ ಬುದ್ಧಿವಂತನು ಗೃಹಸ್ಥನಾಗಿಯೆ ಇದ್ದುಕೊಂಡು, ಮೊದಲು ವಿಷಯ ಭೋಗದಿಂದ (ಅವುಗಳ ಅಸಾರತೆಯನ್ನು ಕಂಡುಕೊಂಡು) ಅವುಗಳ ಬಗ್ಗೆ ಆಸಕ್ತಿಯನ್ನು ಬಿಟ್ಟುಕೊಡಲು ಯತ್ನಿಸಬೇಕು. (ಶ್ರೀ ಹರಿ–ಗುರುಚರಣವೆಂಬ) ಭದ್ರವಾದ ಕೋಟೆಯಲ್ಲಿ ಆಸರಪಡೆದು ಈ ಪ್ರಬಲ ಶತ್ರುಗಳೊಡನೆ ಹೋರಾಡಬೇಕು. ಹೀಗೆ ಮಾಡುತ್ತ, ವೈರಿಗಳು ಬಲಹೀನರಾದ ಮೇಲೆ ಸ್ವಚ್ಛಂದವಾಗಿ–ನಿರಾತಂಕವಾಗಿ–ಸಂಚರಿಸಬೇಕು.

ಹೀಗಾದ ಮೇಲೆ, ಆತನು ಬೇಕಾದರೆ ಗೃಹಸ್ಥನಾಗಿಯೇ ಉಳಿಯಲಿ, ಅರಣ್ಯನಲ್ಲಿ ಜೀವಿಸಲಿ–ಯಾವುದನ್ನಾದರೂ ಮಾಡಲಿ.

**೭೯॥ ಸ್ವಪುತ್ರೇಭ್ಯ ಇಮಾಂ ಗಾಂ ಯಥಾದಾಯಂ ವಿಭಜ್ಯ ಭುಕ್ತ್ವಾ**
**ಭೋಗಾಂ ಮಹಿಷೀಂ ಮೃತಕಮಿವ ಸ ಮಹಾವಿಭೂತಿಃ ।**
**ಅಪಹಾಯ ಸ್ವಯಂ ನಿಹಿತನಿರ್ವೇದೋ ಹೃದಿ ಗೃಹೀತ–**
**ರುಚಿರವಿಹಾರಾನುಭವಃ ಭಗವತೋ ನಾರದಸ್ಯ ಪದವೀಂ**
**ಅನುಸಸಾರ ॥** ೫-೧-೩೮

ಪಿತಾಮಹ ಬ್ರಹ್ಮದೇವನ ಈ ಹಿತೋಕ್ತಿಯನ್ನು ಶಿರಬಾಗಿ ಸ್ವೀಕರಿಸಿ, ತನ್ನ ತಂದೆಯ ಆದೇಶದಂತೆ ಪ್ರಿಯವ್ರತನು ಪರಂಪರೆಯಾಗಿ ಬಂದ ರಾಜ್ಯವನ್ನು ಆಳಿದನು. ಪುತ್ರರನ್ನು ಪಡೆದನು. ಹೀಗೆ ಬಾಳಿದ ಪ್ರಿಯವ್ರತನು ಹೇಗೆ ನಡೆದುಕೊಂಡನೆಂಬುದನ್ನು ಹೇಳುವರು.

**ಅರ್ಥಃ**– ತಂದೆಯ ಆದೇಶದಂತೆ ನಡೆದು, ಮುಂದೆ ವಿಷಯಗಳಲ್ಲಿ ಉಪರತಿಯನ್ನು ಹೊಂದಿ ತಪಸ್ಸಿಗಾಗಿ ಆರಣ್ಯಕ್ಕೆ ಹೊರಟು) ಪ್ರಿಯ ವ್ರತರಾಜನು ತನ್ನ ಮಕ್ಕಳಿಗೆ ರಾಜ್ಯ ಐಶ್ವರ್ಯಗಳಲ್ಲಿ ಸರಿಯಾದ ಭಾಗ ಮಾಡಿಕೊಟ್ಟನು, ತನ್ನೊಡನೆ ಸಕಲ ಭೋಗಗಳನ್ನು ಉಪಭೋಗಿಸಿದ ಪಟ್ಟ ಮಹಿಷಿಯಿಂದಲೂ ಅಗಲಿದನು. ಅರಸೊತ್ತಿಗೆಯ ಅಪಾರ ಐಶ್ವರ್ಯವನ್ನು ಜೀವವಿಲ್ಲದ ದೇಹದಂತೆ ತುಚ್ಛವೆಂದು ಭಾವಿಸಿದನು. ಸ್ವಯಂಪ್ರೇರಣೆಯಿಂದಲೆ, ವೈರಾಗ್ಯ ಭಾವನೆಯನ್ನು

ತಾಳಿದನು. ಶ್ರೀಹರಿಯ ರಮ್ಯವಾದ ಲೀಲಾ ಕೃತಿಗಳನ್ನು ಅಂತರಂಗದಲ್ಲಿ ನಿರಂತರವಾಗಿ ಚಿಂತಿಸತೊಡಗಿದನು. ಅದರಿಂದ ಅಲೌಕಿಕವಾದ ಆನಂದವನ್ನು ಪಡೆದನು. ಪೂಜ್ಯರಾದ ನಾರದರು ಉಪದೇಶಿಸಿದ ಮಾರ್ಗವನ್ನೇ - ವಿಧಾನವನ್ನೇ - ರಾಜನು ಅನುಸರಿಸಿದನು. -ಪ್ರಾಯದ ಪೂರ್ವ ವಯಸ್ಸಿನಲ್ಲಿಯೇ ತನ್ನ ಕೈಗೆ ಬಂದ ಮಹಾಸಾಮ್ರಾಜ್ಯವನ್ನು ಹೇಗೆ ಆತನು ಬಿಟ್ಟುಕೊಟ್ಟನು ? ಎಂಬ ಮೊದಲಿನ ಆಶ್ಚರ್ಯದ ಶಂಕೆಗೆ, ಇಲ್ಲಿ ಬಿಟ್ಟುಕೊಡುವ ಮೊದಲು, ಕೆಲ ಸಮಯವಾದರೂ ರಾಜ್ಯಭಾರ ಮಾಡಿದುದು, ಪಿತಾಮಹ ಬ್ರಹ್ಮದೇವರ ಮಾತಿಗೆ ಮನ್ನಣೆಯನ್ನು ಕೊಡುವದಕ್ಕಾಗಿ ಮಾತ್ರ. ರಾಜ್ಯಐಶ್ವರ್ಯಗಳನ್ನು ನಿರ್ಜೀವ ದೇಹದಂತೆ ಭಾವಿಸಿದನು, ಎಂದು ಹೇಳಿದೆ. ದೂರದ ಪ್ರವಾಸಕ್ಕೆ ಹೊರಟವನು ತನ್ನೊಡನೆ ಏನಾದರೂ ದಾರಿ ಬುತ್ತಿಯನ್ನು ಒಯ್ಯುವದುಂಟು. ಆದರೆ ಪ್ರಿಯವ್ರತ ರಾಜನು ಇಲ್ಲಿ ತನ್ನೊಡನೆ ತೆಗೆದುಕೊಂಡು ಹೋದ ಒಂದೇ ಒಂದು ವಸ್ತುವೆಂದರೆ, -ಅಂತರಂಗದಲ್ಲಿ ಆನಂದಕರವಾದ ಶ್ರೀಹರಿಲೀಲಾ-ಕೃತಿಗಳ ಚಿಂತನೆಯಿಂದ ಒದಗುವ ಆನಂದ ಮಾತ್ರ.

- ರಾಜನ ಬಗ್ಗೆ ಹೀಗೆ ಹೇಳಿರುವರು.- "ಭೂಲೋಕದ, ಸ್ವರ್ಗಲೋಕದ ಹಾಗೂ ಯೋಗಬಲದಿಂದ ಪ್ರಾಪ್ತವಾದ ಮಾನವೀಯ ಸಂಪತ್ತನ್ನು ಹಾಗೂ ಅತೀವ ಜನಪ್ರಿಯವಾದ ತನ್ನ ಪೌರುಷವನ್ನು ರಾಜನು ನರಕಕ್ಕೆ ಸರಿಸಮವಾಗಿ ಭಾವಿಸಿದನು.-

||೮೦|| ಕುತ್ರಾಶಿಷಃ ಶ್ರುತಿಸುಖಾ ಮೃಗತೃಷ್ಣಿರೂಪಾಃ ಪ್ರಹ್ಲಾದಃ
ಕ್ವೇದಂ ಕಲೇವರಮಶೇಷರುಜಾಂ ವಿರೋಹಃ |
ನಿರ್ವಿದ್ಯತೇ ನ ತು ಜನೋ ಯದಪೀತಿ ವಿದ್ವಾನ್
ಕಾಮಾನಲಂ ಮಧುಲವೈಃ ಶಮಯನ್ ದುರಾಪೈಃ || ೭-೯-೨೫

- ಪ್ರಲ್ಹಾದರಾಜರಿಗೆ ಸ್ವಯಂ ಶ್ರೀಹರಿಯೆ ನರಹರಿಯಾಗಿ ಬಂದು ಅನುಗ್ರಹ ಮಾಡಿಪನು. ಜೀವನದ ಅಂತಿಮ ಪುರುಷಾರ್ಥವನ್ನೇ ಪಡೆದವರಿಗೆ ದೊರಕದ ವಸ್ತುವು ಯಾವುದೂ ಇರಲಿಲ್ಲ. ಇಂಥ ಪ್ರಲ್ಹಾದರ ವೈರಾಗ್ಯವು ಎಲ್ಲರೂ ತಲೆಬಾಗಿ ಹೊಗಳತಕ್ಕಂಥಹದು. ತಾಯಿಯ ಗರ್ಭದಲ್ಲಿರುವಾಗಲೆ ಪೂಜ್ಯರಾದ ನಾರದ ಮುನಿಗಳ ಉಪದೇಶದಿಂದ ಪಡೆದುಕೊಂಡ ವೈರಾಗ್ಯವಿದು. ಅಂಥ ಪ್ರಲ್ಹಾದರ ನುಡಿಯೆ ಇದು.-

**ಅರ್ಥ:**- ವಿಷಯ ಸುಖಗಳು ಕೇವಲ ಕೇಳಿ ಆನಂದಕೊಡುವಂಥವು ಅವು ಮರುಭೂಮಿಯ ಬಿಸಿಲುಗುದುರೆಯಂತೆ ನೀರಡಿಕೆಯನ್ನು ತಣಿಸಲಾರವು.

ಅವುಗಳಿಂದೇನು ಪ್ರಯೋಜನ ? ಇದೇ ಮೇರೆಗೆ ಅನೇಕ ರೋಗಗಳಿಗೆ ಬೀಡಾದ ನಮ್ಮ ಈ ಶರೀರದಿಂದಲೂ ಏನು ಪ್ರಯೋಜನ ? (ಇವೆರಡಕ್ಕೂ ಯಾವ ಬೆಲೆ ಇಲ್ಲ.) ಇದನ್ನು ತಿಳಿದು ತಿಳಿದೂ ಮಾನವನು ವೈರಾಗ್ಯವನ್ನು ಹೊಂದದೆ ಕಾಮ ವೆಂಬ – ಬಯಕೆಯೆಂಬ ಅಗ್ನಿಯನ್ನು ಕ್ಷುದ್ರ ಸುಖದ ಸಣ್ಣ ಸಣ್ಣ ತುಣುಕುಗ ಳಿಂದ ತೃಪ್ತಿಪಡಿಸಲು ಹವಣಿಸುತ್ತಿರುವದು ನಿಜವಾಗಿಯೂ ಸೋಜಿಗವಾಗಿದೆ.

**||೮೧|| ಜಿಹ್ವೈಕತೋಽಚ್ಯುತ ವಿಕರ್ಷತಿ ಮಾಽವಿತೃಪ್ತಾ**
**ಶಿಶ್ನೋಽನ್ಯತಸ್ತ್ವಗುದರಂ ಶ್ರವಣಂ ಕುತಶ್ಚಿತ್ ।**
**ಘ್ರಾಣೋಽನ್ಯತಶ್ಚಪಲದೃಕ್ ಕ್ವ ಚ ಕರ್ಮಶಕ್ತಿ-**
**ರ್ಬಹ್ವ್ಯಃ ಸಪತ್ನ್ಯ ಇವ ಗೇಹಪತಿಂ ಲುನಂತಿ ॥ ೭-೯-೪೦**

– ವಿಷಯ ಸುಖವು ಅತೀವ ಕ್ಷುದ್ರವಾದುದು. ಅದನ್ನು ದೊರಕಿಸಲು ಬಹಳೇ ಪ್ರಯಾಸಪಡಬೇಕಾಗುವದು. ಶರೀರವು ರೋಗಗಳಿಗೆ ತವರುಮನೆ, ಈ ಕಾರಣಗಳಿಂದ ವಿಷಯ ಸುಖ ಹಾಗೂ ಅವುಗಳನ್ನು ಬಯಸುವ ಶರೀರದ ಬಗ್ಗೆ ಹೇಯ ಬುದ್ಧಿ, ತಾತ್ಸಾರ ಭಾವನೆಯನ್ನು ಹೇಳಿದ್ದಾಯಿತು. ಇಂದ್ರಿಯಗಳೂ ಅಷ್ಟೇ ಹೇಯವಾದವುಗಳೆಂಬುದನ್ನು ಇಲ್ಲಿ ನಿರೂಪಿಸುವರು. –

**ಅರ್ಥ:**– (ಭಿನ್ನ ಭಿನ್ನ ಸ್ವಭಾವ –ಅಭಿರುಚಿಗಳುಳ್ಳ) ಅನೇಕ ಮಡದಿಯ ರುಳ್ಳ ಪತಿಯನ್ನು ಒಬ್ಬೊಬ್ಬ ಮಡದಿಯು (ತನ್ನ ಅಪೇಕ್ಷೆಗೆ ಒಗ್ಗುವಂತೆ) ಆತ ನನ್ನು ಸೆಳೆದು ಪೀಡಿಸುವಳು. ಇದೇ ರೀತಿಯಲ್ಲಿಯೇ, ಎಂದೂ ತೃಪ್ತಿಯನ್ನು ಪಡೆಯದ ನಾಲಿಗೆ, ಜನನೇಂದ್ರಿಯ, ಸ್ಪರ್ಶೇಂದ್ರಿಯ (ಬಾಹ್ಯತೊಗಲು) ಹೊಟ್ಟೆ ಕಿವಿ, ಮೂಗು, ಚಂಚಲವಾದ ಕಣ್ಣು, ಕ್ರಿಯಾಶಕ್ತಿಯುಳ್ಳ ಕರ್ಮೇಂದ್ರಿಯಗಳು –ಇವೆಲ್ಲ ಇಂದ್ರಿಯಗಳು ತಾವು ತಾವು ಬಯಸುವ ವಿಷಯ ಸುಖದ ಕಡೆಗೆ ದೇಹಕ್ಕೆ ಯಜಮಾನನಾದ ಜೀವನನ್ನು ಬಹುಮುಖವಾಗಿ ಸೆಳೆದು ಪೀಡಿಸುತ್ತಿವೆ. ಹೇ; ಪ್ರಭೋ ಅಚ್ಯುತ!

– ಇದು ಪ್ರಲ್ಹಾದರ ನುಡಿ. ಬಹುಮುಖ ಸೆಳೆತಕ್ಕೆ ಬಲಿಯಾಗುವುದೇ ಇಂದ್ರಿಯಗಳ ಬಗ್ಗೆ ವೈರಾಗ್ಯ ತಾಳಲು ನಿಮಿತ್ತವಾಗಿದೆ.–

**||೮೨|| ಕಿಮಾತ್ಮನಾ ತೇನ ಜಹಾತಿ ಯೋಽಂತಂ**
**ಕಿಂ ರಿಕ್ಥಹಾರೈಃ ಸ್ವಜನಾಖ್ಯದಸ್ಯುಭಿಃ ।**
**ಕಿಂ ಜಾಯಯಾ ಸಂಸೃತಿಹೇತುಭೂತಯಾ**
**ಮರ್ತ್ಯಸ್ಯ ಗೇಹೈರ್ಯದಿಹಾಯುಷೋ ವ್ಯಯಃ ॥ ೮-೨೧-೯**

– ಬಲಿಯು ವಾಮನರೂಪಿ ಶ್ರೀ ವಿಷ್ಣುವಿನ ಪರಮಾನುಗ್ರಹಕ್ಕೆ ಪಾತ್ರನಾದವನು. ಗದಾಧಾರಿಯಾದ ಪರಮಾತ್ಮನು ಆತನ ಮೇಲಿನ ಅನುಗ್ರಹಕ್ಕಾಗಿ ಆತನ ದ್ವಾರಪಾಲಕನಾಗಿ ಇಂದಿಗೂ ಆತನನ್ನು ರಕ್ಷಿಸುತ್ತಿರುವನು. ಇಷ್ಟೊಂದು ಮಹಿಮಾಶಾಲಿಯೂ, ಪರಮಭಾಗವತನೂ ಆಗಿರುವ ಬಲಿರಾಜನು ಪುರುಷಾರ್ಥ ಪ್ರಾಪ್ತಿಗಾಗಿ ವೈರಾಗ್ಯವನ್ನೇ ಅವಲಂಬಿಸಿದನು. ಬಲಿರಾಜನ ನುಡಿ ಇದು.–

**ಅರ್ಥ :**– ದೇಹದ ಒಡೆಯನಾದ ಜೀವನು ಸುಖವನ್ನು ಪಡೆಯಲು ತುಂಬಾ ಧೃಡಪಡಿಸುವನು. (ನಶ್ವರವಾದ) ಬಿದ್ದುಹೋಗುವ ದೇಹದಿಂದ ಆತನಿಗೆ (ನಿಜವಾದ) ಸುಖವು ದೊರಕುವದೇ ಇಲ್ಲ. ಇಂಥ ದೇಹವನ್ನು ಕಟ್ಟಿಕೊಂಡು ಮಾಡುವುದೇನು ? ಆತನಿಗೆ ಅದರಿಂದ ಏನೂ ಪ್ರಯೋಜನವಿಲ್ಲ. ಪಿತ್ರಾರ್ಜಿತ ಆಸ್ತಿಯನ್ನು ಅಪಹರಿಸುವ ಕಳ್ಳರಂತಿರುವ ಮಕ್ಕಳು ಮುಂತಾದ ಸ್ವಜನರಿಂದಾದರೂ ಏನು ಲಾಭವಿದೆ ? ಸಂಸಾರ ಬಂಧನಕ್ಕೆ ಕಾರಣಳಾಗುವ ಹೆಂಡದಿಯಿಂದಾದರೂ ಏನು ಉಪಯೋಗ ? ಈ ಮನೆ ಮಕ್ಕಳನ್ನು ಪಡೆಯಲು ಮರಣಾಧೀನನಾದ ಈ ಮಾನವನು ತನ್ನ ಜೀವನವನ್ನೇ ವ್ಯಯಿಸುವದಾದರೂ ಏತಕ್ಕೆ ?

– ಆದುದರಿಂದ ದೇಹಾದಿಗಳಲ್ಲಿ ಆಸಕ್ತಿಯು ತುಂಬಾ ಹೇಯವಾದುದು.–

**||೮೩|| ಅಥಾಹಮಪ್ಯಾತ್ಮರಿಪೋಸ್ತವಾಂತಿಕಂ** ಬಲಿ
**ದೈವೇನ ನೀತಃ ಪ್ರಸಭಂ ತ್ಯಾಜಿತಶ್ರೀಃ |**
**ಇದಂ ಕೃತಾಂತಾಂತಿಕವರ್ತಿ ಜೀವಿತಂ**
**ಯಯಾಽಧ್ರುವಂ ಸ್ತಬ್ಧಮತಿರ್ನ ಬುಧ್ಯತೇ || ೮-೨೦-೬೪**

–‘ ಈ ಸಂಸಾರವು ಅತೀವ ಹೇಯ, ತ್ಯಾಜ್ಯವಾಗಿರುವದರಿಂದ, ನಾನೇ ಇದನ್ನು ಸ್ವಯಂ ಪ್ರೇರಣೆಯಿಂದ ಬಿಟ್ಟುಬಿಡಬೇಕಾಗಿತ್ತು. ಪರಮಾತ್ಮನೇ ! ನೀನೇ ಬಂದು ಸರ್ವ ಸಂಪತ್ತನ್ನು ತೆಗೆದುಕೊಂಡುಬಿಟ್ಟದ್ದು, ಅದೊಂದು ನನ್ನ ಮೇಲಿನ ವಿಶೇಷ ಅನುಗ್ರಹವೆಂದೇ ನಾನು ಭಾವಿಸುವೆ ’ –ಬಲಿರಾಜನ ಮಾತು.

ಅರ್ಥಃ– ದೈವವು ನನ್ನ ಸಂಪತ್ತನ್ನೆಲ್ಲ ಅಪಹರಿಸಿ, (ಹಿಂದೆ) ವೈರಿಯಾದ ನಿನ್ನ ಕಡೆಗೆ ಬಲಾತ್ಕಾರದಿಂದ ಎಳೆದು ತಂದಿದೆ. (ಹೀಗೆ ಆದದ್ದು ಯೋಗ್ಯವೇ ಆಯಿತು). ಸಂಪತ್ತಿನ ಪ್ರಭಾವದಿಂದ ಬುದ್ಧಿಗೇಡಿಯಾದ ಮಾನವನಿಗೆ ನಶ್ವರವಾದ ಈ ಜೀವನವು ಯಾವ ಗಳಿಗೆಯಲ್ಲಿಯೂ ಮೃತ್ಯುವಿಗೆ ಬಲಿಯಾಗಬಹುದೆಂಬ ಅರಿವು ಇರುವದಿಲ್ಲ. –

– ಜಾತಿಯಿಂದ ಅಸುರನಾದ್ದರಿಂದ ಅಸುರಾರಿಯಾದ ಶ್ರೀಹರಿಯು ಶ್ಕ –
ತನ್ನವೈರಿ' ಯೆಂದು ಬಲಿರಾಜನು ಹೇಳಿರುವನು. –

**೮೮|| ಗೃಹೇಷು ದಾರೇಷು ಸುತೇಷು ಬಂಧುಷು**
**ದ್ವಿಪೋತ್ತಮಸ್ಯಂದನವಾಜಿಪತ್ತಿಷು |**
**ಅಕ್ಷಯ್ಯರತ್ನಾಭರಣಾಂಬರಾದಿಷು**
**ಅನಂತಕೋಶೇಷ್ವಕರೋದಸನ್ಮತಿಂ ||** ೯-೬-೧೫

– ಅಂಬರೀಷ ರಾಜನ ಉನ್ನತ ಭಕ್ತಿಗೆ ಒಲಿದ ಹರಿಯು, ಆತನ ರಕ್ಷಣೆ ಗಾಗಿ ತನ್ನ ಸುದರ್ಶನ ಚಕ್ರವನ್ನೇ ಕೊಟ್ಟನು. – ಹೀಗೆ ಹೇಳಿರುವರು:-' ಆತನ ಅಂಬರೀಷನ) ಏಕಾಂತ ಭಕ್ತಿಯಿಂದ ಸಂತುಷ್ಟನಾದ ಶ್ರೀಹರಿಯು ಆತನನ್ನು ಸರ್ವಥಾ ಕಾಪಾಡಲು ಶತ್ರುಗಳಿಗೆ ಭಯ ಹುಟ್ಟಿಸುವ ತನ್ನ ಚಕ್ರವನ್ನೇ ನೀಡಿ ದನು.' – (೯–೩–೧೬) ಇಷ್ಟು ಮಹಿಮಾಶಾಲಿಯಾಗಿದ್ದರೂ, ಪರಮ ಭಾಗ ವತನಾದ ಅಂಬರೀಷ ಮಹಾರಾಜನು ಅಂತಿಮ ಶ್ರೇಯಸ್ಸನ್ನು ಪಡೆಯಲು ವೈರಾಗ್ಯ ವೃಕ್ಷದ ನೆರಳನ್ನೇ ಆಶ್ರಯಿಸಬೇಕಾಯಿತು. –ಆತನ ಆಚರಣೆಯನ್ನು ಇಲ್ಲಿ ಹೇಳುವರು. –

**ಅರ್ಥ:**– ಮನೆ, ಮಡದಿ, ಮಕ್ಕಳು, ನೆಂಟರು, ಶ್ರೇಷ್ಠವಾದ ಆನೆ, ರಥ, ಕುದುರೆ, ಕಾಲಾಳುಗಳು, ಎಂದಿಗೂ ತೀರದ ರತ್ನಾಭರಣ, ಬಟ್ಟೆ ಬರೆಗಳು, ಅಪಾರವಾದ ದ್ರವ್ಯ ಭಾಂಡಾರ– ಇವೆಲ್ಲವೂ ಇಂದಿಲ್ಲ ನಾಳೆ ನಾಶವಾಗತಕ್ಕವು ಗಳೆಂಬುದನ್ನು ಅರಿತು ಅವುಗಳ ಬಗ್ಗೆ ' ತ್ಯಾಜ್ಯ ' (ಹೇಯ) ವೆಂಬ ಭಾವನೆ ತಾಳಿದನು.

**೮೫|| ಆತ್ಮಸ್ತ್ರ್ಯಪತ್ಯಸುಹೃದೋ ಬಲಮೃದ್ಧಕೋಶಂ**
**ಅಂತಃಪುರಂ ಪರಿವಿಹಾರಭುವಶ್ಚ ರಮ್ಯಾಃ |**
**ಭೂಮಂಡಲಂ ಜಲಧಿಮೇಖಲಮಾಕಲಯ್ಯ**
**ಕಾಲೋಪಸೃಷ್ಟಮಿತಿ ಸ ಪ್ರಯಯೌ ವಿಶಾಲಾಂ ||** ೪-೧೨-೧೬

– ಐದು ವರುಷದ ಬಾಲಕನಿರುವಾಗಲೇ ಧ್ರುವನು ಶ್ರೀಹರಿಯ ಅನುಗ್ರ ಹವನ್ನು ಪಡೆದನು. ಅಚಲವಾದ ಧ್ರುವ ಪದವಿಯನ್ನು ಹೊಂದಿದನು. ಪರಮ

ಭಾಗವತನಾದ ಧ್ರುವಮಹಾರಾಜನು ಕೂಡ ವೈರಾಗ್ಯಸಂಪತ್ತನ್ನೇ ಎತ್ತಿಕೊಂಡನು. ಇಂಥ ಧ್ರುವರಾಜನ ಆಚರಣೆಯನ್ನು ಹೇಳಿರುವರು

**ಅರ್ಥ:–** ದೇಹ, ಮಡದಿ, ಮಕ್ಕಳು, ನೆಂಟರು, ಸೈನ್ಯ, ಸಂಪತ್ತಿನಿಂದ ತುಂಬಿದ ಖಜಾನೆ, ರಾಣೀವಾಸ, ರಮಣೀಯವಾದ ವಿಹಾರ ಸ್ಥಾನಗಳು, ಸಮುದ್ರವೇ ಸೀಮೆಯಾಗಿರುವ ವಿಸ್ತೃತರಾಜ್ಯ– ಇವೆಲ್ಲವೂ ಕಾಲ ಪ್ರವಾಹದಲ್ಲಿ ಕೊಚ್ಚಿ ಹೋಗತಕ್ಕವುಗಳೆಂಬುದನ್ನು ಮನವರಿಕೆ ಮಾಡಿಕೊಂಡು, (ಅವುಗಳನ್ನೆಲ್ಲ ವೈರಾಗ್ಯದಿಂದ ಬಿಟ್ಟುಕೊಟ್ಟು) ಧ್ರುವರಾಜನು ವಿಶಾಲಾನದಿಯ ತೀರದಲ್ಲಿರುವ ಶ್ರೀ ಬದರಿಕಾಶ್ರಮಕ್ಕೆ ಅಂತಿಮ ಶ್ರೇಯಸ್ಸಿಗಾಗಿ ಹೊರಟು ಹೋದನು.

||೭೬|| **ವಯಂ ಪುರಾ ಶ್ರೀಮದನಷ್ಟ ಬುದ್ಧಯೋ**
**ಜೀಹೀರ್ಷಯಾಸ್ಯಾ ಇತರೇತರಸ್ಪೃಧಃ ।**
**ಘ್ನಂತಃ ಪ್ರಜಾಃ ಸ್ವಾ ಅಪಿ ನಿರ್ಘೃಣಾಃ ಪ್ರಭೋ**
**ಮೃತ್ಯುಂ ಪರಂ ತ್ವಾಂ ಅಗಣಯ್ಯ ದುರ್ಮದಾಃ** ॥ ೧೦-೭೩-೧೨
10-73-12

ಹೆಚ್ಚಿಗೆ ಏನು ಹೇಳಬೇಕು ? ಮಹಾಭಾಗವತರಾದ ಎಲ್ಲ ರಾಜರೂ ಕೂಡ ವೈರಾಗ್ಯದ ದಾರಿಯನ್ನೇ ಹಿಡಿದು ಸಾಗಿದರು. ಇದನ್ನು ತೋರಿಸಿಕೊಡಲು ಆ ರಾಜರ ಮಾತುಗಳನ್ನೇ ಇಲ್ಲಿ ಹೇಳಿರುವರು.

**ಅರ್ಥ :–** ಸಿರಿಯ ಸೊಕ್ಕಿನಿಂದ ಬುದ್ಧಿಗೇಡಿಗಳಾಗಿ, ಈ ಭೂಮಂಡಳವನ್ನು ಗೆಲ್ಲಲು ಬೇರೊಬ್ಬರಲ್ಲಿ ಏರಾಟವನ್ನು ನಡೆಸಿ, (ಹೂಡಿದ ಯುದ್ಧದಲ್ಲಿ) ನಿಷ್ಕರುಣಿಗಳಾದ ನಾವು (ರಾಜರು) ನಮ್ಮ ನಮ್ಮ ಪ್ರಜೆಗಳನ್ನೇ ಹಿಂಸಿಸುತ್ತ ಮದೋನ್ಮತ್ತರಾಗಿ – ಹೇ ಪ್ರಭೋ ! ಪರಾತ್ಪರ ವಸ್ತುವಾದ, ಮೃತ್ಯುಸ್ವರೂಪವಾದ ನಿನ್ನನ್ನೇ ಕಡೆಗಣಿಸಿದೆವು.

||೭೭|| **ತ ಏವ ಕೃಷ್ಣಾಽದ್ಯ ಗಭೀರರಂಹಸಾ**
**ದುರಂತವೀರ್ಯೇಣ ಅಚಲಿತಾಃ ಶ್ರಿಯಾ ।**
**ಕಾಲೇನ ತದ್ವೈ ಭವತೋಽನುಕಂಪಯಾ**
**ವಿನಷ್ಟದರ್ಪಾಶ್ಚರಣೌ ಸ್ಮರಾಮಹೇ** ॥ ೧೦-೭೩-೧೩

10 73-13

**ಅರ್ಥ :–** ಹೇ ಕೃಷ್ಣಾ, – ( ಅಂದು ಸಿರಿಯ ಮದದಿಂದ ನಿನ್ನನ್ನು ಕಡೆಗಣಿಸಿದ್ದ ) ನಾವೇ ಇಂದು ಯಾರಿಂದಲೂ ತಡೆಯಿಲ್ಲದ ಅಪಾರ ಶಕ್ತಿಯುಳ್ಳ ಕಾಲಪ್ರವಾಹದ ಪ್ರಚಂಡ ಶಕ್ತಿಗೆ ಬಲಿಯಾಗಿ, (ಮದಕ್ಕೆ ಕಾರಣವಾಗಿದ್ದ) ನಮ್ಮ ಐಶ್ವರ್ಯವನ್ನೆಲ್ಲ ಕಳೆದುಕೊಂಡು, ಮದರಹಿತರಾಗಿ, ನಿನ್ನ ಅನುಗ್ರಹದಿಂದ ನಿನ್ನ ಚರಣಗಳ ಧ್ಯಾನವನ್ನು ಮಾಡುತ್ತಿರುವೆವು.

ಜರಾಸಂಧನು ಗೆದ್ದು ತನ್ನ ಬಂದೀವಾಸದಲ್ಲಿ ನಿಗ್ರಹಿಸಿದ ರಾಜರೆಲ್ಲರೂ ಶ್ರೀ ಕೃಷ್ಣನಿಂದ ಬಿಡುಗಡೆ ಹೊಂದಿದಾಗ ಈ ಮಾತುಗಳನ್ನು ಹೇಳಿರುವರು.

ಹೀಗೆ ಹೇಳಿರುವರು :– ' ಪ್ರಭೋ, ಮಧುಸೂದನಾ ! ನಮಗೆ ಮಗಧ ರಾಜನಾದ ಜರಾಸಂಧನ ಬಗ್ಗೆ ಎಷ್ಟೂ ಕೋಪವಿಲ್ಲ, ಸ್ವಾಮೀ ! ಏಕೆಂದರೆ ರಾಜರು ತಮ್ಮ ರಾಜ್ಯಕ್ಕೆ ಎರವಾಗುವದೆಂದರೆ; ಅದು ನಿನ್ನ ಅನುಗ್ರಹವಿದ್ದಂತೆ. ರಾಜ್ಯದ ಸಿರಿಸಂಪತ್ತಿನಿಂದ ಉನ್ಮತ್ತರಾದ ರಾಜರು ಅಂತಿಮ ಶ್ರೇಯಸ್ಸನ್ನು ಪಡೆಯಲಾರರು. ನಿನ್ನ ಮಾಯೆಯಿಂದ ಮೂಢರಾದ ಅವರು ಅಸ್ಥಿರವಾದ ಐಹಿಕ ಸಿರಿಸಂಪತ್ತನ್ನು ಶಾಶ್ವತವೆಂದೇ ಭಾವಿಸುವರು.

**॥೮೮॥ ಅಹೋ ಇಮಂ ಪಶ್ಯತ ಮೇ ವಿನಾಶಂ**
**ತಪಸ್ವಿನಃ ಸಚ್ಚರಿತವ್ರತಸ್ಯ ।**
**ಅಂತರ್ಜಲೇ ವಾರಿಚಪ್ರಸಂಗಾತ್**
**ಪ್ರಚ್ಯಾವಿತಂ ಬ್ರಹ್ಮ ಚಿರಂ ಧೃತಂ ಯತ್ ॥** ೯-೬-೫೦

ರಾಜರೇ ಮಾತ್ರ ಈ ವೈರಾಗ್ಯದ ದಾರಿ ಹಿಡಿಯಲಿಲ್ಲ. ರಾಜಾಧಿರಾಜರಿಗಿಂತಲೂ ಅಧಿಕ ಭೋಗಭಾಗ್ಯವನ್ನು ಪಡೆದ ಋಷಿಗಳೂ ಕೂಡ ವೈರಾಗ್ಯಕ್ಕೇನೆ ಕೊನೆಗೆ ಶರಣು ಹೋದರು. ಎಂಬುದನ್ನು ತೋರಿಸಲು ಋಷಿಶ್ರೇಷ್ಠರಾದ ಸೌಭರಿಯು ವೈರಾಗ್ಯಕ್ಕೇನೆ ಮರಳಿ ಬಂದ ರೀತಿಯನ್ನು ಇಲ್ಲಿ ಹೇಳುವರು.

ಹೀಗೆ ಹೇಳಿರುವರು :– '(ಅತುಲ ಸಂಪದ್ಭರಿತವಾದ) ಯಾರ ಗೃಹಸ್ಥಿಕೆಯನ್ನು ( ಕೌಟುಂಬಿಕ ಭೋಗವನ್ನು ) ಕಂಡು, ಸಪ್ತದ್ವೀಪವುಳ್ಳ ರಾಜ್ಯಕ್ಕೆ ಅಧಿಪತಿಯಾದ ಚಕ್ರವರ್ತಿಯೂಕೂಡ ಆಶ್ಚರ್ಯಚಕಿತನಾದನು; ಅಹಂಕಾರದಿಂದ ಜನಿಸಿದ, ಮಾಡಬಾರದನ್ನು ಮಾಡಿಸುವ ಗರ್ವವನ್ನೂ ಬಿಟ್ಟುಕೊಟ್ಟನು.

**ಅರ್ಥ :–** ತಪೋನಿಷ್ಠನೂ, ಸದಾಚಾರಶೀಲನೂ ಆದ ನನಗೆ ಒದಗಿದ ಈ ಅತಿನಷ್ಟವನ್ನು ನೋಡಿರಿ ! ನೀರಿನಲ್ಲಿ ಮೀನುಗಳ ಕಾಮಕೇಳಿಯನ್ನು

ನೋಡಿದ ಮಾತ್ರಕ್ಕೆ ದೀರ್ಘ ಕಾಲದವರೆಗೆ ನಾನು ಗೈದ ತಪಸ್ಸು (ನಿಗ್ರಹಿಸಿದ ವೀರ್ಯವೂ) ಸಂಪೂರ್ಣವಾಗಿ ಅಳಿದು ಹೋಯಿತು. (ಪುರುಷಾರ್ಥವನ್ನೇ ಕೆಡಿಸಿಬಿಟ್ಟಿತು). ಇದು ತುಂಬಾ ಆಶ್ಚರ್ಯಕರವಾದುದು.

**||೮೯|| ಏಕಸ್ತಪಸ್ವ್ಯಹಮಥಾಂಭಸಿ ಮತ್ಸ್ಯಸಂಗಾತ್**                ಸೌಭರಿ
**ಪಂಚಾಶತಾಥ ಸುತಪಂಚಸಹಸ್ರಸಂಗಃ**
**ನಾಂತಂ ವ್ರಜಾಮ್ಯುಭಯಕೃತ್ಯಮನೋರಥಾನಾಂ**
**ಮಾಯಾಗುಣೈರ್ಹೃತಮತಿರ್ವಿಷಯೇಽರ್ಥಭಾವಃ || ೯-೭-೫೩**
9-6-52

ತನಗೆ ಒದಗಿದ ನಷ್ಟವನ್ನೇ ಸೌಭರಿಯು ವಿವರಿಸುವನು :-

ಅರ್ಥ :- (ಮೊದಲು) ನಾನು ಏಕಾಕಿಯಾಗಿ ತಪಸ್ಸಿನಲ್ಲಿ ತೊಡಗಿದ್ದೆನು. ಆನಂತರ. ನೀರಿನಲ್ಲಿ ಮೀನಗಳ ಕಾಮಕೇಳಿಯನ್ನು ಕಂಡು, (ಕಾಮವಶನಾಗಿ) ಐವತ್ತು ಮಡದಿಯರನ್ನು ಮಾಡಿಕೊಂಡೆನು. ಆ ನಂತರ ಐದುಸಾವಿರ ಮಕ್ಕಳನ್ನು ಹಡೆದು ಅವರಲ್ಲಿ ಅನುರಕ್ತನಾದೆನು. ಇವರೆಲ್ಲರಿಗೂ (ಅನುಗುಣರಾದ) ವಧೂವರರನ್ನು ಹುಡುಕುವ ಅಪೇಕ್ಷೆಯಿಂದ ನಾನು ಮಾಡಬೇಕಾದ ಕಾರ್ಯಕ್ಕೆ ಕೊನೆಯೆ ಇಲ್ಲದಂತಾಯಿತು. ವಿಷಯ ಸುಖಗಳಿಗೆ ನಾನು ತುಂಬಾ ಮನಸೋತೆನು. ಅದರಿಂದ **ಈ ವಿ**ಷಯಗಳ ಸುಖವನ್ನೇ ಪರಮ ಪುರುಷಾರ್ಥವೆಂದು ಭಾವಿಸಿದೆನು,

**||೯೦|| ಅಹಂ ಪುರಾ ಭರತೋ ನಾಮ ರಾಜಾ**                ಜಡಭರತ ಪ
**ವಿಮುಕ್ತದೃಷ್ಟಶ್ರುತಸಂಗಬಂಧಃ ।**
**ಆರಾಧನಂ ಭಗವತ ಈಹಮಾನೋ**
**ಮೃಗೋಽಭವಂ ಮೃಗಸಂಗಾದ್ಧತಾರ್ಥಃ || ೫-೧೨-೧೪**

ಸಜಾತಿಯರಾದ ದೇಹಸಂಬಂಧಿಗಳ ಬಗ್ಗೆ ಇರುವ ಆಸಕ್ತಿಯು ಬಂಧಕವಾಗಿದೆ, ಎಂಬುದನ್ನು ಹೇಳುವದು ಅಗತ್ಯವಿಲ್ಲ. (ಅದು ಎಲ್ಲರಿಗೂ ಗೊತ್ತಿದ್ದು) ಆದರೆ ಪರಮ ಭಾಗವತನೂ, ಮಹಿಮಾಶಾಲಿಯೂ ಆದ ಭರತರಾಜನು ತೊರೆಯಲು ಅಶಕ್ಯವಾದ ಎಲ್ಲ ಬಗೆಯ ಆಸಕ್ತಿಯನ್ನು ಬಿಟ್ಟುಕೊಟ್ಟವನು. ಅಂಥವನಿಗೆ ಪಶುಜಾತಿಯ ಚಿಗರೆಮರಿಯ ಬಗ್ಗೆ ಆಸಕ್ತಿಯು ಕೂಡ ಅವನನ್ನು ಬಲವಾಗಿ ಬಂಧಿಸಿಬಿಟ್ಟಿತು.- ಈ ಅಭಿಪ್ರಾಯವನ್ನು ಸೂಚಿಸಲು, ಭರತರಾಜನೆ ಎರಡನೆಯ

ಜನ್ಮದಲ್ಲಿ ತನ್ನ ಬಗ್ಗೆ ಹೇಳಿದ್ದನ್ನು ಇಲ್ಲಿ ಕೊಡಲಾಗಿದೆ. ... ಇಲ್ಲಿದ್ದ ಜಡಭರತನು ತನಗೆ ಹೊರಲಿಕ್ಕೆ ಹಚ್ಚಿದ ... ರಹೂಗುಣರಾಜನಿಗೆ ತನ್ನ ಪೂರ್ವ ವೃತ್ತಾಂತವನ್ನು ಹೀಗೆ ಹೇಳಿರುವನು.

**ಅರ್ಥ** :– ಹೇ ವೀರನಾದ ರಹೂಗುಣರಾಜನೆ ! ಪೂರ್ವಜನ್ಮದಲ್ಲಿ ನಾನು ಭರತನೆಂಬ ರಾಜನಾಗಿದ್ದೆನು. ಕಾಣುವ ಹಾಗೂ ಕೇಳುವ ( ಈ ಲೋಕದ ಹಾಗೂ ಪರಲೋಕದ) ವಿಷಯಗಳ ಬಗ್ಗೆ ಆಸಕ್ತಿಯ ಬಂಧನದಿಂದ ಪೂರ್ಣವಾಗಿ ಬಿಡುಗಡೆ ಹೊಂದಿದ್ದೆನು ( ಆಸಕ್ತಿ ಇಲ್ಲದವನಾಗಿದ್ದೆನು ) ಭಗವಂತನ ಆರಾಧನೆ ಮಾಡಲೆಂದು ವನಕ್ಕೆ ತೆರಳಿದೆನು. ಅಲ್ಲಿ ಒಂದು ಜಿಗರೆಮರಿಯಲ್ಲಿ ಅತ್ಯಾಸಕ್ತಿಯನ್ನು ತಾಳಿ, ನನ್ನ ಪುರುಷಾರ್ಥವನ್ನೆಲ್ಲ ಹಾಳು ಮಾಡಿಕೊಂಡು ( ಮುಂದಿನ ಜನ್ಮದಲ್ಲಿ) ನಾನು ಜಿಗರೆಯಾಗಿಯೇ ಹುಟ್ಟಿದೆನು.

ಜಡಭರತರು

೬೧|| **ಸಾ ಮಾಂ ಸ್ಮೃತಿರ್ಮೃಗದೇಹೇಽಪಿ ವೀರ**
**ಕೃಷ್ಣಾರ್ಚನಪ್ರಭವಾ ನೋ ಜಹಾತಿ |**
**ಅಥೋ ಅಹಂ ಜನಸಂಗಾದ್ವಿಮುಕ್ತೋ**
**ವಿಶಂಕಮಾನೋಽವಧೂತಶ್ಚರಾಮಿ** || ೫-೧೨ ೧೫

**ಅರ್ಥ** :– (ಹೇಯವಾದ) ಜಿಗರಿಯ ಜನ್ಮದಲ್ಲಿಯೂ, ( ಹಿಂದಿನ ಜನ್ಮದಲ್ಲಿ ನಾನು ಮಾಡಿದ ) ಶ್ರೀಕೃಷ್ಣನ ಆರಾಧನೆಯ ಪ್ರತಿಫಲವಾಗಿ ಮುಂಚಿನ ಜನ್ಮದ ನೆನಪನ್ನು ನಾನು ಕಳೆದುಕೊಂಡಿರಲಿಲ್ಲ. ಆದುದರಿಂದಲೇ, ಮೃಗದೇಹವನ್ನು ಬಿಟ್ಟ ನಂತರ ಜೀವನ್ಮುಕ್ತನಾಗಿದ್ದರೂ ನಾನು ಜನಸಂಪರ್ಕಕ್ಕೆ ಹೆದರಿಕೊಂಡು ಅವಧೂತ ವೇಷದಿಂದ ಸಂಚರಿಸುತ್ತಿರುವೆ.–

ಭರತನ ಬಗ್ಗೆ ಈ ಸಂಗತಿಯು ವಿಶಿಷ್ಟವಾಗಿದೆ, ರಾಜರು ವೈರಾಗ್ಯದ ದಾರಿಯನ್ನು ಹಿಡಿದರು – ಎಂದು ಹಿಂದೆ ಹೇಳಿದ್ದರೂ, ಭರತನ ಬಗ್ಗೆ ಇಲ್ಲಿ ಪ್ರತ್ಯೇಕ ಹೇಳಿರುವದು, ಈ ವಿಶೇಷ ಸಂಗತಿಯನ್ನು ಸೂಚಿಸುವದಕ್ಕಾಗಿದೆ, ಎಂಬುದನ್ನು ತಿಳಿದುಕೊಳ್ಳಬೇಕು.

ಹಿಂಸ್ರಾ ಪೇಕ್ಷೆ

||೬೨|| **ಯೋಷಿತ್ಸು ತಲ್ಪಾಭರಣಾಂಬರಾದಿ-**
**ದ್ರವ್ಯೇಷು ಮಾಯಾರಚಿತೇಷು ಮೂಢಃ |**
**ಪ್ರಲೋಭಿತಾತ್ಮಾ ಹ್ಯುಪಭೋಗಬುದ್ಧ್ಯಾ**
**ಪತಂಗವನ್ನಶ್ಯತಿ ನಷ್ಟದೃಷ್ಟಿಃ** || ೧೧-೮-೮

ಅವಧೂತ ಪ್ರಸ್ತಾಪ
ಯದು ರಾಜ

( ವಿಷಯಾಸಕ್ತಿಯಿಂದ ಒದಗುವ ಇಷ್ಟೆಲ್ಲ ಅನರ್ಥ,ಗಳು ಕಣ್ಮುಂದೆ ಇದ್ದರೂ ಕೂಡ ) ಹೀಗಿದ್ದರೂ ಯಾರಿಗೆ ( ವಿಷಯಗಳಲ್ಲಿ ) ವೈರಾಗ್ಯವು ಹುಟ್ಟುವ ದಿಲ್ಲವೊ, ಅಂಥವನ ಬಾಳು ಸೂಳೆಯ ಬ್ಬಾಳಿಗಿಂತಲೂ ಹೀನತರವಾದುದು - ಎಂಬುದನ್ನು ತಿಳಿಸಲು, ವಿದೇಹರಾಜನ ರಾಜಧಾನಿಯಲ್ಲಿ ವಾಸಿಸುತ್ತಿದ್ದ ಪಿಂಗಲಾ ಎಂಬ ವೇಶ್ಯೆಗೆ ವಿರಕ್ತಿಯು ಹೇಗೆ ಉಂಟಾಯಿತೆಂಬುದನ್ನು ನಾಲ್ಕು ಶ್ಲೋಕಗಳಲ್ಲಿ ವಿವರಿಸುವರು. ಅದರೊಳಗೆ, ತನ್ನ ಸ್ವಂತದ ಬಗ್ಗೆ ಅತೀವ ಅನುರಕ್ತರಾದವರನ್ನು ಅವಳು ಮೊದಲು ಧಿಃಕ್ಕರಿಸುವಳು.

**ಅರ್ಥ**:- ಭಗವಂತನ ಮಾಯಾಶಕ್ತಿ ಯಾವ ಪ್ರಕೃತಿಯಿಂದ ( ಅತೀವ- ಮೋಹಕವಾಗಿ) ನಿರ್ಮಿತರಾದ ಸ್ತ್ರೀಯರ ಬಗ್ಗೆ ಹಾಗೂ ಅಷ್ಟೇ ಮೋಹಕವಾಗಿರುವ ( ಭೋಗ್ಯವಸ್ತುಗಳಾದ ) ಸುಪ್ಪತ್ತಿಗೆ, ಆಭರಣ, ಬಟ್ಟೆ ಮುಂತಾದ ದ್ರವ್ಯಗಳ ಬಗ್ಗೆ, ಅವೆಲ್ಲವೂ ಮಂಗಳಕರವಾದುವೆಂದು ಭ್ರಮಿಸುವ ಮೂರ್ಖನು ( ಆಯಾ ಪದಾರ್ಥಗಳಲ್ಲಿರುವ ಅಂದ ಚೆಂದಗಳಿಂದ ), ಅವುಗಳತ್ತ ಲೋಭಿಯಾದ ಮನಸ್ಸು ಳ್ಳವನಾಗಿ, ಅವುಗಳನ್ನು ಉಪಭೋಗಿಸುವ ಬಯಕೆಯಿಂದ ಕಂಗೆಟ್ಟವನಾಗಿ, ( ಭ್ರಮೆಯಿಂದ ದೀಪಕ್ಕೆ ಎರಗುವ ) ದೀಪದ ಹುಳದಂತೆ ನಾಶ ಹೊಂದುತ್ತಾನೆ. ( ಪುರುಷಾರ್ಥವನ್ನು ಕೆಡಿಸಿಕೊಳ್ಳುತ್ತಾನೆ. )

ಇವೆಲ್ಲ ಭೋಗ್ಯ ವಿಷಯಗಳು ಅಮಂಗಳಕರವೆಂಬ ತಿಳುವಳಿಕೆಯು ಶಾಸ್ತ್ರ ಗಳ ಅಭ್ಯಾಸದಿಂದ ಜಾಗೃತವಾಗಿದ್ದರೂ, ಹೀಗೇಕೆ ಆತನು ಆಚರಿಸಬೇಕು ? - ಎಂಬುದಕ್ಕೆ-'ನಷ್ಟದೃಷ್ಟಿಃ' - ಎಂಬುದೇ ಉತ್ತರ. ವಿಷಯಗಳ ಬಗ್ಗೆ ಅತ್ಯಾಸಕ್ತಿ ಯಿಂದ ಆತನ 'ದೃಷ್ಟಿ'ಯು, ಜ್ಞಾನವು ನಷ್ಟವಾಗಿ ಬಿಡುವದು.- ಶಾಸ್ತ್ರ ಹಾಗೂ ಅನುಭವಗಳಿಂದ ಈ ಮಾತು ಎಲ್ಲರಿಗೂ ಗೊತ್ತಿದ್ದು, ಎಂಬುದನ್ನು 'ಹಿ'-ಎಂಬ ಪದದಿಂದ ಸೂಚಿಸುವರು. - ಈ ಬಗೆಯ ಜನರ ಬಾಳಿಗೆ ಧಿಕ್ಕಾರವಿರಲಿ, ಎಂಬು ದನ್ನು 'ಮೂಢ' ಪದದಿಂದ ಸೂಚಿಸುವರು.

ಹೀಗೆ ಹೇಳಿರುವರು :- 'ಪರಮಾತ್ಮನ ಮಾಯಾಶಕ್ತಿಯಿಂದ ಸೃಷ್ಟಿಸಲ್ಪಟ್ಟ ಸ್ತ್ರೀಯರನ್ನು ಕಂಡು, ಇಂದ್ರಿಯಗಳನ್ನು ಗೆಲ್ಲಲಾರದ ಪುರುಷನು ಅವರ ಹಾವ ಭಾವಗಳಿಂದ ಸೆಳೆಯಲ್ಪಟ್ಟ ಮನಸ್ಸುಳ್ಳವನಾಗಿ - ದೀಪದ ಹುಳವು ಬೆಂಕಿಯಲ್ಲಿ ಬೀಳುವಂತೆ - ನರಕದಲ್ಲಿ ಬೀಳುವನು. - ಹಾಗೂ -'ಸ್ತ್ರೀಯರ ಶರೀರವು ತೊಗಲು ರಕ್ತ, ಮಾಂಸ, ಎಲವು ಇತ್ಯಾದಿಗಳ ಗುಂಪು, ಹೀಗಿದ್ದರೂ'ಆಹೋ ! ಇವರ

ಮುಖ ಎಷ್ಟು ಮಂಗಳಕರ! ಮೂಗು ಎಷ್ಟು ಚೆಲುವಾಗಿದೆ,! ನಗೆ ಎಷ್ಟು ಮಧುರವಾಗಿದೆ!-ಎಂದು ಮೆಚ್ಚಿಕೊಂಡು ಅದರಲ್ಲಿಯೆ ಆನಂದ ಪಡುವ ಪುರುಷರಿಗೂ, ಮಲಮೂತ್ರ ಕೀವುಗಳಲ್ಲಿ ನೆಲೆಸಿ ಅದರಲ್ಲಿಯೆ ಆನಂದ ಪಡುವ ಕ್ರಿಮಿಗಳಿಗೂ ಏನು ವ್ಯತ್ಯಾಸವಿದೆ?'

।೯೩॥ ಸಂತಂ ಸಮೀಪೇ ರಮಣಂ ರತಿಪ್ರದಂ ಪಿಂಗಳಾ
ವಿತ್ತಪ್ರದಂ ನಿತ್ಯಮಿಮಂ ವಿಹಾಯ ।
ಅಕಾಮದಂ ದುಃಖಭಯಾಧಿಶೋಕ-
ಮೋಹಪ್ರದಂ ತುಚ್ಛಮಹಂ ಭಜೇಽಜ್ಞಾ ॥ 11-8-30

ಈ ವಿಚಾರವು ಹಾಗಿರಲಿ! ನನ್ನ ಬಾಳುವೆಗೆ ಧಿಕ್ಕಾರವಿರಲಿ! -ಎಂಬ ಭಾವನೆಯಿಂದ ಹೀಗೆ ಅವಳು ನುಡಿದಿರುವಳು –

**ಅರ್ಥ** :- ಸಮೀಪದಲ್ಲಿಯೇ (ಹೃದಯದಲ್ಲಿಯೆ) ಇದ್ದುಕೊಂಡು, ನಿತ್ಯವಾದ ಸುಖ ಕೊಡುವವನು, (ಅಪೇಕ್ಷಿತ) ಸಂಪತ್ತನ್ನು ಕೊಡುವವನು, ಜನ್ಮಮರಣರಹಿತನಾದವನು ,- ಇವೆಲ್ಲ ಕಲ್ಯಾಣ ಗುಣಗಳಿಂದ ಯುಕ್ತನಾದ ಸ್ವಾಮಿಯನ್ನು ಬಿಟ್ಟುಕೊಟ್ಟು, ಬಯಸಿದ ವಸ್ತು ಕೊಡಲು ಅಸಮರ್ಥನಾದವನು, ಇದಕ್ಕೆ ಪ್ರತಿಯಾಗಿ ಸ್ವಂತದ ಕಷ್ಟನಷ್ಟಗಳಿಂದ ದುಃಖವನ್ನು ಕೊಡುವವನು, ಇವೆಲ್ಲ ಕಾರಣಗಳಿಂದ ಅತಿತುಚ್ಛನಾದ ಪುರುಷನನ್ನು ರಮಣ – ಪತಿ ಯೆಂದು ಭ್ರಮಿಸಿ ನಾನು ಅವನನ್ನು ಆಶ್ರಯಿಸಿದೆನು.

॥೯೪॥ ಅಹೋ ಮಯಾತ್ಮಾ ಪರಿತಾಪಿತೋ ವೃಥಾ ಪಿಂಗಳಾ
ಸಾಂಕೇತ್ಯವೃತ್ತ್ಯಾತಿವಿಗರ್ಹ್ಯವಾರ್ತಯಾ ।
ಸ್ತ್ರೈಣಾನ್ನರಾಂಶ್ಚಾರ್ಥತೃಷಾಽನುಶೋಚ್ಯಾನ್ 11-8-31
ಕ್ರೀತ್ವೇಹ ವಿತ್ತಂ ರತಿಮಾತ್ಮನೇಚ್ಛತೀ ॥

ಪಶ್ಚಾತ್ತಾಪದಿಂದಲೆ ತಾನು ಮಾಡಿದ ಪಾಪಕ್ಕೆ ಬಿಡುಗಡೆ,- ಈ ಅಭಿಪ್ರಾಯದಿಂದ ಪಿಂಗಳೆಗೆ ಆದ ಪಶ್ಚಾತ್ತಾಪದ ಬಗೆಯನ್ನು ತೋರಿಸುವರು.

**ಅರ್ಥ**:- ಕಂಡರೆ ಮರುಗಲು ಯೋಗ್ಯರಾದ, ಸ್ತ್ರೀಲೋಲುಪರಾದ ಪುರುಷರನ್ನು ಅತಿಹೀನವೆಂದು ಹೆಸರಾದ 'ಸಂಕೇತವೃತ್ತಿ' ಯಿಂದ-(ದೇಹವಿಕ್ರಯಕ್ಕಾಗಿ

ಇಂತಿಷ್ಟು ಹಣವನ್ನು ಕೊಡಬೇಕೆಂಬ ಕರಾರಿನ ವಿಧಾನದಿಂದ) ನಾನು ಹಣ ಹಾಗೂ ರತಿಸುಖಕ್ಕಾಗಿ ಕೊಂಡುಕೊಂಡು, ನನ್ನ ಆತ್ಮನನ್ನು (ಬದುಕನ್ನು) ವ್ಯರ್ಥವಾಗಿ ಕೊರಗಿಸಿದೆನು-ಅದರಿಂದ ನನಗೆ ತುಂಬಾ ಖೇದವಾಗಿದೆ!

ದ್ರವ್ಯಲಾಭದ ಪ್ರಯೋಜನವಿರುವಾಗ್ಗೆ, ಏನೂ ಪ್ರಯೋಜನವಿಲ್ಲದೆ ನನ್ನ ಮನಸ್ಸನ್ನು ಬಳಲಿಸಿದೆನು-ಎಂದು ಹೇಳುವದು ಹೇಗೆ ಸರಿಯಾಗುವದು?-ಎಂದು ಪ್ರಶ್ನೆ ಮಾಡಿದರೆ ಅದಕ್ಕೆ ಇದು ಉತ್ತರ. ಯಾವುದು ನಿತ್ಯ, ಯಾವುದು ಅನಿತ್ಯ,-ಎಂಬ ತಿಳುವಳಿಕೆ ಇಲ್ಲದಾಗ್ಗೆ, ಹಣಗಳಿಸುವದು ಒಂದು ಪ್ರಯೋಜನವಾಗಿತ್ತು. ಆದರೆ ಈಗ್ಗೆ ವಿವೇಕದ ಉದಯವಾದ ಮೇಲೆ, ಮೊದಲಿನ ದ್ರವ್ಯ ಲಾಭದ ಪ್ರಯೋಜನವು ನಿಜವಾಗಿಯೂ ನಿರರ್ಥಕವಾದುದು.

ಅಹೊ!-ಎಂಬ ದುಃಖೋದ್ಗಾರದಿಂದ, ಅವಳಿಗಾದ ಅತೀವ ಪಶ್ಚಾತ್ತಾಪವು ಸೂಚಿತವಾಗಿದೆ.

॥೬೫॥ **ಯದಸ್ಥಿಭಿರ್ನಿರ್ಮಿತವಂಶವಂಶ್ಯ-**
**ಸ್ಥೂಣಂ ತ್ವಚಾ ರೋಮನಖೈಃ ಪಿನದ್ಧಂ ।**
**ಕ್ಷರನ್ನವದ್ವಾರಮಗಾರಮೇತ-**
**ದ್ವಿಣ್ಮೂತ್ರಪೂರ್ಣಂ ಮದುಪೈತಿ ಕಾನ್ಯಾ** ॥ ೧೧-೮-(೩೦, ೩೧, ೩೨)

ನಿತ್ಯ (ಜನ್ಮ-ಮರಣ ರಹಿತ) ರಮಣನು ಯಾರೆಂಬ ತಿಳುವಳಿಕೆಯಿಲ್ಲದೆ ಅನಿತ್ಯ (ಜನ್ಮ-ಮರಣಗಳಿಗೆ ಅಧೀನನಾದ) ರಮಣನನ್ನು ಪಿಂಗಳೆಯು ಉಪಭೋಗಿಸಿದಳು-ಎಂದು ಈ ಮೊದಲು ಹೇಳಿದ ಮಾತು ಸಮಂಜಸವಾಗುವದು-ಏಕೆಂದರೆ ನಿತ್ಯರಮಣ (ಶ್ರೀಹರಿ) ನಿಗೂ ಶರೀರವಿದ್ದರೆ, ಆತನು ಅನಿತ್ಯನೇ ಎಂದು ಹೇಳಬೇಕಾದೀತು. ಆತನಿಗೆ ಶರೀರವಿಲ್ಲ ವೆಂದು ಹೇಳಿದರೆ, ಆತನಲ್ಲಿ ಶರೀರದ ಗುಣಗಳಾದ ಸೌಂದರ್ಯಸುಕುಮಾರತೆಗಳು ಇರುವದಿಲ್ಲ. ಹೀಗಿದ್ದರೆ, (ಪ್ರತ್ಯಕ್ಷವಾಗಿ ಕಾಣುವ) ಸೌಂದರ್ಯಾದಿಗಳಿಂದ ಯುಕ್ತವಾದ ಶರೀರವುಳ್ಳ ಪುರುಷರನ್ನು ಬಿಟ್ಟುಕೊಟ್ಟು, ಶರೀರವೇ ಇಲ್ಲದ, ಸೌಂದರ್ಯಾದಿಗಳಿಂದ ರಹಿತನಾದ ಪುರುಷನನ್ನು ಅವಳು ಹೇಗೆ ಸೇವಿಸಿದಳು? – ಆದುದರಿಂದ, ಶರೀರವಿರುವದು ಹಾಗೂ ಇಲ್ಲದಿರುವದು,-ಎರಡೂ ವಿಚಾರ ಸರಣಿಗಳು ಸದೋಷವಾಗುವವು. – ಎಂಬುದು ಆಕ್ಷೇಪ. ಅದಕ್ಕೆ ಉತ್ತರ:- ನಿಮ್ಮ ಆಕ್ಷೇಪವು ಸರಿಯಾದುದಲ್ಲ. ಏಕೆಂದರೆ, ದೇಹವುಳ್ಳವನು, ಎಂದು ಹೇಳಿದ ಮಾತ್ರಕ್ಕೆ, ಆತನಿಗೆ

ಅನಿತ್ಯತ್ವವನ್ನು ಹೊಂದಿಸುವದು ಸರಿಯಲ್ಲ, ಆತನು ಅನಿತ್ಯನಾಗಬೇಕಿಲ್ಲ. ಪಾಂಚಭೌತಿಕವಾದ ದೇಹವುಳ್ಳವನ ದೇಹವು ಸುಖಮಯ, [illegible] ಹೇಳುವದು ಶಾಸ್ತ್ರಪ್ರಮಾಣಗಳಿಗೆ ವಿರುದ್ಧವಾದ ಮಾತು. ಮತ್ತು, [illegible] ದೇಹವೆ ಮುಪ್ಪುಮರಣಾದಿ ರೂಪವಾದ ಸಂಸಾರಕ್ಕೆ ಸಿಲುಕಿರಲು, [illegible] ಮುಪ್ಪುಮರಣಾದಿರೂಪವಾದ ಸಂಸಾರದಿಂದ ಅನ್ಯರನ್ನು ಮುಕ್ತಗೊಳಿಸಲು ಸಮರ್ಥನೆಂಬ ಮಾತು ಅಸಮಂಜಸ ವಾಗುವದು.– ಅಂತೆಯೆ, 'ನಿತ್ಯರಮಣ'ನು 'ವಿತ್ತಪ್ರದ'ನು, – ಅಪೇಕ್ಷಿತವಾದ ಪುರುಷಾರ್ಥಕೊಡಲು ಸಮರ್ಥನು, ಎಂದು ಪೂರ್ವದಲ್ಲಿ ಹೇಳಿದೆ. ಇದಲ್ಲದೆ, ನಿತ್ಯರಮಣನಾದ ಶ್ರೀಹರಿಯ ಶರೀರವು ಪಾಂಚಭೌತಿಕವಾದುದಲ್ಲ, ಅಪ್ರಾಕೃತವಾದುದು. ಪರಮಾತ್ಮನ ದೇಹವು ಉಗುರಿನಿಂದ ಮೊದಲು ಮಾಡಿಕೊಂಡು ಕೂದಲು ಪರ್ಯಂತ, ಉಪಮೆಯಿಲ್ಲದ (ಅಸದೃಶ) ಇಂತಿಷ್ಟು ಎಂಬ ಕೊನೆಯಿಲ್ಲದ, ಆನಂದಾದಿ ಕಲ್ಯಾಣ ಗುಣಗಳಿಂದ ಪೂರ್ಣವಾದುದು (ರಚಿತವಾದು) ಹಾಗೂ ಈ ಗುಣಗಳಿಗೆ ಸರಿ ಹೋಲುವ ಸೌಂದರ್ಯ, ಸುಕುಮಾರತೆಗಳಿಂದ ಯುಕ್ತವಾದದು. ಅಂತೆಯೆ, ಜ್ಞಾನೋದಯವಾಗಲು, ಪಿಂಗಲೆಗೆ ಶ್ರೀಹರಿಯೆ ಭಜನೀಯ (ಸೇವೆಗೆ, ಆಶ್ರಯಕ್ಕೆಯೋಗ್ಯ) ನಾದನು– ಅಂತೆಯೆ ಆತನಿಗೆ, 'ನಿತ್ಯಂರತಿಪದಂ'–ನಿತ್ಯಸುಖವಾದ ಪುರುಷಾರ್ಥವನ್ನು ಕೊಡಲುಸಮರ್ಥನು,–ಎಂದು ಹೇಳಿದೆ. ಪರಮಾತ್ಮನ ವ್ಯತಿರಿಕ್ತ ಉಳಿದವರ ದೇಹವು ಭೌತಿಕ–ಪ್ರಾಕೃತಿಕ–ವಸ್ತುಗಳಿಂದ ನಿರ್ಮಿತವಾದುದರಿಂದ ಅನಿತ್ಯವಾದುದು,–ಅಂತೆಯೆ ಹೀನವಾದುದು, ತುಚ್ಛವಾದುದು. ಆದುದರಿಂದ ಜ್ಞಾನೋದಯವಾದಾಗ್ಗೆ, ಅಂಥದೇಹಗಳಬಗ್ಗೆ ಆಸಕ್ತಿ–ಲೋಭಗಳನ್ನು ತಾಳಬಾರದು. ಭಗವಂತನ ಅಲೌಕಿಕ, ದಿವ್ಯಸ್ವರೂಪವನ್ನು ತಿಳಿಯದ ಮಂದಬುದ್ಧಿಗಳು ಲೋಭಿಸುವ, ರಮಿಸುವ ದೇಹಗಳು ಈ ಬಗೆಯವು–ಎಂಬ ಅಭಿಪ್ರಾಯವನ್ನು ಈ ಶ್ಲೋಕವು ತಿಳಿಸುವದು.

ಅರ್ಥ:– (ಚಿಕ್ಕ) ಎಲುಬು, ಅವುಗಳಿಗೆಲ್ಲ ಆಧಾರವಾದ ದೊಡ್ಡ ಎಲುಬು– ಇವೇ ತೊಲೆ ಜಂತಿಗಳಿಂದ ರಚಿತವಾದ, (ಹೊರಗೆ) ತೊಗಲು, ಕೂದಲು, ಉಗುರು– ಇತ್ಯಾದಿಗಳಿಂದ ಬಿಗಿಯಾಗಿ ಕಟ್ಟಲ್ಪಟ್ಟ, ಸೋರುವ ಒಂಬತ್ತು ರಂಧ್ರಗಳಿಂದಕೂಡಿದ, ಮಲಮೂತ್ರಗಳಿಂದ ತುಂಬಿಕೊಂಡ– ಈ ಬಗೆಯ (ಹೇಯವಾದ) ದೇಹವೆಂಬ ಮನೆಯನ್ನು ನಾನಲ್ಲದೆ, ಬೇರೆ ಬುದ್ಧಿಶೂನ್ಯಳಾದ ಯಾವ ಸ್ತ್ರೀಯೂ ಇದು ಒಳ್ಳೇದೆಂದು ಸ್ವೀಕರಿಸಲಾರಳು.–

ಪಶ್ಚಾತ್ತಾಪ ಹೊಂದಿದ ಪಿಂಗಳೆಯು ಅಂತರ್ಯಾಮಿಯಾದ ಪರಮಾತ್ಮನಿಗೆ ಮಾಡಿಕೊಂಡ ನಿವೇದನೆಯನ್ನು ಅವಧೂತರು ಯದುರಾಜನಿಗೆ ಹೇಳಿರುವರು.

||೯೬|| ಸಂಗಂ ನ ಕುರ್ಯಾತ್ ಪ್ರಮದಾಸು ಜಾತು ಕಪಿಲನಾಮಕ
ಯೋಗಸ್ಯ ಪಾರಂ ಪರಮಾರುರುಕ್ಷುಃ ।
ಮತ್ಸೇವಯಾ ಪ್ರತಿಲಬ್ಧಾತ್ಮಲಾಭೋ
ವದಂತಿ ಯಾ ನಿರಯದ್ವಾರಮಸ್ಯ ॥ ೩-೩೧-೩೯ 3-31-39

ಕೊನೆಯದಾಗಿ ವೈರಾಗ್ಯದ ಬಗ್ಗೆ ನೆನಪಿನಡಲ್ಲಿತಕ್ಕ ಮಾತನ್ನು ಇಲ್ಲಿ ಹೇಳುವರುಃ- ಕಪಿಲನಾಮಕ ಪರಮಾತ್ಮನು ತಾಯಿಗೆ (ದೇವಹೂತಿಗೆ) ಹೇಳಿದ ತತ್ತ್ವೋಪದೇಶದಲ್ಲಿ ಈ ಮಾತು ಬಂದಿದೆ, ಸ್ತ್ರೀಕಾಮುಕರಿಗೆ ಸದ್ಗತಿಯು ದೊರೆಯುವದಿಲ್ಲವೆಂಬುದು ಈ ಮಾತಿನ ಅಭಿಪ್ರಾಯ.

**ಅರ್ಥ** :- (ಭಗವತ್ ಪ್ರಾಪ್ತಿಗೆ ಸಾಧಕವಾದ) ಯೋಗದ ತುಟ್ಟತುದಿಗೆ- ಪರಾಕಾಷ್ಟೆಗೆ ಏರಬಯಸುವವನು ಸ್ತ್ರೀಯರಲ್ಲಿ ಅತ್ಯಾಸಕ್ತಿಯನ್ನು ಎಂದಿಗೂ ತಾಳಬಾರದು. (ಸ್ತ್ರೀಸಂಗವು ಪುರುಷಾರ್ಥದ ಪ್ರಾಪ್ತಿಗೆ ಪ್ರತಿಬಂಧಕವಾದುದು) ಸ್ತ್ರೀಸಂಗವು ನರಕದ ಬಾಗಿಲು, ಎಂದು ಜ್ಞಾನಿಗಳು ಹೇಳುವರು. (ಪುರುಷಾರ್ಥ) (ಮೋಕ್ಷ) ಪ್ರಾಪ್ತಿಗೆ ಸಹಾಯಕವು ಯಾವುದೆಂದರೆ ಮಾನವನು ನನ (ಭಗವಂತನ) ಆರಾಧನೆಯಿಂದಲೆ ಆತ್ಮದ ಉದ್ಧಾರವನ್ನು ಪಡೆಯುವನು.-

ಹೀಗೆ ಹೇಳಿರುವರು;- ಸ್ತ್ರೀಯರಲ್ಲಿ ಅತ್ಯಾಸಕ್ತಿಯಿಂದ, ಅದರಂತೆಯೆ ಸ್ತ್ರೀಕಾಮುಕರ ಸಹವಾಸದಿಂದ ಪುರುಷನಿಗೆ ಉಂಟಾಗುವಷ್ಟು ಮೋಹ ಹಾಗೂ ಬಂಧನಗಳು ಬೇರೆ ಯಾವುದರ ಬಗ್ಗೆ ಅತ್ಯಾಸಕ್ತಿಯನ್ನು ವಹಿಸಿದರೂ ಉಂಟಾಗುವದಿಲ್ಲ.

||೯೭|| ರಾಯಃ ಕಲತ್ರಂ ಪಶವಃ ಸುತಾದಯೋ
ಗೃಹಾ ಮಹೀಕುಂಜರಕೋಶಭೂತಯಃ ।
ಸರ್ವೇಽರ್ಥಕಾಮಾಃ ಕ್ಷಣಭಂಗುರಾಯುಷಃ
ಕುರ್ವಂತಿ ಮರ್ತ್ಯಸ್ಯ ಕಿಯತ್ಪ್ರಿಯಂ ಚಲಾಃ ॥ ೭-೭-೩೯ 39

ಪುರುಷಾರ್ಥಕ್ಕೆ ಬಂಧಕವಾದ ಸಂಗತಿಗಳಲ್ಲಿ ಎರಡು ಅತಿ ಪ್ರಬಲವಾದವುಗಳು, ಹೆಣ್ಣು, ಹೊನ್ನು. ಇವುಗಳಲ್ಲಿ ಮೊದಲಿನೆಯದಾದ ಹೆಣ್ಣಿನ ಮೋಹವನ್ನು-

ಸ್ತ್ರೀಸಂಗವನ್ನು ಬಿಟ್ಟುಕೊಡಲೇಬೇಕೆಂದು ಹಿಂದೆ ಹೇಳಿದೆ. – ಎರಡನೆಯದಾದ ಹೊನ್ನಿನ, ಸಂಪತ್ತಿನ ಮೋಹವನ್ನು ಬಿಡಬೇಕೆಂದು ಇಲ್ಲಿ ಹೇಳಿದೆ.

**ಅರ್ಥ**;– ಧನಕನಕಗಳು, ಮಡದಿ ಮಕ್ಕಳು, (ಸಾಕಿದ) ಪಶುಗಳು, ಮನೆ–ಮಾರು, ಆನೆ, ಖಜಾನೆ, ಆಭರಣಗಳು,–ಇವೇ ಮುಂತಾದ ಭೋಗ್ಯ ವಿಷಯಗಳು ಅನಿತ್ಯವಾದವು. ಚಂಚಲವಾದ [ಕ್ಷಣಿಕವಾದ] ಈ ವಸ್ತುಗಳಿಂದ ಮಾನವನಿಗೆ ಎಷ್ಟುತಾನೆ ಸುಖವಾದೀತು ? [ಆದುದರಿಂದ ಅವುಗಳಲ್ಲಿ ಲೋಭ ವನ್ನು ಮಾಡದಿರುವದೆ ಶ್ರೇಯಸ್ಕರವಾದು].

ಹೀಗೆ ಹೇಳಿರುವರು:- 'ಕಳವು, ಕೊಲೆ, ಸುಳ್ಳಾಡುವದು, ಡಂಬಾಚಾರ ಲೋಭ, ಸಿಟ್ಟು, ದುರ್ಮಾನ, ಮದ, ಭೇದಭಾವನೆ, ಹಗೆತನ, ಅಪನಂಬಿಕೆ, ತೀವ್ರವಾದ ಏರಾಟ, ದುಶ್ಚಟಗಳು,–ಮಾನವರಿಗೆ ಒದಗುವ ಈ ಹದಿನಾಲ್ಕು ಬಗೆಯ ಅನರ್ಥಗಳಿಗೆ ದುಡ್ಡೇ ಮೂಲ ಕಾರಣವಾಗಿದೆ. ಆದುದರಿಂದ ಶ್ರೇಯ ಸ್ಸನ್ನು (ಆತ್ಮೋದ್ಧಾರವನ್ನು) ಬಯಸುವ ಪ್ರತಿಯೊಬ್ಬ ಮಾನವನು ದುಡ್ಡಿನ ಲೋಭದಿಂದ ನಾಲ್ಕು ಹೆಜ್ಜೆ ದೂರದಲ್ಲಿರಬೇಕು. ಮತ್ತು– ' ನಿತ್ಯವೂ ತಾಪದಾ ಯಕವಾದ, ಬಹು ಕಷ್ಟಪಟ್ಟು ಗಳಿಸಬೇಕಾದ, ಸ್ವಂತಕ್ಕೆ ಮರಣ ಪ್ರಾಯ ವಾದ ದುಡ್ಡಿನಿಂದ; ಹಾಗೂ ಅನಿತ್ಯವಾದ ಮನೆ, ಮಕ್ಕಳು, ನೆಂಟರು ಸಾಕಿದ ಪ್ರಾಣಿಗಳು ಇವುಗಳನ್ನು ಪಡೆಯುವುದರಿಂದ ಯಾವ ಬಗೆಯ ಪ್ರೀತಿಯನ್ನು ಪಡೆಯುವಿರಿ ?' –

**||೯೮|| ಕ್ಷುದ್ರಂ ಚರಂ ಸುಮನಸಾಂ ಶರಣೇ ಮಥಿತ್ವಾ** ಪುರಂಜನೋಪ
**ರಕ್ತಂ ಷಡಂಘ್ರಿಗಣಸಾಮಸುಲುಬ್ಧಕರ್ಣಂ ।**
**ಅಗ್ರೇ ವೃಕಾನಸುತೃಪೋಽವಿಗಣ್ಯ ಯಾಂತಂ**
**ಪೃಷ್ಠೇ ಮೃಗಂ ಮೃಗಯುಲುಬ್ಧಕಬಾಣಭಿನ್ನಂ । ೪-೨೯-೫೩** 53

– ಇದುವರೆವಿಗೆ ವಿವೇಚಿಸಿದ ವಿಷಯದ ಬಗ್ಗೆ ಹೆಚ್ಚು ಆದರವನ್ನು ಹುಟ್ಟಿ ಸಲು, (ನಾರದರು ಪ್ರಾಚೀನ ಬರ್ಹಿ ರಾಜನಿಗೆ ಪುರಂಜನೋಪಾಖ್ಯಾನದಲ್ಲಿ) ಅತೀ ಗೂಢವಾಗಿ ಹೇಳಿಕೊಟ್ಟ ಪ್ರಮೇಯವನ್ನು ಪ್ರತಿಪಾದಿಸುವ ಶ್ಲೋಕವನ್ನು ಆ ವಿಷಯದ ಇಂಗಿತಾರ್ಥ ರೂಪವಾಗಿ ಹೇಳುವರು. – ಶ್ಲೋಕದ ಭಾವವು ತಿಳಿಯಲು ಕಠಿಣವಾದುದರಿಂದ, ತಾವಾಗಿಯೆ ಅದನ್ನು ತಿಳಿಯಾಗಿ ಮಾಡಿ ಹೇಳಿರುವರು –

**ಅರ್ಥ** :– 'ಸುಮನಸಾಂ', ಅಂದರೆ 'ಹೂಗಳು' ಎಂಬ ಅರ್ಥವಲ್ಲ; ಹೂಗಳಿಗೆ ಸದೃಶವಾದ ಗುಣವುಳ್ಳವರು, ಸ್ತ್ರೀಯರು. ಕೋಮಲವಾದ ಅವಯವಗಳಿರುವದು, ಹೂಗಳಿಗೂ ಸ್ತ್ರೀಯರಿಗೂ ಇರುವ ಸದೃಶವಾದ ಗುಣ. ಇಂಥ ಸ್ತ್ರೀಯರ 'ಶರಣೆ' – ಅಂದರೆ ಸಹವಾಸದಲ್ಲಿ (ಆಶ್ರಯೆ), ಇದ್ದುಕೊಂಡು ಅತೀವ ಹೀನಮಯವಾದ, ಕಾಮ ಸುಖದ ಲವಲೇಶಕ್ಕಾಗಿ ಹಂಬಲಿಸುವರು. –ನಾಲಿಗೆ ಹಾಗೂ ಸ್ತ್ರೀಭೋಗದಿಂದ ಒದಗುವ ಅಲ್ಪ ಸುಖವೇ ಈ ಕೀಳುತಮವಾದ ಸುಖ. ಹೂವಿನ ಸುವಾಸನೆ ಹಾಗೂ ಮಕರಂದಗಳಂತೆ ವಿಷಯಸುಖವು ಅಲ್ಪವಾದುದು. ಕ್ಷಣಿಕವಾದುದು. ಹಿಂದಿನ ಜನ್ಮಗಳಲ್ಲಿ ಮಾನವನು ಫಲಾಪೇಕ್ಷೆಯಿಂದ ಮಾಡಿದ ಕರ್ಮಗಳಿಂದ ಈ ವೈಷಯಿಕ ಸುಖವು ಕಾಲಾನುಸಾರವಾಗಿ ತಾನೇ ಆತನಿಗೆ ದೊರಕುವದು. ಈ ಬಗೆಯ ಕ್ಷಣಿಕ ಸುಖಕ್ಕಾಗಿ ಸ್ತ್ರೀಪುರುಷರು – ಮಧಿತ್ವಾ ( ಮಿಥುನೀಭೂಯ ) ಜೋಡಿಜೋಡಿಯಾಗಿ ಕೂಡಿಕೊಂಡು ಅದರಲ್ಲಿ ಆಸಕ್ತಿಯನ್ನು ತಾಳುವರು. ಅದನ್ನು ದೊರಕಿಲು (ವಿಚಿನ್ವಂತಂ) ಎಲ್ಲಡೆಯಲ್ಲಿ ಧಡಪಡಿಸುವರು. –( ವಿಷಯ ಸುಖದ ಪ್ರಾಪ್ತಿಗಾಗಿ ಅಲೆದಾಡುವದು ಸಜ್ಜನರಿಗೆ ಸಮ್ಮತವಾದ ಕಾರ್ಯವಲ್ಲ! ) ಇದರಂತೆಯೆ ಸ್ತ್ರೀಯರೊಡನೆ ಏಕಾಂತದ ಸರಸಸಲ್ಲಾಪಗಳನ್ನು ಕೇಳುವದರಲ್ಲಿಯೇ ಕಿವಿಗಳು ತುಂಬಾ ಆಸಕ್ತಿ ಆನಂದಗಳನ್ನು ಪಡೆಯುವವು. ಭ್ರಮರಗಳ ಗುಂಜಾರವದಂತೆ ಸ್ತ್ರೀಯರ ಸರಸ ಸಲ್ಲಾಪವು ಕಿವಿಗೆ ಬಹಳೇ ಇಂಪಾಗಿರುವದು.– ಸ್ತ್ರೀಯರನ್ನು ಸಾದೃಶ್ಯದಿಂದ ಹೂಗಳಿಗೆ ಹೋಲಿಸಿರುವಂತೆ, ಅವರ ಸರಸ–ಸಲ್ಲಾಪವನ್ನು ಅಷ್ಟೇ ಕಿವಿಗೆ ಇಂಪಾದ ಸಾಮಗಾನದ ಇಂಚರಕ್ಕೆ ಹೋಲಿಸಿರುವರು. ( ಹೀಗೆ ಹೇಯವಾದ ವಿಷಯ ಭೋಗದಲ್ಲಿ ತೊಡಗಿದ್ಧವರಿಗೆ ) ಕ್ಷಣಕ್ಷಣಕ್ಕೆ ತಮ್ಮ ಜೀವಿತದ ಅವಧಿಯನ್ನು ಛೇದಿಸುತ್ತಿರುವ, ಮೊಟಕುಗೊಳಿಸುತ್ತಿರುವ ಹಗಲು ರಾತ್ರಿಗಳೆಂಬ ತೋಳಗಳ ಗುಂಪಿನ ಕಡೆಗೆ ಲಕ್ಷವೇ ಇರುವದಿಲ್ಲ. ಆಯುಷ್ಯವನ್ನು ಕತ್ತರಿಸುವ ಹಗಲು ರಾತ್ರಿಗಳು ತೋಳಗಳ ಗುಂಪಿನಂತೆ ಹಿಂಸ್ರಕವಾದುದರಿಂದ, ಅವೆರಡರಲ್ಲಿಯೂ ಅದು ಸದೃಶ ಗುಣವಾಗಿದೆ. ವಿಷಯಾಸಕ್ತರು ತಮ್ಮ ಆಯುಷ್ಯದ ಹಾನಿಯು ಈ ರೀತಿಯಾಗಿ ನಡೆದಿರುವದನ್ನು ಲೆಕ್ಕಿಸದೆ, ವಿಷಯಗಳ ಭೋಗದಲ್ಲಿ (ಗೃಹೇಷು) ರಮಿಸುವರು.– ಇಂಥವರಿಗೆ ತಮ್ಮ ಬೆನ್ನ ಹಿಂದೆ ತಮಗೆ ತಿಳಿಯದೆ ನಡೆದುಬರುತ್ತಿರುವ ಮೃತ್ಯುದೇವನು. (ಬೇಡನು ಬೇಟೆಯ ಪ್ರಾಣಿಗೆ ಹಿಂದಿನಿಂದ ಬಾಣ ಹೊಡೆದು ಕೆಡಹುವಂತೆ) ಬಾಣ ಹೊಡೆದು ತಮ್ಮ ಹೃದಯವನ್ನು ಭೇದಿಸುವನೆಂಬ ಅರಿವೇ ಇರುವದಿಲ್ಲ. ರಾಜನೆ! ವಿಷಯಾಸಕ್ತರ ಈ ನಡತೆಯು ಒಳ್ಳೇ ಸೋಜಿಗವಾಗಿದೆ!–

ಈ ಶ್ಲೋಕದ ಪ್ರತಿಫಲಾರ್ಥವು- ಹೂದೋಟದಲ್ಲಿ ಚಿಗರೆಯು ಹೂವಿನ ಸುವಾ ನೆಗಾಗಿ, ದುಂಬಿಗಳ ಇಂಪಾದ ಗುಂಜಾರವಕ್ಕಾಗಿ, ಎಳೆಗರಿಕೆಗಾಗಿ, ಹಾಗೂ ಸಜಾತೀಯ ಹೆಣ್ಣು ಚಿಗುರೆಯೊಡನೆ ಸಂಭೋಗಕ್ಕಾಗಿ ಅವುಗಳನ್ನು ಉಪಭೋ ಗಿಸುತ್ತ ಸಂಚರಿಸುವದು. ಇವೆಲ್ಲ ಭೋಗಗಳನ್ನು ಪಡೆಯುತ್ತಿರುವ ಚಿಗುರೆಯ ಎಲ್ಲ ಇಂದ್ರಿಯಗಳು ಮೈಮರೆತು ಆ ಭೋಗಗಳಲ್ಲಿಯೆ ತನ್ಮಯವಾಗಿ ಬಿಡುವವು. ತನ್ನ ಹಿಂದೆಯೆ ನಿಂತಿರುವ ಬೇಟೆಗಾರ, ತನ್ನ ಮುಂದೆ ನಿಂತಿರುವ ತೋಳಗಳ ಗುಂಪು, ಇವರ ಪರಿವೆಯೆ (ಭೋಗಾಸಕ್ತವಾದ) ಆ ಚಿಗರಿಗೆ ಎಷ್ಟೂ ಇರುವ ದಿಲ್ಲ. ಭೋಗದಲ್ಲಿ ಮೈಮರೆತು ನಿಂತ ಚಿಗರೆಯು ಬೇಟೆಗಾರನ ಬಾಣಕ್ಕೆ ಹಾಗೂ ತೋಳಗಳಿಗೆ ಬಲಿಯಾಗಿ ಮರಣ ಹೊಂದುತ್ತದೆ.

– ಇದೇ ರೀತಿಯಾಗಿ ಜೀವಿಯು ತನ್ನ ಹಿಂದೆಯೆ ಬರುತ್ತಿರುವ ಮೃತ್ಯು ವನ್ನು, ಹಗಲು ರಾತ್ರಿಗಳ ರೂಪದಲ್ಲಿ ಕತ್ತರಿಸುತ್ತಿರುವ ಆಯುಷ್ಯವನ್ನು ಲಕ್ಷ್ಯಕ್ಕೆ ತಾರದೇ, ನಾಲಿಗೆಯ ಚಾಪಲ್ಯ ಹಾಗೂ ಕಾಮಕೇಳಿಗಳಿಗೆ ಮೆಚ್ಚಿ ಮೈಮರೆ ತಿರಲು ಮೃತ್ಯುವು ಒಮ್ಮಿಗೆಲೆ ಆತನ ಮೇಲೆ ಎರಗುವದು.–

**||೯೯|| ಸ ತ್ವಂ ವಿಚಕ್ಷ್ಯ ಮೃಗಚೇಷ್ಟಿತ ಮಾತ್ಮನೋಽಂತ-**
**ಶ್ಚಿತ್ತಂ ನಿಯಚ್ಛ ಹೃದಿ ಕರ್ಣಧುನಿಂ ಚ ಚಿತ್ತೆಂ |**
**ಜಹ್ಯಂಗನಾಭ್ರಮಮಸತ್ತಮಯೂಥಗಾಥಂ**
**ಪ್ರೀಣೀಹಿ ಹಂಸಶರಣಂ ವಿರಮ ಕ್ರಮೇಣ ||** ೪-೨೯-೫೭

–ಆದುದರಿಂದ, ವಿಷಯಾಶಕ್ತಿಯಿಂದೊದಗುವ ಕೆಡಕನ್ನು ಹೇಳಿ, ಮೋಕ್ಷ ವನ್ನು ಬಯಸುವವನು ಯಾವುದನ್ನು ಯತ್ನಪೂರ್ವಕವಾಗಿ ಸಾಧಿಸಬೇಕೆಂಬು ದನ್ನು ಕೊನೆಯದಾಗಿ ಇಲ್ಲಿ ಹೇಳಿರುವರು.–

ಅರ್ಥ :– ಕಮಾಸಕ್ತನಾದ ನಿನ್ನ ನಡತೆಯೆಲ್ಲವು, (ಹಿಂದೆ ಬಣ್ಣಿಸಿದ) ಚಿಗರೆಯ ನಡತೆಯಂತೆಯೆ ಇದೆ –ಎಂಬುದನ್ನು ತಿಳಿದುಕೊ. ಮೃತ್ಯು ನಿನ್ನ ನೆರೆ ಯಲ್ಲಿಯೆ ಇರುವದರಿಂದ (ಜೀವಿತವು ಕ್ಷಣಿಕವಾದುದರಿಂದ) ನಿನ್ನ ಮನಸ್ಸನ್ನು ಹೃದಯವಾಸಿಯಾದ ಶ್ರೀಹರಿಚರಣದಲ್ಲಿ ಸ್ಥಿರವಾಗಿ ನಿಲ್ಲಿಸು. ಕಿವಿಗಳಿಂದ ಶ್ರೀಹರಿ ಕಥೆಗಳನ್ನು ಕೇಳುವದರಲ್ಲಿ ನಿರತವಾಗಿರುವಂತೆ, ನಿನ್ನ ಚಿತ್ತವನ್ನು ಅಣಿಗೊಳಿಸು ದುರ್ಜನರಿಗೆ ತುಂಬಾ ಮೆಚ್ಚಿಗೆಯ ವಿಷಯವಾಗಿರುವ ಸ್ತ್ರೀಸುಖದ ಲಾಲಸೆ ಯನ್ನು ಪೂರ್ಣವಾಗಿ ಬಿಟ್ಟುಕೊಡು. ಪರಮಹಂಸರಿಗೆ (ಮಹಾಭಾಗವತರಿಗೆ)

ಆಶ್ರಯಸ್ಥಾನವಾಗಿದ್ದ ಭಗವಂತನ (ಆತನಿಗೆ ಪ್ರೀತಿಕರವಾದ ಭಾಗವತ ಧರ್ಮ ಗಳನ್ನು ಆಚರಿಸಿ) ಅನುಗ್ರಹವನ್ನು ಪಡೆ. (ಈ ರೀತಿಯಾಗಿ ವರ್ತಿಸುತ್ತ) ಮೆಟ್ಟಿಲು ಮೆಟ್ಟಿಲುಗಳಾಗಿ (ವಿಷಯಗಳ ಬಗ್ಗೆ) ವೈರಾಗ್ಯವನ್ನು ಸಂಪಾದಿಸು, (ಅನಂತರ ಮೋಕ್ಷವನ್ನು ಪಡೆಯುವಿ)-

**||೧೦೦|| ಕಥಾ ಇಮಾಸ್ತೇ ಕಥಿತಾ ಮಹೀಯಸಾಂ**
**ವಿತಾಯ ಲೋಕೇಷು ಯಶಃ ಪರೇಯುಷಾಂ |**
**ವಿಜ್ಞಾನವೈರಾಗ್ಯವಿವಕ್ಷಯಾ ವಿಭೋ**
**ವಚೋ ವಿಭೂತೀರ್ನತು ಪಾರಮಾರ್ಥ್ಯಂ || ೧೨-೩-೧೪**

– ಶ್ರೀಮದ್ ಭಾಗವತದ ಪ್ರತಿಯೊಂದು ಪದದಲ್ಲಿ ಶ್ರೀಹರಿಯ ಸ್ತುತಿಯೆ ಇರುವದೆಂದು ಮೊದಲನೆಯ ಪ್ರಕರಣದಲ್ಲಿ ಸಾರಿರುವಿರಿ. ಆದರೆ ಇಲ್ಲಿ ನೋಡಿ ದರೆ, ಉದಾಹರಣೆಗಳೆಂದು ಉಳಿದ ಅನೇಕ ರಾಜರು ಮುಂತಾದವರ ಚರಿತ್ರೆ ಯನ್ನು ಹೇಳುವಿರಿ. ಮೊದಲು (ಶ್ರೀಹರಿಯೇ ಪ್ರತಿಪಾದ್ಯನೆಂಬ) ಸಾರಿದ ಖ್ಯಾತಿಗೂ ಈಗ್ಗೆ ನೀವು ಅನೇಕರ ಚರಿತ್ರೆ ಹೇಳುವದಕ್ಕೂ ವಿರೋಧವಾಗುವದಿಲ್ಲವೆ ? – ಎಂಬುದು ಪ್ರಶ್ನೆ. ಅದಕ್ಕೆ ಈ ಶ್ಲೋಕದಲ್ಲಿ ಉತ್ತರ ಹೇಳಿದೆ-

**ಅರ್ಥ:-** ರಾಜನೆ! ಈ ಲೋಕದಲ್ಲಿ ತಮ್ಮ ಕೀರ್ತಿಯನ್ನು ಪಸರಿಸಿ, ಪರ ಲೋಕಕ್ಕೆ ತೆರಳಿದ ಮಹಾಮಹಿಮಾ ಶಾಲಿಗಳ ಚರಿತ್ರೆಗಳನ್ನು ಇಲ್ಲಿ ಹೇಳಿದೆ. ಜ್ಞಾನ ಭಕ್ತಿ ವೈರಾಗ್ಯಗಳು ಈ ಚರಿತ್ರೆಗಳನ್ನು ಕೇಳುವವರಲ್ಲಿಯೂ ಅಧಿಕವಾಗಿ ಬೆಳೆದುಬರಲಿ- ಎಂಬುದೇ ಈ ಚರಿತ್ರೆಗಳನ್ನು ಅಲ್ಲಲ್ಲಿ ಹೇಳುವ ಉದ್ದೇಶವಾಗಿದೆ. ನಮ್ಮ ವಿಷಯ ನಿರೂಪಣೆಗೆ ಈ ಉದ್ದೇಶವೇ ತಾತ್ಪರ್ಯವಾಗಿದೆ. ಇವರೆಲ್ಲರ ಚರಿತ್ರೆಗಳನ್ನು ಹೇಳುವದೇ ನಮ್ಮ ನಿರೂಪಣೆಯ ಮುಖ್ಯ ಉದ್ದೇಶವಾಗಿಲ್ಲ. (ಭಾಗವತದಲ್ಲಿ ಮುಖ್ಯ ಪ್ರತಿಪಾದ್ಯ ವಿಷಯವು ಶ್ರೀಹರಿಯೇ ಆಗಿರುವನು).

ತಾತ್ಪರ್ಯವೆಂದರೆ,- ಭಗವದ್ಭಕ್ತರು ಬಹು ವಿಧವಾಗಿರುವರು.- ಕೆಲವ ರಲ್ಲಿ ವೈರಾಗ್ಯವು ದೃಢವಾಗಿ ನೆಲೆಸಿರುವದಿಲ್ಲ. ಕೆಲವರಲ್ಲಿ ವೈರಾಗ್ಯವು ದೃಢ ವಾಗಿ ನೆಲೆಸಿದ್ದರೂ, ಜ್ಞಾನವು ಅಷ್ಟೊಂದು ಸ್ಪಷ್ಟವಾಗಿರುವದಿಲ್ಲ. ಕೆಲವರಲ್ಲಿ ಜ್ಞಾನವು ಸ್ಪಷ್ಟವಾಗಿದ್ದರೂ, ಭಕ್ತಿಯು ಅಷ್ಟೊಂದು ಸ್ಪಷ್ಟವಾಗಿರುವದಿಲ್ಲ. ಈ ಮೂರು ಬಗೆಯ ಭಕ್ತರಲ್ಲಿ ಅವರವರಲ್ಲಿ ಅದೃಢ ಹಾಗೂ ಅಪಕ್ವವಾಗಿರುವ ಜ್ಞಾನ ಭಕ್ತಿ ವೈರಾಗ್ಯಗಳು ಸುದೃಢ ಹಾಗೂ ಪಕ್ವವಾಗಬೇಕೆಂಬ ಉದ್ದೇಶ

ದಿಂದ, ರಾಜರ ಚರಿತ್ರೆಗಳ ಮುಖಾಂತರ (ಅವುಗಳನ್ನೇ ಪ್ರಸಂಗಗಳನ್ನಾಗಿ ಮಾಡಿಕೊಂಡು) ಆ ಸಾಧನಗಳನ್ನು ನಿರೂಪಿಸಲಾಗಿದೆ. ಜ್ಞಾನ-ಭಕ್ತಿ ವೈರಾಗ್ಯ ಗಳೆ ನಮ್ಮ ನಿರೂಪಣೆಯ ಮುಖ್ಯ ವಿಷಯಗಳು. ರಾಜರ ಚರಿತ್ರೆಗಳು ಮುಖ್ಯ ವಿಷಯವಲ್ಲ. ಅಂಥ ಚರಿತ್ರೆಗಳನ್ನು ಅಳತೆಮೀರಿ ಹೇಳಿಲ್ಲವೆಂಬುದನ್ನು ಈ ಮೊದಲು ತೋರಿಸಿಕೊಟ್ಟಿದೆ. ಅಲ್ಲಲ್ಲಿ ಅನೇಕವಾಗಿ ಹೇಳಿದಂತೆ ಕಂಡು ಬಂದರೂ, ಭಗವದ್ಭಕ್ತಿ, ಮುಂತಾದನ್ನು ಅಭಿವೃದ್ಧಿಗೊಳಿಸುವದಕ್ಕಾಗಿಯೇ ಹಾಗೆ ಮಾಡಿರು ವದು. ಶ್ರೀಹರಿಯ ಬಗ್ಗೆ ಮತ್ತೆ ಮತ್ತೆ ಹೇಳುವದರಲ್ಲಿ ಯಾವ ವಿರೋಧವೂ ಇಲ್ಲ. ಶ್ರೀಶುಕರು ಪರೀಕ್ಷಿತನಿಗೆ ಹೇಳಿದುದು.

||೧೦|| ಯಾ ನಿರ್ವೃತಿಸ್ತನುಭೃತಾಂ ತವ ಪಾದಪದ್ಮ-
ಧ್ಯಾನಾತ್ ಭವಜ್ಜನಕಥಾಶ್ರವಣೇನ ವಾ ಸ್ಯಾತ್ |
ಸಾ ಬ್ರಹ್ಮಣಿ ಸ್ವಮಹಿಮನ್ಯಪಿ ನಾಥ ಮಾಭೂತ್
ಕಿಮ್ವಂತಕಾಸಿ ಲುಲಿತಾತ್ ಪತತಾಂ ವಿಮಾನಾತ್ || ೪-೧೦-೧೦

ಇದಲ್ಲದೆ, ಕೆಲವು ಭಗವದ್ಭಕ್ತರಿಗೆ, ಆದಿರಾಜನ ಚರಿತ್ರೆಯನ್ನು ಕೇಳುವ ದರಿಂದಲೆ, ಮುಕ್ತಿಗಿಂತಲೂ ಹೆಚ್ಚಾದ ಆನಂದವು ಉಂಟಾಗುವದು. ಅತನ ಮಹಿಮೆಯನ್ನು ಕೇಳುವದರಿಂದ ಸಂತುಷ್ಟನಾದ ಭಗವಂತನು, ಕೇಳುವವರನ್ನು ಅನುಗ್ರಹಿಸುವನು. ಅಂತೆಯೆ ಭಾಗವತದಲ್ಲಿ, ಕೇಳುವವರಿಗೆ ಹೆಚ್ಚುಗೆಯ ಆನಂ ದವುಂಟಾಗಲೆಂದೇ, ಪ್ರಾಸಂಗಿಕವಾಗಿ ಇಂಥ ಭಗವದ್ಭಕ್ತರ ಚರಿತ್ರೆಗಳು ಅಲ್ಲಲ್ಲಿ ಹೇಳಲ್ಪಟ್ಟಿವೆ.

**ಅರ್ಥ:**-ಪ್ರಭುವೆ! ಕೆಲವು ದೇಹಧಾರಿಗಳಿಗೆ (ಜನರಿಗೆ) ನಿನ್ನವರಾದ ಪರಮ ಭಾಗವತರ ಚರಿತ್ರೆಗಳನ್ನು ಕೇಳುವದರಿಂದ, ಅದರಲ್ಲಿರುವ ವಿಶೇಷ ಸುಖದಿಂದ ಯಾವ ಆನಂದವು ಉಂಟಾಗುವದೋ ಅಂಥ ಆನಂದವು ಬೇರೆ ಕೆಲಜನರಿಗೆ ನಿನ್ನ (ಶ್ರೀಹರಿಯ) ಕಥಾಶ್ರವಣದಿಂದಲೂ ಆಗುವದಿಲ್ಲ. ಮತ್ತೆ ಕೆಲ ಜನರಿಗೆ ನಿನ್ನ ಚರಿತ್ರೆಯನ್ನು ಕೇಳುವದರಿಂದ ಆಗುವ ಆನಂದವು ಬೇರೆ ಕೆಲವರಿಗೆ ನಿನ್ನ ಪಾದಸ್ಮರಣೆಯಿಂದಲೂ ಆಗುವದಿಲ್ಲ. ಇನ್ನು ಬೇರೆಯವರಿಗೆ ನಿನ್ನ ಪಾದ ಚಿಂತನೆಯಿಂದ ಆಗುವಂಥ ಆನಂದವು, ಬೇರೆ ಕೆಲವರಿಗೆ ಮುಕ್ತರಾಗಿ ಜ್ಞಾನಾನಂದಾದಿ ಸ್ವರೂಪದಲ್ಲಿ ಇದ್ದರೂ ಆಗುವದಿಲ್ಲ. (ಪರಮಾತ್ಮನ ಪಾದ ಚಿಂತನೆಯಿಂದ, ಇಲ್ಲವೆ ಪರಮಾತ್ಮನಿಗೆ ಆತ್ಮೀಯರಾದ ಪರಮ ಭಾಗವ ತರ ಚರಿತ್ರೆಯ ಶ್ರವಣದಿಂದ, (ಕೆಲವು) ಜನರಿಗೆ ಉಂಟಾಗುವ ಆನಂದವು

ಮುಕ್ತಿಯಲ್ಲಿ ಸ್ವರೂಪಭೂತವಾದ ಆನಂದಾದಿ ಸ್ಥಿತಿಯಲ್ಲಿಯೂ ಆಗುವದಿಲ್ಲ) ಹೀಗಿರುವಾಗ್ಗೆ, (ಯಜ್ಞಯಾಗಾದಿ ಸಕಾಮ ಕರ್ಮಗಳಿಂದ ಲಭಿಸಿದ ಪುಣ್ಯವು ಕ್ಷೀಣವಾಗಲು) ಮೃತ್ಯು ದೇವತೆಯ ಖಡ್ಗದಿಂದ ಸ್ವರ್ಗದಿಂದ ಸ್ಥಾನಭ್ರಷ್ಟರಾಗಿ ಮತ್ತೆ ಭೂಮಿಗೆ ಮರಳಿ ಬರುವ ಜೀವಿಗಳಿಗೆ ಇಂಥ ಸುಖವು ಹೇಗೆ ದೊರೆಯುವದು?–

ಮುಕ್ತಸ್ಥಾನದಲ್ಲಿ ಇರುವ ಬ್ರಹ್ಮದೇವರಿಗೆ ಶ್ರೀಹರಿಯ ಸ್ಮರಣೆಯಿಂದ ಯಾವ ಬಗೆಯ ಆನಂದ ಉಂಟಾಗುವದೋ. ಅಂಥ ಆದಂದವು ಮುಕ್ತಜೀವಿಗೆ ಶ್ರೀಹರಿಸಾನ್ನಿಧ್ಯದಲ್ಲಿ ವೈಕುಂಠವಾಸದಲ್ಲಿಯೂ ಆಗುವದಿಲ್ಲ.–ಆನಂದೋನ್ಮಾಹದಲ್ಲಿ ಮುಕ್ತಿಯಲ್ಲಿಯೂ ಇರುವ ಆನಂದತಾರತಮ್ಯವು ಇಲ್ಲಿ ಪರ್ಯಾಯದಿಂದ ಹೇಳಲ್ಪಟ್ಟಿದೆ.

ಹೀಗೆ ಹೇಳಿರುವರು:–॥'ಯದ್ಯೈಷಾ........ಸ್ವೇಮಹೀಯತೆ'.॥ ತನ್ನ ಪ್ರಬಲವಾದ ಬಂಧಕ ಶಕ್ತಿಯಿಂದ ಪ್ರಕೃತಿಯು ಶರೀರಾದಿಗಳಿಂದ ಜೀವನನ್ನು ಬಂಧಿಸುವ ತನ್ನ ಕಾರ್ಯವನ್ನು ನಿಲ್ಲಿಸಿತೆಂದರೆ, ಜೀವನು ಶ್ರೀಹರಿ ಕೃಪೆಯಿಂದ ಬಂಧಮುಕ್ತನಾಗಿ ತನ್ನ ಸ್ವರೂಪಭೂತವಾದ ಆನಂದವನ್ನು ಪಡೆಯುವನು, ಸ್ವರೂಪಭೂತವಾದ ತನ್ನ ಮಹಿಮೆಯನ್ನು ತಿಳಿಯುವನು, ಕೆಳಗಿನವರಿಂದ ಗೌರವಿಸಲ್ಪಡುವನು.

'ಇತಿಕೌಷಾರವಾಖ್ಯಾತಂ ...... ಶ್ರೀವತ್ಸಾಂಕಸ್ಯಕಿಂಪುನಃ'–ಮೈತ್ರೇಯರಿಂದ ನಿರೂಪಿತವಾದ ಭಗವತ್ಕಥೆಯನ್ನು ಕೇಳಿ ವಿದುರನು ಆನಂದತುಂದಿಲನಾದನು. ವಿದುರನು ಮಹಾನ್ ಭಗವದ್ಭಕ್ತನು. ಭಗವಂತನಲ್ಲದೆ, ಉಳಿದ ಉದ್ದಂಡ ಕೀರ್ತಿಶಾಲಿಗಳೂ, ಪುಣ್ಯಶ್ಲೋಕರೂ ಆಗಿರುವ ಭಗವದ್ಭಕ್ತರ ಚರಿತ್ರೆಯನ್ನು ಕೇಳುವದರಿಂದಲೆ, ಸಂತಸವು ತುಂಬಿಬರುತ್ತಿರಲು, ಶ್ರೀವತ್ಸಲಾಂಛನಧಾರಿಯಾದ ಪ್ರತ್ಯಕ್ಷ ಭಗವಂತನ ಲೀಲಾಕೃತಿಗಳ ಕಥೆಯನ್ನು ಕೇಳಿದಾಗ್ಗೆ, ಅಪಾರವಾದ ಆನಂದವು ಉಕ್ಕಿಬರುವದೆಂದು ಬೇರೆ ಹೇಳಬೇಕಿಲ್ಲ.

ಜ್ಞಾನಾದಿ ಕಲ್ಯಾಣ ಗುಣಗಳನ್ನು ದೃಢಗೊಳಿಸುವದರಿಂದ, ಪರಮ ಪುರುಷಾರ್ಥಕ್ಕೆ (ಮೋಕ್ಷಪ್ರಾಪ್ತಿಗೆ) ವೈರಾಗ್ಯವು ಸಾಧನವಾಗಿರುವದೆಂದು, ಭಾಗವತಶಿಖಾಮಣಿಗಳೆಲ್ಲರೂ ವೈರಾಗ್ಯವನ್ನು ಅಂಗೀಕರಿಸಿರುವರು. ಆದುದರಿಂದ ವೈರಾಗ್ಯದ ಬಗ್ಗೆ ಆಸ್ಥೆ ದಕ್ಷತೆಗಳನ್ನು ಎಲ್ಲರೂ ವಹಿಸಬೇಕಾದುದು. ಈ ಹೇಳಿಕೆ

ಯಿಂದ ಸಕಲ ಭಾಗಪತ ಧರ್ಮಗಳಿಗೆ ವೈರಾಗ್ಯವೇ ಭದ್ರವಾದನೆಲೆ, ಅಂತೆಯೆ ಆದಕ್ಕೆ ಆದ್ಯತೆ-ತ್ರಿಗುಣ ಜನ್ಯವಾದ ಇಂದ್ರಿಯಸುಖದಲ್ಲಿ ಆಸಕ್ತಿಯನ್ನು ಬಿಟ್ಟು ಕೊಡುವದೇ, ವೈರಾಗ್ಯನೆಂಬ ಹೆಸರಿನ ಭಾಗವತಧರ್ಮವಾಗಿದೆ, ಯೆಂಬುದು ಈ ಪ್ರಕರಣದಲ್ಲಿ ಸೂಚಿತವಾಗಿದೆ.

ಇತಿ ಶ್ರೀಭಾಗವತಸಾರೋದ್ಧಾರದಲ್ಲಿ ವೈರಾಗ್ಯ ಪ್ರಕರಣವು - ಇತಿ ಶ್ರೀಮದವಧೂತ ಶಿರೋಮಣಿ ಶ್ರೀ ಜಯತೀರ್ಥ ( ಶ್ರೀ ವಿಷ್ಣುತೀರ್ಥ ) ರಿಂದ ರಚಿತವಾದ ಸಾರೋದ್ಧಾರದಲ್ಲಿ - ವೈರಾಗ್ಯಪ್ರಕರಣದ ಟೀಕೆ ಸಮಾಪ್ತವಾಯಿತು.



## (೬) ಮಹತ್ಸಮಾಗಮ ಪ್ರಕರಣ:—

ವೈರಾಗ್ಯವನ್ನು ಆತ್ಮಸಾತ್ ಮಾಡಿಕೊಂಡ ಮಾನವನು ಕೂಡ, ಮಹಾತ್ಮರ ನಿಕಟ ಸಂಪರ್ಕ-ಸಹವಾಸಗಳಿಲ್ಲದೆ ಯಾವ ಸಿದ್ಧಿಯನ್ನೂ ಪಡೆಯಲಾರನು ಆದುದರಿಂದ, ಮಹತ್ಸಮಾಗಮದ ಮಹತಿಯನ್ನು, ಉದ್ದೇಶವನ್ನು ವಿವೇಚಿಸುವ ಮೊದಲು, ಅದರ ಬಗ್ಗೆ ಪ್ರೀತ್ಯಾದರಗಳನ್ನು ಹುಟ್ಟಿಸಲು, ಮಹತ್ಸಮಾಗಮವನ್ನು ಬಿಟ್ಟುಕೊಟ್ಟರೆ, ಏನು ಹಾನಿಯಾಗುವದೆಂಬುದನ್ನು ಹೇಳುವರು-ನಿಮಿ ರಾಜನಿಗೆ ಚಮಸನು ಹೇಳಿದ ಮಾತಿದು:-

**||೧೦೨|| ಧನಂ ಹಿ ಧರ್ಮೈಕಫಲಂ ಯತೋಽಸ್ಯ**
**ಜ್ಞಾನಂ ಸವಿಜ್ಞಾನಮನುಪ್ರಶಾಂತಿಃ |**
**ಗೃಹೇಷು ಯುಂಜಂತಿ ಕಲೇವರಸ್ಯ**
**ಮೃತ್ಯುಂ ನ ಪಶ್ಯಂತಿ ದುರಂತವೀರ್ಯಂ** || ೧೧ ೫-೧೨

**ಅರ್ಥ:**- (ಪರಮಾತ್ಮನ ಅನುಗ್ರಹದಿಂದ ದೊರೆತ) ಸಂಪತ್ತಿನಿಂದ ನಾವು ಮುಖ್ಯವಾಗಿ ಪಡೆಯಬೇಕಾಗಿರುವದು ಧರ್ಮವೆ, ಧರ್ಮದಿಂದ ಮುಖ್ಯವಾಗಿ ಪಡೆಯಬೇಕಾದುದು ಜ್ಞಾನ. ಜ್ಞಾನವು ವಿಜ್ಞಾನಕ್ಕೆ-ಅಪರೋಕ್ಷ ಜ್ಞಾನಕ್ಕೆ (ಮುಕ್ತಿಗೆ) ದಾರಿಮಾಡಿಕೊಡುವದು. ಮುಕ್ತಿಗೆ ಅಪರೋಕ್ಷಜ್ಞಾನವೆ ಸೋಪಾನ, ನಿಶ್ಚಿತಸಾಧನ. ಅಂತೆಯೆ ಜ್ಞಾನಕ್ಕೆ-'ಸವಿಜ್ಞಾನ'-(ವಿಜ್ಞಾನದಿಂದ ಸಂಗತವಾದ ಜ್ಞಾನ) ವೆಂಬ ವಿಶೇಷಣಪದವನ್ನು ಜೋಡಿಸಿರುವರು. ಅಪರೋಕ್ಷಜ್ಞಾನವನ್ನು ಹಿಂಬಾಲಿಸಿಯೆ-'ಪ್ರಶಾಂತಿ',-ನಿರತಿಶಯ ಶಾಂತಿರೂಪವಾದ ಮೋಕ್ಷವು ನಿಶ್ಚಿತವಾಗಿ ಪ್ರಾಪ್ತವಾಗುವದು. ಆದುದರಿಂದ ಧನ-ಧರ್ಮ-ಜ್ಞಾನ-ವಿಜ್ಞಾನಗಳೆಂಬ ಕ್ರಮವಾದ ಮೆಟ್ಟಿಲುಗಳಿಂದ ಮೋಕ್ಷಸಂಪಾದನೆಯೆ ಗುರಿಯಾಗಿರಬೇಕು.

ಹೀಗಿದ್ದರೂ, (ಮೋಕ್ಷಪ್ರಾಪ್ತಿಗಾಗಿ ತಾವು ಗಳಿಸಿದ ಧನವನ್ನು ವಿನಿಯೋಗಿಸಿಸದೆ) ಕೇವಲ ದೇಹಪೋಷಣೆಗಾಗಿ ಅನಿತ್ಯ, ಅಸಾಧು, ಕುಟುಂಬದ ಸುಖಭೋಗಗಳಿಗಾಗಿ ತಮ್ಮ ಧನವನ್ನು ಉಪಯೋಗಿಸುವವರು, ತಮ ಹಿಂದೆಯೆ ನಿಂತಿರುವ ಪ್ರಚಂಡಶಕ್ತಿಯ ಮೃತ್ಯುವನ್ನು ಗಮನಿಸುವದೇ ಇಲ್ಲ!

**||೧೦೩|| ಲೋಕೋ ವಿಕರ್ಮನಿರತಃ ಕುಶಲೇ ಪ್ರಮತ್ತಃ**
**ಕರ್ಮಣ್ಯಯಂ ತ್ವದುದಿತೇ ಭವದರ್ಚನೇ ಸ್ವೇ |**
**ಯಸ್ತಾವದಸ್ಯ ಬಲವಾನಿಹ ಜೀವಿತಾಶಾಂ**
**ಸದ್ಯಶ್ಛಿನತ್ತ್ಯನಿಮಿಷಾಯ ನಮೋಸ್ತು ತಸ್ಮೈ** || ೩-೧೦-೧೭

ಐಹಿಕ ಸುಖ ಭೋಗಗಳಿಗಾಗಿ ತಮ್ಮ ಸಂಪತ್ತಿನ ದುರುಪಯೋಗ ಮಾಡು ವವರ ದುರ್ಗತಿಯು ಹೀಗೇ ಆಗುವದು:-

**ಅರ್ಥ** :- ಕರ್ಮಭೂಮಿಯಾದ ಈ ಭರತಭೂಮಿಯಲ್ಲಿ ಬ್ರಾಹ್ಮಣಾದಿ ಕುಲಗಳಲ್ಲಿ ಮಾನವನಾಗಿ ಹುಟ್ಟಿ, ಧರ್ಮ-ಜ್ಞಾನ - ಮೋಕ್ಷಗಳೆಂಬ ಕ್ರಮವನ್ನು ಅನುಸರಿಸಿ, ನೀನು (ಪರಮಾತ್ಮನು) ಹೇಳಿಕೊಟ್ಟ ನಿನ್ನ ಪೂಜಾತ್ಮಕವಾದ, ತನಗೆ ಪುರುಷಾರ್ಥ-ಪ್ರಾಪ್ತಿಗೆ ಸಾಧನವಾಗಿರುವ ಕಾರ್ಯಗಳನ್ನು ಸರಿಯಾಗಿ ತಿಳಿದುಕೊಳ್ಳದೆ, ಅವುಗಳಿಗೆ ವಿರುದ್ಧವಾಗಿರುವ ಕೇವಲ ಕುಟುಂಬದ ಹಿತಸಾಧನೆಯ ಕಾರ್ಯಗಳಲ್ಲಿಯೆ ಸಂಪೂರ್ಣವಾಗಿ ತೊಡಗಿಬಿಡುವನು.. (ಹಿಂದೆ ಹೇಳಿದ ಈ ಮಾತನ್ನೇ ಮತ್ತೇಕೆ ಹೇಳಿದೆ?-ಎಂದರೆ)-ಹಿಗೆ ವರ್ತಿಸುವ ತಿಳಿಗೇಡಿಯಾದ ಮಾನವನು ಪರಲೋಕದಲ್ಲಿ ನರಕಯಾತನೆಗೆ ಗುರಿಯಾಗುವನು. ಅದಂತಿರಲಿ, ನಿಮೇಷ ಮುಂತಾದ ಕಾಲನ್ಯತ್ಯಾಸಗಳಲ್ಲಿ ಬಾಧೆಯಿಲ್ಲದ ಕಾಲ ರೂಪ ಪರಮಾತ್ಮನು ( ಸುಖ-ಭೋಗಗಳಿಂದ ದೀರ್ಘಕಾಲ ) ಬದುಕಬೇಕೆಂಬ ಆತನ ಆಶೆಯನ್ನೇ ತುಂಡರಿಸಿಬಿಡುವನು. ಇಂಥ (ಕಾಲಾತೀತನಾದ) ಪರಮಾತ್ಮನಿಗೆ ನಮಸ್ಕಾರಗಳು.

- ಹೀಗೆ ಹೇಳಿರುವರು- ' ಅನೇಕ ಯೋನಿಗಳನ್ನು ದಾಟಿ ಬ್ರಾಹ್ಮಣ ಕುಲದಲ್ಲಿ ಬಂದಿರುವ ಮಾನವ ಜನ್ಮ. ಇಂಥ ಮಾನವ ಜನ್ಮದ ಮಹತ್ವವನ್ನರಿತುಕೊಳ್ಳದೆ ತಮಗೆ ನಿಜವಾಗಿಯೂ ಶ್ರೇಯಸ್ಕರವಾದುದನ್ನೆಲ್ಲ ' ಹಾಳುಮಾಡಿಕೊಳ್ಳುವ ಹುಚ್ಚಪ್ಪಗಳಿಗೆ ' -ಅಮಂಗಳಕರವಾದ ದುರ್ಗತಿಯೆ ಆಗುವದು. ಸ್ವರ್ಗ-ಹಾಗೂ ಮೋಕ್ಷ ಇವೆರಡೂ ಲೋಕಗಳಿಗೆ ಬಾಗಿಲಿ ನಿಂತಿರುವ ಈ ಭೂಲೋಕಕ್ಕೆ ಬಂದಿರುವ (ಸೂಜ್ಞನಾದ) ಯಾವ ಮಾನವನು ಅನರ್ಥಗಳಿಗೆ ಆಗರವಾಗಿರುವ ಧನ ಕನಕಾದಿಗಳಲ್ಲಿ ಅತ್ಯಾಸಕ್ತಿಯನ್ನು ತಾಳುವನು? -ದೇವ, ಋಷಿ, ಪಿತೃ, ಹಾಗೂ ತಾನು-ಇವರೆಲ್ಲರ, ಹಾಗೂ ಇನ್ನುಳಿದ ಅಧಿಕಾರಿಗಳಾಗಿರುವ ಪಾಲುಗಾರರ ಸೇವೆಗಾಗಿ ವಿನಿಯೋಗಿಸಿ, ಹಂಚಿಹೋಗದ ವಿತ್ತವು -' ಯಕ್ಷವಿತ್ತ' ವಿದ್ದಂತೆ. ಹೀಗೆ ನಡೆದುಕೊಳ್ಳದ ಸ್ವಾರ್ಥಿಯು ಅಧಃಪತನಕ್ಕೆ ಗುರಿಯಾಗುವನು. ಈ ಅನರ್ಥದ ಜ್ಞಾನವಿದ್ದ ಬುದ್ಧಿವಂತನೂ ಕೂಡ ನಿರರ್ಥಕವಾದ ಧನಲೋಭದಿಂ ಅನೇಕ ಫಲ ಕ್ಲೇಶ ಪಡುವುದೇಕೆ ? - (ಏಕೆಂದರೆ ಯಾವದೋ ಒಬ್ಬ ಮಹಾಪುರುಷನ ಪರಮಾತ್ಮನ ಮಾಯೆಯ ಪ್ರಭಾವದಿಂದ ಈ ಜಗತ್ತು ಅತೀವ ಮೂಢವಾಗಿ ಬಿಟ್ಟಿರುವದು.

- ಸಜ್ಜನರ ಸಹವಾಸವಿಲ್ಲದಿದ್ದರೆ, ಮಾನವನು ಪುರುಷಾರ್ಥ (ಮೋಕ್ಷ)ಕ್ಕೆ ಸಾಧನವಾಗಿರುವ ಸಂಗತಿಗಳನ್ನೆಲ್ಲ ಬಿಟ್ಟುಕೊಡುವನು ಅದಕ್ಕೆ ಪ್ರತಿಕೂಲ

ವಾಗಿರುವ ಅಕಾರ್ಯಗಳಲ್ಲಿ ನಿರತನಾಗುವನು. ಪಾತ್ರತೆಗೆ ಅನುಗುಣವಾಗಿ, ಸಕಲ ಪ್ರಾಣಿಗಳಿಗೂ ಅನ್ನಾದಿಗಳನ್ನು ಹಂಚಬೇಕೆಂಬ – 'ಅತಿಥ್ಯ' ವೆಂದು ಕರೆಯಲ್ಪಡುವ ಪರೋಪಕಾರದ ಕಾರ್ಯವು ಮಾನವರಿಗೆ ವಿಧಿಸಲ್ಪಟ್ಟಿದೆ. ಧನದಿಂದ ಇದು ಸಾಧ್ಯವಿರದಿದ್ದರೆ, – ಮನಸ್ಸಿದಿಂದಾಗಲಿ, ಮಾತಿನಿಂದಾಗಲಿ, ದೇಹವನ್ನು ದುಡಿಸಿಯಾಗಲಿ, ಪರೋಪಕಾರ ಮಾಡಬೇಕೆಂಬುದು ಇನ್ನೊಂದು ರೀತಿಯ ಭಾಗವತ ಧರ್ಮವಾಗಿದೆ.– (ಈಶ ಕೃಪೆಯಿಂದ ತನಗೆ ಪ್ರಾಪ್ತವಾಗಿರುವ) ಸಂಪತ್ತನ್ನು ಇಲ್ಲಿ ಹೇಳಿದಂತೆ ಸೂಕ್ತ ರೀತಿಯಲ್ಲಿ ಹಂಚಿ ಕೊಡದಿದ್ದರೆ, ಮುಂದೆ ಒದಗುವ ನರಕಯಾತನೆಗಳನ್ನು 'ನಾವು ಪ್ರಶಂಸಾಪ್ರಕರಣ' ದಲ್ಲಿ – ಹೇಳುವರು. – 'ಯಕ್ಷವಿತ್ತ' –ವೆಂದರೆ ತಾನೂ ಉಪಯೋಗಿಸದೆ, ತನಗೆ ಉಪಯುಕ್ತವಿಲ್ಲದಿದ್ದರೂ ಉಪಯೋಗದ ಅಗತ್ಯವಿರುವ ಅನ್ಯರಿಗೂ ವಿನಿಯೋಗವಾಗದ ವಿತ್ತವು, ತಾನು ತಿನ್ನದ ಹುಲ್ಲನ್ನು ಹಸುಗಳಿಗೂ ತಿನ್ನಕೊಡದ ನಾಯಿಯಂತೆ!

||೧೦೪|| **ಜನಸ್ಯ ಕೃಷ್ಣಾದ್ವಿಮುಖಸ್ಯ ದೈವಾ-**
**ದಧರ್ಮಶೀಲಸ್ಯ ಸುದುಃಖಿತಸ್ಯ |**
**ಅನುಗೃಹಾಯೇಹ ಚರಂತಿ ನೂನಂ**
**ಭೂತಾನಿ ಭವ್ಯಾನಿ ಜನಾರ್ದನಸ್ಯ ||** ೩-೫-೩

– ಸಂಪತ್ತಿನ ಹಂಚಿಕೆ –ವಿನಿಯೋಗಗಳನ್ನು ಹೇಗೆ ಸೂಕ್ತವಾದ ರೀತಿಯಲ್ಲಿ ಮಾಡಬೇಕು ಎಂಬ ಉಪದೇಶ ಮಾಡುವ ಸಜ್ಜನರ ಸಹವಾಸವಿಲ್ಲದಿದ್ದರೆ, ಒದಗುವ ಕೆಡಕನ್ನು ಹೇಳಿದ್ದಾಯಿತು. ಈಗ್ಗೆ ಅಂಥ ಸಜ್ಜನರ ಸಮಾಗಮವಾದರೂ ದೈವವಶದಿಂದ (ಶ್ರೀಹರಿಕೃಪೆಯಿಂದಲೇ) ಆಗುವದೆಂದು ಹೇಳುವರು.

**ಅರ್ಥ:–** (ಮಾನವ ಜೀವನದ ಇತಿ ಕರ್ತವ್ಯತೆ–ಪರಮ ಪುರುಷಾರ್ಥವನ್ನು ಹೇಗೆ ಪಡೆಯಬೇಕೆಂಬುದನ್ನು ತಿಳಿಸಿ ಹೇಳುವ) ಮಾರ್ಗದರ್ಶಕರಾದ ಸಜ್ಜನರ ಸಮಾಗಮವಿಲ್ಲದೆ, ಭಗವಂತನಿಗೆ ವಿಮುಖರಾದ(ಭಗವದ್ವಿಷಯದಲ್ಲಿ ಮನಸ್ಸು ಹಾಕದ) ಜನರು, ಈ ಕಾರಣದಿಂದಲೆ ಅತ್ಯಂತ ದುಃಖದಲ್ಲಿ ತೊಳಲುವರು. ಇಂಥ ಜನರಿಗೆ ಉಪದೇಶದಿಂದ ಸರಿಯಾದ ಮಾರ್ಗ ತೋರಿಸಿ ಅವರ ಮೇಲೆ ಅನುಗ್ರಹ ಮಾಡುವದಕ್ಕಾಗಿಯೆ, ಭಗವಂತನ ದಾಸವರ್ಯರೂ, ಭಗವಂತನ ಮಂಗಳಕರವಾದ ಅಂಶಯುಕ್ತರಾದವರೂ ಆದ ಮಹಾತ್ಮರು (ಪುಣ್ಯ ಭೂಮಿಯಾದ) ಈ ಭಾರತದಲ್ಲಿ ನಿಜವಾಗಿಯೂ ಸಂಚರಿಸುತ್ತಿರುವರು. ಆದರೆ, ಅಂಥವರ ಸಮಾಗಮವು ದೈವ (ಭಗವತ್) ಕೃಪೆಯಿಂದಲೆ (ದುಃಖಿತರಾದ) ಈ ಜನ

ರ.೧ ಬೋರಿಯುವದು. – ವಿದುರನೈತ್ರೇಯರ ಸಮಾಗಮದಲ್ಲಿ, ವಿದುರನು, ಮೈತ್ರೇಯರ ಬಗ್ಗೆ ತನ್ನ ಆದರವನ್ನು ಸೂಚಿಸಿರುವನು.-

**||೧೦೫|| ಭವಾಪವರ್ಗೋ ಭ್ರಮತೋ ಯದಾ ಭವೇ-**
**ಜ್ಜನಸ್ಯ ತರ್ಹ್ಯಚ್ಯುತ ಸತ್ಸಮಾಗಮಃ |**
**ಸತ್ಸಂಗಮೋ ಯರ್ಹಿ ತದೈವ ಸದ್ಗತೌ**
**ಪರಾವರೇಶೇ ತ್ವಯಿ ಜಾಯತೇ ರತಿಃ || ೧೦-೫೧-೫೪**

–ಭಗವತ್ (ದೈವ) ಕೃಪೆಯಿಂದಲೆ ಮಾತ್ರ ಸಜ್ಜನರ ಸಮಾಗಮವಾಗುವದು ಭಗವದ್ವಿಷಯದಲ್ಲಿ ಆಸಕ್ತಿ-ಆದರಗಳನ್ನು ತಾಳದಿರುವ ದೋಷದಿಂದ ದೂರವಾಗಲು, ಸಜ್ಜನರ ಸಮಾಗಮವು ಏಕನೇವ ಉಪಾಯ. ಆದುದರಿಂದ ಸಂಸಾರಬಂಧನದಿಂದ ಬಿಡುಗಡೆಯಾಗುವ ಪಕ್ವಕಾಲ ಒದಗುವ ಮೊದಲೇ ವಂಥ ಸಮಾಗಮವು ಎಂದಿಗೂ ದೊರಕದು- ದೀರ್ಘ ನಿದ್ರೆಯಿಂದ ಎಚ್ಚತ್ತು, ಕೃಷ್ಣದರ್ಶನದಿಂದ ಆನಂದಭರಿತನಾದ ಮುಚಕುಂದರಾಜನು ಶ್ರೀಕೃಷ್ಣನನ್ನು ಸ್ತುತಿಸುತ್ತಾನೆ.–

**ಅರ್ಥ :**– (ತಮ್ಮ ತಮ್ಮ ಕರ್ಮ ಫಲದಿಂದ ಮತ್ತೆ ಮತ್ತೆ ಜನನ–ಮರಣದ) ಈ ಸಂಸಾರ ಬಂಧನದಿಂದ ಬಿಡುಗಡೆ ಹೊಂದುವ ಉಚಿತ ಕಾಲವು ಸಮೀಪಿಸಿದಾಗಲೇ, – ಹೇ ಅಚ್ಯುತಾ! (ಭಗವತ್ ಕೃಪೆಯಿಂದ) ಅಂಥ (ಯೋಗ್ಯರಾದ) ಮಾನವರಿಗೆ ಸಜ್ಜನರ ಸಹವಾಸವು–ಲಭಿಸುವದು. ಸಜ್ಜನರ ಸಹವಾಸವಾದರೇನೆ, ಕ್ಷರಾಕ್ಷರರಿಗೆ ಒಡೆಯನಾಗಿ ಪುರುಷೋತ್ತಮನಾಗಿರುವ ನಿನ್ನಲ್ಲಿ ಅಚಲವಾದ ಭಕ್ತಿಯು ಉಂಟಾಗುವದು.–

**|| ೧೦೬|| ಸತಾಂ ಪ್ರಸಂಗಾನ್ಮಮ ವೀರ್ಯಸಂವಿದೋ**
**ಭವಂತಿ ಹೃತ್ಕರ್ಣರಸಾಯನಾಃ ಕಥಾಃ |**
**ತಜ್ಜೋಷಣಾದಾಶ್ವಪವರ್ಗವರ್ತ್ಮನಿ**
**ಶ್ರದ್ಧಾವತೀ ಭಕ್ತಿರನುಕ್ರಮಿಷ್ಯತಿ || ೩-೨೬-೨೫**
25

–ಕಪಿಲನಾಮಕ ಪರಮಾತ್ಮನು ತಾಯಿಗೆ ಭಕ್ತಿಯೋಗವನ್ನು ಉಪದೇಶಿಸಿದ ಸಂದರ್ಭದಲ್ಲಿ ಹೇಳಿದ ಮಾತು.–

– ಸಜ್ಜನ ಸಮಾಗಮವಾದ ಗಳಿಗೆಯಲ್ಲಿಯೆ, ಹಾಗೂ ಅಂಥ ಸಮಾಗಮವು ಪ್ರತ್ಯಕ್ಷವಾಗಿ (ಸ್ವತಃ ತಾನೆ) ಭಕ್ತಿಯನ್ನು ಹುಟ್ಟಿಸಲಾರದು. ದೀರ್ಘ

ಕಾಲದವರೆಗೆ ಸಜ್ಜನರ ಸಮಾಗಮವು ದೊರೆಯಬೇಕು. ಅಂದರೆ ಮಾತ್ರ ಭಕ್ತಿಯು ಸಿದ್ಧಿಸುವದು. – ಇಲ್ಲಿ, ಒಂದು ಅಕ್ಷೇಪವಿದೆ. ಸಕಲ ಜನರೊಡನೆಯೂ ಸಂಗವನ್ನು, ಅತ್ಯಾಸಕ್ತಿಯನ್ನು ತ್ಯಜಿಸಬೇಕೆಂದು ಈ ಮೊದಲಿನ ಪ್ರಕರಣದಲ್ಲಿ ಹೇಳಿ, – ಈ ಶ್ಲೋಕದಲ್ಲಿ ಬಹುಕಾಲದವರೆಗೆ ಸಹವಾಸ ಮಾಡಬೇಕು. ಅವರೊಡನೆ ಕೂಡಿಕೊಳ್ಳಬೇಕು. – ಎಂದು ಹೇಳಿದೆ. ಇದು ಅಸಂಗತವಾಗುವದಿಲ್ಲವೆ ? – ಎಂದು ಕೇಳಿದರೆ, ಅದಕ್ಕೆ ಉತ್ತರವೇನೆಂದರೆ,– ಸರಿ! ಭಗವತ್ ಸೇವೆಗೆ ಪ್ರತಿಕೂಲರಾದವರ, ಭಗವತ್ ಸೇವೆಯನ್ನು ದ್ವೇಷಿಸುವವರ ಕೂಡ ಸರ್ವಥಾ ಸಂಗವನ್ನು ಮಾಡಬಾರದೆಂದು ಹಿಂದೆ ಹೇಳಿದಿಯೆ ವಿನಹ, ಸಜ್ಜನರ ಸಂಗವನ್ನು ಬಿಡಬೇಕೆಂದು ಹೇಳಿಲ್ಲ. ಭಗವತ್ ಸೇವೆಯ ಬಗ್ಗೆ ಪ್ರೀತಿ ಪ್ರವೃತ್ತಿಗಳನ್ನು ಹುಟ್ಟಿಸುವದರಲ್ಲಿ ಸಜ್ಜನರೆ ಅಗ್ರಗಣ್ಯರು. ದುರ್ಜನರ ಸಹವಾಸದಿಂದ ಒದಗಿದ ದೋಷಗಳನ್ನು ಸಜ್ಜನರು ದೂರ ಮಾಡುವರು. ಸಜ್ಜನರ ಸಮಾಗಮವು ಪ್ರಾರ್ಥನೀಯವಾಗಿದೆ. ಆದರಿಂದ ನಾವು ಅದನ್ನು ಪಡೆದುಕೊಳ್ಳಬೇಕು. – ಎಂಬುದು ಈ ಶ್ಲೋಕದ ಅಭಿಪ್ರಾಯವಾಗಿದೆ.

ಅರ್ಥ:– ಸಜ್ಜನರೊಡನೆ(ದೀರ್ಘಕಾಲದ) ಸಹವಾಸ ಮಾಡುವದರಿಂದ ಕಿವಿ ಹಾಗೂ ಹೃದಯಗಳಿಗೆ (ಮಧುರಸದಂತೆ) ಸಂತೃಪ್ತಿ– ಸಂತೋಷಗಳನ್ನುಂಟು ಮಾಡುವ, ನನ್ನ (ಭಗವಂತನ) ಲೀಲೆ ಹಾಗೂ ಅದ್ಭುತ ಚರಿತ್ರೆಗಳು (ಯಾವಾಗಲೂ) ಕೇಳಬರುವವು. ಇಂಥ ಕಥೆಗಳನ್ನು ಕೇಳುತ್ತಿರುವಂತೆಯೆ (ಮೋಕ್ಷಪ್ರದನಾದ ಭಗವಂತನಲ್ಲಿ) ಶ್ರದ್ಧೆಯಿಂದ ಯುಕ್ತವಾದ ಭಕ್ತಿಯು ವಿಳಂಬವಿಲ್ಲದೆ ಹೆಚ್ಚುತ್ತ ಹೋಗುವದು.–

– ಕಥಾ ಶ್ರವಣವು ತಾನೇ ಈ ಬಗೆಯ ಭಕ್ತಿಯನ್ನು ಹುಟ್ಟಿಸುವದಿಲ್ಲ. ಕಥಾ ಶ್ರವಣವು ಭಗವಂತನಲ್ಲಿ ಶ್ರದ್ಧೆಯನ್ನು ಉಂಟುಮಾಡುವದು. ಈ ಶ್ರದ್ಧೆಯು ಭಗವದ್ ಭಕ್ತಿಗೆ ವಿರುದ್ಧವಾಗಿರುವ (ಪ್ರತಿಕೂಲವಾಗಿರುವ) ಮನೋವೃತ್ತಿಯನ್ನು ತೆಗೆದುಹಾಕುವದು. ಈ ಅಭಿಪ್ರಾಯದಿಂದಲೆ, ಭಕ್ತಿಗೆ ' ಶ್ರದ್ಧಾವತೀ ' (ಶ್ರದ್ಧೆಯಿಂದ ಯುಕ್ತವಾದುದು) ಎಂಬ ವಿಶೇಷಣವನ್ನು ಜೋಡಿಸಿರುವರು. ' ಶ್ರದ್ಧಾವತೀ ಭಕ್ತಿ ' ಎಂದು ಹೇಳಿರುವಲ್ಲಿ, ಭಕ್ತಿಗೆ ಸಾಧನವಾಗಿರುವ ಸಂಗತಿಗಳಲ್ಲಿ ಶ್ರದ್ಧೆಗೆ ಸ್ಥಾನವೇ ಇಲ್ಲದಂತಾದೀತು. – ಎಂಬುದನ್ನು ಯೋಚಿಸಿಕೊಳ್ಳಬೇಕು.

– ಹೀಗೆ ಹೇಳಿರುವರು. –(೧) ಅತ್ಯಾಸಕ್ತಿಯು ಎಂದಿಗೂ ನಾಶವಾಗದ ಬಂಧನವೆಂದು ಜ್ಞಾನಿಗಳು ತಿಳಿದುಕೊಂಡಿರುವರು. ಆದರೆ ಅದೇ ದೀರ್ಘಕಾಲದ

ಸಮಾಗಮವನ್ನು ಸಜ್ಜನರಲ್ಲಿ ಮಾಡಿದ್ದಾದರೆ, ಮೋಕ್ಷದ ಬಾಗಿಲು ನಮಗೆ ತೆರೆದಿಟ್ಟಂತಾಗುವದು. (೩-೨೬-೨೦)-(೨) ಸಜ್ಜನರಿಗೆ ಭೂಷಣ (ಅಲಂಕಾರ)ದಂತಿರುವ ಸಾಧುಗಳು ಸಹನ ಗುಣವುಳ್ಳವರು. ದಯಾಳುಗಳು, ಸಕಲ ಜೀವಿಗಳನ್ನೂ ಪ್ರೀತಿಸುವವರು, ವೈರಿಗಳೇ ಇಲ್ಲದವರು, ಶಾಂತ ಸ್ವಭಾವದವರು. (೩-೨೬-೨೧) (೩) ಇಂಥ ಸಾಧುಗಳು ನನ್ನಲ್ಲಿ ( ಭಗವಂತನಲ್ಲಿ ) ದೃಢವಾದ ಏಕಾಂತ ಭಕ್ತಿಯುಳ್ಳವರು, ನನ್ನ ಸಲುವಾಗಿ ಸಕಲ ಕಾರ್ಯಗಳನ್ನು ಸಕಲ ಬಂಧು ಬಾಂಧವರನ್ನು ಬಿಟ್ಟುಕೊಟ್ಟವರು. (೩-೨೬-೨೨ (೪) ನನ್ನನ್ನೇ ಆಶ್ರಯಿಸಿದವರು, ನನ್ನ ಮಧುರವಾದ ಲೀಲಾ ಕಥೆಗಳನ್ನು ಕೇಳುವರು, (ಅನ್ಯರಿಗೆ) ಹೇಳುವರು ಪರಿಪೂರ್ಣನಾದ ಶ್ರೀಹರಿಯ ಪೂರ್ಣತ್ವ ಹಾಗೂ ಸರ್ವೋತ್ತಮತ್ವದ ಜ್ಞಾನದಲ್ಲಿ ದೃಢವಾದ ಮನಸ್ಸುಳ್ಳವರು, (೩-೨೬-೨೪). (೫) ಹೇದೇವಿ! ಸರ್ವಸಂಗವನ್ನು ತ್ಯಾಗ ಮಾಡಿದ ಇವರೇ ಸಾಧುಗಳು. ದುಃಸಂಗತಿಯ ದೋಷಗಳನ್ನು ದೂರಗೊಳಿಸುವ ಇಂಥವರ ಸಹವಾಸವನ್ನು ನಾವು ಬೇಡಿಕೊಳ್ಳಬೇಕು. (೬) ಬುದ್ಧಿಪೂರ್ವಕವಾಗಿ ಮಾಡಿದ ದುರ್ಜನರ ಸಹವಾಸವು ಸಂಸಾರದ ಬಂಧನಕ್ಕೆ ಕಾರಣವಾಗುವದು. ಅದೇ ಸಹವಾಸವನ್ನು ಸಜ್ಜನರೊಡನೆ ಮಾಡಿದರೆ 'ನಿಃಸಂಗಕ್ಕೆ', ನಿರ್ಲೇಪವಾದ ಮೋಕ್ಷಕ್ಕೆ ದಾರಿ ಮಾಡಿಕೊಡುವದು' –

||೧೦೬|| ಭಕ್ತ್ಯಾ ಪುಮಾನ್ ಜಾತವಿರಾಗಐಂದ್ರಿಯಾತ್
ದೃಷ್ಟಶ್ರುತಾನ್ಮದ್ರಚನಾನುಚಿಂತಯಾ ।
ಚಿತ್ತಸ್ಯ ಯತ್ತೋ ಗ್ರಹಣೇ ಯೋಗಯುಕ್ತೋ
ಯತಿಷ್ಯತೇ ಋಜುಭಿರ್ಯೋಗಮಾರ್ಗೈಃ ॥ ೩-೨೬-೨೬

**ಅರ್ಥ**:– (ಸತ್ಸಂಗದಿಂದ ಹೆಚ್ಚಾಗುತ್ತಿರುವ, ಭಕ್ತಿಯ ಬಲದಿಂದ ನಿತ್ಯವೂ ಅನುಭವಿಸುತ್ತಿರುವ ಇಂದ್ರಿಯಜನ್ಯ ವಿಷಯಸುಖಗಳಲ್ಲಿ ಮಾನವನು ವಿರಕ್ತನಾಗುವನು. ಆನಂತರ, ಕಾಣುವ ಈ ಲೋಕದಲ್ಲಿ ಹಾಗೂ ಪರಲೋಕದಲ್ಲಿ ಜೀವಿಗಳು ಅನುಭವಿಸುವ ಸುಖ ಸಂಪತ್ತುಗಳೆಲ್ಲ ಅನಿತ್ಯವೂ, ಅಸಾರವೂ (ಕ್ಷುಲ್ಲಕವೂ) ಆಗಿರುವದೆಂಬ ಮನವರಿಕೆಯಿಂದ ಅವುಗಳ ಬಗ್ಗೆ ಅನಾಸಕ್ತಿ (ವಿರಕ್ತಿ) ಭಾವನೆಯನ್ನು ತಾಳುವನು. ಅದಾದನಂತರ ಮನೋನಿಗ್ರಹದ ಬಗ್ಗೆ ತುಂಬಾ ಜಾಗರೂಕನಾಗಿರುವನು. ಮನಸ್ಸನ್ನು ಪೂರ್ಣವಾಗಿ ನಿಗ್ರಹದಲ್ಲಿಟ್ಟುಕೊಂಡು, ಭಾಗವತ ಧರ್ಮಾನುಷ್ಠಾನವೆಂಬ ಮೋಸವಿಲ್ಲದ ವಿಧಾನದಿಂದ ಭಗವತ್ ಸೇವೆಯಲ್ಲಿ ತೊಡಗಲು ಯತ್ನಿಸುತ್ತಾನೆ.–

||೧೦೩|| ಅಸೇವಯಾಯಂ ಪ್ರಕೃತೇರ್ಗುಣಾನಾಂ
ಜ್ಞಾನೇನ ವೈರಾಗ್ಯವಿಜೃಂಭಿತೇನ ।
ಯೋಗೇನ ಮಯ್ಯರ್ಪಿತಯಾ ಚ ಭಕ್ತ್ಯಾ
ಮಾಂ ಪ್ರತ್ಯಗಾತ್ಮಾನಮಿಹಾವರುಂಧೇ || ೩-೨೫-೨೭

**ಅರ್ಥ**:- (ತ್ರಿಗುಣಾತ್ಮಕ) ಪ್ರಕೃತಿಯಿಂದಲೇ ನಿರ್ಮಾಣವಾಗುವ ವಿಷಯುಗಳ ಭೋಗವನ್ನು ಬಿಟ್ಟುಕೊಡುವನು. ಹೀನವಾದ ಲೌಕಿಕ ವಿಷಯಗಳಿಂದ ದೂರವಾಗಿರುವದು-(ಗ್ರಾಮ್ಯ-ಈಹಾ-ಉಪರಮ) ವೆಂಬ ಭಾಗವತ ಧರ್ಮದ ಆಚರಣೆಯಿಂದ ಆತನ ವೈರಾಗ್ಯವು ಬಲಗೊಳ್ಳುವದು. ಇಂಥ ಸತ್ವಶಾಲಿಯಾದ ವೈರಾಗ್ಯದಿಂದ ಜ್ಞಾನದ ಅಭಿವೃದ್ಧಿ (ಹೆಚ್ಚಳ) ವಾಗುವದು. ಸಕಲ ಕರ್ಮಗಳನ್ನು ನನಗೆ ಸಮರ್ಪಿಸುವನು. ಅಭಿವೃದ್ಧಿಯನ್ನು ಪಡೆದ ಜ್ಞಾನದಿಂದ ನನಗೆ ಸಮರ್ಪಿತವಾದ ಭಕ್ತಿಯೂ ಊರ್ಜಿತವಾಗುವದು. ಈ ಬಗೆಯ ಊರ್ಜಿತಭಕ್ತಿಯಿಂದ ತನ್ನಲ್ಲಿ ಅಂತರ್ಯಾಮಿಯಾಗಿರುವ ಹಾಗೂ ತನಗೆ ಬಿಂಬಸ್ವರೂಪನಾದ ನನ್ನನ್ನು (ಪರಮಾತ್ಮನನ್ನು) ಹೊಂದುವನು.

'ಸಂಸಾರದಿಂದ ಬಿಡುಗಡೆಯ ಕಾಲವು' ಪಕ್ವವಾದಾಗ, (ಯೋಗ್ಯರಾದ) ಮಾನವರಿಗೆ ಸತ್ಸಂಗವು ಒದಗುವದು'-ಹಿಂದೆ ಹೇಳಿರುವ ಮಾತು ಈ ಶ್ಲೋಕದಿಂದ ಹೆಚ್ಚು ಸ್ಪಷ್ಟವಾಗುತ್ತದೆ.

||೧೦೪|| ಅಹೋ ನೃಜನ್ಮಾಖಿಲಜನ್ಮಶೋಭನಂ
ಕಿಂ ಜನ್ಮಭಿಸ್ತ್ವಪರೈರಪ್ಯಮುಷ್ಮಿನ್ |
ನ ಯದ್ಧೃಷೀಕೇಶಯಶಃಕೃತಾತ್ಮನಾಂ
ಮಹಾತ್ಮನಾಂ ವಃ ಪ್ರಚುರಃ ಸಮಾಗಮಃ || ೫-೧೩-೨೧

ಬಹುದೀರ್ಘಕಾಲದ ಮಹತ್ ಸಮಾಗಮದಿಂದಲೇ ಮಾನವರು ಸ್ವಂತದ ಪುರುಷಾರ್ಥವನ್ನು ಪಡೆಯುವರು. ಅಂಥ ಮಹತ್ಸಮಾಗಮ ಬಗ್ಗೆ ಆದರವನ್ನು ತಾಳಬೇಕು. ಈ ಮಾತನ್ನು ನೆನಪಿಗೆ ತಂದುಕೊಡುವದಕ್ಕಾಗಿ, ಯಾವ ದೇಹದಲ್ಲಿ ಬಹುಕಾಲ ಮಹತ್ಸಮಾಗಮವು ಲಭಿಸುವದೋ, ಅಂಥ ಜನ್ಮವೆ ಎಲ್ಲ ಜನ್ಮಗಳಲ್ಲಿ ಅತಿ ಶ್ರೇಷ್ಠವಾದುದು.-ಎಂದು ಆ ಜನ್ಮವನ್ನು ಹೊಗಳುವರು-

**ಅರ್ಥ**;- ಹೃಷೀಕೇಶನ (ಭಗವಂತನ) ಮಹಿಮಾದರ್ಶಕವಾದ ಲೀಲಾಕೃತಿಗಳಲ್ಲಿ ದೃಢವಾಗಿ ಲೀನವಾದ ಮನಸ್ಸುಳ್ಳವರು, (ಭಗವಂತನ ಲೀಲಾಕೃತಿಗಳ ಶ್ರವಣ ಚಿಂತನೆಗಳಲ್ಲಿಯೇ ಪರಮಾನಂದಪಡುವ ಮನಸ್ಸು ಉಳ್ಳವರು)-

ಅಂತೆಯೆ ಇವರು ಮಹಾತ್ಮರು. ಇಂಥಹಮಹಾತ್ಮರ (ಭಗವದ್ಭಕ್ತರ) ಬಹ
ಕಾಲದ ಸಮಾಗಮವು ದೊರೆತ ಮಾನವ ಜನ್ಮವೆ, ಸಕಲ ಜನ್ಮಗಳಲ್ಲಿ ಶ್ರೇಷ್ಠ
ವಾದುದು.-(ಮಹಾತ್ಮರ ಸಮಾಗಮವು ದೊರೆಯದ ಮಾನವ ಜನ್ಮವೂಕೂಡ
ಹೀನವಾದುದೆ.)-ಉಳಿದೆಲ್ಲ ಜನ್ಮಗಳು ನಿರರ್ಥಕಗಳಾದವು. (ಅವುಗಳಿಂದಯಾವ
ಪುರುಷಾರ್ಥವೂ ಸಿದ್ಧಿಸುವದಿಲ್ಲ.

ಮಹಾತ್ಮರ ಸಮಾಗಮವಿಲ್ಲದ ಮಾನವ ಜನ್ಮವನ್ನೂ ಮಂಗಳಕರ
ವೆಂದು ಮೆಚ್ಚಿಕೊಳ್ಳುವವರ ಬಗ್ಗೆ ತಿರಸ್ಕಾರವೆ ವ್ಯಕ್ತವಾಗುತ್ತದೆ. ಸತ್‌ಸಮಾ
ಗಮ ವಿಲ್ಲದ ಮಾನವ ಜನ್ಮವನ್ನೂ ಒಳ್ಳೇದೆಂದು ಹೇಳುವದಾದರೆ, ಮಾನ
ವೇತರ ಉಳಿದ ಜನ್ಮಗಳೂ ಚೆನ್ನಾದವುಗಳೆಂದು ಏಕೆ ಹೇಳಬಾರದು?-ಅವೇನು
ತಪ್ಪುಮಾಡಿವೆ? - ರಹೂಗಣರಾಜನಿಗೆ ಜಡಭರತನು ಮಹತ್-ಸಮಾಗಮದ
ಮಹಿಮೆಯನ್ನು ಹೇಳಿರುವನು-

||೧೦|| **ನಹ್ಯದ್ಭುತಂ ತ್ವಚ್ಚರಣಾಬ್ಜರೇಣುಭಿ-**
**ರ್ಹತಾಂಹಸೋ ಭಕ್ತಿರಧೋಕ್ಷಜೇಽಮಲಾ |**
**ಮೌಹೂರ್ತಿಕಾದ್ಯಸ್ಯ ಸಮಾಗಮಾಚ್ಚ ಮೇ**
**ದುಸ್ತರ್ಕಮೂಲೋಽಪಹತೋಽವಿವೇಕಃ ||** ೫-೧೩-೨೨

ಒಂದು ಗಳಿಗೆ ಮಾತ್ರ ದೊರೆತ ಮಹತ್ಸಮಾಗಮದಿಂದ ಪುರುಷಾರ್ಥ
ಸಿದ್ಧಿಯಾಗುತ್ತಿರಲು, ದೀರ್ಘಕಾಲದ ಮಹತ್-ಸಮಾಗಮದಿಂದ ನಿಶ್ಚಿತವಾಗಿ
ಪುರುಷಾರ್ಥಪ್ರಾಪ್ತಿಯಾಗುವದೆಂದು ಬೇರೆ ಹೇಳಬೇಕಿಲ್ಲ. ಮಹಾತ್ಮರ ದೀರ್ಘಕಾ
ಲದ ಸಮಾಗಮದಿಂದ (ಅವರ ಸಹವಾಸದಲ್ಲಿ ನೆಲಿಸುವದರಿಂದ) ಮಾನವನಿಗೆ
ಶ್ರೇಯಸ್ಕರವಾಗಿರುವ ಸಕಲ ಸಂಗತಿಗಳೂ ಲಭಿಸುವವು. - ರಹೂಗಣರಾಜನು
ಜಡಭರತನಿಗೆ ಹೇಳಿದ ಸ್ವಾನುಭವದ ಮಾತು-

**ಅರ್ಥ:**- ಒಂದು ಗಳಿಗೆಯ (ಅಲ್ಪಕಾಲದ) ನಿಮ್ಮ ಸಮಾಗಮದಿಂದಲೆ,
ಅಸಂಬದ್ಧ, ಹೀನ ತಾರ್ಕಿಕ ವಿಚಾರಗಳಿಂದ ಜನಿಸಿದ, ನನ್ನ ಅವಿವೇಕವು (ಸಾರಾ
ಸಾರ ವಿಚಾರರಾಹಿತ್ಯವು) ಅಳಿದುಹೋಯಿತು. ಹೀಗಿರಲು, ನಿಮ್ಮ ಪಾದಧೂಳಿ
ಯಿಂದ (ದೀರ್ಘ ಕಾಲದ ನಿಮ ಸೇವೆಯಿಂದ) ತನ್ನ ಪಾಪಗಳನ್ನೆಲ್ಲ ಕಳೆದು
ಕೊಂಡಭಾಗ್ಯಶಾಲಿಯು ಭಗವಂತನಲ್ಲಿ ಶುದ್ಧವಾದ, (ದೋಷರಹಿತವಾದ) ಭಕ್ತಿ
ಯನ್ನು ಪಡೆಯುವದು ಆಶ್ಚರ್ಯಕರವಲ್ಲ.

'ಹಿ-ಎಂಬ ಪದದಿಂದ, ಈ ಮಾತು ಜ್ಞಾನಿಗಳಿಗೆ ಅನುಭವಸಿದ್ಧವೆಂದು ಸೂಚಿಸುವರು.-'ತವ'-ನಿನ್ನ ಎಂದರೆ ಜಡಭರತನ, ವ:- ನಮ್ಮಿಬ್ಬರ, ಎಂದರೆ ಜಡಭರತನ ಹಾಗೂ ರಹೂಗಣಜನು-ಎಂಬರ್ಥ,

||೧೧೧|| **ನೈಷಾಂ ಮತಿಸ್ತಾವದುರುಕ್ರಮಾಂಘ್ರಿಂ**
**ಸ್ಪೃಶತ್ಯನರ್ಥಾಪಗಮೋ ಯದರ್ಥಃ |**
**ಮಹೀಯಸಾಂ ಪಾದರಜೋಽಭಿಷೇಕಂ**
**ನಿಷ್ಕಿಂಚನಾನಾಂ ನ ವೃಣೀತ ಯಾವತ್ || ೭-೩-೩೨**

ಇಂದ್ರಿಯವಿಷಯಗಳಲ್ಲಿ ವಿರಕ್ತನಾಗಿದ್ದರೂ ಕೂಡ, ಮಹಾತ್ಮರ ಸತ್ಸಮಾಗಮವಿಲ್ಲದಿದ್ದರೆ, ಯಾವ ಪುರುಷಾರ್ಥವೂ ಸಾಧಿಸದು, ಆದುದರಿಂದ ಮಹತ್ಸಮಾಗಮದ ಬಗ್ಗೆ ಆಸ್ಥೆ ಆದರಗಳನ್ನು ವಹಿಸಬೇಕು-ಎಂಬ ತಮ್ಮ ಅಭಿಪ್ರಾಯವನ್ನು ಮತ್ತೊಮ್ಮೆ ಹೇಳಿ ಮುಕ್ತಾಯಗೊಳಿಸುವರು.

**ಅರ್ಥ** :- ಹುಟ್ಟು-ಸಾವುಗಳೆಂಬ ಸಂಸಾರಚಕ್ರದಿಂದ ಬಿಡುಗಡೆಯು, ಸರ್ವಸ್ವವನ್ನೂ ತ್ಯಾಗಮಾಡಿ ನಿರಪೇಕ್ಷರಾಗಿರುವ ಭಾಗವತೋತ್ತಮರ ಪಾದಧೂಳಿಯನ್ನು ಧರಿಸುವದರಿಂದ [ಚಿರಕಾಲ ಅವರ ಸೇವೆಯನ್ನು ಮಾಡುವದರಿಂದ] ಉಂಟಾಗುವದು. ಮಹಿಮಾಶಾಲಿಗಳಾದ ಅಂಥ ಸತ್ಪುರುಷರ ಪಾದಧೂಳಿಯನ್ನು ಎಲ್ಲಿಯವರೆಗೆ ಧರಿಸುವದಿಲ್ಲವೊ, ಅಲ್ಲಿಯತನಕ ಅನಂತ-ಅನಂತ-ಶಕ್ತಿಯುಳ್ಳ ಪರಮಾತ್ಮನ ಪಾದಕಮಲಗಳಲ್ಲಿ ಮಾನವರ ಬುದ್ಧಿಯು ಆಸಕ್ತವಾಗಲಾರದು; ಭಗವಂತನ ಪಾದ ಚಿಂತನೆಯನ್ನು ಮಾಡಲಾರದು.

ಇತಿ-ಶ್ರೀಮಹತ್ಸಮಾಗಮ ಪ್ರಕರಣವು ಮುಗಿಯಿತು- ಇತಿ-ಶ್ರೀಮದವಧೂತಶಿರೋಮಣಿ ಶ್ರೀಜಯತೀರ್ಥ [ಶ್ರೀವಿಷ್ಣುತೀರ್ಥ] ರಿಂದ ರಚಿತವಾದ ಈ ಪ್ರಕರಣದ ಮೇಲಿನ ಟೀಕೆಯು ಮುಗಿಯಿತು-



# ೭ ಮಹತ್ಸೇವಾ ಪ್ರಶಂಸಾ ಪ್ರಕರಣ

||೧೦|| ಯನ್ಮಾಯಯೋರುಗುಣಕರ್ಮನಿಬಂಧನೇಽಸ್ಮಿನ್
ಸಾಂಸಾರಿಕೇ ಪಥಿ ಚರನ್ ತದಭಿಶ್ರಮೇಣ |
ನಷ್ಟಸ್ಮೃತಿಃ ಪುನರಯಂ ಪ್ರವೃಣೀತ ಲೋಕೋ
ಯುಕ್ತ್ಯಾ ಕಯಾ ಮಹದನುಗ್ರಹಮಂತರೇಣ || ೩-೩೨-೨೬
31-15

ಈ ರೀತಿಯಲ್ಲಿ ಮಹಾತ್ಮರ ಸಮಾಗಮವನ್ನು ಹೊಂದಿ, ವಿರಕ್ತಿಯನ್ನು ಪಡೆದು ಮಹಾತ್ಮರ ಸೇವೆಯನ್ನು ಏಕನಿಷ್ಠೆಯಿಂದ ಮಾಡಬೇಕು. –ಎಂಬುದನ್ನು ಪ್ರತಿಪಾದಿಸಲು ಈ ಪ್ರಕರಣವು, ಅದರಲ್ಲಿ ಮಹಾತ್ಮರು ಅನುಗ್ರಹಪೂರ್ವಕವಾಗಿ ನೀಡಿದ ಉಪದೇಶವೇ (ಪುರುಷಾರ್ಥಸಿದ್ಧಿಯೆಂಬ) ಮಹಾಫಲವನ್ನು ಕೊಡುವದು. ಇದನ್ನು ತಿಳಿಸಲೋಸುಗವೆ, ಶ್ರೇಯಃಸಂಪಾದನೆಗೆ ಮಹಾತ್ಮರ ಅನುಗ್ರಹವೆ ಮುಖ್ಯತಃ ಸಾಧನವೆಂಬುದನ್ನು ಮೊದಲು ಹೇಳುವರು.–

ಅರ್ಥ :– ಸತ್ವರಜಸ್ತಮಗಳೆಂಬ ಗುಣಗಳು ಹಾಗೂ ಈ ಗುಣಗಳಿಂದಲೆ ಜನಿಸುವ ಪುಣ್ಯ-ಪಾಪ ಕೃತ್ಯಗಳು, – ಈ ಗುಣ ಕರ್ಮಗಳೇ ಹುಟ್ಟುಸಾವುಗಳ ಚಕ್ರಗತಿಯಾದ ಈ ಸಂಸಾರಕ್ಕೆ ಕಾರಣವಾಗಿದೆ. ಭಗವಂತನ ಇಚ್ಛಾಶಕ್ತಿ (ಮಾಯಾ) ಅಥವಾ ಬಂಧಕ ಶಕ್ತಿಯಿಂದ ಜೀವಿಯು ಈ (ಕಷ್ಟಮಯ) ಸಂಸಾರದ ದಾರಿಯಲ್ಲಿ ಅಲೆದಾಡುವ ಆಯಾಸದಿಂದ ಭಗವಂತನ ಪಾದ ಸ್ಮರಣೆಯನ್ನು ಕಳೆದುಕೊಳ್ಳುವನು. ಕಳೆದುಕೊಂಡಿರುವ ಭಗವಂತನ ಪಾದಸ್ಮರಣೆಯನ್ನು ಮಹಾತ್ಮರ ಅನುಗ್ರಹವನ್ನು ಬಿಟ್ಟು ಬೇರೆ ಯಾವ ಉಪಾಯದಿಂದ ಮತ್ತೆ ತಿರುಗಿ ಪಡೆಯಲು ಸಾಧ್ಯವಿದೆ ? – ( ಬೇರೆ ಯಾವ ಉಪಾಯದಿಂದಲೂ ಸಾಧ್ಯವಾಗದು) –ಯಾವ ಭಗವಂತನ (ಮಾಯಾರೂಪ) ಬಂಧಕ ಶಕ್ತಿಯಿಂದ ಈ ಸಂಸಾರದಲ್ಲಿ ಸುತ್ತಾಡಬೇಕಾಗುವದೋ ಆ ಭಗವಂತನಿಗೆ ವಂದಿಸುವೆ– ಎಂದು ಅನ್ವಯಿಸಬೇಕು.

||೧೧|| ಮಹತ್ಸೇವಾಂ ದ್ವಾರಮಾಹುರ್ವಿಮುಕ್ತೇ-
ಸ್ತಮೋದ್ವಾರಂ ಯೋಷಿತಾಂ ಸಂಗಿಸಂಗಂ |
ಮಹಾಂತಸ್ತೇ ಸಮಚಿತ್ತಾಃ ಪ್ರಶಾಂತಾ
ವಿಮನ್ಯವಃ ಸುಹೃದಃ ಸಾಧವೋ ಯೇ || ೫-೫-೨

– ಸಕಲ ಪುರುಷಾರ್ಥಸಿದ್ಧಿಗೆ ಮಹಾತ್ಮರ ಅನುಗ್ರಹವೇ ಅತೀ ಮುಖ್ಯ ಸಾಧನವಾಗಿರಲಿ. ಆದರೆ, ಮಹಾತ್ಮರ ಅನುಗ್ರಹವನ್ನು ಹೇಗೆ ಪಡೆಯಬೇಕು? ಅದಕ್ಕೆ ಉಪಾಯವೇನು ? ಎಂದರೆ ಮಹಾತ್ಮರ ಅನುಗ್ರಹ ಸಂಪಾದನೆಗೆ, ನಿಷ್ಠೆಯಿಂದ ಚಿರಕಾಲ ಅವರ ಸೇವೆಯನ್ನು ಮಾಡುವುದೇ ಉಪಾಯ. ಈ ಶ್ಲೋಕದಲ್ಲಿ ಇದೇ ಅಭಿಪ್ರಾಯವನ್ನೇ ಹೇಳಿರುವರು. – ಇದು ಋಷಭನಾಮಕ ಪರಮಾತ್ಮನು ಮಕ್ಕಳಿಗೆ ಮಾಡಿದ ಉಪದೇಶ.

**ಅರ್ಥ** :– ಮಹಾತ್ಮರ ಸೇವೆಯೆ ಮೋಕ್ಷಕ್ಕೆ ತೆರೆದ ಬಾಗಿಲು, ಮೋಕ್ಷ ಪ್ರಾಪ್ತಿಗೆ ಸಾಧನವಾಗಿದೆ. ಅದೇ **ರೀತಿಯಲ್ಲಿ**, ಸ್ತ್ರೀಯರಲ್ಲಿ ಕಾಮುಕ ರಾದವರ ಸಹವಾಸವು ನರಕಕ್ಕೆ ಕರೆದೊಯ್ಯುತ್ತದೆ. ( ಸ್ತ್ರೀಯರಲ್ಲಿ ಅತ್ಯಾಸಕ್ತರಾದವರ ಸಂಗವೇ ಇಷ್ಟೊಂದು ಹಾನಿಕರವಾಗಿರುವಾಗ್ಗೆ, ಪ್ರತ್ಯಕ್ಷ ಸ್ತ್ರೀಕಾಮುಕತ್ತವು ಅತೀವ ಹಾನಿಕರವೆಂಬುದು ಸ್ಪಷ್ಟವಾದುದು). ಆದುದರಿಂದ ಇಂಥ ದುರ್ಜನರ ಸಂಗವನ್ನು ಸರ್ವಥಾ ಮಾಡಕೂಡದು). ಯಾರ ಅನುಗ್ರಹವು ಮುಕ್ತಿಗೆ ಸಾಧನವಾಗಿರುವದೋ, ಅಂಥ ಮಹಾತ್ಮರು ಯಾರು? ಅಂಥವರ ಲಕ್ಷಣಗಳನ್ನು ಹೇಳುವರು (ಸರ್ವ ಜೀವಿಗಳಲ್ಲಿಯೂ ಪರಮಾತ್ಮನು ಸಮನಾಗಿರುವನೆಂಬ ದೃಢ ನಂಬಿಕೆಯಿಂದ) ಅವರು ಸರ್ವತ್ರ ಪರಮಾತ್ಮ (ಸಮ)ನ ಚಿಂತನೆಯಲ್ಲಿಯೇ ಮನಸ್ಸುಳ್ಳವರು, (ಆದುದರಿಂದ) ಪ್ರಶಾಂತ (ಕ್ಷೋಭ ರಹಿತ) ಮನಸ್ಸುಳ್ಳವರು, ಎಂದಿಗೂ ಸಿಟ್ಟಿಗೇಳದವರು, ಸಕಲ ಪ್ರಾಣಿಗಳಲ್ಲಿಯೂ ಮಮತೆಯುಳ್ಳವರು, ಕಲ್ಯಾಣ ಕೃತಿಗಳನ್ನೇ ಸದಾ ಮಾಡುವ ಸಜ್ಜನರು,– (ಈ ಸದ್ಗುಣಗಳುಳ್ಳವರೇ ಮಹಾತ್ಮರು, ಇಂಥವರ ಸೇವೆಯು ಮೋಕ್ಷಕ್ಕೆ ಸಾಧನವಾದುದು)–

||೧೧೪|| **ಯೇ ವಾ ಮಯೀಶೇ ಕೃತಸೌಹೃದಾರ್ಥಾ**
**ಜನೇಷು ದೇಹಂಭರವಾರ್ತಿಕೇಷು |**
**ಗೃಹೇಷು ಜಾಯಾತ್ಮಜರಾತಿಮತ್ಸು**
**ನ ಪ್ರೀತಿಯುಕ್ತಾ ಯಾವದರ್ಥಾಶ್ಚ ಲೋಕೇ ||** ೫-೫-೩

**ಅರ್ಥ**:– ಜಗತ್ ಪ್ರಭುವಾದ ನನ್ನಲ್ಲಿ (ಪರಮಾತ್ಮನಲ್ಲಿ) ಸುದೃಢವಾದ, ನಿರಾತಂಕವಾದ ಸ್ನೇಹ ಮಾಡುವುದೊಂದೇ ಜೀವಿತದಲ್ಲಿ ಅವರಿಗೆ (ಇಂಥ ಮಹಾತ್ಮರಿಗೆ) ಏಕಮೇವ ಪ್ರಯೋಜನ, ಅಂತೆಯೇ ಅವರು ನಿಷ್ಕಾಮ ಭಕ್ತರು. ಕೇವಲ ಶಾರೀರಿಕ ಸುಖ ಸೌಕರ್ಯಗಳನ್ನು ಗಳಿಸುವದಕ್ಕಾಗಿಯೆ ತಮ್ಮ ಜೀವಿತವನ್ನು

ವ್ಯಯಿಸುವ ಜನರ ಬಗ್ಗೆ, ಹಾಗೂ ಮನೆ, ಮಡದಿ, ಮಕ್ಕಳು ಹಾಗೂ ಧನಕನಕಾದಿಗಳ ಬಗ್ಗೆ ಲೋಭವಿಲ್ಲದವರು. ಲೌಕಿಕ ವಸ್ತುಗಳಲ್ಲಿ ಕೇವಲ ದೇಹಧಾರಣೆಗೆ ಅತ್ಯಗತ್ಯವಾದವುಗಳನ್ನು ಮಾತ್ರ ಸ್ವೀಕರಿಸುವವರು. (ದೇಹಧಾರಣೆಯು ಕೂಡ ಶ್ರೀಹರಿಯ ಪೂಜೆಗೆ ಸಾಧನವೆಂದು ಮಾತ್ರ) ಇವರೇ ಮಹಾತ್ಮರು.

ಪೃಥು ಚಕ್ರವರ್ತಿ ಪ್ರಸಂಗ

||೧೧೫|| ಯತ್ಸೇವಯಾಽಶೇಷಗುಹಾಶ್ರಯಃ ಸ್ವರಾ-
ಡ್ವಿಪ್ರಪ್ರಿಯಸ್ತುಷ್ಯತಿ ಕಾಮಮೀಶ್ವರಃ |
ತದೇವ ತದ್ಧರ್ಮಪರೈರ್ವಿನೀತೈಃ
ಸರ್ವಾತ್ಮನಾ ಬ್ರಹ್ಮಕುಲಂ ನಿಷೇವ್ಯತಾಂ || ೪-೨೧-೩೮
39

– ಮಹಾತ್ಮರ ಲಕ್ಷಣಗಳನ್ನು ಹೇಳಿ, ಅಂತಿಮ ಪುರುಷಾರ್ಥವನ್ನು ಬಯಸುವವರು ಇಂಥ ಮಹಾತ್ಮರ ಸೇವೆ ಮಾಡಿ ಅನುಗ್ರಹವನ್ನು ಪಡೆಯಬೇಕು, ಎಂದು ಹೇಳಿದೆ. ಮಹಾತ್ಮರ ಬಗ್ಗೆ ಅಧಿಕವಾದ ಪ್ರೀತ್ಯಾದರಗಳನ್ನು ಹುಟ್ಟಿಸಲು, ಅವರ ಮಹಿಮೆಯನ್ನು ಎತ್ತಿ ತೋರಿಸಲು, ಪೃಥು ಮೊದಲಾದ ಮಹಾ ಭಾಗವತರಾದ ಚಕ್ರವರ್ತಿಗಳು ಕೂಡ ಇಂಥ ಮಹಾತ್ಮರ ಸೇವೆಯನ್ನು ಮಾಡಿದರು –ಎಂಬುದನ್ನು ಮೂರು ಶ್ಲೋಕಗಳಲ್ಲಿ ಹೇಳಿರುವರು. – (ಪೃಥು ರಾಜನು ತನ್ನ ಪ್ರಜೆಗಳಿಗೆ ಮಾಡಿದ ಧರ್ಮೋಪದೇಶವಿದು). ಶ್ರೀಹರಿಯ ಅನುಗ್ರಹವನ್ನು ಪಡೆಯಲು ಅದು ಸಾಧನವೆಂದೇ ಪೃಥು ರಾಜನಂಥವರು ಮಹಾತ್ಮರ ಸೇವೆಗೈದರು. ಪೃಥುರಾಜನು ಪ್ರಜೆಗಳಿಗೂ ಅದನ್ನೇ ಉಪದೇಶಿಸಿದನು.

**ಅರ್ಥ:**– (ಅನಂತ, ಕಲ್ಯಾಣಕರ) ಸಕಲ ಗುಣಗಳಿಗೆ ಆಶ್ರಯನಾದವನು, ಸಕಲ ಜೀವಿಗಳ ಹೃದಯದಲ್ಲಿ ಅಂತರ್ಯಾಮಿಯಾಗಿ ನೆಲೆಸಿದವನು, ಪೂರ್ಣ ಸ್ವತಂತ್ರನು, ಬ್ರಾಹ್ಮಣರ (ಬ್ರಹ್ಮಜ್ಞಾನಿಗಳ) ಬಗ್ಗೆ ವಾತ್ಸಲ್ಯವುಳ್ಳವನು ಆಗಿರುವ ಶ್ರೀಹರಿಯು ಬ್ರಾಹ್ಮಣರಿಗಾಗಿ (ಬ್ರಹ್ಮಜ್ಞಾನಿಗಳಿಗಾಗಿ) ಮಾಡುವ ಸೇವೆಯಿಂದ ಅತ್ಯಂತ ಸಂತುಷ್ಟನಾಗುವನು. (ಶ್ರೀಹರಿ ಪ್ರೀತಿಗೆ ಸಾಧನವಾಗಿರುವ) ಬ್ರಾಹ್ಮಣ ಕುಲದ ಸೇವೆಯನ್ನು ಭಗವದ್ಧರ್ಮದಲ್ಲಿ ಆಸಕ್ತರಾದ (ತಮ್ಮ ತಮ್ಮ ವರ್ಣಾಶ್ರಮ ಧರ್ಮಗಳಲ್ಲಿ ನಿರತರಾದ) ಜನರು ವಿನೀತರಾಗಿ, ಸರ್ವತೋಪರಿಯಿಂದಲೂ ಮಾಡಬೇಕು.

||೧೧೬|| ಅಶ್ನಾತ್ಯನಂತಃ ಖಲು ತತ್ತ್ವಕೋವಿದೈಃ
ಶ್ರದ್ಧಾಹುತಂ ಯನ್ಮುಖ ಇಜ್ಯನಾಮಭಿಃ |
ನವೈ ತಥಾ ಚೇತನಯಾ ಬಹಿಷ್ಕೃತೇ
ಹುತಾಶನೇ ಪಾರಮಹಂಸ್ಯಪರ್ಯಗುಃ || ೪-೨೧-೪೦
4-21-41

– ಭಗವಂತನ ಅಧಿಷ್ಠಾನವು ವಿಶೇಷವಾಗಿ ಇರುವ ನೆಲೆಗಳಲ್ಲಿ ಬ್ರಾಹ್ಮ
ಣರು ಶ್ರೇಷ್ಠರಾಗಿರುವದರಿಂದ ಅವರ ಸೇವೆಯನ್ನು ಮಾಡತಕ್ಕದ್ದು.–

**ಅರ್ಥ :**– (ಭಗವತ್–) ತತ್ವವೇತ್ತರು ಯಾರ (ಬ್ರಾಹ್ಮಣರ) ಮುಖ
ದಲ್ಲಿ ಶ್ರೀಹರಿಯ ನಾಮಸ್ಮರಣ ಪೂರ್ವಕ ಶ್ರದ್ಧೆಯಿಂದ (ಹವನ) ಅರ್ಪಿಸಿದ್ದನ್ನು
ಶ್ರೀಹರಿಯು ಹೇಗೆ (ಎಷ್ಟು ಆದರದಿಂದ) ತೆಗೆದುಕೊಳ್ಳುವನೋ,– (ತೆಗೆದುಕೊಂಡು
ಅನಂತಫಲವನ್ನೀಯುವನೋ), ಜಡವಾದ (ಅಚೇತನವಾದ) ಅಗ್ನಿಯಲ್ಲಿ ಹವನ
(ಹೋಮ) ಮಾಡಿದ್ದನ್ನು, ಭಾಗವತ ಧರ್ಮದಲ್ಲಿ ನಿಷ್ಠಾವಂತರಾದ ಯತಿಶ್ರೇಷ್ಠ
ರಿಂದ ಪೂಜಿಸಲ್ಪಡುವ ಭಗವಂತನು (ಜಡವಾದ ಅಗ್ನಿಯಲ್ಲಿ ಅರ್ಪಿಸಿದ ಹವಿ
ಸ್ಸನ್ನು (ಬ್ರಾಹ್ಮಣರಿಗೆ ಉಣಿಸುವ ಭಕ್ಷ್ಯಭೋಗಗಳನ್ನು ಸ್ವೀಕರಿಸುವಂತೆ) ಅಷ್ಟೇ
ಪ್ರೀತಿಯಿಂದ ಸ್ವೀಕರಿಸುವದಿಲ್ಲ. (ಸಂತುಷ್ಟನೂ ಆಗುವದಿಲ್ಲ) ಇದು ನಿಜವಾದುದು.

– ಇಲ್ಲಿ, ಒಂದು ಆಕ್ಷೇಪವನ್ನು ಮಾಡುವರು. 'ಬ್ರಾಹ್ಮಣರ ಮುಖ
ದಲ್ಲಿ ಹುತವಾದುದನ್ನು (ಅವರಿಗೆ ಉಣಬಡಿಸಿದ್ದನ್ನು) ಭಗವಂತನು –ಅಗ್ನಿಯಲ್ಲಿ
ಹವನ ಮಾಡಿದುಕಿಂತಲೂ ಹೆಚ್ಚು ಪ್ರೀತಿಯಿಂದ ಸ್ವೀಕರಿಸುವನು. ಹೋಮ
ಮಾಡುವದು (ಅರ್ಪಿಸುವದು) ಭಗವಂತನ ನಾಮೋಚ್ಚಾರಣೆಯಿಂದಲೇ ಅರ್ಪಿ
ಸುವ ಜನರು ತತ್ವಕೋವಿದರು. –ಎಂದು ಹೇಳಿದೆ– ಇಲ್ಲಿ ಭಗವಂತನು ಸ್ವೀಕರಿ
ಸುವನೆಂಬ ಮಾತು ಸಮಂಜಸವೆನಿಸುವದಿಲ್ಲ. ಏಕೆಂದರೆ, ಭಗವಂತನ ನಾಮೋ
ಚ್ಚಾರದಿಂದ ಭಗವಂತನಿಗೆ ಅರ್ಪಿಸುವದು. – ಇನ್ನೊಬ್ಬರು ಸ್ವೀಕರಿಸುವರು,
ಎಂದು ಹೇಳುವದು ಸೂಕ್ತವೆನಿಸದು. ಮತ್ತೂ ಅಗ್ನಿ ಮುಖದಲ್ಲಿ ಆಗಲಿ,
ಭಗವಂತನೇ ಸರ್ವ ಭೋಕ್ತಾರನಾಗಿರುವದ್ದರಿಂದ, ಬ್ರಾಹ್ಮಣರಿಗೆ ಅರ್ಪಿಸಿದ್ದನ್ನು
ಹೆಚ್ಚು ಪ್ರೀತಿಯಿಂದ ಅದೇ ಭಗವಂತನು ಸ್ವೀಕರಿಸುವನೆಂದು ಹೇಳುವ ಮಾತು
ಅಷ್ಟೊಂದು ಮನಸ್ಸಿಗೆ ಹಿಡಿಸದು.

– ಇನ್ನೊಂದು ಆಕ್ಷೇಪವೆಂದರೆ, :– ಭಗವಂತನ ಹೆಸರು ತೆಗೆದುಕೊಂಡು
ಅರ್ಪಿಸುವದು ಕೂಡ ಸುಸಂಗತವಾದುದಲ್ಲ – ಏಕೆಂದರೆ ಭಗವಂತನು ನಾಮುಗ
ಳಾದ– 'ವಿಷ್ಣವೆ ಸ್ವಾಹಾ'– ಇತ್ಯಾದಿ ಹವನದ ಬೇರೆ ಮಂತ್ರಗಳಿಲ್ಲ. ಯಾರಿಗೆ
ಅರ್ಪಿಸಬೇಕಾಗಿರುವದೋ, ಅವರ ಹೆಸರಿನಿಂದಲೆ ಅರ್ಪಿಸುವದು ಯುಕ್ತವಾದುದು.
ಅದನ್ನು ಬಿಟ್ಟು –'ಪ್ರಾಣಾಯಸ್ವಾಹಾ'– ಇತ್ಯಾದಿ, ಬೇರೆ ನಾಮಗಳಿಂದ ನಾವು
ಅರ್ಪಿಸುವೆವು. 'ಪ್ರಾಣಾಯಸ್ವಾಹಾ' ಎಂದು ಹೇಳುವಲ್ಲಿ, ಪ್ರಾಣ, ಅಪಾನ
ಮುಂತಾದ ಶಬ್ದಗಳೂ ವಿಷ್ಣುವಾಚಕಗಳೆ, ವಿಷ್ಣು ನಾಮಗಳೇ –ಎಂದು ಸಮಾ
ಧಾನ ಹೇಳುವದೂ ಇಲ್ಲಿ ಹೊಂದಿಕೊಳ್ಳದು. ಹಾಗಿದ್ದರೆ– 'ಪ್ರಾಣಾಯಸ್ವಾಹಾ'

ಎಂಬ ಒಂದೇ ಆಹುತಿ, ವಿಷ್ಣುವಿಗಾಗಿ ಸಾಕು. ಅಷ್ಟರಿಂದಲೆ ಹವನವು ಪೂರ್ತಿ ಗೊಳ್ಳುವದು. 'ಅಪಾನಾಯಸ್ವಾಹಾ' -ಇತ್ಯಾದಿ ಅಧಿಕ ಆಹುತಿಗಳು ಅನವ ಶ್ಯಕವಾಗುವವು. ಅರ್ಪಿಸಿದವರಿಗೇನೆ ಮತ್ತೆ ಮತ್ತೆ ಅರ್ಪಿಸಿದರೆ ಪುನರುಕ್ತಿಯಾ ಗುವದು. –

– ಇನ್ನೂ ಒಂದು ಅಕ್ಷೇಪವೆಂದರೆ, :- ತತ್ವವೇತ್ತರು ಅರ್ಪಿಸಿದ್ದನ್ನು ಭಗ ವಂತನು ಸ್ವೀಕರಿಸುವನು, ಎಂದು ಹೇಳುವದೂ ಜ್ಞಾನಿಗಳಿಗೆ ಒಪ್ಪದ ಮಾತು. ಹಾಗಿದ್ದರೆ, (ತತ್ವವೇತ್ತರಲ್ಲದ) ಉಳಿದವರು ಅರ್ಪಿಸಿದ್ದನ್ನು ಭಗವಂತನು ಸ್ವೀಕ ರಿಸುವದಿಲ್ಲವೆಂದು ಹೇಳಬೇಕಾದೀತು. ಭಗವಂತನು ಹಾಗೆ ಮಾಡಿದರೆ, (ಎಲ್ಲ ರಿಂದಲೂ ಸ್ವೀಕರಿಸುವನು. ಎಂಬ ಆತನ ಸರ್ವಭೋಕ್ತೃತ್ವಧರ್ಮಕ್ಕೆ ಹಾನಿ ಯುಂಟಾಗುವದು

ಈ ತತ್ವಕೋವಿದರು ಯಾರು? ಅವರು ಅರ್ಪಿಸಿದ್ದನ್ನು ಭಗವಂತನು ಸ್ವೀಕ ರಿಸುವನು ಎಂದು ಹೇಳಿದೆ, 'ಪಾರಮಹಂಸ್ಯವರ್ಯಗುಃ'-ಎಂಬ ಪದದಲ್ಲಿ ತತ್ವ ಕೋವಿದರು ಯಾರೆಂಬುದನ್ನು ಸ್ಪಷ್ಟಗೊಳಿಸಿರುವರು.

ಮೇಲಿನ ಆಕ್ಷೇಪಗಳಿಗೆ ಹೀಗೆ ಸಮಾಧಾನವನ್ನು ಹೇಳುವರುಃ—

೧) ಒಬ್ಬರಿಗೆ (ಭಗವಂತನಿಗೆ) ಅರ್ಪಿಸುವದು – ಇನ್ನೊಬ್ಬರು (ಬ್ರಾಹ್ಮಣರು) ಸ್ವೀಕರಿಸುವರು. ಈ ಸ್ಥಾನವ್ಯತ್ಯಾಸದ ಬಗ್ಗೆ ಮಾಡಿದ ಆಕ್ಷೇಪವು ಸರಿಯಾ ಗುವದಲ್ಲ.– ಏಕೆಂದರೆ, (ಭಗವಂತನ) ಭಕ್ತರಿಗೆ ಅರ್ಪಿಸುವದನ್ನಾದರೂ, ಭಗವಂ ತನೇ ಸ್ವೀಕರಿಸುವನೆಂಬುದು ಅರ್ಪಿಸುವವರಿಗೆ ಮನಸ್ಸಿನಲ್ಲಿ ಅಭಿಪ್ರೇತವಾಗಿರು ವದು:– ಇನ್ನೊಂದು ಅಕ್ಷೇಪಕ್ಕೂ ಇದೇ ಉತ್ತರ– 'ವಿಷ್ಣವೇಸ್ವಾಹಾ'–ಎನ್ನದೆ 'ಪ್ರಾಣಾಯಸ್ವಾಹಾ', ಇತ್ಯಾದಿ ನಾಮಗಳಿಂದ ಆಹುತಿಗಳನ್ನು ಹಾಕಿದರೂ, ಅವರವರ ಅಂತರ್ಯಾಮಿ ಭಗವಂತನನ್ನು ಉದ್ದೇಶಿಸಿಯೆ ಅಲ್ಲಿ ಅರ್ಪಣ ಮಾಡುವರು. –ಇನ್ನೊಂದು ಆಕ್ಷೇಪಕ್ಕೂ ಉತ್ತರವೆಂದರೆ, ತತ್ವಕೋವಿದರು ಅರ್ಪಿಸಿದ್ದನ್ನು ಭಗವಂತನು ಸ್ವೀಕರಿಸುವನು. –ಎಂದು ಹೇಳಿದ ಮಾತ್ರಕ್ಕೆ, ಇತರರು ಅರ್ಪಿಸುವದನ್ನು ಸರ್ವಭೋಕ್ತಾರನಾದ ಭಗವಂತನು ನಿರಾಕರಿಸು ವನು ಎಂಬ ಅರ್ಥವಲ್ಲ ಯಾರಿಗೆ ನಾವು ಅರ್ಪಿಸುವೆವೋ, ಅವರವರ (ಅಧಿಷ್ಠಾ ನದ) ಪಾತ್ರತೆಯ ತಾರತಮ್ಯಕ್ಕೆ ಅನುಗುಣವಾಗಿ, ಹೆಚ್ಚು ಕಡಿಮೆ ರೀತಿಯಿಂದ ಭಗವಂತನು ನಿರಾಕರಿಸುವನು, ಅಂತೆಯೆ, ತತ್ವವೇತ್ತರು, ಸ್ಪಷ್ಟ ಹೇಳಿದ್ದಾರೆ, ತತ್ವವೇತ್ತರು ಮಾತ್ರ, ಎಂದು ಹೇಳಿಲ್ಲ ಶ್ರೀಹ. ಯ

ಸರ್ವೋತ್ತಮತ್ವವನ್ನು ಪ್ರತಿಪಾದಿಸುವ ವೇದರಕ್ಷಕರಾದ ಬ್ರಾಹ್ಮಣರಿಗೆ (ಬ್ರಹ್ಮವಾದಿಗಳಿಗೆ) ಅರ್ಪಿಸಿದ್ದನ್ನು ಭಗವಂತನು ಹೆಚ್ಚು ಪ್ರೀತಿಯಿಂದ (ಅಗ್ನಿಯಲ್ಲಿ ಹವನ ಮಾಡಿದ್ದಕ್ಕಿಂತಲೂ) ಸ್ವೀಕರಿಸುವನೆಂದು ಹೇಳುವದು ಸಮಂಜಸವಾಗಿದೆ. –'ಪಾರಮಹಂಸ್ಯವರ್ಯಗುಃ' – ಎಂಬ ಪದದ ಅರ್ಥವನ್ನು ವಿವಿಧ ರೀತಿಯಲ್ಲಿ ಹೇಳಿ – ತತ್ವವೇತ್ತರು ಯಾರೆಂಬುದನ್ನು ವಿಶದಗೊಳಿಸುವರು, ಆಕ್ಷೇಪಗಳಿಗೂ ಅಲ್ಲಲ್ಲಿ ಸಮಾಧಾನ ಹೇಳುವರು.

(೧) ಪಾರಮಹಂಸ್ಯವರ್ಯಗು:–ಭಾಗವತಧರ್ಮದಲ್ಲಿ ನಿರತರೇ ಪರಮಹಂಸರು. ಇಂಥ ಪರಮಹಂಸರಿಂದ ಮಾತ್ರ ಆದರಿಸಲ್ಪಡುವರೂಪ (ಗಾವಃ) ಗಳುಳ್ಳವನು ಬ್ರಾಹ್ಮಣರಲ್ಲಿ ಸನ್ನಿಹಿತನಾದ ಭಗವಂತನನ್ನೇ ಸ್ಮರಿಸಿಕೊಂಡು, ಅನುಸಂಧಾನ ಮಾಡಿಕೊಂಡು, ಭಾಗವತರಾದವರು ಅವರಿಗೆ ಅನ್ನಾದಿಗಳನ್ನು ಅರ್ಪಿಸುವರು ಹೋಮಾದಿ ಕ್ರಿಯೆಗಳಿಗೆ ಅನುಗುಣವಾದ ಭಗವಂತನ ರೂಪಗಳನ್ನು ಆಯ್ದುಕೊಳ್ಳುವದೆ–'ವರಣೀಯತ್ವವು'–'ಬ್ರಾಹ್ಮಣರಿಗೆ ಅರ್ಪಿತವಾದುದನ್ನು ಭಗವಂತನು ಹೆಚ್ಚು ಪ್ರೀತಿಯಿಂದ ಸ್ವೀಕರಿಸುವನು', ಎಂಬ ಮಾತಿಗೆ ಮಾಡಿದ ಆಕ್ಷೇಪಕ್ಕೂ ಇದರಲ್ಲಿಯೇ ಉತ್ತರವಿದೆ. ಹೇಗೆಂದರೆ,–ಭಾಗವತಧರ್ಮನಿರತರು (ಪರಮಹಂಸರು) (ಅಧಿಷ್ಠಾನ) ತಾರತಮ್ಯಕ್ಕೆ ಅನುಗುಣವಾಗಿ ಭಗವಂತನ ಅನಂತನಾಮಗಳಲ್ಲಿ ಸಮುಚಿತವಾದ (ಭಗವಂತನ) ನಾಮ (ಗಾವಃ) ಗಳನ್ನೇ ಪೂಜಿಸುವರು. ಭಗವಂತನು ಸರ್ವವ್ಯಾಪ್ತನೆಂಬುದು ಅವರ ನಂಬಿಗೆಯಿದ್ದರೂಕೂಡ, ಅಧಿಷ್ಠಾನದ ತಾರತಮ್ಯಕ್ಕೆ ಅನುಗುಣವಾಗಿ, ಭಗವಂತನನ್ನು ಅವರು ಆ ಅಧಿಷ್ಠಾನ (ನೆಲಿಸಿದಸ್ಥಾನ)ದಲ್ಲಿ ಪೂಜಿಸುವರು–ಎಂಬುದನ್ನು ಎಲ್ಲರೂ ಒಪ್ಪುವರು. ಶಾಸ್ತ್ರದಲ್ಲಿಯೂ ಹೀಗೆಯೆ ಹೇಳಿರುವರು–'ವಿಷ್ಣವೆಸ್ವಾಹಾ'–ಎಂದು ಭಗವನ್ನಾಮದಿಂದ ಅರ್ಪಿಸದೆ, 'ಪ್ರಾಣಾಯ ಸ್ವಾಹಾ' ಎಂಬ ಅನ್ಯರನಾಮದಿಂದ ಅರ್ಪಿಸಿದ್ದನ್ನು ಭಗವಂತನು ಹೇಗೆ ಸ್ವಿಕರಿಸುವನು? – ಎಂಬುದು ಇನ್ನೊಂದು ಆಕ್ಷೇಪ.

'ಪಾರಮಹಂಸ್ಯವರ್ಯಗು:'–ಎಂಬ ಪದದಲ್ಲಿ ಈ ಆಕ್ಷೇಪಕ್ಕೂ ಹೀಗೆ ಉತ್ತರವಿದೆ:– ಪರಮಹಂಸರು (ಭಾಗವತರು) ಆರಾಧಿಸುವ ಭಗವನ್ನಾಮಗಳು ಹೋಮಹವನಗಳಿಗಾಗಿ ಉಪಯೋಗಿಸಲ್ಪಡುವ– (ಪ್ರಾಣಾಯಸ್ವಾಹಾ ಇತ್ಯಾದಿ–ನಾಮಗಳಿಗೂ ಹೊಂದಿಕೊಳ್ಳುವವು. 'ಪ್ರಾಣಾಯ–ಸ್ವಾಹಾ'–ಎಂಬಲ್ಲಿ ಪ್ರಾಣವೆಂಬುದೂ ಭಗವನ್ನಾಮವಾದರೆ, ಅದೊಂದೇ ಸಾಕು. 'ಅಪಾನಾಯ' ಮುಂತಾದವು ಪುನರುಕ್ತಿಯಾಗುವದಿಲ್ಲವೆ? – ಎಂದು ಕೇಳಿದರೆ, ಅದಕ್ಕೆ ಉತ್ತರವಿದು:–

ರೂಪಭೇದವಾಗುವದರಿಂದ, ನಾಮಗಳೂ ಭಿನ್ನವಾಗುವವು. ರೂಪಭೇದದನೇರೆಗೆ ಇವೆಲ್ಲ ನಾಮಗಳು ಭಗವಂತನ ನಾಮಗಳು ಆಗುವದರಿಂದ, ಪುನರುಕ್ತಿಯ ದೋಷವು ಉಂಟಾಗದು.

ಈ ಮಾತನ್ನೂ ಇದೇ ಪದದಲ್ಲಿ ಹೇಳಿದೆ. ಪರಮ ಮುಖ್ಯವೃತ್ತಿಯಿಂದ ಅವು ಭಗವಂತನ ನಾಮಗಳೆನಿಸುವಂತ (ಪಾರಮಹಂಸ್ಯಮರ್ಯಗು:-) ಪರಮ ಭಾಗವತರು ಭಗವಂತನ ಅಂಶರೂಪಗಳನ್ನು ಆರಾಧಿಸುವರು. ಅಂಥ ಅಂಶ ರೂಪಗಳುಳ್ಳಭಗವಂತನು, ಎಂಬರ್ಥ. ಇಲ್ಲಿ 'ಗೋ'- ಶಬ್ದಕ್ಕೆ 'ರೂಪ'- ಎಂಬ ಅರ್ಥವನ್ನು ಕೊಡಲಾಗಿದೆ. ಸೂರ್ಯ ಹಾಗೂ ಆತನ ಕಿರಣಗಳು ಭಿನ್ನವಾಗಿಲ್ಲ ಎರಡರಲ್ಲಿ ಅಭೇದವಿದ್ದರೂ, 'ಈತನು ಸೂರ್ಯ-ಇವು ಕಿರಣಗಳು'- ಎಂದು (ಅನುಕೂಲತೆಗಾಗಿ) ಹೇಳುವದುಂಟು. ಇದೇ ರೀತಿಯಲ್ಲಿ ಭಗವಂತನಿಗೂ ಆತನ ರೂಪಗಳಿಗೂ ಅಭೇದವಿದ್ದರೂ, ವಿಶಿಷ್ಟತೆಯಿಂದ, 'ಭಗವಂತನು ಹಾಗೂ ಭಗವಂತನ ರೂಪಗಳು' - ಎಂದು ವಿಂಗಡಿಸಿ ಹೇಳುವದುಂಟು.

ಇನ್ನೊಂದು ಆಕ್ಷೇಪನೆಂದರೆ,-'ತತ್ವವೇತ್ತರು ಅರ್ಪಿಸುವವನ್ನು ಭಗವಂತನು ಸ್ವೀಕರಿಸುವನು,' ಎಂದು ಹೇಳಿದರೆ, ಉಳಿದವರು ಅರ್ಪಿಸಿದ್ದನ್ನು ಭಗವಂತನು ಸ್ವೀಕರಿಸುವದಿಲ್ಲವೆಂದಾಯಿತು. ಭಗವಂತನ ಸರ್ವಭೋಕ್ತೃತ್ವಕ್ಕೆ ಇದರಿಂದ ಹಾನಿ (ನ್ಯೂನತೆ) ಉಂಟಾಗುವದಿಲ್ಲವೆ? - ಎಂಬುದು ಆಕ್ಷೇಪ. ಈ ಆಕ್ಷೇಪಕ್ಕೆ ಉತ್ತ ರವೂ ಇದೇ ಪದದಲ್ಲಿ ಇದೆ - 'ಪಾರಮಹಂಸ್ಯಾಃ', - ಎಂದರೆ ಪರಮಭಾಗವತ ರಿಂದ ಅರ್ಪಿಸಲ್ಪಟ್ಟ ತುಲಸೀಪತ್ರ-ಪುಷ್ಪ-ಜಲ ಮುಂತಾದ ವಸ್ತುಗಳನ್ನು (ವರ್ಯ) ಸ್ವೀಕರಿಸುವಂಥ ಭಗವಂತನು,-ಎಂಬರ್ಥ. ಈ ಮಾತಿನ ಮರ್ಮಿತಾ ರ್ಥವು (ಇಂಗಿತವು) ಹೀಗಿರುವದು: ಭಗವಂತನು ಭಕ್ತಿಯಿಂದಲೆ ಸಂತುಷ್ಟನಾ ಗುವನು, ಎಂಬುದು ನಿರ್ಣೀತವಾದಮಾತು. ಅದರಂತೆಯೇ, ತತ್ವವೇತ್ತರಿಂದ ಅರ್ಪಿ ತವಾದುದನ್ನೇ ಭಗವಂತನು ಸ್ವೀಕರಿಸುವನೆಂಬುದು ಅಷ್ಟೇಸರಿಯಾದ ಮಾತು. ಏಕೆಂದರೆ, ತತ್ವವೇತ್ತರು (ಭಾಗವತಧರ್ಮದಂತೆ ನಡೆಯುವರು), ಪತ್ರ ಪುಷ್ಪ ಹಾಲು, ನೀರು-ಯಾವುದನ್ನು ಕೊಟ್ಟರೂ, ಭಗವಂತನಿಗೆ ಭಕ್ತಿಪೂರ್ವಕವಾಗಿ ಸಮರ್ಪಿಸುವರು. ಆದುದರಿಂದ ಭಕ್ತಿಪೂರ್ವಕವಾಗಿ ಅವರು ಅರ್ಪಿಸಿದ್ದನ್ನು ಭಗವಂತನು ಆದರಪೂರ್ವಕವಾಗಿ ಸ್ವೀಕರಿಸುವನು. ಈ ಮಾತು ಶಾಸ್ತ್ರಪ್ರ ಮಾಣಗಳಿಂದ ಸಿದ್ಧವಾದುದೆಂಬುದನ್ನು. 'ಖಲು' ಶಬ್ದವು ಸೂಚಿಸುವದು.- ಇದಕ್ಕೆ ಕಾರಣವನ್ನು ಈ ರೀತಿಯಾಗಿ ಹೇಳುವರು. ತತ್ವವೇತ್ತರಿಂದ ಪರಮಾ ತ್ಮನು ಸ್ವೀಕರಿಸುವನು,- ಎಂದು ಹೇಳಿದಮಾತ್ರಕ್ಕೆ, ಭಗವಂತನ ಸರ್ವಭೊ ಕ್ತೃತ್ವಕ್ಕೆ ಬಾಧೆ ಉಂಟಾಗುವದಿಲ್ಲ. ಏಕೆಂದರೆ, ಉಳಿದವರು ಅರ್ಪಿಸಿದ್ದನ್ನಾದರೂ ಭಗವಂತನು ಸ್ವೀಕರಿಸುವನೆಂಬ ಮಾತನ್ನು ಒಪ್ಪಿಕೊಂಡಿದೆ.

ಭಗವಂತನು ತತ್ತ್ವವೇತ್ತರು ಕೊಟ್ಟಿದ್ದನ್ನೇ ಮಾತ್ರ ಭಗವಂತನು ಸ್ವೀಕರಿಸುವ ನೆಂದುಹೇಳಿಲ್ಲ, ಉಳಿದವರನ್ನು ಪೂರ್ಣವಾಗಿ ಅಲ್ಲಗಳೆದಿಲ್ಲ. ಆದರೆ ಭಗವಂತನ ಸ್ವೀಕಾರದಲ್ಲಿ ಮಾತ್ರ ವ್ಯತ್ಯಾಸವಿದೆ, ವೈಶಿಷ್ಟ್ಯವಿದೆ, ತತ್ತ್ವವೇತ್ತರು ಅರ್ಪಿಸಿದ್ದನ್ನು ಭಗವಂತನು ವಿಶೇಷ ಆದರಪೂರ್ವಕವಾಗಿ ಸ್ವೀಕರಿಸುವನೆಂಬುದೇ ಆಂತರಿಕ ಅರ್ಥ; ಉಳಿದವರು ಅರ್ಪಿಸಿದ್ದನ್ನು ಸ್ವೀಕರಿಸುವದಿಲ್ಲ, ಎಂಬುದು ಅಭಿಪ್ರಾಯವಲ್ಲ.

ತತ್ತ್ವಕೋವಿದತ್ವವೆಂದರೇನು?–ಎಂಬ ಪ್ರಶ್ನೆಗೂ ಇದೇ ಪದದಲ್ಲಿ ಉತ್ತರವಿದೆ ಪರಮಹಂಸರು ಆರಾಧಿಸುವ ನಾಮ ಹಾಗೂ ರೂಪಗಳುಳ್ಳವನು ಭಗವಂತನು ಎಂಬರ್ಥ–ಹೊರಗೆ ಕಾಣುವ ಬ್ರಾಹ್ಮಣಾದಿಗಳಲ್ಲಿ, ಆಂತರಿಕವಾದ ಪ್ರಾಣಾದಿಗಳಲ್ಲಿ ಭಗವಂತನಿಗೆ ನೆಲೆಯಾಗಿರುವ ಎಲ್ಲವಸ್ತು (ಅಧಿಷ್ಠಾನ) ಗಳಲ್ಲಿ, ಆಯಾ ಅಧಿ ಷ್ಠಾನಗಳಿರುವ ಹೆಸರುಗಳಿಂದಲೇ ಭಗವಂತನ ರೂಪಗಳನ್ನು ತತ್ತ್ವಕೋವಿದರು ಕಾಣುವರು, ಭಾವಿಸುವರು–ಹೀಗೆ ಭಾವಿಸುವರೇ ತತ್ತ್ವಕೋವಿದರು.

॥೧೧೭॥ **ಯದ್ಬ್ರಹ್ಮ ನಿತ್ಯಂ ವಿರಜಂ ಸನಾತನಂ**
**ಶ್ರದ್ಧಾತಪೋಮಂಗಲಮೌನಸಂಯಮೈಃ ।**
**ಸಮಾಧಿನಾ ಬಿಭ್ರದಿಹಾರ್ಥಸಿದ್ಧಯೇ**
**ಯತ್ರೇದಮಾದರ್ಶ ಇವಾವಭಾಸತೇ** ॥ ೪-೨೧-೪೧

42

ಪರಬ್ರಹ್ಮನ (ಶ್ರೀಹರಿಯ) ಆರಾಧನೆಮಾಡಿ ಸ್ವತಃ ತಾವು ಪುರುಷಾರ್ಥ ಸಿದ್ಧಿಯನ್ನು ಪಡೆದುಕೊಂಡು, ಪುರುಷಾರ್ಥವನ್ನು ಇನ್ನೂ ಪಡೆಯದವರಿಗೆ ಬ್ರಹ್ಮತ್ವವನ್ನು ಉಪದೇಶ ಮಾಡುವ ಬ್ರಹ್ಮಕುಲದ (ಬ್ರಾಹ್ಮಣಕುಲದ) ಸೇವೆ ಯನ್ನು ಮಾಡತಕ್ಕದ್ದು.–ಎಂಬ ಅಭಿಪ್ರಾಯವನ್ನು ಹೇಳುವರು.

**ಅರ್ಥ:–** ಶ್ರದ್ಧಾ, ತಪಸ್ಸು, (ವರ್ಣಾಶ್ರಮಕ್ಕೆ) ವಿಹಿತವಾದ ಆಚರಣೆ, ಮೌನ, ಸಂಯಮ, ಇತ್ಯಾದಿ (ಯಮನಿಯಮಗಳ ವಿಧಾನದಿಂದ) ಗಳಿಂದ ಜನಿ ಸುವ ಸಮಾಧಿಯ ಪ್ರಭಾವದಿಂದ, ನಿತ್ಯನೂ (ಪಾರತಂತ್ರ್ಯಾದಿ) ದೋಷರಹಿತನೂ ಶಶ್ವದೈಕರೂಪನು, (ಸನಾತನನು), (ಅನಂತಕಲ್ಯಾಣ) ಗುಣಪರಿಪೂರ್ಣನೂ ಆದ ಪರಬ್ರಹ್ಮನನ್ನು (ಶ್ರೀಹರಿಯನ್ನು) ತಮ್ಮ ಹೃದಯದಲ್ಲಿ ನೆಲಿಸುವಂತೆ ಬ್ರಾಹ್ಮಣ ಕುಲವು ಮಾಡುವದು. ಅಂಥ ಬ್ರಹ್ಮಜ್ಞಾನಿಗಳಿಗೆ ಪರಬ್ರಹ್ಮನು ಕನ್ನಡಿಯಲ್ಲಿಯ ಪ್ರತಿಬಿಂಬದಂತೆ ನಿಚ್ಚಳವಾಗಿ ಕಾಣುವನು. ‘ಪ್ರಶಸ್ತಸ್ಯಾಚರಣಂ ನಿತ್ಯಂ ಅಪ್ರ ಶಸ್ತಸ್ಯವರ್ಜನಂ–’ ವಿಹಿತ ಕರ್ಮವನ್ನು ಆಚರಿಸುವದು, ನಿಷಿದ್ಧಕರ್ಮವನ್ನು ಬಿಡುವದು, –ಇದೇ ‘ ಮಂಗಲ ’.

– ಲೌಕಿಕ ಹಾಗೂ ಅನವಶ್ಯಕವಾದ ಮಾತನ್ನಾಡದಿರುವದೇ – ಮೌನ.

– ಇಂದ್ರಿಯ ನಿಗ್ರಹವೇ ಸಂಯಮ.

ಶ್ರೀಹರಿ ಸನಕಾದಿಗಳಿಗೆ

೧೧॥ **ಯತ್ಸೇವಯಾ ಚರಣಪದ್ಮಪವಿತ್ರರೇಣುಂ**
**ಸದ್ಯಃ ಕ್ಷತಾಖಿಲಮಲಂ ಪ್ರತಿಲಬ್ಧಶೀಲಮ್ ।**
**ಸೋಽಹಂ ಭವದ್ಭ್ಯ ಉಪಲಬ್ಧಸುತೀರ್ಥಕೀರ್ತಿ-**
**ಶ್ಛಿಂದ್ಯಾಂ ಸ್ವಬಾಹುಮಪಿ ವಃ ಪ್ರತಿಕೂಲವೃತ್ತಿಮ್ ॥ ೩-೧೬-೬**

– ಶ್ರೀಹರಿಯ ದರ್ಶನಕ್ಕೆ ತಮಗೆ ಪ್ರತಿಬಂಧವನ್ನು ಮಾಡಲು, ಜಯ ವಿಜಯರಿಗೆ –(ದ್ವಾರಪಾಲಕರಿಗೆ) ಸನಕಾದಿಗಳು ಶಾಪ ಕೊಡುವರು. ಅವರು ಕೊಟ್ಟ ಶಾಪವು ನ್ಯಾಯವಾದುದೆಂದು ತೋರಿಸಲು ಶ್ರೀಹರಿಯು ಸನಕಾದಿಗಳಿಗೆ ಈ ಮೂರು ಶ್ಲೋಕಗಳಲ್ಲಿ ಬ್ರಾಹ್ಮಣರ ಮಹಿಮೆಯನ್ನು ಎತ್ತಿ ಹೊಗಳುವನು.

ಭಗವದ್ಭಕ್ತರು ತತ್ವಕೋವಿದರಾದ ಮಹಾತ್ಮರನ್ನು ಆದರಿಸುವಲ್ಲಿ ಏನೂ ವಿಶೇಷವಿಲ್ಲ. ಪ್ರತ್ಯಕ್ಷ ಭಗವಂತನೇ ಅವರನ್ನು ಗೌರವಿಸುವನು. ಅವರ ಮಹಿಮೆಯನ್ನು ಅಧಿಕವಾಗಿ ಎತ್ತಿ ತೋರಿಸುವದು ಭಗವಂತನ ಪ್ರೀತಿಯನ್ನು ಉಳಿದವರಿಗಿಂತಲೂ ಅವರು ಹೆಚ್ಚಾಗಿ ಪಡೆದವರು –ಎಂಬುದು ಇಲ್ಲಿ ಸೂಚಿತವಾಗಿದೆ. ಈ ಹೆಚ್ಚಿನ ಅನುಗ್ರಹಕ್ಕೆ ಕಾರಣವೆಂದರೆ, ಈ ಮಹಾತ್ಮರು ಭಗವಂತನ ಕೀರ್ತಿಯನ್ನು, ಅವನ ಲೀಲಾದಿ ಗುಣ ಕ್ರಿಯೆಗಳನ್ನು ಜನರಲ್ಲಿ ಪ್ರಸಾರ ಮಾಡುವರು.

**ಅರ್ಥ:**– ಕೇಳುವವರ ಕಿವಿಗೆ ಅಮೃತಪಾನ ಮಾಡಿದಷ್ಟು ಆನಂದವನ್ನು ಉಂಟುಮಾಡುವ (ಮುಪ್ಪು–ಮರಣರಹಿತವಾದ ಮುಕ್ತಿಯನ್ನು ತಂದುಕೊಡುವ), ಯಾವ ದೋಷವೂ ಇಲ್ಲದೆ ಪರಿಶುದ್ಧವಾಗಿರುವ, ಭಗವಂತನ ಗುಣ–ಕೃತಿಗಳ ಶ್ರವಣವೆಂಬ ಪೂರ್ಣ ಸ್ನಾನವೂ ಚಾಂಡಾಲನನ್ನು ಮೊದಲು ಮಾಡಿಕೊಂಡು ಸಕಲ ಜನರನ್ನೂ ಪವಿತ್ರರನ್ನಾಗಿ ಮಾಡುವದು. ಈ ಬಗೆಯ ಮಹಿಮೆಯುಳ್ಳ ವೈಕುಂಠಕ್ಕೆ ಸ್ವಾಮಿಯಾದ ನಾನೂ ಕೂಡ ನಿಮ್ಮಿಂದಲೆ ( ತತ್ವಕೋವಿದರಾದ ಮಹಾತ್ಮರಿಂದಲೆ) ನನ್ನ ಪವಿತ್ರವಾದ ಕೀರ್ತಿಯು ಜನರಲ್ಲಿ ಪ್ರಚಾರಗೊಳ್ಳುವದರಿಂದ, – (ಈ ಬಗೆಯ ಸೇವೆಯಿಂದ ನನ್ನ ಪರಮಾನುಗ್ರಹಕ್ಕೆ ಪಾತ್ರರಾದ) ನಿಮ್ಮ ವಿಷಯದಲ್ಲಿ ವಿರುದ್ಧವಾಗಿ ನಡೆಯುವ (ನನ್ನ ಬಾಹುಗಳಿಂದ ಜನಿಸಿದ) ಕ್ಷತ್ರಿಯ ರಾಜರನ್ನು ಕೂಡ ತುಂಡರಿಸಿ ಬಿಡುವೆನು. (ಬ್ರಾಹ್ಮಣರಿಗೆ ವಿರೋಧಿಗಳಾದ ಸತ್ತಾಧಾರಿಗಳಾದ ರಾಜರಿಗೇನೆ ಈ ದುರ್ಗತಿಯಾಗುತ್ತಿರಲು, ಉಳಿದವರ ಬಗ್ಗೆ ಹೇಳಬೇಕಿಲ್ಲ.)

॥೨೧೯॥ ಯೋ ಬ್ರಾಹ್ಮಣಾನ್ಮಯಿ ಧಿಯಾಽಕ್ಷಿಪತೋಽರ್ಚಯಂತಿ
ತುಷ್ಯದ್ಧೃದಃ ಸ್ಮಿತಸುಧೋಕ್ಷಿತಪದ್ಮವಕ್ತ್ರಾಃ ।
ವಾಣ್ಯಾನುರಾಗಕಲಯಾತ್ಮಜವದ್ಗೃಣಂತಃ
ಸಂಬೋಧಯಂತ್ಯಹಮಿವಾಹಮುಪಾಕೃತಸ್ತೈಃ ೩-೧೬-೧೧

– ತನ್ನ ಕೀರ್ತಿಯನ್ನು ಪ್ರಚುರಗೊಳಿಸುವ ಸೇವಾರೂಪ ಕಾರ್ಯವನ್ನು ಮಾಡುವದಕ್ಕಾಗಿ ಬ್ರಾಹ್ಮಣರ ಮೇಲೆ ಶ್ರೀಹರಿಯ ಅನುಗ್ರಹವು,– ಸೇವೆ ಮಾಡುವ ಉಳಿದ ಜನರ ಮೇಲಿನ ಅನುಗ್ರಹದಂತೆ,, – ಇರುವದಿಲ್ಲ. ಅದಕ್ಕಿಂತಲೂ ಬ್ರಾಹ್ಮಣರ ಮೇಲಿನ ಅನುಗ್ರಹವು ಮಿಗಿಲಾದುದು. ಏಕೆಂದರೆ, ಕದಾಚಿತ್ ಬ್ರಾಹ್ಮಣರು ತನಗೆ ವಿರುದ್ಧವಾಗಿ ಆಚರಿಸಿದರೂ (ಆಚರಿಸಿದಂತೆ ಮೇಲೆ ಮೇಲೆ ತೋರಿದರೂ ಕೂಡ) (ತಾನು ವಿಧಿಸಿದ ನಿಯಮಗಳನ್ನು ಮೀರಿ ನಡೆದರೂ) ಅವರ ಬಗ್ಗೆ ಭಗವಂತನ ಅನುಗ್ರಹವು ಕಿಂಚಿತ್ತೂ ಕಡಿಮೆಯಾಗದು. ಲಕ್ಷ್ಮೀ ನಿವಾಸವಾದ ತನ್ನ ಹೃದಯಕ್ಕೆ ಭೃಗು ಋಷಿಗಳು ಕಾಲಿನಿಂದ ಒದ್ದರೂ ಕೂಡ, ಭಗವಂತನು ಅವರನ್ನು ಪ್ರೀತಿಯಿಂದ ಉಪಚರಿಸಿದನು. – ಬ್ರಾಹ್ಮಣರ ವಿಷಯದಲ್ಲಿ ಹೇಗೆ ನಡೆದುಕೊಳ್ಳಬೇಕೆಂಬ ನೀತಿನಿಯಮವನ್ನು ಸ್ವತಃ ಆಚರಿಸಿ ತೋರಿಸಿರುವನು.

**ಅರ್ಥ**:– ಬ್ರಾಹ್ಮಣರು ತಮ್ಮ ವಿಷಯದಲ್ಲಿ ಎಲ್ಲ ರೀತಿಯಿಂದ ಬುದ್ಧಿಪೂರ್ವಕ ಪ್ರತಿಕೂಲರಾಗಿ ನಡೆದುಕೊಳ್ಳುತ್ತಿದ್ದರೂ (ತಮ್ಮನ್ನು ಹೀಯಾಳಿಸುತ್ತಿದ್ದರೂ), ತಾವು ಮಾತ್ರ ಸಂತೋಷಭರಿತ ಹೃದಯದಿಂದ (ಅಕಲುಷಿತವಾದ ಮನಸ್ಸಿನಿಂದ), ಮುಗುಳುನಗೆಯೆಂಬ ಅಮೃತ ಸೇಚನದಿಂದ, ಮಿನುಗುವ ಮುಖದಿಂದ (ಶಾಂತ ಮುಖ ಮುದ್ರೆಯಿಂದ), –(ತಮ್ಮನ್ನು ನಿಂದಿಸುತ್ತಿರುವ –ತಮಗೆ ವಿರುದ್ಧವಾಗಿ ನಡೆಯುತ್ತಿರುವ ಬ್ರಾಹ್ಮಣರಿಗೂ ಕೂಡ) ಪ್ರೀತಿಯಿಂದ ಯುಕ್ತವಾದ ಮಾತುಗಳನ್ನಾಡಬೇಕು. ಬ್ರಾಹ್ಮಣರಲ್ಲಿ ನನ್ನ ಸನ್ನಿಧಾನವು ವಿಶೇಷವಾದುದೆಂಬ ಭಾವನೆಯಿಂದಲೆ, ಬ್ರಾಹ್ಮಣರ ವಿಷಯದಲ್ಲಿ ಅವರು ಹೀಗೆ ನಡೆದುಕೊಳ್ಳಬೇಕು. ಮಕ್ಕಳಿಗೆ ಹೇಳುವಂತೆಯೆ, ಅವರ ಕೂಡ ಮಮತೆಯ ಮಾತುಗಳನ್ನಾಡಬೇಕು. ಹೀಗೆ ನಡೆದುಕೊಳ್ಳುವ ಜನರು ನೇರವಾಗಿ ನನ್ನ ಸೇವೆ-ಪೂಜೆಗಳಿಂದ ಲಭಿಸುವ ಅನುಗ್ರಹವನ್ನೇ ಅವರು ಪಡೆಯುವರು.)

–‘ ಮಮತೆಯ ಮಾತುಗಳು ’, – ಮಗುವಿಗೆ ಆತನ ತಾಯಿಯು ಹೇಳುವಂತಿರಬೇಕು. ತಮ್ಮ ಮನೋಲಹರಿಯಲ್ಲಿ ಮಕ್ಕಳು ತಮ್ಮ ತಾಯಿಗೆ ಒಮ್ಮೊಮ್ಮೆ

ಪ್ರತಿಕೂಲರಾಗಿ ನಡೆದುಕೊಳ್ಳುವದುಂಟು. ತಾಯಿಯು ಮಾತನ್ನು ಲೆಕ್ಕಿಸುವದಿಲ್ಲ ಆಗ್ಗೆ ತಾಯಿಯಾದವಳ ಮನಸ್ಸು ಕೆರಳುವದಿಲ್ಲ, ಪ್ರೀತಿ ತುಂಬಿದ ಹೃದಯದಿಂದಲೆ ಅವಳು ಮಗುವನ್ನು ಮಮತೆಯ ಮಾತುಗಳಿಂದ ಸಂತೈಸುವಳು. ಸಂತೋಷಗೊಳಿಸುವಳು. ಮಗು ತಿಳಿಯದೆ ಹಟ ಮಾಡುವದು. ಕರೆದರೆ ವೇಳೆಗೆ ಊಟಕ್ಕೆ ಬರುವದಿಲ್ಲ. ಹೀಗಿದ್ದರೂ ವಾತ್ಸಲ್ಯಮಯಿಯಾದ ತಾಯಿಯು ಮಗುವಿಗೆ,– 'ಏಳಪ್ಪಾ, ಜಾಣ ಮಗು ನೀನು; ನನ್ನಪ್ಪಾ ನೀನು, ನನ್ನಮ್ಮಾ ನೀನು! ಬಾ ಅಪ್ಪಾ! ನಿನಗೆ ಬಹಳೇ ಸೇರುವದನ್ನು ಕೊಡುವೆ. ಹಸಿದಿರುವೆ, ಊಟ ಮಾಡು ಅನಂತರ ನಿನಗೆ ಮೆಚ್ಚಿನ ಆಟದ ಒಡವೆಗಾಗಿ ದುಡ್ಡು ಕೊಡುತ್ತೇನೆ' ತಮ್ಮನ್ನು ತುಚ್ಛವಾಗಿ ಕಾಣುವ ಬ್ರಾಹ್ಮಣರ ಪೂಜೆ ಶ್ರೀಹರಿಯ ಪೂಜೆಯಿದ್ದಂತೆ, ಅವರನ್ನು ಪ್ರೀತರಾಗಿ ಮಾಡುವದೇ ಶ್ರೀಹರಿಯ ಅನುಗ್ರಹವನ್ನು ಪಡೆದಂತೆ. 'ಅಹಮಿವ' ನಾನು ಕೂಡ ಇದೇ ರೀತಿಯಲ್ಲಿ ನಡೆದುಕೊಳ್ಳುವೆ'– ಭಗವಂತನ ಈ ಬಗೆಯ ಕೃತಿಯಿಂದಲೇ, ಭೃಗುಮುನಿಗಳು ಭಗವಂತನ–ಶ್ರೀವಿಷ್ಣುವಿನ –ಸರ್ವೋತ್ತಮತ್ವವನ್ನು ತಾವು ಮನದಂದು, ಸರ್ವತ್ರ ಪ್ರಚುರಗೊಳಿಸಿದರು. ಬೇರೆ ಯಾವ ದೇವತೆಗಳಲ್ಲಿಯೂ ಕಾಣಬಾರದ ಭಗವಂತನ ಈ ಬಗೆಯ ಗುಣ ಕೃತಿಗಳು ಅನುಪಮ – ಅಸಾಧಾರಣವಾದವು. ಬ್ರಾಹ್ಮಣರ ಬಗ್ಗೆ ಭಗವಂತನಲ್ಲಿ ಅಪಾರವಾದ ಈ ಪ್ರೀತಿ – ಅನುಗ್ರಹಗಳಿರುವದರಿಂದಲೆ, 'ಬ್ರಹ್ಮಣ್ಯದೇವ' ನೆಂಬುದು ಆತನ ಹೆಸರಾಂತ ಬಿರುದು. ಈ ಭಾವನೆಯಿಂದಲೆ, ಭಗವಂತನು ಕುಪಿತರಾದ ಭೃಗು ಮುನಿಯನ್ನು ಉಪಚರಿಸಿದನು. ಜಯ–ವಿಜಯರಿಗೆ ಸನತ್ ಕುಮಾರರು ಕೊಟ್ಟ ಶಾಪವನ್ನು ಸಮರ್ಥಿಸಿದನು. ಯಾದವ ಕುಲದ ನಾಶಕ್ಕೆ ಬ್ರಾಹ್ಮಣರು ಕೊಟ್ಟ ಶಾಪವನ್ನು ಸರ್ವಶಕ್ತನಿದ್ದರೂ ತೆಗೆದು ಹಾಕಲಿಲ್ಲ. ಇಷ್ಟು ಮಾತ್ರವಲ್ಲದೆ, ಶಾಪ ನೀಡಿದ ಮುನಿಗಳನ್ನೇ ತನ್ನ ಮೃದು ಮಧುರ ಮಾತುಗಳಿಂದ ಸಂತೈಸಿದನು.

– ಬ್ರಾಹ್ಮಣರನ್ನು ಅವಮಾನಗೊಳಿಸುವದರಿಂದ ಎಷ್ಟು ಕೆಡಕಾಗುವದೆಂಬುದನ್ನು ಕೆಳಗಿನ ಭಾಗವತ ಶ್ಲೋಕಗಳಲ್ಲಿ ಎತ್ತಿ ತೋರಿಸಿರುವರು :–

" ತದ್ವಃ ಪ್ರಸಾದಯಾಮ್ಯದ್ಯ ಬ್ರಹ್ಮದೈವಂ ಪರಂ ಹಿ ಮೆ| ತದ್ಧ್ಯೇ ಪಾತ್ಮಕೃತಂ ಮನ್ಯೇಯತ್ ಸ್ವಪುಂಭಿರಸತ್ ಕೃತಮ್||(೪) – ದ್ವಾರಪಾಲಕರಿಗೆ ಶಾಪವನ್ನಿತ್ತ ಸನಕಾದಿಗಳಿಗೆ ಭಗವಂತನು ಹೇಳಿದ ಮಾತುಗಳಿವು:–

**ಅರ್ಥ:**– 'ಬ್ರಾಹ್ಮಣರು ನನಗೆ ಶ್ರೇಷ್ಠರಾದ ದೈವತವಾದುದರಿಂದ, (ನನ್ನ ಸೇವಕರು ಗೈದ ಅಪರಾಧಕ್ಕಾಗಿ ನಾನು ನಿಮ್ಮ ಕ್ಷಮೆ ಬೇಡುವೆ. (ನೀವು ಪ್ರಸನ್ನ

ರಾಗಬೇಕೆಂದು ಬಯುಸುವೆ) ಏಕೆಂದರೆ, ನನ್ನ ಸೇವಕರು ಮಾಡಿದ ಅಪರಾಧವು ನಾನು ಮಾಡಿದ ತಪ್ಪೆಂತಲೇ ನಾನು ತಿಳಿಯುವೆ. ತನ್ನ ಸೇವಕರು ಬ್ರಾಹ್ಮಣರಿಗೆ ಮಾಡಿದ ತಪ್ಪಿಗೆ ಭಗವಂತನ ಕ್ಷಮಾಯಾಚನೆ ಇದು –

" ಯುನ್ನಾಮಾನಿ ಚಗೃಹ್ಯತಿಲೊಕೊ ಭೃತ್ಯೆ ಕೃತಾಗಸಿ |
ಸೋಽಸಾಧುವಾದ ಸ್ತತ್ ಕೀರ್ತಿಂ ಹಂತಿ ತ್ವಚಮಿವಾಮಯಃ || (೫)
ಭಾಗವತಸ್ಕಂಧ ೩–ಅಧ್ಯಾಯ (೧೭)

**ಅರ್ಥ** :– ಸೇವಕರು ತಪ್ಪು ಮಾಡಿದ್ದರೂ, ಆತನ ಒಡೆಯನ ಹೆಸರಿನಿಂದಲೇ, ಜನರು ಆ ತಪ್ಪನ್ನು ಹೇಳುವರು. ಒಡೆಯನಿಗೆ ಬರುವ ಈ ಅಪವಾಧವು ಚರ್ಮರೋಗವು ದೇಹವನ್ನೇ ಅಂದಗೆಡಿಸುವಂತೆ, – ಆತನ ಕೀರ್ತಿಯನ್ನು ನಷ್ಟಗೊಳಿಸುವದು.

– ಯಾರಾದರೂ ಆಗಲಿ, **ಯಾವ** ಸಂದರ್ಭದಲ್ಲಿಯೇ ಆಗಲಿ, – ಬ್ರಾಹ್ಮಣರಿಗೆ ಮಾಡುವ ಅವಮಾನ ಅಪರಾಧಗಳನ್ನು ನಾನೆಂದಿಗೂ ಸಹಿಸುವದಿಲ್ಲ. ಅಂಥವರಿಗೆ ನನ್ನ ಶಾಸನವು ತಪ್ಪಿದ್ದಲ್ಲ. ಈ ಮಾತನ್ನು ಕೆಳಗಿನ ಶ್ಲೋಕಗಳಲ್ಲಿ ಭಗವಂತನು ಸೂಚಿಸಿರುವನು.–

"ವಿಪ್ರಂ ಕೃತಾಗಸಮಪಿ ನೈವ ದ್ರುಹ್ಯತ ಮಾಮಕಾಃ| ಘ್ನಂತಂ, ಬಹುಶಪಂತಂವಾ ನಮಸ್ಕುರುತ ನಿತ್ಯಶಃ" (,)–ಅರ್ಥ:– ಜನರೆ! ಬ್ರಾಹ್ಮಣರು ಅಕಾರ್ಯವನ್ನು ಮಾಡಿರಬಹುದು; ಹಿಂಸಾ ಕೃತ್ಯದಲ್ಲಿ ತೊಡಗಿರಬಹುದು. ನಿಮ್ಮನ್ನು ಶಪಿಸುತ್ತಿರಬಹುದು. ಹೀಗಿದ್ದರೂ ಬ್ರಾಹ್ಮಣರಿಗೆ ಪ್ರತಿಯಾಗಿ ಅಪಕಾರವನ್ನು ನೀವು ಮಾಡಬೇಡಿರಿ. ಸರ್ವಕಾಲದಲ್ಲಿಯೂ ಆವರನ್ನು ಆದರಿಸಿರಿ. ವಂದಿಸಿರಿ–
–"ಯಥಾಹಂ ಪ್ರಣಮೆ ವಿಪ್ರಾನ್ ಸರ್ವಕಾಲಂ ಸಮಾಹಿತಃ| ತಥಾ ನಮತ ಯುಯಂಚ ಯೋಽನ್ಯಥಾ ಮೆ ಸದಂಡಭಾಕ್ ||(೨).

ಅರ್ಥ:– ಬ್ರಾಹ್ಮಣರಿಗೆ ನಾನು ಯಾವಾಗಲೂ ಆಸ್ಥೆ–ಆದರಗಳಿಂದ ನಮಸ್ಕರಿಸುವೆ. ನನ್ನಂತೆಯೇ ನೀವೆಲ್ಲರೂ ನಡೆದುಕೊಳ್ಳಬೇಕು. ಹೀಗೆ ಮಾಡದಿದ್ದರೆ ನನ್ನ ಶಿಕ್ಷೆ ದಂಡನೆಗೆ ನೀವು ಪಾತ್ರರಾಗುವಿರಿ.

'ಪುನಃ ಸತ್ರಮಾಸಾದ್ಯ ಮುನೀನಾಂ ಬ್ರಹ್ಮವಾದಿನಾಂ| ಸ್ವಾನುಭೂತಮಶೇಕ್ಷ್ಣೇಣರಾಜನ್ ಭೃಗವರ್ಣಯತ್|| ತನ್ನಿಶಮ್ಯಾಥ ಮುನಯಃ ವಿಸ್ಮಿತಾಃ ಮುಕ್ತಸಂಶಯಾಃ | ಭೂಯಃ ಸಂಬ್ರದ್ಧದು: ವಿಷ್ಣುಂ ಯತಃ ಶಾಂತಿಃ ಯಂತೊಽಭಯಂ' || ೧೦–೮೩–೮೫–೮೬||

ದೇವತೆಗಳಲ್ಲಿ ಸರ್ವೋತ್ತಮನಾದವನನ್ನು ಕಂಡು ಹಿಡಿಯಲು ಉಳಿದ ಋಷಿಗಳಿಂದ ಪ್ರೇಷಿತನಾದ ಭೃಗುಮುನಿಯು–ಉಳಿದ ದೇವತೆಗಳ ವಿಷಯದಲ್ಲಿ ತನಗೆ ಒದಗಿದ ಅನುಭವವನ್ನು ತಾನು ಕಂಡುಕೊಂಡ ಶ್ರೀಹರಿಯ ಸರ್ವಶ್ರೇಷ್ಠತ್ವವನ್ನು ಮಹಾಯಾಗದಲ್ಲಿ ಸಮ್ಮಿಲಿತರಾದ ಋಷಿಗಳಿಗೆಲ್ಲ ಅರುಹಿದನು. ಆತನ ಮಾತು ಕೇಳಿ ಋಷಿಗಳೆಲ್ಲ ಬೆರಗಾದರು. (ಸರ್ವೋತ್ತಮನಾದ ದೈವತವು ಯಾವುದು? ಎಂಬ ಬಗ್ಗೆ) ಅವರ ಮನಸ್ಸಿನಲ್ಲಿ ಮೂಡಿದ ಸಂದೇಹದ ನಿವಾರಣೆ ಆಯಿತು. ಶಾಶ್ವತ ಶಾಂತಿರೂಪವಾದ ಮೋಕ್ಷವನ್ನು ಕೊಡುವವನು ಹಾಗೂ ಜನನ–ಮರಣ ರೂಪವಾದ ಸಂಸಾರದ ಭಯವನ್ನು ನಿವಾರಿಸುವವನು,–ಶ್ರೀವಿಷ್ಣುವೇ ಆಗಿರುವನೆಂಬುದು ಋಷಿಗಳಿಗೆಲ್ಲ ಪೂರ್ಣವಾಗಿ ಮನವರಿಕೆ ಆಯಿತು. ಶ್ರೀವಿಷ್ಣುವೇ ಸರ್ವೋತ್ತಮನೆಂಬ ಜ್ಞಾನ–ಶ್ರದ್ಧೆಗಳು ಸುದೃಢವಾದವು.

॥೧೨೦॥ **ತಸ್ಯಾವನಿಜ್ಯ ಚರಣೌ ತದಪಃ ಸ್ವಮೂರ್ಧ್ನಾ** ನಾರದರ ಪಾ
**ಬಿಭ್ರಜ್ಜಗದ್ಗುರುತಮೋಽಪಿ ಸತಾಂ ಪತಿರ್ಹಿ ।** ಪ್ರಕ್ಷಾಲನೆ
**ಬ್ರಹ್ಮಣ್ಯದೇವ ಇತಿ ಯದ್ಗುಣನಾಮ ಯುಕ್ತಂ**
**ತಸ್ಯೈವ ಯಚ್ಚರಣಶೌಚಮಶೇಷತೀರ್ಥಂ** ॥ ೧೦-೭೭-೧೮

69 - 15

ಬ್ರಾಹ್ಮಣರು ಭಗವಂತನಿಂದಲೂ ಮನ್ನಣೆ ಪಡೆದವರು–ಎಂಬಮಾತು, ಇದುವರೆಗೆ ಹೇಳಿದ ವಿವರಣೆಯಿಂದ ಸ್ಪಷ್ಟವಾಗುತ್ತಿದೆ. ಇದರಿಂದ ಬ್ರಾಹ್ಮಣರು ಭಗವಂತನಿಗಿಂತಲೂ ಶ್ರೇಷ್ಠರೆಂತಲ್ಲ. ಆದರೆ ಗುರು ತನ್ನ ಶಿಷ್ಯರನ್ನು ಹೊಗಳುವದರಿಂದ, ಶಿಷ್ಯರ ಕೀರ್ತಿಯು ಜಗತ್ತಿನಲ್ಲಿ ಬೆಳಗುವದು,–ಎಂಬರೀತಿಯಲ್ಲಿ ಭಗವಂತನು ಬ್ರಾಹ್ಮಣರ ಇಷ್ಟೊಂದು ಪ್ರಶಂಸೆ ಮಾಡಿರುವನು. ಇದಲ್ಲದೆ, ಜಗತ್ತಿಗೇ ಜ್ಞಾನದಾಯಕ ಗುರುಗಳಾದ ಬ್ರಹ್ಮರುದ್ರಾದಿ ದೇವತೆಗಳಿಗೂ ಜ್ಞಾನೋಪದೇಶಕ ಗುರುವಾಗಿರುವನು; ತನ್ನ ಪಾದೋದಕ (ಗಂಗೆಯ) ಸ್ಪರ್ಶಮಾತ್ರದಿಂದಲೆ ಸಕಲ ಲೋಕಗಳನ್ನು ಪಾವನಗೊಳಿಸುವನು–ಈ ಬಗೆಯ ಮಹಿಮೆಯುಳ್ಳ ಭಗವಂತನು ಬ್ರಾಹ್ಮಣರಿಗೆ ನಮಸ್ಕರಿಸುವದು, ಬ್ರಾಹ್ಮಣರ ಪಾದೋದಕವನ್ನು ತಲೆಯಲ್ಲಿ ಧರಿಸುವದು –ಬ್ರಾಹ್ಮಣರ ಮೇಲಿನ ತನ್ನ ಪ್ರೀತಿಯ ದ್ಯೋತಕಕ್ಕಾಗಿ. 'ದೇವತೆಗಳಲ್ಲಿ ಶ್ರೀವಿಷ್ಣು ಬ್ರಾಹ್ಮಣರಲ್ಲಿ ವಿಶೇಷಪ್ರೀತಿಯುಳ್ಳವನು'–ಎಂಬ ತನ್ನ ಬಿರುದನ್ನು ಸಾರ್ಥಕಗೊಳಿಸುವದಕ್ಕಾಗಿ–ಶ್ರೀಕೃಷ್ಣನು ಅತಿಥಿಗಳಾದ ನಾರದರ ಪಾದಗಳನ್ನು ತೊಳೆದು ಪಾದೋದಕವನ್ನು ಶಿರಸಾ ಧರಿಸಿದನು–ಎಂದು ಹೇಳಿರುವದು ಇದೇಭಾವನೆಯಿಂದಲೆ.–

**ಅರ್ಥ:**- ತನ್ನ ಪಾದತೊಳೆದ ನೀರಿನಿಂದ ಸಕಲ ಲೋಕಗಳನ್ನೂ ಪಾವನ ಗೊಳಿಸುವವನೂ, ಅಖಿಲ ವಿಶ್ವಕ್ಕೆಲ್ಲ ಅತಿಶ್ರೇಷ್ಠಗುರುವಾಗಿರುವವನೂ, ಸಜ್ಜನ ರಿಗೆ ರಕ್ಷಕನಾಗಿರುವವನೂ) ಸಜ್ಜನರಿಗೆ ಕೀರ್ತಿಪದನೂ) ಆಗಿರುವ ಶ್ರೀಕೃಷ್ಣನು ಯಾರ (ನಾರದರ) ಪಾದವನ್ನು ತೊಳೆದು ಆನೀರನ್ನು ತನ್ನ ತಲೆಯಲ್ಲಿ ಧರಿ ಸಿದನು-ಅಂತೆಯೆ, ಆತನು 'ಬ್ರಹ್ಮಣ್ಯದೇವ'-ಬ್ರಾಹ್ಮಣವತ್ಸಲ-ನೆಂಬ ಗುಣಸೂ ಚಕವಾದ ಹೆಸರನ್ನು ಧರಿಸಿರುವದು ಶ್ರೀಕೃಷ್ಣನಿಗೆ ಮಾತ್ರ ಯಥಾರ್ಥವಾದುದು

ಅಂತೆಯೆ, 'ಬ್ರಹ್ಮಣ್ಯೋ ಬ್ರಾಹ್ಮಣಪ್ರಿಯಃ'- ಎಂಬುದು ಶ್ರೀವಿಷ್ಣುವಿನ ಸಹಸ್ರನಾಮಗಳಲ್ಲಿಯೂ ಸಮಾವೇಶವಾಗಿದೆ.

ಹೀಗೆಹೇಳಿರುವದುಂಟು,- 'ಯಥಾಹುಃ ... ಭವಾನ್ ಇತಿ'. - "ಅನಂತ ಗುಣಪೂರ್ಣನಾದ ಶ್ರೀ ವಿಷ್ಣುವೆ! ನೀನು 'ಆಮ್ನ್ಯಾಯೈಕವೇದ್ಯ'ನು ಸಚ್ಛಾಸ್ತ್ರಗ ಳಿಂದಲೆ ನಿನ್ನಜ್ಞಾನವಾಗುವದು; ನಿನ್ನ ಬಗ್ಗೆ ತಿಳಿದುಕೊಳ್ಳಲು ಸಾಧ್ಯ. ಈ ಬಗೆಯ ಶ್ರೀಹರಿಗೆ ಬ್ರಹ್ಮಕುಲವು ವಂದನೀಯ-ಆದರಣೀಯ - ವಾಗಿರುವದು ನಿನ್ನಕೀರ್ತಿರೂಪವಾದ ಗುಣ - ಕೃತಿಗಳನ್ನು ಸ್ತುತಿಸುವದರಲ್ಲಿಯೆ ಬ್ರಾಹ್ಮಣರಿಗೆ ಸಂತೋಷ-ಅಂತಹ ಬ್ರಾಹ್ಮಣರನ್ನು ಆದರಿಸುವನಾದ ನೀನು ನಿಜವಾಗಿ 'ಬ್ರಹ್ಮಣ್ಯದೇವ' ನಾಗಿರುವಿ.

ಹಿಂದೆ ತನ್ನ ವಿದ್ಯಾಬಂಧುವಾದ, ದೇವದೇವನಾದ ಶ್ರೀಕೃಷ್ಣನನ್ನುಕಾಣಲು ಭಕ್ತಕುಚೇಲನು (ಸುದಾಮನು) ದ್ವಾರಕೆಗೆ ಬರುವನು. ತನ್ನ ಭಕ್ತನು ಬರು ವದನ್ನು ದೂರದಲೆ ಕಂಡು, ಭಕ್ತವತ್ಸಲನಾದ ಶ್ರೀಕೃಷ್ಣನು ಸಿಂಹಾಸನದಿಂದ ಕೆಳಗೆ ಇಳಿದು ಇದಿರುಗೊಳ್ಳುವನು; ತನ್ನ ಆಸನದಲ್ಲಿಯೆ ಆತನಿಗೆ ಸ್ಥಾನವನ್ನಿ ಯುವನು ದೇವೋತ್ತಮನಾದ ತನ್ನನ್ನು ಉಳಿದ ದೇವತೆಗಳೆಲ್ಲ ಪೂಜಿಸುವ ರೀತಿಯಲ್ಲಿಯೆ ಕುಚೇಲನನ್ನು ಸತ್ಕರಿಸುವನು.

||೧೨.|| **ಕಿರಾತಹೂಣಾಂಧ್ರ ಪುಲಿಂದಪುಲ್ಕಸಾ**
**ಆಭೀರಕಂಕಾ ಯವನಾಃ ಖಶಾದಯಃ ।**
**ಯೇಽನ್ಯೇ ಚ ಪಾಪಾ ಯದಪಾಶ್ರಯಾಶ್ರಯಾ-**
**ಚ್ಛುಧ್ಯಂತಿ ತಸ್ಮೈ ಪ್ರಭವಿಷ್ಣವೇ ನಮಃ ॥** ೨-೪-೧೮

'ಯದಾಖಲು ಯದ್ಧಾಸಾನಾಂ...... ಇತ್ಯಾಶಯೇನ ಆಹ':-

**ಅರ್ಥ**:- ಭಗವಂತನ ದಾಸರಾದ ಭಗವದ್ಭಕ್ತರ ಪಾದತೊಳೆದ ನೀರನು ತಲೆಯಲ್ಲಿ ಧರಿಸುವದರಿಂದ ಮಹಾಪಾತಕಿಗಳು ಕೂಡ ಪಾಪದಿಂದ ಬಿಡುಗಡೆ ಹೊಂದಿ ಶುದ್ಧಿಯನ್ನು ಪಡೆಯುವರು. ಹೀಗಿರಲು, ಭಗವಂತನು ಬ್ರಾಹ್ಮಣ ಪಾದೋದಕವನ್ನು ತನ್ನ ಶುದ್ಧಿಗಾಗಿ ಧರಿಸುವನೆಂದು ಭಾವಿಸುವದೂ ಕೂಡ ಹಾಸ್ಯಾಸ್ಪದವಾದುದು-ಎಂದು ಬೇರೆ ಹೇಳಬೇಕಿಲ್ಲ-ಅದನ್ನೇ ಹೀಗೆ ಹೇಳಿರುವರು-ಭಗವಂತನ ಪಾದೋದಕವನ್ನು ಶಿರಸಾಧರಿಸುವರು, ಭಗವಂತನಲ್ಲಿ ನೈಜ ಭಕ್ತಿಯುಳ್ಳವರು-ಯಾವ ಯಾವ ಕುಲದಲ್ಲಿಯೆ ಜನಿಸಿರಲಿ- ಉದ್ಧಾರರಾಗುವರು.

ಅ:- (ಆಥವಾ ಚರಣೆ-ಅಕೃತ್ಯಗಳನ್ನು ಮಾಡಿದ ಪಾಪಿಗಳಾದ) ಕಿರಾತರು ಹೂಣರು, ಆಂಧ್ರರು, ಪುಲಿಂದರು, ಪುಸ್ಕಸರು, ಆಭೀರರು, ಕಂಕರು, ಯವನರು, ಶಕರು, ಮುಂತಾದವರು ಕೂಡ-ಭಗವಂತನ ಪಾದಗಳನ್ನೇ ನಂಬಿದ ಭಗವದ್ಭಕ್ತರನ್ನು ಆಶ್ರಯಿಸುವದರಿಂದ-ಅವರ ಸೇವೆ ಮಾಡುವದರಿಂದ ತಮ್ಮ ಪಾಪದಿಂದ ಬಿಡುಗಡೆ ಹೊಂದಿ ಶುದ್ಧಿಯನ್ನು ಪಡೆಯುವರು, ಪುನೀತರಾಗುವರು ಇಂಥವರು ಹಿಂದಿನ ಜನ್ಮಗಳ ಪಾಪಕೃತ್ಯಗಳಿಂದ ಹೀನಕುಲದಲ್ಲಿ ಜನಿಸಿರಬಹುದು, ಇಲ್ಲವೆ ಇಂದಿನ ಜನ್ಮದಲ್ಲಿಯೆ ಪಾಪಮಾಡಿದ ಸತ್ಕುಲದಲ್ಲಿ ಹುಟ್ಟಿದವರಾಗಿರಬಹುದು. ತನ್ನನ್ನು ಆಶ್ರಯಿಸುವ ಸಕಲರನ್ನೂ ಉದ್ಧರಿಸುವ, ಈ ರೀತಿಯಲ್ಲಿ, ಹೊಸ ಹೊಸ ಭಕ್ತರನ್ನು ಸಂಗ್ರಹಿಸುವ, ಸರ್ವಶ್ರೇಷ್ಠ ಪ್ರಭುವಾದ ಶ್ರೀಹರಿಗೆ-(ಶ್ರೀಶುಕರು ಪ್ರಣಾಗಳನ್ನು ಮಂಗಳಾಚರಣ ರೂಪವಾಗಿ ಅರ್ಪಿಸುವರು)-ನಮಸ್ಕಾರಗಳು.

ಮಹಾಪಾಪಿಗಳನ್ನೂ ಉದ್ಧರಿಸುವ ಮಹಾಮಹಿಮೆಯು ಭಗವದ್ಭಕ್ತರದಾಗಿದೆ. ಅಂತೆಯೆ ಅವರ ಸೇವೆಯನ್ನು ಅಗತ್ಯವಾಗಿ ಮಾಡಬೇಕು. ಭಗವದ್ಭಕ್ತರ ಹಿರಿಮೆಯನ್ನು ಹೇಳುವ ಕೆಲವು ಶ್ಲೋಕಗಳನ್ನು ಇಲ್ಲಿ ಹೇಳಿರುವರು.

"ನಹ್ಯಮ್ಮಯಾನಿ ತೀರ್ಥಾನಿ ...... ಕಿಮು ಸಂಭಾಷಣಾದಿತಿ"-

**ಅರ್ಥ**:- ಜಲಾಶಯಗಳಲ್ಲಿಯ ನೀರೇ ತೀರ್ಥವೆನಿಸುವದಿಲ್ಲ; ಮಣ್ಣು-ಕಲ್ಲುಗಳಿಂದ ಮಾಡಿರುವ ಮೂರ್ತಿಗಳೇ ದೇವತೆಗಳೆನಿಸವು. ಜಲಾಭಿಮಾನಿಗಳಾದ ವರುಣ ಗಂಗಾದಿ ದೇವತೆಗಳನ್ನು ಸ್ಮರಿಸಿಕೊಂಡು ಸ್ನಾನ ಮಾಡಿದರೆ ಜಲಾಶಯಗಳು ತೀರ್ಥಗಳಾಗುವವು. ಶ್ರೀರಾಮ ಕೃಷ್ಣಾದಿದೇವತೆಗಳ ಅನುಸಂಧಾನ

ದಿಂದಲೆ ಶಿಲಾ ಪ್ರತಿಮೆಗಳಲ್ಲಿ ದೇವತೆಗಳ ಸಾನ್ನಿಧ್ಯವು ಉಂಟಾಗುವದು. ಹೀಗೆ ಅನುಸಂಧಾನ ಮಾಡಿಕೊಂಡರೂ ಕೂಡ, ಈತೀರ್ಥಗಳಾಗಲಿ, ದೇವರ ಮೂರ್ತಿ ಗಳಾಗಲಿ, ದೀರ್ಘಕಾಲದ ಸೇವೆ ಆರಾಧನೆಗಳಿಂದ ಫಲಪ್ರದವಾಗುವವು, ಆರಾಧಕರನ್ನು ಪವಿತ್ರಗೊಳಿಸುವವು. ಅವುಗಳು ಪ್ರತ್ಯಕ್ಷವಾಗಿ, ನೇರವಾಗಿ ತಾವಾಗಿಯೇ ಉದ್ಧರಿಸಲಾರವು, ಸಜ್ಜನರ ಸಮಾಗಮವನ್ನು ತಮ್ಮನ್ನು ಸೇವಿಸುವವರಿಗೆ ಒದಗಿಸಿ ಪರೋಕ್ಷವಾಗಿ ಉದ್ಧಾರ ಮಾಡುವವು ಸಜ್ಜನರಸಮಾಗಮದಲ್ಲಿ ಸನ್ಮಾರ್ಗದ ಸದುಪದೇಶವು ಲಭಿಸುವದು. ಉದ್ಧಾರಕ್ಕೆ ಅದುವೆ ಕಾರಣವಾಗುವದು. ಆದರೆ ಭಗವದ್ಭಕ್ತರಾದ ಬ್ರಾಹ್ಮಣರ ಮಾತು ಬೇರೆ. ಅವರು ವೇದೈಕವೇದ್ಯನಾದ ಶ್ರೀ ನಾರಾಯಣನನ್ನು ತಮ್ಮ ಹೃದಯದಲ್ಲಿ ತಪಸ್ಸು ವೇದಾಧ್ಯಯನಗಳ ಬಲದಿಂದ ನಿಲ್ಲಿಸಿಕೊಂಡು ಸರ್ವದಾ ಸಂತುಷ್ಟ ಮನಸ್ಸುಳ್ಳವರಾಗಿರುವರು. ಇಂಥ ಮಹಿಮಾ ಶಾಲಿಗಳಾದ ಬ್ರಾಹ್ಮಣರು ಮಹಾಪಾತಕಿಗಳನ್ನೂ, ಅಂತ್ಯಜರನ್ನೂ ಕೇವಲ ತಮ್ಮನ್ನು ನೋಡುವದರಿಂದಲೆ, ಆಡುವ ಮಾತನ್ನು ಕೇಳುವದರಿಂದಲೆ ಪವಿತ್ರರನ್ನಾಗಿ ಮಾಡುವರು. ಹೀಗಿರಲು ಸಜ್ಜನರ ಸಮಾಗಮ-ಸಂಭಾಷಣಗಳು ದೊರೆತರೆ, ಮಹಾಪಾಪಿಗಳೂ ಶುದ್ಧರಾಗುವದರಲ್ಲಿ ಏನು ಆಶ್ಚರ್ಯವಿದೆ?"

ಈ ಪ್ರಕರಣದಲ್ಲಿ 'ಸಮದೃಕ್-ಸೇವೆ' ಯೆಂಬ ಭಾಗವತಧರ್ಮವು ನಿರೂಪಿಸಲ್ಪಟ್ಟಿದೆ.

ಮಹತ್ಸೇವಾ ಪ್ರಕರಣವು ಸಮಾಪ್ತವಾಯಿತು.



# ೮ ಮಹನ್ನಿಂದಾ ವರ್ಜನ ಪ್ರಕರಣ

||೧೨|| **ಕಥಂ ಸುತಾಯಾಃ ಪಿತೃಗೇಹಕೌತುಕಂ**
**ನಿಶಮ್ಯ ದೇಹಃ ಸುರವರ್ಯ ನೇಂಗತೇ ।**
**ಅನಾಹುತಾ ಅಪ್ಯಭಿಯಾಂತಿ ಸೌಹೃದಾ-**
**ದ್ಭರ್ತುರ್ಗುರೋರ್ದೇಹಕೃತಶ್ಚ ಕೇತನಂ ॥** ೪-೩-೧೩

ಸತೀ ದೇವಿ ರುದ್ರ ದೇವರಿಗೆ

ಪರಮ ಭಗವದ್ಭಕ್ತರಾದ ಮಹಾತ್ಮರ ಸೇವೆಯನ್ನುಮಾಡಿ ಸಾಧಕನು ಕೃತಾರ್ಥನಾಗಬೇಕು. ಜೊತೆಗೆ ಇಂಥ ಮಹಾತ್ಮರ ನಿಂದೆಯನ್ನು ಮಾಡದಿರುವದೂಕೂಡ ಸಾಧನೆಯ ಮಾರ್ಗದಲ್ಲಿ ಅಷ್ಟೇ ಅಗತ್ಯವಾಗಿದೆ. ಅಳಿಯನಾದ ರುದ್ರದೇವರಿಗೆ ಅವಮಾನವನ್ನು ಮಾಡಿದ ದಕ್ಷಪ್ರಜಾಪತಿ ಅಂಥವನೂ ಅನರ್ಥಕ್ಕೆ ಗುರಿಯಾದನು. ಆದ್ದರಿಂದ ಮಹನ್ನಿಂದೆಯನ್ನು ಸರ್ವಥಾ ಮಾಡದಂತೆ ಸಾಧಕನು ಸಾವಧಾನನಾಗಿರಬೇಕು. ಈ ಸಂದರ್ಭದಲ್ಲಿ ಮಹಾದೇವ–ಪಾರ್ವತಿಯರ ಸಂವಾದವನ್ನು ಇಲ್ಲಿ ಹೇಳಿದೆ:–

**ಅರ್ಥ:**– ತನ್ನ ತಂದೆಯ ಮನೆಯಲ್ಲಿ ಉತ್ಸವ–ದೊಡ್ಡ ಸಮಾರಂಭವು ನಡೆಯುತ್ತಿರುವದು ಮಗಳಿಗೆ ತಿಳಿದರೆ, ಅವಳು (ಅಲ್ಲಿಗೆ ಹೋಗದೆ) ಇದ್ದಲ್ಲಿಯೆ ಹೇಗೆ ಇರುವಳು?. (ಅವಳು ತಂದೆಯ ಮನೆಗೆ ಹೋಗಲು ಆತುರಳಾಗಲೇ ಬೇಕಲ್ಲವೆ?)–ಉತ್ಸವಕ್ಕೆಬರಲು ನಿಮಂತ್ರಣ ವಿರದಿದ್ದರೂ, ಪತಿ, ಗುರು ಹಾಗೂ ತಂದೆಯ ಮನೆಗೆ, ಅವರವರ ಮೇಲಿನ ಪ್ರೀತಿಯಿಂದ ಹೆಣ್ಣುಮಕ್ಕಳು ಹೋಗುವದುಂಟು.

ವಿಶ್ವಸೃಕ್‌ರ ಮನೆಯಲ್ಲಿ ಯಜ್ಞದ ಮಹಾನ್ ಸಮಾರಂಭವು ಪ್ರಾರಂಭವಾಗಿತ್ತು. ಆಮಂತ್ರಿತರಾದ ದೇವದೇವತೆಗಳೆಲ್ಲರೂ ಯಜ್ಞಸಮಾರಂಭಕ್ಕೆ ಆಗಮಿಸಿದ್ದರು. ಬ್ರಹ್ಮದೇವ–ಮಹಾದೇವರೂ ಅಲ್ಲಿ ಸನ್ನಿಧರಾಗಿದ್ದರು. ದೇವತೆಗಳೆಲ್ಲ ಯಜ್ಞಮಂಟಪದಲ್ಲಿ ಕುಳಿತಾಗ್ಗೆ ದಕ್ಷಪ್ರಜಾಪತಿ ಅಲ್ಲಿಗೆ ಬಂದರು. ಆಗ್ಗೆ ಬ್ರಹ್ಮ ಹಾಗೂ ಮಹಾದೇವರನ್ನು ಬಿಟ್ಟು, ಉಳಿದ ದೇವತೆಗಳೆಲ್ಲರು ಎದ್ದುನಿಂತು ಅವರನ್ನು ಗೌರವಿಸಿದರು. ದಕ್ಷಪ್ರಜಾಪತಿ ಬ್ರಹ್ಮದೇವರಿಗೆ ನಮಸ್ಕರಿಸಿ ತಮ್ಮ ಆಸನದಲ್ಲಿ ಕುಳಿತುಕೊಂಡರು. ಅಳಿಯರಾಗಿದ್ದ ಮಹಾದೇವರು ಮಾವನಾದ ತಾವು ಬಂದಾಗ್ಗೆ ಎದ್ದುನಿಂತು, ನಮಸ್ಕರಿಸಿ ಗೌರವಿಸಬೇಕೆಂಬುದು ದಕ್ಷಪ್ರಪತಿಯ ಅಪೇಕ್ಷೆಯಾಗಿತ್ತು. ಮಹಾದೇವರು ಹಾಗೆ ನಡೆದು ಕೊಳ್ಳಲಿಲ್ಲ.

ಶಿಷ್ಟಸಂಪ್ರದಾಯವನ್ನು ಮೀರಿನಡೆದರೆಂದು ದಕ್ಷಪ್ರಜಾಪತಿಗೆ ಅಳಿಯನ ಬಗ್ಗೆ ತುಂಬ ಕೋಪ ಉಂಟಾಯಿತು. ಸಿಟ್ಟಿನಭರದಲ್ಲಿ ದಕ್ಷಪ್ರಜಾಪತಿ ಮಹಾದೇವರಿಗೆ ಆಡಬಾರದ ಮಾತುಗಳನ್ನು ಆಡಿಬಿಟ್ಟರು. ಇಷ್ಟುಮಾತ್ರವಲ್ಲ,–'ಇನ್ನು ಮುಂದೆ ಯಜ್ಞದಲ್ಲಿ ಯಾವ ರೀತಿಯಿಂದಲೂ ಮಹಾದೇವರಿಗೆ ಯಾರೂ ಯಜ್ಞಭಾಗ ವನ್ನು ಕೊಡಬಾರದು' – ಎಂಬ ಶಾಪವನ್ನೂ ಕೊಟ್ಟುಬಿಟ್ಟರು. ಶಾಪವನ್ನು ಕೇಳಿದರೂ ಶಾಂತ ಮೂರ್ತಿಯಾದ ಮಹಾದೇವರ ಮನಸ್ಸು ಕದಡಲಿಲ್ಲ. ಆದರೆ, ನಿರಪರಾಧಿಯಾದ ತನ್ನ ಪ್ರಭುವಿಗೆ ಈ ರೀತಿ ಶಾಪ ಕೊಟ್ಟದ್ದನ್ನು ಸೇವಕನಾದ ನಂದಿಯು ಸಹಿಸಲಿಲ್ಲ. –'ನಿನ್ನ ಯಜ್ಞವು ಪೂರ್ತಿಯಾಗದಿರಲಿ, ನಿನ್ನ ಮುಖ ಹೋತಿನದಾಗಲಿ' – ಎಂಬ ಪ್ರತಿ ಶಾಪವನ್ನು ದಕ್ಷನಿಗೆ ನಂದಿಯು ಕೊಟ್ಟನು. ಇದಲ್ಲದೆ, ಆ ಸಭೆಯಲ್ಲಿ ಇದ್ದ ತತ್ವಜ್ಞರಾದ ಬ್ರಾಹ್ಮಣರು ದಕ್ಷನ ಶಾಪವನ್ನು ನಿಷೇಧಿಸಲಿಲ್ಲವೆಂದು ಬ್ರಾಹ್ಮಣರಿಗೂ ಆತನು ಶಾಪ ಕೊಟ್ಟನು. ಅಕಾರಣ ತಮಗೆ ಶಾಪ ಕೊಟ್ಟ ಬಗ್ಗೆ ಕುಪಿತರಾದ ಬ್ರಾಹ್ಮಣರು ಮಹಾದೇವರಿಗೂ, ನಂದಿಗೂ ಶಾಪ ಕೊಟ್ಟರು. ಬೇರೊಬ್ಬರ ಮನೆಯಲ್ಲಿ ಆಕಸ್ಮಿಕವಾಗಿ ನಡೆದ ಈ ಅನರ್ಥಕ್ಕಾಗಿ ಮಹಾದೇವರು ಮನನೊಂದುಕೊಂಡು ತಮ್ಮ ಪರಿವಾರದೊ ಡನೆ ಕೈಲಾಸಕ್ಕೆ ಹೋದರು. ಅಂದಿನಿಂದ ಮಹಾದೇವ –ದಕ್ಷ ಪ್ರಜಾಪತಿಗಳಲ್ಲಿ ವಿರಸ ಉಂಟಾಗಿ ಒಬ್ಬೊಬ್ಬರನ್ನು ಭೇಟಿಯಾಗುವದೂ ತಪ್ಪಿತು. ಅನಂತರ ದಕ್ಷ ನಿಗೆ ಬ್ರಹ್ಮದೇವರಿಂದ ಪ್ರಜಾಪತಿ ಪದವಿಯು ದೊರೆತಿತು. ಆ ಸಂತೋಷಕ್ಕಾಗಿ ದಕ್ಷನು ವಾಜಪೇಯ ಯಜ್ಞವನ್ನು ಹೂಡಿದನು. ಮಹಾದೇವರನ್ನು ಬಿಟ್ಟು ಎಲ್ಲರಿಗೂ ಆಮಂತ್ರಣ ಹೋಯಿತು. ದೇವತೆಗಳು, ಯಕ್ಷಗಂಧರ್ವರು, ಮುನಿ ಪುಂಗವರು ಆಕಾಶಮಾರ್ಗದಿಂದ ಯಜ್ಞ ಸಮಾರಂಭಕ್ಕಾಗಿ ಹೋಗುವದನ್ನು ಪಾರ್ವತಿಯು ನೋಡಿದಳು. ತವರುಮನೆಯ ಬಗ್ಗೆ ಮಮತೆ ಅಭಿಮಾನಿಗಳು ತುಂಬಿಬಂದವು. ಬಹು ದಿನಗಳಿಂದ ತಂದೆ ತಾಯಿ, ಅಕ್ಕತಂಗಿಯರ ಭೆಟ್ಟಿಯಾಗಿ ರಲಿಲ್ಲ. ಈ ಸಮಾರಂಭದಲ್ಲಿ ಅವರೆಲ್ಲರ ಭೆಟ್ಟಿಯಾಗುವದೆಂದೂ, ಪತಿಯ ಬಗ್ಗೆ ತಂದೆಯ ಮನಸ್ಸಿನಲ್ಲಿದ್ದ ಕುತ್ಸಿತ ಭಾವನೆಯನ್ನು ದೂರ ಮಾಡಬಹುದೆಂದೂ ಅವಳು ಭಾವಿಸಿದಳು. ತನ್ನ ಈ ಮನೋಭಿಲಾಷೆಯನ್ನು ಮಹಾದೇವರಿಗೆ ತಿಳಿ ಸಿದರು. ಆ ಬಗ್ಗೆ ಅವರಿಬ್ಬರಲ್ಲಿ ನಡೆದ ಸಂಭಾಷಣೆ ಈ ಶ್ಲೋಕಗಳಲ್ಲಿ ಬಂದಿದೆ.

||೧೨೩|| ತ್ವಯೋದಿತಂ ಶೋಭನಮೇವ ಶೋಭನೇ
ಅನಾಹುತಾ ಅಪ್ಯಭಿಯಾಂತಿ ಬಂಧುಷು ।
ತೇ ಯದ್ಯನುತ್ಪಾದಿತದೋಷದೃಷ್ಟಯೋ
ಬಲೀಯಸಾನಾತ್ಮ್ಯಮದೇನ ಮನ್ಯುನಾ ||

ರುದ್ರ ದೇವರು ಸತಿಗೆ

ಸಾ

– ಪಾರ್ವತಿಯು ತನ್ನ ಮನದ ಬಯಕೆಯನ್ನು ಈ ರೀತಿಯಾಗಿ ಪ್ರಕಟಿಸಲು ಮಹಾದೇವರು ಹೀಗೆ ಹೇಳಿದರು–

**ಅರ್ಥ :**– ಹೇ, ಮಂಗಳದಾಯಿನಿ ! 'ಆಪ್ತೇಷ್ಟರ ಮನೆಗೆ ಆಮಂತ್ರಣವಿರದಿದ್ದರೂ ಜನರು ಹೋಗುವರು'– ಎಂಬ ಮಾತು ಯೋಗ್ಯವಾದುದೇ ಸರಿ. ಆದರೆ ಅಂಥ ಆಪ್ತರು ದೇಹವೇ ಆತ್ಮನೆಂದು ಹೇಳುವ ಮದದಿಂದ ದೂರವಾಗಿರಬೇಕು. ಪ್ರಬಲವಾದ ಸಿಟ್ಟಿನ ಭರದಿಂದ ಬೇರೆಯವರಲ್ಲಿ (ನಿಜವಾಗಿಯೂ) ಇಲ್ಲದಿದ್ದ ಲೋಪದೋಷಗಳನ್ನೇ ಎತ್ತಿ ತೋರಿಸುವ ದೂಷಿತ ದೃಷ್ಟಿಯಿಂದ ರಹಿತರಾಗಿರಬೇಕು. (ಇಂಥ ಆಪ್ತರ ಮನೆಗೆ ಹೋಗಬಹುದು.)

॥೨೩೪॥ **ನೈತಾದೃಶಾನಾಂ ಸ್ವಜನವ್ಯಪೇಕ್ಷಯಾ**
**ಗೃಹಾನ್ಪ್ರತೀಯಾದನವಸ್ಥಿತಾತ್ಮನಾಂ ।**
**ಯೇಽಭ್ಯಾಗತಾನ್ ವಕ್ರಧಿಯಾ ವಿಚಕ್ಷತೇ**
**ಆರೋಪಿತಭ್ರೂಭಿರಮರ್ಷಣಾಕ್ಷಿಭಿಃ ॥**

– ಈ ಮಾತನ್ನೇ ಹೆಚ್ಚು ವಿವರವಾಗಿ ಹೇಳುವರು.

**ಅರ್ಥ :**– (ಕಾರ್ಯನಿಮಿತ್ತ) ಮನೆಗೆ ಬಂದಿರುವ ಅಭ್ಯಾಗತರನ್ನು ಕೀಳು ಭಾವನೆಯಿಂದ, ಸಿಟ್ಟಿನಿಂದ ಕೂಡಿದ ಕಣ್ಣುಗಳಿಂದ ಕಾಣುವ ಹಾಗೂ ತಮ್ಮವರೆಂಬ ಅರಿವು ಇದ್ದರೂ ಕದಡಿದ ಮನಸ್ಸುಳ್ಳವರಾಗುವ, (ದೋಷದೃಷ್ಟಿಯುಳ್ಳ) ಈ ಬಗೆಯ ಆಪ್ತರ ಮನೆಗೆ ಸರ್ವಥಾ ಹೋಗಬಾರದು.

॥೨೩೫॥ **ತಥಾರಿಭಿರ್ನ ವ್ಯಥತೇ ಶಿಲೀಮುಖೈಃ**
**ಶೇತೇಽರ್ದಿತಾಂಗೋ ಹೃದಯೇನ ದೂಯತಾ ।**
**ಸ್ವಾನಾಂ ಯಥಾ ವಕ್ರಧಿಯಾಂ ದುರುಕ್ತಿಭಿ-**
**ರ್ದಿವಾನಿಶಂ ತಪ್ಯತಿ ಮರ್ಮತಾಡಿತಃ ॥ ೪-೩-(೧೭, ೧೮, ೧೯)**

ಹುಬ್ಬುಗಂಟು, ಕಣ್ಣು ಕೆಂಪಗಾಗುವದು, – ಇವೇ ಮುಂತಾದ ಶಾರೀರಿಕ ಕ್ರಿಯೆಗಳಿಂದ ಮಾತ್ರವಲ್ಲದೆ, ದುರುಕ್ತಿಗಳಿಂದಲೂ ಈ ಬಗೆಯ ಜನರು ಅವಮಾನಗೊಳಿಸುವರು,–ತಮ್ಮ ತಿರಸ್ಕಾರವನ್ನು ತೋರಿಸುವರು.–

**ಅರ್ಥ:**– ಕುತ್ಸಿತಬುದ್ಧಿಯ ಸ್ವಕೀಯರು ಆಡುವ ದುಷ್ಟಮಾತುಗಳು ಮರ್ಮಭೇದಕವಾಗಿ ಹಗಲುರಾತ್ರಿ ಹೃದಯಕ್ಕೆ ನೋವನ್ನುಂಟು ಮಾಡುವವು.

ಯುದ್ಧಭೂಮಿಯಲ್ಲಿ ಶತ್ರುಗಳು ಬಾಣಗಳ ಸುರಿಮಳೆಗರೆದರೂ, ಅವುಗಳಿಂದ ಹೃದಯಕ್ಕೆ (ದುರುಕ್ತಿಗಳಿಂದ ಆಗುವಷ್ಟು) ವ್ಯಥೆ ಆಗುವದಿಲ್ಲ.

ಗಾಯದ ನೋವು ಕಡಿಮೆ ಇದ್ದಾಗ್ಗೆ, ಅವನಿಗೆ ಆರಾಮವೆನಿಸಬಹುದು. ಹೀಗೆ ಹೇಳಿರುವರು:-'ನತಥಾತಪ್ಯತೆ ..... ಪರುಷೇಷವಃ'-

ಅರ್ಥ:- ದುಷ್ಟಜನರ ಕೆಟ್ಟಮಾತುಗಳಿಂದ ಆಗುವಷ್ಟು ಮನೋವ್ಯಥೆ, ಹೃದಯವನ್ನೇ ಬೇಧಿಸುವ ಬಾಣಗಳಿಂದ ಆಗುವ ನೋವಿಗಿಂತಲೂ ಅಧಿಕ ವಾದುದು.

ಈ ರೀತಿಯಾಗಿ ತಂದೆಯ ಮನೆಯ ಸಮಾರಂಭಕ್ಕೆ ಹೋಗುವದು ಉಚಿತ ವಲ್ಲವೆಂದು ಪಾರ್ವತಿಗೆ ಮಹಾದೇವರು ಹೇಳುವರು. ಹೀಗಿದ್ದರೂ ನೀನು ಹೋದರೆ, ನಿನಗೆ ಅಲ್ಲಿ ಅವಮಾನ ಉಂಟಾಗುವದು. ಅನ್ಯರ ತಪ್ಪುಗಳನ್ನೇ ಎಣಿಸುವ ಜನರು ನಿನ್ನ ಬಗ್ಗೆಯೂ ದೂಷಿತ ಭಾವನೆಯನ್ನೇ ತಾಳುವರು, ತಿರಸ್ಕಾರದಿಂದ ಕಾಣುವ ಜನರ ಮನೆಗೆ ಹೋಗಿ, ಏಕೆ ಅವಮಾನವನ್ನು ಎದುರಿಸಬೇಕು?. ತವರು ಮನೆಯ ಅಭಿಮಾನದಿಂದ ಪ್ರಭಾವಿತಳಾದ ಪಾರ್ವತಿಗೆ ಮಹಾದೇವರ ಈ ಹಿತೋಕ್ತಿಯು ರುಚಿಸಲಿಲ್ಲ. ಭಗವಂತನ ಸತ್ಯಸಂಕಲ್ಪವನ್ನು ಯಾರೂ ತಪ್ಪಿಸಲಾರರು. ಮುಂದಿನ ಘಟನೆಗಳೆಲ್ಲ ನಡೆಯಲೇಬೇಕಿತ್ತು. ಅಂತೆಯೆ, ಪಾರ್ವತಿಯೂ ಕೂಡ ಪತಿಯ ಮಾತನ್ನು ಮೀರಿ ನಡೆದಳು, ತಂದೆಯ ಮನೆಗೆ ಒಬ್ಬಳೇ ಹೋದಳು. ಸತ್ಯಸಂಕಲ್ಪವನ್ನರಿತ ಮಹಾದೇವರು ಅವಳಿಗೆ ನಿಷೇಧ ಮಾಡಲಿಲ್ಲ.

ತಂದೆಯ ಮನೆಗೆ ಪಾರ್ವತಿಯು ಬರುವಳು. ಪತಿಯ ಬಗ್ಗೆ ಸರ್ವತ್ರ ಅಗೌರವವೇ ಅಲ್ಲಿ ಅವಳಿಗೆ ಕಂಡುಬಂದಿತು, ಪತಿಯ ಬಗ್ಗೆ ನಿಂದೆಯ ಮಾತು ಗಳೇ ಅವಳ ಕಿವಿಗೆ ಬಿದ್ದವು. ತನ್ನ ಪತಿಯಾದ ಮಹಾದೇವರಿಗೆ ದಕ್ಷನು ಯಜ್ಞ ಭಾಗವನ್ನು ಕೊಡಲಿಲ್ಲ. ಪಾರ್ವತಿಯು ತುಂಬಾ ನೊಂದುಕೊಂಡಳು; ಕನಲಿದ ಪಾರ್ವತಿಯು ತಂದೆಗೆ ಹೇಳಿದ ಮಾತುಗಳಿವು:-

ಉಕ್ತಿ ದಕ್ಷಗೆ

॥೧೨॥ ಕರ್ಣೌ ಪಿಧಾಯ ನಿರಯಾದ್ಯದಕಲ್ಪ ಈಶೇ
ಧರ್ಮಾವಿತರ್ಯಸೃಣಿಭಿರ್ನೃಭಿರಸ್ಯಮಾನೇ ।
ಛಿಂದ್ಯಾತ್ಪ್ರಸಹ್ಯ ರುಶತೀಮಸತಾಂ ಪ್ರಭುಶ್ಚೇ
ಜ್ಜಿಹ್ವಾಮಸೂನಪಿ ತತೋ ವಿಸೃಜೇತ್ಸಧರ್ಮಃ ॥ ೪-೪-೧೭

**ಅರ್ಥ**:- (ಧರ್ಮದ ತತ್ವಗಳನ್ನು ಜನರಿಗಾಗಿ ಹಾಕಿಕೊಡುವ) ಧರ್ಮ ಪ್ರವರ್ತಕರೂ, ಸಮರ್ಥರೂ, ಆದ ಮಹಾತ್ಮರನ್ನು ಹೃದಯ ಹೀನರಾದ ದುರ್ಜನರು ನಿಂದೆ ಮಾಡುತ್ತಿರಲು, (ಅಂಥಸಂದರ್ಭದಲ್ಲಿ) ನಿಂದಕನಿಗೆ ಶಿಕ್ಷೆ ಮಾಡುವದು (ಕೇಳುವವನಿಗೆ) ಶಕ್ಯವಿರದಿದ್ದರೆ, ಆತನು ಕಿವಿಯನ್ನು ಮುಚ್ಚಿಕೊಂಡು (ಕಿವಿಯಲ್ಲಿ ಬೆರಳನ್ನಿಟ್ಟುಕೊಂಡು) ನಿಂದೆ ನಡೆಯುತ್ತಿರುವ ಸ್ಥಳದಿಂದ (ಬೇರೆಡೆಗೆ) ಹೋಗಬೇಕು, ನಿಂದಕನನ್ನು ದಂಡಿಸಲು ಶಕ್ತನಾಗಿದ್ದರೆ ಬಲಾತ್ಕಾರದಿಂದ ಆತನ ನಾಲಿಗೆಯನ್ನು ಹೊರತೆಗೆದು ಕತ್ತರಿಸಿ ಬೀಡಬೇಕು. ಇನ್ನೊಂದು ಮಾರ್ಗವೆಂದರೆ (ನಿಂದೆಯನ್ನು ಕೇಳುವದನ್ನು ತಪ್ಪಿಸಲು ಆತನು ತನ್ನ ಪ್ರಾಣವನ್ನೇ ಬಿಟ್ಟುಕೊಡಬೇಕು.

ಇದೇ ಶ್ಲೋಕವನ್ನು ಇನೊಂದು ರೀತಿಯಲ್ಲಿ ಅರ್ಥವಿಸಬಹುದು. ಮಹಾತ್ಮರ ನಿಂದೆಯು (ಪ್ರತೀಕಾರಮಾಡಲು) ಸಮರ್ಥನಾದವನ ಕಿವಿಗೆ ಬಿದ್ದರೆ, ನಿಂದಕನ ನಾಲಿಗೆಯನ್ನು ಆತನು ಕತ್ತರಿಸಬಹುದು, ನಿಂದಕನನ್ನು ಬಂಧನದಲ್ಲಿ ಇಡಬಹುದು, ಮಹಾತ್ಮರ ನಿಂದೆಯನ್ನು ಮಾಡಬಾರದೆಂದು ಆತನಿಗೆ ಪದೇಪದೆ ಎಚ್ಚರಿಕೆ ಕೊಡಬಹುದು. ಇಷ್ಟೆಲ್ಲ ಮಾಡಿದರೂ ಬಹುಧಿಕ್ಕಾರದುನೋಡಿ, ಆತನು ನಿಂದಿಸುವದನ್ನು ಬಿಡದಿದ್ದರೆ, ಬೇರೆ ರೀತಿಯಿಂದ ನಿಂದೆ ಮಾಡಹತ್ತಿದರೆ, ಅವನಿಗೆ ಪ್ರಾಣದಂಡನೆಯನ್ನೇ ಕೊಡಬೇಕು. - ನಿಂದೆ ಕೇಳುವವನಿಗೆ ಇವುಗಳಲ್ಲಿ ಯಾವುದನ್ನೂ ಮಾಡಲು ಸಾಧ್ಯವಿರದಿದ್ದರೆ,-'ನಾನೇ ಪ್ರಾಣವನ್ನು ತ್ಯಜಿಸುವೆ'-ಎಂದು ನಿಂದಕನಿಗೆ ಹೇಳಿ ಅದರಂತೆ ನಡೆಯಬೇಕು.-ನಿಂದೆಕೇಳುವಲ್ಲಿ ಸಮರ್ಥ ಹಾಗೂ ಅಸಮರ್ಥರಾದವರಿಗೆ ಹಾಕಿಕೊಟ್ಟ ಧರ್ಮದರೀತಿ-ಇದಾಗಿದೆ. ಹೀಗೆಮಾಡುವದರಿಂದ ನಿಂದೆಕೇಳುವ ಪಾಪವು ತಟ್ಟುವದಿಲ್ಲ.

'ನಿಂದಾಂಶ್ರಭಗವತಃ ಶ್ರಣ್ವನ್-...ಸುಕೃತಾಚ್ಚುತಃ' ೧೦-೭೪-೪೦

**ಅರ್ಥ**:- ಭಗವಂತನಾದ ಶ್ರೀಹರಿಯು, ಇಲ್ಲವೆ ಹರಿಭಕ್ತರ ನಿಂದೆ ನಡೆಯುತ್ತಿರುವ ಸ್ಥಳದಿಂದ ಬೇರೆಕಡೆಗೆ ಹೋಗದವನು ತಾನುಗಳಿಸಿದ ಪುಣ್ಯವನ್ನೆಲ್ಲ ಕಳೆದುಕೊಂಡು, ನಿಂದಕನಿಗಿಂತಲೂ ಹೆಚ್ಚು ಹೀನವಾದ ಗತಿಯನ್ನು ಹೊಂದುವನು -ಆದುದರಿಂದ, ಭಗವಂತನ ಹಾಗೂ ಭಗವದ್ಭಕ್ತರ ನಿಂದೆ ನಡೆಯುತ್ತಿದ್ದರೆ, ಸಬಲರು, ದುರ್ಬಲರು ತಮತಮಗೆ ಹೇಳಿದ ರೀತಿಯಲ್ಲಿ ನಡೆದುಕೊಳ್ಳುವದೇ ಧರ್ಮವೆಂದು ಧರ್ಮವನ್ನು ತಿಳಿದವರು ಹೇಳಿರುವರು. ಇಲ್ಲವಾದರೆ ಅತ್ಯಂತ ಹೀನವಾದ ದುರ್ಗತಿಯನ್ನು ಅವರು ಹೊಂದುವರು. ಹೀಗೆ ಹೇಳಿರುವದು ಸಮರ್ಥ ಜನರಿಗಾಗಿ. ನಿಜವಾಗಿ ತಿಳಿದು ನೋಡಿದರೆ, ಭಾಗವತಧರ್ಮಗಳನ್ನು ನಿಷ್ಠೆಯಿಂದ ಪಾಲಿಸುವ ಸರ್ವಸಾಮಾನ್ಯ ಸಜ್ಜನರಿಗೆ, ಈ ವಿಷಯದಲ್ಲಿ ಯಾವತೊಡಕು-ತೊಂದರೆಗಳೂ ಇರುವದಿಲ್ಲ. ಮಹಾತ್ಮರ ನಿಂದೆಯನ್ನು ಮಾಡುವ ದುರ್ಜನರು

ಅತ್ಯಂತ ದುಃಖಕ್ಕೆ ಒಳಗಾಗುವರೆಂಬುದನ್ನು ಹಾಗೂ ನಿಂದೆಮಾಡುವದು ಅವ ಸ್ವಭಾವವಾಗಿರುವದೆಂದೂ ಅವರು ಮನಸ್ಸಿನಲ್ಲಿ ಅನುಸಂಧಾನ ಮಾಡಿಕೊಳ್ಳುವರು

ಕೆಳಗಿನ ಶ್ಲೋಕವು ಮಹಾತ್ಮರ ಅನುಸಂಧಾನದ ರೀತಿಯನ್ನು ತೋರಿಸುವದು.

॥೧೨೭॥ **ನಾಶ್ಚರ್ಯಮೇತದ್ಯದಸತ್ಸು ಸರ್ವದಾ**
**ಮಹದ್ವಿನಿಂದಾ ಕುಣಪಾತ್ಮವಾದಿಷು ।**
**ಸೇರ್ಷ್ಯಾ ಮಹಾಪೂರುಷಪಾದಪಾಂಸುಭಿ-**
**ರ್ನಿರಸ್ತತೇಜಸ್ಸು ತದೇವ ಶೋಭನಂ ॥ ೪-೪-೧೩**

– ಮಹಾತ್ಮರನ್ನು ನಿಂದಿಸುವವರಿಗೆ, ನಿಂದೆ ಮಾಡುವದು. ಅವರಿಗೆ ಸಹಜ ಸಹಜ ಗುಣವಾಗಿದೆ.–

**ಅರ್ಥ:**– ಭಗವಂತನ (ಹಾಗೂ ಭಗವದ್ಭಕ್ತರ) ಪಾದಧೂಳಿಯನ್ನು ನಿಂದಿಸುವದರಿಂದಲೆ ತಮ್ಮ **ತೇಜಸ್ಸನ್ನೆಲ್ಲ** (ಅಂತಃಸತ್ವವನ್ನೆಲ್ಲ) ಕಳೆದುಕೊಂಡು, (ಹೊರಗಿನ) ದೇಹವನ್ನೇ **ಆತ್ಮವೆಂದು** ಭ್ರಮಿಸುವ ದುರ್ಜನರು (ಮಹಾಪುರುಷರ ಮಹಿಮೆಯನ್ನು **ಸಹಿಸಲಾರದ**) ಅಸೂಯೆಯಿಂದ ಅವರನ್ನು ಸರ್ವದಾ ನಿಂದಿಸುವದರಲ್ಲಿ (**ಹುಟ್ಟುಗುಣವಾದ್ದರಿಂದ**) ಸಜ್ಜನರ ನಿಂದೆ ಮಾಡುವುದು ಅವರಿಗೆ –**ಸಹಜವೇ ಆದದೆ.**

–**ಕುಣಪಾತ್ಮವಾದಿ :**- **ಹೊರಗಿನ** ದೇಹವನ್ನೇ ಅಂತರಾತ್ಮನೆಂದು ಭ್ರಮಿಸುವ ಅಜ್ಞಾನಿಗಳು **'ಕುಣಪ'** –ವೆಂದರೆ ಹೆಣ, ಪ್ರಾಣವಿಲ್ಲದ ದೇಹ. 'ಪರಮ ಮುಖ್ಯ ಪ್ರಾಣ ತೊಲಗಲಾ ದೇಹವನು 'ಪೆಣ' ನೆಂದು ಪೇಳ್ವರು ಬುಧಜನರು' –ಎಂಬ ದಾಸೋಕ್ತಿಯನ್ನು ನೆನೆಯಬೇಕು. ದೇಹಾತ್ಮವಾದಿಗಳೇ ನಾಸ್ತಿಕರು ಚಾರ್ವಾಕರು.–

– ಮಹಾತ್ಮರ ಪಾದಧೂಳಿಯನ್ನು ನಿಂದಿಸಿದ ಮಾತ್ರಕ್ಕೆ ಸ್ವಂತದ ತೇಜಸ್ಸಿನ ಹಾನಿಯಾಗುತ್ತಿರಲು, ಪ್ರತ್ಯಕ್ಷ ಮಹಾತ್ಮರದೇ ನಿಂದೆ ಮಾಡಿದರೆ, ಆಗುವ ಅನರ್ಥವು ಅತ್ಯಧಿಕವಾದುದು–

– ಅಧರ್ಮಿಗಳು ಮಾಡುವ ನಿಂದೆಯಿಂದ ಮಹಾತ್ಮರಿಗೆ ಮಾತ್ರ ಯಾವ ಬಾಧೆಯೂ ತಟ್ಟುವದಿಲ್ಲ. ಇದನ್ನೇ ಮುಂದಿನ ಶ್ಲೋಕದಲ್ಲಿ ಹೇಳಿದೆ–

॥೧೨೮॥ **ಸರ್ವೇ ಪ್ರಯಾಸಾ ಅಭವನ್ವಿಮೋಘಾಃ**
**ಕೃತಾಃ ಕೃತಾ ದೇವಗಣೇಷು ದೈತ್ಯೈಃ ।**

**ಕೃಷ್ಣಾನುಕೂಲೇಷು ಯಥಾ ಮಹತ್ಸು**
**ಕ್ಷುದ್ರೈಃ ಪ್ರಯುಕ್ತಾ ರುಶತೀ ರೂಕ್ಷವಾಚಃ॥ ೬-೧೦-೨೯**

– ಭಗವನ್ನಿಂದೆಯ ಸನ್ನಿವೇಶದಲ್ಲಿ ಹೇಗೆ ನಡೆದುಕೊಳ್ಳಬೇಕೆಂಬುದು ಭಾಗವತ ಧರ್ಮವನ್ನು ಆಚರಿಸುವವರಿಗೆ ಪ್ರಯಾಸದ ಸಂಗತಿಯಾಗಿಲ್ಲ. ನಿಂದೆಗೊಳಗಾದ ಸಜ್ಜನರಿಗೆ, ನಿಂದಕರಿಂದ ಕೂದಲೆಳೆಯಷ್ಟೂ ಹಾನಿಯಾಗಲಾರದು. ಈ ಮಾತನ್ನೇ ಮನಸ್ಸಿನಲ್ಲಿ ದೃಢವಾಗಿ ಬಿಂಬಿಸಲು ಉದಾಹರಣೆಯನ್ನು ಕೊಡುವರು.–

**ಅರ್ಥ:**– ದೇವತೆಗಳ ನಾಶಕ್ಕೆ ದೈತ್ಯರು ಅನೇಕ ಸಲ (ಆಯುಧಾದಿಗಳನ್ನು ಉಪಯೋಗಿಸಿ) ಕೈಕೊಂಡ ಎಲ್ಲ ಸಾಹಸಗಳು ವಿಫಲವಾದವು. (ಅವುಗಳಿಂದ ದೇವತೆಗಳಿಗೆ ಯಾವ ಹಾನಿಯೂ ತಟ್ಟಲಿಲ್ಲ.) ಇದು ಹೇಗೆಂದರೆ, ಭಗವಂತನಾದ ಶ್ರೀಕೃಷ್ಣನ ಅನುಗ್ರಹಕ್ಕೆ (ಒಲುಮೆಗೆ) ಪಾತ್ರರಾದ ಸಜ್ಜನರ ಬಗ್ಗೆ ಕೀಳು ಜನರು (ಅಸೂಯೆಯಿಂದ) ಆಡುವ ಹೇಯ ಹಾಗೂ ಬಿರುಸು ಮಾತುಗಳು ನಿರರ್ಥಕವಾಗುವವು. (ದೈತ್ಯರ ವ್ಯರ್ಥವಾದ ಸಾಹಸದಂತೆಯೆ) ಯಾವ ಪರಿಣಾಮವನ್ನೂ ಮಾಡಲಾರವು. (ದೈತ್ಯರು ದೇಹದಿಂದ ದಾಳಿ ಮಾಡುವವರು ದುರ್ಜನರು ನಿಂದೆಯ ಮಾತುಗಳನ್ನು ಆಡುವವರು.) – ಇದನ್ನರಿತುಕೊಂಡ ಸಜ್ಜನರು ದುರ್ಜನರ ನಿಂದೆಯಿಂದ ನೊಂದುಕೊಳ್ಳುವದಿಲ್ಲ.

– ಜ್ಞಾನಿಗಳೂ, ದೇವತೆಗಳೂ ಆಗಿರುವ ದಕ್ಷ ಹಾಗೂ ಮಹಾದೇವರಿಬ್ಬರಲ್ಲಿ ಕಲಹವು ಏಕೆ ಉಂಟಾಯಿತೆಂಬುದು ಸಾಮಾನ್ಯ ಜನರಿಗೆ ಒಂದು ಒಗಟಾಗಿ ತೋರಬಹುದು. ಈ ರಹಸ್ಯವನ್ನು ಈ ಶ್ಲೋಕದಲ್ಲಿ ವಿವೇಚಿಸಿರುವರು– ದಕ್ಷನು ಸಾಮಾನ್ಯ ಮಾನವನಲ್ಲ. ಪ್ರಜಾಪತಿಗಳಲ್ಲಿ ಪ್ರಮುಖನು, ಸದ್ಗುಣಿಯು ಮಹಾದೇವರು ದೇವತೆಗಳಲ್ಲಿ ಉನ್ನತ ಸ್ಥಾನದಲ್ಲಿದ್ದವರು. ಋಷಿಗಳೆಲ್ಲರೂ ಈ ಮಾತನ್ನು ಒಪ್ಪುವರು. ಇಂಥವರಲ್ಲಿ ಕಲಹ ಉಂಟಾದೀತೆಂದು ಊಹಿಸಲೂ ಸಾಮಾನ್ಯ ಜನರಿಗೆ ಕಷ್ಟವಾದುದು. – ಎಂಬ ಆಕ್ಷೇಪಣೆಗೆ ಹೀಗೆ ಉತ್ತರವನ್ನು ಹೇಳುವರು. ನಿಮ್ಮ ಆಕ್ಷೇಪಣೆ ಸತ್ಯವಾಗಿದೆ. ದಕ್ಷನು ಸದ್ಗುಣಿಯು, ಮಹಾದೇವರು ದೇವೋತ್ತಮರು, ಎಂಬುದು ನಿಜ ಹೀಗಿದ್ದರೂ, ಸಜ್ಜನರಲ್ಲಿರಬೇಕಾದ ಶಾಸ್ತ್ರಗಳು ಹೇಳುವ ವಿದ್ಯಾದಿ ಆರು ಷಡ್ಗುಣಗಳು ದುರ್ಜನರ ಸೊಕ್ಕಿಗೆ ಸಾಧನಗಳಾಗುವವು. ಇವೇ ವಿದ್ಯಾದಿ ಗುಣಗಳಿಂದ ಜನಿಸುವ ಸೊಕ್ಕು ತಲೆಗೇರಿ ಸ್ವೋತ್ತಮರು (ಅಂದರೆ – ತಮಗಿಂತಲೂ ಗುಣಾಧಿಕ್ಯದಿಂದ ಶ್ರೇಷ್ಠರಾದವರು–

ಪೂಜ್ಯರು, ವೃಂದರು,' – ಶಾಸ್ತ್ರಾಭ್ಯಾಸದಿಂದ ಪ್ರಾಪ್ತವಾಗುವ ಈ ಪ್ರಜ್ಞೆಯು (ಅರಿವು) ಮಂಕಾಗಿ ಬಿಡುವದು. ಆಗಲೇನೆ ಅವರಿಗೆ, – 'ನಾನೇ ಶ್ರೇಷ್ಠನು' ಎಂಬ ದುರಹಂಕಾರವು ಮುಸುಕುವದು. ಈ ಅಹಂಕಾರಕ್ಕೆ ಬಲಿಯಾಗಿ ಮಹಾತ್ಮರಿಗೆ ಪೂಜೆ ಸತ್ಕಾರಗಳನ್ನು ಸಲ್ಲಿಸುವದನ್ನು ಬಿಟ್ಟುಕೊಡುವರು. ತಮಗಿಂತಲೂ, ಶ್ರೇಷ್ಠವಾದ, ಅಧಿಕವಾಗಿರುವ ಗುಣಗಳನ್ನು ಗುರುತಿಸಿದರೂ ಕೂಡ ದುರ್ಜನರು, ಬಾಯಿಯಿಂದ ಹಾಗೆ ಹೇಳಲಾರರು. ಸಭೆಯಲ್ಲಿ ಸಜ್ಜನರ ಗುಣಗಳನ್ನು ಹೊಗಳುವದನ್ನು ಮಾಡುವದಿಲ್ಲ ಹೀಗೆ ಮಾಡಲು ಕಾರಣವೇನೆಂದರೆ

**॥೨೯॥ ವಿದ್ಯಾತಪೋವಿತ್ತವಪುರ್ವಯಃ ಕುಲೈಃ**
**ಸತಾಂ ಗುಣೈ ಷಡ್ಭಿರಸತ್ತಮಾವುದ್ಯೈಃ ।**
**ಸ್ಮೃತೌ ಹತಾಯಾಮಭಿಮಾನದುರ್ದೃಶ-**
**ಸ್ತಬ್ಧಾ ನ ಪಶ್ಯಂತಿ ಹಿ ಧಾಮ ಭೂಯಸಾಂ ॥** ೪-೩-೧೭

– ವಿದ್ಯೆ ಮುಂತಾದ **ಷಡ್ಗುಣಗಳು** ಸಜ್ಜನರಿಗೆ ಉತ್ಕರ್ಷದಾಯಕ. ಆದರೆ ಅವೇ ಗುಣಗಳು ಹಿಂದಿನ **ಪುಣ್ಯದಿಂದ** ದುರ್ಜನರಿಗೆ ಪ್ರಾಪ್ತವಾದರೆ, ಅವರನ್ನು ಉನ್ಮತ್ತರನ್ನಾಗಿ ಮಾಡುವವು. ಸಜ್ಜನರ ಪ್ರತಂತೆ ಅವರನ್ನು ಕೆರಳಿಸುವದು. ತಮಗಿಂತಲೂ ಶ್ರೇಷ್ಠರಾದವರ ಬಗ್ಗೆ ಮನಸ್ಸಿನಲ್ಲಿ ಆದರವಿದ್ದರೂ, ಹೊರಗೆ ಅದನ್ನು ಆಡಿ ತೋರಿಸಲಾರರು. ಅಂಥವರನ್ನು ಹೀಗಳೆಯುವರು. ದಕ್ಷ ಪ್ರಜಾಪತಿಯು ಗುಣಿಯು. ಆದರೆ ಗುಣಗಳಲ್ಲಿ, ಶ್ರೇಷ್ಠತ್ವದಲ್ಲಿ ಮಹಾದೇವರಿಗೆ ಸರಿಸಮಾನನಲ್ಲ. ತನಗಿಂತಲೂ **ಹೆಚ್ಚು** ಗೌರವವು ಋಷಿಗಳಿಂದ ಮಹಾದೇವರಿಗೆ ದೊರೆತದ್ದನ್ನು ಕಂಡು ಆತನಿಗೆ ಸಂತಾಪವಾಯಿತು. ಸಂತಪ್ತನಾದ ದಕ್ಷನು ಮಹಾದೇವರಿಗೆ ಅವಮಾನ ಮಾಡಿದನು. ಕೇವಲ ಒಂದು ಸಣ್ಣ –ಕಾರಣಕ್ಕಾಗಿ ದಕ್ಷ–ಮಹಾ ದೇವರಲ್ಲಿ ವೈಮನಸ್ಸು ಉಂಟಾಯಿತು.–

**ಅರ್ಥ**;– ವಿದ್ಯೆ (ಪಾಂಡಿತ್ಯ), ತಪಸ್ಸು, ಸಂಪತ್ತು, ಸೌಂದರ್ಯ, (ಪ್ರಾಯದ) ವಯಸ್ಸು, ಹಾಗೂ (ಶ್ರೇಷ್ಠ ಕುಲದಲ್ಲಿ) ಜನನ,–ಸಜ್ಜನರಲ್ಲಿ (ಸ್ವಾಭಾವಿಕವಾಗಿ) ಇರುವ ಈ ಆರು ಸದ್ಗುಣಗಳು ( ಆಕಸ್ಮಿಕವಾಗಿ ) ದುರ್ಜನರಿಗೆ ಪ್ರಾಪ್ತವಾದರೆ. ಅವರನ್ನು ಮದೋತ್ಪನ್ನರಾಗಿ ಮಾಡುವವು. ಉನ್ಮತ್ತರಾದ ದುರ್ಜನರು, ಶಾಸ್ತ್ರಗಳಲ್ಲಿ ತಾವು ಓದಿಕೊಂಡಿರುವ ಹಿತೋಕ್ತಿ (ಸೂಕ್ತಿ)ಗಳನ್ನು ಮರೆತುಬಿಟ್ಟು, ದುರಭಿಮಾನದಿಂದ ಕುರುಡರಂತಾಗಿ ಸ್ವೋತ್ತಮರ (ತಮಗಿಂತಲೂ ಶ್ರೇಷ್ಠರಾದವರ) ಶ್ರೇಷ್ಠತೆಯನ್ನು ಕಾಣದಂತಾಗುವದು.

– ಈ ಶ್ಲೋಕದ ಆಶಯವೆಂದರೆ,– ಒಳ್ಳೇ ಸದ್ಗುಣಿಯಾದ ದಕ್ಷ ಪ್ರಜಾಪತಿಯಂಥವನೂ ಮಹಾತ್ಮರ ನಿಂದೆಯಿಂದ ಕೇಡಿಗೆ ಒಳಗಾದನು. ಆದುದರಿಂದ ಆತ್ಮೋದ್ಧಾರವನ್ನು ಬಯಸುವವರು ಮಹಾತ್ಮರ (ಸ್ವೋತ್ತಮರ) ನಿಂದೆಯನ್ನು ಎಂದೆಂದಿಗೂ ಮಾಡಬಾರದು, ಬೇರೆಯವರು ಮಹಾತ್ಮರ ನಿಂದೆ ಮಾಡುತ್ತಿದ್ದರೆ, ಆ ಸ್ಥಳವನ್ನು ತ್ಯಜಿಸಿ ಬೇರೆಡೆಗೆ ಹೋಗಬೇಕು. ಇಲ್ಲವೆ ಅಲ್ಲಿಯೆ ಉಳಿದುಕೊಂಡು, – 'ಕುಹಕರ ನಿಂದೆಯಿಂದ ಮಹಾತ್ಮರಿಗೆ ಕೂದಲೆಳೆಯಷ್ಟು ಧಕ್ಕೆಯಾಗದು. ನಿಂದೆ ಮಾಡುವವರಿಗೇನೆ ಅದರಿಂದ ಕೇಡು ಉಂಟಾಗುವದು' – ಎಂದು ಅನುಸಂಧಾನ ಮಾಡಿಕೊಳ್ಳಬೇಕು. (ಮನಸ್ಸಿನಲ್ಲಿ ಚಿಂತಿಸಿಕೊಳ್ಳಬೇಕು.) ಹೀಗೆ ಮಾಡಿದರೆ, ಮಹನ್ನಿಂದೆಯನ್ನು ಕೇಳುವದರಿಂದ ಒದಗುವ ಅನರ್ಥವು ತಪ್ಪುವದು.

– ಪ್ರಜಾಪತಿಯೂ ಸದ್ಗುಣಿಯೂ, ಆದ ದಕ್ಷನು ಮಹಾದೇವರಂಥವರಿಗೆ ಏಕೆ ಅವಮಾನ ಮಾಡಿದನು ?' – ಎಂದು ಕೇಳುವವರಿಗೆ, ಮೇಲಿನ ವಿವೇಚನೆಯಿಂದ ಉತ್ತರವು ದೊರೆಯುವದು.

||೧೩೦|| **ನಾಹಂ ವಿಶಂಕೇ ಸುರರಾಜವಜ್ರಾ-**     ರಘುನಾಥ
**ನ್ನತ್ರ್ಯಕ್ಷಶೂಲಾನ್ನ ಯಮಸ್ಯ ದಂಡಾತ್ ।**     ಭಾರತಿ ೧೦
**ನಾಗ್ನ್ಯರ್ಕಸೋಮಾನಿಲವಿತ್ತಪಾಸ್ತ್ರಾ-**
**ಚ್ಛಂಕೇ ಭೃಶಂ ಬ್ರಹ್ಮಕುಲಾವಮಾನಾತ್ ॥** ೫-೧೦-೧೮

**ಅರ್ಥ:**– ದೇವತೆಗಳಿಗೆ ಒಡೆಯನಾದ ಇಂದ್ರನ ವಜ್ರಾಯುಧದ ಹೆದರಿಕೆ ನನಗಿಲ್ಲ, ಮಹಾದೇವರ ತ್ರಿಶೂಲದ ಭಯವೂ ನನಗಿಲ್ಲ. ಯಮರಾಜನ ಶಸ್ತ್ರದ ಭೀತಿಯೂ ನನ್ನನ್ನು ಬಾಧಿಸುವದಿಲ್ಲ. ಅಗ್ನಿ, ಸೂರ್ಯ, ಚಂದ್ರ, ವಾಯು, ಹಾಗು ಕುಬೇರ ಮುಂತಾದವರ, ಅಸ್ತ್ರಗಳ ಅಂಜಿಕೆಯೂ ನನಗಿಲ್ಲ. (ಆದರೆ ನನಗಿರುವದು ಒಂದೇ ದೊಡ್ಡ ಹೆದರಿಕೆ) ಬ್ರಹ್ಮಜ್ಞಾನಿಗಳ ಸಮಾಜಕ್ಕೆ ಅವಮಾನ ಮಾಡಲು ನಾನು ತುಂಬಾ ಹೆದರುವೆ.—

– ಒಂದು ವೇಳೆ, ಅಪ್ಪಿತಪ್ಪಿ ಮಹಾಪುರುಷರ ನಿಂದೆಯನ್ನು ಮಾಡಿದರೂ ಅದರಿಂದ ನಮಗೆ ಕೆಡಕು ಆಗುವದೆಂಬುದನ್ನು ನೆನಪಿನಲ್ಲಿಡಬೇಕು. ಅಜ್ಞಾನದಿಂದ ಮಹನ್ನಿಂದೆ ಮಾಡಿದಾಗ್ಗೆ, (ನಿಂದೆಗೊಳಗಾದ) ಮಹಾತ್ಮರಿಗೇನೆ ನಾವು ಕ್ಷಮೆಗಾಗಿ ಶರಣು ಹೋಗಬೇಕು. ಈ ನಿಯಮವನ್ನು ತಿಳಿಸಿಕೊಡಲು,

ತಿಳಿಯದೆ) ಪ್ರದಕ್ಷಿಣೆಯನ್ನು ಮಾಡಿ, ನಂತರ ಅವರಿಗೇನೆ ಮೊರೆ ಹೊಕ್ಕ ರಹೂಗಣ ರಾಜನು (ಆ ಸನ್ನಿವೇಶದಲ್ಲಿ) ಆಡಿದ ಮಾತುಗಳನ್ನು ಇಲ್ಲಿ ಉದಹರಿಸಲಾಗಿದೆ.–

'ಪ್ರಮಾದಾತ್... ಉತ್ತರೇದತ್ತೇ'... (ಬುದ್ಧಿ ಪೂರ್ವಕವಾಗಿ ಅಲ್ಲ) ಮಹಾತ್ಮರಿಗೆ ತಿಳಿಯದೆಯೇ ಮಾಡುವ ಅವಮಾನವು ಅನರ್ಥಕಾರಿಯಾಗಿರಲು, ತಿಳಿದು ತಿಳಿದು (ಜ್ಞಾನಪುರಃಸರ) ಮಾಡುವ ಅವಮಾನವು ಅನರ್ಥಕಾರಿಯೆಂಬುದನ್ನು ಹೇಳಬೇಕಿಲ್ಲ. ಈ ವಿಚಾರವನ್ನು ತಿಳಿಸಿಕೊಡಲು (ಶ್ರೀಮದ್ಭಾಗವತದಲ್ಲಿ ಬರುವ) ರಹೂಗಣ ರಾಜನ ವೃತ್ತಾಂತವನ್ನು ಹೇಳುವರು. ರಹೂಗಣನು ಸಿಂಧು ಸಾವೀರ ದೇಶದ ದೊರೆ. ರಾಜರಿಗೆ ಉಚಿತವಾದ ಮೇಣೆಯಲ್ಲಿ ಕುಳಿತು, ಕಪಿಲನಾಮಕ ಪರಮಾತ್ಮನ ಸನ್ನಿಧಿಗೆ ಹೋಗುವಾಗ್ಗೆ, ಮೇಣೆಯನ್ನು ಹೊರಲು ಒಬ್ಬ ಬೋಯಿಯು (ವಾಹಕನು) ಕಡಿಮೆ ಇದ್ದನು. ಕಡಿಮೆ ಇದ್ದ ಒಬ್ಬ ವಾಹಕನನ್ನು ಶೋಧಿಸುತ್ತಿರಲು, ಶ್ರೇಷ್ಠನಾದ ಬ್ರಹ್ಮಜ್ಞಾನಿಯೊಬ್ಬನು ಅಕಸ್ಮಾತ್ ಕಣ್ಣಿಗೆ ಬಿದ್ದನು. 'ಸರಿ! ಮೇಣೆಯನ್ನು ಹೊರಲು ದಷ್ಟಪುಷ್ಟನಾದ ಈತನು ಬಲಿಷ್ಠನಾಗಿರುವನು!'– ಎಂದು ಆತನನ್ನೂ ಮೇಣೆಯನ್ನು ಹೊರುವವರಲ್ಲಿ (ಕಡಿಮೆ ಬಿದ್ದಿದ್ದ) ಒಬ್ಬನನ್ನಾಗಿ ಮಾಡಿಕೊಂಡರು. ಮೇಣೆ ನಡಿಸುವಾಗ್ಗೆ ಆತನ ಹೆಜ್ಜೆಗಳು ಸಮನಾಗಿ ಬೀಳಲಿಲ್ಲ. (ವ್ಯವಸ್ಥಿತವಾಗಿ-ಹೇಗೆ ನಡೆಯಬೇಕೊ ಹಾಗಿರಲಿಲ್ಲ) ಅದರಿಂದ ಮೇಣೆಯಲ್ಲಿ ಕುಳಿತಿದ್ದ ರಾಜನಿಗೆ ತೊಂದರೆಯಾಯಿತು. ರಾಜನು ವಾಹಕರ ಮೇಲೆ ಸಿಟ್ಟಾದನು. ಆಗ್ಗೆ ಮೇಣೆಯ ವಾಹಕರು ರಾಜನಿಗೆ ಹೇಳಿದರು. –'ದೊರೆಯೆ! ಈ ತಪ್ಪು ನಮ್ಮದಾಗಿಲ್ಲ. ನಾವು ಸರಿಯಾಗಿಯೆ ನಡೆಯುವೆವು. ಆದರೆ ಈಗ್ಗೆ ಹೊಸದಾಗಿ ನಿಯಮಿಸಿಕೊಂಡಿರುವ ಈ ವಾಹಕನು ಬೇಗಬೇಗನೆ ಹೆಜ್ಜೆಯನ್ನೇ ಹಾಕುವದಿಲ್ಲ. ಇವನ ಜೊತೆಯಲ್ಲಿ ನಾವು ಮೇಣೆಯನ್ನು ಸರಿಯಾಗಿ ಸಾಗಿಸಲಾರೆವು. ಇವನು ಮಾಡುವ ತಪ್ಪು ಸಂಸರ್ಗದಿಂದ ನಮಗೂ ಅಂಟಿಕೊಳ್ಳುತ್ತಿದೆ.' - ಹೀಗೆ (ಉಳಿದ) ವಾಹಕರು ರಾಜನಿಗೆ ಉತ್ತರಕೊಟ್ಟರು.–

'ರಾಜಾ ಜಾತಮನ್ಯುಃ..... ..... ತಂ ಪ್ರಕಾರಂ ದರ್ಶಯತಿ, 'ನಾಹಂ' ಇತಿ ವಾಹಕರ ಮಾತನ್ನು ಕೇಳಿ ಸಿಡಿಮಿಡಿಗೊಂಡ ರಾಜನು ಬ್ರಾಹ್ಮಣ್ಯದ ಯಾವ ಬಾಹ್ಯ ಗುರುತೂ ಇಲ್ಲದ ಹೊಸದಾಗಿ ಸೇರಿದ ವಾಹಕನಿಗೆ ಹೀಗೆ ಹೇಳಿದನು:- 'ಅಯ್ಯೋ ಪಾಪ! ತಮ್ಮಾ, ನೀನು ಬಹಳ ದಣಿದುಕೊಂಡಿರುವಿಯೆಂಬುದು ಮೇಲೇ ತೋರುತ್ತದೆ. ದೂರವಾದ ದಾರಿ. ಒಬ್ಬನೇ ಬಹುಕಾಲ ಮೇಣೆಯನ್ನು ಹೊತ್ತಿರುವೆ. ದಷ್ಟಪುಷ್ಟನೂ ಅಲ್ಲ, ಮೈಕಟ್ಟು ಸಶಕ್ತವಾಗಿಲ್ಲ. ದೇಹಕ್ಕೆ ಮುಪ್ಪು

ತಂದೆ. ಉಳಿದ ವಾಹಕರೂ ನಿನ್ನೊಡನೆ ಕೂಡಿಕೊಂಡು ಹೋಗುವದಿಲ್ಲ.–
ಕೆಯಾ!'– ಹೀಗೆ ರಾಜನು ವ್ಯಂಗ್ಯೋಕ್ತಿಗಳನ್ನು (ಹಾಸ್ಯದ ಮಾತುಗಳನ್ನು)
ಡಿದರೂ, ಆ ಬ್ರಾಹ್ಮಣನು ಸಿಟ್ಟಿನಿಂದ ತಿರುಗಿ ನುಡಿಯಲಿಲ್ಲ. ಮುಂಚಿನಂತೆಯೆ
ಪ್ಪು ಹೆಜ್ಜೆ ಹಾಕಹತ್ತಿದನು. ರಾಜನೆಂಬ ದುರಹಂಕಾರದಿಂದ, ಅಸಂಬದ್ಧವಾದ
ಾತುಗಳನ್ನಾಡಿ ನರಕದಲ್ಲಿ ಬೀಳುತ್ತಿರುವ ರಾಜನ ಹೀನ ಮಾತುಗಳಿಗೆ ಆ
್ರಾಹ್ಮಣನು ಕಿವಿಗೊಡಲಿಲ್ಲ. ಅದಕ್ಕೆ ಪ್ರತಿಯಾಗಿ ರಾಜನ ಸೊಕ್ಕನ್ನೇ ಅಳಿಸಿ
ಡುವ (ಅರ್ಥಗರ್ಭಿತವಾದ) ಉತ್ತರವನ್ನು ರಾಜನಿಗೆ ಕೊಟ್ಟನು. (ರಾಜನಿಗೆ
ವೇಕೋದಯವಾಯಿತು). ರಾಜನು (ಕೂಡಲೆ) ಮೇಣೆಯಿಂದ ಕೆಳಗಿಳಿದು ಬಂದು
ಬ್ರಾಹ್ಮಣ ಶ್ರೇಷ್ಠನ ಕಾಲಿಗೆ ಎರಗಿದನು. ಕ್ಷಮೆ ಯಾಚಿಸಿದನು. ಆತನು
ಗ್ಗೆ ಹೇಗೆ ನಡೆದುಕೊಂಡನು. – ಯಾವ ಮಾತುಗಳನ್ನಾಡಿದನೆಂಬುದನ್ನು –
ಾಹಂ ವಿಶಂಕೆ -', ಎಂಬ ಶ್ಲೋಕದಲ್ಲಿ ನಿರೂಪಿಸಿರುವರು. – ಯಾವ ದೇವ
ಗಳ ಪ್ರಬಲ ಶಸ್ತ್ರಾಸ್ತ್ರಗಳಿಂದಲೂ ಆಗದಷ್ಟು ಕೆಡಕನ್ನು ಮಹಾತ್ಮರ
ಂದೆಯು ಮಾಡುವದು. –

ರಹೂಗಣ ರಾಜ

೧೩॥ ನ ವಿಕ್ರಿಯಾ ವಿಶ್ವಸುಹೃತ್ಸಖಸ್ಯ
ಸಾಮ್ಯೇನ ವೀತಾಭಿಮತೇಸ್ತವಾಪಿ ।
ಮಹದ್ವಿಮಾನಾತ್ಸ[redacted]ತಾದ್ಧಿ ಮಾದೃ-
ಙ್ನಂಕ್ಷ್ಯತ್ಯದೂರಾದಪಿ ಶೂಲಪಾಣೇಃ ॥ ೫-೧೦-೨೫

25

**ಅರ್ಥ:**– ಸಕಲಜನರಿಗೂ ನಿರಪೇಕ್ಷ ಸಹಾಯ ಮಾಡುವವನು, ಅಂತೆಯೆ
ಎಲ್ಲರ ಪ್ರಿತಿಗೂ ಪಾತ್ರನಾದವನೂ, ಎಲ್ಲರಲ್ಲಿಯೂ (ತಾರತಮ್ಯಕ್ಕೆ ಸರಿಯಾಗಿ)
ಸಮದೃಷ್ಟಿಯುಳ್ಳವನೂ. ಹಾಗೂ ದೇಹಾಭಿಮಾನರಹಿತನಾದವನೂ ಆಗಿರುವ
ನಿನಗೆ ( ನನ್ನ ದುರುಕ್ತಿ, ಹಾಗೂ ಅಸತ್ಕಾರ್ಯದಿಂದ ). ಮನಸ್ಸು ಕಿಂಚಿತ್ತೂ
ಕೆಡಲಿಲ್ಲ– ಆದರೆ ಮಹಾತ್ಮರಿಗೆ ಮಾಡುವ ಅವಮಾನವು ಮಹಿಮಾಶಾಲಿ
ಗಳಾದ ಮಹಾದೇವರಂಥವರನ್ನೂ ಬೆಂಕಿಯಂತೆ ಕೂಡಲೇ ಸುಡಬಹುದು ಅಂದ
ಮೇಲೆ ನ್ನಾನು ಯಾವಗಿಡದ ತೊಪ್ಪಲು ?–(ನಾವು ನಿಮಗೆ ಮೇಣೆ ಹೊರಿಸಿದುದು
ದುರುಕ್ತಿಗಳನ್ನು ಆಡಿದುದು. – ತಿಳಿಯದೆ ನಿಮಗೆ ಮಾಡುವ ಈ ಅವಮಾನವು
ನನ್ನನ್ನು ಕೂಡಲೇ ಪೂರ್ಣವಾಗಿ ನಾಶಗೊಳಿಸುವುದರಲ್ಲಿ ಸಂದೇಹವಿಲ್ಲ.

ತಿಳಿದು ಅಥವಾ ತಿಳಿಯದೆ ಜನರು ಮಾಡುವ ಅಪಮಾನದಿಂದ ದೇಹಾ
ಭಿಮಾನವನ್ನು ತೊರೆದ ಮಹಾತ್ಮರ ಮನಸ್ಸು ಕ್ಷೋಭೆಗೊಳ್ಳುವದಿಲ್ಲ. ಆದರೆ
ಅಪಮಾನ ಮಾಡಿದವರು ಅನರ್ಥಕ್ಕೆ ಒಳಗಾಗುವದು ತಪ್ಪಿದ್ದಲ್ಲ.

||೧೩೨|| ನಮೋ ಮಹದ್ಭ್ಯೋಽಸ್ತು ನಮಃ ಶಿಶುಭ್ಯೋ ರಹೂಗಣ॥
ನಮೋ ಯುವಭ್ಯೋ ನಮ ಆಬಟುಭ್ಯಃ ।
ಯೇ ಬ್ರಾಹ್ಮಣಾ ಗಾಮವಧೂತಲಿಂಗಾ-
ಶ್ಚರಂತಿ ತೇಭ್ಯಃ ಶಿವಮಸ್ತು ರಾಜ್ಞಾಂ || ೫-೧೩-೨೩

ರಹೂಗಣ ರಾಜನು ತನ್ನ ತಪ್ಪಿಗಾಗಿ ತನ್ನನ್ನೇ ಈ ರೀತಿಯಾಗಿ ಹಳಿದು ಕೊಂಡು, ಮಹಾತ್ಮರಿಗೆ ಮಾಡಿದ ಅಪಮಾನವೆಂಬ ಪಾಪದ ನಿವಾರಣೆಗೆ ನಮಸ್ಕಾರ ರೂಪದಿಂದ ಪ್ರಾರ್ಥಿಸಿಕೊಳ್ಳುವನು. -

ಅರ್ಥ :- (ಬ್ರಹ್ಮಜ್ಞಾನಿಗಳಾದ) ಮಹಾತ್ಮರಿಗೆ ನಮಸ್ಕರಿಸುವೆ. (ಅವರು) ಶಿಶುಗಳಿದ್ದರೂ ನಮಸ್ಕಾರ. ಯುವಕರಾಗಿದ್ದರೂ ನಮಸ್ಕಾರ. ಬಟುವಿನವರೆಗೆ ಎಲ್ಲ ಮಹಾತ್ಮರಿಗೂ ವಂದನೆಗಳು. (ವರ್ಣಾಶ್ರಮಗಳ ದ್ಯೋತಕವಾದ) ಯಾವ ಹೊರಗಿನ ಚಿನ್ಹೆಗಳೂ ಇಲ್ಲದೆ ಭೂಮಿಯಲ್ಲಿ ಸಂಚರಿಸುತ್ತಿರುವ ಎಲ್ಲ ಬ್ರಾಹ್ಮಣರಿಗೂ (ಬ್ರಹ್ಮಜ್ಞಾನಿಗಳಿಗೂ) ಪ್ರಣಾಮಗಳು. ರಾಜರಿಗೆಲ್ಲ ಕಲ್ಯಾಣವಾಗಲಿ! (ಮಹನ್ನಿಂದೆಯೆಂಬ ಅನರ್ಥದಿಂದ ಅವರು ದೂರವಾಗಿರಲಿ).

- ಹೀಗೆ ಹೇಳಿರುವರು-'ಆಯುಃ....... ಮಹದತಿಕ್ರಮಃ'-ಅರ್ಥ:-ಆಯುಷ್ಯ ಸಂಪತ್ತು, ಕೀರ್ತಿ, ಧೈರ್ಯ, ಜನರು ಬಯಸುವ ಮೋಕ್ಷ, ಇವೇ ಮುಂತಾದ ಎಲ್ಲ ಶ್ರೇಷ್ಠ ವಸ್ತುಗಳನ್ನೂ ಮಹನ್ನಿಂದೆಯನ್ನು ಮಾಡುವವನು ಕಳೆದುಕೊಳ್ಳುವನು.-

ಇದೇ ಶ್ಲೋಕದ ಅರ್ಥವನ್ನು ಬೇರೆ ಗ್ರಂಥಗಳಲ್ಲಿ ಉಕ್ತವಾಗಿರುವಂತೆ ಅನೇಕ ಮುಖವಾಗಿ ಶ್ರೀ ವಿಷ್ಣುತೀರ್ಥರು ಮನೋಜ್ಞವಾಗಿ ವಿವರಿಸಿರುವರು. 'ಏವಂ ಪ್ರಮಾದತಃ - ನಮೋಮಹದ್ಭ್ಯಃ' ಭಗವದ್ಭಕ್ತರಿಗೆ (ಮಹಾತ್ಮರಿಗೆ) ಅಪ್ಪಿ ತಪ್ಪಿ ಮಾಡಿದ ಅವಮಾನದಿಂದ ಒದಗುವ ಅನರ್ಥವನ್ನು ಕಳೆದುಕೊಳ್ಳಲು ದೊಡ್ಡವರಿಗೂ ಅತಿ ದೊಡ್ಡವನಾದ ಶ್ರೀ ನಾರಾಯಣನನ್ನು ಮೊದಲು ಮಾಡಿಕೊಂಡು ಅವಧೂತರವರೆಗೂ, ನಮಸ್ಕಾರ ಮಾಡುವದೇ ನಾವು ಮಾಡಬೇಕಾದ ಕಾರ್ಯವಾಗಿದೆ. -" ಈ ಭಾವನೆಯಿಂದ, ಮಹತ್ ಮೊದಲಾದ ತತ್ವಗಳ ನಾಲ್ಕು ಬಗೆಯ ರೂಪಗಳಿಂದ ಯುಕ್ತನಾದ ಶ್ರೀಹರಿಗೆ ಆದಿಯಲ್ಲಿ ನಮಸ್ಕರಿಸುವರು. - ಪರಿಣಾಮದ ಮೇರೆಗೆ ವಿವಿಧ ಮಹದ್ರೂಪ (ದೊಡ್ಡ ಆಕೃತಿಯ) ವನ್ನು ಧರಿಸುವ ಶ್ರೀಹರಿಯ ರೂಪಗಳ ಪರ್ಯಂತ ನಮಸ್ಕಾರ. ಶ್ರೀಹರಿಯ ಗಣನೆಯಿಲ್ಲದ ಬೃಹದಾಕಾರದ ರೂಪಗಳಿಗೆ ಮಾತ್ರವಲ್ಲದೆ, ಆತನ ಬೃಹದಾಕಾರದ

ರೂಪಗಳಿಗೆ ಮಾತ್ರವಲ್ಲದೆ, ಆತನ ಬೃಹದಾಕರದ ರೂಪವನ್ನು ಮೊದಲು ಗೊಂಡು ಅಣುವಿಗಿಂತಲೂ ಚಿಕ್ಕ ಆಕಾರದ ಎಲ್ಲ ರೂಪಗಳಿಗೂ ಭಕ್ತಿ-ಶ್ರದ್ಧೆಗಳಿಂದ ಪೂರಿತವಾದ ನಮಸ್ಕಾರವು – 'ಆ ಶಿಶುಭ್ಯಃ'– ಶಿಶುವಿನ ಪರ್ಯಂತವೂ ನಮಸ್ಕಾರವು. – ಶ್ರೀಹರಿಯ ಅತೀ ದೊಡ್ಡದಾದ ರೂಪದಿಂದ – ಚಿಕ್ಕದರಲ್ಲಿ ಚಿಕ್ಕದಾದ ರೂಪಗಳೆಲ್ಲಕ್ಕೂ ನಮಸ್ಕರಿಸಿರಿ. ಎಂಬ ಮಾತು ಅಲ್ಪಾಯುಷಿಗಳೂ ಅಲ್ಪ ಬುದ್ಧಿಯುಳ್ಳವರೂ ಆದ ನಮಗೆ ನಿಲುಕದ ಮಾತು. ಏಕೆಂದರೆ, ಇವೆರಡು ತುದಿಗಳಲ್ಲಿ ನಡುವೆ ಭಿನ್ನಭಿನ್ನ ಗಾತ್ರದ ಅನಂತ ರೂಪಗಳ ಸಮಾವೇಶವಾಗುವದು. ನಮ್ಮ ಅಲ್ಪ ಬುದ್ದಿಯು ಅವುಗಳನ್ನೆಲ್ಲ ತಿಳಿದುಕೊಳ್ಳಲಾರದು. ನಮ್ಮ ಇಡೀ ಆಯುಷ್ಯವೂ ಈ ಕಾರ್ಯಕ್ಕೆ ಸಾಲದಂತಾದೀತು. ಅಂದ ಮೇಲೆ ಶ್ರೀಹರಿಯ ಈ ಅನಂತ ರೂಪಗಳಿಗೆ ನಮಸ್ಕರಿಸುವದು ಅಶಕ್ಯಕೋಟಿಯದು. ಈ ಅಗಣಿತ ರೂಪಗಳಲ್ಲಿ ಪ್ರತಿಯೊಂದನ್ನೂ ಬಿಡದೆ ನಮಸ್ಕರಿಸಬೇಕು, ಎಂದು ಹೇಳಿದರೆ ಮಾತ್ರ ನಿಮ್ಮ ಆಕ್ಷೇಪವು ಸತ್ಯವಾದೀತು. ಅದಕ್ಕಿಂತಲೂ ಬೇರೊಂದು ಅರ್ಥವನ್ನು ಮುಂದಿಟ್ಟುಕೊಂಡು ಈ ಮಾತನ್ನು ಇಲ್ಲಿ ಹೇಳಿದೆ. ಶ್ರೀಹರಿಯ ಅನಂತ ರೂಪಗಳನ್ನು ನಾಲ್ಕು ಗಾತ್ರಗಳ ರೂಪದಲ್ಲಿ ಒಂದುಗೂಡಿಸಿದ ರೂಪಗಳಿಗೆ ನಮಸ್ಕರಿಸುವದು, ಬಹಳೇ ಸುಲಭ – ಎಲ್ಲರಿಗೂ ಶಕ್ಯವಾದುದು. ಅತಿದೊಡ್ಡದು ಅತಿಚಿಕ್ಕದು, – ಇವುಗಳ ಮಧ್ಯದಲ್ಲಿ ಯುವಕರ ವಯೋಮಾನದ ಗಾತ್ರಕ್ಕೆ ಸದೃಶವಾದವು, ಬಟುಗಳ ವಯೋಮಾನದ ಗಾತ್ರಕ್ಕೆ ಸದೃಶವಾದವು, ಈ ಆಶಯವನ್ನು ಮನಸ್ಸಿನಲ್ಲಿ ಇಟ್ಟುಕೊಂಡು, ಅತಿ ದೊಡ್ಡ ರೂಪದಿಂದ ಅತೀ ಚಿಕ್ಕ ಶಿಶುವಿನ ಪರ್ಯಂತದ ರೂಪಗಳಿಗೆ ಪ್ರತೀಕಗಳಾಗಿ (ಪ್ರತಿನಿಧಿಗಳಾಗಿ) ನಾಲ್ಕು ಗುಂಪುಗಳಾಗಿ ಹೇಳಿದೆ. ಮಹತ್ತಿನಿಂದ ಶಿಶುವಿನವರೆಗೆ –ಎಂಬುದನ್ನು ಅವುಗಳ ನಡುವಿನ ರೂಪಗಳನ್ನು ಈ ರೀತಿಯಾಗಿ ಸ್ಪಷ್ಟಗೊಳಿಸಿರುವರು. – 'ನಮೋ ಯುವಭ್ಯಃ ನಮೋ ಬಟುಭ್ಯಃ' – ಈ ಬಗೆಯ ನಾಲ್ಕು ರೂಪಗಳೆಂದು ಹೇಳಿದ ಮಾತ್ರಕ್ಕೆ ಅವುಗಳ ಸಂಖ್ಯೆಯು ಕೇವಲ ನಾಲ್ಕೇ ಎಂದು ಭಾವಿಸಕೂಡದೆಂದೂ ಅವು ಬಹು ಸಂಖ್ಯಾಕವಾಗಿರುವವೆಂದೂ ತೋರಿಸಲು ನಾಲ್ಕು ಪ್ರತೀಕಗಳೂ ಮಹದ್ಭ್ಯಃ 'ಬಟುಭ್ಯಃ', ಎಂಬ ಬಹುವಚನದ ಪ್ರಯೋಗದಿಂದ ಸೂಚಿಸಿರುವರು. ಯಾವುದೇ ನಿಮಿತ್ತಗಳು ಬರಲಿ, ಬಾರದಿರಲಿ. ಸರ್ವಕಾಲದಲ್ಲಿಯೂ ಈ ರೂಪಗಳು ಕಿಂಚಿತ್ತೂ ವಿಕಾರಕ್ಕೆ ಒಳಗಾಗದೆ, ವೃದ್ಧಿಹ್ರಾಸಗಳಾಗದೆ ಇದ್ದಂತೆಯೆ ಇರುವದೆಂಬುದನ್ನು 'ಆ ಮಹದ್ಭ್ಯಃ, ಆ ಬಟುಭ್ಯಃ' – ಎಂಬಲ್ಲಿ 'ಆ' ಎಂಬ ಪದವು ಸೂಚಿಸುವದು ಮಹತ್ವಾದಿ ಈ ರೂಪಗಳು ಪರಿಮಾಣದಲ್ಲಿ (ಗಾತ್ರದಲ್ಲಿ) ಸರ್ವ ಕಾಲದಲ್ಲಿ ಒಂದೇ ವಿಧವಾಗಿ, ವಿಕಾರಗಳಿಗೊಳಗಾಗದೆ ಇರಲಿ. ಆದರೆ ಈ ರೂಪವಿಶೇಷಗಳ ನೈಜವಾದ, ಯಥಾಸ್ಥಿತವಾದ ರೂಪವೇನು? –ಪ್ರತ್ಯಕ್ಷ

ವಾಗಿ ಅವು ಹೇಗೆ ತೋರುವವು ? – ಎಂದು ಕೇಳಬಹುದು. ಅದಕ್ಕೆ ಉತ್ತರವೆಂದರೆ, ಅವು ಯಾವಾಗಲೂ ತಾರುಣ್ಯಾವಸ್ಥೆಯಲ್ಲಿಯೇ ಇರುವವು. ಅವು ನಿತ್ಯ ತರುಣವಾದವುಗಳು. ಪರಮಾತ್ಮನ ಅನುಗ್ರಹಕ್ಕೆ ಪಾತ್ರರಾದ ದೇವತೆಗಳ ರೂಪಗಳೇ ನಿತ್ಯ ತರುಣವಾಗಿರಲು, ದೇವದೇವೋತ್ತಮನಾದ, ಆದಿದೇವನಾದ ಶ್ರೀಹರಿಯ ರೂಪವು ನಿತ್ಯ ತರುಣವೆಂದು ಬೇರೆ ಹೇಳಬೇಕಿಲ್ಲ. ಈ ಮಾತನ್ನು ಮನಸ್ಸಿನಲ್ಲಿ ಇಟ್ಟುಕೊಂಡು ಇಲ್ಲಿ ನಿರೂಪಿಸಿದ ಶ್ರೀಹರಿಯ ಎಲ್ಲ ರೂಪಗಳಿಗೂ– ('ಯುವಭ್ಯಃ' ನಿತ್ಯ ತರುಣವೆಂಬ ವಿಶೇಷಣವನ್ನು ಹೊಂದಿಸಿಕೊಳ್ಳಬೇಕು. (೧)

ಇನ್ನೊಂದು ಅರ್ಥವು ' ಅಥವಾ .. '– ' ಮಹತೋ ಮಹೀಯಾನ್ ' (ಅತಿ ದೊಡ್ಡದಕ್ಕಿಂತಲೂ ದೊಡ್ಡವನು) ಆದ ಶ್ರೀಹರಿಯನ್ನು ಈ ಬಗೆಯ (ಮಹತ್ತು, ಯುವ, ಬಟು, ಶಿಶುಗಳೆಂಬ) ನಾಲ್ಕು ಪ್ರತೀಕಗಳಲ್ಲಿ ವಂದಿಸುವಂತೆಯೆ, ಉಳಿದ ದೇವತೆಗಳನ್ನೂ ಇದೇ ನಾಲ್ಕು ಬಗೆಯ ಪ್ರತೀಕಗಳಾಗಿ ನಮಸ್ಕರಿಸುವರು. ' ನಮೋ ಮಹದ್ಭ್ಯಃ ಇತಿ'.......

'ಮಹತ್' ಪ್ರತೀಕದ| ಗುಂಪಿನಲ್ಲಿ ಬರುವ ವಿಷ್ಣು–ಬ್ರಹ್ಮ–ರುದ್ರ ದೇವತೆಗಳಿಗೆ ನಮಸ್ಕಾರವು. ಇದೇ ರೀತಿಯಲ್ಲಿ ' ಶಿಶು–ಪ್ರತೀಕ'ದಲ್ಲಿ ಬರುವ ಈ ದೇವತೆಗಳಿಗೂ ನಮಸ್ಕಾರಗಳು. ಎಂದು ಅನ್ವಯಿಸಿಕೊಳ್ಳಬೇಕು. - ಇಲ್ಲಿ ಒಂದು ಅಕ್ಷೇಪ, - 'ಈ ಮೊದಲು ವಿಷ್ಣುವಿಗೆ ನಮಸ್ಕಾರ ಸಲ್ಲಿಸಿ, ಮತ್ತೆ 'ವಿಷ್ಣುವಿಗೆ ನಮಸ್ಕಾರ' ವೆಂದು ಹೇಳುವದು ಹೇಳಿದ್ದನ್ನೇ ಹೇಳಿದಂತಾಗುವದಿಲ್ಲವೆ? – ಈ ಅಕ್ಷೇಪಕ್ಕೆ ಉತ್ತರವು ಹೀಗಿದೆ,: – ' ವಿಷ್ಣುವು ದೇವೋತ್ತಮನಾದರೂ, ಒಬ್ಬ ದೇವನೆಂಬ ದೃಷ್ಟಿಯಿಂದ ಈ ಗುಂಪಿನಲ್ಲಿ ಸಮಾವೇಶ ಮಾಡಿರುವದರಿಂದ ಪುನರುಕ್ತಿಯಾಗದು. ಅಂತೆಯೆ. – ವಿಭೀಷಣ, ಹನುಮಂತ, ಉಪೇಂದ್ರ, ದತ್ತಪಾತ್ರ (ಅರ್ಜುನ), ಆರ್ಷ್ಟಿಷೇಣ,ವಿದುರ, ಶ್ರುತದೇವ–ಮುಂದಾದ ಭಕ್ತವರ್ಗದಲ್ಲಿಯೂ ಉಪೇಂದ್ರನೆಂಬ ಅಂಕಿತದಿಂದ ಷ್ಟ ಅರ್ಥ (ಭಕ್ತನೆಂಬ)ದಲ್ಲಿ ಭಗವಂತನನ್ನು ಸೇರಿಸಿರುವದು ಅನ್ಯತ್ರ ಕಂಡುಬರುವದು. – ಇನ್ನೊಂದು ಅಕ್ಷೇಪ– 'ವೃದ್ಧ, ಯುವ, ಬಟು, ಶಿಶು'–ಗಳೆಂಬ ನಾಲ್ಕು ಬಗೆಯ ಜೀವನಾವಸ್ಥೆಗಳು ದೇವತೆಗಳಿಗೆ ಸಂಬಂಧಿಸುವದಿಲ್ಲ. ಮುಪ್ಪೇಇಲ್ಲದ (ಅಜರರಾದ) ದೇವತೆಗಳಿಗೆ ವೃದ್ಧಾಪ್ಯಕ್ಕೆ ಬೇರೊಂದು ಹೆಸರಾದ 'ಮಹತ್ವವು' ಒದಗುವದಿಲ್ಲ. ಸಾವೆಂಬುದೇ ಇದವರಿಗೆ (ಅಮರರಿಗೆ) ಹುಟ್ಟಿದವರಿಗೆ ಇನ್ನೊಂದು ಹೆಸರಾದ 'ಶಿಶುತ್ವ'ವು ಕೂಡುವದಿಲ್ಲ. ಶಿಶುತ್ವವೆ ಇಲ್ಲದಿರುವಾಗ್ಗೆ, ಅದಕ್ಕೆ ಮುಂದಿನ ಅವಸ್ಥೆಯಾಗಿರುವ 'ಅಶನಿತ್ವ' ಎಂಬ ಹೆಸರಿನ ಬಟುತ್ವವು ಬರಲಾರದು. ಬಟುತ್ವವೆ ಇಲ್ಲ

ದಿರುವಾಗಿ, ಅದರ ಮುಂದಿನ ಅವಸ್ಥೆಯಾದ ‘ಯುವತ್ವ’ವೂ ಅವರಿಗೆ ಉಂಟಾ
ಗದು. ಹೀಗಿರಲು, ಮಹತ್ವ, ಯುವತ್ವ, ಬಟುತ್ವ, ಶಿಶುತ್ವ–ವೆಂಬ ನಾಲ್ಕು
ಅವಸ್ಥೆಗಳು ದೇವತೆಗಳಿಗೆ ಹೇಗೆ ಹೊಂದಿಕೊಳ್ಳುವವು’? – ಎಂಬ ಆಕ್ಷೇಪಕ್ಕೆ
ಉತ್ತರವು ಹೀಗಿದೆ:– ‘ದೇವತೆಗಳು ನಿತ್ಯಯುವಕರಾಗಿದ್ದರೂ, ಸಂದರ್ಭಗಳ
ವಿಶಿಷ್ಟದೃಷ್ಟಿಯಿಂದ ಮಹತ್ವಾದಿ (ಮುಪ್ಪು ಮುಂತಾದ ಅವಸ್ಥೆಗಳನ್ನು) ಅವ
ರಿಗೆ ಸಮಯೋಚಿತವಾಗಿ ಹೊಂದಿಸಿಕೊಳ್ಳಲು ಬರುವದು. ಹೇಗೆಂದರೆ, – ಬ್ರಹ್ಮ,
ರುದ್ರರನ್ನು ‘ಮಹತ್’ ಎಂಬ ಅರ್ಥದಲ್ಲಿ ಸೇರಿಸಲಾಗಿದೆ. (ಲೌಕಿಕರಂತೆ
ಹೊರಗಿನ) ಅವಾಂತರ ತಾಯಿ ತಂದೆಗಳ ಸಂಬಂಧವಿಲ್ಲದಯೇ ಪ್ರಕಟವಾಗುವ
ರೆಂಬ ಅರ್ಥವೇ ‘ಮಹತ್ವ’ ವೆಂಬುದಕ್ಕೆ ಅವರ ಬಗ್ಗೆ ಹೇಳಿದೆ. ‘(ಕಂಬದಿಂದ
ಪ್ರಕಟನಾದ ಶ್ರೀನೃಸಿಂಹನಂತೆ) – ಶ್ರೀಹರಿಗೆ (ಜನನಕ್ಕಾಗಿ) ತಾಯಿ ತಂದೆಗ
ಳೆಂಬ ಸಂಬಂಧವು ಎಂದಿಗೂ ಇಲ್ಲ. ಬ್ರಹ್ಮ–ರುದ್ರರಲ್ಲಿ ತಂದೆಮಗವೆಂಬ
ಸಂಬಂಧವನ್ನು ಹೇಳಿದರೂ ಅದು ಸಾಮಾನ್ಯರಂತೆ ಲೌಕಿಕ–ಪ್ರಾಕೃತಿಕವಾದು
ದಲ್ಲ. ತಂದೆ ತಾಯಿಗಳೆಂಬ ಲೌಕಿಕ ಸಂಬಂಧವು ಇಂದು ಇದ್ದು ನಾಳೆ ಇಲ್ಲ
ದಂತಾಗುವ ಕ್ಷಣಿಕವಾದುದು. ಅಂತೆಯೆ ಅದು ಅವಾಂತರವಾದುದು, ನಿತ್ಯ
ವಾದುದಲ್ಲ. ತಂದೆ ಮಗರೆಂಬ ಸಂಬಂಧವು (ನಿತ್ಯವಾದರೂ ಸರಿ) ಇರುವದ
ರಿಂದ ಬ್ರಹ್ಮರುದ್ರರಿಗೆ ‘ಮಹತ್ವ’ (ವೃದ್ಧತ್ವ) ವೆಂಬುದು ವಿಶಿಷ್ಟಾರ್ಥದಲ್ಲಿ
ಸರಿಹೋಗುವದು. ಶ್ರೀಹರಿ ಹಾಗೂ ಲಕ್ಷ್ಮೀದೇವಿ, ಬ್ರಹ್ಮ ಹಾಗೂ ಸರಸ್ವತಿ,–
ಜಗತ್ತಿಗೇನೆ ತಂದೆತಾಯಿಗಳ ಸ್ಥಾನದಲ್ಲಿ ಇರುವರು. ಆದರೆ ಈ ಸ್ಥಾನವು ‘ಅವಾಂತರ
ತಾತ್ಕಾಲಿಕವಾದುದಲ್ಲ, ಅದು ಶಾಶ್ವತವಾದುದು–ಶಾಶ್ವತವಾದ ಈ ವಿಶಿಷ್ಟ ಪಿತೃ
ತ್ವಕ್ಕೇನೆ ‘ವೃದ್ಧತ್ವ’ (ಮಹತ್ವ) ವೆಂದು ಹೇಳಿರುವದು.–ವಿಷ್ಣು, ಬ್ರಹ್ಮ, ರುದ್ರ
ರನ್ನು ‘ಮಹತ್’ ಎಂದು ವರ್ಣಿಸಿರುವದು. ಶ್ರೀವಿಷ್ಣು ‘ಮಹತೋಮಹೀ
ಯಾನ್’. ಕಾಮನನ್ನು ಗೆಲ್ಲಲಾರದ ಬ್ರಹ್ಮನು ‘ಕಶ್ಚನ್ ಮಹಾನ್’, ರುದ್ರ
ದೇವರಿಗೆ ‘ಮಹಾದೇವ’ ರೆಂತಲೆ ಹೆಸರು.– ಅವಾಂತರ ತಾಯಿ ತಂದೆಗಳಿಂದ
ಖ್ಯಾತರಾಗಿರುವದೇ ಶಿಶುತ್ವವು. ತಾಯಿ ತಂದೆಗಳ ನಿಮಿತ್ತದಿಂದಲೆ ‘ಶಿಶುತ್ವ’
ಮಹತ್ವ (ವೃದ್ಧತ್ವ) ಇರುವಲ್ಲಿ ಅದಕ್ಕೆ ಪ್ರತಿಯೋಗಿಯಾದ (ವಿರುದ್ಧವಾದ)
ಶಿಶುತ್ವವು ಇರುವದು,–(ಕತ್ತಲೆಬೆಳಕುಗಳಂತೆ). ಎರಡೂ ಸಾಪೇಕ್ಷವಾದವುಗಳು-
ಈ ಬಗೆಯ ಶಿಶುತ್ವವು ಇಂದ್ರ, ಸ್ಕಂದ ಮೊದಲಾದವರಲ್ಲಿ ಇರುವದು. ಅರ್ಭಕ
ವೆಂಬ ಶಬ್ದಕ್ಕೆ, ಅದೇ ಅರ್ಥದ ಬೇರೊಂದು ಶಬ್ದವಾದ ಶಿಶುತ್ವವನ್ನು ಇಂದ್ರ,
ಸ್ಕಂದಾದಿಗಳ ಬಗ್ಗೆಯೆ ಹೇಳಿರುವದು.– ವೃದ್ಧತ್ವ ಶಿಶುತ್ವಗಳ ವಿವರಣೆ
ಆಯಿತು. ಆದರೆ ಇನ್ನೊಂದು ಆಕ್ಷೇಪ. – ಯುವತ್ವ ಹಾಗೂ ಬಟುತ್ವಗಳ

ಸ್ವರೂಪವೇನು ? – ಈ ಪ್ರಶ್ನೆಗೆ ಉತ್ತರವು ಹೀಗಿದೆ:– ಶಿಶುತ್ವದ ಗುಂಪಿಗೆ ಸೇರಿದ ಸ್ಕಂದ, ಇಂದ್ರಾದಿಗಳು ಬಟುತ್ವ, ಯುವತ್ವವೆಂಬ ಎರಡೂ ವರ್ಗಗಳಲ್ಲಿ ಸೇರ್ಪಡೆಯಾಗುವರು. ಎರಡೂ ವರ್ಗಗಳಲ್ಲಿ ಇಂದ್ರ, ಸ್ಕಂದಾದಿಗಳದೇ ಪ್ರಶಂಸೆ ಇರುವದು. (ಮನಸ್ಸಿನಲ್ಲಿ ಮಾಡಿಕೊಂಡಿರುವ) ಏನಾದರನ್ನೂ ಹೇಳಬೇಕೆಂದು, ಹೇಳುವ ರೂಢಿಯೂ ನಮಗಿಲ್ಲ. ಎಲ್ಲರಿಗೂ ವಿದಿತವಾದ ಅರ್ಥವು (ಕೆಲವರಿಗೆ) ಅಸಂಗತವೆಂದು ತೋರಿದಾಗ್ಗೆ ಹಾಗೂ (ಅರ್ಥವನ್ನು ಸ್ಪಷ್ಟಗೊಳಿಸುವದು,) ಅಗತ್ಯವೆನಿಸಿದಾಗ್ಗೆ ಮಾತ್ರ, ವಿಶೇಷಾರ್ಥಪವನ್ನು ಹೇಳಲೇಬೇಕಾಗುವದು. ... ... ಮುಪ್ಪು ಹಾಗೂ ಮರಣರಹಿತರಾದ ದೇವತೆಗಳಿಗೆ ವೃದ್ಧತ್ವ (ಮಹತ್ವ) ಶಿಶುತ್ವಗಳು ಹೊಂದಿಕೆಯಾಗಲಾರವು, ಎಂಬ ಶಂಕೆಗೆ ಸಮರ್ಪಕ ಉತ್ತರವನ್ನು ಹೇಳಲು ಅವೆರಡರ ವಿಶೇಷಾರ್ಥವನ್ನು ಹೇಳಬೇಕಾಯಿತು. ದೇವತೆಗಳಿಗೆ ಮುಪ್ಪಿಗೆ ಒಳಗಾಗುವ ಶರೀರವಿಲ್ಲ., (ಇದ್ದುದಕ್ಕೆ ಬದಲಾಗಿ) ಬೇರೊಂದು ಹೊಸ ಶರೀರದ ಸಂಯೋಗವೂ ಇಲ್ಲ. ಹೀಗಿದ್ದರೂ ಕೂಡ, ವೃದ್ಧತ್ವ, ಶಿಶುತ್ವಗಳು ಅವರಿಗೆ ಹೇಗೆ ಹೊಂದಿಕೊಳ್ಳುವದೆಂಬುವದನ್ನು ವಿಶೇಷಾರ್ಥದಿಂದ ಹೇಳಿದೆ. ಸ್ತೋತ್ರದಲ್ಲಿಯ ಸ್ತುತಿಪರವಾದ ಶಬ್ದಗಳು ಸ್ತೋತ್ರಮಾಡುವವನಿಗೆ ಪುರುಷಾರ್ಥವನ್ನು ತಂದುಕೊಡುವಂತಿರಬೇಕು. ಮುಂದೆ ಬರುವ ಎಲ್ಲ ಶಬ್ದಗಳಲ್ಲಿಯೂ ಈ ಮಾತು ವ್ಯಕ್ತವಾಗುವದು. – ಆದರೆ ಅಸಂಭವವೆಂಬ ಶಂಕೆಯು ಯುವತ್ವಾದಿಗಳ ಬಗ್ಗೆ ಇರುವದಿಲ್ಲ. ಇದಲ್ಲದೇ, ಅಗತ್ಯವೇ ಇಲ್ಲದಿರುವಾಗ್ಗೆ, ಪ್ರಯೋಜನಕ್ಕಾಗಿ ಈ ಅವಸ್ಥೆಗಳಿಗೆ ವಿಶಿಷ್ಟವಾದ ಅರ್ಥಾಂತರವನ್ನು ಅನುಸರಿಸುವದೂ ಉಚಿತವಾಗದು. ಮಹತ್ವಾದಿ ಜ್ಞಾನದಿಂದ ನಾವು ಸ್ತುತಿಸುತ್ತಿರುವ ದೇವತೆಗಳ ಪ್ರೀತಿಯು ನಮ್ಮ ಬಗ್ಗೆ ಉಂಟಾಗುವದು; ಅಂಥಲ್ಲಿ ಆ ಬಗೆಯ ವಿಶಿಷ್ಟಾರ್ಥವನ್ನು ಅನುಸರಿಸುವದು ಉಚಿತವಾಗುವದು. ಆದರೆ ಇಲ್ಲಿ ಯುವತ್ವ ವ ಬಟುತ್ವವೆಂಬ ತಿಳುವಳಿಕೆಯೇ ದೇವತೆಗಳ ಪ್ರೀತಿಗೆ ಸಾಧನವಾಗಿರುವದರಿಂದ, ಆ ಪ್ರೀತಿಯಿಂದಲೆ ನಮ್ಮ ಉದ್ದೇಶವು ಸಫಲವಾಗುವಂತಿರಲು, ಆ ಪದಗಳಿಗೆ ಬೇರೊಂದು ವಿಶಿಷ್ಟಾರ್ಥವನ್ನು ಕಲ್ಪಿಸುವ ಅಗತ್ಯವಿಲ್ಲ. – ಹೀಗೆ ಹೇಳುವಾಗ್ಗೆ (ನೆನಪಿನಲ್ಲಿಡಬೇಕಾದ) ಒಂದು ಸಂಗತಿಯು ಹಾಗೆಯೆ ಉಳಿಯುತ್ತಿದೆ. ಅದೆಂದರೆ, – ಶಿಶುತ್ವರೂಪದಿಂದ (ಮೊದಲು) ಸ್ಕಂದಾದಿಗಳಿಗೆ ವಂದನೆ, ಯುವತ್ವರೂಪದಿಂದ (ಅವರಿಗೇನೆ) ಪುನಃ ವಂದಿಸುವ ಪ್ರಸಂಗವು ಉಂಟಾಗುವದು. ಹೀಗೆ ಹೇಳುವದು ಪುನರುಕ್ತಿಯೆನಿಸುವದು. ಆದರೆ ಈ ಪುನರುಕ್ತಿಯು ಒಂದು ದೂಷಣ (ತಪ್ಪು) ಎನಿಸದು. – ಒದಗಿದ ಆಪತ್ತನ್ನು ಪರಿಹರಿಸಲು ಎಲ್ಲರೂ ದೇವರನ್ನು ಸ್ತುತಿಸುವರೆಂಬುದು ನಿರ್ವಿವಾದುದು. ಸ್ತುತ್ಯರಾದವರ ಮಹಿಮೆ –

ಗುಣಾನುಗಾನವನ್ನು ಮಾಡುವದೇ ಸ್ತೋತ್ರ. ಮಹಿಮೆಯನ್ನು ಹೊಗಳುವದರಿಂದಲೆ, ನಮಗೆ ಅಂಥವರ ಅನುಗ್ರಹ ಉಂಟಾಗುವದು. ಏನು ಮಾಡುವದರಿಂದ ಈ ಅನುಗ್ರಹವು ಹೆಚ್ಚಾಗಿ ದೊರೆಯುವದೊ, ಅದು ದೊರೆಯುವವರೆಗೆ, ತನ್ನ ಉದ್ದೇಶವು ಸಫಲವಾಗುವವರೆಗೆ, ಸಾಧಕನು ಅದನ್ನೇ ಮಾಡಬೇಕು. ಈ ಬಗೆಯ ಪ್ರಯೋಜನವಿದ್ದಮೇಲೆ, ಸ್ತುತಿಯ ಪುನರುಕ್ತಿಯು ದೋಷವೆನಿಸಲಾರದು. ಇದಲ್ಲದೆ, ದೇವತೆಗಳಿಗೆ ಬಗೆಬಗೆಯ ರೂಪಗಳ ಕೊರತೆ ಇಲ್ಲ. ಆದುದರಿಂದ ಸ್ಕಂದಾದಿಗಳಿಗೆ ಬೇರೆ ಬೇರೆ ರೂಪಗಳಲ್ಲಿ, ಬೇರೆ ಬೇರೆ ವೈಶಿಷ್ಟ್ಯಗಳಲ್ಲಿ ಪುನಃ ಪುನಃ ವಂದಿಸುವದು ಭಿನ್ನರೂಪಗಳಿಗೆ ಹೊಂದಿಕೊಳ್ಳುವಂತೆಯೇ ಇರುವದು. ಪರಮಾತ್ಮನ ಪ್ರೀತಿಗೆ ಪಾತ್ರರಾದ ದೇವತೆಗಳು, ಆತನ ಪ್ರೀತಿಯನ್ನು ಅಧಿಕವಾಗಿ ಪಡೆಯಲು, ಬೇರೆ ಬೇರೆ ರೂಪಗಳಲ್ಲಿ ನೆಲಿಸುವರು. ಅವರು ನೆಲಿಸಿದ ರೂಪದಲ್ಲಿಯೆ ಅವರ ಸ್ತುತಿ ಮಾಡಿದರೆ, ದೇವತೆಗಳ ಪ್ರೀತಿಯು ಹೆಚ್ಚಾಗಿ ದೊರೆಯುವದು.

'ಅಥವಾ, ಯಥಾಹಿ ಅಧಿಕ್ಯ ವಯಸಸ್ಸು ಮಹಂತ :.................... :-

ಹೆಚ್ಚಿಗೆ ವಯಸ್ಸಾದವರು ಮಹಂತರು (ವೃದ್ಧರು), ಅವರಿಗಿಂತಲೂ ಕಡಿಮೆ ವಯಸ್ಸಾದವರು ಬಟುಗಳು, ಬಟುಗಳಿಗಿಂತಲೂ ಕಡಿಮೆವಯಸ್ಸಾದವರು ಶಿಶುಗಳು. ಈ ನಾಲ್ವರಲ್ಲಿ ಎಲ್ಲರಿಗಿಂತಲೂ ಕಡಿಮೆಗುಣವುಳ್ಳವರು ಶಿಶುಗಳು. ಎಲ್ಲರಿಗಿಂತಲೂ ಅತ್ಯಧಿಕಗುಣವುಳ್ಳವರು ವಿಷ್ಣು - ಬ್ರಹ್ಮ-ರುದ್ರರೆಂಬ ಮೂವರು ದೇವತೆಗಳು. ಅಂತೆಯೆ ಅವರಿಗೆ 'ಮಹಂತ'ರೆಂಬ ಆದ್ಯತೆ, ಪ್ರಥಮ ಸ್ಥಾನ. ಈ ಮೂರು ದೇವತೆಗಳಂತೆ ಅತ್ಯಧಿಕ ಗುಣತ್ವವಿಲ್ಲದ್ದರಿಂದ, ಸಾಮಾನ್ಯರಾದ ನಮಗಿರುವಂತೆ ಅಲ್ಪಗುಣತ್ವವೂ ಇಲ್ಲದಿರುವದರಿಂದ, ಮಧ್ಯಮ ಗುಣತ್ವ ಪಡೆದ ಇಂದ್ರಾದಿಗಳು ಯುವತ್ವಕ್ಕೆ (ಯುವಕರ ವರ್ಗಕ್ಕೆ) ಸೇರುವರು.

ಮೂರು ಮುಖ್ಯ ದೇವತೆಗಳಲ್ಲಿ ಶ್ರೀ ವಿಷ್ಣುವೇ ಅವರಲ್ಲಿ ಅತ್ಯಧಿಕಗುಣವುಳ್ಳವನಾಗಿ 'ಮಹಂತ' ನಾದಾಗ್ಗೆ, ಆಗ್ಗೆ ವಿಷ್ಣುವಿಗೆ ಇರುವ ಅತ್ಯಧಿಕಗುಣವಿಲ್ಲದ ಹಾಗೂ ಸಾಮಾನ್ಯರಾದ ನಮ್ಮಂತೆ ಅಲ್ಪಗುಣತ್ವವೂ ಇಲ್ಲದಿರುವದರಿಂದ ಮಧ್ಯಮ ಗುಣತ್ವಪಡೆದ ಬ್ರಹ್ಮಾದಿಗಳು (ಬ್ರಹ್ಮ-ರುದ್ರರು) ಯುವಕರೆಂದು ಬಗೆಯಬೇಕು. ಇವರಿಗಿಂತಲೂ ಕಡಿಮೆ ಗುಣವುಳ್ಳವರಾಗಿ, ಅಲ್ಪಗುಣತ್ವವುಳ್ಳ ಸಾಮಾನ್ಯರಿಗಿಂತಲೂ ಅಧಿಕ ಗುಣವುಳ್ಳವರಾದ್ದರಿಂದ ಇಂದ್ರಾದಿಗಳು 'ಅಶ್ವಿನಿ'ಯೆಂಬ ಬೇರೊಂದು ಹೆಸರುಳ್ಳ ಬಟುವರ್ಗಕ್ಕೆ ಸೇರುವರು. ವಿಷ್ಣು ಬ್ರಹ್ಮ-

ರುದ್ರ, ಈ ಮೂವರಲ್ಲಿ 'ಮಹಂತ' ಪದವಿಯು ವಿಷ್ಣುವಿನದು. ಬ್ರಹ್ಮ ಹಾಗೂ ರುದ್ರರಲ್ಲಿ ಬ್ರಹ್ಮನ ಗುಣತ್ವವು ಅಧಿಕವಾಗಿಹುದು. ಆದರೆ ವಿಷ್ಣುವಿನಂತೆ ಅದು ಅತ್ಯಧಿಕವಾದುದಲ್ಲ ಹಾಗೂ ಸಾಮಾನ್ಯರಾದ ನಮ್ಮಂತೆ ಅಲ್ಪವಾದುದೂ ಅಲ್ಲ. ಮಧ್ಯಮಗುಣವುಳ್ಳ ಬ್ರಹ್ಮನೇ ಯುವಕ ನೆನಿಸುವನು. ಬ್ರಹ್ಮನಿಗಿಂತಲೂ ಗುಣ ದಲ್ಲಿ ನ್ಯೂನತೆಯುಳ್ಳ, ಆದರೆ ಅಲ್ಪಗುಣಿಗಳಾದ ನಮಗಿಂತಲೂ ಅಧಿಕ ಗುಣವುಳ್ಳ ರುದ್ರನು ಬಟುವೆನಿಸುವನು. ರುದ್ರನಿಗಿಂತಲೂ ಕಡಿಮೆಗುಣವುಳ್ಳವನಾದ್ದ ರಿಂದ ಹಾಗೂ ಅಲ್ಪಗುಣಿಗಳಾದ ನಮಗಿಂತಲೂ ಅಧಿಕಗುಣವುಳ್ಳ ಇಂದ್ರಾದಿ ಗಳನ್ನು ಶಿಶುಗಳಾಗಿ ಪರಿಗಣಿ

ಆದುದರಿಂದ, ('ಮಹದ್ಭ್ಯಃ')-ಎಂಬಲ್ಲಿ ಹೇಳಿದ ಮಹಾಂತರಾದ ನಾರಾ ಯಣ-ಬ್ರಹ್ಮ-ರುದ್ರರಿಗೆ ನಮಸ್ಕಾರವಿರಲಿ.-ಮಹಾಂತರಾದ ಈ ಮೂರುದೇವ ತೆಗಳಿಗಷ್ಟೇ ನಮಸ್ಕಾರವೆಂತಲ್ಲ. ಮಹಾಂತರಾದ ಈ ಮೂರುದೇವತೆಗಳನ್ನು ಮೊದಲುಮಾಡಿಕೊಂಡು-ಶಿಶುವರ್ಗದ ದೇವತೆಗಳಿಗೂ ನಮಸ್ಕಾರವಿರಲಿ-ಎಂಬುದು ಗ್ರಂಥಕರ್ತರ ಆಶಯವಾಗಿದೆ.-ಈ ವಿವರಣೆಯಿಂದ ನಾಲ್ಕುಪ್ರಕಾರದ ದೇವ ತೆಗಳು ಇರುವರೆಂಬದು ಸ್ಪಷ್ಟವಾಗಿ ತಿಳಿದುಬರುವದು-ಈ ಜ್ಞಾನ ಉಂಟಾದ ರೇನೆ, ಮಧ್ಯಮ ಸ್ಥಿತಿಯ ದೇವತೆಗಳ ಬಗ್ಗೆ, ಅವರ ಸ್ವರೂಪಾದಿಗಳ ಬಗ್ಗೆ ಚನ್ನಾಗಿ ಆಲೋಚಿಸಲು ಅನುವು ದೊರೆಯುವದು. ಅದು ಹೇಗೆಂದರೆ, 'ಯುವಕ ವರ್ಗಕ್ಕೆ ಸೇರುವ ಇಂದ್ರಾದಿಗಳಿಗೆ ನಮಸ್ಕಾರವು' ಎಂದು ಹೇಳುವಾಗ್ಗೆ, ಅವರ ಯುವಕತ್ವವು ಲೌಕಿಕ-ಪ್ರಾಕೃತಿಕವಾದುದಲ್ಲ ಅದು ಶ್ರೇಷ್ಠವಾದುದು-,ಪುರಾಣ ಗಳಲ್ಲಿ ಪ್ರಸಿದ್ಧವಾದ ಈ ಮಾತನ್ನು ಎತ್ತಿ ತೋರಿಸುವರು.-(ಅಮೃತಮಂಥನದ ಕಾಲಕ್ಕೆ ಕ್ಷೀರಸಾಗರದಿಂದ ಪ್ರಕಟಳಾದ ಲಕ್ಷ್ಮಿಯು ಒಬ್ಬೊಬ್ಬ ದೇವತೆಯ ಗುಣ ದೋಷಗಳನ್ನು ವಿಮರ್ಶಿಸಿ; ಗುಣಪೂರ್ಣನೂ, ದೋಷರಹಿತನೂ, ಶ್ರೀವಿಷ್ಣುವೇ ಎಂದು ನಿರ್ಣಯಿಸಿ ಆತನನ್ನೇ ವರಿಸುವಳು. ಆ ಸಂದರ್ಭದಲ್ಲಿ ಇಂದ್ರನನ್ನು ಕುರಿತು ಅವಳು ಹೇಳಿದ ಮಾತುಗಳಿವು:-'ಸುಮಂಗಲಃ ಕಶ್ಚನ ಕಾಂಕ್ಷತೆ ಹಿ ಮಾಂ'- ಎಂದು.-ಕಲ್ಯಾಣಕರನಾದ ಒಬ್ಬನು (ಇಂದ್ರನು) ನನ್ನ ಬಗ್ಗೆ ಅಪೇಕ್ಷೆ ತಾಳಿ ರುವನು'.-ಯುವಕವರ್ಗಕ್ಕೆ ಸೇರಿದ್ದರೂ, ಇಂದ್ರನು ಕಲ್ಯಾಣಕರನೆಂಬುವದು ಆತನ ಯೋಗ್ಯತೆಗೆ ನಿದರ್ಶಕವಾಗಿದೆ. ಇಂದ್ರಾದಿಗಳ ಯುವಕತ್ವವು ಶ್ರೇಷ್ಠ ವಾಗಿರುವಂತೆ; ಸ್ಕಂದಾದಿಗಳ ಬಟುತ್ವವುಕೂಡ ಅಷ್ಟೇ ಸಮೀಚಿನವಾದುದೆಂಬುದು ಪುರಾಣಗಳಲ್ಲಿ ಪ್ರಸಿದ್ಧವಾಗಿದೆ. ಆರತೆಯೆ - ಬಟುಗಳಾದ ಸ್ಕಂದಾದಿಗಳಿಗೆ ನಮಸ್ಕೃತವಿರಲಿ' - ಎಂಬ ನುಡಿಯಲ್ಲಿಯೂ, ಸನಕಾದಿಗಳಿಗೆ ಸುಸಂಗತವಾದ ಸಮೀಚೀನತೆಗಳನ್ನು ಹೊಂದಿಸಿಕೊಳ್ಳಬೇಕು-ಮಹತ್ವ, (ವೃದ್ಧತ್ವ) ಯುವತ್ವ,

ಬಟುತ್ವ, ಶಿಶುತ್ವಗಳ ಬಗ್ಗೆ ಇಲ್ಲಿ ನಿರಪಿಸಿರುವ ವಿಶಿಷ್ಟ ಅರ್ಥಾಂತರಗಳಲ್ಲಿ ಹೀನತೆಯ ಸೋಂಕೆಂಬುದಿಲ್ಲ-

ದೇವೋತ್ತಮನಾದ ಶ್ರೀನಾರಾಯಣನನ್ನೂ, ಉಳಿದ ದೇವತೆಗಳನ್ನೂ ನಾಲ್ಕು ಬಗೆಯಲ್ಲಿ ನಮಸ್ಕರಿಸಿದ ಮೇಲೆ, ಸಿದ್ಧಪುರುಷರಾದ ಯೋಗಿಗಳನ್ನು (ಅದೆ ರೀತಿಯಲ್ಲಿ ವಿಶಿಷ್ಟಾರ್ಥಗಳಿಂದ) ನಮಸ್ಕರಿಸುವರು.- 'ನಮಃಇತಿ'- ಮಹಾಂತರಾದ ದತ್ತಕಪಿಲಾದಿಗಳಿಗೆ ನಮಸ್ಕಾರವಿರಲಿ. ಕೇವಲ ಮಹಾಂತರಾದ ಯೋಗಿಗಳಿಗೆ ಮಾತ್ರವಲ್ಲ, ಮಹಾಂತರಿಂದ ಮೊದಲು ಮಾಡಿ, ಶಿಶುವರ್ಗಕ್ಕೆ ಸೇರುವ ಯೋಗಿಗಳಿಗೂ ನಮಸ್ಕಾರವು-ಎಂಬುದು ಇಲ್ಲಿ ಅಭಿಪ್ರೇತವಾಗಿದೆ. ಹೀಗೆ ಹೇಳುವದರಿಂದ, ಯೋಗಿಗಳಲ್ಲಿಯೂ ಮಹತ್ವ, ಯುವತ್ವ-ಮುಂತಾದ ನಾಲ್ಕು ಪ್ರಕಾರಗಳಿರುವದನ್ನು ಪ್ರಕಟಿಸುವರು-(ಮಹತ್ ಪ್ರಕಾರದ ಯೋಗಿಗಳಂತೆಯೆ) ಯುವಪ್ರಕಾರದ ದುರ್ವಾಸ-ಶುಕ ಮುಂತಾದವರಿಗೂ ನಮಸ್ಕರಿಸುವರು. ಅದರಂತೆ ವಟು ಪ್ರಕಾರದ ಸ್ಕಂದಾದಿಗಳಿಗೂ ನಮಸ್ಕಾರವು. ಹೀಗೆಯೆ ಶಿಶು ಕೋಟಿಯ ಸನಕಾದಿಗಳಿಗೂ ನಮಸ್ಕಾರವು. ಹೆಸರಾಂತ ಯೋಗಿವರ್ಯರು, ಯೋಗಿಗಳ ಹೆಗ್ಗುರುತುಗಳುಳ್ಳವರು, ಇನ್ನುಳಿದ ಯೋಗಿಗಳು, ಅವಧೂತರ ಚಿನ್ಹಗಳಿಲ್ಲದವರೂ, (ಅಪ್ರಕಾಶಿತ) ಕೀರ್ತಿಯುಳ್ಳವರು-ಎಲ್ಲರನ್ನೂ (ರಾಜನು) ನಮಿಸುವನು.-'ನಮಃ ಇತಿ':- ಮಹಾಂತರಾದ ಋಷಿಗಳಿಗೆ ನಮಸ್ಕಾರ-ಅವರು ವೃದ್ಧರೆಂಬ ನಿಮಿತ್ತದಿಂದಲ್ಲ; ಬ್ರಹ್ಮಸಾಕ್ಷಾತ್ಕಾರವನ್ನು ಪಡೆದು, ಅದರಿಂದ ದೇಹಾಭಿಮಾನವನ್ನು ತೊರೆದು, ಅಂತೆಯೆ, (ಜನರ) ನಮಸ್ಕಾರಕ್ಕೆ ಅರ್ಹತೆಯ ದ್ಯೋತಕಗಳೆನಿಸುವ ದಂಡ, ಕಮಂಡಲು ಮುಂತಾದ ಚಿನ್ಹಗಳನ್ನೆಲ್ಲ ತ್ಯಜಿಸಿ, ಅಂತೆಯೆ ಸಾಮಾನ್ಯಜನರಿಗೆ ತಮ್ಮ ನಿಜಸ್ವರೂಪ ( ಯೋಗ್ಯತೆ ) ತಿಳಿಯದ ರೀತಿಯಲ್ಲಿ, ಈ ಭರತಭೂಮಿಯಲ್ಲಿ ಜನಿಸಿದ ಜನರ ಉದ್ಧಾರಕ್ಕಾಗಿ ಅವರು ದೇಶದಲ್ಲಿ ಅಲೆದಾಡುವರು.-ಇವರು ಆದ್ಯವರ್ಗದ ಮಹಾಂತರಾದ (ವೃದ್ಧರಾದ) ಯೋಗಿಗಳು. ಇಂಥವರಲ್ಲಿ ವಯಸ್ಸಿನಿಂದ ಹಿರಿಯರಾದವರಿಗೆ, ನರೆಗೂದಲು, ನಿರಿಗೆಗಟ್ಟಿದ ದೇಹವುಳ್ಳ ವೃದ್ಧರಿಗೆ ನಮಸ್ಕಾರ - ವೃದ್ಧರಿಗೆ ಮಾತ್ರವಲ್ಲ. ಮತ್ತೇಂದರೆ, ವೃದ್ಧರನ್ನು ಮೊದಲುಮಾಡಿಕೊಂಡು ಶಿಶುವರ್ಗದಪರ್ಯಂತ ವಾಗಿ ನಮಸ್ಕಾರ.- ಈ ಅರ್ಥವನ್ನು ಸೂಚಿಸಲು, ' ಆ ಮಹದ್ಭ್ಯಃ-' ಎಂಬಲ್ಲಿ 'ಆ' ಎಂಬ ಪ್ರತ್ಯಯವನ್ನು ಉಪಯೋಗಿಸಿರುವರು. ಸದ್ಯಕ್ಕೆ ತರುಣ ವಯಸ್ಸಿನ, ಗಟ್ಟಿದೇಹದ ಅವಧೂತರಿಗೆ ನಮಸ್ಕಾರವು.

'ಗಟ್ಟಿ ದೇಹದ ಅವಧೂತ' ಎಂದು ಹೇಳುವಾಗ್ಗೆ, ಇಂಥ ಅವಧೂತನಿಗೆ ತಾನು ಆಡಿದ ದುರುಕ್ತಿಗಳ, ಮಾಡಿರುವ ಅವಮಾನದ ನೆನಪು ಆಗಿ, ರಹೂ

ಗಣರಾಜನು ಕ್ಷಮೆಯ ಬೇಡಿಕೆಯನ್ನು ಸೂಚಿಸುವನು. ಇದೇ ರೀತಿಯಲ್ಲಿ ವಯಸ್ಸಿನಿಂದ ಚಿಕ್ಕವರಾದ ಬಟು ಪ್ರಕಾರದ ಅವಧೂತರಿಗೂ, ಇಷ್ಟೇ ಏಕೆ ? ಯಾವ ವೈಶಿಷ್ಟ್ಯವೂ ಇಲ್ಲದಿರುವ ಶಿಶುಪ್ರಕಾರದ ಅವಧೂತರಿಗೂ ರಾಜನು ನಮಸ್ಕರಿಸುವನು. – ವಂದನಗಳ ಈ ವಿವೇಚನದಿಂದ, 'ಶಂಕೆ ಭೃಶಂ ಬ್ರಹ್ಮಕುಲಾವಮಾನಾತ್' – (ಬ್ರಹ್ಮಜ್ಞಾನಿಗಳಿಗೆ ಮಾಡುವ ಅವಮಾನಕ್ಕೆ. ಎಲ್ಲ ದೇವತೆಗಳ ಆಯುಧಕ್ಕಿಂತಲೂ - ನಾನು ಹೆಚ್ಚಾಗಿ ಹೆದರುವೆ') - ಎಂಬ ಉಕ್ತಿಯ ಅರ್ಥವು ಸ್ಪಷ್ಟವಾಗುವದು.

ಎಲ್ಲರಿಗೂ ಹೀಗೆ ನಮಸ್ಕರಿಸುವಲ್ಲಿ ಏನು ಪ್ರಯೋಜನ, ಏನು ಫಲ, ? ಎಂದು ಕೇಳಿದರೆ, – 'ಅಷ್ಟಿತಷ್ಟಿ'– ಅಜ್ಞಾನದಿಂದ – ಮಹಾತ್ಮರಿಗೆ ಮಾಡಿದ ಅಪಮಾನ – ಅವಹೇಳನಗಳಿಂದ ಒದಗುವ ಪಾಪವು (ಅನಿಷ್ಟವು) ಈ ವಂದನೆಯಿಂದ ನಿವಾರಣೆಯಾಗುವದು. – ಎಂಬುದೇ ಮತಿತಾರ್ಥ.

ನಾವು ಮಾಡಿದ ಪಾಪಕ್ಕೆ ಒದಗುವ ಅನರ್ಥವನ್ನು ಕಳೆದು ಬಿಡುವ ಕಲ್ಯಾಣಕಾರ್ಯವು, ನಾಲ್ಕು ಬಗೆಯ ದೇವತಾ – ಹಾಗೂ ಯೋಗಿಗಳಿಗೆ ನಮಸ್ಕರಿಸುವದರಿಂದ ನಮಗೆ ಉಂಟಾಗಲಿ, – ಎಂಬುವದೇ ಪ್ರಯೋಜನವಾಗಿದೆ.

'ಮಹಾತ್ಮರಿಗೆ ಅವಮಾನ ಮಾಡುವದರಿಂದ ಉಂಟಾಗುವ ಕೇಡಕ ಯಾವದು ? ಯಾವುದರ ನಿವಾರಣೆಗಾಗಿ ನಾವು ಇಷ್ಟೆಲ್ಲ ಶ್ರಮಪಡಬೇಕು,? ಎಂಬ ಪ್ರಶ್ನೆಗೆ ರಾಜನ ಉತ್ತರವಿದು.– 'ನಾನೇನು ನಿರ್ಧನನಲ್ಲ. ಈ ಲೋಕದ ಸುಖಭೋಗಕ್ಕೆ ಅತಿದೊಡ್ಡ ಸಾಧನವಾದ ಅರಸೊತ್ತಿಗೆಯು ನನ್ನದು. ಪರ ಲೋಕದ ಸುಖಪ್ರಾಪ್ತಿಗಾಗಿ ಬೇಕಾದಷ್ಟು ಅನ್ನದಾನಾದಿಗಳನ್ನು ಮಾಡಿರುವೆ. ಆದುದರಿಂದ ಮಹಾತ್ಮರಿಗೆ ಮಾಡುವ ಅವಮಾನದಿಂದ ನನಗೆ ಶೀಘ್ರವೆ ಅನರ್ಥವಾಗುವದು.– ಹೀಗೆ ಹೇಳಿರುವರು:– 'ಆಯುಃ ಶ್ರಿಯಂ........ಮಹದತಿಕ್ರಮ':– ಮಹಾತ್ಮರಿಗೆ ಮಾಡುವ ಅತಿಕ್ರಮದಿಂದ – ಅವಮಾನದಿಂದ, ಅಂಥವನ ಆಯುಷ್ಯ, ಸಂಪತ್ತು, ಕೀರ್ತಿ, ಧೈರ್ಯ, ಎಲ್ಲರೂ ಬಯಸುವ ಮುಕ್ತಿ–ಇವೆಲ್ಲವೂ ನಷ್ಟವಾಗುವವು.–

ಇದರಿಂದ ಈ ಸಂಗತಿಯು ಸೂಚಿತವಾಗುವದು:– ಸಕಲ ಕಲ್ಯಾಣ ಗುಣ ಪೂರ್ಣನಾದ ನಾರಾಯಣನೇ ಸರ್ವೋತ್ತಮನು; ಆನಂತರ ಲಕ್ಷ್ಮೀದೇವಿಯು. ಸಮಗ್ರ ಜಗತ್ತಿಗೆ ಅವರೇ (ನಿರುಪಚರಿತ) ತಂದೆತಾಯಿಗಳು. ಆನಂತರದವ್ರು ಬ್ರಹ್ಮ ಹಾಗೂ ಬ್ರಹ್ಮಪತ್ನಿ, ಸರಸ್ವತೀದೇವಿ. ಉಳಿದ ದೇವತೆಗಳು ಈ ನಾಲ್ಕು ದೇವತೆಗಳ ಭಕ್ತರು, ಅವರೇ ನನಗೆ ಬಂಧುಗಳು. ನನ್ನ (ನಾರಾಯಣನ)

ನಿಮಿತ್ತವಾಗಿಯೆ ಅವರಿಗೆ ಬಂಧುತ್ವವು. ಒಮ್ಮೆ ನಾರಾಯಣನ ಮಗನೆಂದು, ಮತ್ತೊಮ್ಮೆ ಮೊಮ್ಮಗನೆಂದೂ ಎಂದು ಅವರಿಗೆ ಬಂಧುತ್ವವು. ಉಳಿದ ದೇವತೆಗಳಿಗೆ ಜಗತ್ತಿನ 'ತಾಯಿ-ತಂದೆ' ಗಳೆಂಬುವದು ಎಂದಿಗೂ ಸಲ್ಲದು. ಒಂದು ಸಂದರ್ಭದಲ್ಲಿ ಹಾಗೆ ತೋರಿದರೂ ಅದು ಈ ನಾಲ್ಕು ಅಧಿದೇವತೆಗಳಿಗೆ ಅಧೀನವಾದುದು, ಕೊನೆಗೆ ಅವರಿಗೇನೆ ಹೊಂದಿಕೊಳ್ಳುವದು. ಅವರಾದರೂ ಶ್ರೀ ನಾರಾಯಣನ ಸೇವೆಮಾಡಿ ಪಡೆದ ತಮ್ಮ ತಮ್ಮ ಯೋಗ್ಯತೆ ಉಳ್ಳವರು. ಶ್ರೀನಾರಾಯಣನ ಅನುಗ್ರಹವನ್ನೇ ಅವರೆಲ್ಲರೂ ಪ್ರಾರ್ಥಿಸುವರು. ಈ ಬಗೆಯ ನಿಶ್ಚಯಜ್ಞಾನವುಳ್ಳ ವೈಷ್ಣವರು ಮಾಡುವ ಪ್ರಾಯಶ್ಚಿತ್ತಗಳೇ ಪಾಪಪರಿಹಾರಕವಾಗುವವು.



# (೯) ಆತ್ಮಪ್ರಶಂಸಾ ವರ್ಜನ ಪ್ರಕರಣ

ಅಂತಿಮ ಪುರುಷಾರ್ಥವನ್ನು ಬಯಸುವವರು ಮಹಾತ್ಮರ ನಿಂದೆಯನ ಮಾಡಕೂಡದು, ಅದರಂತೆಯೆ ತಮ್ಮನ್ನು ತಾವೇ ಹೊಗಳಿಕೊಳ್ಳಬಾರದು.- ಈ ಮಾತನ್ನು ತಿಳಿಸಿಹೇಳಲು ಈ ಪ್ರಕರಣ.- ಬೇರೆಯವರು ತಮ್ಮನ್ನು ಹೊಗಳಿದ್ದನ್ನೂ ಕೇಳಬಾರದೆಂದಿರಲು, ತಮ್ಮನ್ನು ತಾವೇ ಹೊಗಳಬಾರದೆಂಬುವದು ತಾನಾಗಿಯೆ ಒಡೆದು ಕಾಣುತ್ತಿದೆ.- ಈ ಅಭಿಪ್ರಾಯವನ್ನು ಸೂಚಿಸಲು ಪೃಥು-ರಾಜನು ವಂದಿಮಾಗಧ (ಸ್ತುತಿ-ಪಾಠಕ)ರನ್ನು ಕುರಿತು ಆಡಿದ ಮಾತುಗಳನ್ನು ಇಲ್ಲಿ ಎತ್ತಿತೋರಿಸುವರು.-

॥೧೩॥ **ಹೇ ಸೂತ ಹೇ ಮಾಗಧ ಸೌಮ್ಯ ಬಂದಿನ್** ಪೃಥು
**ಲೋಕೇऽಧುನಾऽಸ್ಪಷ್ಟಗುಣಸ್ಯ ಮೇ ಸ್ಯಾತ್ ।** ವಂದಿಗಳಿಗೆ
**ಕಿಮಾಶ್ರಯೋ ಮಸ್ತವ ಏಷ ಯೋಜ್ಯತಾಂ**
**ಮಾ ಮಯ್ಯಭೂವನ್ ವಿತಥಾ ಗಿರೋ ವಃ ॥** 4-15-22

**ಅರ್ಥಃ**- ಹೇಸೂತನೆ, ಮಾಗಧನೆ, ಮೃದುಸ್ವಭಾವದ ಸ್ತುತಿಪಾಠಕನೆ! ನನ್ನಲ್ಲಿರುವ ಗುಣಗಳು ಇದುವರೆಗೆ ಯಾವರೀತಿಯಿಂದಲೂ ಹೊರಗೆ ಕಂಡು ಬಂದಿಲ್ಲ. ಹೀಗಿರುವ ನನ್ನನ್ನು ನೀವು ಹೊಗಳುತ್ತಿರುವಿರಿ. ಯಾವಗುಣದ ಆಧಾರದಿಂದ ನೀವು ನನ್ನನ್ನು ಹೊಗಳುವಿರಿ? ನನ್ನನ್ನು ಹೊಗಳುವ ನಿಮ್ಮ ಈ ಮಾತುಗಳು ಸಟೆಯಾಗದಿರಲಿ (ಅಸತ್ಯಪ್ರಶಂಸೆ ಯಾಗದಿರಲಿ). ಆದುದರಿಂದ ನನ್ನಲ್ಲಿಯ ಗುಣಗಳನ್ನು (ನೀವು ಕಂಡುಕೊಂಡು) ನಿಮ್ಮ ಮಾತುಗಳನ್ನು (ನನ್ನ ಸ್ತುತಿಗಾಗಿ) ಬಳಸಿರಿ.

(ವಾಡಿಕೆಯಂತೆ) ಸೂತ-ಮಾಗಧರು ನನ್ನನ್ನು ಹೊಗಳಲು ಬಂದಿರ ವರು. ಆತ್ಮಸ್ತುತಿಯನ್ನು ಕೇಳಲೇಬಾರದು. ಆದ್ದರಿಂದ, ನನ್ನಲ್ಲಿಯಗುಣಗಳು ಇನ್ನೂ ನಿಮಗೆ ತಿಳಿದಿಲ್ಲ-ವೆಂಬ ಕಾರಣವನ್ನು ಮುಂದೆಮಾಡಿ, ಅವರು ಸ್ತುತಿ ಸುವದನ್ನು ಈಗಂತೂ ತಪ್ಪಿಸಿ ಬಿಡೋಣ. ಮರಣಾಧೀನರಾದ ನಾವು ಮುಂದೇ ನಾಗುವದೆಂಬ ಬಗ್ಗೆ ವ್ಯರ್ಥವಾಗಿ ಏಕೆ ಆಲೋಚಿಸಬೇಕು?- (ಪೃಥುರಾಜನು ಈರೀತಿಯಲ್ಲಿ ತಪ್ಪಿಸಿಕೊಳ್ಳುವನು.-

॥೧೪॥ **ತಸ್ಮಾತ್ಪರೋಕ್ಷೇऽಸ್ಮದುಪಶ್ರುತಾನ್ಯಲಂ** ಪೃಥುರಾಜನು
**ಕರಿಷ್ಯಥ ಸ್ತೋತ್ರಮಪೀಚ್ಯವಾಚಃ ।**

**ಸತ್ಯುತ್ತಮಶ್ಲೋಕಗುಣಾನುವಾದೇ**
**ಜುಗುಪ್ಸಿತಂ ನ ಸ್ತವಯಂತಿ ಸಭ್ಯಾಃ ॥** 4-15-23

**ಅರ್ಥ:**-(ರಾಜನ ಸ್ತುತಿಮಾಡುವ ನಿಯಮಿತ ಕರ್ತವ್ಯವನ್ನು ಮಾಡದಿದ್ದರೆ ನಿಮ್ಮ ಚರಿತಾರ್ಥವು ನಡೆಯದ್ದರಿಂದ)-ನಮ್ಮಲ್ಲಿರುವ ಗುಣಗಳನ್ನು ಪರೋಕ್ಷವಾಗಿ (ನಾವಿಲ್ಲದ ಎಡೆಯಿಲ್ಲಿ) ಮನಸೋಕ್ತವಾಗಿ ಬೇಕಾದಷ್ಟು ಹೊಗಳಿರಿ. (ಅಪಿ) ಪ್ರತ್ಯಕ್ಷದಲ್ಲಿ ಮಾಡಬೇಕಾದುದು ಶ್ರೀ ಹರಿಸ್ತವನನ್ನು ಮಾತ್ರ ಆತನು (ಈಡ್ಯವಾಚಃ) ಸ್ತುತಿಗೆ ಅರ್ಹನಾದವನು. ಶ್ರೀಹರಿಯ ಗುಣ-ನಾಮಗಳು ಸ್ತುತ್ಯವಾದವು. (ರಾಜನ ಸ್ತುತಿಯನ್ನು ಆತನ ಸಮಕ್ಷವೆ ಏಕೆ ಮಾಡಬಾರದೆಂದರೆ) ಸುಮಂಗಳಕೀರ್ತಿಯಾದ ಶ್ರೀಹರಿಯ ಗುಣನಾಮಗಳು ಸ್ತವನಕ್ಕಾಗಿ ಇರಲು, ಹಾಗೆಮಾಡುವದನ್ನು ಬಿಟ್ಟು, ಸಭೆಯಲ್ಲಿರುವ ಮುಖ್ಯಸ್ಥರು ಹೇಯವಾದ ಆತ್ಮಪ್ರಶಂಸೆಯನ್ನು ಮಾಡಿಸಿಕೊಳ್ಳುವದಿಲ್ಲ.

ವಂದಿಗಳು ಹೇಳಬಹುದು:- ಅಡಿಗೆ, ನೀರುಗಳ ಕೆಲಸವನ್ನು ಒಬ್ಬೊಬ್ಬರಿಗೆ ಒಪ್ಪಿಸಿದಂತೆ ಮೊದಲುಕಾಲದಿಂದಲೂ ರಾಜರು ನಮಗೆ ಒಪ್ಪಿಸಿದ ಕರ್ತವ್ಯವಿದು. ಮೊದಲನೆಯದಾಗಿ, ಮಂತ್ರಿ ಮುಂತಾದ ಹಿರಿಯ ಅಧಿಕಾರಿಗಳ ಮನೆಗಳಲ್ಲಿ ಸಮಯೋಚಿತವಾಗಿ ರಾಜರ ಸ್ತುತಿಮಾಡಬೇಕು ಎರಡನೇಯದಾಗಿ ಒಡ್ಡೋಲಗದಲ್ಲಿಯ ರಾಜರ (ಆಗಮನ ಕಾಲಕ್ಕೆ) ಸ್ತುತಿಮಾಡಬೇಕು. ಈ ಕಾರ್ಯಮಾಡಲು ಉಚಿತವಾದ ಹೊಲಮನೆಗಳನ್ನು ನಮಗೆ ಉಂಬಳಿಯಾಗಿ ಹಾಕಿಕೊಟ್ಟಿರುವರು ಪ್ರತ್ಯಕ್ಷವಾಗಿ ಸ್ತುತಿಪಾಠದ ಈ ಪರಂಪರೆಯ ಕಾರ್ಯವನ್ನು ನಾವು ಹೇಗೆ ಬಿಟ್ಟು ಕೊಡಬೇಕು? ಇದನ್ನು ಬಿಟ್ಟುಕೊಟ್ಟರೆ ನಮ್ಮ ಉಪಜೀವನವೆ ಕಟ್ಟಾಗುವದು ಸ್ತುತಿಪಾಠಕರ ಈ ಆಕ್ಷೇಪಕ್ಕೆ-'ಶ್ರೀಹರಿಯ ಮಂಗಳ ಗುಣಕ್ರಿಯೆಗಳನ್ನು ಮಾತ್ರ ಪ್ರತ್ಯಕ್ಷವಾಗಿ ಸ್ತೋತ್ರಮಾಡಬೇಕು,'-ಎಂಬುದು ರಾಜನು ಹೇಳುವ ಸಮಾಧಾನ

ಈ ವಿಷಯದಲ್ಲಿ ಹೀಗೆ ಹೇಳಿರುವರು:-'ಪ್ರಭವೊ ... ವಿಗರ್ಹಿತಂ'

**ಅರ್ಥ;**- ಖ್ಯಾತಕೀರ್ತಿಯು, ಒಳ್ಳೇ ಉದಾತ್ತ ಮನಸ್ಸಿನ, ಹಾಗೂ. ಲಜ್ಜಾಶೀಲರಾದ ರಾಜಮಹಾರಾಜರಿಗೆ ನಿಂದ್ಯವಾದ ಆತ್ಮಪ್ರಶಂಸೆಯು ಅಸಹ್ಯವೂ, ನಾಚಿಕೆ ಪಡುವಂತಹದೂ ಎನಿಸುವದು.-

॥೧೩೪॥ **ಮಹದ್ಗುಣಾನಾತ್ಮನಿ ಕರ್ತುಮೀಶಃ** ಪೃಥುರಾಜ
**ಕಃ ಸ್ತಾವಕೈಃ ಸ್ತಾವಯತೇಽಸತೋಽಪಿ ।**
**ತೇಽಸ್ಯ ಭವಿಷ್ಯನ್ನಿತಿ ವಿಪ್ರಲಬ್ಧೋ**
**ಜನಾವಹಾಸಂ ಕುಮತಿರ್ನ ವೇದ ॥** 4-15-24

ಅರ್ಥ:- ತನ್ನಲ್ಲಿ (ನಿಜವಾಗಿ) ಇಲ್ಲದೇ ಇರುವ (ಮಹಾತ್ಮರ ಒಳ್ಳೇ) ಗುಣಗಳನ್ನು ತನ್ನಲ್ಲಿ ಇರುವಂತೆ ತೋರಿಸಿಕೊಡುವ (ಅದನ್ನೇ ಬದುಕಿನ ಸಾಧನವಾಗಿ ಮಾಡಿಕೊಂಡಿರುವ) ಸೂತ, ಮಾಗಧ ಮುಂತಾದ ಹೊಗಳುಭಟ್ಟರಿಂದ ಯಾರು ಹೊಗಳಿಸಿಕೊಳ್ಳುವನೊ, ಹೀಗೆ ಹೊಗಳಿಸಿಕೊಳ್ಳುವವನ ಬುದ್ಧಿಯು ಕುತ್ಸಿತವಾದುದು. ಆತನು (ಈ ಬಗೆಯ ಪ್ರಶಂಸೆಯಿಂದ) ಅಜ್ಞಜನರನ್ನು ಮೋಹಗೊಳಿಸುವನು, (ಆದರೆ) ಜ್ಞಾನಿಗಳು ತನ್ನನ್ನು ಅದಕ್ಕಾಗಿ ಅಪಹಾಸಮಾಡುವರೆಂಬುದರ ಅರಿವು ಆತನಿಗೆ ಇರುವದಿಲ್ಲ.

ಸ್ವಾಭಾವಿಕವಾಗಿ ತನ್ನಲ್ಲಿ ಇಲ್ಲದ ಮಹಾತ್ಮರ ಸದ್ಗುಣಗಳನ್ನು (ಔದಾರ್ಯಮುಂತಾದವುಗಳನ್ನು) ಮುಖಸ್ತುತಿಮಾಡುವ ತನ್ನ ಸೇವಕರಿಂದ ಹೊಗಳಿಸಿಕ್ಕೊಳ್ಳುವವನು ಜನರ ಅಪಹಾಸಕ್ಕೆ ಗುರಿಯಾಗುವನು.-

॥೧೩೭॥ **ಅಹಂ ಪುರಾತೀತಭವೇಽಭವಂ ಮುನೇ** ನಾರದರು
**ದಾಸ್ಯಾಸ್ತು ಕಸ್ಯಾಶ್ಚನ ವೇದವಾದಿನಾಂ ।** ವ್ಯಾಸರಿಗೆ
**ನಿರೂಪಿತೋ ಬಾಲಕ ಏವ ಯೋಗಿನಾಂ**
**ಶುಶ್ರೂಷಣೇ ಪ್ರಾವೃಷಿ ನಿರ್ವಿವಿಕ್ಷತಾಂ ॥** 1-5-23

ಅರ್ಥ:- ಮುನಿಯೇ (ಶ್ರೀವೇದವ್ಯಾಸರೆ) ಹಿಂದಿನ ಕಲ್ಪದಲ್ಲಿ ಒಬ್ಬ (ದಾಸೀ) ಸೇವಕಿಯಲ್ಲಿ ನಾನು ಹುಟ್ಟಿದೆನು ವೇದವೇತ್ತರಾದವರ (ಋಷಿಗಳ) ಮನೆಯಲ್ಲಿ ಅವಳು ಕೆಲಸಮಾಡುವವಳು. ಮಳೆಗಾಲದಲ್ಲಿ ಸಂಚಾರವಿಲ್ಲದ (ಚಾತುರ್ಮಾಸ್ಯಕ್ಕಾಗಿ) ಆ ಋಷಿಗಳು ಒಂದೆಡೆಗೆ ನೆಲಿಸಿದ್ದರು. ಈ ಋಷಿಗಳ ಸೇವೆಗೆಂದು ತಾಯಿಯು ನನ್ನನ್ನು ನೇಮಿಸಿದ್ದಳು.-

ಪುರಾ, ಎಂದರೆ ಹಿಂದಿನ ಕಲ್ಪದಲ್ಲಿ, ಅತೀತಭವೆ, ಎಂದರೆ ಹಿಂದಿನ ಜನ್ಮದಲ್ಲಿ, ತಂದೆ ಯಾರೆಂಬುದು ಗೊತ್ತಿಲ್ಲದ್ದರಿಂದ.- ದಾಸಿಯಾದ ತಾಯಿಯಿಂದ ಹುಟ್ಟಿದೆನೆಂದು ನಾರದರು ತಿಳಿಸಿ, ತಮ್ಮ ಪೂರ್ವಜನ್ಮದ ವೃತ್ತಾಂತವನ್ನು ಹೀಗೆ ಹೇಳುವರು:- ಗಂಧರ್ವರಾದ ನಾರದರಿಗೆ ಮಹಾತ್ಮರ ಅವಹೇಳನದಿಂದಲೆ, ದಾಸೀಪುತ್ರನಾಗಬೇಕಾಯಿತು. ದಾಸೀಪುತ್ರರಾದ ಶೂದ್ರಜನ್ಮದಲ್ಲಿಕೂಡ, ಮಹಾತ್ಮರ ಸೇವೆಯಿಂದಲೆ ಬ್ರಹ್ಮದೇವರ ಮಗನಾಗುವ ಸುಯೋಗವು ಒದಗಿತು.- ನಾರದರ ಮಾತುಗಳಿವು:- ಪೂರ್ವಕಲ್ಪದಲ್ಲಿ ನಾನೊಬ್ಬ ಗಂಧರ್ವ. ಉಪಬರ್ಹಣ- ಎಂಬುದು ನನ್ನ ಹೆಸರು. ಗಂಧರ್ವರೆಲ್ಲರಿಗೂ ನಾನು ಪ್ರೀತಿ-ಪಾತ್ರನು. ಒಳ್ಳೇ ಸುರೂಪಿಯು. ಮಾತಿನ ಮಾಧುರ್ಯದಿಂದ, ಜಾಣತನ ದಿಂದ ಹಾಗೂ ಭೋಗ

ವಸ್ತುಗಳಿಂದ ಸ್ತ್ರೀಯರ ಪ್ರೀತಿ-ಪಾತ್ರನಾಗಿದ್ದೆನು. ಸರ್ವದಾ ವಿಷಯ ಲಂಪಟ ನಾಗಿದ್ದೆನು. ಒಮ್ಮೆ (ದಕ್ಷಪ್ರಜಾಪತಿ) ವಿಶ್ವಸೃಕ್ ಮುಂತಾದ ಋಷಿಗಳು ದೇವಯಾಗದಲ್ಲಿ ತೊಡಗಿದ್ದರು. ಆ ಯಜ್ಞಸಮಾರಂಭದಲ್ಲಿ ಶ್ರೀಹರಿಯ ಗುಣ ಲೀಲೆಗಳನ್ನು ಸಂಗೀತವಾಗಿ ಹೇಳಲು, ಗಂಧರ್ವ ಹಾಗೂ ಅಪ್ಸರರ ಗಣಕ್ಕೆಲ್ಲ ಕರೆಬಂದಿತು. ಅದನ್ನರಿತು ನಾನು ಸ್ತ್ರೀಯರ ಸಹಿತವಾಗಿಯೇ ಅಲ್ಲಿಗೆ ಹೋಗಿ ಗಾನ ಮಾಡಿದೆನು. (ಸ್ತ್ರೀಯರಕೂಡ-ಯಜ್ಞಕ್ಕೆಹೋದದ್ದು) ನನ್ನಿಂದ ಅಪರಾಧ ವಾದ್ದರಿಂದ, '(ಯಜ್ಞಕ್ಕೆ) ಅಪಮಾನ ಮಾಡಿದ ನೀನು ತತ್‌ಕ್ಷಣ ನಿನ್ನ ತೇಜ ಸ್ಸನ್ನೆಲ್ಲ ಕಳೆದುಕೊಂಡು ಶೂದ್ರನಾಗಿ ಜನ್ಮತಾಳು'- ಎಂದು ಅವರು ಕೂಡಲೆ ಶಾಪಕೊಟ್ಟರು. ಆದುದರಿಂದ ನಾನು ದಾಸೀಪುತ್ರನಾಗಿ ಹುಟ್ಟಬೇಕಾಯಿತು. (ಆದರೆ ಆನಂತರ) ಬ್ರಹ್ಮವಾದಿಗಳಾದ ಮಹಾತ್ಮರ ಸೇವೆಯಿಂದ, ನಿಕಟ ಸಹ ವಾಸದಿಂದ ಬ್ರಹ್ಮದೇವರಿಗೆ ಮಗನಾಗುವ ಪಾತ್ರತೆಯು ನನಗೆ ಬಂದಿತು.

ಮಹನ್ನಿಂದೆಯಿಂದ ಎಷ್ಟೊಂದು ಅನರ್ಥವಾಗುವದೆಂಬುದೂ, ಮಹಾತ್ಮರ ಸೇವೆಯಿಂದ ಎಂತಹ ಮಹಾಫಲ ದೊರೆಯುವದೆಂಬದನ್ನೂ ತಿಳಿದುಕೊಂಡು, ಸುಜ್ಞರಾದವರು ಮಹನ್ನಿಂದೆಯನ್ನು ಬಿಟ್ಟುಕೊಡಬೇಕು, ಮಹತ್‌ಸೇವೆಯಿಂದ ಪುರುಷಾರ್ಥವನ್ನು ಪಡೆಯಬೇಕು.

॥೧೩೭॥ **ಇತ್ಥಂ ಶರತ್ಪ್ರಾವೃಷಿಕಾವೃತೂ ಹರೇ-** ನಾರದರು
**ರ್ವಿಶೃಣ್ವತೋ ಮೇಽನುಸವಂ ಯಶೋಽಮಲಂ ।**
**ಸಂಕೀರ್ತ್ಯಮಾನಂ ಮುನಿಭಿರ್ಮಹಾತ್ಮಭಿ-**
**ರ್ಭಕ್ತಿಃ ಪ್ರವೃತ್ತಾಽಽತ್ಮರಜಸ್ತಮೋಪಹಾ ॥** 1-5-28

**ಅರ್ಥ:**- ಶರದ್ ಹಾಗೂ ಮಳೆಗಾಲ, ಇವೆರಡು ಋತುಗಳ ಅವಧಿಯಲ್ಲಿ, ಮೂರು ಸವನ (ಸೋಮರಸವನ್ನು ತೆಗೆಯುವ, ಇಲ್ಲವೆ ಹವನ ಮಾಡುವ) ಕಾಲ ಗಳಲ್ಲಿ ಮಹಾತ್ಮರಾದ ಋಷಿಗಳು ಸಂಕೀರ್ತನ ಮಾಡುತ್ತಿದ್ದ ಶ್ರೀಹರಿಯ ನಿರ್ದೋ ಷವಾದ(ಕಲ್ಯಾಣಕರವಾದ)ಕೀರ್ತಿಯನ್ನು (ಗುಣಗಾನವನ್ನು) ಭಕ್ತಿಯಿಂದ ಕೇಳು ತ್ತಿದ್ದ ನನಗೆ (ನನ್ನಲ್ಲಿಯ) ರಜೋಗುಣ-ತಮೋಗುಣಗಳಿಂದ ಉಂಟಾದ ಮೋಹ ವನ್ನು (ಅಜ್ಞಾನವನ್ನು) ನಾಶಗೊಳಿಸಲು ಸಮರ್ಥವಾದ ಭಕ್ತಿಯು ಬೆಳೆದು ಬಂದಿತು.

ಋಷಿಗಳ ಸೇವೆಯಲ್ಲಿ ತಾಯಿಯು ನನ್ನನ್ನು ತೊಡಗಿಸಿದಳು - ಎಂದು ಹೇಳಿದೆ. ಎಷ್ಟುದಿನ ಸೇವೆ ಮಾಡಿದಿರಿ ? - ಅದರಿಂದ ಏನು ಫಲ ಪ್ರಾಪ್ತಿಯಾ ಯಿತು ? - ಎಂಬುದಕ್ಕೆ ಉತ್ತರವಿದು. ಆನಂತರ ಬ್ರಹ್ಮಪುತ್ರನಾಗುವ ಲಾಭವಾ

ಯಿತು. ಕಿಂಚಿತ್ ಕಾಲದ ಸೇವೆಗೆ ತತ್ಕಾಲದಲ್ಲಿ ಮೋಕ್ಷಕ್ಕೆ ನೇರವಾಗಿ ಸಾಧನವಾದ ಜ್ಞಾನವು ಲಭಿಸಿತು. ವಿಶುದ್ಧ ಭಕ್ತಿಯುಂಟಾಯಿತು. ಇದನ್ನರಿತ ಆ ಋಷಿಗಳು ಆ ಸ್ಥಳವನ್ನು ಬಿಡುವಾಗ್ಗೆ ಬ್ರಹ್ಮಜ್ಞಾನವನ್ನು ನನಗೆ ಉಪದೇಶ ಮಾಡಿದರು – ಅದರಿಂದ, ಒಂದು ಸಲ ಮಾತ್ರ ನನಗೆ ಬ್ರಹ್ಮದರ್ಶನವು (ಮಿಂಚಿನಂತೆ) ಆಯಿತು. ಮುಂದೆ ಆತನ ಸೇವೆಯಲ್ಲಿಯೇ ನಾನು ಕೆಲಕಾಲ ಕಳೆದು, ಕಾಲಾಂತರದಲ್ಲಿ ಮರಣ ಹೊಂದಿದೆನು. ಮುಂದಿನ ಜನ್ಮದಲ್ಲಿ ಬ್ರಹ್ಮದೇವರ ಮಗನಾಗಿ ಹುಟ್ಟಿದೆನು. –

ಹೀಗೆ ಹೇಳಿರುವರು,–'ತಸ್ಯೈವಂ.......ಕೃಪಯಾ ದೀನವತ್ಸಲಾಃ'

**ಅರ್ಥ:**– ವಿನೀತನಾಗಿ, ಪಾಪರಹಿತನಾಗಿ, ಶ್ರದ್ಧೆಯುಳ್ಳವನಾಗಿ, ಬಾಲಕನಾದರೂ, ಜಿತೇಂದ್ರಿಯನಾಗಿ, ಪ್ರೀತಿ-ಪೂರ್ವಕವಾಗಿ ನಾನು ಪರಬ್ರಹ್ಮನ ಸೇವೆಯನ್ನು (ಆತನನ್ನು ಕುರಿತು ತಪಸ್ಸನ್ನು) ಮಾಡುತ್ತಿರಲು ದೀನರ ಬಗ್ಗೆ ಕರುಣಾಶಾಲಿಗಳಾದ ಋಷಿಗಳು ತಾವು ಹೋಗುವಾಗ್ಗೆ ಕರುಣೆಯಿಂದ ನನಗೆ ಜ್ಞಾನೋಪದೇಶವನ್ನು ಮಾಡಿದರು. ಆ ಜ್ಞಾನವು ಅತ್ಯಂತ ಗುಹ್ಯ (ರಹಸ್ಯ)ವಾದುದು; ಸಾಕ್ಷಾತ್ ನಾರಾಯಣನಿಂದಲೇ ಹೇಳಲ್ಪಟ್ಟದ್ದು. ಅನಂತ ಕಲ್ಯಾಣ ಗುಣಪರಿಪೂರ್ಣನು, ಸರಿ ಮಿಗಿಲಿಲ್ಲದ ಸರ್ವಶಕ್ತನೂ ಆದ ಶ್ರೀ ವಾಸುದೇವನ ಮಾಯಾಶಕ್ತಿಯ ಮಹಿಮೆಯನ್ನು ನಾನು ಅರಿತು ಕೊಂಡಿರುವದು ಅವರು ಕೊಟ್ಟ ಜ್ಞಾನದ ಪ್ರಭಾವದಿಂದಲೇ. ಈ ಜ್ಞಾನವೇ ಪರಮಾತ್ಮನ ಪಾದಸನ್ನಿಧಿಗೆ ನಮ್ಮನ್ನು ಕರೆದೊಯ್ಯುವದು.–

(ಹಿಂದಿನ) ಇವೆರಡು ಪ್ರಕರಣಗಳಿಂದ 'ತಪಸ್ಸೆ'ಂಬ ಭಾಗವತಧರ್ಮವು ನಿರೂಪಿಸಲ್ಪಟ್ಟಿದೆ.–

ಸ್ವಂತದ ಏಳಿಗೆಗಾಗಿ, ಅನ್ಯರ ಅವನತಿಗಾಗಿ ಮಾನವನ ಮನಸ್ಸು (ಸ್ವಾಭಾವಿಕವಾಗಿ) ಹವಣಿಸುತ್ತದೆ,– ಎಂಬುದು ಎಲ್ಲರ ಅನುಭವಕ್ಕೆ ಬಂದಮಾತು. ಆತ್ಮಪ್ರಶಂಸೆ,– ಪರನಿಂದೆ, ಎಂಬ ಪದಗಳು ಇದೇ ಅರ್ಥವನ್ನೇ ಸೂಚಿಸುತ್ತವೆ. ತನ್ನನ್ನು ಹೊಗಳುವದು ಪರರನ್ನೆಲ್ಲ ಹೀಗಳೆಯುವದು, ಇದೇ ಸಹಜಪ್ರವೃತ್ತಿಯಿಂದ ಪ್ರೇರಿತವಾಗಿರುತ್ತವೆ. ಇವೆರಡರಿಂದ ಒದಗುವ ಅನರ್ಥಗಳು ಸಪ್ರಮಾಣವಾಗಿ ಸಿದ್ಧವಾಗಿವೆ. ಆದುದರಿಂದ, ಶ್ರೇಯಸ್ಸನ್ನು (ಪುರುಷಾರ್ಥವನ್ನು) ಬಯಸುವವರು, ತಮ್ಮ ಮನಸ್ಸು ಆತ್ಮಸ್ತುತಿ, ಪರನಿಂದೆಗಳಕಡೆಗೆ ಹರಿಯದಂತೆ

ಸರ್ವಥಾ ನೋಡಿಕೊಳ್ಳಬೇಕು. ಇವೆರಡೂ ಪ್ರವೃತ್ತಿಗಳನ್ನು ನಿಗ್ರಹಿಸುವದೇ ಮಾನಸಿಕ ತಪಸ್ಸು. ಮೂಲಕಾರಣವಾದ ಮನಸ್ಸನ್ನೇ ನಿಯಂತ್ರಿಸುವದರಿಂದ, ಆತ್ಮಸ್ತುತಿ, ಹಾಗೂ ಪರನಿಂದೆಯ ಮಾತುಗಳು ಬಾಯಿಂದ ಹೊರಡಲಾರವು.

ಆತ್ಮಪ್ರಶಂಸೆಯಿಂದ ತನ್ನ ದೋಷಗಳು ತನಗೆ ತಿಳಿಯದೆ, ಆ ವ್ಯಕ್ತಿಯಲ್ಲಿ ದುರಭಿಮಾನವು ಉತ್ಪನ್ನವಾಗುವದು. ಅನ್ಯರನ್ನು ಹೀಗಳೆಯಲು ಈ ಬಗೆಯ ದುರಭಿಮಾನವೇ ಕಾರಣವು.-



# ೧೦. ಇಂದ್ರಿಯ ಜಯ ಪ್ರಕರಣ

||೧೩೮|| **ಸಂಗಂ ತ್ಯಜೇತ ಮಿಥುನವ್ರತಿನಾಂ ಮುಮುಕ್ಷುಃ** ಸೌಭರಿ ಋಷಿ
**ಸರ್ವಾತ್ಮನಾ ನ ವಿಸೃಜೇತ್ ಬಹಿರಿಂದ್ರಿಯಾಣಿ ।**
**ಏಕಶ್ಚರನ್ ರಹಸಿ ಚಿತ್ತಮನಂತ ಈಶೇ**
**ಯುಂಜೀತ ತದ್ವ್ರತಿಷು ಸಾಧುಷು ಚೇತ್ಪ್ರಸಂಗಃ ||** ೯-೬-೫೧
6-51

**ಅರ್ಥಃ**:- ಮೋಕ್ಷವನ್ನು ಪಡೆಯುವ ಆಕಾಂಕ್ಷೆಯುಳ್ಳವನು ಸ್ತ್ರೀಪುರುಷರ ಸಂಭೋಗವೆಂಬ ಪಾಪದ ಕ್ರಿಯೆಯಲ್ಲಿ ಆಸಕ್ತಿಯನ್ನು ಬಿಟ್ಟುಕೊಡಬೇಕು. (ಶ್ರೀ ಹರಿಚರಣದಲ್ಲಿ ಮನಸ್ಸನ್ನು ನಿಲ್ಲಿಸಬೇಕೆನ್ನುವವನು) ತನ್ನ ಇಂದ್ರಿಯಗಳನ್ನು ಹೊರಗಿನ (ಭೋಗ್ಯ) ವಿಷಯಗಳಕಡೆಗೆ ಹರಿಯಗೊಡದಂತೆ ಎಲ್ಲ ರೀತಿಯಿಂದಲೂ ಯತ್ನಿಸಬೇಕು. ದೇಶ - ಕಾಲ-ಗುಣಗಳಿಗೆ ಅತೀತನಾದ ಶ್ರೀಹರಿಯ ಚರಣದಲ್ಲಿ ಏಕಾಂತದಲ್ಲಿ ಒಬ್ಬನೇ ( ಧ್ಯಾನಸ್ಥನಾಗಿ ಕುಳಿತುಕೊಂಡು ) ಆತನು ತನ್ನ ಮನಸ್ಸು ಭಗವಂತನಲ್ಲಿ (ದೃಢವಾಗಿ) ನೆಲಿಸುವಂತೆ ಮಾಡಬೇಕು. ಸಂಗವನ್ನೇ ಮಾಡುವದಿದ್ದರೆ, (ಚೇತ್)-(ಆಸಕ್ತಿಯನ್ನೇತಾಳಬೇಕಿದ್ದರೆ), ಶ್ರೀಹರಿಯಲ್ಲಿ ತಮ್ಮ ಚಿತ್ತವನ್ನು ಸಂಪೂರ್ಣವಾಗಿ ವಹಿಸಿದ ಸಜ್ಜನರಲ್ಲಿ ಸುದೃಢವಾದ ಸಂಗವನ್ನು ಮಾಡಬೇಕು.

ಮಹತಸೇವೆಯಂತೆಯೆ ಇಂದ್ರಿಯಗಳನಿಗ್ರಹವೂ ಆಧ್ಯಾತ್ಮಿಕ ಸಾಧಕನಿಗೆ ಅತ್ಯಗತ್ಯವಾದುದು. ಅದಕ್ಕಾಗಿ ಇಂದ್ರಿಯಗಳನ್ನು ಅಂಕಿತದಲ್ಲಿ ಇಟ್ಟುಕೊಳ್ಳಲು ಪ್ರಯತ್ನಮಾಡಬೇಕು. ಇಂದ್ರಿಯಗಳನ್ನು ಏತಕ್ಕಾಗಿ ಗೆಲ್ಲಬೇಕೆಂಬುದನ್ನು ಈ ಶ್ಲೋಕದಲ್ಲಿ ಹೇಳಿದೆ.- ಇಂದ್ರಿಯಗಳನ್ನು ಅವುಗಳ ಮೆಚ್ಚಿನ ವಿಷಯಗಳಿಂದ (ವಸ್ತುಗಳಿಂದ) ದೂರವಾಗಿ ಇಟ್ಟುಕೊಳ್ಳುವದೇ, ಅವುಗಳ ಗೆಲವಿಗೆ ಸಾಧನ ವಾಗಿದೆ.-

ಹೀಗೆ ಹೇಳಿರುವರು:- 'ಅಥಾಪಿ ನೊ ವಿಷಜ್ಜೇತ್ .... .... ಬಲವಾನ್ ಇಂದ್ರಿಯಗ್ರಾಮೊ ವಿದ್ವಾಂಸಮಪಿಕರ್ಷತಿ' - - ( ಸಜ್ಜನರ ಪಾದಗಳಲ್ಲಿ ತಮ್ಮ ಮನಸ್ಸನ್ನಿಡದೆ, ಸ್ತ್ರೀಯರಲ್ಲಿ ಆಸಕ್ತಿವಹಿಸಿದರೆ ಯಾವಹಾನಿಯಾಗುವದೆಂಬುದನ್ನು ಉದ್ಧೃತವಾದ ಈ ಶ್ಲೋಕಗಳಲ್ಲಿ ತೋರಿಸಿರುವರು-.-

**ಅರ್ಥ**:- ಅಂತಿಮ ಪುರುಷಾರ್ಥವಾದ ಮೋಕ್ಷದ ತಿಳುವಳಿಕೆ ಉಳ್ಳವನು ಸ್ತ್ರೀಯರಲ್ಲಿ, (ಮಾತ್ರವಲ್ಲದೆ) ಸ್ತ್ರೀಲಂಪಟರಲ್ಲಿ (ಕೂಡ) ಅತ್ಯಾಸಕ್ತಿಯನ್ನು

ತಾಳಬಾರದು. ಚಿತ್ತ ಕ್ಷೋಭೆಯಾಗುವದು, (ಮನಸ್ಸು ವಿಕಾರವಶವಾಗುವದು) ವಿಷಯಗಳ, (ಭೋಗ್ಯವಸ್ತುಗಳ) ಹಾಗೂ ಇಂದ್ರಿಯಗಳ ಸನ್ನಿಧಾನದಿಂದ, ಒಂದೆಡೆಗೆ ಕೂಡಿಕೊಳ್ಳುವದರಿಂದಲೆ ಆಗುವದು. ಅದಕ್ಕೆ ಬೇರೊಂದು ಕಾರಣವಿಲ್ಲ. (ಆದುದರಿಂದ) ಪ್ರಾಯದ (ಹರೆಯದ) ವಯಸ್ಸಿನವನು ಗುರುಪತ್ನಿಯರಿಂದ (ವಯಸ್ಸಿನಿಂದ ಇಲ್ಲವೆ ಸ್ಥಾನ ಮಾನದಿಂದ ಶ್ರೇಷ್ಠರಾಗಿರುವ ಸ್ತ್ರೀಯರಿಂದ) ಹಾಗೂ ತರುಣಿಯರ ಕೈಯಿಂದ ಕೇಶಾಲಂಕಾರ (ಹಿಕ್ಕಿಸಿಕೊಳ್ಳುವದು ಮುಂತಾದವು)' ಎಣ್ಣೆ ಹಚ್ಚಿಸಿಕೊಳ್ಳುವದು, ಎರೆಸಿಕೊಳ್ಳುವದು, ಕಾಡಿಗೆ ಹಚ್ಚಿಸಿಕೊಳ್ಳುವದು,- ಮುಂತಾದ ಸಂಗತಿಗಳನ್ನು - ಮಾಡಕೂಡದು. ಕಾರಣವೆಂದರೆ, ಸ್ತ್ರೀಯು ಅಗ್ನಿಯಂತೆ, ಪುರುಷನು ತುಪ್ಪದಕೊಡದಂತೆ. (ಸ್ತ್ರೀಯರ ಲಂಪಟದಲ್ಲಿ ಆತನ ಮನಸ್ಸಿನ ದಾರ್ಢ್ಯವೆಲ್ಲ ಕರಗಿನೀರಾಗುವದು.) ಪುರುಷಾರ್ಥವನ್ನು ತಿಳಿದ ಜ್ಞಾನಿಯು, ತನ್ನಮಗಳ ಜೊತೆಯಲ್ಲಿಯೂ ಏಕಾಂತದಲ್ಲಿ ಇರಬಾರದು, ಅದರಂತೆಯೇ ತಾಯಿ, ತಂಗಿ, ಮಗಳು-ಇವರೊಡನೆಯೂ ಒಂದೇ ಆಸನದಲ್ಲಿ ಕೂಡಬಾರದು. (ಏಕೆಂದರೆ) ಇಂದ್ರಿಯಗಳು ಬಲಿಷ್ಠವಾದವುಗಳು, ಜ್ಞಾನಿಯಾದವನ ಮನಸ್ಸನ್ನು ಕೂಡ ಸೆಳೆದು ಭ್ರಷ್ಟನನ್ನಾಗಿ ಮಾಡುವವು. ಆಸಕ್ತಿಯನ್ನೇ ವಹಿಸುವದಿದ್ದರೆ, ವಿಷಯಗಳಲ್ಲಿ ಸಂಗವನ್ನು ತೊರೆದು, ಭಗವಂತನ ಪಾದಗಳಲ್ಲಿಯೆ ರಮಮಾಣರಾದ ಸಾಧುಗಳಲ್ಲಿ ಅತ್ಯಧಿಕವಾದ ಸಂಗವನ್ನು ಮಾಡಬೇಕು. ಸತ್ಸಂಗದಿಂದ ಇಂದ್ರಿಯ ಜಯವು ಸುಲಭವಾಗಿ ಸಾಧಿಸುವದು. ಇಂದ್ರಿಯಗಳನ್ನು ವಿಷಯಗಳಿಂದ ದೂರವಾಗಿ ಇಡುವದು ಇಂದ್ರಿಯಜಯಕ್ಕೆ ಸಾಮಾನ್ಯವಾದ ಸಾಧನ; ಸತ್ಸಂಗದಲ್ಲಿ ಅದಾದರೂ ಸಾಧಿಸುವದು-ಎಂದು ಬೇರೆ ಹೇಳಬೇಕಿಲ್ಲ.-ಸ್ತ್ರೀಯರಲ್ಲಿ ಇಲ್ಲವೆ ಸ್ತ್ರೀಯರೆ ಮೂಲವಾಗಿರುವ ಸಂಸಾರದಲ್ಲಿ ಅತ್ಯಾಸಕ್ತಿಯಿಂದ ವ್ಯಕ್ತಿಯ ಅಧಃಪಾತವು ಕೂಡಲೆ ಆಗುವದು. ಭಗವದ್ಭಕ್ತರಲ್ಲಿಯೆ ವಿಶೇಷವಾಗ ಆಸಕ್ತಿ-ಅನುರಾಗಗಳನ್ನು ತಾಳಬೇಕು.-

**೧೩೪|| ಯಥಾಽಽಮಯೋಂಗೇ ಸಮುಪೇಕ್ಷಿತೋನೃಭಿ-**
**ರ್ನ ಶಕ್ಯತೇ ರೂಢಪದಶ್ಚಿಕಿತ್ಸಿತುಂ |**
**ಯಥೇಂದ್ರಿಯಗ್ರಾಮ ಉಪೇಕ್ಷಿತಸ್ತಥಾ**
**ರಿಪುರ್ಮಹಾನ್ ಲಬ್ಧಬಲೋ ನ ಚಾಲ್ಯತೇ ||** ೧೦-೫-೪೮ 4-3 8

ಅರ್ಥ:- ಬಹುಕಾಲದವರೆಗೆ ಗಮನಕ್ಕೆ ತಂದುಕೊಳ್ಳದ ರೋಗವು ಶರೀರದಲ್ಲಿ ದೃಢವಾಗಿ ಬೇರೂರಿನಿಲ್ಲುವದು. ಅಂಥರೋಗಕ್ಕೆ ಚಿಕಿತ್ಸೆಮಾಡುವದು ಅಶಕ್ಯವಾಗುವದು. ಶತ್ರುವನ್ನು ಉಪೇಕ್ಷಿಸಿದರೆ (ಅವನ ನಾಶದಬಗ್ಗೆ ಲಕ್ಷಕೊಡದಿದ್ದರೆ) ಆತನು ಅತಿಬಲಿಷ್ಠನಾಗಿ, ಆತನನ್ನು ಗೆಲ್ಲುವದು ಅಶಕ್ಯವಾಗುದದು. ಇದೇ

ಮೇರೆಗೆ ಇಂದ್ರಿಯಗಳ ಸಮೂಹವನ್ನು (ಗೆಲ್ಲಲು ಯತ್ನಮಾಡದೆ) ವಿಷಯಗಳತ್ತ ಹರಿಯಲು ಹಾಗೆಯೆ ಬಿಟ್ಟುಕೊಟ್ಟರೆ, ಅವು ನಿಗ್ರಹಿಸಲು ಬಾರದಷ್ಟು ಬಲಿಷ್ಠವಾಗುವವು.

ಉಪೇಕ್ಷಿತನಾದ ಶತ್ರು ನಮ್ಮ ಶಕ್ತಿಗೆ ಮೀರಿ ಬಲಿಷ್ಠನಾಗುವದನ್ನು ಉದಾಹರಣೆಯಾಗಿ ಕೊಟ್ಟು, ಇಂದ್ರಿಯ-ನಿಗ್ರಹದ ವಿಷಯದಲ್ಲಿ ಉದಾಸೀನರಾಗದೆ ಯತ್ನಿಸಬೇಕೆಂದು ಅಭಿಪ್ರಾಯ.-

**॥೧೬೦॥ ಮೌನವ್ರತಶ್ರುತತಪೋಽಧ್ಯಯನಸ್ವಧರ್ಮ-**
**ವ್ಯಾಖ್ಯಾರಹೋಜಪಸಮಾಧಯ ಆಪವರ್ಗ್ಯಾಃ ।**
**ಪ್ರಾಯಃ ಪರಂ ಪುರುಷ ತೇಽತ್ವಜಿತೇಂದ್ರಿಯಾಣಾಂ**
**ವಾರ್ತಾ ಭವಂತ್ಯುತ ನವಾಽತ್ರತು ದಾಂಭಿಕಾನಾಂ ॥ ೭-೯-೪೬**

ಇಂದ್ರಿಯಗಳನ್ನು ಗೆಲ್ಲದಿದ್ದರೆ, ಮೋಕ್ಷಪ್ರಾಪ್ತಿಗೆ ಸಹಕಾರಿಗಳಾದ ಉಳಿದ ಎಲ್ಲ ಸಾಧನಗಳು ತಮ್ಮತಮ್ಮ ಫಲವನ್ನು ಕೊಡದೆ ನಿರರ್ಥಕವಾಗುವವು-

**ಅರ್ಥ:-** ಹೇ ಪರಮಾತ್ಮನೆ! ಮೌನ (ಲೌಕಿಕ ಹಾಳುಹರಟೆಯನ್ನು ಬಿಡುವದು), ವ್ರತ (ಉಪವಾಸಾದಿಗಳು), ತಪಸ್ಸು, ಶಾಸ್ತ್ರಾಭ್ಯಾಸ, ವೇದಪಠಣ, ವರ್ಣಾಶ್ರಮದಂತೆ ಆಚರಿಸುವದು, ವ್ಯಾಖ್ಯಾನ (ಆಧ್ಯಾತ್ಮಿಕವಿಷಯಗಳ ಬಗ್ಗೆ ಪ್ರವಚನ), ಏಕಾಂತಧ್ಯಾನ, (ಪರಮಾತ್ಮನಲ್ಲಿ) ಮನಸ್ಸಿನ ಏಕಾಗ್ರತೆ,- ಇವುಗಳೆಲ್ಲ (ಆಪವರ್ಗಕ್ಕೆ) ಮೋಕ್ಷ ಪಡೆಯುವದಕ್ಕೆ ಸಾಧನಗಳೆಂದು ಶ್ರುತಿಗಳಲ್ಲಿ ಪ್ರಸಿದ್ಧವಾಗಿವೆ.-ಆದರೂ ಅವು (ಖಂಡಿತವಾಗಿ ಅಲ್ಲ) ಪ್ರಾಯಶಃ (ಬಹುತೇಕವಾಗಿ) ಮೋಕ್ಷದ ಸಾಧನಗಳು. ಏಕೆಂದರೆ, ಶ್ರುತಿ-ಪ್ರಸಿದ್ಧವಾದ ಇವೆಲ್ಲ ಸಾಧನಗಳು, ಇಂದ್ರಿಯನಿಗ್ರಹವಿಲ್ಲದವರಿಗೆ, ಲೌಕಿಕಜೀವನದಲ್ಲಿಯೂಕೂಡ (ಮೋಕ್ಷಪ್ರಾಪ್ತಿಗೆ ಸಾಧನವಾಗದೆ) ಕೇವಲ ಚರಿತಾರ್ಥದ ಸಾಧನಗಳಾಗುವ ಭರವಸೆಯೂ ಇಲ್ಲ. ಅಥವಾ ಇವೆಲ್ಲ ಡಂಭಾಚಾರವೆಂದು ಜನರಿಗೆ ಗೊತ್ತಾದರೆ, ಹೊಟ್ಟೆ ತುಂಬಿಸಿಕೊಳ್ಳಲೂ ಅವು ಸಾಧನಗಳಾಗುವದಿಲ್ಲ. (ಡಾಂಭಿಕರಿಗೆ ಜನರೂ ಸಹಾಯಮಾಡುವದಿಲ್ಲ).

ಮೌನ ಮುಂತಾದವು 'ಪ್ರಾಯಶಃ'-ಮುಕ್ತಿಗೆ ಸಾಧನಗಳು ಹೇಗೆ?-ಎಂದರೆ, ಅವು ಡಂಭಾಚಾರವಾದರೆ, ಮುಕ್ತಿಯಂತೂ ದೂರ ಉಳಿಯಿತು, ಅವು ಉದರಪೂರ್ತಿಯ ಸಾಧನಗಳೂ ಕೂಡ ಆಗುವದಿಲ್ಲ.-

॥೧೪೨॥ ಯನ್ಮೈಥುನಾದಿಗೃಹಮೇಧಿ ಸುಖಂ ಹಿ ತುಚ್ಛಂ
ಕಂಡೂಯನೇನ ಕರಯೋರಿವ ದುಃಖದುಃಖಂ |
ತೃಪ್ಯಂತಿ ದೇಹಕೃಪಣಾ ಬಹುದುಃಖಭಾಜಃ
ಕಂಡೂತಿವನ್ಮನಸಿಜಂ ವಿಷಹೇತ ಧೀರಃ ॥ ೭-೯-೪೫

ಇಂದ್ರಿಯಜಯವು ಅಗತ್ಯವೆಂಬುದನ್ನು ಒಪ್ಪಿಕೊಳ್ಳೋಣ - ಇಂದ್ರಿಯಗಳನ್ನುಗೆಲ್ಲಲು ಸಾಧನವು ಯಾವದು?-ಇಂದ್ರಿಯಗಳ ನಿಗ್ರಹಕ್ಕೆ ಇದುವೇ ಸಾಧನ, ಇದುವೇ ವಿಧಾನ-ಎಂಬುದನ್ನು ಈ ಶ್ಲೋಕದಲ್ಲಿ ಹೇಳಿರುವರು.-

**ಅರ್ಥ**;-(ಕಜ್ಜಿ-ಹುರ್ರಕುಗಳಿಂದ ಬಳಲುವವನಿಗೆ) ತಿಂಡಿಗಾಗಿ ಎರಡೂ ಕೈಗಳನ್ನು ಜೋರಾಗಿ ತಿಕ್ಕುವದರಿಂದ ಉಂಟಾಗುವ ತಾತ್ಕಾಲಿಕಸುಖ, ಆನಂತರ ತುಂಬಾ ವ್ಯಥೆಯಾಗುವದು. ಸ್ತ್ರೀಯರ ಕೂಡ ಸಂಭೋಗ - ಸಲ್ಲಾಪಗಳಿಂದ ಸಂಸಾರಿಗೆ ಉಂಟಾಗುವ ಸುಖವೂ ತಾತ್ಕಾಲಿಕ, (ಕ್ಷಣಿಕ) ವಾದುದು, ಮುಂದೆ ಅದರಿಂದ ಒದಗುವ ದುಃಖವೂ ಅತೀವವಾದುದು. ಶಾರೀರಿಕ ಸುಖಗಳಲ್ಲಿಯೇ ಆಸಕ್ತರಾದವರು, (ಅವುಗಳನ್ನೇ ಮೆಚ್ಚಿಕೊಂಡವರು) ಮುಂದೆ ಬಹುದುಃಖದಾಯಕವಾದ ಅಂದಿನ ಕ್ಷಣಿಕ (ಶಾರೀರಿಕ) ಸುಖದಲ್ಲಿಯೇ ಸಂತೋಷ ಪಡೆಯುವರು; ಅದರಲ್ಲಿಯೇ ಸಾರ್ಥಕತೆಯನ್ನು ಕಂಡುಕೊಳ್ಳುವರು. ಆದರೆ (ಜಿತೇಂದ್ರಿಯನಾದ) ವಿವೇಕಿಯಾದವನು, (ಕಜ್ಜಿಯ ತಿಂಡಿಯನ್ನೆ ಸಹಿಸಿಕೊಂಡು ಮುಂದಿನ ಹೆಚ್ಚಿನ ನೋವನ್ನು ತಪ್ಪಿಸಿಕೊಳ್ಳುವಂತೆ)-ವಿಷಯಗಳ ಬಗ್ಗೆ ತನ್ನ ಮನಸ್ಸಿನಲ್ಲಿ ಉಂಟಾಗುವ ಕಾಮೋದ್ರೇಕವನ್ನೇ (ತೀವ್ರವಾದ ಬಯಕೆಯನ್ನೇ) ತಡೆದುಕೊಳ್ಳಬೇಕು. (ಅದರಿಂದ ಮುಂದೆ ಒದಗುವ ಹೆಚ್ಚಿನ ಅನರ್ಥವನ್ನು ತಪ್ಪಿಸಬೇಕು)

ಒಟ್ಟಾರೆ ಹೇಳುವದೆಂದರೆ,-ಕಜ್ಜಿಯಾದ ಮನುಷ್ಯನು, ತಿಂಡಿಯು ಜೋರಾದಾಗ್ಗೆ ಎರಡುಕೈಗಳನ್ನು ಗಟ್ಟಿಯಾಗಿ ಒಂದೊಕ್ಕೊಂದು ತಿಕ್ಕಿಕೊಳ್ಳುವನು. ಅದರಿಂದ ಪ್ರಾರಂಭದಲ್ಲಿ ಆತನಿಗೆ ತುಸು (ಹಾಯ್) ಸಮಾಧಾನವೆನಿಸುವದು. ಮುಂದೆ ಕೈಗಳ ಘರ್ಷಣೆಯಿಂದ ಕಜ್ಜಿ ಒಡೆದು, ರಕ್ತಒಸರಿ, ಆತನ ಕೈಯು ಉರಿಯತೊಡಗುವದು.-ಶಾರೀರಿಕ ಅಲ್ಪ ಸುಖಕ್ಕೆ ಮೆಚ್ಚಿದವನ ಗತಿಯೂ ಇದರಂತೆಯೆ. ಆದರೆ (ವಿವೇಕಿಯೂ, ಜಿತೇಂದ್ರಿಯನೂ) ಆದ ಬೇರೊಬ್ಬನು ಶಾರೀರಿಕ ಸುಖವು ಅತ್ಯಲ್ಪವೆಂದೂ, ಅದರಿಂದ ಒದಗುವ ಅನರ್ಥವು ಅಪಾರವೆಂದು ತಿಳಿದುಕೊಂಡು; ಶಾರೀರಿಕ ಸುಖದಬಗ್ಗೆ) ಮನಸ್ಸಿನಲ್ಲಿ ಹುಟ್ಟುವ ಕಾಮೋದ್ರೇಕವನ್ನೇ ತಡೆದುಕೊಂಡು, ಸಂಭೋಗಾದಿಗಳಲ್ಲಿ ಅತ್ಯಾಸಕ್ತಿಯನ್ನು ವಹಿಸಬಾರದು. ಈ ರೀತಿಯನ್ನು ರೂಢಿಮಾಡಿಕೊಂಡರೆ, ಈ ಕ್ರಮಕ್ಕನುಗುಣವಾಗಿ ಇಂದ್ರಿಯಜಯವು ಸಾಧಿಸುವದು.

ಇಲ್ಲಿ ಹೇಳಿರುವದರಿಂದ, 'ತಿತಿಕ್ಷಾ' ಎಂಬ ಭಾಗವತ ಧರ್ಮವನ್ನು ತೋರಿಸಿರುವರು-

||೧೪೨|| ನೈತನ್ಮನಸ್ತವ ಕಥಾಸು ವಿಕುಂಠನಾಥ
ಸಂಪ್ರೀಯತೇ ದುರಿತದುಷ್ಟಮಸಾಧು ತೀವ್ರಂ |
ಕಾಮಾತುರಂ ಹರ್ಷಶೋಕಭಯೈಷಣಾರ್ತಂ
ತಸ್ಮಿನ್ ಕಥಂ ತವ ಗತಿಂ ವಿಮೃಶಾಮಿ ದೀನಃ || ೭ ೯-೩೯

ಸಕಲ ಇಂದ್ರಿಯಗಳಲ್ಲಿ ಮನಸ್ಸೇ ಅತಿಪ್ರಬಲವಾದುದು, ಏಕೆಂದರೆ ಉಳಿದ ಇಂದ್ರಿಯಗಳೆಲ್ಲ ಮನಸ್ಸಿಗೆ ಅಂಕಿತವಾಗಿ ಕಾರ್ಯಮಾಡುವವು. ಕುಸ್ತಿಯ ಪಂದ್ಯಾಟದಲ್ಲಿ ಮುಖ್ಯಜಟ್ಟಿಯನ್ನೇ ಗೆದ್ದರೆ, ಚಿಕ್ಕಪುಟ್ಟ ಮಲ್ಲರನ್ನು ಗೆದ್ದಂತಾಗುವದು, ಅದರಂತೆಯೇ ಅತಿ ಪ್ರಬಲವಾದ ಮನವನ್ನೇ ಮೊದಲು ಗೆದ್ದು ಬಿಡಬೇಕು-ಎಂಬ ಅಭಿಪ್ರಾಯದಿಂದ, ಮನಸ್ಸಿನ ಸ್ವಭಾವ ವಿಶೇಷವನ್ನು ಹೇಳುವರು-

**ಅರ್ಥ:**- ಹೇ ವೈಕುಂಠದೊಡೆಯನೆ! ಪಾಪಕೃತ್ಯಗಳಿಂದ ದೂಷಿತವಾದುದು. (ಸ್ವಭಾವದಿಂದಲೆ) ದುಷ್ಟವಾದುದು, ಕಾಮಾತುರವಾದುದು, ಹಾಗೂ ಸಂತೋಷ, ದುಃಖಭೀತಿಗಳಿಂದಲೂ, ಮಡದಿ-ಮಕ್ಕಳು ಮನೆ-ಮಾರುಗಳ ಚಿಂತೆಯಿಂದಲೂ ವ್ಯಥಿತವಾದುದು, ಅತ್ತಿತ್ತ ಹರಿಯುವ ಚಂಚಲ ಸ್ವಭಾವದ್ದೂ-ಹೀಗಿರುವ ಮನಸ್ಸಿಗೆ ನಿನ್ನ ಲೀಲಾದಿಗಳ ಕಥೆಯನ್ನು ಕೇಳುವದರಲ್ಲಿ ಅಭಿರುಚಿಯೇ (ಆಸಕ್ತಿಯೇ) ಇರುವದಿಲ್ಲ.- (ನಿನ್ನ ಮನಸ್ಸು ಈ ರೀತಿಯಾಗಿ ಇರಲಿ. ಹರಿಕಥೆಯನ್ನು ಕೇಳುವದರಲ್ಲಿ ಉದಾಸೀನವಾಗಿರಲಿ-ನೀನು ಭಗವತ್ ಕಥೆಯನ್ನು ಕೇಳುವದರಲ್ಲಿ ತೊಡಗು-ಎಂದರೆ, ಇವೆಲ್ಲ ಕಾರಣಗಳಿಂದ ಮನಸ್ಸು ನಿರ್ವಿಣ್ಣವಾಗಿರುವಾಗ್ಗೆ, ಅದರಿಂದ ನಾನೂ ಹತಾಶನಾಗಿ ಬಿಟ್ಟಿರುವೆನು. ಹೀಗಿರಲು, ನಿನ್ನ ಸ್ವರೂಪ-ಶಕ್ತಿಗಳ ಬಗ್ಗೆ (ನಿರ್ವಿಣ್ಣವಾದ ಮನಸ್ಸಿನಿಂದ) ಹೇಗೆ ತಿಳಿದುಕೊಳ್ಳಬಲ್ಲೆನು?-

||೧೪೩|| ದಾನಂ ಸ್ವಧರ್ಮೋ ನಿಯಮೋ ಯಮಶ್ಚ   ಕೃಷ್ಣ
ಶ್ರುತಾನಿ ಕರ್ಮಾಣಿ ಚ ಸದ್ವ್ರತಾನಿ |   ಉದ್ಧವಗೆ
ಸರ್ವೇ ಮನೋನಿಗ್ರಹಲಕ್ಷಣಾಂತಾಃ
ಪರೋ ಹಿ ಯೋಗೋ ಮನಸಃ ಸಮಾಧಿಃ || ೧೧-೨೩-೪೬

ಇಷ್ಟೊಂದು ಮಹತ್ವವಿರುವ ಮನೋನಿಗ್ರಹದ ಬಗ್ಗೆ ಆಸ್ಥೆ-ಆದರಗಳನ್ನು ಹುಟ್ಟಿಸಲು, ಮನೋನಿಗ್ರಹವನ್ನು ಹೊಗಳಿರುವದು.-

ಅರ್ಥ:- ದಾನ, ಸ್ವಧರ್ಮಾಚರಣ, (ಮೌನ, ಅಪರಿಗ್ರಹ ಮುಂತಾ ಗಿ) ಯಮ ನಿಯಮಗಳು, ಶಾಸ್ತ್ರಶ್ರವಣ (ಗುರುಗಳ ಬಾಯಿಂದ), ಸತ್ಕಾರ್ಯ ಗಳು, (ಉಪವಾಸಾದಿ) ಒಳ್ಳೇವ್ರತಗಳು,- ಇವುಗಳಿಗೆಲ್ಲ ಕೊನೆಯ ಫಲ (ಪರಿಣಾಮ) ಮನೋನಿಗ್ರಹವೇ ಆಗಿದೆ. ಅದುದರಿಂದ. ಮನಸ್ಸನ್ನು ಅತ್ತಿ ಹರಿಯಗೊಡದೆ, ಶ್ರೀಹರಿಯ ಧ್ಯಾನದಲ್ಲಿ ಸ್ಥಿರವಾಗಿ ನಿಲ್ಲುವಂತೆ ಮಾಡುವ ಆಧ್ಯಾತ್ಮದ ಸಾಧನಗಳಲ್ಲಿ ಶ್ರೇಷ್ಠವಾಗಿದೆ.-

ಹೀಗೆ ಹೇಳಿರುವರು:-'ತಸ್ಮಾತ್ ಸರ್ವಾತ್ಮನಾ ... ಯೋಗಸಂಗ್ರಹ:'
(೧೧-೨೩-(೧)

ಅರ್ಥ:- (ಉದ್ಧವನಿಗೆ ಭಗವಂತನ ಉಪದೇಶವಿದು)- ಆದುದರಿಂ (ಉದ್ಧವನೆ,) ನಿನ್ನ ಮನಸ್ಸನ್ನು ಸರ್ವರೀತಿಯಿಂದಲೂ ಬುದ್ಧಿಯಿಂದ ನಿ ಹಿಸು. (ವಿವೇಕಕ್ಕೆ ಅಂಕಿತವನ್ನಾಗಿ ಮಾಡು). ಆ ಬುದ್ಧಿಯನ್ನು ನನ್ನ ಲೀನಗೊಳಿಸು. ಮೋಕ್ಷಪ್ರಾಪ್ತಿಯ ಉಪಾಯಗಳಲ್ಲಿ ಇದುವೇಶ್ರೇಷ್ಠವಾದುದು.

ಸಾಧಕನು ತನ್ನಲ್ಲಿಯ ಸರ್ವ ಶಕ್ತಿಯನ್ನು ಬಳಸಿ ಮನೋನಿಗ್ರ ಮಾಡಬೇಕು.

॥೧೪॥ **ಸಮಾಹಿತಂ ಯಸ್ಯ ಮನಃ ಪ್ರಶಾಂತಂ**
**ದಾನಾದಿಭಿಃ ಕಿಂ ವದ ತಸ್ಯ ಕೃತ್ಯಂ।**
**ಅಸಂಯತಂ ಯಸ್ಯ ಮನೋ ವಿನಶ್ಯೇ-**
**ದ್ದಾನಾದಿಭಿಶ್ಚೇದಪರಂ ಕಿ ಮೇಭಿಃ** ॥ ೧೧-೨೩-೪೬

ಮೋಕ್ಷಪ್ರಾಪ್ತಿಗಾಗಿ ಕೈಕೊಳ್ಳುವ ಎಲ್ಲ ಸಾಧನಗಳೂ ಮನೋನಿಗ್ರಹ ಲ್ಲಿಯೆ ಮುಕ್ತಾಯವಾಗುವವು. ಎಂಬುದನ್ನು ಮತ್ತಿಷ್ಟು ಸ್ಪಷ್ಟಗೊಳಿಸುವರು.

ಅರ್ಥ:- (ವಿವೇಕಿಯಾದವನು) ಯಾರು ತನ್ನ ಮನಸ್ಸನ್ನು ಅಂಕಿತದಲ್ಲಿ ಇಟ್ಟುಕೊಳ್ಳುವನೊ ಅವನ ಮನಸ್ಸು ಅಚಲವಾಗಿರುವದು. (ಇಂದ್ರಿಯವಿಷ ಯಗಳು ಅದನ್ನು ಕದಡಿಸಲಾರವು). (ಸ್ವಸ್ಥಚಿತ್ತನಾದ) ಅಂಥ ವ್ಯಕ್ತಿಗೆ ದಾನ ವ್ರತ ಮುಂತಾದ ಅನ್ಯಸಾಧನಗಳಿಂದ ಏನು ಪಡೆದುಕೊಳ್ಳುವದಿದೆ.?- (ಏಕೆಂ ದರೆ, ಮನೋನಿಗ್ರಹವನ್ನೇ ಎಲ್ಲ ಸಾಧನಗಳಿಂದ ಪಡೆಯಬೇಕಾದುದು.)-ಮನೋ ನಿಗ್ರಹವನ್ನೇ ಪಡೆದ ಮೇಲೆ, ಬೇರೆ ಸಾಧನಗಳಿಂದ ಪಡೆಯಬೇಕಾದುದು ಬೇರೆ ಯಾವುದೂ ಇಲ್ಲ). ದಾನಾದಿಗಳನ್ನು ಮಾಡಿದರೂ (ಅವಿವೇಕಿಯಾದ) ಯಾರ

ಮನಸ್ಸು ಅಂಕಿತವಾಗಿ ಉಳಿಯದೆ, ತನ್ನ ಚಾಂಚಲ್ಯದಿಂದ ನೂರೆಂಟು ವಿಷಯಗಳತ್ತ ಹರಿದು ಸಮಾಧಾನವೃತ್ತಿಯನ್ನು ಕಳೆದುಕೊಳ್ಳುವದೋ, ಅಂಥ (ಚಂಚಲ ಹಾಗೂ ಅಶಾಂತ ಮನೋವೃತ್ತಿಯುಳ್ಳ) ವ್ಯಕ್ತಿಗೆ ತಾನು ಮಾಡುವ ದಾನಾದಿ ಸಾಧನಗಳಿಂದ ಮನೋನಿಗ್ರಹಕ್ಕಿಂತಲೂ ಅನ್ಯವಾದ ಯಾವ ಪ್ರಯೋಜನವನ್ನು ಪಡೆಯುವದಿದೆ?- ಮನೋನಿಗ್ರಹವನ್ನು ತಂದುಕೊಡದ ದಾನಾದಿಗಳು ನಿರರ್ಥಕವೆಂದು ಹೇಳಿದುದರಿಂದ,- ಎಲ್ಲ ಮುಕ್ತಿಸಾಧನಗಳಿಗೆ ಮನೋನಿಗ್ರಹವೇ ಮುಖ್ಯಫಲವಾಗಿರುವದೆಂಬುದನ್ನು ತಿಳಿದುಕೊಳ್ಳಬೇಕು.-

**॥೧೪೫॥ ತಥಾಽಪಿ ಸಂಗಃ ಪರಿವರ್ಜನೀಯೋ**
**ಗುಣೇಷು ಮಾಯಾರಚಿತೇಷು ತಾವತ್ ।**
**ಮದ್ಭಕ್ತಿಯೋಗೇನ ದೃಢೇನ ಯಾವ-**
**ದ್ರಜೋ ನಿರಸ್ಯೇತ ಮನಃಕಷಾಯಮ್ ॥ ೧೧-೨೮-೨೭**

ಮನೆಮಾರುಗಳನ್ನು ಮಾಡಿಕೊಂಡಿರುವ ಸಂಸಾರಿಗಾಗಲಿ, ಅಥವಾ ಅವುಗಳನ್ನೆಲ್ಲ ತೊರೆದು ಬಿಟ್ಟಿರುವ ವಿರಕ್ತನಿಗಾಗಲಿ, ತನ್ನ ಮನಸ್ಸು ತನ್ನ ಸ್ವಾಧೀನದಲ್ಲಿರುವದೆಂಬ ಭಾವನೆಯು ಒಂದು ವೇಳೆ ಆಗಬಹುದು. ಮನೋನಿಗ್ರಹದ ಈ ತಾತ್ಕಾಲಿಕ, ಕ್ಷಣಿಕ ಭಾವನೆಯಿಂದ (ಮನೋನಿಗ್ರಹವನ್ನು ಪಡೆದಿರುವೆನೆಂಬ) ಅಂಥವನು ತುಂಬಾ ತೃಪ್ತನಾಗಬಾರದು. ಏಕೆಂದರೆ ತನ್ನ ಚಂಚಲ ವೃತ್ತಿಯನ್ನು ಪೂರ್ಣವಾಗಿ ಬಿಟ್ಟುಕೊಟ್ಟಿರದ ಆತನ ಮನಸ್ಸು ವಿಷಯಗಳ ಕಡೆಗೆ ನುಗ್ಗಿ ಆತನನ್ನು ನಾಶಗೊಳಿಸುವದು. ಆದುದರಿಂದ ತನ್ನ ಮನಸ್ಸು ಸ್ವಾಧೀನದಲ್ಲಿರುವದೆಂದು ಭಾವಿಸುವ ವ್ಯಕ್ತಿಯು ಕೂಡ ವಿಷಯಗಳ ಸನ್ನಿಧಿ-ಸಂಪರ್ಕಗಳಿಂದ ದೂರವಾಗಿ ಉಳಿಯಬೇಕು. ಸ್ವಾಧೀನ - ಚಿತ್ತವುಳ್ಳ ವ್ಯಕ್ತಿಯೆ ಇಷ್ಟುದಕ್ಷತೆ ವಹಿಸಬೇಕಾಗಿರಲು, ಮನೋನಿಗ್ರಹವಿಲ್ಲದವನು ವಿಷಯಗಳ ಸಂಪರ್ಕದಿಂದ ಬಹುದೂರವಾಗಿ ಉಳಿಯಬೇಕೆಂದು ಬೇರೆ ಹೇಳಬೇಕಿಲ್ಲ.- ಶ್ರೀಕೃಷ್ಣನು ಉದ್ಧವನಿಗೆ ಹೇಳಿದ ಉಪದೇಶವಿದು.-

**ಅರ್ಥಃ**- (ಮನಸ್ಸು ಸ್ವಾಧೀನವಾಗಿರುವದೆಂದು ತೋರುವದುಂಟು), ಹೀಗಿದ್ದರೂ, (ಕಾಮಾದಿ ವಿಕಾರಗಳಿಂದ ಮನಸ್ಸು ಚಂಚಲವಾಗದೆ) ನನ್ನಲ್ಲಿ (ಭಗವಂತನಲ್ಲಿ) ದೃಢವಾದ ಭಕ್ತಿಯೆಂಬ ಉಪಾಯದಿಂದ ಮನಸ್ಸು ತಮೋಗುಣದಿಂದ ಉಂಟಾಗುವ ವಿಕೃತಿಯನ್ನು, ರಜೋಗುಣದ ಪರಿಣಾಮಗಳಾದ ಲೋಭಮುಂತಾದವುಗಳನ್ನು ಎಲ್ಲಿಯತನಕ ಕಳೆದುಕೊಳ್ಳುವದಿಲ್ಲವೊ, ಅಲ್ಲಿಯತಕನ (ಭಗವಂತನ) ಮಾಯಾರೂಪವಾದ ಪ್ರಕೃತಿಯ ಗುಣಗಳಲ್ಲಿ-ರೂಪ, ರಸ,

ಗಂಧಗಳಿಂದ ಮೋಹಕವಾದ ವಿಷಯಗಳಲ್ಲಿ - ಸಂಗವನ್ನು, ಅವುಗಳ ಸಂಪರ್ಕ ವನ್ನು ಸರ್ವಥಾ ಬಿಟ್ಟುಕೊಡಬೇಕು.- ಮನಸ್ಸನ್ನು ಸೆಳೆಯುವ ವಿಷಯಗಳಿಂದ ದೂರವಾಗಿ ಉಳಿಯಬೇಕು.

||೧೪೬|| ಯಥಾಽಽಮಯೋಽಸಾಧು ಚಿಕಿತ್ಸಿತೋ ನೃಣಾಂ
ಪುನಃಪುನಃ ಸಂತುದತಿ ಪ್ರರೋಹನ್ ।
ಏವಂ ಮನೋಽಪಕ್ವಕಷಾಯಕರ್ಮ
ಕುಯೋಗಿನಾಂ ವಿಧ್ಯತಿ ಸರ್ವಸಂಗಂ || ೧೧-೨೮-೨೭
೨೩

ಮನೋನಿಗ್ರಹವನ್ನು ಸಾಧಿಸದಿದ್ದರೆ, ಒದಗುವ ಅನರ್ಥವನ್ನು ಉದಾಹರಣೆಯಿಂದ ತಿಳಿಸಿರುವರು.-

**ಅರ್ಥ**:- ರೋಗವನ್ನು ಸರಿಯಾಗಿ ತಿಳಿದುಕೊಂಡು ಶೀಘ್ರವಾಗಿ ಅದರ ನಿವಾರಣೆಗಾಗಿ ಉಪಾಯ ಮಾಡದಿದ್ದರೆ, ಅದೇ ರೋಗವು ಪ್ರಬಲವಾಗಿ ಬೆಳೆಯುವದು. ಹಾಗೂ (ರೋಗಿಗೆ) ಹೆಚ್ಚುಹೆಚ್ಚಾಗಿ ವ್ಯಥೆಯನ್ನುಂಟು ಮಾಡುವದು. ಇದೇ ರೀತಿಯಲ್ಲಿ, ಮೋಕ್ಷಪ್ರಾಪ್ತಿಯ ಮಾರ್ಗದಲ್ಲಿ ಇನ್ನೂಸ್ಥಿರವಾಗಿ ನೆಲಿಸದಿರುವ ಹಾಗೂ ಪಾಪಕರ್ಮಗಳನ್ನು ಇನ್ನೂ ಪೂರ್ಣವಾಗಿ ತ್ಯಜಿಸದವನ, ಹಾಗೂ ಎಲ್ಲ (ಇಂದ್ರಿಯ) ವಿಷಯಗಳಲ್ಲಿಯೂ ಆಸಕ್ತನಾಗಿರುವ ಮಾನವನನ್ನು ಆತನ ಮನಸ್ಸು ಪೀಡಿಸಿ ವ್ಯಥೆಯನ್ನುಂಟುಮಾಡುವದು.- 'ಈರೀತಿ ಭೋಗಿ' ಇಂದ್ರಿಯ - ಜಯ'ವೆಂಬ ಭಾಗವತಧರ್ಮವು ಇಲ್ಲಿ ಹೇಳಲ್ಪಟ್ಟಿದೆ.



# ೧೧. ಬ್ರಹ್ಮೋಪದೇಶ ಪ್ರಕರಣ

॥೧೪೭॥ ಜನ್ಮಾದ್ಯಸ್ಯ ಯತೋಽನ್ವಯಾದಿತರತ-
ಶ್ಚಾರ್ಥೇಷ್ವಭಿಜ್ಞಃ ಸ್ವರಾಟ್
ತೇನೇ ಬ್ರಹ್ಮ ಹೃದಾ ಆದಿಕವಯೇ
ಮುಹ್ಯಂತಿ ಯಂ ಸೂರಯಃ।
ತೇಜೋವಾರಿಮೃದಾಂ ಯಥಾ ವಿನಿಮಯೋ
ಯತ್ರ ತ್ರಿಸರ್ಗೋ ಮೃಷಾ
ಧಾಮ್ನಾ ಸ್ವೇನ ಸದಾ ನಿರಸ್ತಕುಹಕಂ
ಸತ್ಯಂ ಪರಂ ಧೀಮಹಿ- ॥ ೧೧-೧

ಪುರಾಣಾದಿಗಳ ಶ್ರವಣದಿಂದ ಪಡೆದು ಆಳವಾಗಿರದ ಅಲ್ಪ ಜ್ಞಾನವನ್ನು ಪಡೆದವನು, ಹಿತ-ಕರ್ತರಾದ ತಂದೆತಾಯಿಗಳ ಹಿತೋಕ್ತಿ ಇಲ್ಲವೆ ಪೂರ್ವ ಜನ್ಮದಲ್ಲಿ ಮಾಡಿದ ಪುಣ್ಯಕರ್ಮಗಳ ಸಂಸ್ಕಾರದಿಂದ ಶಾಸ್ತ್ರಗಳ ತಾತ್ಪರ್ಯವನ್ನು ಸಂಕ್ಷೇಪವಾಗಿ ತಿಳಿದವನು, ಅದೇ ಕಾಲದಲ್ಲಿ ವೈರಾಗ್ಯದ ಉದಯ (ಪ್ರಾರಂಭ) ವಾದವನು, ಸಜ್ಜನರ ಸಹವಾಸದಿಂದ ಕಿಂಚಿತ್ ವೈರಾಗ್ಯವನ್ನು ಪಡೆದವನು, ಭಗವದ್ಭಕ್ತರ ಸೇವೆಯನ್ನು ಮಾಡಿ ಅವರ ಅನುಗ್ರಹಕ್ಕೆ ಪಾತ್ರನಾದವನು, ಸ್ವೋತ್ತಮರ ನಿಂದೆಯನ್ನೂ ಹಾಗೂ ಸ್ವಂತದ ಸ್ತುತಿಯನ್ನು ಮಾಡದವನು, ಇಂದ್ರಿಯಗಳನ್ನು ಅಂಕಿತದಲ್ಲಿ ಇಟ್ಟುಕೊಂಡವನು,- ಇಷ್ಟೊಂದು ಸಂಸ್ಕಾರಗಳನ್ನೆಲ್ಲ ಪಡೆದವನಿಗೆ-(ಯೋಗ್ಯ) ಗುರುಗಳು ಏನು ಉಪದೇಶ ಮಾಡುವರೆಂಬುದನ್ನು ತೋರಿಸುವರು.-

ಬ್ರಹ್ಮೋಪದೇಶಕ್ಕೆ ಪಾತ್ರತೆಯುನ್ನು ಹಿಂದಿನ ಪ್ರಕರಣಗಳಲ್ಲಿ ಹೇಳಿರುವರು. ಅದನ್ನೇ-'ಸಂಕ್ಷಿಪ್ತಾವಗತಶಾಸ್ತ್ರಸ್ಯ-ಶಾಸ್ತ್ರಗಳ ಸಾರವನ್ನು ಸಂಕ್ಷೇಪವಾಗಿ ತಿಳಿದುಕೊಂಡವನು-ಎಂದು ಸಂಕ್ಷೇಪಿಸಿ ಹೇಳಿರುವರು.- 'ಅಶೇಷಗುಣಪೂರ್ಣತ್ವಂ ಸರ್ವದೋಷ ಸಮುಜ್ಝಿತಿಃ। ವಿಷ್ಣೋಃ ಅನ್ಯಚ್ಚ ತತ್ತಂತ್ರಮಿತಿ ಸಮ್ಯಗ್ ವಿನಿರ್ಣಯಃ'- (ಶ್ರೀ ವಿಷ್ಣುವು ಸಕಲ ಕಲ್ಯಾಣ ಗುಣ ಪೂರ್ಣನು, ಸರ್ವದೋಷಗಳಿಂದ ದೂರನಾದವನು, ಆತನನ್ನು ಬಿಟ್ಟು ಉಳಿದ ಚೇತನಾಚೇತನ ಸೃಷ್ಟಿಯೆಲ್ಲವೂ ಆತನ ವಶದಲ್ಲಿರುವದು ) ಅದರಂತೆ 'ನಿರ್ದೋಷತ್ವಂ ರಮಾಯಾಶ್ಚ ತದನಂತರತಾ ತಥಾ। ಸತ್ ಸಿದ್ಧಾಂತ ಇತಿ ಜ್ಞೇಯೊ ನಿರ್ಣೀತೊ

ಹರಿಣಾ ಸ್ವಯಂ॥' (ಶ್ರೀ ವಿಷ್ಣುವಿನನಂತರ ರಮಾದೇವಿಯರು ದೋಷ ಮುಕ್ತರು, ಅಪ್ರಾಕೃತ ಶರೀರ ಉಳ್ಳವರು, ನಿತ್ಯಮುಕ್ತರು. ಬ್ರಹ್ಮರುದ್ರಾದಿ ದೇವತೆಗಳು ಇವರಿಬ್ಬರಿಗೆ ಅಂಕಿತರು.') ನಿರ್ದುಷ್ಟವಾದ ಈ ಸಿದ್ಧಾಂತವನ್ನು ಶ್ರೀ ಮನ್ನಾರಾಯಣನೇ ನಿರ್ಣಾಯಕವಾಗಿ ಹೇಳಿರುವನು)- ಶ್ರೀ ವಿಷ್ಣು-ತೀರ್ಥರು ಈ ಸಿದ್ಧಾಂತವನ್ನೆ ಈ ಪ್ರಕರಣದಲ್ಲಿ ಸಂಕ್ಷೇಪವಾಗಿ ನಿರೂಪಿಸಿರುವರು. ಶ್ರೀ ಮದ್ಭಾಗವತದ 'ವಿಜಯಧ್ವಜ ಟೀಕೆ'ಯಲ್ಲಿ ಇದರ ವಿವರವಾದ ವಿವೇಚನೆ ಇದೆ.)

**ಅರ್ಥ** :- ಶೃತಿಸ್ಮೃತಿಗಳ ತಾತ್ಪರ್ಯದಿಂದ ಹಾಗೂ ಶೃತಿಗಳಿಗೆ ಸಮ್ಮತವಾದ ಅನ್ವಯ-ವ್ಯತಿರೇಕಾನುಮಾನಗಳಿಂದ, ಚೇತನಾಚೇತ್ಮಕವಾದ ಈ ಜಗತ್ತಿಗೆ ಉತ್ಪತ್ತಿ, ಸ್ಥಿತಿ, ಲಯ, ಜ್ಞಾನ, ಅಜ್ಞಾನ, ಬಂಧ, ಮೋಕ್ಷ, ನಿಯಮಗಳನ್ನು ಮಾಡುವ ಸ್ವತಂತ್ರಕರ್ತನು, ಎಂದು ವಿದಿತನಾದವನು; ತನ್ನನ್ನು ಹಾಗೂ ಉಳಿದೆಲ್ಲ ಪದಾರ್ಥಗಳನ್ನು ಸಂಪೂರ್ಣವಾಗಿ (ಅಂಗೈನೆಲ್ಲಿ ಕಾಣುಯಂತೆ) ಸರ್ವಕಾಲದಲ್ಲಿಯೂ ತಿಳಿದಿರುವ ಸರ್ವಜ್ಞನು;- ಸಮಅಧಿಕರಿಲ್ಲದ ಸ್ವಯಂ ಪ್ರಕಾಶನೂ ಸ್ವತಂತ್ರ ರಕ್ಷಕನು;- ಆದಿಕವಿಯಾದ ಬ್ರಹ್ಮದೇವರಿಗೆ ವೇದವನ್ನು ಅನುಗ್ರಹಪೂರ್ವಕವಾಗಿ ವಿಸ್ತರಿಸಿ ಹೇಳಿದವನು;- ಯಾರನ್ನು ಸರ್ವತೋಪರಿಯಾಗಿ-ಸಾಕಲ್ಯೇನ-ತಿಳಿದುಕೊಳ್ಳಲು ಬ್ರಹ್ಮಾದಿ ದೇವತೆಗಳೂ ಕೂಡ ಆತನ ಅನುಗ್ರಹವಿಲ್ಲದೆ ಶಕ್ತರಾಗಿಲ್ಲವೋ; ಒಂದು ದೀಪದಿಂದ ಮತ್ತೊಂದು ದೀಪವನ್ನು ಹೊತ್ತಿಸಿದಂತೆ ಇರುವ (ಶ್ರೀ ಹರಿಯ) ಸ್ವಾಭಿನ್ನ ಅವತಾರಗಳುಳ್ಳವನು, ನೀರಿನಲ್ಲಿಯ ಪ್ರತಿಬಿಂಬದಂತೆ, ಮೂಲವಸ್ತುವಿಗೆ ಆಧೀನವಾಗಿ ಅದಕ್ಕೆ ಕಿಂಚಿತ್ ಸಾದೃಶ್ಯವುಳ್ಳವುಗಳಾಗಿ, ಮೂಲ ವಸ್ತುವಿನಿಂದ ಸರ್ವಥಾ ಭಿನ್ನವಾಗಿರುವ ಜೀವ ರಾಶಿಗಳ ಸೃಷ್ಟಿಯನ್ನು ಮಾಡುವವನು, ಮಣ್ಣು ಮುಂತಾದವುಗಳಿಂದ ಕುಂಬಾರನು ಗಡಿಗೆಗಳನ್ನು ಮಾಡುವಂತೆ, ತ್ರಿಗುಣಾತ್ಮಕ ಜಡಪ್ರಕೃತಿಯನ್ನು ಸೃಷ್ಟಿಸಲು ನಿಮಿತ್ತಕಾರಣನಾಗಿರುವವನು, ಈ ಬಗೆಯ ಈಶಸೃಷ್ಟಿ, ಪ್ರತಿಬಿಂಬಸೃಷ್ಟಿ, ಹಾಗೂ ಜಡಸೃಷ್ಟಿಗಳನ್ನು ನಿರ್ಮಿಸಿದರೂ ಅವುಗಳಿಂದ ಆಪ್ತಕಾಮ (ನಿರಪೇಕ್ಷ) ನಾದ ಯಾರಿಗೆ ಕಿಂಚಿತ್ತಾದರೂ (ಸ್ವಂತದ) ಪ್ರಯೋಜನವಿಲ್ಲವೋ (ಜೀವರಿಗೆ ಮಾತ್ರ ಪ್ರಯೋಜಕವಾಗಿರುವವೋ)- (ಈ ಬಗೆಯ ವಿಶಿಷ್ಟ ಗುಣಶಕ್ತಿಗಳುಳ್ಳ, ಸತ್ಯಸ್ವರೂಪ (ಮಂಗಳಕರ) ನಾದ, ಸಚ್ಚಿದಾನಂದ ಮೂರ್ತಿಯಾಗಿರುವ, ನಿರವಧಿಕ ಕಲ್ಯಾಣ ಗುಣಪೂರ್ಣನಾದ, ಅಶೇಷ ದೋಷರಹಿತನಾದ, ಜೀವ ಜಡಭಿನ್ನವಾದ ಶ್ರೀಮನ್ನಾರಾಯಣನ ಧ್ಯಾನವನ್ನು ಮಾಡುವೆವು.

ಒಂದು ದೀಪದಿಂದ ಹೊತ್ತಿಸಿದ ಇನ್ನೊಂದು ದೀಪದಂತಿರುವ ಅವತಾರಗಳಿಗೆ 'ಈಶಸೃಷ್ಟಿ'ಯೆಂತಲೂ, ಬಿಂಬಕ್ಕೆ ಆಧೀನವಾಗಿ ಕಿಂಚಿತ್ ಸಾಮ್ಯವುಳ್ಳ ಜೀವಿಗಳಿಗೆ 'ಪ್ರತಿಬಿಂಬ ಜೀವಸೃಷ್ಟಿ'ಯೆಂತಲೂ; ಉಪಾದಾನಕಾರಣವಾದ ಜಡಪ್ರಕೃತಿಯಿಂದ ನಿರ್ಮಿತವಾದುದಕ್ಕೆ 'ಜಡಸೃಷ್ಟಿ'ಯೆಂತಲೂ ಮೂರು ಬಗೆ ಸೃಷ್ಟಿಯಾಗಿದೆ ಅಧಿಕಾರಿ ಜೀವಿಗಳಿಗೆ ಧ್ಯೇಯನಾದ ಪರಬ್ರಹ್ಮನ ವಿಶಿಷ್ಟ ಲಕ್ಷಣಗಳನ್ನು ಈ ಶ್ಲೋಕದಲ್ಲಿ ಹೇಳಿವೆ.– 'ಯತೋವಾ ಇಮಾನಿ ಭೂತಾನಿ ಜಾಯಂತೆ, ಯೇನ ಜಾತಾನಿ ಜೀವಂತಿ, ಯತ್ ಪ್ರಯಂತ್ಯಭಿವಿಶಂತಿ, ತದ್ ವಿಜಿಜ್ಞಾಸಸ್ವ, ತದ್ ಬ್ರಹ್ಮೇತಿ' (ಯಾರಿಂದ ಸಕಲ ಜೀವಿಗಳು ಸೃಷ್ಟವಾಗುವವು, ಸೃಷ್ಟಿಸಿದ ಜೀವಿಗಳನ್ನು ಯಾರು ರಕ್ಷಿಸುವರು, ಹೀಗೆ ಬಾಳಿದ ಪ್ರಾಣಿಗಳು ಮುಂದೆ ಯಾರಲ್ಲಿ ಲೀನವಾಗುವವೋ ಅವನೇ 'ಬ್ರಹ್ಮ'ನೆಂದು ತಿಳಿ)

ಪೃಥ್ವಿ, ಅಪ್, ತೇಜಸ್ಸು ಈ ಪಂಚಮಹಾಭೂತಗಳ ವ್ಯತ್ಯಾಸ-ಕೂಡುವಿಕೆಯಿಂದ ನಿರ್ಮಿತವಾದ ಸೃಷ್ಟಿಯು (ಮೃಷಾ) ಅಸತ್ಯವಾಗಿಲ್ಲ, ಆದರೂ ಆಪ್ತಕಾಮನಾದ ಬ್ರಹ್ಮನಿಗೆ ಅದರಿಂದ ಯಾವ (ಸ್ವಂತದ) ಪ್ರಯೋಜನವಿಲ್ಲ.

॥೧೪೪॥ **ಯದ್ದರ್ಶನಂ ನಿಗಮ ಆಹ ರಹಃಪ್ರಕಾಶಂ**
**ಮುಹ್ಯಂತಿ ಯತ್ರ ಕವಯೋಽಜಪರಾಯತಂತಃ ॥**
**ತಂ ಸರ್ವವಾದವಿಷಯಪ್ರತಿರೂಪಶೀಲಂ**
**ವಂದಾಮಹೇ ಪುರುಷಮಾತ್ಮನಿಗೂಢಬೋಧಂ ॥** ೧೨-೭-೪೯

**ಅರ್ಥ**:– ( ಶ್ರುತಿ-ಸ್ಮೃತೀ ಹರೇರಾಜ್ಞೆ) — ಪರಮಾತ್ಮನ ಆಜ್ಞೆಗಳಾಗಿರುವ ಅಥವಾ ಆತನ ಬಗ್ಗೆ(ಅಧಿಕಾರಿಗಳಿಗೆ) ಜ್ಞಾನ ಮಾಡಿಕೊಡುವ ಸಾಧನವಾದ ವೇದಶಾಸ್ತ್ರದಿಂದ (ಪರಮಾತ್ಮನ) ಗೂಢತತ್ವವು ಸಾಮಾನ್ಯವಾಗಿ ಕಂಡುಬರುತ್ತವು. (ಗುರು ಕೃಪೆ)ಯಿಂದ ಅದು ನಿಚ್ಚಳವಾಗಿ ತಿಳಿದುಬರುವದು. ಪರಮಾತ್ಮ ತತ್ವದ ರಹಸ್ಯವನ್ನು ತಿಳಿದುಕೊಳ್ಳಲು ಬ್ರಹ್ಮರುದ್ರಾದಿಗಳಂಥ ಜ್ಞಾನಿಗಳು ಯತ್ನಮಾಡುತ್ತಿದ್ದರೂ ಅದನ್ನು ಸಾಕಲ್ಯೇನ (ಪೂರ್ಣವಾಗಿ) ತಿಳಿದುಕೊಳ್ಳಲಾರರು. (ಬ್ರಹ್ಮಾದಿಗಳೇ ಪರತತ್ವವನ್ನು ಪೂರ್ಣವಾಗಿ ತಿಳಿದುಕೊಳ್ಳಲು ಶಕ್ತರಿಲ್ಲದಾಗ್ಗೆ, ಸಾಮಾನ್ಯ ನಮ್ಮಂಥವರ ಪಾಡೇನು ? ಎಂದು ನಿರಾಶೆಗೊಳ್ಳಬಾರದು ಸಕಾಲದಲ್ಲಿ ದೊರೆಯುವ ಗುರು ಅನುಗ್ರಹಪೂರ್ವಕವಾಗಿ ಮಾಡುವ ಉಪದೇಶದಿಂದ, ಅಧಿಕಾರಿಗಳಾದ ಎಲ್ಲರೂ ತಮ್ಮ ತಮ್ಮ ಯೋಗ್ಯತೆಗೆ ಅನುಗುಣವಾಗಿ ಪರತತ್ವವನ್ನು ತಿಳಿದುಕೊಳ್ಳಬಲ್ಲರು). ಸಾಂಖ್ಯ ಮುಂತಾದ ಭಿನ್ನ ಭಿನ್ನ ಶಾಸ್ತ್ರಗಳಲ್ಲಿರುವ

ಭಿನ್ನಭಿನ್ನವಾದ ವಾದಕ್ಕೆ (ವಿವೇಚನೆಗೆ) ಅನುಗುಣವಾದ ವೃತ್ತಿ(ಆಚರಣೆ) ಯುಳ್ಳವನು, ಸ್ವರೂಪಭೂತವಾದ ( ಆತ್ಮನಿಗೂಢ ) ಜ್ಞಾನದಿಂದ ಗುಣಪೂರ್ಣನು- (ಇಲ್ಲಿ ಗುಣಗಳೆಂದರೆ ಸತ್ವ-ರಜ-ತಮಗಳಲ್ಲ, ಅವು ಜಡ ಪ್ರಕೃತಿಯ ಗುಣಗಳು) ಇಂಥ (ಐಶ್ವರ್ಯಯುಕ್ತನಾದ) ಅಂತರ್ಯಾಮಿ (ಪುರುಷ) ಯಾದ ಪರಮಾತ್ಮನಿಗೆ ನಮಸ್ಕರಿಸುವೆವು.

ಶ್ರೀ ಮಾರ್ಕಂಡೇಯ ಋಷಿಗಳು ಮಾಡಿದ ನರನಾರಾಯಣರ ಸ್ತುತಿ ಇದು-

ಜಗತ್ತಿನ ಸೃಷ್ಟಿ-ಸ್ಥಿತಿ-ಲಯಗಳಿಗೆ (ನಿಮಿತ್ತ) ಕಾರಣನಾದವನೇ ಬ್ರಹ್ಮನು. ಬ್ರಹ್ಮನ ಬಗ್ಗೆ ಇಷ್ಟು ಸಾಮಾನ್ಯ ತಿಳುವಳಿಕೆ ಯೇನೊ ಉಂಟಾಯಿತು. ಈ ತಿಳುವಳಿಕೆಗೆ ವೇದವೇ ಸಾಧನ-ಪ್ರಮಾಣವೆಂತಲೂ ಗೊತ್ತಾಯಿತು ಆದರೆ ಬ್ರಹ್ಮ ತತ್ವದ ಬಗ್ಗೆ ಹೆಚ್ಚಿನ ಜ್ಞಾನವು ಏತರಿಂದ ಆಗುವದು ? ವೇದದಿಂದಲ್ಲ, ಏಕೆಂದರೆ 'ಯತೋ ವಾ ಇಮಾನಿ ಜಾಯಂತೆ . . .', ಎಂಬ ವೇದೋಕ್ತಿಯಲ್ಲಿ ಬ್ರಹ್ಮನ ತೀರ ಸಾಮಾನ್ಯ ಸ್ವರೂಪವನ್ನೇ ಹೇಳಿದೆ. ವೇದಗಳ ವಿಶೇಷವಾದ ಅರ್ಥವನ್ನು ತಿಳಿದುಕೊಂಡರೇನೇ ಬ್ರಹ್ಮನ ಬಗ್ಗೆಯೂ ಸಾಮಾನ್ಯಕ್ಕಿಂತಲೂ ಅಧಿಕವಾದ ಸ್ಪಷ್ಟವಾದ ತಿಳುವಳಿಕೆ ಉಂಟಾಗುವದು. ಅಂತೆಯೆ, ಪರಮಾತ್ಮನು ಬ್ರಹ್ಮದೇವರಿಗೆ ವೇದವನ್ನು ವಿಸ್ತರಿಸಿ, ವಿವರಿಸಿ (ಹೃದಾ) ಅನುಗ್ರಹಪೂರ್ವಕ ಹೇಳಿದನೆಂದಿದೆ. ( ಸಾನುಗ್ರಹ ಬೋಧನೆಯೆ ಸರಿಯಾದ ಜ್ಞಾನವು) ಅದು ಇರಲಿ. ಪರಮಾತ್ಮನ ಪೂರ್ಣಾನುಗ್ರಹಕ್ಕೆ ಪಾತ್ರರಾದ ಬ್ರಹ್ಮಾದಿ ದೇವರಿಗೂ ಪರಮಾತ್ಮ ಸ್ವರೂಪದ ವಾಸ್ತವ (ಇದ್ದಕ್ಕಿಂತಿರುವ) ಜ್ಞಾನವು ಅವರವರ ಮಟ್ಟಕ್ಕೆ ತಕ್ಕಂತೆ ಆಗುತ್ತಿರಲು, ಕೆಲವರಿಗೆ (ಕೆಲವು ದೇವತೆಗಳಿಗೆ) ಮಾತ್ರ ಯೋಗ್ಯತಾನುಗುಣವಾಗಿ ಜ್ಞಾನವಾದೀತು. ಸಾಮಾನ್ಯರಾದ ನಮ್ಮಂಥವರಿಗಲ್ಲ. ಬ್ರಹ್ಮಾದಿಗಳೂ ಕೂಡ ಪರಮಾತ್ಮನ ಸ್ವರೂಪವು ಇಂಥದೇ, ಆತನ ಗುಣ-ಶಕ್ತಿಗಳು ಇಷ್ಟೇ ಮಾತ್ರ ಎಂಬ ನಿಷ್ಕರ್ಷವನ್ನು ಮಾಡಲಾರರು. ಅಂತೆಯೆ 'ಮುಹ್ಯಂತಿ ಯಂ ಸೂರಯಃ' ಜ್ಞಾನಿಗಳಾದ ಬ್ರಹ್ಮಾದಿಗಳು ಕೂಡ ಈ ಜ್ಞಾನದ ಬಗ್ಗೆ ಮೂಢರಾಗುವರು, ಭ್ರಮೆಯನ್ನು ತಾಳುವರು, ಎಂಬ ಆಶಯವನ್ನು ತಿಳಿದುಕೊಳ್ಳಬೇಕು. ಬ್ರಹ್ಮಾದಿಗಳೆಂಬ (ಸೂರಿ) ಜ್ಞಾನಿಗಳೆಂದು ಹೇಳದೆ, ಆ ವಿಶೇಷಣವಿಲ್ಲದ 'ಸೂರಿ' ಎಂಬ ಪದ ಪ್ರಯೋಗದಿಂದ ( ಬ್ರಹ್ಮಾದಿಗಳು ಮಾತ್ರವಲ್ಲದೆ ) ಉಳಿದೆಲ್ಲ ಜ್ಞಾನಿಗಳೂ 'ಸೂರಿ' ಯೆಂಬ ಪದದಲ್ಲಿ ಸಮಾವೇಶರಾಗುವರು.

ಜಗತ್ತಿನ ಸೃಷ್ಟಿ-ಸ್ಥಿತಿ-ಲಯಗಳಿಗೆ (ನಿಮಿತ್ತ) ಕಾರಣವಾದ ವಸ್ತು (ಆದಿದೇವ) ವನ್ನು ನಾವು ಏನೆಂದು ತಿಳಿದುಕೊಳ್ಳಬೇಕು ? ಒಂದೇ ಒಂದೆಂತಲೆ ಅಥವಾ ಅನೇಕವಾಗಿರುವದೆಂತಲೇ. ಒಂದಕ್ಕೊಂದು ವಿರುದ್ಧ ಸ್ವಭಾವಗಳಿಂದ ಯುಕ್ತವಾದುದರಿಂದ ಆ ವಸ್ತು ಒಂದೇ ಒಂದೆಂದು ಹೇಳುವದು ಸರಿಯಾಗದು. ಸತ್ವಗುಣದಿಂದಲೆ ಸ್ಥಿತಿ (ರಕ್ಷಣೆ), ರಜೋಗುಣದಿಂದಲೆ ಸೃಷ್ಟಿ (ಉತ್ಪತ್ತಿ) ತಮೋಗುಣದಿಂದಲೆ (ವಿಲಾಪನ-ಲಯ) ಸಂಹಾರವೆಂಬುದು- ಈ ಮೂರು ಗುಣ ಕಾರ್ಯಗಳು ಪರಸ್ಪರ ವಿರುದ್ಧವಾಗಿವೆ ಆ ವಸ್ತು ಅನೇಕವೆಂಬ ಎರಡನೆಯ ಪಕ್ಷವನ್ನು ತೆಗೆದುಕೊಂಡರೆ ಅನೇಕರಾದವರು ಒಬ್ಬರೊಬ್ಬರಕೂಡ ಕಲಹ ಮಾಡುವ ಪ್ರಸಂಗಗಳು ಉಂಟಾಗಬಹುದು, ಜಗತ್ತಿಗೆ ಜನ್ಮಾದಿಗಳೆ ಇಲ್ಲದಂತಾಗ ಬಹುದು ಆದರಿಂದ ಅವರು ಅವುಗಳಿಗೆ ಕಾರಣವಾಗದೆ ಉಳಿಯಬಹುದು.

ಜಗತ್ತಿನ ಜನ್ಮಾದಿಗಳಿಗೆ ಕಾರಣವಾದವನು ಒಬ್ಬನೇ, ಅನೇಕರೇ, ಎಂಬ ಪ್ರಶ್ನೆಗೆ, 'ಒಬ್ಬನೇ' ಎಂದು ಉತ್ತರ ಹೇಳಬೇಕು. ಎರಡನೆಯ (ಅನೇಕವೆಂಬ) ಪಕ್ಷವನ್ನು ಎತ್ತಿಕೊಳ್ಳದೇನೆ ನಿರಾಕರಿಸಿ, ಮೊದಲನೇಯ ಪಕ್ಷದಲ್ಲಿಯೆ ಹೇಳಿದ ವಿಸಂಗತಿಯನ್ನು ದೂರಮಾಡುವದಾಗಿ 'ಒಂದೇ' ಎಂಬುದು ಉತ್ತರವಾಗಿದೆ.

'ಸರ್ವವಾದ ವಿಷಯ ಪ್ರತಿರೂಪ ಶೀಲಂ'- ಸತ್ವ ಗುಣದಿಂದಲೆ ಜಗತ್ಪಾಲನ, ರಜೋಗುಣದಿಂದಲೆ ಉತ್ಪತ್ತಿ, ತಮೋಗುಣದಿಂದಲೆ ನಾಶ, ಈ ಬಗೆಯ ಎಲ್ಲ ವಾದ (ವಿವಿಧ ವಿಚಾರಸರಣಿ) ಗಳಿಗೆ ಅನುಗುಣವಾದ ವರ್ತನೆಯುಳ್ಳವನು. ಸೃಷ್ಟಿ-ಸ್ಥಿತಿ-ಲಯಗಳು ಸತ್ವಾದಿ ಗುಣಗಳಿಗೆ ಸಂಬಂಧಿತವಾದವು, ಅವುಗಳನ್ನು ಅನುಸರಿಸಿಯೆ ನಡೆಯುವಂಥವು. ಪರಸ್ಪರ ವಿರುದ್ಧವಾದ ಈ ಸತ್ವಾದಿಗುಣಗಳು ಹಾಗೂ ಅವುಗಳಿಂದ ನಡೆಯುವ ವಿರುದ್ಧ ಕಾರ್ಯಗಳು ಒಬ್ಬನಲ್ಲಿಯೆ ಹೇಗೆ ಹೊಂದಿಕೊಳ್ಳುವವು ? ಎಂಬುದರಲ್ಲಿಯೆ ಭಿನ್ನಾಭಿಪ್ರಾಯ. ಅದೇ ವಾದಗಳಿಗೆ ವಿಷಯ. ಆದರೆ ಇಲ್ಲಿ ಒಂದು ಸಂಗತಿಯನ್ನು ಅಗತ್ಯವಾಗಿ ನೆನಪಿನಲ್ಲಿ ಇಡಬೇಕು. ಸತ್ವಾದಿ ಮೂರು ಗುಣಗಳು ಪರಸ್ಪರ ವಿರುದ್ಧವಾಗಿವೆ. ಆದರೆ ಪರಮಾತ್ಮನು ಏಕ ಕಾಲಕ್ಕೆ ಈ ಮೂರು ಗುಣಗಳನ್ನು ಸ್ವೀಕರಿಸುವದಿಲ್ಲ. ವಿಶ್ವದ ಸೃಷ್ಟಿಗೆ ರಜೋಗುಣವನ್ನು, ಪಾಲನೆಗೆ ಸತ್ವಗುಣವನ್ನು, ನಾಶಕ್ಕೆ ತಮೋಗುಣವನ್ನು ಉಪಾದಾನ ಕಾರಣವಾಗಿ ಭಿನ್ನ ಭಿನ್ನ ಕಾಲಗಳಲ್ಲಿ, ಸಮಯಕ್ಕೆ ಅನುಗುಣವಾಗಿ ತೆಗೆದುಕೊಂಡು ಸೃಷ್ಟ್ಯಾದಿಗಳನ್ನು ಮಾಡುವನು. ಆದುದರಿಂದ, ವಿರುದ್ಧ ಗುಣವುಳ್ಳ, ವಿರುದ್ಧ ಕಾರ್ಯಮಾಡುವ ಸೃಷ್ಟಿಕರ್ತನು ಒಬ್ಬನೇ ಆಗಲಾರನೆಂಬ ಆಕ್ಷೇಪಕ್ಕೆ ಏನೂ ಆಸ್ಪದ ಉಳಿಯದು. ಪರಮಾತ್ಮನ ಶೀಲ) ಸ್ವಭಾವವು

ಈ ಮೂರು ಗುಣಗಳಿಗೂ, ಅವುಗಳಿಂದ ನಡೆಯುವ ಕೃತಿಗಳಿಗೂ ತೀರ ವಿರುದ್ಧವಾಗಿದೆ. ಈ ಮೂರು ಗುಣಗಳನ್ನು ಎತ್ತಿಕೊಂಡು, ಮೂರು ಪರಸ್ಪರ ವಿರುದ್ಧ ಕೃತಿಗಳನ್ನು ಆತನು ಮಾಡುತ್ತಿದ್ದರೂ, ಪರಮಾತ್ಮನ ನೈಜವಾದ ಸ್ವರೂಪ, ಸ್ವಭಾವವು ಇದಕ್ಕೆ ತೀರ ವಿರುದ್ಧವಾಗಿದೆ. ಹೀಗಿದ್ದರೆ ಆತನ ನೈಜ ಸ್ವಭಾವವೇನು ? – ಎಂದರೆ, 'ಆತ್ಮಗೂಢ ಬೋಧಮ್'; ಆತನ ಸ್ವಾಭಾವಿಕ ವಾದ, ಸ್ವರೂಪಭೂತವಾದ ಜ್ಞಾನ, ಆನಂದಾದಿ ಅನಂತ ಕಲ್ಯಾಣ ಗುಣಗಳು ಅತೀವ ಗೂಢವಾದವು. ಗುಪಿತವಾದವು. ಅವುಗಳನ್ನು ಸಾಕಲ್ಯೇನ ತಿಳಿಯಲು ಯಾರಿಗೂ ಶಕ್ಯವಾಗದು. ಪರಮಾತ್ಮನು ಜ್ಞಾನಾನಂದಾದಿ ಸ್ವಭಾವ ಉಳ್ಳ ವನು.

ಒಟ್ಟಿನಲ್ಲಿ ಹೇಳಬೇಕೆಂದರೆ, ಜ್ಞಾನಾಂದಾದಿ ಸ್ವರೂಪನಾದ ಪರಮಾತ್ಮ (ಬ್ರಹ್ಮ)ನು, ಸತ್ವಗುಣವನ್ನೆತ್ತಿಕೊಂಡಾಗ್ಗೆ ಮಾತ್ರ ಸಾತ್ವಿಕನೆಂತಲೂ ರಜೋ ಗುಣವನ್ನೆತ್ತಿಕೊಂಡಾಗ್ಗೆ ಮಾತ್ರ ರಾಜಸನೆಂದೂ ತಮೋಗುಣವನ್ನೆತ್ತಿ ಕೊಂಡಾಗ್ಗೆ ಮಾತ್ರ ತಮೋಗುಣಯುಕ್ತನೇಹೂ ಪ್ರಾಸಂಗಿಕವಾಗಿ ಮಾತ್ರ ವರ್ಣಿಸಬಹುದು. ಆದರೆ ಪರಮಾತ್ಮನು ಈ ಮೂರು ಗುಣಗಳಿಗೆ ಅತೀ ತನಾದವನು, ಅವುಗಳಿಗೆ ಬದ್ಧನಾದವನಲ್ಲ. ಸಾತ್ವಿಕಾದಿಗುಣಗಳು ಆತನ ಸ್ವಭಾ ವವಾಗಿಲ್ಲ ಕಾಲ ಹಾಗೂ ಕ್ರಿಯಾ ದೃಷ್ಟಿಗಳಿಂದ ಸಾತ್ವಿಕಾದಿ ಭಿನ್ನರೂಪಗಳಿಂದ ಆತನು ಕಂಡು ಬಂದರೂ ಕಾಲಾದಿಗಳಿಂದ ಆತನಲ್ಲಿ ಭೇದವಿಲ್ಲ. ಸತ್ವಾದಿಗಳು ಪ್ರಕೃತಿಯ ಗುಣಗಳು, ಪರಮಾತ್ಮನ ಗುಣಗಳಲ್ಲ.

॥೧೪॥ **ತ್ವಾಂ ಬ್ರಹ್ಮ ಕೇಚಿದವಯಂತ್ಯುತ ಧರ್ಮಮೇಕೇ**
**ಏಕೇ ಪರಂ ಸದಸತೋಃ ಪುರುಷಂ ಪರೇಶಂ|**
**ಅನ್ಯೇ ವದಂತಿ ನವಶಕ್ತಿಯುತಂ ಪರಂ ತ್ವಾಂ**
**ಕೇಚಿನ್ಮಹಾಪುರುಷಮವ್ಯಯಮಾತ್ಮ ತಂತ್ರಂ॥** ೮-೧೧-೮

**ಅರ್ಥ:**– ಹೇ ಪರಮಾತ್ಮನೆ! ಜಗತ್ತಿನ ಜನ್ಮಾದಿಗಳಿಗೆ ಕಾರಣನೆಂದು ಅನೇಕ ವೇದಾಂತಿಗಳು ನಿನ್ನನ್ನು 'ಬ್ರಹ್ಮ' ನೆಂದು ಹೇಳುವರು. (ಮೀಮಾಂ ಸಕರು) ನಿನಗೇನೆ 'ಧರ್ಮ' ವೆಂದು ಹೇಳುವರು. ಕಾರ್ಯಕಾರಣ (ಸತ್ ಅಸತ್) ರೂಪವಾದ ಜಗತ್ತಿನಿಂದ ಭಿನ್ನಸ್ವರೂಪನೂ, ಸರ್ವಸ್ವಾ ಮಿಯೂ, ಆದ 'ಪುರುಷಶ್ರೇಷ್ಠ'ನೆಂದು ಪುರಾಣಿಕರು ನಿನ್ನ ಬಗ್ಗೆ ಹೇಳುವರು. ವಿಮಲಾ ಮುಂತಾದ ಒಂಭತ್ತು ಬಗೆಯ, ಸ್ವರೂಪಭೂತವಾದ ಶಕ್ತಿಗಳಿಂದ ಯುಕ್ತನಾದ 'ಪರಮಾತ್ಮ' ನೆಂದು ಪಾಂಚರಾತ್ರಿಕರು ನಿನ್ನನ್ನು ಭಾವಿಸುವರು.

ಅನನ್ಯಭಕ್ತರಾದ ಯೋಗಿಗಳು ಚತುರ್ವಿಧ ಸ್ವಾರರಹಿತನೂ, ನಿತ್ಯ ಸ್ವತಂತ್ರನೂ (ನಿರಪೇಕ್ಷನು) ' ಮಹಾಪುರುಷ'ನೆಂದು ನಿನ್ನನ್ನು ಬಣ್ಣಿಸುವರು.

ಜಗಜ್ಜನ್ಮಾದಿ ಕಾರಣಗಳಿಗೆಲ್ಲ ಒಬ್ಬನೇ ನಿಮಿತ್ತಕಾರಣನೆಂದು ಹೇಳುವ ಮಾತನ್ನು ನಮ್ಮ ಮನಸ್ಸು ಗಟ್ಟಿಮುಟ್ಟಿಯಾಗಿ ನಂಬುವದಿಲ್ಲ. ಏಕೆಂದರೆ (ಆ ವಿಷಯದಲ್ಲಿ ಭಿನ್ನಭಿನ್ನವಾದ ಮತಗಳು ಕಂಡುಬರುವವು. ಉದಾಹರಣೆಗಾಗಿ) ವೇದಾಂತಿಗಳೆಂದು ಹೇಳಿಕೊಳ್ಳುವ ಕೆಲವರು ' ಬ್ರಹ್ಮನು ' (ಗುಣಪೂರ್ಣನಾದ ಶ್ರೀಹರಿಯು) ಜಗತ್ಕಾರಣನೆಂದು ಹೇಳುವರು. ಬ್ರಹ್ಮನ ಹೃದಯಾಕಾಶದಿಂದ ಹೊರಹೊಮ್ಮಿದ ದಿವ್ಯ 'ನಾದ'ವೇ ಜಗತ್ಕಾರಣವೆನ್ನುವವರು ಕೆಲವರು. ಪ್ರಸನ್ನಚಿತನಾದ ಬೃಹ್ಮನ ಹೃದಯಾಂತರಾಳದಿಂದ ನಾದವು ಉದಯವಾಯಿತು. ಉಚ್ಚಾರದ ಉತ್ಪತ್ತಿ ಸ್ಥಾನಗಳ ವ್ಯತ್ಯಾಸದಿಂದ ಹಾಗೂ ಏರಿಳಿತಗಳಿಂದ (ವೃತ್ತಿರೋಧದಿಂದ) ಆ ನಾದವು (ಮಂತ್ರರೂಪದಿಂದ) ವಿಧವಿಧವಾಗಿ ವಿಸ್ತರಿಸಿತು. (ಮಂತ್ರರೂಪವಾದ) ಈ ನಾದದ ಉಪಾಸನೆ (ಆರಾಧನೆ) ಯನ್ನು ಮಾಡಿ ಯೋಗಿಗಳು (ತಾಮಸ)ದ್ರವ್ಯಾತ್ಮಕ,(ರಾಜಸ) ಕ್ರಿಯಾತ್ಮಕ ಹಾಗೂ ಸಾತ್ವಿಕ)ಈಬಗೆಯ ಮೂರು ವಿಧವಾದ ಅಹಂಕಾರದಿಂದ ಜನಿಸುವ (ನಾನು ನನ್ನದೆಂಬ) ಮನಸ್ಸಿನ ದೋಷವನ್ನು ಕಳೆದುಕೊಂಡು ಜನನ-ಮರಣ ರಹಿತವಾದ ಸ್ಥಾನವನ್ನು ಪಡೆಯುವರು ಈ ಜನರು (ಬೃಹ್ಮನ ಅಂತರಂಗದಿಂದ) ಹುಟ್ಟಿದ ಈ ನಾದವೇ ಜಗತ್ಕಾರಣವೆಂದು ಹೇಳುವರು. ಮೀಮಾಂಸಕರು ಕಾರ್ಯಕಾರಣ (ಸದಸತ್) ರೂಪವಾದ ಈ ಜಗತ್ತಿನಿಂದ (ಸರ್ವಥಾ) ಭಿನ್ನವಾದ ಸರ್ವಶ್ರೇಷ್ಠನಾದ ಪುರುಷನೆ ಜಗತ್ಕಾರಣನೆಂದು ಹೇಳುವವರು ಪೌರಾಣಿಕರಾದ ಬೇರೆ ಕೆಲವು ಜ್ಞಾನಿಗಳು. ವಿಮಲಾ, ಉತ್ಕರ್ಷಿಣೀ ಮುಂತಾದ ಒಂಭತ್ತು ಶಕ್ತಿಗಳಿಂದ ಯುಕ್ತನಾದ ಮಹಾಪುರುಷನೇ ಜಗತ್ಕಾರಣನೆಂದು ಪಾಂಚರಾತ್ರಿಕರು. ಬೇರೆ ಕೆಲವು ಯೋಗಿಗಳು ಜಗತ್ಕಾರಣನಾದವನಿಗೆ ' ಮಹಾಪುರುಷ ' ನೆಂದು ಹೇಳುವರು. ಹೀಗೆ ಹಲವರು ಹಲವಾರು ಹೆಸರುಗಳಿಂದ ಕರೆದರೂ ಜಗತ್ಕಾರಣವಾದ ಒಂದೇ ಒಂದು ಮೂಲ ವಸ್ತುವಿನಲ್ಲಿ ಯಾವ ಭೇದವೂ ಇಲ್ಲ.

ನೀನು ಪುರುಷೋತ್ತಮನೆಂದು (ಅಧಿಷ್ಠಾನವಾದ) ಜೀವಿಗಳಲ್ಲಿ ಅಂತರ್ಯಾಮಿಯಾಗಿ, ಅವರಿಗಿಂತಲೂ ಅನಂತಪಟ್ಟು ಶ್ರೇಷ್ಠನಾದವನೆಂದು, ಪಂಚ ಮಹಾಭೂತಗಳಲ್ಲಿ ಅವುಗಳಿಗೆ ಶ್ರೇಷ್ಠತಮನಾಗಿ ನೆಲೆಸಿದವನೆಂದು,ದೇವತೆಗಳಲ್ಲಿ ದೇವೋತ್ತಮನೆಂದು – ಯೋಗಿಗಳು ನಿನ್ನನ್ನು ಆರಾಧಿಸುವರು.– ಪರಂಪರೆಯಿಂದ ಸಾಗಿ

ಬಂದ ಸಂಸ್ಕೃತಿಯಿಂದ ಶುದ್ಧಚಿತ್ತವುಳ್ಳವರಾಗಿ, ನಿನ್ನನ್ನು ಒಂದು ಅಥವಾ ಅನೇಕ ರೂಪವಾದ ಮೂರ್ತಿಗಳಿಂದ, ತನ್ಮಯರಾಗಿ, ಶಾಸ್ತ್ರೋಕ್ತ ವಿಧಾನದಿಂದ, ಬೇರೆ ಕೆಲವರು ಯಜ್ಞ ಯಾಗಾದಿಗಳಿಂದ ಪೂಜಿಸುವರು. – ಶಿವಾಂತರ್ಯಾಮಿಯಾದ ಶಿವ ನಿನ್ನನ್ನೇ ರೂಪದಲ್ಲಿ ಕೆಲವರು ಪೂಜಿಸುವರು. (ಜಗತ್ತಿನ ಯೋಗಕ್ಷೇಮಕ್ಕಾಗಿ ಅಗತ್ಯವಿರುವ) ವಿವಿಧ ರೂಪಗಳನ್ನು (ಆಗಾಗ್ಗೆ) ಧರಿಸುವ ನಿನ್ನನ್ನು ಒಬ್ಬನೇ ಎಂದು (ಸ್ವಗತಭೇದವಿವರ್ಜಿತನೆಂದು) ಜ್ಞಾನಿಗಳು ಪೂಜಿಸುವರು, (ಭಿನ್ನಭಿನ್ನ ಹೆಸರು-ವಿಧಾನಗಳಿಂದ) ಸರ್ವೋತ್ತಮನಾದ ನಿನ್ನನ್ನೇ ಆರಾಧಿಸುವರು. ಅನ್ಯಥಾ ತಿಳಿದುಕೊಂಡವರು, ಅನ್ಯ ದೇವತೆಗಳನ್ನು ಪೂಜಿಸುವವರೂ ಅಹುದ ನಿನ್ನನ್ನೇ (ತಿಳಿಯದೆ) ಪೂಜಿಸುವರು. – ಬೆಟ್ಟದಲ್ಲಿ ಹುಟ್ಟಿದ ನದಿಗಳು ಮಳೆಯ ನೀರಿನಿಂದ ತುಂಬಿಕೊಂಡು ಎಲ್ಲ ದಿಕ್ಕುಗಳಿಂದಲೂ ಹರಿದು ಬಂದು ಸಮುದ್ರವನ್ನೇ ಸೇರುವಂತೆ, ನಿಷ್ಕಾಮವಾಗಿ ನಿನಗೆ ಸಮರ್ಪಿಸಿದ, ಎಲ್ಲ ಬಗೆಯ ಅರ್ಚನೆ – ಆರಾಧನೆಗಳು (ಕೊನೆಗೆ) ನಿನಗೇನೆ ಸಮರ್ಪಿತವಾಗುವವು. ಏಕೆಂದರೆ, ತಮಗೆ ಅರ್ಪಿಸಿದ ಪೂಜೆ ಪುರಸ್ಕಾರಗಳನ್ನು (ಅಂತರ್ಯಾಮಿಯಾದ) ನಿನಗೆ ಮಾಡಿದವುಗಳೆಂತಲೇ ಅವುಗಳನ್ನು ಸ್ವೀಕರಿಸುವರು.

ಇದು ಅಕ್ರೂರನು ಮಾಡಿದ ಭಗವಂತನ ಸ್ತುತಿಯಾಗಿದೆ.

॥೧೫೦॥ ಹಿರಣ್ಯಗರ್ಭತ್ವಮುಪೇತ್ಯ ಮೂಲೇ
ಸೃಜಸ್ಯಶೇಷಂ ಭುವನಂ ಸ ಏವ ।
ನಾರಾಯಣಾತ್ಮನ್ ಪರಿಪಾಸಿ ಭೂಯೋ
ಜಹಾರ ಚಾಂತೇ ಭಗವನ್ ಶಿವಾತ್ಮನಾ ॥ ೧೦-೫೩-೧೫

(ನೀವು ಹೇಳುವಂತೆ) ಜಗಜನ್ಮಾದಿಗಳಿಗೆ (ನಿಮಿತ್ತ) ಕಾರಣವಾದುದ್ದು ಒಂದೇ ವಸ್ತು ಆಗಿದ್ದರೆ,– ಹಿರಣ್ಯಗರ್ಭ (ಬ್ರಹ್ಮ)ನು ಜಗತ್ತನ್ನು ಸೃಷ್ಟಿಸುವನು, ನಾರಾಯಣನು ರಕ್ಷಿಸುವನು, ಶಿವನು ನಾಶ ಮಾಡುವನು.– ಹೀಗೆ ಒಬ್ಬೊಬ್ಬರ ಕಾರ್ಯವನ್ನು ಬಿಡಿಬಿಡಿಯಾಗಿ ಏಕೆ ಹೇಳುವರು ? - ಹೀಗೆ ಆಕ್ಷೇಪಿಸಿದರೆ, ಅದಕ್ಕೆ ಸಮಾಧಾನವನ್ನು ಹೇಳುವರು. – ಭಿನ್ನಭಿನ್ನ ಕಾರ್ಯಗಳಿಗಾಗಿ ಪರಮಾತ್ಮನೇ ಕಾಲಕಾಲಕ್ಕೆ ಧರಿಸುವ ಭಿನ್ನಭಿನ್ನ ರೂಪಗಳಿವು; ಭಿನ್ನ ಭಿನ್ನ ವ್ಯಕ್ತಿಗಳಲ್ಲ. ಒಬ್ಬನೇ ಪರಮಾತ್ಮನು ಬ್ರಹ್ಮನಲ್ಲಿ ಬ್ರಹ್ಮನಾಗಿ, ಶಿವನಲ್ಲಿ ಶಿವನಾಗಿ ಅಂತರ್ಯಾಮಿಯಾಗಿ ನಿಂತು ಆಯಾ ಕಾರ್ಯಗಳನ್ನು ಮಾಡುವನು.

ಅರ್ಥ:– ಹೇ ಭಗವಂತಾ! ಹೇ ನಾರಾಯಣಾ! (ಸೃಷ್ಟಿಯ) ಆದಿಯಲ್ಲಿ ಹಿರಣ್ಯಗರ್ಭ (ಬ್ರಹ್ಮ)ನ ರೂಪವನ್ನು ತೆಗೆದುಕೊಂಡು, ಆತನನ್ನು ನಿಮಿತ್ತ ಮಾಡಿ

ಕೊಂಡು, ( ಆತನ ಮುಖಾಂತರ ) ಅಖಿಲ ವಿಶ್ವವನ್ನು ನೀನು ನಿರ್ಮಿಸುವಿ, ಸಕಲ ಜಗತ್ತಿಗೆ ಕಾಲಕಾಲಕ್ಕೆ ಒದಗುವ ಆಪತ್ತುಗಳನ್ನು ಕಳೆದು, ಅನ್ನ ಬಟ್ಟೆ ಮುಂತಾದ ಜೀವನಾವಶ್ಯಕ ವಸ್ತುಗಳನ್ನು ಪೂರೈಸಿ, ನಡುವಿನ ಅವಧಿಯಲ್ಲಿ ನಾರಾಯಣನೆಂಬ ರೂಪದಿಂದ ಜಗತ್ತಿನ ಪಾಲನೆಯನ್ನು ನೀನು ಮಾಡುವಿ. ( ನಾಶಕ್ಕೆ ಪಕ್ವವಾದ ಕಾಲದಲ್ಲಿ ) ಶಿವನೆಂಬ ಹೆಸರಿನಿಂದ, ಅರ್ಥಾತ್ ಶಿವನ ಮುಖಾಂತರವಾಗಿ ಜಗತ್ತಿನ ಸಂಹಾರವನ್ನು ನೀನು ಮಾಡುವಿ.

॥೧೫॥ ಯುಷ್ಮಿಂತ್ಯತೇ ಹ್ಯಾಯತಪಾಣಿಭಿರಧ್ವರಾಗ್ನೌ
ತ್ರಯ್ಯಾ ನಿರುಕ್ತವಿಧಿನಾ ಹವಿರ್ಗೃಹೀತ್ವಾ ।
ಅಧ್ಯಾತ್ಮಯೋಗ ಉತ ಯೋಗಿಭಿರಾತ್ಮಮಾಯಾ
ಜಿಜ್ಞಾಸುಭಿಃ ಪರಮಭಾಗವತೈಃ ಪರೀಷ್ಟಃ ೧೧-೬-೧೧

ದೇವತೆಗಳು ಮಾಡಿದ ಶ್ರೀಕೃಷ್ಣಸ್ತುತಿ ಇದು.– ಜಗಜ್ಜನ್ಮಾದಿಗಳಿಗೆ ಕಾರಣನಾದ ನಾರಾಯಣನು ಒಬ್ಬನೇ ಎಂಬುದನ್ನು ಬೇರೊಂದು ರೀತಿಯಿಂದ ಹೆಚ್ಚು ದೃಢಗೊಳಿಸುವರು. ಇಲ್ಲಿ ಒಂದು ಆಕ್ಷೇಪವಿದೆ. ಕರ್ಮಯೋಗಿಗಳು, ಜ್ಞಾನಯೋಗಿಗಳು ಎಂಬ ಎರಡುಬಗೆಯ ಯೋಗಿಗಳಿವರು- ಯಜ್ಞಯಾಗಾದಿ ಕರ್ಮಗಳಲ್ಲಿ ಅಗ್ನಿಯೊಳಗೆ ಅಧಿಷ್ಠಿತನಾದ, 'ಚತ್ವಾರಿಶೃಂಗಾ' ಇತ್ಯಾದಿ ಮಂತ್ರದಿಂದ ವರ್ಣಿತನಾದ ದೇವತಾ ವಿಶೇಷವನ್ನು ಧ್ಯಾನ ಮಾಡುವವರು ಕರ್ಮಯೋಗಿಗಳು, ಎರಡನೆಯ ಪ್ರಕಾರದ ಜ್ಞಾನಯೋಗಿಗಳು ಜ್ಞಾನಯಜ್ಞವೆಂಬ ಕರ್ಮದಲ್ಲಿ 'ಚತುರ್ಭುಜಂ' ಮುಂತಾದ ಸ್ತೋತ್ರಗಳಿಂದ ಹೃದಯದ ಒಳಗೆ ಅಂತರ್ಯಾಮಿಯಾದ ಇಲ್ಲವೆ ಹೊರಗಿನ ಮೂರ್ತಿ–ಪ್ರತಿಮಾ – ರೂಪವನ್ನು ಧೇನಿಸುವರು. (ಚಿಂತನೆ ಮಾಡುವರು. – ಕಣ್ಮುಂದೆ ತಂದುಕೊಳ್ಳುವರು). – ಹೀಗಿರಲು, ಜಗಜ್ಜನ್ಮಾದಿಗಳಿಗೆ ಕಾರಣನಾದ ವಸ್ತು ಒಬ್ಬನೇ ಎಂಬ ಅರಿವು ಹೇಗೆ ಉಂಟಾಗುವದು? – ಇದಕ್ಕೆ ಸಮಾಧಾನವನ್ನು ಹೇಳುವರು. ಹಿಂದೆ ಈ ಬಗ್ಗೆ ಹೇಳಿದುದನ್ನು – ಇವೆಲ್ಲವೂ ಒಬ್ಬ ಪರಮಾತ್ಮನದೇ ಕಾಲ ಕರ್ಮಗಳಿಗೆ ಅನುಗುಣವಾದ ರೂಪ ಬೇಧಗಳು ಮಾತ್ರವೆಂದು, – ಹಿಂದೆ ವಿವರಿಸಿದ್ದನ್ನು ಮರೆಯಕೂಡದು. – 'ಬ್ರಹ್ಮವಿಷ್ಣ್ವೀಶ ರೂಪಾಣಿ ತ್ರೀಣಿ ವಿಷ್ಣೋರ್ಮಹಾತ್ಮನಃ – ' ಬ್ರಹ್ಮ, ವಿಷ್ಣು, ಶಿವ, ಎಂಬವು ಸರ್ವೋತ್ತಮನಾದ ವಿಷ್ಣುವಿನ ಮೂರ್ತಿಗಳೇ ಆಗಿವೆ.–

**ಅರ್ಥ**:– ನಿಷ್ಠೆಯಿಂದ ಕೈಗಳನ್ನು (ಆಹುತಿ ಹಾಕಲು) ಮೇಲಕ್ಕೆತ್ತಿ, ಯಜ್ಞ ಕಾರ್ಯದಲ್ಲಿ ನಿರತರಾದ ಯಾಜಕರು (ಋತ್ವಿಜರು) (ವೇದ ಮಂತ್ರಗಳಿಂದ ಸಂಸ್ಕಾರ ಹೊಂದಿದ ಅಗ್ನಿಕುಂಡದಲ್ಲಿ ವೇದ ಮಂತ್ರಗಳಿಂದ ಸಂಸ್ಕಾರ

ಹೊಂದಿದ ಅಗ್ನಿಕುಂಡದಲ್ಲಿ ವೇಡ ಮಂತ್ರಗಳಿಂಡ, ವೇದೋಕ್ತ ವಿಧಾನದಿಂದ ಹ ಸ್ಸನ್ನು ಹಾಕುವಾಗ್ಗೆ ನಿನ್ನನ್ನೇ ಚಿಂತಿಸುವಂತೆ (ನಾಮೋಚ್ಚಾರಣೆಯಿಂದ ಸ ಸುವಂತೆ) – ಆತ್ಮಜ್ಞಾನದ ಜಿಜ್ಞಾಸಾ ರೂಪವಾದ ಯಜ್ಞಕಾರ್ಯದಲ್ಲಿ ಕೂ ನಿನ್ನ ನೈಜ ಸ್ವರೂಪ – ಶಕ್ತಿಗಳನ್ನು ತಿಳಿಯ ಬಯಸುವ ಜ್ಞಾನಯೋಗಿಗಳ ಪರಮ ಭಗವದ್ಭಕ್ತರು ಪೂರ್ಣ ಶ್ರದ್ಧೆಯಿಂದ ಪೂಜಿಸುವ ನಿನ್ನನ್ನೇ ಧೇನಿಸುವ (ಅಂಥವನಾದ ನಿನ್ನ ಪಾದ ಕಮಲಗಳು ನಮಗೆ ಕಲ್ಯಾಣವನ್ನುಂಟು ಮಾಡ

ಹೀಗೆ ಹೇಳಿರುವರು – 'ತ್ರಯ್ಯಾ ವಿಧಿನಾ ..... ಜ್ಞಾನವಿಗ್ರಹಮ್'

ಅರ್ಥ :– ಯಜ್ಞ ಕಾರ್ಯಗಳಲ್ಲಿ ತೊಡಗಿದ ಕರ್ಮಯೋಗಿಗಳಾದ ಅನೆ ಬ್ರಾಹ್ಮಣರು ವೇದೋಕ್ತ ವಿಧಾನದಿಂದ, ವಿಸ್ತ್ರತವಾದ ಯಜ್ಞಗಳಲ್ಲಿ ಅನೆ ಭೂತಗಳ ಹಾಗೂ ಬ್ರಹ್ಮರುದ್ರಾದಿ ದೇವತೆಗಳ ಹೆಸರಿನಿಂದ ಅವರೆಲ್ಲರ ಅಂತಯಾ ಮಿಯಾದ ನಿನ್ನನ್ನೇ ಪೂಜಿಸುವರು, ಬೇರೆ ಕೆಲವು ಜ್ಞಾನಯೋಗಿಗಳು ಸಕ ಕರ್ಮಗಳನ್ನು ನಿನಗೆ ಸಮರ್ಪಿಸಿ ವಿರಕ್ತರಾಗಿ, ಜ್ಞಾನಾನಂದವಿಗ್ರಹನಾ ನಿನ್ನನ್ನು ಜ್ಞಾನಯಜ್ಞದಿಂದ ಅರ್ಚಿಸುವರು.

||೧೫೨|| ಯ ಚ್ಛಕ್ತಯೋ ವದತಾಂ ವಾದಿನಾಂ ವೈ
ವಿವಾದಸಂವಾದಭುವೋ ಭವಂತಿ |
ಕುರ್ವಂತಿ ತೇಷಾಂ ಮುಹುರಾತ್ಮ ಮೋಹಂ
ತಸ್ಮೈ ನಮೋಽನಂತಗುಣಾಯ ಭೂಮ್ನೇ || ೬-೪-೩೧

ದಕ್ಷಪ್ರಜಾಪ
ನಾರಾಯಣ

ಅರ್ಥ:– (ಜಗತ್‌ಕರ್ತನು ಯಾರು? ಎಂಬುವ ಬಗ್ಗೆ ಒಪ್ಪಿ ಅಥ ಒಪ್ಪದೇ ವಾದ ಮಾಡುವವರಿಗೆ ಆ ಪ್ರಶ್ನೆಯ ಬಗ್ಗೆ ಸ್ವರೂಪ ಭೂತವಾದ ಯ ಶಕ್ತಿಗಳು ವಾದ ವಿವಾದಕ್ಕೆ ವಿಷಯಗಳಾಗುವವು, ಹಾಗೂ ಹೀಗೆ (ವಾದ-ವಿ ಚನ) ಮಾಡುವವರಿಗೆ ಯಾರ ಶಕ್ತಿಗಳು ಮತ್ತೆ ಮತ್ತೆ ಬುದ್ಧಿ ಭ್ರಮೆಯನ್ನು ಮಾಡುವವೊ (ವಿಪರೀತ ಜ್ಞಾನವನ್ನುಂಟು ಮಾಡುವವೊ) – ಅನಂತ ಕಲ್ಯಾ ಗುಣಪೂರ್ಣನಾದ, ಅಚಿಂತ್ಯಾದ್ಭುತ ಶಕ್ತಿಗಳುಳ್ಳ ಮಹಾ ಪ್ರಭುವಿಗೆ (ಶ್ರೀಮನ ಣನಿಗೆ) ಪ್ರಣಾಮಗಳು.

ಜಗತ್ಕಾರಣನು ಒಬ್ಬನೇ ಆಗಿರುವನು. ಎಂಬ ಸಿದ್ಧಾಂತವನ್ನು ಹೆಚ ಳಿಸಲು–ಈ ಆಕ್ಷೇಪವನ್ನು ಎತ್ತುವರು.– ಕೆಲವು ದರ್ಶನಗಳಲ್ಲಿ 'ಶಕ್ತಿ ಯು ಜಗತ್ಕಾರಣವೆಂದು, ಇನ್ನೊಂದರಲ್ಲಿ 'ಶೂನ್ಯ'ವೆಂಬುದು ಜಗತ್ಕಾರಣವೆಂ ಬೇರೊಂದರಲ್ಲಿ 'ಅಸತ್' ಇದು ಜಗತ್ಕಾರಣವೆಂದೂ ಮನ್ನಿಸುವರು. –'ಪರಸ್ಪ ವಿರುದ್ಧವಾಗಿರುವ ಸಾತ್ವಿಕಾದಿ ಗುಣಗಳನ್ನು ಭಿನ್ನ ಭಿನ್ನ ಕಾಲಗಳಲ್ಲಿ' ಭಿ

ಭಿನ್ನ ಕಾರ್ಯಗಳಿಗಾಗಿ, ಒಬ್ಬನೇ ಪರಮಾತ್ಮನು ಪತ್ತಿಕೊಳ್ಳುವದರಿಂದ ಶಕ್ತಿಗ ಳಲ್ಲಿ (ಗುಣಗಳಲ್ಲಿ)ರುವ ವಿರೋಧತೆಯು ಬಾಧಕವಾಗಲಾರದು' – ಎಂದು [illegible] ಅಕ್ಷೇಪಕ್ಕೆ ಹಿಂದೆ ಹೇಳಿದ ಸಮಾಧಾನವು ಸಮರ್ಪಕ[illegible] ಶಕ್ತಿ ಸ್ತ್ರೀಲಿಂಗವಾಗಿದೆ. ಶೂನ್ಯ ನಿರಾಕಾರವಾಗಿದೆ. [illegible] ಇಲ್ಲ ಶಕ್ತಿ ಮುಂತಾದವು ವಿರುದ್ಧ ಧರ್ಮಗಳಾಗಿರುವವು. ಅದ[illegible] ಕಾರಣದ ಬಗ್ಗೆ ಮನಸ್ಸು ಮತ್ತೆ ಮತ್ತೆ ಭ್ರಮೆಗೊಳ್ಳುವದು.–

ಒಟ್ಟಿನಲ್ಲಿ ಹೇಳುವದೆಂದರೆ,– ಜಗತ್ ಕಾರಣನಾದವನು ಒಬ್ಬನೇ [illegible] ವನು. ಆತನ ಶಕ್ತಿಗಳು ಅಚಿಂತ್ಯ ಹಾಗೂ ವಿವಿಧವಾಗಿವೆ. [illegible] ಈ ವಿವಿಧ ಶಕ್ತಿಗಳಲ್ಲಿ ಒಂದನ್ನು ಕೆಲವರು ಸ್ತ್ರೀ (ಶಕ್ತಿ) ವಾಚಕ[illegible], [illegible] ಕೆಲವರು ಮತ್ತೊಂದು ಶಕ್ತಿಯನ್ನು (ಶೂನ್ಯ) ನಪುಂಸಕ [illegible] ಕೆಲವರು ಇಲ್ಲದೇ ಇರುವ 'ಅಸತ್' ಎಂಬ ಸಟಿಯಾದ [illegible] ತ್ತಾರೆ. ತಮ ತಮಗೆ ಸಮ್ಮತವಾದ ಶಕ್ತಿಗಳನ್ನೇ ಜಗತ್ ಕಾ[illegible], [illegible] ಕೆಲವರು ಇವುಗಳಿಗೆ ವಿರುದ್ಧವಾಗಿರುವ, ತಮಗೆ ತೋಚಿದ [illegible] ಕಾರಣವೆಂದೂ ಜಗತ್ ಕಾರಣವನ್ನು ನಿರ್ಧರಿಸಿರುವರು. ಈ [illegible] ಯಿಂದಲೂ ಸಂಸಾರ ಚಕ್ರದಲ್ಲಿ ಸುತ್ತುತ್ತಿರುವ ಮಾನವರಿಗೆ [illegible] ವಿಷಯದಲ್ಲಿ ಭ್ರಮೆ (ಅಜ್ಞಾನ) ಉಂಟಾಗುವದು. ವಿಶುದ್ಧವಾದ ([illegible] ವಾದ) ಏಕೀಭಾವನೆಯಿಂದ ಶ್ರೀ ಹರಿಚರಣಕ್ಕೆ ಶರಣು ಹೋಗುವ ಮಾನವನಿಗೆ ಈ ಭ್ರಮೆ–ಸಂದೇಹಗಳು ತೊಲಗಿ ಹೋಗುವವು. ಈ ಮಾತನ್ನು ಮನಸ್ಸಿನಲ್ಲಿ ಇಟ್ಟುಕೊಂಡೇ (ತಸ್ಮೈ ನಮಃ) ಆ ಪರಮಾತ್ಮನಿಗೆ ಪ್ರಣಾಮಗಳು. ಎಂದು ದಕ್ಷಪ್ರಜಾಪತಿ ಮಾಡಿದ ಶ್ರೀಮನ್ನಾರಾಯಣನ ಸ್ತೋತ್ರವಿದು—

||೧೫|| ಅಹಂ ಹಿ ಪೃಷ್ಟೋಽರ್ಯಮ್ಣ ಗುಣಾನ್ ಭವದ್ಭಿ
ರಾಚಕ್ಷ್ವ ಆತ್ಮಾವಗಮೋಽತ್ರ ಯಾವಾನ್ ।
ನಭಃ ಪತಂತ್ಯಾತ್ಮಸಮಂ ಪತತ್ರಿಣ-
ಸ್ತಥಾ ಸಮಂ ವಿಷ್ಣುಗತಿಂ ವಿಪಶ್ಚಿತಃ || ೧-೧೮-೨೩

ಜಗಜ್ಜನ್ಮಾದಿಕಾರಣನು, ಸಕಲ ಕಲ್ಯಾಣಗುಣಪೂರ್ಣನೂ, ಸರ್ವ ಶಕ್ತಿಯುತನೂ, ಎಂಬುದನ್ನು ಸಪ್ರಮಾಣವಾಗಿ ಸಿದ್ಧಿಗೊಳಿಸುವ ಉದ್ದೇಶ ದಿಂದಲೇ ('ಜನ್ಮಾದ್ಯಸ್ಯ') ಜಗಜ್ಜನ್ಮಾದಿ ಕಾರಣತ್ವವನ್ನು ಬ್ರಹ್ಮನಿಗೆ (ಮುಖ್ಯ) ಲಕ್ಷಣವಾಗಿರುವದೆಂದು ಹೇಳಿರುವರು. ಆದರಿಂದಲೇ ಆತನು ಸಕಲ ಕಲ್ಯಾಣ ಗುಣಪೂರ್ಣನೆಂಬುದನ್ನು ಸಕಲದೋಷರಹಿತನೆಂಬೂ ತಿಳಿದುಕೊಳ್ಳಬೇಕು. ಇದುವೆ

ಆತನ ಲಕ್ಷಣ. 'ಜನ್ಮಾದ್ಯಸ್ಯ....' ಶ್ಲೋಕದಲ್ಲಿರುವ 'ಪರಂ' ಎಂಬ ಶಬ್ದವು ಇದೇ ಅರ್ಥವನ್ನೇ ವ್ಯಕ್ತಗೊಳಿಸುವದು.

ಸೂತರು ಶೌನಕಾದಿಗಳಿಗೆ ಹೇಳಿದ ಮಾತು ಇದು.-

**ಅರ್ಥ** :- ಶ್ರೀ ಹರಿಯ ಗುಣಗಳನ್ನು (ಮಹಿಮೆಯನ್ನು) ತಿಳಿಸಿ ಹೇಳಬೇಕೆಂದು ನೀವು ನನಗೆ ಕೇಳಿರುವಿರಿ. ( ಸಾಕಲ್ಯೇನ ಶ್ರೀ ಹರಿಯ ಗುಣಗಳನ್ನು ನಿರೂಪಿಸುವದು ) ಸಹಸ್ರಮುಖದ ಆದಿಶೇಷನಿಗೂ - ಯಾರಿಗೂ ಶಕ್ಯವಾಗದು. ಆದುದರಿಂದ, ಯಥಾಶಕ್ತಿ ನನಗೆ ತಿಳಿದಷ್ಟು (ನನ್ನ ಜ್ಞಾನದ ಮಟ್ಟಿಗೆ ಅನುಗುಣವಾಗಿ ಮಾತ್ರ) ಅವುಗಳನ್ನು ನಿರೂಪಿಸುವೆ. ( ಅಶಕ್ಯವಿದ್ದರೂ ತಮ್ಮ ತಮ್ಮ ಶಕ್ತಿಗೆ ಅನುಗುಣವಾಗಿ ಕಾರ್ಯ ಮಾಡುವದು ಲೋಕದ ರೂಢಿಯಾಗಿದೆ ). ಮಹಾಪ್ರಾಜ್ಞನಾದ ನಿನಗೆ(ಸೂತನಿಗೇನೆ) ಶ್ರೀ ಹರಿಯ ಗುಣಗಳನ್ನು (ಸಂಪೂರ್ಣವಾಗಿ) ನಿರೂಪಿಸಲು ಶಕ್ಯವಿರದಿದ್ದರೆ ಬಿಡಲಿ, ಉಳಿದ (ಹೆಚ್ಚಿನ) ವಿದ್ವಾಂಸರು ನಿರೂಪಿಸಬಾರದೇಕೆ ? ಶ್ರೋತೃಗಳಾದ ಮುನಿಗಳ ಮನಸ್ಸಿನಲ್ಲಿರುವ ಈ ಸಂದೇಹವನ್ನು 'ಹಿ' ಶಬ್ದದಿಂದ ವ್ಯಕ್ತಗೊಳಿಸುವರು. (ಈ ಮಾತಿಗೆ ಉದಾಹರಣೆಯಾಗಿ) ( ಚಿಕ್ಕ ಹಾಗೂ ಬಲಿಷ್ಠ ) ಪಕ್ಷಿಗಳು ಕಡಿಮೆ ಹೆಚ್ಚು ಎತ್ತರಕ್ಕೆ ತಮ್ಮ ತಮ್ಮ ಶಕ್ತಿಗನುಗುಣವಾಗಿ ಆಕಾಶದಲ್ಲಿ ನೆಗೆಯುವವು. ಅದರಂತೆಯೆ ಜ್ಞಾನಿಗಳೂ ಕೂಡ ತಮ್ಮ ತಮ್ಮ ಬುದ್ಧಿಶಕ್ತಿಗನುಗುಣವಾಗಿ ಶ್ರೀ ಹರಿಯ ( ಅನಂತ ) ಗುಣಗಳನ್ನು ಹೆಚ್ಚು ಕಡಿಮೆಯಾಗಿ ಹೇಳುವರು. ಶ್ರೀ ಹರಿಯ ಗುಣಗಳು (ತಮಗೆ ಗೊತ್ತಿದ್ದಕ್ಕಿಂತಲೂ) ಹೆಚ್ಚಿಗೆ ಇಲ್ಲವೆಂದು ಅವರು ನಿರೂಪಿಸುವದನ್ನು ನಿಲ್ಲಿಸಿರಬೇಕು,- ಎಂದರೆ, 'ವಿಷ್ಣುಗತಿಂ' ಎಂಬುದರಿಂದ ಶ್ರೀ ಹರಿಯು ದೇಶತಃ, ಕಾಲತಃ, ಗುಣತಃ ವ್ಯಾಪ್ತನು ಎಂದು ಹೇಳಿದಂತಾಯಿತು. ಆದುದರಿಂದ ವ್ಯಾಪ್ತವಾದ ಆಕಾಶದ ಆದಿ-ಅಂತಗಳನ್ನು ಗುರುತಿಸುವದು ಅಶಕ್ಯವಿರುವಂತೆ, ತ್ರಿವಿಧ ವ್ಯಾಪ್ತಿಯುಳ್ಳ ಪರಮಾತ್ಮನ ಗುಣ-ಶಕ್ತಿಗಳನ್ನು ಆದ್ಯಂತವಾಗಿ ನಿರೂಪಿಸುವದೂ ಅಶಕ್ಯವಾಗಿದೆ. ಆಕಾಶದ ದೃಷ್ಟಾಂತವನ್ನು ಈ ಅಭಿಪ್ರಾಯದಿಂದಲೇ ಕೊಟ್ಟಿರುವರು.

||೧೫೪|| **ನಾಂತಂ ವಿದಾಮ್ಯಹಮಮೀ ಮುನಯಃ ಪ್ರಜೇಶಾ**
**ಮಾಯಾಬಲಸ್ಯ ಪುರುಷಸ್ಯ ಕುತಃ ಪರೇ ಯೇ ।**
**ಗಾಯನ್ ಗುಣಾನ್ ದಶಶತಾನನ ಆದಿದೇವಃ**
**ಶೇಷೋಽಧುನಾಪಿ ಸಮವಸ್ಯತಿ ನಾಸ್ಯ ಪಾರಂ ॥** ೨-೭-೪೧

ಬ್ರಹ್ಮ ನಾರದರಿಗೆ

ಶ್ರೀ ವಿಷ್ಣುವಿನ ಗುಣಗಳನ್ನು, ಆದ್ಯಂತವಾಗಿ ತಿಳಿದುಕೊಳ್ಳಲು, ಸಾಕ್ಷಾತ್
ಚತುರ್ಮುಖ ಬ್ರಹ್ಮನಿಗೇನೆ ನೀಗದ ಕಾರ್ಯವಾಗಿರಲು, ಉಳಿದವರ ...
ಇದೇ ಅರ್ಥವನ್ನು ಪ್ರತಿಪಾದಿಸುವ ಬ್ರಹ್ಮದೇವರ ನುಡಿಯನ್ನೇ ಇಲ್ಲಿ ...
ವರು.

**ಅರ್ಥ :–** ಷಡ್ಗುಣೈಶ್ವರ್ಯ ಸಂಪನ್ನನಾದ (ಶ್ರೀ ವಿಷ್ಣುವಿನ) ...
ತವಾದ ( ಮಾಯಾ ) ಗುಣಶಕ್ತಿಗಳನ್ನು ( ಸರ್ವದಾ ಭಗವಂತನ ಗು...
ಮಾಡುತ್ತಿರುವ ನಾನು (ಬ್ರಹ್ಮ) ಅವುಗಳ ಕೊನೆಯನ್ನು ಕಂಡಿಲ್ಲ. (...
ಇಚ್ಛಾನುಸಾರವಾಗಿಯೆ ಪ್ರಕಟವಾಗುವ ಆತನ ಗುಣಗಳನ್ನು ಈ ...
ಈ ಪ್ರಜಾಪತಿಗಳೂ ಪುರುಷೋತ್ತಮನಾದ ಭಗವಂತನ ಗುಣಗಳ ...
ತಿಳಿದುಕೊಂಡಿಲ್ಲ. ಉಳಿದವರಿಗೆ ಅದು ಹೇಗೆ ಸಾಧ್ಯ ? ...
ಭಗವಂತನ ಗುಣಗಾನದಲ್ಲಿ ಸದಾ ನಿರತನಾದ ಆದಿಶೇಷನಿಗೆ ...
ಕೊನೆಯನ್ನು ಇಂದಿಗೂ ಕಾಣಲು ಸಾಧ್ಯವಾಗಿಲ್ಲ. ಆದಿಶೇಷನಿಗೆ ...
ಕರ್ದಮಾದಿ ಋಷಿಗಳೂ, ಮರೀಚಿ ಮೊದಲಾದ ಪ್ರಜಾಪತಿಗಳೂ ...
ಲ್ಲವೆಂದು ಬೇರೆ ಹೇಳಬೇಕಿಲ್ಲ. ಅವರನ್ನುಳಿದು ಬೇರೆ ಅಧಿಕಾರಿ ಪು...
ಪಾತ್ರತೆಗೆ ಅನುಗುಣವಾಗಿ ಅಲ್ಪಶಃ ಮಾತ್ರ ತಿಳಿದಿರುವರು. ...ಗೆ
ತಿಳಿಯಲು ಯಾರಿಗೂ ಸಾಧ್ಯವಿಲ್ಲ. – 'ವಿದಾಮ' ಎಂಬುದು 'ವೇದ್ಮ' ...
ದಕ್ಕೆ ವೈದಿಕವಾಗಿದೆ. ಇಲ್ಲಿ ಹೇಳಿದ ಮಾತು ವೇದೋಕ್ತಿಗೆ ಸಮಾನ...
ಸೂಚಿತವಾಗಿದೆ.

||೧೫೫|| **ನಾಹಂ ನ ಯೂಯಂ ಬತ ತದ್ಗತಿಂ ವಿದು**
**ರ್ನ ವಾಮದೇವಃ ಕಿಮುತಾ ಪರೇ ಸುರಾಃ |**
**ಯನ್ಮಾಯಯಾ ಮೋಹಿತಬುದ್ಧಯಸ್ತ್ವಿದಂ**
**ವಿನಿರ್ಮಿತಂ ಸ್ವಾತ್ಮಸಮಂ ವಿಚಕ್ಷ್ಮಹೇ|| ೨–೬–೩೬**

– ಇಲ್ಲಿ ಒಂದು ಆಕ್ಷೇಪ ;– ಸಾಮಾನ್ಯ ಮುನಿಗಳು, ದೇವತೆಗಳು.
ಪರಮಾತ್ಮನ ಗುಣಗಳನ್ನು ಪೂರ್ತಿಯಾಗಿ ತಿಳಿದುಕೊಳ್ಳಲು ಸಮರ್ಥರಾಗಿರ
ಲಿಕ್ಕಿಲ್ಲ. ಆದರೆ ಚತುರ್ಮುಖ ಬ್ರಹ್ಮದೇವರ ಬಗ್ಗೆಯೂ ಹೀಗೆ ಹೇಳುವದು, ಉಚಿ
ತವೆನಿಸದು. ಆತನು ಹದಿನಾಲ್ಕು ಲೋಕಗಳ ನಿರ್ಮಾಪಕನು. ಇಂಥವನಿಗೆ ಪರ
ಮಾತ್ಮನ ಗುಣಗಳನ್ನು ತಿಳಿದುಕೊಳ್ಳುವ ಶಕ್ತಿ ಇರಬೇಕಲ್ಲವೆ ? ಅದರಂತೆ
ಅಷ್ಟೆಲ್ಲ ಲೋಕಗಳ ಸಂಹಾರ ಮಾಡುವ ಶಕ್ತಿಯುಳ್ಳವರು (ವಾಮದೇವ)ಮಹಾ
ದೇವರು. ಇದೇ ರೀತಿಯಾಗಿ ನಾರದ ವಿಶ್ವಾಮಿತ್ರ ಮುಂತಾದ ಋಷಿಗಳು ನೂತನ

(ಪ್ರತಿ) ಸೃಷ್ಟಿಯನ್ನೇ ನಿರ್ಮಿಸಬಲ್ಲ ಸಮರ್ಥರು. ಭಗವಂತನ ಗುಣಗಳನ್ನು ತಿಳಿದುಕೊಳ್ಳುವದು ಇಂಥವರಿಗೂ ಹೇಗೆ ಅಶಕ್ಯ ? - ಹೊಯ್ದಾಡುವ ಮನವುಳ್ಳ ಜನರ ಮನಸ್ಸಿನಲ್ಲಿದ್ದ ಈ ಸಂದೇಹವನ್ನು ಸಾಕ್ಷಾತ್ ಬ್ರಹ್ಮದೇವರ ಶಬ್ದಗಳಿಂದಲೇ ನಿವಾರಿಸುವರು.

**ಅರ್ಥ:-** (ಹದಿನಾಲ್ಕು ಲೋಕಗಳನ್ನು ನಿರ್ಮಿಸಿದ) ನಾನು, (ವಿ ಅಂದರೆ ವಿರುದ್ಧವಾಗಿ ನಿರ್ಮಿತಂ-ಮಾಡಿದವನು, ಎಂದರೆ) ಅವುಗಳನ್ನು ನಾಶಗೊಳಿಸುವ ರುದ್ರದೇವರು, (ಇಷ್ಟೊಂದು ಮಹಿಮೆಯಿಂದ ಯುಕ್ತರಾಗಿದ್ದರೂ) ಹಾಗೂ ನೀವೆಲ್ಲ ದೇವತೆಗಳು ಶ್ರೀ ಹರಿಯ ಮಹಿಮೆಯು ಇಷ್ಟೇ ಮಾತ್ರ ಎಂದು ಹೇಳಲು ಶಕ್ತರಾಗಿಲ್ಲ. ಹೀಗಿರಲು ಇನ್ನುಳಿದ ದೇವತೆಗಳು ಅದನ್ನು ತಿಳಿಯಲಾರದೆಂಬುದನ್ನು ಬಿಡಿಸಿ ಹೇಳಬೇಕಿಲ್ಲ. (ತಿಳಿಯಲಾರದ್ದಕ್ಕೆ ಕಾರಣವೇನು ? ಎಂದರೆ, ಅದಕ್ಕೆ ಮೂಲಭೂತವಾದ ಮುಖ್ಯ ಕಾರಣವನ್ನು ಹೇಳುವರು.) (ಯನ್ಮಾಯಯಾ...) ಆ ಪರಮಾತ್ಮನ ಸ್ವರೂಪ ಭೂತವಾದ ಇಚ್ಛಾಶಕ್ತಿಯಾದ ಮಾಯೆಯಿಂದ ನಮ್ಮ ಬುದ್ಧಿಗೆ ಮಂಕು ಕವಿಯುವದು, ಅಜ್ಞಾನವು ಆವರಿಸುವದು. (ಹೀಗಿದ್ದರೆ, ಪರಮಾತ್ಮನ ಮಹಿಮೆಯ ಬಗ್ಗೆ ನೀವು (ಬ್ರಹ್ಮದೇವರು) ನನಗೆ ಈಗ್ಗೆ ಎಷ್ಟನ್ನು ಮಾತ್ರ ಹೇಳುವಿರಿ ? - ಎಂಬ ನಾರದರ ಮನಸ್ಸಿನಲ್ಲಿಯ ಶಂಕೆಯನ್ನು ಮುಂಚಿತವಾಗಿ ತಿಳಿದುಕೊಂಡು ಅದನ್ನು ಪರಿಹರಿಸುವರು.) ಬ್ರಹ್ಮ ರುದ್ರಾದಿ ದೇವತೆಗಳಾದ ನಾವೆಲ್ಲರೂ ಹಾಗೂ ಋಷಿಗಳು ಭಗವಂತನ ಮಹಿಮೆಯನ್ನು ನಮ್ಮ ಯೋಗ್ಯತೆಗೆ ಹೊಳೆದಷ್ಟನ್ನು ಮಾತ್ರ ಹೇಳಬಲ್ಲೆವು.

ಇದರಿಂದ, ಅಗಣಿತ ಮಹಿಮಾಶಾಲಿಗಳಾದ ಬ್ರಹ್ಮ ರುದ್ರಾದಿಗಳೂ ಕೂಡ ಭಗವಂತನ ಮಹಿಮೆಯನ್ನು ಸಾದ್ಯಂತವಾಗಿ ನಿರೂಪಿಸಲು ಶಕ್ತಿಯಿಲ್ಲವೆಂದು ಹೇಳುವದರಿಂದ ಸಂಶಯದ ಬೇರನ್ನೇ ಕಿತ್ತಿ ಒಗೆದಂತಾಗುವದು. ಎಂದು ತಿಳಿಯಬೇಕು.

||೧೫೬|| **ಯೇಷಾಂ ಸ ಏವ ಭಗವಾನ್‌ದಯಯೇದನಂತಃ** ಬ್ರಹ್ಮ
**ಸರ್ವಾತ್ಮನಾಽಽಶ್ರಿತಪದೋ ಯದಿ ನಿರ್ವ್ಯಲೀಕಂ ।**
**ತೇ ವೈ ವಿದಂತ್ಯತಿತರಂತಿ ಚ ದೇವಮಾಯಾಂ**
**ನೈಷಾ ಮಮಾಹಮಿತಿ ಧೀಃ ಶ್ವಶೃಗಾಲಭಕ್ಷ್ಯೇ ॥** ೨-೭-೪೨

ಇಲ್ಲಿ ಒಂದು ಆಕ್ಷೇಪ- 'ಮೋಕ್ಷಾಪೇಕ್ಷಿಗಳ ಜಿಜ್ಞಾಸೆಗೆ (ತಿಳಿದುಕೊಳ್ಳಬೇಕೆಂಬ ಲವಲವಿಕೆಗೆ) ನಿರ್ಗುಣ ಬ್ರಹ್ಮನೇ ವಿಷಯನಾಗಿರಬೇಕು. (ಪ್ರಕೃತಿಯ)

ಮೂರು ಗುಣಗಳ ಬಂಧನದಿಂದ ಬಿಡುಗಡೆರೂಪವಾದ ಮೋಕ್ಷವು (ಸತ್ವಾದಿ
ಗುಣಧಾರಣ ಮಾಡುವ) ಸಗುಣ ಬ್ರಹ್ಮನ ಜಿಜ್ಞಾಸೆಯಿಂದ ದೊರೆಯಲಾರದು
-ಎಂದು ಕೇಳುವವರಿಗೆ ಉತ್ತರ ಇದು:- ‘ ಸಗುಣ ನಿರ್ಗುಣ ಬ್ರಹ್ಮ [illegible]
ಚನೆಯು ಸದ್ಯಕ್ಕೆ ಬದಿಗಿರಿಸೋಣ. ಭಗವನ್ ಮಾಯೆಯಿಂದ [illegible]
ಮೊದಲು ಮಾಡಬೇಕಾದ ಕಾರ್ಯ. ‘ ಬಂಧಕೋ ಭವ[illegible] [illegible]
ಪಾಶಾಚ್ಚ ಮೋಚಕಃ’,ನಾದ ಭಗವಂತನೇ ತನ್ನ ಮಾಯೆಯ [illegible]
ತಗೆಯಬಲ್ಲನು. ಆದುದರಿಂದ, ‘ಬ್ರಹ್ಮ’ ನೆಂಬ ಭಾವನೆಯಿಂದ ಆ ಭಗವಂತನ
ಜಿಜ್ಞಾಸೆಯನ್ನು ಮೋಕ್ಷಾಪೇಕ್ಷಿಗಳು ಮಾಡತಕ್ಕದ್ದು. ಭಗವಂತನು [illegible]
ಮಾಯೆಯನ್ನು ಹೇಗೆ ನಿವಾರಿಸುವನೆಂಬುದನ್ನು ತೋರಿಸುವದು.

ಅರ್ಥ:- (ಡಂಭಾಚಾರವಿಲ್ಲದ) ಕಪಟರಹಿತನಾದ ಭಕ್ತಿಯಿಂದ [illegible]
ರಾಗಿ ವೀರ್ಯಜ್ಞಾನಾದಿ ಷಡ್ಗುಣಸಂಪತ್ತಿನಿಂದ ಭಂತನಾದ, ಆದಿ [illegible]
ಯಿಲ್ಲದ (ಅನಂತರೂಪನಾದ) ಭಗವಂತನಿಗೆ ಸರ್ವ ಭಾವಗಳಿಂದಲೂ ಸೇರಿ
ಹೊಕ್ಕವರಿಗೆ ಮಾತ್ರ ಭಗವಂತನ ಅನುಗ್ರಹವಾಗುವದು. ಈ ಬಗೆಯ
ನಿಸ್ಸೀಮ ಭಕ್ತರೇ ಭಗವಂತನ ಮಹಿಮೆಯನ್ನು (ಗುಣ ಶಕ್ತಿಗಳನು
ಯಥಾಶಕ್ತಿ ತಿಳಿದುಕೊಳ್ಳುವರು. ಭಗವಂತನು ಹಾಕುವ ತ್ರಿಗುಣಾತ್ಮಕ ಬಲೆ
ಯಿಂದ ಮುಕ್ತರಾಗಿ ಇಂಥವರೇ ಹೊರಗೆ ಬರಬಲ್ಲರು. ಆದರೆ, ನಾಯಿ ನರಿಗಳಿಗೆ
ಆಹಾರವಾಗುವ ಇಲ್ಲವೆ ನಾಯಿ ನರಿಗಳ ಸ್ವಭಾವದ ಬಂಧುಗಳಿಗೆ ಭೋಗ್ಯವಾ
ಗುವ ಸಂಪತ್ತನ್ನೇ ನಾನು-ನನ್ನದು ಎಂಬ ಮಮತ್ವ-ಅಹಂಕಾರಗಳಿಂದ ನೆಚ್ಚಿ
ದವರಿಗೆ ಭಗವಂತನ ಅನುಗ್ರಹವು ಎಂದಿಗೂ ದೊರೆಯದು, ಆತನ ಮಾಯೆ
ಯಿಂದ ಅವರು ಎಂದಿಗೂ ಮುಕ್ತರಾಗಲಾರರು. ನಾನು ನನ್ನದೆಂಬ ಅಭಿಮಾನ
ವಿಲ್ಲದಿರುವುದೇ ಅನನ್ಯಭಾವದ ಶರಣಾಗತಿಗೆ ದ್ಯೋತಕವಾಗಿದೆ.-

||೧೫೭|| **ವೇದಾಹಮಂಗ ಪರಮಸ್ಯ ಹಿ ಯೋಗಮಾಯಾಂ**
**ಯೂಯಂ ಭವಶ್ಚ ಭಗವಾನಥ ದೈತ್ಯವರ್ಯಃ ।**
**ಪತ್ನೀ ಮನೋಃ ಸ ಚ ಮನುಸ್ತದಪತ್ಯಭೂತಾಃ॥**
**ಪ್ರಾಚೀನಬರ್ಹಿ ಋಭುರಂಗ ಉತ ಧ್ರುವಶ್ಚ॥** (೨-೭-೪೩(೧೧)

॥೧೫೮॥ ಇಕ್ಷ್ವಾಕುರೈಲಮುಚಕುಂದವಿದೇಹಗಾಧಿ
ರಘ್ವಂಬರೀಷಸಗರಾ ಗಯನಾಹುಷಾದ್ಯಾಃ ।
ಮಾಂಧಾತ್ರಲರ್ಕಶತಧನ್ವನರಂತಿದೇವ-
ದೇವವ್ರತಬಲಿರಮೂರ್ತರಯೋ ದಿಲೀಪಃ ॥ ೨-೭-೪೪

॥೧೫೯॥ ಸೌಭರ್ಯುದಂಕಶಿಬಿದೇವಲಪಿಪ್ಪಲಾದಾಃ
ಸಾರಸ್ವತೋದ್ಧವಪರಾಶರಭೂರಿಷೇಣಾಃ ।
ಯೇಽನ್ಯೇ ವಿಭೀಷಣಹನೂಮದುಪೇಂದ್ರದತ್ತಾಃ ॥
ಪಾರ್ಥಾರ್ಷ್ಟಿಷೇಣ ವಿದುರಶ್ರುತದೇವಮುಖ್ಯಾ ॥ ೨-೭-೪೫

ಭಗವನ್ಮಾಯಾ ಜನಿತವಾದ ಹುಟ್ಟು-ಸಾವುಗಳ ರೂಪವಾದ ಸಂಸಾರವನ್ನು ಭಗವಂತನ ಅನುಗ್ರಹದಿಂದ ಗೆದ್ದ ಮಹಾನುಭಾವರೂ ಇರುವರು.

**ಅರ್ಥ:**- ವತ್ಸಾ ! ('ಅಂಗ'-ಎಂದು ಬ್ರಹ್ಮನು ನಾರದರಿಗೆ ಪ್ರೀತಿಯಿಂದ ಕರೆಯುವನು). ನಾನು, (ಬ್ರಹ್ಮನು) ನೀನು (ನಾರದನು), ಪೂಜ್ಯರಾದ ರುದ್ರ ದೇವರು ದೈತ್ಯಶಿರೋಮಣಿಯಾದ ಪ್ರಲ್ಹಾದರು, ಸ್ವಾಯಂಭುವ ಮನು ಹಾಗೂ ಆತನ ಪತ್ನಿಯಾದ ಶತರೂಪಾ, ಇವರಿಬ್ಬರ ಸಂತಾನರಾದ ಪ್ರಿಯವ್ರತ-ಉತ್ತಾನ ಪಾದರು, ಆಕೂತಿ, ದೇವಹೂತಿ ಪ್ರಸೂತಿಯರು, ಬರ್ಹಿಷ್ಮದ್ರಾಜನು, ಋಬು ರಾಜನು, ಅಂಗ ಮತ್ತು ಧ್ರುವರಾಜರು, ಇಕ್ಷ್ವಾಕುರಾಜ, ಇಲಾಪುತ್ರನಾದ ಪುರೂರವರಾಜನು, ಮುಚಕುಂದರಾಜ, ವಿದೇಹದ ದೊರೆ ಜನಕರಾಜನು, ಗಾಧಿರಾಜ, ರಘುರಾಜ. ಅಂಬರೀಷ, ಸಗರರಾಜ, ಗಯ, ನಹುಷಪುತ್ರ ಯಯಾತಿರಾಜ, ಮಾಂಧಾತೃ, ಅಲರ್ಕ, ಶತಧನ್ವ, ರಂತಿದೇವ, ಕುರುಪಿತಾಮಹ ಭೀಷ್ಮ, ಬಲಿ, ಅಮೂರ್ತರಯ, ದಿಲೀಪ, ಸೌಭರಿ, ಉದಂಕ, ದಾನಿಶ್ರೇಷ್ಠ ಶಿಬಿ ದೇವಲ, 'ಪಿಪ್ಪಲಾದ' ಸಾರಸ್ವತ, ಉದ್ಧವ, ಪರಾಶರ ಋಷಿಗಳು, ಭೂರಿಷೇಣ, ವಿಭೀಷಣ, ಹನುಮಂತ, ಉಪೇಂದ್ರ, ದತ್ತಾತ್ರೇಯ, ಭಕ್ತನಾದ ಅರ್ಜುನ, ಆರ್ಷ್ಟಿಷೇಣ, ವಿದುರ; ಶ್ರುತದೇವ ಮುಂತಾದವರು, ನಾವೆಲ್ಲರೂ ಭಗವಂತನ ಯೋಗಮಾಯೆಯನ್ನು, ಆತನ ಸ್ವರೂಪಭೂತವಾದ (ನೈಮಿತ್ತಕವಲ್ಲದ) ಮಹಿಮೆಯನ್ನು, ಯಥಾಶಕ್ತಿ ತಿಳಿದುಕೊಂಡು ಸಂಸಾರ ಸಾಗರವನ್ನು ದಾಟಿದವರು.

ಉಪೇಂದ್ರ ಹಾಗೂ ದತ್ತ, ಇವು ಭಗವಂತನ ಅವತಾರಗಳು. ಆದರೂ ಭಕ್ತವರ್ಗದಲ್ಲಿ ಸ್ವಯಂ, ತಾನಾಗಿಯೇ ಸೇರಿಸಿಕೊಂಡ ಭಗವಂತನ ಬೋ

ವಿಡಂಬನಾತ್ಮಕವಾದ ಈ ಲೀಲೆಯು ಆಶ್ಚರ್ಯಕರವಾದುದು. ಮುಖ್ಯಪ್ರಾಣನ ಅವತಾರರಾದ ಹನುಮಂತ ದೇವರಿಗೂ ಇದೇ ಮಾತನ್ನೇ ಅನ್ವಯಿಸಬೇಕು. ದೇವೋತ್ತಮನಾದ ಭಗವಂತನು ಮಾನವರಲ್ಲಿ ಅವತರಿಸಿ, ಮಾನವರಿಗೆ ರೀತಿ ನೀತಿಗಳನ್ನು ತೋರಿಸುವ ರೀತಿಗಳನ್ನು ಮಾಡಿದಂತೆ, ಜೀವೋತ್ತಮರಾದ ಪ್ರಾಣ ದೇವರು ಹನುಮಂತರಾಗಿ ಅವತರಿಸಿ, ಆದರ್ಶ ಭಕ್ತರ ರೀತಿನೀತಿಗಳನ್ನು ಆಚರಿಸಿ ತೋರಿಸಿದರು.

||೧೬೦|| **ತೇ ವೈ ವಿದಂತ್ಯತಿತರಂತಿ ಚ ದೇವಮಾಯಾಂ**
**ಸ್ತ್ರೀಶೂದ್ರಹೂಣಶಬರಾ ಅಪಿ ಪಾಪಜೀವಾಃ |**
**ಯದ್ಯದ್ಭುತಕ್ರಮಪರಾಯಣಶೀಲಶಿಕ್ಷಾ-**
**ಸ್ತಿರ್ಯಗ್ಜನಾ ಅಪಿ ಕಿಮು ಶ್ರುತಧಾರಣಾ ಯೇ ||** ೨-೭-೪೬

ಕೇವಲ ಭಕ್ತಿಯಿಂದಲೇ ಭಗವಂತನ ಕೃಪೆಯೆಂಬ ಹೇಳಿಗೆಯಲ್ಲಿ ಆದರವನ್ನು ಹುಟ್ಟಿಸಲು, ವೇದಾದಿ ಶಾಸ್ತ್ರಗಳನ್ನು ಓದಿಕೊಳ್ಳುವ ಯೋಗ್ಯತೆಯಿಲ್ಲದವರಿಗೂ ಕೂಡ, ತಮ್ಮ ಭಕ್ತಿಯ ಬಲದಿಂದ ಅವರೂ ಕೂಡ, ಸಂಸಾರ ಸಾಗರವನ್ನು ದಾಟಿರುವ ಉದಾಹರಣೆಗಳು ಇರುವವು. ಎಂಬುದನ್ನು ಇಲ್ಲಿ ತೋರಿಸುವರು.

**ಅರ್ಥ :–** ಅಚಿಂತ್ಯಾದ್ಭುತ ಶಕ್ತಿಯುಳ್ಳ ಪರಮಾತ್ಮನನ್ನೇ ಪೂರ್ಣವಾಗಿ ನಂಬಿರುವ ಭಕ್ತಶಿರೋಮಣಿಗಳು ಉಪದೇಶಿಸಿರುವ ದಾರಿಯಲ್ಲಿ ನಡೆದ (ಅದನ್ನೇ ಅನುಸರಿಸಿದ) ಸ್ತ್ರೀಯರು, ಶೂದ್ರರು, ಹೂಣರು, ಶಬರರು, (ಕರ್ಮಫಲದಿಂದ) ಪಾಪಿಗಳಾಗಿ ಹುಟ್ಟಿದವರು, ಇದು ಮಾತ್ರವಲ್ಲದೆ ಪಶುಪಕ್ಷಿಗಳಾಗಿ ಹುಟ್ಟಿಬಂದವರೂ ಕೂಡ ಪರಮಾತ್ಮನ ಸ್ವರೂಪಭೂತವಾದ ಮಹಿಮೆಯನ್ನು (ಬಂಧಕ ಶಕ್ತಿಯಾದ ಮಾಯೆಯನ್ನು) ತಿಳಿದುಕೊಳ್ಳಲು, ಸಂಸಾರ ಬಂಧನದಿಂದ ಬಿಡುಗಡೆಯಾಗಲು ಸಮರ್ಥರಾಗುವರು. ಹೀಗಿರಲು, ಸಚ್ಛಾಸ್ತ್ರಗಳನ್ನು ಕೇಳಿ ತಿಳಿದುಕೊಳ್ಳುವ ಯೋಗ್ಯತೆ ಇರುವವರು, ಶ್ರೀ ಹರಿಯ ಮಾಯೆಯಿಂದ ಮುಕ್ತರಾಗಿ ಸಂಸಾರ ಸಾಗರವನ್ನು ದಾಟುವದರಲ್ಲಿ ಆಶ್ಚರ್ಯವಿಲ್ಲ.

||೧೬೧|| **ಏತಾವತಾಲಂ ನನು ಸೂಚಿತೇನ**
**ಗುಣೈರಸಾಮ್ಯೇಽನತಿಶಾಯಿನೋಽಸ್ಯ |**
**ಹಿತ್ವೇತರಾನ್ ಪ್ರಾರ್ಥಯತೋ ಮುಕುಂದಂ**
**ಯಸ್ಯಾಂಘ್ರಿರೇಣುಂ ಜುಷತೇಽನಭೀಪ್ಸೋಃ ||** ೧-೧೮-೨೦

ಸಕಲ ಜಗತ್ತಿಗೆ ಶ್ರೀ ಹರಿಯು ಜನ್ಮಾದಿಕಾರಣನಾದ್ದರಿಂದ ಆತನು ಕಲ್ಯಾಣ ಗುಣಪೂರ್ಣನೂ ಆಗಿರುವನು, ಬಂಧಕಗಳಾದ ರಾಜಸಾದಿ ಗುಣಗಳಿಂದ ಬಿಡುಗಡೆ ಮಾಡುವವನೂ ಆತನೇ ಆಗಿರುವನು, ಆದುದರಿಂದ ಮೋಕ್ಷಾಪೇಕ್ಷಿಗಳು ಆತನ ಜ್ಞಾನವನ್ನೇ ಮಾಡಿಕೊಳ್ಳಬೇಕು, ಎಂದು ಹೇಳಲಾಗಿದೆ. ಭಗವಂತನಿಗೆ ಸದೃಶನಾದ (ಸಮನಾದ) ಇನ್ನೊಬ್ಬ ದೇವತೆ ಇದ್ದರೆ, ಅವನ ಜಿಜ್ಞಾಸೆಯನ್ನು ಏಕೆ ಮಾಡಬಾರದು ? ಭಗವಂತನದೇ ಜಿಜ್ಞಾಸೆ ಮಾಡಬೇಕೆಂಬ ಆಗ್ರಹವು ಆಗ್ಗೆ ಸಮಂಜಸವೆನಿಸದು. ಆತನಿಗಿಂತಲೂ ಮಿಗಿಲಾದ ದೇವತೆಯಿದ್ದರೆ, ಭಗವಂತನ ಜಿಜ್ಞಾಸೆಯ ಪ್ರಸ್ತಾಪವೇ ಉಂಟಾಗದು. ಮುಮುಕ್ಷುಗಳ ಜಿಜ್ಞಾಸೆಗೆ ಆತನು ವಿಷಯವೇ ಆಗಲಾರನು. ಎಂದು ಆಕ್ಷೇಪಿಸುವವರಿಗೆ ಉತ್ತರವೆಂದರೆ, ಜಿಜ್ಞಾಸೆಗಾಗಿ ಇನ್ನೊಬ್ಬ ದೇವತೆಯನ್ನು ಶೋಧಿಸುವ ಪ್ರಯಾಸವನ್ನು ಸಾಧಕನು ಅಲ್ಪಕಾಲ ತಡೆಹಿಡಿಯಲಿ. ಭಗವಂತನಿಗೆ ಸರಿಮಿಗಿಲು ಇಲ್ಲವೆಂಬುದನ್ನು ನಮ್ಮ ಜ್ಞಾಪಕಕ್ಕೆ ತಂದು ಕೊಡುವ ಒಂದು ( ನಿರ್ವಿವಾದವಾದ ) ಸಂಗತಿಯನ್ನು ಸಾಧಕನು ಮೊದಲು ಗಮನಿಸಬೇಕು. ಅದೇಂದರೆ ( ಸೂತರು ಶೌನಕಾದಿಗಳಿಗೆ ಹೇಳುವರು)

**ಅರ್ಥ** :– ( ಕ್ಷೀರಸಾಗರ ಮಂಥನ ಕಾಲದಲ್ಲಿ ಉದ್ಭವಿಸಿದ ) ಶ್ರೀಲಕ್ಷ್ಮೀ ದೇವಿಯು ತನ್ನನ್ನು ವರಿಸಬಯಸುವ ಪ್ರತಿಯೊಬ್ಬ ದೇವತೆಯ (ಗುಣದೋಷಗಳ ವಿಮರ್ಶೆಮಾಡಿ), ಅವರನ್ನೆಲ್ಲ (ತನಗೆ ಅಪಾತ್ರರೆಂದು) ತ್ಯಜಿಸಿ, ತನ್ನ ಬಗ್ಗೆ (ಯಾವುದರ ಬಗ್ಗೆಯೂ) ಅಪೇಕ್ಷೆ ಪಡೆಯದ, (ನಿರಪೇಕ್ಷನಾದ) ಮುಕ್ತಿದಾಯಕನಾದ ಮುಕುಂದನನ್ನೇ ವರಿಸಿದಳು. ಶ್ರೀಹರಿಗೆ ಗುಣಗಳಲ್ಲಿ ಸಮಅಧಿಕರು (ಸರಿ–ಮಿಗಿಲ) ಉಳಿದ ದೇವತೆಗಳಲ್ಲಿ ಯಾರೂ ಇಲ್ಲವೆಂಬುದಕ್ಕೆ – (ಅದನ್ನು ಸಿದ್ಧಗೊಳಿಸಲಿಕ್ಕೆ) ಇದೊಂದೇ ಪ್ರಮಾಣವು ಸಾಕು. ಆ ವಿಷಯದಲ್ಲಿ ಸಾಧಕನಿಗೆ ಇದು ಜ್ಞಾಪಕವಾಗಿದೆ.

ಆದುದರಿಂದ, ಸರಿ ಮಿಗಿಲಿಲ್ಲದ ಸರ್ವೋತ್ತಮನಾದ, ಬ್ರಹ್ಮ ಶಬ್ದದಿಂದ ವಾಚ್ಯನಾದ ಶ್ರೀ ಮನ್ನಾರಾಯಣನೇ ಮೋಕ್ಷಕ್ಕೆ ಸಾಧನವಾದ ಜಿಜ್ಞಾಸೆಗೆ ಏಕಮೇವ ವಿಷಯನಾಗಿರುವನು.

||೧೬೨|| **ನೂನಂ ತಪೋ ಯಸ್ಯ ನ ಮನ್ಯುನಿರ್ಜಯೋ** ೮-೩೮

**ಜ್ಞಾನಂ ಕ್ವಚಿತ್ತಸ್ಯ ನ ಸಂಗವರ್ಜಿತಂ ।**

**ಕಶ್ಚಿನ್ಮಹಾಂಸ್ತಸ್ಯ ನ ಕಾಮನಿರ್ಜಯಃ**

**ಸ ಈಶ್ವರಃ ಕಿಂ ಪರತೋ ವ್ಯಪಾಶ್ರಯಃ ॥** ೮-೮-೧೯

೨೦

ಶ್ರೀಹರಿಗೆ ಸರಿ ಮಿಗಿಲಿಲ್ಲವೆಂಬುದು ಸತ್ಯವಾದುದು. ಮಹಾಲಕ್ಷ್ಮಿಯು ಎಲ್ಲರ ಆದರಕ್ಕೂ ಪಾತ್ರಳಾದವಳು. ತನ್ನನ್ನು ವರಿಸಬೇಕೆಂದು ಹಂಬಲಿಸುವ ದೇವತೆಗಳನ್ನೆಲ್ಲ ಬಿಟ್ಟುಕೊಟ್ಟು, ತನ್ನ ಬಗ್ಗೆ ಅಪೇಕ್ಷೆಯನ್ನೇ [illegible] ಚರಣಗಳನ್ನೇ ಆಶ್ರಯಿಸಿದಳು. ಆದರಿಂದ ಆತನಿಗೆ ಸಮನಾರೂ [illegible]ದು ಸಿದ್ಧವಾಯಿತು, ಅದರಂತೆಯೇ ಆತನಿಗೆ ಅಧಿಕರೂ ಯಾರೂ [illegible]ದು ಪ್ರಮಾಣಿತವಾಯಿತು. ಶ್ರೀ ಹರಿಗೆ ಯಾರಾದರೂ ಸಮ[illegible] [illegible] ಬಿಟ್ಟು ಶ್ರೀ ಹರಿಯ ಪಾದಕಮಲವನ್ನೇ ಆಶ್ರಯಿಸುವದು ಸ[illegible]ನಿಗೆ ಅಧಿಕರಿದ್ದರೆ, ಶ್ರೀ ಹರಿಯನ್ನೇ ಸ್ವೀಕರಿಸುವದು ಅಸಮಂಜಸ[illegible] [illegible]ದರೆ ಸರಿ-ಮಿಗಿಲೆಂಬ ವಿಚಾರವೇನೇ ಆಗಿರಲಿ. ಶ್ರೀಲಕ್ಷ್ಮೀ [illegible] ಶ್ರೀಹರಿಯನ್ನು ವರಿಸಿದಳು, - ಎಂಬ ಮಾತೆ ಅಸಂಗತವಾದುದು. [illegible]ಕೆಂದರೆ, ಶ್ರೀಲಕ್ಷ್ಮೀದೇವಿ ನಿತ್ಯಾವಿಯೋಗಿನಿ. ಅನಾದಿಕಾಲದಿಂದಲೂ ಶ್ರೀಹ[illegible] ಅವಳಿಗೆ ಪತಿ. ಶ್ರೀಲಕ್ಷ್ಮೀದೇವಿಗೆ ಶ್ರೀಹರಿಯೇ ಪತಿ. ಎಂಬುದನ್ನು (ಓದ್ಬೆಯಿಲ್ಲದ) ದನ ಕಾಯುವವರೂ, ಹೆಣ್ಣುಮಕ್ಕಳೂ ಪ್ರಸಿದ್ಧವಾಗಿ ತಿಳಿದುಕೊಂಡಿರುವರು. ಹೀಗಿರಲು, ಸಾಮಾನ್ಯ ಸ್ವಯಂವರ ಕಾಲದಲ್ಲಿ ವಾಡಿಕೆಯಾಗಿ ನಡೆಯುವಂತೆ, ಉಳಿದವರನ್ನೆಲ್ಲ ತ್ಯಜಿಸಿ ಶ್ರೀಹರಿಯನ್ನೇ ವರಿಸಿದಳು, ಎಂದು ಹೇಗೆ ಹೇಳುವಿರಿ ? ಹೀಗೆ ಹೇಳುವದು ಮನಸ್ಸಿಗೆ ಒಪ್ಪುವದಿಲ್ಲ. ಏಕೆಂದರೆ, ಅವರಿಬ್ಬರ ಪತಿ ಪತ್ನಿತ್ವದ ಸಂಬಂಧವು ಅನಾದಿಕಾಲದಿಂದಲೂ ನಡೆದು ಬರುವಂಥದು. ಅದಕ್ಕೆ ಮೊದಲು ಕೊನೆಯೆಂಬುದೇ ಇಲ್ಲ. - ಈ ಆಕ್ಷೇಪಕ್ಕೆ ಸಮಾಧಾನವೆಂದರೆ,- (ಪತಿ-ಪತ್ನಿತ್ವವು ಅನಾದಿಯಾಗಿದ್ದರೂ) ಒಂದು ವಿಶಿಷ್ಟ ಉದ್ದೇಶಕ್ಕಾಗಿ. ಒಂದು ವಿಶಿಷ್ಟಕಾಲದಲ್ಲಿ ಕ್ಷೀರಸಾಗರದಿಂದ ಆವಿರ್ಭೂತಳಾದ ಲಕ್ಷ್ಮೀದೇವಿ ನೂತನ ವಧುವಿನಂತೆ ಮಾಡಿದ ಒಂದು ವಿಡಂಬನ-ಒಂದು ಆಟದಂತೆ ಇರುವದು. ಅದೇ ಕಾಲಕ್ಕೆ (ಶ್ರೀಹರಿಯನ್ನು ಬಿಟ್ಟು) ಉಳಿದ ದೇವತೆಗಳಲ್ಲಿರುವ ದೋಷಗಳನ್ನೂ ಅವಳು ಪ್ರಕಟಿಸಿದಳು. ವಿಷ್ಣು ಸರ್ವೋತ್ತಮತ್ವವನ್ನು ಪ್ರಕಟಗೊಳಿಸುವದೇ ಈ ವಿಡಂಬನೆಯ ಉದ್ದೇಶ.

**ಅರ್ಥ**:- ತಪಸ್ಸು ಇದ್ದವನಲ್ಲಿ, ಸಿಟ್ಟನ್ನು ಗೆಲ್ಲುವ ಶಕ್ತಿ ಇಲ್ಲ. (ಇದರಿಂದ ದುರ್ವಾಸ ಮುಂತಾದ ತಾಪಸರನ್ನು ನಿಷೇಧಿಸಿದಂತಾಯಿತು. ದುರ್ವಾಸರು ಅಂಬರೀಷ ರಾಜನ ವಿಷಯದಲ್ಲಿ ಮಾಡಿದ ಕೋಪವು ಪ್ರಸಿದ್ಧವಿದೆ.) ಇನ್ನೊಬ್ಬನಲ್ಲಿ ಜ್ಞಾನವಿದೆ. ಆದರೆ ಅದು ವಿಷಯಾಸಕ್ತಿಯಿಂದ ರಹಿತವಾಗಿಲ್ಲ. (ದೇವತೆಗಳಿಗೆ, ದೈತ್ಯರಿಗೆ ಪುರೋಹಿತರೂ, ಮಾರ್ಗದರ್ಶಕರಾದ ಮಂತ್ರಿಗಳೂ ಆಗಿದ್ದ ಶುಕ್ರ ಹಾಗೂ ಬೃಹಸ್ಪತಿಗಳು ಈ ವರ್ಗದಲ್ಲಿ ಬರುವರು.) ಇನ್ನೊಬ್ಬ ಮಹಾನು

ಭಾವನಿರುವನು. ಆದರೆ ಆತನಿಗೆ (ಸ್ತ್ರೀ ವಿಷಯಕ್ಕೆ) ಕಾಮ ಭಾವನೆಯನ್ನು ಗೆಲ್ಲುವದಾಗಲಿಲ್ಲ. (ಈತನು ಬ್ರಹ್ಮದೇವನು)- (ಭಗವನ್ಮಹಿಮೆಯನ್ನು ಬಲ್ಲವರು ಅಸುರರಿಗೆ ಮತಿ ಭ್ರಮೆಯನ್ನು ಮಾಡಬೇಕೆಂಬ ನಿಯಮದಂತೆ, ಬ್ರಹ್ಮದೇವರು ತನ್ನ ಮಗಳಲ್ಲಿಯೆ ಕಾಮುಕರಂತೆ ವಿಡಂಬನವನ್ನು ಮಾತ್ರ ಮಾಡಿದರು). ಪರರ ಆಶ್ರಯವಿಲ್ಲದೆ ಬದುಕುವದು ತನಗೇ ಸಾಧ್ಯವಿಲ್ಲದ ಮಹಾದೇವನು ಇತರರಿಗೆ ಹೇಗೆ ಆಶ್ರಯ-ಆಧಾರನು ಆಗಬಲ್ಲನು ? (ಭಸ್ಮಾಸುರನ ಭಯದಿಂದ ಪಾರಾಗಲು ಪಲಾಯನ ಮಾಡುತ್ತಿದ್ದ ಮಹಾದೇವರಿಗೆ ಬಟುರೂಪಿಯಾದ ಶ್ರೀಹರಿಯು ಕಾಪಾಡಿದನು.) ಇದರಿಂದ ಈಶ್ವರನನ್ನು ನಿಷೇಧಿಸಿದಂತಾಯಿತು.) ಇನ್ನೊಬ್ಬರ ಆಶ್ರಯ-ಸಹಾಯ-ವನ್ನು ಅಪೇಕ್ಷಿಸುವನು ಈಶ್ವರನು (ಸರ್ವಸ್ವತಂತ್ರನು) ಹೇಗೆ ಆಗುವನು ?

ll೧೬ll ಧರ್ಮಃ ಕ್ವಚಿತ್ತತ್ರ ನ ಭೂತಸೌಹೃದಂ
ತ್ಯಾಗಃ ಕ್ವಚಿತ್ತತ್ರ ನ ಮುಕ್ತಿ ಕಾರಣಂ ।
ವೀರ್ಯಂ ನ ಪುಂಸೋಽಸ್ತ್ಯಜವೇಗನಿಷ್ಕೃತಂ
ನ ಹಿ ದ್ವಿತೀಯೋ ಗುಣಸಂಗವರ್ಜಿತಃ ॥ ೮-೮-೧೯

**ಅರ್ಥ:**- ಒಬ್ಬನಲ್ಲಿ ಧರ್ಮವಿದೆ, ಆದರೆ ಆತನಲ್ಲಿ ಪ್ರಾಣಿಗಳ ಬಗ್ಗೆ ಕರುಣೆಯಿಲ್ಲ. (ಯಮದೇವರು ಧರ್ಮಶಾಸಕರು - ನ್ಯಾಯ ನಿಷ್ಠುರತೆಯಲ್ಲಿ ಅವರಿಗೆ ಕರುಣೆಯಿಲ್ಲ.) ಒಬ್ಬನಲ್ಲಿ ದಾನಬುದ್ಧಿಯಿದೆ. ಆದರೆ ಆತನು ಕೊಡುವ ದಾನವು ಮುಕ್ತಿದಾನವಲ್ಲ. (ಅಪೇಕ್ಷಿತವನ್ನು ಕೊಡದಿರುವ ದಾನವು ದಾತೃವಿಗೆ ದೋಷವಾದುದು. ವಾಮನ ಮೂರ್ತಿಯಾದ ಶ್ರೀಹರಿಯು ಕೇಳಿದ ಮೂರು ಪಾದಗಳಷ್ಟು ಭೂಮಿಯನ್ನು ಕೊಡಲು ಬಲಿರಾಜನಿಗೆ ಶಕ್ಯವಾಗಲಿಲ್ಲ. ಆದುದರಿಂದ ಬಲಿರಾಜನ ಸದೋಷವಾದ ದಾನವು ಮುಕ್ತಿದಾಯಕವಲ್ಲ. ಅದರಂತೆಯೆ ಉಳಿದ ದೈತ್ಯರ ರಾಜರು ಮಾಡಿದ ದಾನವು ಕೂಡ.) ಒಬ್ಬನಲ್ಲಿ ಪ್ರಖರ ತೇಜಸ್ಸಿನ ಇಲ್ಲವೆ ವೇಗದ ಬಲವಿದೆ. ಸೂರ್ಯಚಂದ್ರ ಹಾಗೂ ವಾಯು ಇವರಲ್ಲಿ ತೇಜಸ್ಸು-ಗತಿಯೂ ಇವೆ. ಆದರೆ ಇವರು ಮೂವರು ಕಾಲಚಕ್ರದ ವೇಗಕ್ಕೆ ಅಂಕಿತವಾದವರು ನಿಯಮ್ಯವಾದವು ಇವೆ. ಸೂರ್ಯ ಚಂದ್ರರಿಗೆ ಉದಯಾಸ್ತಗಳ ಬಾಧೆ-ಹಾಗು ವಾಯು ಒಂದರಗಳಿಗೆ ಒಂದೇ ಸ್ಥಳದಲ್ಲಿ ನಿಲ್ಲಲಾರನು.) ಇವೆಲ್ಲ ದೇವತೆಗಳಲ್ಲಿರುವ ಲೋಪದೋಷಗಳು - ಬಹು ಪ್ರಸಿದ್ಧ ಹಾಗೂ ನಿಶ್ಚಿತವಾದವುಗಳೆಂಬದನ್ನು ತೋರಿಸಲು 'ನೂನಂ' (ಖಂಡಿತವಾಗಿ) ಎಂಬ ಪದವನ್ನು ಅವರೆಲ್ಲರಿಗೂ ಅನ್ವಯಿಸಬೇಕು.

॥೨೩೪॥ ಕ್ವಚಿಚ್ಚಿರಾಯುರ್ನ ಚ ಶೀಲಮಂಗಲಂ
ಕ್ವಚಿತ್ತದಪ್ಯಸ್ತಿ ನ ವೇದ್ಯಮಾಯುಷಃ ।
ಯತ್ರೋಭಯಂ ಕುತ್ರ ಚ ಸೋऽಪ್ಯಮಂಗಲಃ
ಸುಮಂಗಲಃ ಕಶ್ಚನ ಕಾಂಕ್ಷತೇ ಹಿ ಮಾಂ ॥ ೮-೮-೨೦

ಇನ್ನೊಬ್ಬನು ದೀರ್ಘಾಯು, ಆದರೆ ಸ್ವಭಾವವು ಸೌಮ್ಯವಾದುದಲ್ಲ. ಇಂಥವನು ಉಗ್ರಸ್ವಭಾವ ಹಾಗೂ ಉಗ್ರದರ್ಶನದ ಶೀಘ್ರಕೋಪಿ. ಉಗ್ರತ್ವವು ಸರ್ಪ ಜಾತಿಯ ಸ್ವಭಾವವೇ ಎಂದು ಹೇಳಬೇಕಾಗಿಲ್ಲ. ಕೆಲವು ಪುರುಷರಲ್ಲಿ ಸೌಂದರ್ಯವೂ ಇರುವುದು. ಆದರೆ ಅವರ ಆಯುಷ್ಯದ ಅವಧಿಯು ಇಂದೋ, ನಾಳೆಯೋ ತಿಳಿಯದು. ಖಂಡಿತವಾಗಿಯೂ ಅವರು ಅಲ್ಪಾಯುಷಿಗಳು. ಇಂಥವರು ರಾಜ ಮಹಾರಾಜರು. (ರೈವತರಾಜನು ಮಗಳಿಗಾಗಿ ಕೆಲವು ವರಗಳನ್ನು ಮನಸ್ಸಿನಲ್ಲಿ ಇಟ್ಟುಕೊಂಡು ಅವರ ಪಾತ್ರತೆಯ ಬಗ್ಗೆ ಬ್ರಹ್ಮದೇವನನ್ನು ವಿಚಾರಿಸಲು ಬ್ರಹ್ಮಲೋಕಕ್ಕೆ ಹೋದನು. ಬ್ರಹ್ಮನ ಕಾಲಗಣನೆಯೆ ಬೇರೆ ಅಲ್ಲವೆ ? ಬ್ರಹ್ಮನನ್ನು ವಿಚಾರಿಸಿಕೊಂಡು ಭೂಲೋಕಕ್ಕೆ ತಿರುಗಿ ಬರುವಷ್ಟರಲ್ಲಿ (ಭೂಲೋಕದ ಕಾಲಮಾನದ ಪ್ರಕಾರ) ಆತನು ಮನಸ್ಸಿನಲ್ಲಿ ಮಾಡಿಕೊಂಡಿದ್ದ ಶ್ರೇಷ್ಠ ರಾಜವರಗಳೆಲ್ಲ ತೀರಿಕೊಂಡು ಎಷ್ಟೋ ಕಾಲವಾಗಿತ್ತು. ರಾಜರ ಅಲ್ಪಾಯುಷ್ಯತ್ವಕ್ಕೆ ಇನ್ನೊಂದು ಉದಾಹರಣೆ ಕೊಡುವರು. – ದೇವಾಸುರರ ಯುದ್ಧಕಾಲಕ್ಕೆ ದೇವತೆಗಳ ಸಹಾಯಕ್ಕೆಂದು ಸ್ವರ್ಗ ಲೋಕಕ್ಕೆ ಹೋದ ಮುಚುಕುಂದ ರಾಜನು, ಬಹುಕಾಲ ಯುದ್ಧಮಾಡಿ ಭೂಲೋಕಕ್ಕೆ ಮರಳುವಷ್ಟರಲ್ಲಿ ಆತನ ರಾಣಿಯರು ಮಕ್ಕಳು ಮಂತ್ರಿ ಮುಂತಾದವರೆಲ್ಲ ಭೂಲೋಕದ ಗಣನೆಯಂತೆ ಮರಣಹೊಂದಿ ಎಷ್ಟೋ ಕಾಲ ಗತಿಸಿತ್ತು. ಆಗ್ಗೆ ದೀರ್ಘಕಾಲ ಯುದ್ಧಮಾಡಿ ದಣಿದ ಮುಚಕುಂದನು ದೇವತೆಗಳಿಂದ ನಿದ್ರೆಯ ವರವನ್ನು ಪಡೆದು ಮಲಗಿಕೊಂಡನೆಂಬ ಕಥೆಯೂ ಪ್ರಸಿದ್ಧವಿದೆ. ಇನ್ನೊಬ್ಬನು ಚಿರಾಯು ಹಾಗೂ ಸುಸ್ವಭಾವಿಯೂ ಆಗಿರುವನು. ಈತನು ಮುನಿ ಶ್ರೇಷ್ಠನಾದ ಮಾರ್ಕಂಡೇಯನು. ಆದರೆ-ಜಟೆ – ಗಡ್ಡಗಳಿಂದ ನೋಡಲು ಮಂಗಳಕರನಾಗಿಲ್ಲ. (ಯಾವ ನ್ಯೂನತೆಯೂ ಇಲ್ಲದೆ) ಅತ್ಯಂತ ಮಂಗಳಕರನಾದವನು ಯಾರೊಬ್ಬರೂ ಇಲ್ಲ. ಇಂದ್ರನೇನೊ ಮಂಗಳಕರನಾಗಿದ್ದಾನೆ. ಆದರೆ ಅವನು ನನ್ನನ್ನು ಅಪೇಕ್ಷಿಸುವನು. ಕಾಮನಾ (ಆಕಾಂಕ್ಷಾ) ರೂಪವಾದ ದೋಷವು ಆತನಲ್ಲಿ ತುಂಬಿದೆ. (ಗೌತಮ ಪತ್ನಿಯಾದ ಅಹಲ್ಯೆಯನ್ನು ಇಂದ್ರನು ಕಪಟವೇಷದಿಂದ ಕಾಮಿಸಿದನೆಂಬುದು ಪ್ರಸಿದ್ಧವಿದೆ.) ಆದುದರಿಂದ ದೇವ-ಮುನಿ-ದೈತ್ಯ-ಹಾಗೂ ರಾಜ ಶ್ರೇಷ್ಠರಲ್ಲಿ

ಎಲ್ಲರೂ ಲೋಪದೋಷಗಳಿಂದ ಯುಕ್ತರಾದವರು. ಯಾರೂ ಸಂಪೂರ್ಣವಾಗಿ ದೋಷರಹಿತರಾಗಿಲ್ಲ. ಆದುದರಿಂದ ಶ್ರೀಹರಿಯನ್ನು ಬಿಟ್ಟರೆ, ಗುಣಸಂಗರಹಿತರು, ದೋಷಗಳ ಕಿಂಚಿತ್ತೂ ಸಂಪರ್ಕವಿಲ್ಲದವರು ಬೇರೆ ಯಾರೂ ಇಲ್ಲವೆಂದು ನಿಶ್ಚಿತವಾಯಿತು.

ದೇವದಾನವ ಮುಂತಾದವರ ದೋಷಗಳನ್ನು ಎತ್ತಿ ತೋರಿಸುವದರಲ್ಲಿ ಏನು ಪ್ರಯೋಜನ ? ಆ ಪ್ರಯೋಜನವನ್ನು ಇಲ್ಲಿ ತೋರಿಸುವರು.-

ಅರ್ಥ:-ಯಾವುದೇ ದೋಷದ ಕಿಂಚಿತ್ತೂ ಸಂಪರ್ಕವಿಲ್ಲದವನೂ, ಎಂದಿಗೂ ಹೆಚ್ಚು ಕಡಿಮೆಯಾಗದ ಸ್ವರೂಪಭೂತವಾದ ಅನಂತ ಕಲ್ಯಾಣಗುಣಪೂರ್ಣನು, ಸರ್ವತೋಪರಿಯಾಗಿ ತನ್ನ ಪಾದವನ್ನು ನಂಬಿದ ಭಕ್ತರಿಗೆ ಹಾಗೂ (ಮುಕ್ತಿ ಸಾಧನಗಳಾದ) ಜ್ಞಾನಭಕ್ತಿ ವೈರಾಗ್ಯಗಳೆಂಬ ಸದ್ಗುಣಗಳಿಗೆ ಆಧಾರಭೂತನಾದವನು, ಇವೆಲ್ಲ ಗುಣಗಳಿಂದ ಯುಕ್ತನಾದ ದೇವತೆಯು ಯಾರೆಂಬುದನ್ನು ಚನ್ನಾಗಿ ವಿಚಾರಿಸಿ ತಿಳಿದುಕೊಂಡು, ಇವೆಲ್ಲ ಮಂಗಳಗುಣಗಳಿಂದ ಯುಕ್ತನಾದವನೇ (ತನಗೆ ಪತಿಯಾಗಿ ಅಪೇಕ್ಷಿಸಲು) ಯೋಗ್ಯನಾದವನೆಂದೂ, ಮತ್ತು (ಆಪ್ತಕಾಮನಾದುದರಿಂದ) ತನ್ನ ಬಗ್ಗೆಯಾಗಲಿ, ಯಾವುದರ ಬಗ್ಗೆಯೂ ಆಗಲಿ) ಆಕಾಂಕ್ಷೆಯೆಂಬ ದೋಷದಿಂದ ರಹಿತನಾದವನೂ, ಇದಲ್ಲದೆ (ಅನಾದಿ ಕಾಲದಿಂದಲೂ) ತನಗೆ ಅಪೇಕ್ಷಿತನಾದವನೂ, ಆಗಿರುವ (ಮೋಕ್ಷಪ್ರದನಾದ) ಮುಕುಂದನನ್ನೇ ಶ್ರೀ ಲಕ್ಷ್ಮೀದೇವಿಯು (ತನ್ನ ಪತಿಯಾಗಿ) ಆಯ್ದುಕೊಂಡಳು, ವರಿಸಿದಳು.

ಶ್ರೀ ಲಕ್ಷ್ಮೀದೇವಿಯವರಿಗೆ ತನ್ನ ಪತಿಯಾಗಬೇಕೆಂಬವನಲ್ಲಿ ಮೂರು ಗುಣಗಳು 'ಈಪ್ಸಿತ' ಅಪೇಕ್ಷಿತವಾದವು, ೧) ಗುಣಪೂರ್ಣತ್ವ, ೨) ನಿರ್ದೋಷತ್ವ, ೩) ತನ್ನ ಭಕ್ತರ ಬಗ್ಗೆ ಅಪಾರವಾದ ಕರುಣೆ. ಉಳಿದೆಲ್ಲರಲ್ಲಿಯೂ ಇಲ್ಲದ (ಸರ್ವೋತ್ತಮತ್ವದ ದ್ಯೋತಕಗಳಾದ) ಈ ಮೂರು ಅದ್ವಿತೀಯ ಗುಣಗಳನ್ನು ಕಮಾದೇವಿಯವರೇ ಶ್ರೀ ಮುಕುಂದನಲ್ಲಿ ಕಂಡುಕೊಂಡರು. 'ಸರ್ವಗುಣೈಃ'-ಎಂಬುದು ಶ್ರೀ ಹರಿಯ ಗುಣಪೂರ್ಣತ್ವಕ್ಕೆ ಸಾಕ್ಷಿಯಾಗಿದೆ. 'ಅವ್ಯಭಿಚಾರಿ ಸದ್ಗುಣಂ' ಹಾಗೂ 'ನಿರಪೇಕ್ಷ' ಎಂಬುದು ನಿರ್ದೋಷತ್ವಕ್ಕೆ ನಿದರ್ಶನವಾಗಿದೆ.

ಕಾಮುಕತ್ವ ಮುಂತಾದ ಯಾವ ದೋಷಗಳೂ ಶ್ರೀ ಹರಿಯಲ್ಲಿ ಕಾಣವು. ದೋಷಗಳಲ್ಲಿ ಕಾಮುಕತ್ವವೇ ಅತಿ ಪ್ರಬಲವಾದುದು, ಅದರಲ್ಲಿಯೆ ಎಲ್ಲ ದೋಷಗಳೂ ಸಮಾವಿಷ್ಟವಾಗುವವು. ಕಾಮುಕತ್ವವೇ ಇಲ್ಲವೆಂದರೆ, ಯಾವ ದೋಷಗಳೂ ಇಲ್ಲವೆಂಬರ್ಥ. ಶ್ರೀ ಹರಿಯನ್ನು 'ಮುಕುಂದ'ನೆಂದು ಕರೆದಿರುವದರಿಂದ

ಮೂರನೆಯ ಗುಣವಾಗಿರುವ 'ಭಕ್ತಾನುಕಂಪಿತ್ವ'ವನ್ನು ಸೂಚಿಸಿದಂತಾಯಿತು. ಮುಕ್ತಿಯನ್ನು ಕೊಡುವದಕ್ಕಿಂತಲೂ ಹೆಚ್ಚಿನ ಕರುಣೆ ಯಾವುದೂ ಇಲ್ಲ. ಮುಕ್ತಿಯೆ ಮಹಾಪುರುಷಾರ್ಥದಾನವು. ಅಪೇಕ್ಷಿತವಾದ ಮುಕ್ತಿಯನ್ನು ಕೊಡದವನ ಉಳಿದ ದಾನಗಳು ನ್ಯೂನವೆನಿಸುವವು.

॥೧೬೬॥ ಸ್ವಸ್ಯಾಃ ಶ್ರಿಯಸ್ತ್ರಿಜಗತೋ ಜನಕೋ ಜನನ್ಯಾ
ವಕ್ಷೋ ನಿವಾಸಮಕರೋತ್ಪರಮಂ ವಿಭೂತೇಃ ।
ಶ್ರೀಃ ಸ್ವಾಃ ಪ್ರಜಾಃ ಸಕರುಣೇನ ನಿರೀಕ್ಷಣೇನ
ಯತ್ರ ಸ್ಥಿತೈಧಯತ ಸಾಧಿಪತೀಂಸ್ತ್ರಿಲೋಕಾನ್ ॥ ೮-೮-೨೫

ದೇವದಾನವರನ್ನೆಲ್ಲ ವಿಮರ್ಶಾಪೂರ್ವಕವಾಗಿ ಬಿಟ್ಟುಕೊಟ್ಟು ಲಕ್ಷ್ಮೀದೇವಿಯು ಶ್ರೀ ಹರಿಯನ್ನೇ ವರಿಸಿದಳು. ಅವಳ ಈ ಆಯ್ಕೆಗೆ ಪ್ರತಿಫಲವಾಗಿ 'ಭಕ್ತಾನುಕಂಪಿತ್ವ' ವೆಂಬ, ನಿಜಭಕ್ತರ ಬಗ್ಗೆ ಅಪಾರ ಕರುಣೆಯೆಂಬ ಶ್ರೀ ಹರಿಯ ಗುಣದ ಅನುಭವವು ಕೂಡಲೆ ಅವಳಿಗೆ ಉಂಟಾಯಿತು. ಎಂಬುದನ್ನು ತೋರಿಸಿರುವರು.

ಅರ್ಥ :– ( ಅನಾದಿಕಾಲದಿಂದಲೂ–ನಿತ್ಯಾವಿಯೋಗಿನಿಯಾಗಿ–ವಿಷ್ಣುಪತ್ನಿಯಾದ ಲಕ್ಷ್ಮೀದೇವಿಯು ಶ್ರೀ ಹರಿಯ ಆಜ್ಞೆಯಂತೆ, ಆತನ ಕಾರ್ಯಕ್ಕಾಗಿ ಕ್ಷೀರ ಸಮುದ್ರದಲ್ಲಿ ಪ್ರಕಟಳಾದವಳು ಅಂತೆಯೆ) 'ಸ್ವಸ್ಯಾಃಶ್ರಿಯಃ' ಅನಾದಿ ಕಾಲದಿಂದಲೂ ತನ್ನ ಪತ್ನಿಯಾದ, ಮೂರು ಲೋಕಗಳ ತಾಯಿಯಾದ, ಅಖಿಲ ಸಂಪತ್ತಿಗೆ ಅಭಿಮಾನಿ ದೇವತೆಯಾದ ಶ್ರೀ ಲಕ್ಷ್ಮೀದೇವಿಗೆ, ( ಮೂರು ಲೋಕಗಳಿಗೆ) ತಂದೆಯಾದ ಶ್ರೀ ಹರಿಯು ತನ್ನ ಹೃದಯದಲ್ಲಿಯೆ ವಾಸಿಸಲು ಸ್ಥಾನವನ್ನು ಕೊಟ್ಟನು. ( ಇದೇ ಭಕ್ತಾನುಕಂಪಿತ್ವವು ) ಶ್ರೀ ಲಕ್ಷ್ಮೀದೇವಿಯು ಶ್ರೀ ಹರಿಯ ವಕ್ಷಸ್ಥಳದಲ್ಲಿ ನೆಲಿಸಿ ತನ್ನ ಮಕ್ಕಳಾದ (ಮೂರು ಲೋಕಗಳ) ಪ್ರಜೆಗಳನ್ನು ಹಾಗೂ ಲೋಕಪಾಲರಿಂದ ಸಹಿತವಾದ ಮೂರು ಲೋಕಗಳನ್ನು (ಶ್ರೀ ಹರಿಯ ವಕ್ಷಸ್ಥಲವೆಂಬ) ತನ್ನ ಸ್ಥಾನ ಬಲದಿಂದ ಶ್ರೀ ಹರಿಯ ಆಜ್ಞೆಯಂತೆ ತನ್ನ ಕರುಣೆಯ ನೋಟದಿಂದಲೆ, ( ಅವರ ಅಪೇಕ್ಷೆಗಳನ್ನು ಒದಗಿಸಿ ) ಅವರಿಗೆ ಉತ್ಕರ್ಷವನ್ನು ತಂದುಕೊಡುವಳು.

ಇದರಿಂದ ಅಪಾರ ಕರುಣೆಯಾದ ಶ್ರೀ ಹರಿಗೆ ಕರುಣಾಶಾಲಿಯಾದ ತಾನು ಯೋಗ್ಯ ಪತ್ನಿಯೆಂಬುದನ್ನು ತೋರಿಸಿಕೊಟ್ಟಳು. ನಿತ್ಯಪತ್ನಿಯಾದ ಲಕ್ಷ್ಮೀದೇವಿ ನೂತನ ವಧುವಾಗಿ ಏಕೆ ವಿಡಂಬನೆ ಮಾಡಿದಳು ? ಎಂಬ ಪ್ರಶ್ನೆಗೂ (ಶ್ರೀಹರಿಯ

ಆಜ್ಞೆಯಂತಿ ಎಂದು ಹೇಳಿ) ಇಲ್ಲಿ ಉತ್ತರ ಕೊಡಲಾಗಿದೆ. ಶ್ರೀ ಲಕ್ಷ್ಮೀದೇವಿಗೂ ಯಥಾ ಯೋಗ್ಯವಾದ ಗುಣಪೂರ್ಣತ್ವವನ್ನು, 'ಶ್ರೀ ಹರಿಯ ವಕ್ಷಸ್ಥಾನ ಬಲ ದಿಂದಲೆ' ಎಂದು ಹೇಳುವದರಿಂದ, ಅಹಂಕಾರ ಸೂಚಿತವಾಗುವ ಎಲ್ಲ ದೋಷ ಗಳಿಂದ ಮುಕ್ತರಾಗಿರುವದನ್ನೂ, ಹಾಗೂ ಮೂರು ಲೋಕಗಳನ್ನು ಅನ್ನಾದಿದಾನ ಗಳಿಂದ ಪೋಷಿಸುವಳು,- ಎಂಬುದರಿಂದ ಅವಳಲ್ಲಿಯೂ ಭಕ್ತಾನುಕಂಪಿತ್ವವು (ಯಥಾಶಕ್ತಿ) ಇರುವದೆಂಬುದನ್ನೂ ಸೂಚಿಸಲಾಗಿದೆ. ಈ ಮೂರು ಗುಣಗಳಿಂದ ಯುಕ್ತಳಾದ ಶ್ರೀ ಲಕ್ಷ್ಮೀದೇವಿಯು ಭಗವಂತನಿಗೆ ಅರ್ಹಳಾದ ಪತ್ನಿಯೆಂಬು ದನ್ನೂ ಹೇಳಿದಂತಾಯಿತು.

ನಾರದರು ಪ್ರಚೇತಸರಿಗೆ

||೧೬೭|| ಶ್ರಿಯಮನುಚರತೀಂ ತದರ್ಥಿನಶ್ಚ
ದ್ವಿಪದಪತೀನ್ ವಿಬುಧಾಂಶ್ಚ ಯಃ ಸ್ವಪೂರ್ಣಃ ।
ನ ಭಜತಿ ನಿಜಭೃತ್ಯವರ್ಗತಂತ್ರಃ
ಕಥಮಮುಮುದ್ವಿಸೃಜೇತ್ಪುಮಾನ್ ಕೃತಜ್ಞಃ ॥ ೪-೩೧-೨೨
-21

ಮೂರು ಲೋಕಗಳ ಒಡೆಯನಾದ ಶ್ರೀ ಹರಿಯು ಜಗನ್ಮಾತೆಗೆ ತನ್ನ ಹೃದಯದಲ್ಲಿ ಸ್ಥಾನ ಕೊಡುವದಕ್ಕೆ ಯಾವುದೂ (ಸ್ವಂತದ) ಪ್ರಯೋಜನವಿಲ್ಲ ವೆಂದು ತಿಳಿಯಬೇಕು. ಆತನು ಪೂರ್ಣಕಾಮನು, ಸ್ವಪ್ರಯೋಜನವೆಂಬುದೇ ಆತನಿಗಿರುವದಿಲ್ಲ. ನಾರದರು ಪ್ರಚೇತರಿಗೆ ಹೇಳಿದ ಮಾತಿದು.-

**ಅರ್ಥ**:- (ಕೋಟಿಕೋಟಿ ಭೃತ್ಯರಿರಲು ಸಾನುರಾಗದಿಂದ) ಶ್ರೀಹರಿಯ ಸೇವೆ ಮಾಡುವ ಶ್ರೀ ಲಕ್ಷ್ಮೀದೇವಿಯಿಂದಾಗಲಿ, ಅವಳಿಂದ ಸಂಪತ್ತನ್ನು ಬಯ ಸುವ ನೃಪತಿ (ದ್ವಿಪದಪತಿ) ಗಳಿಂದಾಗಲಿ, ಅಥವಾ (ವಿಬುಧ) ದೇವತೆಗಳಿಂದಾ ಗಲಿ ಸ್ವಯಂಪೂರ್ಣನಾದ, ಪೂರ್ಣಕಾಮನಾದ ಶ್ರೀಹರಿಯು (ಸ್ವಂತದ ಯಾವ ಪ್ರಯೋಜನಕ್ಕಾಗಿಯೂ ಅವರಿಂದ ಸೇವೆ ತೆಗೆದುಕೊಳ್ಳುವದಿಲ್ಲ. (ಸ್ವರೂಪಭೂತ ವಾದ ಆನಂದದಿಂದ ಪೂರ್ಣನಾಗಿರುವದರಿಂದ ಆತನು 'ಸ್ವಪೂರ್ಣ'ನು. ರಮಾದಿ ದೇವತೆಗಳ ವಿಷಯದಲ್ಲಿಯೆ ಶ್ರೀಹರಿಯು ಹೀಗೆ ವರ್ತಿಸುತ್ತಿದ್ದರೆ, ಸಾಮಾನ್ಯ ಅಲ್ಪ ಭಕ್ತರ ಗತಿ ಏನಿರಬಹುದು? ಎಂಬ ಪ್ರಶ್ನೆಗೆ ಶ್ರೀಹರಿಯ ಪರಮ ದಯಾಳುತ್ವ ವನ್ನು ಹೇಳುವರು). ಶ್ರೀಹರಿಯು ಭಕ್ತಾಧೀನನು. ('ಶ್ರೀಹರಿಯು ಏನು ಭಕ್ತಾ ಧೀನನೋ ..' ಎಂದು ಶ್ರೀ ಜಗನ್ನಾಥದಾಸರು ಸ್ತುತಿಸಿರುವರು). ನಿರ್ವ್ಯಾಜ ಭಕ್ತಿಯನ್ನು ಮಾಡುವ ಭಕ್ತವರ್ಗಕ್ಕೆ ಅತಿ ಸುಲಭವಾಗಿ ಅನುಗ್ರಹ ಮಾಡು ವವನು, ಭಕ್ತಪರಾಧೀನನು. ಶ್ರೀಹರಿಯ ಅನಂತ ಉಪಕಾರವನ್ನು ತಿಳಿದು ಸ್ಮರಿ

ಸುವ ಯಾವ ಮಾನವನೂ ಆತನ ಪಾದಾಶ್ರಯವನ್ನು (ಎಂದಿಗೂ ತ್ಯಜಿಸೇ
ರನು.

॥೧೩೪॥ **ರೂಪಂ ಯತ್ತತ್ಪ್ರಾಹುರವ್ಯಕ್ತಮಾದ್ಯಂ**
**ಬ್ರಹ್ಮಜ್ಯೋತಿರ್ನಿರ್ಗುಣಂ ನಿರ್ವಿಕಾರಂ ।**
**ಸತ್ತಾಮಾತ್ರಂ ನಿರ್ವಿಶೇಷಂ ನಿರೀಹಂ**
**ಸತ್ವಂ ಸಾಕ್ಷಾದ್ವಿಷ್ಣುರಧ್ಯಾತ್ಮದೀಪಂ ॥** ೧೦-೩-೨೪

ದೇವಕೀ ಸ್ತುತಿ
ಕೃಷ್ಣಾವತಾರ
ಸಮಯದಲ್ಲಿ
3-24

ನಿರ್ಗುಣ-ಸಗುಣ ಬ್ರಹ್ಮರೆಂಬ ಪ್ರಸ್ತಾಪ ಹಿಂದೆ ಬಂದಾಗ್ಗೆ, – 'ಸಧ್ಯಕೆ ಅದು ಹಾಗೇ ಇರಲಿ' ಎಂದು ಹೇಳಿದ್ದನ್ನು ಇಲ್ಲಿ ವಿವೇಚಿಸಿರುವರು:– ಮೋಕ್ಷಾಪೇಕ್ಷಿಗಳು 'ನಿರ್ಗುಣ' ಬ್ರಹ್ಮನ ಜಿಜ್ಞಾಸೆಯನ್ನೇ ಮಾಡುವರಲ್ಲವೆ ? ಏಕೆಂದ (ಪ್ರಕೃತಿಯ) ಗುಣಗಳ ಬಂಧನದಿಂದ ಬಿಡುಗಡೆಯಾಗುವುದು ಮೋಕ್ಷವು ಸಗುಣ ಬ್ರಹ್ಮನ ಉಪಾಸನೆಯಿಂದ ಗುಣ ನಿವೃತ್ತಿರೂಪವಾದ ಮೋಕ್ಷವು ದೊ ಕದು. ನಿರ್ಗುಣ ಶಬ್ದಕ್ಕೆ ನೀವು ಹೇಳುವ ಅರ್ಥ ಯಾವುದು ? – ಗುಣಗಳ ಇಲ್ಲವೆಂಬ ಅರ್ಥವೇ ? ಹಾಗಾದರೆ ಯಾವ ಗುಣಗಳೇ ಇಲ್ಲದ ಬ್ರಹ್ಮನ ಜಿಜ್ಞಾಸೆಗೆ (ಜ್ಞಾನಕ್ಕೆ) ಎಂದಿಗೂ ವಿಷಯವಾಗಲಾರನು. ತನ್ನಲ್ಲಿಯೆ ಜ್ಞಾನಾನಂದಾದಿ ಕಲ್ಯಾಣ ಗುಣಗಳಿಲ್ಲದ ಬ್ರಹ್ಮನು, ತನ್ನನ್ನು ಆರಾಧಿಸುವವರಿಗೆ ಅವ ಅಪೇಕ್ಷೆಯಾದ ಪುರುಷಾರ್ಥವನ್ನು ಕೊಡಲಾರನು.–ನಮ್ಮ ಅರ್ಥವು ಹಾಗಲ್ಲ. ಪ್ರಕೃತಿಯ ಸತ್ವಾದಿ ಗುಣಗಳಿಂದ ಬದ್ಧನಾಗದವನು, ಅವುಗಳ ಲೇಪವಿಲ್ಲದವನು. ಎಂದು ನಿಮ್ಮ ಅಭಿಪ್ರಾಯವಿದ್ದರೆ, ಈ ಮಾತನ್ನು ನಾವೂ ಪೂರ್ಣವಾಗಿ ಒಪ್ಪುವೆವು. ಗುಣಗಳ ಬಂಧನವಿಲ್ಲದ ಬ್ರಹ್ಮನು ವಿಷ್ಣುವೆ ಆಗಿರುವನು, ವಿಷ್ಣುವಿನ ಬಗ್ಗೆ ಜಿಜ್ಞಾಸೆಯನ್ನೇ ಮಾಡಬೇಕಾದುದು,

**ಅರ್ಥ :–** (ವೇದ ಪ್ರತಿಪಾದ್ಯನಾದ) ನಿನ್ನ ರೂಪವನ್ನು ಜ್ಞಾನಿಗಳು ಈ ರೀತಿಯಾಗಿ ವರ್ಣಿಸುವರು. ನೀನು 'ಅವ್ಯಕ್ತ'ನಾಗಿರುವೆ. ನಿನ್ನ ಪರಮ ಪ್ರಸಾದವಿಲ್ಲದೆ, ಅನುಗ್ರಹವಾಗದೆ, ಭಕ್ತರಿಗೆ ನೀನು ಪ್ರಕಟವಾಗುವದಿಲ್ಲ. ಈ ಅರ್ಥದಲ್ಲಿಯೆ ನೀನು ಅವ್ಯಕ್ತನು, 'ಅವ್ಯಕ್ತಮ ಚಲಂಶಾಂತಂ' ಎಂಬ ಶ್ರುತಿಗಳು, ನಿನ್ನ ಅನುಗ್ರಹ ಮಾತ್ರದಿಂದಲೆ ನಿನ್ನ ಸಾಕ್ಷಾತ್ಕಾರವೆಂದು ಹೇಳುವವು. ನೀನು 'ಆದ್ಯ'ನು, ಅಂತಿಮ ಪ್ರಳಯ ಕಾಲದಲ್ಲಿ ನೀನು ಒಬ್ಬನೇ ಒಬ್ಬನಾಗಿ ಉಳಿಯುವೆ, ಅಂತೆಯೆ ನೀನು ಆದ್ಯನು. 'ಸದೇವ ಸೌಮ್ಯ–ಇದಮಗ್ರ ಆಸೀತ್' ಎಂಬ ಶ್ರುತಿವಾಕ್ಯವು ಈ ಮಾತನ್ನೇ ದೃಢಪಡಿಸುತ್ತಿದೆ. ನೀನು 'ಬ್ರಹ್ಮ'ನು–

ಎಂದರೆ, ಅಶೇಷ ನಿರವಧಿಕ ಕಲ್ಯಾಣಗುಣಪರಿಪೂರ್ಣ, ಅಶೇಷ ದುಃಖವಿದೂರನು. 'ಯತೋ ವಾ ಇಮಾನಿ ಜಾಯಂತೆ' ಇತ್ಯಾದಿ ಶ್ರುತಿಗಳು ನಿನ್ನ ಗುಣಪೂರ್ಣತ್ವವನ್ನೇ; ದೋಷವಿವರ್ಜಿತ್ವವನ್ನೇ ನಿರೂಪಿಸುತ್ತವೆ. ನೀನು 'ಜ್ಯೋತಿ'ಯಾಗಿರುವೆ, ಎಂದರೆ ಜ್ಞಾನಸ್ವರೂಪನಾಗಿರುವೆ, 'ಪರಂ ಜ್ಯೋತಿ' ಇತ್ಯಾದಿ ಶ್ರುತಿಗಳು ಜ್ಞಾನವೆಂಬ ಅರ್ಥದಲ್ಲಿಯೆ ಜ್ಯೋತಿ ಶಬ್ದವನ್ನು ಉಪಯೋಗಿಸುವವು ನೀನು ನಿರ್ಗುಣನು - ಯಾವ ಗುಣವೂ ಇಲ್ಲದವನು ಎಂಬ ಅರ್ಥವಲ್ಲ. ಎಂದೆಂದಿಗೂ ಪಾಂಚಭೌತಿಕ ಶರೀರವಿಲ್ಲದವನು, ಪ್ರಕೃತಿಯ ಸತ್ವಾದಿ ಗುಣಗಳ ಲೇಪವಿಲ್ಲದವನು ಎಂಬ ಅರ್ಥವಾಗಿದೆ. 'ಕೇವಲೋ ನಿರ್ಗುಣಶ್ಚ ' ಇತ್ಯಾದಿ ಶ್ರುತಿಗಳ ಅಭಿಪ್ರಾಯವು ಇದೇ ಆಗಿದೆ. ನೀನು 'ನಿರ್ವಿಕಾರನು', ಎಂದರೆ ನೀನು 'ಶಶ್ವದೇಕಸ್ವರೂಪನು' ಪರಿಣಾಮಾದಿ ಯಾವ ಸ್ಥಿತ್ಯಂತರಗಳು (ವಿಕಾರಗಳು) ನಿನಗೆ ಒದಗುವದಿಲ್ಲ. 'ನಿರ್ವಿಕಾರಃ ಅಕ್ಷರಃ ಶುದ್ಧಃ..' ಎಂಬ ಶ್ರುತಿಗಳು ಇದೇ ಮಾತನ್ನೇ ಸಾರುತ್ತವೆ. ನೀನು 'ಸತ್ತಾಮಾತ್ರ'ನು, ಎಂದರೆ, ನಿನಗೆ ತುದಿ-ಮೊದಲಿಲ್ಲ, ನಿನಗೆ ಸರಿಮಿಗಿಲಿಲ್ಲ. ನೀನು ಸರ್ವ ದೋಷ ವಿದೂರನಾದವನು, ಜ್ಞಾನಾನಂದಾತ್ಮಕ ಶರೀರ ಉಳ್ಳವನು. ಆದುದರಿಂದ ನಿನಗೆ 'ಸತ್ತಾ' ಇಲ್ಲವೆ 'ಸತ್ತಾಮಾತ್ರ'ನೆಂತಲೂ ಹೇಳುವರು. ಬಲರಾಮನಿಗೆ 'ಬಲ' ಅಥವಾ 'ಬಲಭದ್ರ' ಎಂಬ ಎರಡೂ ಹೆಸರಿನಿಂದ ಕರೆಯುವಂತೆ- ನೀನು 'ನಿರ್ವಿಶೇಷ'ನು ಎಂದರೆ, ನಿನಗೆ ಸಮ ಅಧಿಕರಿಲ್ಲವಾದ್ದರಿಂದ 'ಸರ್ವೋತ್ತಮನು'ಎಂಬರ್ಥ. 'ನಿರ್ವಿಶೇಷೋಽಕ್ಷರಃ' ಎಂಬ ಶ್ರುತಿಗಳು ಈ ಅರ್ಥದಲ್ಲಿಯೇ ನಿನ್ನನ್ನು ಹೊಗಳುವವು. ನೀನು 'ನಿರೀಹ'ನು ಎಂದರೆ ನಿರಪೇಕ್ಷನು; 'ಆಪ್ತಕಾಮಸ್ಯ ಕಾ ಸ್ಪೃಹಾ' ಪೂರ್ಣಕಾಮನಾದ ನಿನಗೆ ಪಡೆಯಬೇಕೆಂಬುವದೇ ಇಲ್ಲ. ನೀನು 'ಅಧ್ಯಾತ್ಮದೀಪ'ನು, ಆತ್ಮ ಎಂದರೆ ಜೀವನಲ್ಲಿ ನೆಲಿಸಿ ಆತನಿಗೆ ನಿನ್ನ ಸ್ವರೂಪವನ್ನೂ ಆತನ ಸ್ವಂತದ ರೂಪವನ್ನೂ ಪ್ರಕಟಗೊಳಿಸುವ, ಸಾಕ್ಷಾತ್ಕಾರವಾಗಿ ಮಾಡಿಸುವ ದೀಪ (ಬೆಳಕು) ಆಗಿರುವೆ. ಜೀವನ (ಆತ್ಮನ) ಅಂಗಾಂಗಳಲ್ಲಿಯೂ ಪೂರ್ಣವಾಗಿ ನೆಲಿಸಿ ಪ್ರಕಾಶಗೊಳಿಸುವವನೂ ಆಗಿರುವೆ. 'ಆತ್ಮಾನಮೇವ ಲೋಕಮುಪಾಸೀತ್', 'ತಸ್ಯಾಃ ಶಿಖಾಯಾಃ ಮಧ್ಯೆ(ತು) ಪರಮಾತ್ಮಾ ವ್ಯವಸ್ಥಿತಃ' ಇತ್ಯಾದಿ ಶ್ರುತಿಗಳಲ್ಲಿ ವಿಶಿಷ್ಟ ಪ್ರವೃತ್ತಿ ಮೂಲಕವಾಗಿ ಆತ್ಮಾದಿ ಎಲ್ಲ ಶಬ್ದಗಳು ವಿಷ್ಣುತತ್ವವನ್ನೇ ಹೇಳುವವು. 'ಏಕಂ ಸದ್ವಿಪ್ರಾ ಬಹುಧಾ ವದಂತಿ', 'ಅಗ್ನಿಂ ಯಮಂ ಮಾತರಿಶ್ವಾನಮಾಹುಃ' ಉದಾಹರಣೆಗಾಗಿ, ಯಮನೆಂದರೆ ನಿಯಾಮಕ, ಮಾತರಿಶ್ವನು ಜ್ಞಾನಿಶ್ರೇಷ್ಠನು ಇತ್ಯಾದಿ ವಿಶಿಷ್ಟ ಪ್ರವೃತ್ತಿಗಳ ನಿಮಿತ್ತದಿಂದ ಬಂದಿರುವ ಎಲ್ಲ ಶಬ್ದಗಳು ನಿನ್ನನ್ನೇ, ವಿಷ್ಣುತತ್ವವನ್ನೇ ಬೋಧಿಸುವವು. ಪ್ರವೃತ್ತಿಗೆ ಅನುಗುಣವಾಗಿ ಭಿನ್ನ ರೂಪ

ಗಳನ್ನು, ಭಿನ್ನ ಹೆಸರುಗಳನ್ನು ನಿನ್ನಿಂದ ಪಡೆದ ದೇವತೆಗಳು ತಮ್ಮ ತಮ್ಮ ಸೇವೆಯನ್ನು ನಿನಗೆ ಸಲ್ಲಿಸುವರು.– 'ತ್ವಂ ಸಾಕ್ಷಾತ್ ಸಃ–(ಎಲ್ಲ ದೇವತೆಗಳಿಗೂ ಅವರವರ ಕಾರ್ಯವನ್ನು ಒಪ್ಪಿಸಿ, ಅವರಿಗೆ ನಿಯಾಮಕನಾಗಿ, ಅಧಿ ದೇವತೆಯಾಗಿ ಇರುವವನೂ ನೀನೇ ಆಗಿರುವಿ. ಇವೆಲ್ಲ ಗುಣ–ಶಕ್ತಿಗಳಿಂದ ಯುಕ್ತನಾಗಿರುವ ವಿಷ್ಣುವೆ ನನಗೆ ( ಈಗ್ಗೆ ) ಸಾಕ್ಷಾತ್ತಾಗಿ – ಪ್ರತ್ಯಕ್ಷವಾಗಿ – ಕಣ್ಣಿಗೆ ಗೋಚರನಾಗಿರುವಿ. – ದೇವತೆಗಳ ಪ್ರಾರ್ಥನೆಯಂತೆ ಭೂಭಾರ ಹರಣಕ್ಕಾಗಿ ನನಗೆ ಮಗನೆಂದು ಅವತರಿಸಿದ ವಿಷ್ಣುವೇ ನೀನಾಗಿರುವಿ. ದೇವಕೀಪುತ್ರ, ವಾಸುದೇವ, –ಎಂಬ (ಲೌಕಿಕ) ಹೆಸರುಗಳಿಂದ ನಿನ್ನನ್ನು ಕರೆಯುತ್ತಿದ್ದರೂ, ನಮ್ಮ ಮೇಲಿನ ಅನುಗ್ರಹಕ್ಕಾಗಿಯೆ ನೀನು ಇಲ್ಲಿ ಅವತರಿಸಿರುವಿ ಎಂದು ದೇವಕೀದೇವಿಯು (ಶಿಶು ರೂಪಿಯಾದ) ಶ್ರೀಕೃಷ್ಣನ ಸ್ತೋತ್ರವನ್ನು ಮಾಡಿರುವಳು.

ಹೀಗೆ ಹೇಳಿರುವರುಃ– " ವದಂತಿ ತತ್ವವಿದಸ್ತತ್ವಂ . ಅಜಸ್ತ್ವಮಸ್ಯಕ್ಷೇಮಾಯ ವಧಾಯಚ " – ಸತ್ಯವನ್ನು ತಿಳಿದವರು ಪರಮತತ್ವಸ್ವರೂಪನಾದ ನಿನಗೆ ಜ್ಞಾನರೂಪನೆಂತಲೂ, (ಅದ್ವಯ) ಸರಿಮಿಗಿಲಿಲ್ಲದವನೆಂತಲೂ ಹೇಳುವರು ಬ್ರಹ್ಮ, ಪರಮಾತ್ಮಾ, ಭಗವಾನ್, ಎಂಬ ಹೆಸರುಗಳಿಂದಲೂ ಕರೆಯುವರು., ಕಾರ್ಯಕಾರಣ ರೂಪಗಳಾಗಿರುವ ಎಲ್ಲ ವಸ್ತುಗಳಿಗೆ ಪರಮಾತ್ಮನೇ ಪ್ರಭು, ಆತನೇ ನಿಯಾಮಕ. ಈ ವಸ್ತುಗಳಲ್ಲಿ ನಿಯಾಮಕನಾಗಿ ನೆಲೆಸಿದ ಶ್ರೀಹರಿಯು ಕಾರ್ಯಕಾರಣನೆಂದು ಕಂಡು ಬಂದರೂ, ಆತನಿಗೆ ಜಡ ಪ್ರಕೃತಿಯ ಲೇಪ-ಬಾಧೆಗಳಿಲ್ಲ. ಜಗತ್ಪ್ರಭುವಾದ ಶ್ರೀಹರಿಯು ವಸುದೇವನ ಮನೆಯಲ್ಲಿ (ದೇವಕಾರ್ಯಕ್ಕಾಗಿ) ಅವತರಿಸಿದನು. ಆತನ ಜನನ ವಸುದೇವನ ಮನೆಯಲ್ಲಿ, ಬೆಳೆದು ದೊಡ್ಡವನಾದುದು ಗೋಕುಲದಲ್ಲಿ, ತನಗೆ ಪ್ರೀತಿ ಪಾತ್ರನಾದ, ಪವಿತ್ರ ಕೀರ್ತಿಯುಳ್ಳ ಯದುರಾಜನ ವಂಶದಲ್ಲಿ. ಜನನ, ಮರಣ ರಹಿತನಾದ ಶ್ರೀಹರಿಯು,– ಮಲಯಪರ್ವತದಲ್ಲಿ ಚಂದನ ಗಿಡವು ಹುಟ್ಟಿ ಬೆಳೆಯುವಂತೆ - ಜನಿಸಿದನೆಂದು ತಿಳಿದವರು ಹೇಳುವರು. ಅಥವಾ- ವಸುದೇವನ ಪತ್ನಿಯಾದ ದೇವಕಿಯ ಪ್ರಾರ್ಥನೆಯನ್ನು ಮನ್ನಿಸಿ ಜಗತ್ತಿನ ಕ್ಷೇಮಕ್ಕಾಗಿ, ದೈತ್ಯರ ಸಂಹಾರಕ್ಕಾಗಿ ಜನನ ರಹಿತನಾದ ಶ್ರೀಹರಿಯು ಭೂಮಿಯ ಮೇಲೆ ಅವತರಿಸಿದನೆಂತಲೂ ಕೆಲವರು ಹೇಳುವರು.–

**॥೧೬॥ ತ್ವತ್ತೋಽಸ್ಯ ಜನ್ಮಸ್ಥಿತಿಸಂಯಮಾನ್ ವಿಭೋ**
**ವದಂತ್ಯನೀಹಾದಗುಣಾದವಿಕ್ರಿಯಾತ್ ।**
**ತ್ವಯೀಶ್ವರೇ ಬ್ರಹ್ಮಣಿ ನೋ ವಿರುಧ್ಯತೇ**
**ತದಾಶ್ರಯತ್ವಾದುಪಚರ್ಯತೇ ಜನೈಃ ॥** ೧೦-೪-೨೦

3-19

ನಿರ್ಗುಣನಾದ ಬ್ರಹ್ಮನು ವಿಷ್ಣುವೆ ಆಗಿರಲಿ; ಮೋಕ್ಷಾಪೇಕ್ಷಿಗಳಿಗೆ ಜಿಜ್ಞಾಸೆಯ ವಸ್ತು ಕೂಡ ಆಗಿರಲಿ. ಆತನು ನಿರ್ಗುಣನಾದರೆ, ವಿಕಾರ (ಸ್ಥಿತ್ಯಂತರ) ರಹಿತನು ಆಗುವನು. ನಿರ್ವಿಕಾರನಾದ (ರೂಪಾಂತರ ಹೊಂದದ) ಬ್ರಹ್ಮನು ಜಗತ್ತಿನ ಉತ್ಪತ್ತಿಗೆ ಹೇಗೆ ಕಾರಣನಾಗುವನು ? (ಆಗಲಾರನು). ಜಗತ್ತಿನ ಸೃಷ್ಟಿ ಲಯಾದಿಗಳಿಗೆ ಕಾರಣನಾಗುವನೆಂದರೆ, ಆತನು ನಿರ್ಗುಣ - ನಿರ್ವಿಕಾರ ನಾಗಲಾರನು. . ಈ ಆಕ್ಷೇಪಕ್ಕೆ ಸಮಾಧಾನವನ್ನು ಹೇಳುವರು:- ಜಗಜ್ಜನ್ಮಾದಿಗಳಿಗೆ ವಿಷ್ಣು ವಿಕಾರಿ ಕಾರಣನಲ್ಲ ಬ್ರಹ್ಮನೇ ಜಗತ್ತಾಗಿ ಪರಿಣಮಿಸುವದಿಲ್ಲ. ಕುಂಬಾರನು ಮಡಿಕೆಯ ನಿರ್ಮಿತಿಗೆ ನಿಮಿತ್ತ, ಮೃತ್ತಿಕೆಯಿಂದ ಭಿನ್ನನಾದ, ಸ್ವತಂತ್ರಕಾರಣನಾಗಿರುವಂತೆ, ಬ್ರಹ್ಮನು (ವಿಷ್ಣು) ಜಗತ್ತಿಗೆ ಸ್ವತಂತ್ರ ನಿಮಿತ್ತ ಕಾರಣನು-' ಇಚ್ಛಾಮಾತ್ರಂ ಜಗತ್‌ಸೃಷ್ಟಿ -ತನ್ನ ಸಂಕಲ್ಪ ಮಾತ್ರದಿಂದ ಸೃಷ್ಟ್ಯಾದಿಗಳನ್ನು ಮಾಡುವನು..ವಿಕಾರಿ ಕಾರಣನೆಂದು ತಿಳಿದರೆ ಅದು ಮತಿ ಭ್ರಾಂತಿಯೆನಿಸುವದು. - ಇದೇ ಅಭಿಪ್ರಾಯವನ್ನೇ ಈ ಶ್ಲೋಕದಲ್ಲಿ ಹೇಳುವರು.

**ಅರ್ಥ:-** (ಆಪ್ತ ಕಾಮನಾದುದರಿಂದ-ಅನೀಹನು) ಸ್ವಂತದ ಯಾವ ಅಪೇಕ್ಷೆಯು ಇಲ್ಲದವನು, (ಸತ್ವಾದಿ ಗುಣಗಳ ಬಂಧನವಿಲ್ಲದ್ದರಿಂದ) ನಿರ್ಗುಣನು, ವೃದ್ಧಿಹ್ರಾಸ ಮುಂತಾದ ಯಾವ ವಿಕಾರ (ಸ್ಥಿತ್ಯಂತರ) ಗಳಿಲ್ಲದವನು, ಆಗಿರುವ ಹೇ ಪ್ರಭುವೆ ! - ಈ ಜಗತ್ತಿನ ಜನನ ಪಾಲನ ಸಂಹಾರಗಳು ನಿನ್ನಿಂದಲೇ ಆಗುವವೆಂದು ಜ್ಞಾನಿಗಳು ಹೇಳುವರು. ಪೂರ್ಣಕಾಮನಾದ ನಿನಗೆ ಈ ಸೃಷ್ಟ್ಯಾದಿ ಕಾರ್ಯಗಳಿಂದ ಪ್ರಯೋಜನವಿಲ್ಲ. ಹೀಗಿದ್ದರೂ ಅದಕ್ಕೆ ವಿರುದ್ಧವಾಗಿ ಸೃಷ್ಟ್ಯಾದಿ ಕಾರ್ಯಗಳನ್ನು ನೀನು ಮಾಡುವಿಯೆಂದು ಜ್ಞಾನಿಗಳು ಹೇಗೆ ಹೇಳುವರು ?

ಎಂಬ ಆಕ್ಷೇಪಕ್ಕೆ ಸಮಾಧಾನವನ್ನು ಹೇಳುವರು. ಈ ಮಾತು ಉಳಿದವರಿಗೆ ಪರಸ್ಪರ ವಿರುದ್ಧವಾಗಿ ಕಾಣುತ್ತಿದ್ದರೂ, ಕರ್ತುಂ ಅಕರ್ತುಂ ಸರ್ವ ಸಮರ್ಥನೂ, ಅನಂತ ಕಲ್ಯಾಣ ಗುಣ ಪರಿಪೂರ್ಣನೂ ಆದ ನಿನ್ನಲ್ಲಿ ಅವು ಒಂದಕ್ಕೊಂದು, ವಿರುದ್ಧವೆಂದು ಅಸಂಗತವೆಂದು ಅನಿಸುವದಿಲ್ಲ. ಷಡ್ಗುಣೈಶ್ವರ್ಯ ಯುಕ್ತನಾದ ನಿನ್ನ ಶಕ್ತಿಯು ಅಸಾಮಾನ್ಯವಾದುದು, ಅಘಟಿತಘಟನಾಪಟುವಾದುದು, ಅಸಾಧ್ಯವಾದುದನ್ನು ಅದು ಸುಲಭವಾಗಿ ಸಾಧಿಸಬಲ್ಲದು, (ಇಲ್ಲಿ ಹೇಳುವಂತೆ) ನಿರ್ಗುಣನೂ, ನಿರ್ವಿಕಾರನೂ ಆದ ನಿನ್ನಿಂದಲೇ (ಪರಮಾತ್ಮನಿಂದಲೆ) ಜಗತ್ತಿನ ಸೃಷ್ಟ್ಯಾದಿಗಳು ಸಂಭವಿಸುವವೆಂಬ ಮಾತನ್ನು ಒಪ್ಪಿಕೊಂಡರೆ ಸಾತ್ವಿಕ, ರಾಜಸ, ಹಾಗೂ ತಾಮಸಗಳೆಂದು ವಿರುದ್ಧ ಧರ್ಮಗಳಾಗಿ ಬಳಸುವ,

ಶಬ್ದಗಳನ್ನು ನಿನ್ನಲ್ಲಿ ಹೇಗೆ ಹೊಂದಿಸಿಕೊಳ್ಳಬೇಕು ? ಎಂದರೆ, ಈ ಭಿನ್ನ ಭಿನ್ನ ಗುಣಗಳಿಗೆ ಭಿನ್ನ ಭಿನ್ನ ಕಾಲಗಳಲ್ಲಿ ನೀನು ಆಶ್ರಯಕೊಡುವದರಿಂದ, ಆಯಾ ಕಾಲದಲ್ಲಿ ನೀನು ಆಶ್ರಯಿಸುವ ಗುಣದಿಂದ, ಸಾತ್ವಿಕ, ರಾಜಸ, ತಾಮಸವೆಂಬ ತಾತ್ಕಾಲಿಕ ಗುಣದ ಹೆಸರಿನಿಂದ ನಿನ್ನನ್ನು ಕರೆಯುವರು.

||೧೭೦|| **ನ ಯಸ್ಯ ವಧ್ಯೋ ನ ಚ ರಕ್ಷಣೀಯೋ** ಬ್ರಹ್ಮ
**ನೋಪೇಕ್ಷಣೀಯಾದರಣೀಯ ಪಕ್ಷಃ ।** ದೇವತೆಗಳು
**ಅಥಾಪಿ ಸರ್ಗಸ್ಥಿತಿಸಂಯಮಾರ್ಥಂ**
**ಧತ್ತೇ ರಜಃ ಸತ್ತ್ವತಮಾಂಸಿ ಕಾಲೇ ||** ೮-೫-೨೨

ಸಾತ್ವಿಕಾದಿ ಭಿನ್ನ ಗುಣಧರ್ಮಗಳನ್ನು (ಒಬ್ಬನೇ ಆದ) ಪರಮಾತ್ಮನಿಗೆ ಯಾವುದೋ ಒಂದು ವಿಚಾರಸರಣಿಯಿಂದ ಹೇಗಾದರೂ ಹೊಂದಿಸಬಹುದು. ಆದರೆ, ಸತ್ವಾದಿ ಗುಣಗಳ ಸಂಪರ್ಕ ಬಂಧನಗಳಿಲ್ಲದೆ, ಜಗತ್ತಿನ ಸೃಷ್ಟಿ-ಪಾಲನ ಮುಂತಾದ ಕಾರ್ಯಗಳನ್ನು ಅವನು ಹೇಗೆ ಮಾಡಬಲ್ಲನು ? ಒಬ್ಬನನ್ನು ಕೊಲ್ಲಬೇಕು, ಮತ್ತೊಬ್ಬನನ್ನು ಉಳಿಸಬೇಕು, ಇನ್ನೊಬ್ಬನನ್ನು ಸೃಷ್ಟಿಸಬೇಕು.

ಹೀಗೆ ಜೀವಿಗಳಲ್ಲಿ ಒಂದು ಗುಂಪನ್ನು ಆಯ್ದುಕೊಳ್ಳಬೇಕಾಗುವದು. ಸದ್ಯ ಸಂಹರಿಸಲು ಪಕ್ವಕಾಲವಲ್ಲವೆಂದು ಇನ್ನೊಂದು ಗುಂಪನ್ನು ಕಡೆಗಣಿಸಬೇಕಾಗ ವದು. ಇವೆಲ್ಲ ಕಾರ್ಯಗಳು ಸತ್ವಾದಿ ಪ್ರಕೃತಿ ಗುಣಗಳಿಂದಲೆ ನಡೆಯುವವು. ಈ ಆಕ್ಷೇಪಕ್ಕೆ ಉತ್ತರವನ್ನು ಹೇಳುವರು. ಪರಮಾತ್ಮನಿಗೆ ಸ್ವಂತ ಪ್ರಯೋಜನಕ್ಕಾಗಿ ಯಾರನ್ನೂ ಕೊಲ್ಲಬೇಕಿಲ್ಲ, ಯಾರನ್ನೂ ಉಳಿಸಬೇಕಿಲ್ಲ, ಯಾರನ್ನೂ ಸೃಜಿಸಬೇಕಿಲ್ಲ, ಯಾರನ್ನೂ ಮನ್ನಿಸಬೇಕಿಲ್ಲ, ಯಾರನ್ನೂ ಕಡೆಗಣಿಸಬೇಕಿಲ್ಲ. ಹೀಗಿದ್ದರೂ ವಿಶ್ವದ ಸೃಷ್ಟ್ಯಾದಿ ಕಾರ್ಯಗಳಿಗಾಗಿ, ಆಯಾ ಕಾಲಗಳಲ್ಲಿ ಸತ್ವಾದಿ ಗುಣಗಳನ್ನು ಎತ್ತಿಕೊಂಬುವನು. ಹೀಗೆ ಮಾಡದಿದ್ದರೆ, ಜಗತ್ತಿನ ಸೃಷ್ಟ್ಯಾದಿ ಕಾರ್ಯಗಳೇ, ನಡೆಯಲಾರವು. ಹೀಗಿದ್ದರೆ ಆತನಿಗೆ ಗುಣಬಂಧವು ಉಂಟಾಗುವದಿಲ್ಲವೆ ? ಎಂದರೆ ಸ್ಥಿತ್ಯಾದಿಗಳಿಗೆ ಪಕ್ವಕಾಲವು ಒದಗಿದಾಗ್ಗೆ, ಪರಮಾತ್ಮನು ಕಾಲೋಚಿತವಾದ ಸತ್ವಾದಿ ಗುಣಗಳನ್ನು ಎತ್ತಿಕೊಳ್ಳುವನು. ಒಟ್ಟಿನಲ್ಲಿ ಹೇಳುವದೆಂದರೆ, ಪರಮಾತ್ಮನು ಸತ್ವಾದಿ ಗುಣಗಳನ್ನು ತಾನಾಗಿಯೇ ಎತ್ತಿಕೊಳ್ಳುವನಲ್ಲದೆ, ಆತನಿಗೆ ಆ ಗುಣಗಳ ಲೇಪವಿಲ್ಲ, ಬಂಧನವಿಲ್ಲ. ಒಂದೊಂದು ಗುಣದಿಂದ ಭಗವಂತನು ಸೃಷ್ಟ್ಯಾದಿಗಳ ಒಂದೊಂದು ಕಾರ್ಯವನ್ನು ಮಾಡುವನೆಂಬ ಅಭಿಸಂಧಿಯು (ಅಭಿಪ್ರಾಯವು) ನಿತ್ಯವಾದುದು. ಆದರೆ ಭಗವಂತನಿಗೆ ಸತ್ವಾದಿ

ಗುಣಗಳು ಬಂಧಕವಾಗಿದ್ದರೆ, ಅವುಗಳ ಕಾರ್ಯಗಳಾದ ಸೃಷ್ಟ್ಯಾದಿಗಳು ಅಖಂ ವಾಗಿ ನಡೆಯಬೇಕಾದೀತು. ಸಮುಚಿತ ಕಾಲದಲ್ಲಿಯೆ ಸೃಷ್ಟ್ಯಾದಿಗಳನ್ನು ಮಾಡ ವದು, ನಿತ್ಯಸ್ವರೂಪನಾದ, ಸ್ವತಂತ್ರನಾದ ಪರಮಾತ್ಮನ ಉದ್ದೇಶವಿರುವದರಿಂ ಆಯಾ ಕಾಲದಲ್ಲಿಯೆ ಸತ್ವಾದಿ ಗುಣಗಳನ್ನು ಸ್ವೀಕರಿಸುವನು, ಅವುಗಳನ್ನು ಪ್ರಕಟಗೊಳಿಸುವನು.

||೧೭೧|| **ಅಯಂ ತು ತಸ್ಯ ಸ್ಥಿತಿಪಾಲನಕ್ಷಣಃ**
**ಸತ್ವಂ ಜುಷಾಣಸ್ಯ ಭವಾಯ ದೇಹಿನಾಂ |**
**ತಸ್ಮಾದ್ವ್ರಜಾಮಃ ಶರಣಂ ಜಗದ್ಗುರುಂ**
**ಸ್ವಾನಾಂ ಸ ನೋ ಧಾಸ್ಯತಿ ಶಂ ಸುರಪ್ರಿಯಃ ||** ೮-೫-೨೩

ಸತ್ವಾದಿ (ಪ್ರಕೃತಿಯ) ಗುಣಗಳ ಬಂಧನರಹಿತನಾದ್ದರಿಂದ, 'ನಿರ್ಗುಣ ನೆಂದು ವಾಚ್ಯನಾದವನು, ತನಗೆ ಸ್ವಂತದ ಪ್ರಯೋಜನವು ಎಳ್ಳಷ್ಟು ಇಲ್ಲ ದ್ದರೂ, ಪರಹಿತವನ್ನೇ ತನ್ನದೇ ಕಾರ್ಯವೆಂದು ಭಾವಿಸುವವನು, ಹಾಗ ಭಕ್ತರಿಗೆ ಕರುಣಾಮಯನೂ ಆಗಿರುವ ಶ್ರೀ ಹರಿಯು ಸತ್ವಾದಿ ಗುಣಗಳ ಚಾಲನೆಯನ್ನು ಕೊಡುವದರಿಂದ ಸಾತ್ವಿಕ ಮುಂತಾದ ಗುಣವಾಚಕ ಪದಗಳಿಂ ಕರೆಯಲ್ಪಡುವವನು ಆಗಿರುವನು, (ತ್ರಿವಿಧ ಜೀವರಿಗೆ ತ್ರಿವಿಧ ಗತಿಯನ್ನು ಕೊ ವದಕ್ಕಾಗಿ) (ಯೋಗ್ಯರಾದ) ಭಕ್ತರಿಗೆ ಮುಕ್ತಿಯನ್ನು ಕೊಡುವದದಕ್ಕಾ ಸೃಷ್ಟ್ಯಾದಿ ಕಾರ್ಯಗಳನ್ನು ಆತನು ಮಾಡುವನು. ಆದುದರಿಂದ ಮೋಕ್ಷಾಪೇ ಗಳು ಶ್ರೀ ಹರಿಗೇಗೆ ಶರಣು ಹೋಗಬೇಕೇ. ಈ ಮಾತು ಪ್ರಸಿದ್ಧವೆಂಬುದನ ಕೊನೆಯದಾಗಿ ಹೇಳುವರು-

**ಅರ್ಥ:**- (ಹಿಂದಿನ ಶ್ಲೋಕಗಳಲ್ಲಿ) 'ಸ್ಥಿತಿ'ಯೆಂಬ ಶಬ್ದಕ್ಕೆ ಸತ್ತಾ ಇರುವಿ ಯೆಂಬ ಅರ್ಥವಿದೆ, ಎಂಬ ಭ್ರಾಂತಿಯನ್ನು ನಿವಾರಿಸಲು, ಪಾಲನೆ-ರಕ್ಷಣೆಗೇ 'ಸ್ಥಿತಿ'-ಎಂಬುದು ಆದೇ ಅರ್ಥದ ಇನ್ನೊಂದು ಶಬ್ದವಾಗಿದೆ- ತನ್ನಿಂದಲೇ ಸೃ ವಾದ ಜಗತ್ತು ಅದಕ್ಕೆ ನಿಯುತವಾಗಿರುವ ಅವಧಿಯು (ಕಾಲವು) ಮುಗಿಯು ವರೆಗೆ, ಅದನ್ನು ಸದ್ಯ (ಈಗ) ರಕ್ಷಿಸಬೇಕಾದ ಸಮಯವಾಗಿದೆ. ಯೋಗ್ಯರಾ ಜೀವಿಗಳ ಕ್ಷೇಮಕ್ಕಾಗಿ, ಕಲ್ಯಾಣಕ್ಕಾಗಿ ಶ್ರೀ ಹರಿಯು ಸತ್ವಗುಣಕ್ಕೆ ಪುರಸ್ಕಾ ವನ್ನು ಕೊಟ್ಟಿರುವನು. ಆದುದರಿಂದ ಜಗತ್ತಿಗೆ ಜ್ಞಾನದಾಯಕನಾದ ಶ್ರೀಹ ನಾವು ಶರಣು ಹೋಗೋಣ. ತನ್ನ ಭಕ್ತರೂ, ಸತ್ವಗುಣೋಪೇತರು ಆದ ದೇವ ಗಳ ಬಗ್ಗೆ ಅಧಿಕ ಮಮತೆಯುಳ್ಳ ಶ್ರೀ ಹರಿಯು ನಮಗೆ ಸುಖವನ್ನು ಕೊಡುವನ ಇದು ಬ್ರಹ್ಮದೇವರ ಮಾತು.

ಈ ವಿವೇಚನೆಯಿಂದ ಭಗವಂತನ ಚರಿತ್ರೆಯ ಶ್ರವಣ, ಹಾಗೂ ಆತನ ಮಹಿಮೆಯನ್ನು ನಿರೂಪಿಸುವ ಕೀರ್ತನೆ ಎಂಬ ಎರಡು ಭಾಗವತ ಧರ್ಮಗಳನ್ನು ಎತ್ತಿ ತೋರಿಸಲಾಗಿದೆ.

ಬ್ರಹ್ಮೋಪದೇಶ ಪ್ರಕರಣ ಮುಗಿಯಿತು.

ಅಶೇಷಗುಣಪೂರ್ಣತ್ವಂ ಸರ್ವದೋಷಸಮುಜ್ಝಿತಿಃ |
ವಿಷ್ಣೋಽನ್ಯಚ್ಚ ತತ್ತಂತ್ರಮಿತಿ ಸಮ್ಯಗ್ವಿನಿರ್ಣಯಃ ||
ನಿರ್ದೋಷತ್ವಂ ರಮಾಯಾಶ್ಚ ತದನಂತರತಾ ತಥಾ |
ಸತ್ಸಿದ್ಧಾಂತ ಇತಿ ಜ್ಞೇಯೋ ನಿರ್ಣೀತೋ ಹರಿಣಾ ಸ್ವಯಂ ||

ಅನುವ್ಯಾಖ್ಯಾನ ತೃ. ಅ. ತೃ.. ಪಾ.

ಪರಮಾತ್ಮನು ನಿಖಿಲಕಲ್ಯಾಣ ಗುಣಪೂರ್ಣನು, ಅಶೇಷದೋಷವಿದೂರನು. ಪರಮಾತ್ಮನ ವ್ಯತಿರಿಕ್ತವಾದುದೆಲ್ಲ ಆತನಿಗೆ ಸಂಪೂರ್ಣವಾಗಿ ಅಧೀನವಾದುದು. ಈ ಸಂಗತಿಯು ಸಂಪೂರ್ಣ ವಿಮರ್ಶೆಯಿಂದ (ಶಾಸ್ತ್ರಗಳಲ್ಲಿ) ಮಾಡಿದ ಸತ್ ಸಿದ್ಧಾಂತ ದಾಗಿದೆ.

ಶ್ರೀ ಮಧ್ವಾನಂದ ತೀರ್ಥರ ಈ ಸತ್ ಸಿದ್ಧಾಂತವೆ ಈ ಪ್ರಕರಣದಲ್ಲಿ ವಿಶದ ವಾಗಿ ನಿರೂಪಿಸಲ್ಪಟ್ಟಿದೆ.

—



# ೧೨ ಪ್ರವೃತ್ತಕರ್ಮತ್ಯಾಗ ಪ್ರಕರಣ

॥೧೨॥ ಕ್ಷುತ್ತೃಟ್ತ್ರಿಧಾತುಭಿರಿಮಾ ಮುಹುರರ್ದ್ಯಮಾನಾಃ
ಶೀತೋಷ್ಣವಾತವರ್ಷೈರಿತರೇತರಾಚ್ಚ ।
ಕಾಮಾಗ್ನಿನಾಽಚ್ಯುತ ರುಷಾ ಚ ಸುದುರ್ಭರೇಣ
ಸಂಪಶ್ಯತೋ ಮನ ಉರುಕ್ರಮ ಸೀದತೇ ಮೇ ॥ ३-೧೧-೩ ೯

ಸಂಸಾರದಲ್ಲಿ ಯತ್‌ಕಿಂಚಿತ್ ಹೇಯ ಬುದ್ಧಿ ಉಂಟಾಗಿರಲು, ತತ್ವವೇತ್ತರಾದ ಸಜ್ಜನರ ಸಮಾಗಮವು (ಸಹವಾಸವು) ಸುದೈವದಿಂದ ಪ್ರಾಪ್ತವಾಗಿರಲು, ಸಜ್ಜನರ ಪಾದಧೂಳಿಯನ್ನು ತಲೆಯಮೇಲಿಟ್ಟುಕೊಂಡು ಅವರ ಸೇವೆಮಾಡಿ, ಸ್ವಲ್ಪಾದರೂ ಅವರ ಕರುಣೆಗೆ ಪಾತ್ರರಾಗಿರಲು, ಮಹಾತ್ಮರ (ಸ್ವೋತ್ತಮರ) ನಿಂದೆಯನ್ನು ಬಿಟ್ಟುಕೊಟ್ಟಿರಲು, ಇಂದ್ರಿಯಗಳನ್ನು ಅಂಕಿತದಲ್ಲಿ ಇಟ್ಟುಕೊಂಡಿರಲು ಈ ಬಗೆಯ ಮೋಕ್ಷಾಪೇಕ್ಷಿಗಳು ಬ್ರಹ್ಮಜಿಜ್ಞಾಸೆ ಮಾಡಬೇಕು. (ಬ್ರಹ್ಮನನ್ನು ಕುರಿತು ವಿಚಾರಿಸಬೇಕು) ಎಂದು ಹೇಳಿದ್ದಾಯಿತು. ಈಗ್ಗೆ ಹೇಳುವದೇನೆಂದರೆ, (ಯೋಗ್ಯ) ಗುರುವಿನಿಂದ ಅನುಗ್ರಹಪೂರ್ವಕವಾಗಿ ಉಪದೇಶಪಡೆದು, ಐಹಿಕ (ಸಂಸಾರಿಕ) ಸುಖವನ್ನು ದೊರಕಿಸಲು ಪ್ರವೃತ್ತ ಕರ್ಮಗಳಲ್ಲಿ ತೊಡಗಬಾರದು. ಪ್ರತಿಯಾಗಿ ಗುರು ತಮಗೆ ಹೇಳಿಕೊಟ್ಟ ರೀತಿಯಲ್ಲಿ ಶ್ರೀ ಹರಿಯ ಉಪಾಸನೆಯ ಕಾರ್ಯದಲ್ಲಿಯೆ ನಿರತರಾಗಬೇಕು. ಇದನ್ನು ಹೇಳುವಾಗ್ಗೆ ಮಧ್ಯದಲ್ಲಿಯೆ, ಶ್ರೀ ಹರಿಯ ಉಪಾಸನೆಗೆ ಸಹಾಯಕವಾದ ಒಂದು ಮಾತನ್ನು ಮೊದಲು ಹೇಳಿಕೊಡುವರು. ಅದೆಂದರೆ– ಪರರ ದುಃಖದಿಂದ ನೊಂದುಕೊಳ್ಳುವ ಗುರುಗಳ ಕರುಣಾಳುತ್ವವನ್ನು ಇಲ್ಲಿ ತೋರಿಸಿಕೊಡುವರು.

ಬ್ರಹ್ಮದೇವರು ಪರಮಾತ್ಮನಿಗೆ ನಿವೇದಿಸಿದ್ದನ್ನು ಮೈತ್ರೇಯರು ಭಕ್ತಶಿರೋಮಣಿಯಾದ ವಿದುರನಿಗೆ ಹೇಳುವರು.

**ಅರ್ಥಃ**– ಹೇ ಅಚ್ಯುತಾ :- ಹಸಿವೆ, ನೀರಡಿಕೆ, ವಾತ - ಪಿತ್ತ - ಕಫ, ರೋಗಜನಕವಾದ ಈ ತ್ರಿಧಾತುಗಳಿಂದ, ಅದರಂತೆಯೆ, ಚಳಿಬಿಸಿಲು, ಮಳೆಗಾಳಿಗಳಿಂದ, ಪರಸ್ಪರ ಅಸೂಯೆ-ಮಾತ್ಸರ್ಯ ಮುಂತಾದ ದ್ವಂದ್ವಗಳ ಬಾಧೆಯಿಂದ, ತಾಳಲಾರದ ಕಾಮವೆಂಬ ಕಿಚ್ಚಿನಿಂದ, ತಡೆಯಲಾರದೆ ತುಂಬಿದ ಕೋಪದಿಂದ ಇವರು (ಈ ಲೋಕದ ಜನರು) ಇವುಗಳ ಪೀಡೆಗೆ ಒಳಗಾಗುವದನ್ನು ಕಂಡಾಗ್ಗೆ ನನ್ನ (ಬ್ರಹ್ಮದೇವರ) ಮನಸ್ಸು ತುಂಬಾ ನೊಂದುಕೊಳ್ಳುತ್ತದೆ.

ಅನ್ಯರ ಕಷ್ಟಗಳಿಗಾಗಿ ತಾವು ಮರುಗುವದು, ಇದೇ ಸಾಧುಗಳ, ಭಗವ ದ್ಭಕ್ತರ ಸ್ವಭಾವವಾಗಿದೆ – ಇದನ್ನೇ ನಾವು ಹೇಳುವದು.

॥೧೩॥ ನೈವೋದ್ವಿಜೇ ಪರದುರತ್ಯಯ ವೈತರಣ್ಯಾಸ್ತ್ವ- *ಪ್ರಹ್ಲಾದರು*
ದ್ವೀರ್ಯಗಾಯನಮಹಾಮೃತಮಗ್ನಚಿತ್ತಃ ।
ಶೋಚೇ ತತೋ ವಿಮುಖಚೇತಸ ಇಂದ್ರಿಯಾರ್ಥ
ಮಾಯಾಸುಖಾಯ ಭರಮುದ್ವಹತೋ ವಿಮೂಢಾನ್
೭-೯-೪೩

ಶ್ರೀ ನೃಸಿಂಹ ಸನ್ನಿಧಿಯಲ್ಲಿ ಪ್ರಹ್ಲಾದರ ಮಾತಿದು –

ಬ್ರಹ್ಮದೇವರು ಸಾಧುಗಳ ಕಾರುಣಿಕತ್ವವನ್ನು ವರ್ಣಿಸಿದಂತೆ, ಬ್ರಹ್ಮದೇವ ರಲ್ಲಿ ಈ ದಯಾಲು ಸ್ವಭಾವವು ಇದ್ದೀತು, ಆದರೆ ಎಲ್ಲ ಸಾಧುಗಳೂ ಬ್ರಹ್ಮನಷ್ಟೇ ದಯಾಳು ಸ್ವಭಾವದವರೆಂದು ಹೇಳಲಾದೀತೆ ? ಎಂದರೆ, ಈ ಆಕ್ಷೇಪವು ಸರಿ ಯಾದುದಲ್ಲ. ಏಕೆಂದರೆ, ಉಳಿದ ಸಜ್ಜನರೆಲ್ಲರಲ್ಲಿಯೂ ಈ ದಯಾಲುತ್ವವು ಕಂಡುಬರುವದು. ಇಲ್ಲವಾದರೆ, ಸಾಧುಗಳ ಬಗ್ಗೆ ಬ್ರಹ್ಮನು ಹೇಳಿದ ಮಾತು ಎಲ್ಲ ಸಾಧುಗಳಿಗೂ ಅನ್ವಯಿಸುವದಿಲ್ಲವೆಂಬ ದೋಷವು ಉಂಟಾಗುವದು. ಈ ಅಭಿಪ್ರಾಯವನ್ನು ಮನಸ್ಸಿನಲ್ಲಿಟ್ಟುಕೊಂಡು, ಸಕಲ ಸಜ್ಜನರಲ್ಲಿ ಶ್ರೇಷ್ಠರಾದ ಪ್ರಹ್ಲಾದರ ವಚನವನ್ನು ಇಲ್ಲಿ ಹೇಳುವರು.

ಅರ್ಥ :- (ಹೇ ಲಕ್ಷ್ಮೀನೃಸಿಂಹಾ !) ನಿನ್ನ ಚರಿತ್ರೆಯ (ಅದ್ಭುತ ಲೀಲೆ ಗಳ) ಸಂಕೀರ್ತನ ( ಗಾಯನ ) ವೆಂಬ ಅಮೃತವನ್ನು ಕುಡಿದು-ಕುಡಿದು ನನ್ನ ಮನಸ್ಸು ಅತ್ಯಂತ ಸಂತೋಷವನ್ನು ಪಡೆದಿದೆ. ಆದುದರಿಂದ (ಈ ಸಂತೋಷದ ಉನ್ಮಾದದಲ್ಲಿ) ದಾಟಲೂ ದುರ್ಗಮವಾದ, ಈ ಸಂಸಾರರೂಪವಾದ ವೈತರಣೀ ನದಿಯ ಬಗ್ಗೆಯೂ ನನಗೆ ಕಿಂಚಿತ್ತೂ ಭಯವಿಲ್ಲ ಅದನ್ನು ಹೇಗೆ ದಾಟಬೇಕೆಂಬ ಚಿಂತೆಯೆ ಇಲ್ಲ. ಆದರೆ ತಮ್ಮ ಮನಸ್ಸನ್ನು ನಿನ್ನ ಪಾದಗಳಲ್ಲಿ ನಿಲ್ಲಿಸದೆ, ಇಂದ್ರಿ ಯಗಳಿಂದ ಪಡೆಯುವ ಕ್ಷಣಿಕ, ಅಲ್ಪ ಹಾಗೂ ಭ್ರಾಂತಿರೂಪವಾದ ಸುಖದ ಬೆನ್ನುಹತ್ತಿ (ಕತ್ತೆಯಂತೆ) ಸಂಸಾರದ ಭಾರವನ್ನು ಹೊರುವ ಅಂತೆಯೆ ಮೂರ್ಖ ರಾದ ಜನರನ್ನು ನೋಡುವಾಗ್ಗೆ ಮಾತ್ರ ನನ್ನ ಮನಸ್ಸು ಉದ್ವಿಗ್ನವಾಗುತ್ತದೆ. ಇದರಿಂದ ದಯಾಲುತ್ವವೆಂಬ ಭಾಗವತ ಧರ್ಮವನ್ನು ಹೇಳಿದಂತಾಯಿತು.

ನಾರದರು
ವ್ಯಾಸರಿಗೆ

||೧೬|| ಜುಗುಪ್ಸಿತಂ ಧರ್ಮಕೃತೇಽನುಶಾಸನಂ
ಸ್ವಭಾವರಕ್ತಸ್ಯ ಮಹಾನ್ವ್ಯತಿಕ್ರಮಃ ।
ಯದ್ವಾಕ್ಯತೋ ಧರ್ಮ ಇತೀತರಃ ಸ್ಥಿತೋ
ನ ಮನ್ಯತೇ ತಸ್ಯ ನಿವಾರಣಂ ಜನಃ ॥ ೧-೫-೧೫

ನಾರದರು ಶ್ರೀ ವೇದವ್ಯಾಸರಿಗೆ ಹೇಳಿದ ಮಾತಿದು.-

ಕರ್ಮವು ಎರಡು ಬಗೆಯಾಗಿದೆ, ನಿವೃತ್ತ ಹಾಗೂ ಪ್ರವೃತ್ತವೆಂದು ಪ್ರವೃತ್ತಕರ್ಮದಲ್ಲಿ ನಿರತರಾಗಕೂಡದು. ಏಕೆಂದರೆ ಅದರಿಂದ ಒದಗುವ ಫಲ ಕ್ಷಣಿಕವಾಗಿದೆ ಅಲ್ಪವಾಗಿದೆ, (ಕೊನೆಗೆ) ದುಃಖದಾಯಕವಾಗಿದೆ. ಆದರೆ ನಿವೃತ್ತ ಕರ್ಮದಲ್ಲಿ ತೊಡಗಬೇಕು. ಏಕೆಂದರೆ ಅದರಿಂದ ಪಡೆಯುವ ಫಲವು ನಾಶರಹಿ ವಾಗಿದೆ. (ಕೊನೆಗೆ) ದುಃಖದಾಯಕವಾದುದಲ್ಲ. -ಕಾರುಣಿಕರಾದ ಗುರುಗಳ ಇದೇ ಉಪದೇಶವನ್ನು ಮಾಡಬೇಕು. ಈ ಅಭಿಪ್ರಾಯದಿಂದ ಪ್ರವೃತ್ತ ಕರ್ಮ ಉಪದೇಶ ಮಾಡುವದನ್ನು ಇಲ್ಲಿ ದೂಷಿಸುವರು. (ಹಳಿಯುವರು).

**ಅರ್ಥ:-** ಸ್ವಾಭಾವಿಕವಾಗಿಯೆ ಪ್ರವೃತ್ತ ಧರ್ಮದಲ್ಲಿ ಆಸಕ್ತಿಯುಳ್ಳ ಜ ರಿಗೆ (ಮತ್ತೆ) ಪ್ರವೃತ್ತ ಧರ್ಮದಲ್ಲಿ ತೊಡಗಲು ಉಪದೇಶ ಮಾಡುವದು ನಿಂ ವಾಗಿದೆ. ನಿಂದ್ಯ ಮಾತ್ರವಲ್ಲ, ಹೀಗೆ ಮಾಡುವದು ದೊಡ್ಡ ಅನ್ಯಾಯವೂ, ಅ ರಾಧವೂ ಆಗಿದೆ. (ಹೀಗೆ ಉಪದೇಶ ಮಾಡುವದೆಂದರೆ-ಗಿಡದಿಂದ ಕೆಳಗೆ ಬಿದ್ದ ನಿಗೇ, ಮತ್ತೆ ಬಡಿಗೆಯಿಂದ ಹೊಡೆದಂತೆ, ಅವನು ಪುನಃ ಮೇಲಕ್ಕೆ ಏಳದ ಹಾ ಮಾಡಿದಂತಾಗುವದು). ಪ್ರವೃತ್ತ ಧರ್ಮದ ಉಪದೇಶಕನ ಮಾತನ್ನು ಕೇ (ಪ್ರವೃತ್ತಧರ್ಮವೆ) ಅದೇ ಸರಿಯಾದ ಧರ್ಮವೆಂದು ಆತನ ಮಾತನ್ನು ನಂ ಬಿಡುವರು. 'ಇತರ;ಸ್ಥಿತಃ'-ಎಂಬಲ್ಲಿ 'ಇತರ ಸ್ಥಿತಃ'- ಎಂಬ ಪಾಠವನ್ನು ತಗೆ ಕೊಂಡರೆ, - ಯಾರ ವಾಕ್ಯವನ್ನು ಕೇಳಿ ಪ್ರವೃತ್ತ ಧರ್ಮವೆ ಧರ್ಮವೆಂದು ನಿ ಯಿಸಿ - ಧರ್ಮವಾಗಿರದ್ದನ್ನೇ ನಿಜವಾದ ಧರ್ಮವೆಂದು ಭಾವಿಸಿ, ಅಧರ್ಮವಾ ಪ್ರವೃತ್ತ ಧರ್ಮವನ್ನು ಬಿಟ್ಟುಕೊಡುವ ಯೋಚನೆಯನ್ನೇ ಮಾಡುವದಿಲ್ಲ. ಆ ದರಿಂದ ಅಂಥ ಮನುಷ್ಯನಿಗೆ (ಪ್ರವೃತ್ತ ಧರ್ಮದ ಉಪದೇಶ ಮಾಡುವದರಿಂ ಬಹುದೊಡ್ಡ ಅನ್ಯಾಯವನ್ನೇ ಮಾಡಿದಂತಾಗುವದು. -

॥೧೭೫॥ ಕಸ್ತ್ವಂ ಸ್ವಯಂ ತದಭಿಜ್ಞೋ ವಿಪಶ್ಚಿ-
ದವಿದ್ಯಾಯಾಮಂತರೇ ವರ್ತಮಾನಂ ।
ದೃಷ್ಟ್ವಾ ಪುನಸ್ತಂ ಸಘೃಣಃ ಕುಬುದ್ಧಿಂ
ಪ್ರಯೋಜಯೇದುತ್ಪಥಗಂ ಯಥಾಂಧಂ ॥ 5-5-17

ಹಿಂದೆ ಹೇಳಿದ್ದನ್ನೆ ಮನಸ್ಸಿನಲ್ಲಿ ಬಿಂಬಿಸಲು ವಿಶದವಾಗಿ ಹೇಳುವರು.

ಅರ್ಥ:– ಪ್ರವೃತ್ತ ನಿವೃತ್ತ ಧರ್ಮಗಳೆರಡರಿಂದಲೂ ಉಂಟಾಗುವ ಪರಿಣಾಮವನ್ನು ತಿಳಿದುಕೊಂಡವನು, ಅಂತೆಯೆ ಜ್ಞಾನಿಯೆನಿಸಿಕೊಳ್ಳುವವನು– ಅಜ್ಞಾನಿಗಳಿಂದ ಆಚರಿಸಲ್ಪಡುವ ಪ್ರವೃತ್ತ ಮಾರ್ಗದಲ್ಲಿ, ಆ ಮಾರ್ಗದಲ್ಲಿ ಸ್ವಾಭಾವಿಕ ಒಲವು ಉಳ್ಳವನನ್ನು ನೋಡಿಯೂ ಮತ್ತೆ ಮಾರ್ಗದಲ್ಲಿ, ದಾರಿ ತಪ್ಪಿ ನಡೆಯುತ್ತಿರುವ ಕುರುಡನನ್ನು ಮತ್ತೆ ಅದೇ ದಾರಿಯಲ್ಲಿ ನಡೆಸಿಕೊಂಡು ಹೋಗುವಂತೆ, ಕರುಣಾಳುವಾದ ಯಾವ ಜ್ಞಾನಿಯು ಅದೇ ತಪ್ಪು ಪ್ರವೃತ್ತ ಮಾರ್ಗದಲ್ಲಿ ನಡೆಸಿಕೊಂಡು ಹೋಗುವನು ?

ಯಾವ ಜ್ಞಾನಿಯೂ ಹೀಗೆ ಮಾಡಲಾರನು, – ಎಂಬರ್ಥ.

॥೧೭೬॥ ಗುರುರ್ನ ಸ ಸ್ಯಾತ್ಸ್ವಜನೋ ನ ಸ ಸ್ಯಾ-
ತ್ಪಿತಾ ನ ಸ ಸ್ಯಾಜ್ಜನನೀ ನ ಸಾ ಸ್ಯಾತ್ ।
ದೈವಂ ನ ತತ್ಸ್ಯಾನ್ನ ಪತಿಶ್ಚ ಸ ಸ್ಯಾ-
ನ್ನ ಮೋಚಯೇದ್ಯಃ ಸಮುಪೇತಮೃತ್ಯುಂ ॥

೫-೫-೧೭, ೧೮

(ಇಷ್ಟೊಂದು ಅನರ್ಥಕಾರಿಯಾದ) ಪ್ರವೃತ್ತ ಮಾರ್ಗವನ್ನು ಅನುಸರಿಸಲು ಜ್ಞಾನಿಯಾದವನು ಎಂದಿಗೂ ಉಪದೇಶಿಸುವದಿಲ್ಲ. ಹೀಗೆ ಹೇಳುವದು ಸಮಂಜಸವೆನಿಸುವದಿಲ್ಲ. ಸುಲಭವಾಗಿ ನಂಬುವಂತಿಲ್ಲ. ಏಕೆಂದರೆ, ಪ್ರವೃತ್ತ ಮಾರ್ಗದ ಉಪದೇಶಕರೆ ಬಹಳ ಜನರಾಗಿರುವರು. ಪ್ರತ್ಯಕ್ಷ ತಾಯಿ ತಂದೆಗಳು ಪ್ರವೃತ್ತ ಮಾರ್ಗದಲ್ಲಿ ನಮ್ಮನ್ನು ತೊಡಗಿಸುವರೆಂದ ಮೇಲೆ, ಉಳಿದ ಆಪ್ತೇಷ್ಟರೂ ಹಾಗೇ ಮಾಡುವದರಲ್ಲಿ ಆಶ್ಚರ್ಯವಿಲ್ಲ. ಹೆಚ್ಚಿಗೇನು ಹೇಳಬೇಕು ? ಮಾನವರೆಲ್ಲರೂ ಪ್ರವೃತ್ತ ಮಾರ್ಗವನ್ನೇ ಅನುಸರಿಸುವವರು ಆಗಿರುವರು. ಇದಲ್ಲದೇ, ಯಾತ್ರೆಗೆಂದು ಹೋದಾಗ್ಗೆ, (ಪೂಜೆಕಟ್ಟೆ) ಕೇಳಿಕೊಂಡರೆ, (ಪೂಜಾರಿ)

ಇನ್ನೊಬ್ಬರಲ್ಲಿ ಪ್ರವೇಶಿಸಿ; ಕುಲದೈವವೂ ಕೂಡ ಉಳಿದವರಂತೆಯೆ ಪ್ರವೃತ್ತಿ ಮಾರ್ಗದ ರೀತಿಯನ್ನೇ ನಮಗೆ ಹೇಳುವಳು.- ವಸ್ತುಸ್ಥಿತಿಯು ಹೀಗಿರಲು, ಪ್ರವೃತ್ತ ಮಾರ್ಗವನ್ನೇ ಆಚರಿಸಿರಿ. ಎಂದು ಹೇಳುವವರಿಗೆ ಗುರುವಿನ ಸ್ಥಾನ ಮಾನವೇ ಇಲ್ಲ. (ಗುರು ಎಂದು ಕರೆಸಿಕೊಳ್ಳಲೂ ಅವರು ಪಾತ್ರರಲ್ಲ). ಅಂಥ ವರಲ್ಲಿ ಗುರು-ಹಿರಿಯರೆಂಬ ಭಾವನೆಯನ್ನೂ ತಾಳಬಾರದು. ಶ್ರದ್ಧೆಯನ್ನೂ ಇಡಬಾರದು. (ಗುರುಗಳೆಂಬ) ಶ್ರದ್ಧೆಯನ್ನಿಟ್ಟರೆ, ಅವರ ಮಾತಿನಂತೆ ನಡೆದು ಪ್ರವೃತ್ತಮಾರ್ಗವನ್ನೇ ಅನುಸರಿಸಬೇಕಾದೀತು. ಇದನ್ನು ಮನಸ್ಸಿನಲ್ಲಿ ಇಟ್ಟು ಕೊಂಡು, ಪ್ರವೃತ್ತಮಾರ್ಗದ ಉಪದೇಶಕರು ನಿಜವಾಗಿಯೂ ಗುರುಗಳಲ್ಲ, ತಾಯಿತಂದೆಗಳಲ್ಲ, ಎಂಬುದನ್ನು ಇಲ್ಲಿ ಸ್ಪಷ್ಟಗೊಳಿಸುವರು.

ಅರ್ಥ :- ಸಂಸಾರವೆಂದರೆ ಮೃತ್ಯುವಿನ ಮುಷ್ಟಿಯಲ್ಲಿ ಸಿಕ್ಕಂತೆ. ಮೃತ್ಯು ಸಿಸಂತಿರುವ ಸಂಸಾರದ ಬಂಧನದಿಂದ ನಮ್ಮನ್ನು ಮುಕ್ತರನ್ನಾಗಿ ಮಾಡಲಾರ ದವನು (ಸಂಸಾರದಿಂದ ಬಿಡುಗಡೆಗೆ (ಏಕಮೇವ) ಸಾಧನವಾಗಿರುವ ನಿವೃತ್ತ ಮಾರ್ಗವನ್ನು ನಮಗೆ ಉಪದೇಶಿಸಿ, ನಿವೃತ್ತಮಾರ್ಗದ ದಾರಿಯನ್ನು ಹಿಡಿಸದಿರು ವವನು) ಅಂಥವನು (ಗುರುವಿನ ಸ್ಥಾನದಲ್ಲಿ ಇದ್ದರೂ) ಗುರುವೆನಿಸನು, (ಪ್ರೀತಿ ಯಿಂದ) ಬಳಗದವನಾದರೂ ಆತ್ಮೀಯನಾಗಲಾರನು. ಹಡೆದ ತಂದೆ-ಹೆತ್ತ ತಾಯಿತಂದೆಗಳಾಗಿದ್ದರೂ, ತಂದೆತಾಯಿಗಳೆನಿಸಿಕೊಳ್ಳಲು ಯೋಗ್ಯರಾಗರು; ದೇವನಾಗಿದ್ದರೂ, ದೇವನಾಗನು; ( ಅನ್ನದಾನಾದಿಗಳಿಂದ ) ಪ್ರಭು ಆಗಿದ್ದರೂ, ಪ್ರಭು ಆಗಲಾರನು,- ಏಕೆಂದರೆ, ಸಂಸಾರದಲ್ಲಿಯೆ ಕಟ್ಟಿಹಾಕುವ ಪ್ರವೃತ್ತ ಮಾರ್ಗವನ್ನೇ ಇವರು ಉಪದೇಶಿಸುವರಾದ್ದರಿಂದ. ಅಂತೆಯೆ ಇವರ ಮಾತು ನಂಬಲು ಯೋಗ್ಯವಾದುದಲ್ಲ. ಹೀಗೆ ಹೇಳಿರುವರು-'ಗುರೂಕ್ತಮಪಿ ನ ಗ್ರಾಹ್ಯಂ'.

ಎಂದರೆ ಅನರ್ಥವಾದುದನ್ನು ಅರ್ಥವೆಂದು ( ಅಸಾಧುವಾಗಿರುವದನ್ನು ಸಾಧು ಎಂದು ) ಹೇಳುವ ಗುರುವಿನ ಮಾತನ್ನೂ ಕೂಡ ಸ್ವೀಕರಿಸಕೂಡದು. ಅಜ್ಞಾನವೆಂಬ ಗಾಢ ನಿದ್ರೆಯಲ್ಲಿ ಮಗ್ನನಾದವನನ್ನು ಜಾಗೃತವಾಗಿ ಮಾಡದ, (ಆತನಿಗೆ ಜ್ಞಾನದ ಎಚ್ಚರಿಕೆಯನ್ನು ತಂದು ಕೊಡದವನ ಮಾತನ್ನು (ಅಂಥವರು ಯಾವ ಸ್ಥಾನಮಾನದಲ್ಲಿಯೆ ಇರಲಿ) ನಂಬಿ ನಡೆಯಬಾರದು. ಹೀಗೆ ಮಾಡದರೆ, ಕುರುಡನ ದಾರಿಯನ್ನೇ ಇನ್ನೊಬ್ಬ ಕುರುಡನು ಹಿಡಿಯುವಂತೆ ಅವನ ಗತಿ ಯಾಗುವದು. 'ಗುರುರ್ನಸ್ಯಾತ್...' ಎಂಬುದನ್ನು ಋಷಭನಾಮಕನಾದ

ಶ್ರೀ ಹರಿಯು ತನ್ನ ಮಕ್ಕಳಿಗೆ ಮಾಡಿದ ಉಪದೇಶ. 'ಗುರೂಕ್ತಮಪಿ ನ ಗ್ರಾಹ್ಯಂ' ಎಂಬುದನ್ನು ಪ್ರಲ್ಹಾದರು ತಮ್ಮ ಓರಗೆಯವರಿಗೆ ಹೇಳಿದ ಮಾತು.

||೧೭೭|| ಮಾ ವಃ ಪದವ್ಯಃ ಪಿತರಸ್ಮದಾಸ್ಥಿತಾ
ಯಾ ಯಜ್ಞಶಾಲಾಸು ನ ಧೂಮವರ್ತ್ಮಭಿಃ ।
ತದನ್ನತೃಪ್ತೈರಸುಭೃದ್ಭಿರೀಡಿತಾ
ಅವ್ಯಕ್ತಲಿಂಗಾ ಅವಧೂತಸೇವಿತಾಃ ॥ ೪-೪-೨೧

ನಾಶ ಹೊಂದುವ, (ನಶ್ವರ) ಕ್ಷಣಿಕ ಫಲವನ್ನು ಕೊಡುವ ಹಾಗೂ ಕಷ್ಟಕರವಾದ ಪ್ರವೃತ್ತಕರ್ಮವನ್ನು ಬಿಟ್ಟುಕೊಡಬೇಕು, (ಅದಕ್ಕೆ ಬದಲಾಗಿ) ಶಾಶ್ವತ ಫಲವನ್ನು ಕೊಡುವ ಹಾಗೂ ಕಷ್ಟಕರವಾಗಿರದ ನಿವೃತ್ತಕರ್ಮವನ್ನು ಮಾಡಬೇಕು ಎಂದು ಹೇಳಿದುದರಲ್ಲಿ ಶಿಷ್ಟಾಚಾರವಿದೆ. ಮಹಾಪುರುಷರು ಹೀಗೆಯೆ ಮಾಡಿರುವ ಉದಾಹರಣೆಗಳಿವೆ. ಎಂಬ ಅಭಿಪ್ರಾಯದಿಂದ (ಹಿಂದಕ್ಕೆ) ಸತೀದೇವಿ ತನ್ನ ತಂದೆಗೆ (ದಕ್ಷನಿಗೆ) ಹೇಳಿದ ಮಾತು ಈ ವಿಚಾರವನ್ನೇ ಬೋಧಿಸುವದಾಗಿ ಸತೀದೇವಿಯ ಮಾತುಗಳಿಂದಲೆ ಈ ಪ್ರಕರಣವನ್ನು ಮುಕ್ತಾಯಗೊಳಿಸುವರು.

**ಅರ್ಥ:-** ತಂದೆಯೆ, ನಾವು ಮಾತ್ರವಲ್ಲ, ಸರ್ವಸಂಗ ಪರಿತ್ಯಾಗಮಾಡಿದ ಅವಧೂತ ಜನರು, ಎಲ್ಲರಿಗೂ ವಂದ್ಯರಾದ ಸನಕಾದಿ ಮುನಿಗಳು ಕೂಡ, ಆಚರಿಸುತ್ತಿರುವ, ಹಾಗೂ ಬಾಹ್ಯಲಕ್ಷಣಗಳಿಂದ ಗುರುತಿಸಲು ಬಾರದ ನಿವೃತ್ತ ಧರ್ಮದ ಆಚರಣೆಗೇನೆ ಭಾಗವತ ಧರ್ಮಾನುಷ್ಠಾನವೆಂಬ ಬೇರೊಂದು ಹೆಸರುಳ್ಳ, (ನಿತ್ಯಸುಖರೂಪವಾದ) ಮೋಕ್ಷಕ್ಕೆ ಕರೆದೊಯ್ಯುವ (ಅರ್ಚಿರಾದಿ ಮಾರ್ಗಗಳು) ಸಾಧನಗಳು ನಿಮಗೆ ಹೊರತಾದವುಗಳು; ಅವು ನಿಮಗೆ ನಿಲುಕಲಾರವು. ಮಾಂಸ ಮುಂತಾದ ಕದನ್ನಭಕ್ಷಣಕ್ಕೆ ಮನಸೋತ ಜನರು ಮೆಚ್ಚುವ ಪ್ರವೃತ್ತಧರ್ಮಾಚರಣೆಯ ಕೃತಿಗಳು ನಮ್ಮ ಪಾಲಿಗೆ ಎಂದಿಗೂ ಬಾರದಂತಾಗಲಿ ಈ ಬಗೆಯ ಪ್ರವೃತ್ತ ಧರ್ಮದ ಕೃತಿಗಳಿಂದ ನಾವು ದೂರವಾಗಿರುವೆವು. ಯಜ್ಞಶಾಲೆಯಲ್ಲಿ ಆಸನಬದ್ಧರಾಗಿ, ಹವಿಸ್ಸಿನಿಂದ ಹೊಗೆಯೆಬ್ಬಿಸುವ, ಮಾಂಸಾದಿ ಕೀಳು ಆಹಾರದಿಂದ ಸಂತೋಷಪಡುವ ಉದರಂಭರ ಜನರು ಮಾತ್ರ ನೀವು ಆಚರಿಸುವ ಪ್ರವೃ ಮಾರ್ಗವನ್ನು ಬಾಯಿತುಂಬ ಹೊಗಳುವರು. ಭಾಗವತ ಧರ್ಮವನ್ನು ಆಚರಿಸುವ ನಮಗೆ ನಿಂದ್ಯವಾದ ನಿಮ್ಮ ಪ್ರವೃತ್ತಿಮಾರ್ಗದ ಸಂಪರ್ಕವೂ ಕೂಡ ಆಗದಿರಲಿ.

ಯಜ್ಞಮಂಟಪದಲ್ಲಿ, ಉಚಿತವಾದ ಆಸನಬದ್ಧರಾಗಿ, ದೀಕ್ಷೆ ಸ್ವೀಕರಿಸಿ ಅಗ್ನಿಹೋತ್ರ, ಪೂರ್ಣಮಾಸ, ಚಾತುರ್ಮಾಸ್ಯ ಪಶುಸೋಮ ಮುಂತಾಗಿ ಯಜ್ಞ ಯಾಗಾದಿರೂಪ ಪ್ರವೃತ್ತಕರ್ಮಗಳನ್ನು ಆಚರಿಸುತ್ತ ಧೂಮ್ರಮಾರ್ಗದಿಂದ ಪರಲೋಕಕ್ಕೆ ಹೋಗುವ ನಮಗೆ ಸ್ವರ್ಗಲೋಕದ ಸುಖಗಳು ದೊರಕುವವು. ಆದರೆ ಪ್ರವೃತ್ತಮಾರ್ಗದಲ್ಲಿ ಆಸ್ಥೆಯಿಲ್ಲದ ನಿಮಗೆ ಈ ಸುಖಗಳು ಹೇಗೆ ದೊರೆತಾವು ? ತಂದೆಯ ಮನಸ್ಸಿನಲ್ಲಿರುವ ಈ ಸಂದೇಹವನ್ನು ಊಹಿಸಿ ಅದಕ್ಕೆ ಉತ್ತರವನ್ನು ಸತೀದೇವಿ ಕೊಡುವರು. 'ಹೇ ತಂದೆಯೆ, ನೀವು ಅನುಸರಿಸುವ ಧೂಮಾದಿ ಮಾರ್ಗಗಳೂ, ಆ ಮಾರ್ಗದಿಂದ ಹೋಗುವವರಿಗೆ ದೊರೆಯುವ ಸುಖಗಳು ನಮಗೆ ಬೇಡವೇ ಬೇಡ. ಅವುಗಳನ್ನು ನಾವು ಎಂದಿಗೂ ಅಪೇಕ್ಷಿಸುವದಿಲ್ಲ. ಏಕೆಂದರೆ, ನಾವು ಅನುಸರಿಸುವ ಅರ್ಚ್ಯಾದಿ ಮಾರ್ಗಗಳು ( ನಿವೃತ್ತಧರ್ಮಾನುಷ್ಠಾನಗಳು) ನಮಗೆ ಶಾಶ್ವತವಾದ ಪುರುಷಾರ್ಥವನ್ನು (ಮೋಕ್ಷಪ್ರಾಪ್ತಿಯನ್ನು) ತಂದು ಕೊಡುವವು. ಆದುದರಿಂದ ನಿತ್ಯವಾದ ಮಹಾಸುಖವನ್ನು ತಂದುಕೊಡುವ ಸುಲಭ ದಾರಿಯಿರಲು, ಅದನ್ನು ಬಿಟ್ಟುಕೊಟ್ಟು ಕ್ಷಣಿಕ ಹಾಗೂ ಅಲ್ಪಸುಖಕ್ಕೆ ಸಾಧನವಾದ ದಾರಿಯನ್ನು ಸಮಂಜಸ ಬುದ್ಧಿಯುಳ್ಳ ಯಾವ ಪುರುಷನೂ ಅನುಸರಿಸುವದಿಲ್ಲ. ಅಂತೆಯೆ, ಪ್ರವೃತ್ತಿ ಮಾರ್ಗದಲ್ಲಿರುವ ಪ್ರಯಾಸಗಳನ್ನು ಎತ್ತಿ ತೋರಿಸುವದಕ್ಕಾಗಿಯೆ 'ಯಜ್ಞಶಾಲಾಸನಧೂಮವರ್ತ್ಮ' ವೆಂದು ಹೇಳಿರುವರು.

ಹೀಗೆ ಹೇಳಿರುವರು :- ಪ್ರವೃತ್ತ ಹಾಗೂ ನಿವೃತ್ತವೆಂಬ ಎರಡು ಬಗೆಯ ವೈದಿಕ ಧರ್ಮಗಳಿವೆ. ಪ್ರವೃತ್ತಧರ್ಮವನ್ನು ಆಚರಿಸುವ ವ್ಯಕ್ತಿಯು ಮರಳಿ ಮರಳಿ ಮತ್ತೆ ಸಂಸಾರಕ್ಕೆ ಬರುವನು. ನಿವೃತ್ತ ಧರ್ಮವನ್ನು ಅನುಸರಿಸುವನು ಜನನ-ಮರಣ ರಹಿತವಾದ ಮೋಕ್ಷವನ್ನು ಹೊಂದುವನು. ಪಶುಹಿಂಸೆಯಿಂದ ಕೂಡಿದ, ಅನೇಕ ಪದಾರ್ಥಗಳ ಅಗತ್ಯವಿರುವ ಹಾಗೂ ಫಲಾಪೇಕ್ಷೆಯಿಂದ ಮಾಡಿದ ದರ್ಶ, ಪೂರ್ಣಮಾಸ್ಯ, ಚಾತುರ್ಮಾಸ್ಯ; ಮುಂತಾದ ಮತ್ತಿತರ ಆಹುತಿಗಳನ್ನು ಹಾಕುವ ಪ್ರವೃತ್ತಕರ್ಮಕ್ಕೆ 'ಇಷ್ಟ'ವೆಂಬ ಹೆಸರು. ದೇವಾಲಯ, ತೋಟ, ಬಾವಿ ಮುಂತಾದ ಜೀವನೋಪಯೋಗಿಯಾದ ಸೌಕರ್ಯದ ಕಾರ್ಯಗಳಿಗೆ 'ಪೂರ್ತ'ವೆನ್ನುವರು. ಈ ಬಗೆಯ ಕಾಮ್ಯ ( ಫಲದ ಉದ್ದೇಶದಿಂದಲೆ ಮಾಡಿದ) ಕರ್ಮಗಳ ಪ್ರವೃತ್ತಮಾರ್ಗ.

ಇದುವೇ ಧೂಮಾದಿ ಮಾರ್ಗ. ಧೂಮ, ರಾತ್ರಿ, ಕೃಷ್ಣಪಕ್ಷ, ದಕ್ಷಿಣಾಯನ, ಚಂದ್ರ, ಈ ದಾರಿಯಿಂದ ಸಾಗಿ, ತಿರುಗಿ ಬರುವಾಗ್ಗೆ ಮೋಡ, ಮಳೆ,

ಭೂಮಿ, ಸಸ್ಯಾದಿಗಳು, ಅನ್ನ ರೇತಸ್ಸು,-ಎಂಬ ಮಾರ್ಗವನ್ನು ಅನುಸರಿಸಿ, ಹುಟ್ಟುಸಾವುಗಳ ಚಕ್ರದಲ್ಲಿ ತಿರುಗುತ್ತಿರುವ ಪ್ರವೃತ್ತ ಕರ್ಮನಿರತರಿಗೆ ಶ್ರೀಹರಿಯ ನಿಲಯವಾದ (ಮತ್ತೆ ಜನನ ಮರಣಗಳು ಬಾರದ) ವೈಕುಂಠ ಲೋಕವು ದೊರಕದು. ಯಜ್ಞಯಾಗಾದಿಗಳಲ್ಲಿಯೇ ತೊಡಗಿ (ಅವುಗಳ ಹೊಗೆಯಿಂದಲೆ ಏನೋ ಎಂಬುವಂತೆ) ಬುದ್ಧಿಗೆ ಮಂಕು ಮುಸುಕಿದ ಜನರು, ಸತ್ ಸಿದ್ಧಾಂತವನ್ನು ಅರಿಯದವರಾಗಿ ಕರ್ಮ ಕಾಂಡವೇ ವೇದಗಳಲ್ಲಿ ಪ್ರತಿಪಾದ್ಯವಾಗಿದೆ ಎಂದು ಹೇಳುವರು. ಗರ್ಭಾಧಾನದಿಂದ ಅಂತ್ಯಕ್ರಿಯೆಯವರೆಗಿನ (ಷೋಡಶ) ಸಂಸ್ಕಾರಗಳನ್ನು ಯಥಾವತ್ತಾಗಿ ಹೊಂದಿದವನು ಇಂದ್ರಿಯಗಳಿಂದ ಮಾಡುವ ಯಜ್ಞರೂಪವಾದ ಕರ್ಮಗಳನ್ನೆಲ್ಲ ಜ್ಞಾನವೆಂಬ ಅಗ್ನಿಯಲ್ಲಿ ಆಹುತಿಯಾಗಿ ಅರ್ಪಿಸುವನು. ಹೀಗೆ ನಿಷ್ಕಾಮ ಕರ್ಮದಲ್ಲಿ ನಿರತನಾದವನು ಅರ್ಚಿರಾದಿ ಮಾರ್ಗವನ್ನು ಅನುಸರಿಸುವನು. ಇಂದ್ರಿಯ, ಮನಸ್ಸು, ವಾಕ್, ವರ್ಣ, ಸಮಾಮ್ನಾಯ, ಅಕಾರ, ಬಿಂದುನಾದ, ಪ್ರಾಣ, ಮಹತ್ತು ಇವುಗಳಿಗೆ ಅಧಿ ದೇವತೆಗಳಾದ ದಿಗ್ದೇವತೆಗಳು, ಅಹಂಕಾರಿಕಪ್ರಾಣ, ಸೂರ್ಯ, ವರುಣ, ಅವಳಿ ಅಶ್ವಿನೀ ದೇವತೆಗಳು, ಅಗ್ನಿ, ದಕ್ಷ, ಜಯಂತ, ಮಿತ್ರ, ಇಂದ್ರಿಯಾಭಿಮಾನಿಗಳಾದ ಮನುಗಳು, ಇಂದ್ರ, ಕಾಮ, (ಮನಸ್ಸು) ಸೌಪರ್ಣಿ,-ವಾರುಣಿ,-ಪಾರ್ವತೀ ದೇವಿಯರು, ವಾಕ್ ಅಹಂಕಾರ ಗರುಡಶೇಷರುದ್ರರು, (ಅಹಂಕಾರ-ವೇದ) ಭಾರತೀ, ಸರಸ್ವತೀ (ಅಕಾರಸ್ವರ), ಬ್ರಹ್ಮವಾಯುಗಳು (ಬಿಂದುನಾದ) ಶ್ರೀದೇವಿ (ಮಹತ್ತು) ಈ ರೀತಿಯಿಂದ ಲಯ ಚಿಂತನೆಮಾಡಿ ಅರ್ಚಿರಾದಿ ಮಾರ್ಗವನ್ನನುಸರಿಸುವ ನಿವೃತ್ತ ಕರ್ಮಿಗಳು ಅರ್ಚಿ, ಅಗ್ನಿ, ಸೂರ್ಯ, ಅಹಸ್ಸು, ಅತಿವಾಹಿಕ ವಾಯು, ಶುಕ್ಲಪಕ್ಷ (ಪೂರ್ಣಮಾಸ) ಉತ್ತರಾಯಣ, ಇಂದ್ರ, ಗರುಡಶೇಷ, ಭಾರತೀ ಪ್ರಾಣರೆಂಬ ದೇವತೆಗಳಿಂದ ಕೂಡಿಕೊಂಡು ಅವರಿಗೆ ಆಧೀನರಾಗಿ ಮುಂದೆ ಸಾಗಿ ವಿಶ್ವ, ತೈಜಸ, ಪ್ರಾಜ್ಞ, ತುರ್ಯನಾಮಕ, ಶ್ರೀಹರಿಯ ಪಾದವನ್ನು ಸೇರುವರು. ಪ್ರವೃತ್ತಕರ್ಮಿಗಳದು ಪಿತೃಯಾನ, ನಿವೃತ್ತ ಕರ್ಮಿಗಳದು ದೇವಯಾನ. ಶಾಸ್ತ್ರವೆಂಬ ಕಣ್ಣಿನಿಂದ (ಜ್ಞಾನದಿಂದ) ಈ ನಿವೃತ್ತ ಮಾರ್ಗವನ್ನು ತಿಳಿದುಕೊಂಡು ಅನುಸರಿಸುವವನು (ಬಂಧಕವಾದ) ಅಜ್ಞಾನಕ್ಕೆ ಒಳಗಾಗುವದಿಲ್ಲ. ಆದುದರಿಂದ ಪರಮಾತ್ಮನಲ್ಲಿ ಭಕ್ತಿಯುಳ್ಳವನು (ಭಾಗವತ ಧರ್ಮಾನುಷ್ಠಾನ ರೂಪವಾದ) ನಿವೃತ್ತಕರ್ಮವನ್ನೇ ಮಾಡತಕ್ಕದ್ದು, ಪ್ರವೃತ್ತ ಕರ್ಮವನ್ನು ಬಿಟ್ಟುಕೊಡಬೇಕು. ಧರ್ಮದಲ್ಲಿ ರುಚಿ-ಆಸಕ್ತಿಯನ್ನು ಹುಟ್ಟಿಸಲು ಮಾತ್ರ ವೇದಗಳಲ್ಲಿ ಕರ್ಮಕ್ಕೆ ಪ್ರಚೋದನೆ ಇದೆ; ಕರ್ಮದ ಫಲದಲ್ಲಿ ಆಸಕ್ತಿ

ಯನ್ನು ವಹಿಸದೆ, ಕೃಷ್ಣಾರ್ಪಣ ಬುದ್ಧಿಯಿಂದ, ಶ್ರೀ ಹರಿಪೂಜೆಯೆಂಬ ಭಾವನೆ ಯಿಂದ ಆಚರಿಸಿ ಬ್ರಹ್ಮತತ್ವವನ್ನು ತಿಳಿದುಕೊಳ್ಳಲು ಬ್ರಹ್ಮಜಿಜ್ಞಾಸೆಯನ್ನು ಮಾಡಬೇಕು. ಹೀಗೆ ಶ್ರೀಮದ್ಭಾಗವತದ ಏಕಾದಶ ಸ್ಕಂಧದಲ್ಲಿ ಹೇಳಿರುವರು.

ಪ್ರವೃತ್ತಕರ್ಮತ್ಯಾಗವೆಂಬ ಪ್ರಕರಣವು ಮುಗಿಯಿತು.



# ೧೩. ನಿವೃತ್ತಕರ್ಮಕರಣ ಪ್ರಕರಣ

||೧೭೮|| ತ್ಯಕ್ತ್ವಾ ಸ್ವಧರ್ಮಂ ಚರಣಾಂಬುಜಂ ಹರೇ-
ರ್ಭಜನ್ನಪಕ್ವೋಽಥ ಪತೇತ್ತತೋ ಯದಿ |
ಯತ್ರ ಕ್ವ ವಾ ಭದ್ರಮಭೂದಮುಷ್ಯ
ಕೋವಾಽರ್ಥ ಆಪ್ತೋ ಭಜತಾಂ ಸ್ವಧರ್ಮಂ || ೧-೫-೧೭

ಪ್ರವೃತ್ತ ಕರ್ಮವನ್ನು ಬಿಟ್ಟುಕೊಡಬೇಕು ಎಂದು ಹೇಳಿದೆ. ಯಾವು ದನ್ನು ಬಿಡಬೇಕು, ಯಾವುದನ್ನು ಸ್ವೀಕರಿಸಬೇಕು ಇವೆರಡನ್ನೂ ತಿಳಿಸುವ ಹಿಂದಿನ ಪ್ರಕರಣದಲ್ಲಿನ ಕೊನೆಯ ಪದ್ಯವು ಎರಡೂ ಪ್ರಕರಣಗಳ ಮಧ್ಯದಲ್ಲಿ ಸೇರಿಸಲಾಗಿದೆ. ಇಲ್ಲಿ ಒಂದು ಸಂದೇಹ ;- ಪ್ರವೃತ್ತ ಕರ್ಮವನ್ನು ಬಿಟ್ಟುಕೊಟ್ಟು ನಿವೃತ್ತ ಕರ್ಮವನ್ನು ಅನುಸರಿಸಿದರೆ, ಒಂದು ವೇಳೆ ನಿವೃತ್ತ ಕರ್ಮದ ಕೊನೆಯ ಮೆಟ್ಟಲನ್ನು ಮುಟ್ಟಲಾರದೆ ಹೋದರೆ ಅಂಥ ಕರ್ಮಾಚರಣೆಯಿಂದ ಯಾವ ಪುರುಷಾರ್ಥವೂ ಪ್ರಾಪ್ತವಾಗುವದಿಲ್ಲ. ಪ್ರವೃತ್ತ ಕರ್ಮವನ್ನಂತೂ ಮೊದಲೇ ಬಿಟ್ಟಿರುವದರಿಂದ ಯಾವ ಫಲದ ಆಸೆಯೂ ಇರುವದಿಲ್ಲ. ಹೀಗೆ ಮಳೆಯ ನೀರನ್ನು ಬಿಟ್ಟು ಮಂಜಿನ ನೀರಿಗೆ ಕೈ ಒಡ್ಡುವಂತೆ ಅತೋಭ್ರಷ್ಟಸ್ತತೋಭ್ರಷ್ಟ ರಾಗಿ - ಎರಡೂ ಬಗೆಯ ಕರ್ಮಗಳಿಂದಲೂ ಫಲವು ದೊರೆಯದೆ, ಕಷ್ಟಕ್ಕೆ ಡಾಗಬಹುದು. ಇದಕ್ಕಿಂತಲೂ ಕ್ಷಣಿಕವಾದರೂ ಚಿಂತೆಯಿಲ್ಲ. ಸಧ್ಯಃ ಫಲಪ್ರದ ವಾದ ಪ್ರವೃತ್ತ ಮಾರ್ಗವನ್ನು ಅನುಸರಿಸುವದು ಹೆಚ್ಚು ಒಳ್ಳೆಯದಲ್ಲವೆ ? ಈ ಸಂದೇಹವನ್ನು ಹೀಗೆ ನಿವಾರಿಸುವರು:- ಕೊನೆಯ ಮೆಟ್ಟಲಿನವರೆಗೆ ಹೋಗ ದಿದ್ದರೆ. ನಿವೃತ್ತ ಕರ್ಮದಿಂದ ಸಧ್ಯಃ (ಕೂಡಲೆ) ಫಲ ಸಿಗದೆಂಬ ಮಾತು ನಿಜ ಆದರೆ, ತುಸು ಕಾಲಾಂತರದಲ್ಲಿ ಒಂದೆರಡು ಜನ್ಮಾಂತರಗಳಲ್ಲಿಯೆ (ನಿವೃತ್ತ ಕರ್ಮವನ್ನು) ನಿಷ್ಠೆಯಿಂದ ಆಚರಿಸುವವನಿಗೆ ಮಹಾನ್ ಪುರುಷಾರ್ಥವು ದೊರೆ ಯುವದರಲ್ಲಿ ಸಂದೇಹವಿಲ್ಲ. ಆದುದರಿಂದ,ಅಂಥ ಫಲವನ್ನು ಕೊಡಲಾರದ ಪ್ರವೃತ್ತ ಕರ್ಮವನ್ನು ಮಾಡದೆ, ನಿವೃತ್ತ ಕರ್ಮವನ್ನೇ ಮಾಡಬೇಕು. ಮೇಲಾಗಿ ಪ್ರವೃತ್ತ ಕರ್ಮದಿಂದ ದೊರಕುವ ಫಲವು ಮಂದ ಬುದ್ಧಿಯವರಿಗೆ ಕೇವಲ ಆಭಾಸ- ಭ್ರಾಂತಿಯಾಗಿದೆ. - ದೀಪದ ಹುಳಗಳಿಗೆ ದೀಪವು ಆಕರ್ಷಕವಾಗುವಂತೆ ಅನರ್ಥ ಕರವೂ ಆಗಿದೆ. ಇದೇ ಅಭಿಪ್ರಾಯವೆ ಈ ಶ್ಲೋಕದಲ್ಲಿ ಹೇಳಲಾಗಿದೆ.

**ಅರ್ಥ**:- ಸ್ವಾಭಾವಿಕ ಒಲವು ಇರುವ ಪ್ರವೃತ್ತ ಧರ್ಮವನ್ನು ತ್ಯಜಿಸಿ ಶ್ರೀಹರಿಪಾದಕಮಲವನ್ನು ಆಶ್ರಯಿಸುವವನು (ನಿವೃತ್ತಧರ್ಮ - ಭಾಗವ

ಧರ್ಮವನ್ನು ಆಚರಿಸುವವನು), (ವೈರಾಗ್ಯಾದಿಗುಣಗಳ ಪೂರ್ಣ ವಿಕಾಸವಿಲ್ಲದೆ) ಅಪಕ್ವಬುದ್ಧಿಯುಳ್ಳವನಾಗಿ (ನಿವೃತ್ತಮಾರ್ಗದಿಂದ) ಒಂದು ವೇಳೆ ಚ್ಯುತನಾದರೆ (ನಿರ್ದಿಷ್ಟ ಕಾಲವನ್ನು ಹೇಳದಂತಿದ್ದರೂ) ಒಂದೆರಡು ಜನ್ಮಗಳಲ್ಲಿಯೆ ಆತನಿಗೆ (ಪುರುಷಾರ್ಥರೂಪವಾದ) ಕಲ್ಯಾಣವು ನಿಶ್ಚಿತವಾಗಿ ಆಗುವದು – ಆದರೆ, ಪ್ರವೃತ್ತಧರ್ಮದಿಂದ ನಡೆಯುವವನಿಗೆ ಯಾವ ಪ್ರಾಪ್ತಿಯೂ ಆಗುವದಿಲ್ಲ. ಪ್ರಾಪ್ತಿಯೆಂದು ತೋರುವದು ಅದು ಪರಮ ಪುರುಷಾರ್ಥವಲ್ಲ. ನಾರದರು ಶ್ರೀ ವೇದವ್ಯಾಸರಲ್ಲಿ ವಿಜ್ಞಾಪಿಸಿಕೊಂಡ ಮಾತು ಇದು,

||೧೭|| ಹತೌ ಗುರೌ ಮಯಿ ಭಕ್ತ್ಯಾನುವೃತ್ತ್ಯಾ
ವಿತೃಷ್ಣಯಾ ದ್ವಂದ್ವತಿತಿಕ್ಷಯಾ ಚ ।
ಸರ್ವತ್ರ ಜಂತೋರ್ವ್ಯಸನಾವಗತ್ಯಾ
ಜಿಜ್ಞಾಸಯಾ ತಪಸೇಹಾನಿವೃತ್ತ್ಯಾ ॥ 5-5-10

**ಅರ್ಥ :**– ಸ್ವಾಭಾವಿಕವಾಗಿಯೆ ಮನಸ್ಸು ಹರಿಯುವ ಪ್ರವೃತ್ತಿ ಧರ್ಮವನ್ನು ಬಿಟ್ಟುಕೊಟ್ಟು ಶ್ರೀಹರಿ ಪಾದಕಮಲವನ್ನೇ ಆಶ್ರಯಿಸಬೇಕು, ಎಂದು ಹೇಳುವದರಿಂದ ಭಾಗವತ ಧರ್ಮಾನುಷ್ಠಾನವೇ ನಿವೃತ್ತ ಧರ್ಮದ ಆಚರಣೆಯೆಂಬುದು ಸ್ಪಷ್ಟವಾಯಿತು. ಭಾಗವತ ಧರ್ಮಗಳು ಯಾವವು ? ಎಂಬುದನ್ನು ತೋರಿಸಿಕೊಟ್ಟು, ಬ್ರಹ್ಮತತ್ವದ ಅಭ್ಯಾಸಿಗಳು ಭಾಗವತ ಧರ್ಮಗಳನ್ನು ಆಚರಿಸುವದು, ಹಾಗೂ ಭಾಗವತ ಧರ್ಮಗಳ ಉಪದೇಶವನ್ನು (ಯೋಗ್ಯರಿಗೆ) ಮಾಡುವದು ಜ್ಞಾನಿಗಳ ಅಗತ್ಯವಾದ ಕಾರ್ಯವೆಂದೂ ಹೇಳುವರು.

**ಅರ್ಥ:** – ನನ್ನಲ್ಲಿ (ಶ್ರೀ ಹರಿಯಲ್ಲಿ), ಗುರುಗಳಲ್ಲಿ (ನಿರ್ದುಷ್ಟವಾದ) ಭಕ್ತಿಯಿಂದ, (ನಿಷ್ಕಾಮ) ಸೇವೆಯಿಂದ, ವಿಷಯ ಸುಖದ ಹಂಬಲವನ್ನು ಬಿಡುವದರಿಂದ, ಸುಖದುಃಖ ಮುಂತಾದ (ವಿರುದ್ಧ) ಜೋಡು ಅನುಭವಗಳನ್ನು ಸಹನೆಯಿಂದ (ಅವುಗಳಿಂದ ಮನಸ್ಸು ಕದಡದಂತೆ) ತಾಳಿಕೊಳ್ಳುವದರಿಂದ, ಎಲ್ಲೆಡೆಯಲ್ಲಿಯೂ ಜನರು ದುಃಖಪಡುವದನ್ನು ಕಂಡು ಅದರ ಅರಿವನ್ನು ಮಾಡಿಕೊಳ್ಳುವದರಿಂದ, ಬ್ರಹ್ಮಜ್ಞಾನದ ಲವಲವಿಕೆಯಿಂದ, ತಪಸ್ಸಿನಿಂದ, ಮುಕ್ತಿಗೆ ಸಾಧನಗಳಲ್ಲದ (ಯಾವುದೇ) ಉದ್ಯೋಗವನ್ನು ಬಿಟ್ಟುಕೊಡುವದು.

||೧೮|| ಮತ್ಕರ್ಮಭಿರ್ಮತ್ಕಥಯಾ ಚ ನಿತ್ಯಂ
ಮದ್ದೇವಸಂಗಾದ್ಗುಣಕೀರ್ತನಾನ್ಮೇ ।
ನಿರ್ವೈರಸಾಮ್ಯೋಪಶಮೇನ ಪುತ್ರಾ
ಜಿಹಾಸಯಾ ದೇಹಗೇಹಾತ್ಮಬುದ್ಧೇಃ ॥ 5-5-11

ಅರ್ಥ :- ದೇವಗೃಹದ ಸ್ವಚ್ಛತೆ, ಅಲಂಕರಣ ಮುಂತಾದ ದೇವರ ಸೇವಾಕಾರ್ಯದಲ್ಲಿ ತೊಡಗುವದರಿಂದ, ಶ್ರೀ ಹರಿಯ ಲೀಲಾಕಥೆಗಳನ್ನು ಸರ್ವದಾ ಕೇಳುವದರಿಂದ, ಶ್ರೀ ಹರಿಚರಣಗಳಿಗೆ ಅಭಿಷೇಕ-ಪೂಜಾದಿಗಳನ್ನು ಸಲ್ಲಿಸುವದರಿಂದ ತ್ರಿಕರಣಪೂರ್ವಕ ಪರಪೀಡೆಯನ್ನು ತ್ಯಜಿಸಿ, ಸಕಲ ಪ್ರಾಣಿಗಳನ್ನು ಯಥಾ ಯೋಗ್ಯವಾಗಿ ಸಮದೃಷ್ಟಿಯಿಂದ ಕಾಣುತ್ತ ( ಅವರಲ್ಲಿ ಅಂತರ್ಯಾಮಿಯಾದ ಪರಮಾತ್ಮನು ಏಕರೂಪನಾಗಿರುನೆಂದು ಭಾವಿಸುತ್ತ), ಪರಮಾತ್ಮನಲ್ಲಿ ಏಕನಿಷ್ಠವಾದ ಬುದ್ಧಿಯನ್ನು ಇಡುವದರಿಂದ, ದೇಹವೇ ನಾನು, ಮನೆಮಾರುಗಳು ನನ್ನವು ಎಂಬ ಮಮತ್ವ-ಅಹಂಕಾರ ಬುದ್ಧಿಯನ್ನು ಬಿಟ್ಟುಕೊಡುವದರಿಂದ ಹಾಗೂ,

॥೧೨॥ ಆಧ್ಯಾತ್ಮಯೋಗೇನ ವಿವಿಕ್ತಸೇವಯಾ
ಪ್ರಾಣೇಂದ್ರಿಯಾತ್ಮಾಭಿಜಯೇನ ಸಧ್ರ್ಯಕ್ ।
ತಚ್ಛ್ರದ್ಧಯಾ ಬ್ರಹ್ಮಚರ್ಯೇಣ ಶಶ್ವ-
ದಸಂಪ್ರಮಾದೇನ ಜಯೇನ ವಾಚಾಂ ॥ 5 - 5 - 12

ಅರ್ಥ :- (ನಿಯಾಮಕನಾಗಿ) ಅಂತರ್ಯಾಮಿಯಾಗಿರುವ ಪರಮಾತ್ಮನ ಧ್ಯಾನ-ಚಿಂತನೆಗಳನ್ನು ನಿಷ್ಠೆಯಿಂದ ಮಾಡುವದರಿಂದ, ಜನಸಂಪರ್ಕವಿರದ ಏಕಾಂತ ಸ್ಥಳದಲ್ಲಿ ವಾಸಿಸುವದರಿಂದ - ಅಥವಾ - ವಿಷ್ಣುಭಕ್ತರ ಸಹವಾಸದಲ್ಲಿ ಇರುವದರಿಂದ, ( ಪ್ರಾಣಾಯಾಮದಿಂದ ) ವಾಯುನಿಗ್ರಹ ಮಾಡುವದರಿಂದ, ಇಂದ್ರಿಯಗಳು ಹಾಗೂ ಮನಸ್ಸನ್ನು ಸಂಪೂರ್ಣವಾಗಿ ಅಂಕಿತದಲ್ಲಿ ಇಟ್ಟುಕೊಳ್ಳುವದರಿಂದ, (ತತ್) ಪರಮಾತ್ಮನಲ್ಲಿ ಅಥವಾ (ಸತ್) ಪರಮಾತ್ಮನಿಗೆ ಅಭಿಮತವಾದ ಸಾಧು ವಸ್ತುಗಳಲ್ಲಿ ಪೂರ್ಣ ನಂಬಿಕೆಯನ್ನು ತಾಳುವದರಿಂದ, ಬ್ರಹ್ಮಚರ್ಯೆಯಿಂದ, ('ಬ್ರಹ್ಮ'-ಪರಮಾತ್ಮನ ಜ್ಞಾನಮಾಡಿಕೊಡುವ ಸಚ್ಛಾಸ್ತ್ರಗಳನ್ನು ಅಭ್ಯಾಸ ಮಾಡುವದರಿಂದ ), ಯಾವಾಗಲೂ ಜಾಗರೂಕನಾಗಿದ್ದುಕೊಂಡು ಅಕಾರ್ಯಗಳನ್ನು ಮಾಡದಿರುವದರಿಂದ, ( ಶ್ರೀ ಹರಿ ಗುಣಗಾನವನ್ನು ಬಿಟ್ಟು, ಉಳಿದ ವಿಷಯಗಳ ಬಗ್ಗೆ ಮಾತನ್ನು ನಿಯಂತ್ರಣ ಮಾಡುವದರಿಂದ,) ಪರಿಮಿತಗೊಳಿಸುವದರಿಂದ,

॥೧೩॥ ಸರ್ವತ್ರ ಮದ್ಭಾವವಿಚಕ್ಷಣೇನ
ಜ್ಞಾನೇನ ವಿಜ್ಞಾನವಿರಾಜಿತೇನ ।
ಯೋಗೇನ ಧೃತ್ಯುದ್ಯಮಸತ್ತ್ವಯುಕ್ತೋ
ಲಿಂಗಂ ವ್ಯಪೋಹೇತ್ಕುಶಲೋಽಹಮಾಖ್ಯಂ ॥ 5 - 5 - 13

**ಅರ್ಥ:**-ಎಲ್ಲ ಪ್ರಾಣಿಗಳಲ್ಲಿಯೂ ಅಂತರ್ಯಾಮಿಯಾದ ನನ್ನನ್ನೇ ಕಾಣುವ ಜ್ಞಾನದಿಂದ, ಬಿಂಬರೂಪನಾದ ಶ್ರೀ ಹರಿಗೆ ಸಂಬಂಧಿತವಾಗಿ ವಿರಾಜಿಸುವ ಹಾಗೂ ಮೋಕ್ಷಕ್ಕೆ ನೇರವಾಗಿ ಸಾಧನವಾಗಿರುವ ವಿಜ್ಞಾನದಿಂದ, ಅಡೆತಡೆ ಯಿಲ್ಲದ (ಶ್ರೀ ಹರಿಯ, ಧ್ಯಾನ-ಚಿಂತನ ರೂಪವಾದ ಯೋಗ (ಉಪಾಯ) ದಿಂದ ನಾಲಿಗೆ-ಜನನೇಂದ್ರಿಯುಗಳನ್ನು ಗೆದ್ದುದರ ದ್ಯೋತಕವಾಗಿ, ಈ ಗೆಲುವಿನಿಂದಲೆ ಒದಗುವ ಆತ್ಮಬಲವನ್ನು ಪಡೆದು ಬುದ್ಧಿವಂತನಾದ ಪುರುಷನು 'ಅಹಂ'-ಎಂಬ ಹೆಸರಿನಿಂದ (ಇಲ್ಲದ) ಸ್ವಾತಂತ್ರ್ಯ ಭಾವನೆಗೆ ಕಾರಣವಾದ ಲಿಂಗ ದೇಹವನ್ನು ಕಳಚಿ ಬಿಡಬೇಕು.

ಋಷಭದೇವರು

||೧೮೩|| **ಪುತ್ರಾಂಶ್ಚ ಶಿಷ್ಯಾಂಶ್ಚ ಪಿತಾ ಗುರುರ್ವಾ**
**ಮಲ್ಲೋಕಕಾಮೋ ಮದನುಗ್ರಹಾರ್ಥಃ |**
**ಇತ್ಥಂ ವಿಮನ್ಯುರನುಶಿಷ್ಯಾದತಜ್ಞಾನ್**
**ನ ಯೋಜಯೇತ್ಕರ್ಮಸು ಕರ್ಮಮೂಢಾನ್ ||** ೫-೫-೧

**ಅರ್ಥ:**- (ವೈಕುಂಠಾದಿ) ನನ್ನ ಲೋಕಗಳು ತಮಗೆ ದೊರೆಯಬೇಕೆಂದು ಬಯಸುವವರು, (ಮುಕ್ತಿಗೆ ಸಾಧನವಾದ) ನನ್ನ ಪರಮಾನುಗ್ರಹವನ್ನು ಅಪೇಕ್ಷಿ ಸುವವರು ಅಸೂಯಾ-ಕ್ರೋಧಾದಿ ದುರಾಗ್ರಹಗಳನ್ನು ಬಿಟ್ಟುಕೊಡಬೇಕು, (ನನ್ನಲ್ಲಿ ಭಕ್ತಿ ಸೇವೆಗಳನ್ನು ಮಾಡಬೇಕು- 'ಹರೌ-ಗುರೌ' ಗುರುವಿನಲ್ಲಿ, ಹರಿ ಯಲ್ಲಿ ಎಂಬ ಶ್ಲೋಕದಲ್ಲಿ) ಹಿಂದೆ ಹೇಳಿದ ಭಾಗವತ ಧರ್ಮಾನುಷ್ಠಾನ ರೂಪವಾದ ನಿವೃತ್ತ ಮಾರ್ಗದಲ್ಲಿಯೆ, ಆ ಮಾರ್ಗದ ತಿಳುವಳಿಕೆಯಿಲ್ಲದೆ, ಪ್ರವೃತ್ತ ಮಾರ್ಗದ ಬಿಸಿಲುಗುದುರೆಯ ಬೆನ್ನುಹತ್ತಿದ ಅಜ್ಞಾನಿಗಳಾದ ತನ್ನ ಮಕ್ಕಳನ್ನು, ಶಿಷ್ಯರನ್ನು, ತಂದೆತಾಯಿ-ಗುರು ಹಿರಿಯರನ್ನು ನಿವೃತ್ತಮಾರ್ಗದಲ್ಲಿ ನಡೆಸಿಕೊಂಡು ಬರಬೇಕು. (ದಾರಿ ತಪ್ಪಿದ ಈ ಜನರ ಬಗ್ಗೆ ಕನಿಕರಪಟ್ಟು) ಪ್ರವೃತ್ತಮಾರ್ಗವನ್ನು ಅನುಸರಿಸದಂತೆ ಅವರಿಗೆ ಮಾರ್ಗದರ್ಶನ ಮಾಡಬೇಕು.

ನಾರದರು ವ್ಯಾಸರಲ್ಲಿ

||೧೮೪|| **ತಸ್ಯೈವಹೇತೋಃ ಪ್ರಯತೇತ ಕೋವಿದೋ**
**ನ ಲಭ್ಯತೇ ಯದ್ಭ್ರಮತಾಮುಪರ್ಯಧಃ |**
**ತಲ್ಲಭ್ಯತೇ ದುಃಖವದನ್ಯತಃ ಸುಖಂ**
**ಕಾಲೇನ ಸರ್ವತ್ರ ಗಭೀರರಂಹಸಾ ||** ೧-೫-೧೮

ಭಾಗವತ ಧರ್ಮಕ್ಕೇನೆ ಇನ್ನೊಂದು ಹೆಸರಾಗಿರುವ ನಿವೃತ್ತಿ ಧರ್ಮದ ಅನುಷ್ಠಾನದಲ್ಲಿಯೇ ಮೋಕ್ಷಾಪೇಕ್ಷಿಗಳು ಆಸಕ್ತರಾಗಬೇಕು. ಈ ಅಭಿಪ್ರಾಯ ದಿಂದ ಹಿಂದೆ ಹೇಳಿದುದನ್ನೇ ಕೊನೆಯದಾಗಿ ಮತ್ತೆ ಸಂಕ್ಷೇಪಿಸಿ ಹೇಳುವರು.

**ಅರ್ಥ** :- ( ಸುಖಪ್ರಾಪ್ತಿಗೆ ಪ್ರವೃತ್ತಧರ್ಮವನ್ನು ಆಚರಿಸಬೇಕೆಂಬ ಆಗತ್ಯವಿಲ್ಲ) ಏಕೆಂದರೆ ಅತಿ ವೇಗದಿಂದ ಓಡುವ ಕಾಲಕ್ರಮದಲ್ಲಿ (ಇಂದ್ರಿಯ ಗಳಿಂದ ಒದಗುವ) ವಿಷಯ ಸುಖಗಳು ( ಅನಾಯಾಸವಾಗಿ ) ದುಃಖಗಳಂತೆಯೆ ಜೀವಿಗಳಿಗೆ ತಾವಾಗಿಯೆ ಬಂದುಬಿಡುವವು. ಆದುದರಿಂದ ಜನನ-ಮರಣ ಗಳಲ್ಲಿ ಮತ್ತೆ ಮತ್ತೆ ಅಲೆದಾಡುವ ಪ್ರವೃತ್ತಮಾರ್ಗನಿರತರಿಗೆ ಯಾವ (ಶಾಶ್ವತ) ಸುಖವು ದೊರಕುವದಿಲ್ಲವೊ, ಅಂಥ ಶಾಶ್ವತ ಸುಖಕ್ಕೆ (ಒಂದೇ ಒಂದಾದ) ಸಾಧನ ವಾಗಿರುವ ನಿವೃತ್ತಧರ್ಮವನ್ನೇ ವಿವೇಕಿಯಾದವನು ಯತ್ನಪೂರ್ವಕವಾಗಿ ಆಚರಿ ಸಬೇಕು. ( ಪ್ರವೃತ್ತಧರ್ಮಾನುಷ್ಠಾನದಿಂದ ಆಯಾಸಬಹುಲವಾದ ಅಲ್ಪ ಹಾಗೂ ಕ್ಷಣಿಕ ಸುಖವೆ ದೊರೆಯುವದು).

ಇದನ್ನು ನಾರದರು ಶ್ರೀ ವೇದವ್ಯಾಸರಲ್ಲಿ ವಿಜ್ಞಾಪಿಸಿರುವರು.

ನಿವೃತ್ತಕರ್ಮ ಪ್ರಕರಣವು ಮುಗಿಯಿತು.



# ೧೪. ದೇಶ ಪ್ರಶಂಸಾ ಪ್ರಕರಣ

||೧೮೫|| ಅಹೊ ಬತ್ಯೈಷಾಂ ಕಿಮಕಾರಿ ಶೋಭನಂ
ಪ್ರಸನ್ನ ಏಷಾಂಸ್ವಿದುತ ಸ್ವಯಂ ಹರಿಃ ।
ಯೈರ್ಜನ್ಮ ಲಬ್ಧಂ ನೃಷು ಭಾರತಾಜಿರೇ
ಮುಕುಂದಸೇವೌಪಯಿಕಸ್ಪೃಹಾತ್ಮಭಿಃ ॥ 5-19-21

ಭೂಮಂಡಳವು ಏಳು ದ್ವೀಪಗಳಿಂದ ಕೂಡಿದೆ. ಅವುಗಳಲ್ಲಿ 'ಜಂಬೂ ದ್ವೀಪವು ಒಂದು. ಈ ಜಂಬೂ ದ್ವೀಪವು ಒಂಭತ್ತು 'ವರ್ಷ' (ಭೂಪ್ರದೇಶ)ಗಳುಳ್ಳದ್ದು. ಭೂಮಂಡಳದ (ಜಂಬೂದ್ವೀಪವನ್ನು ಬಿಟ್ಟು) ಉಳಿದ ಆರು ದ್ವೀಪಗಳು ಕರ್ಮಕ್ಷೇತ್ರಗಳಾಗಿಲ್ಲ. ಅದರಂತೆಯೆ, (ಒಂಬತ್ತು ಭೂಭಾಗಗಳು) 'ವರ್ಷ'ಗಳೂ ಕರ್ಮಕ್ಷೇತ್ರಗಳಾಗಿಲ್ಲ. ಉಳಿದ ಭಾರತ (ಭೂಪ್ರದೇಶ) ವರ್ಷವೊಂದೇ ಕರ್ಮಭೂಮಿಯಾಗಿದೆ. ಮುಕ್ತಿಗಾಗಿ ಸಾಧನ ಮಾಡಲು ಯೋಗ್ಯನಾಗಿದೆ) ಹೀಗಿರಲು ಇಂಥ (ಪುಣ್ಯಭೂಮಿಯಾದ) ಭಾರತದಲ್ಲಿ ಹುಟ್ಟಿಬಂದು, ಭಗವಂತನ ಆರಾಧನೆಯನ್ನು ಮಾಡದೆ, ಉಳಿದ (ಲೌಕಿಕ) ವಿಷಯಗಳಲ್ಲಿಯೆ ತಮ್ಮ ಜೀವನವನ್ನು ತೊಡಗಿಸುವರಿಗೆ ಧಿಕ್ಕಾರವಿರಲಿ, ಎಂಬ ಅಭಿಪ್ರಾಯದಿಂದ,- ದೇವತೆಗಳೂ ಕೂಡ ಈ ಭಾರತವರ್ಷವನ್ನು ಹೊಗಳುವರು - ಎಂದು ಈ ದೇಶದ ಪ್ರೌಢಿಮೆಯನ್ನು ಎತ್ತಿ ತೋರಿಸಿರುವರು.

**ಅರ್ಥ;-** ಶ್ರೀ ಮುಕುಂದನ ಆರಾಧನೆಯಲ್ಲಿಯೆ ಆಸಕ್ತಿಯುಳ್ಳ ಸಜ್ಜನರು ಈ ಭಾರತ ಭೂಮಿಯಲ್ಲಿ ಮಾನವರಾಗಿ ಹುಟ್ಟಿ ಬರುವರು. ಅಬ್ಬಾ! ಈ ಜನರು ಎಂಥ ಮಹತ್ತಮವಾದ ಪುಣ್ಯವನ್ನು ಗಳಿಸಿರಬಹುದು! ಅಥವಾ ( ಈ ಭಾರತದಲ್ಲಿ ಹುಟ್ಟಿ ಬರುವವರಿಗೆ) ಅವರಿಂದ ಪುಣ್ಯಾದಿ ಸಾಧನಗಳ ಅಪೇಕ್ಷೆಯನ್ನು ಮಾಡದೇನೆ ಶ್ರೀಹರಿಯು ಅವರಿಗೆ ಅನುಗ್ರಹ ಮಾಡಿರಬಹುದೆ ? - (ಭಾರತದಲ್ಲಿ ಜನ ತಾಳಲೂ ಇದೂ ಒಂದು ಪ್ರಕಾರವಾಗಿರಬಹುದು.)

||೧೮೬|| ಕಿಂ ದುಷ್ಕರೈರ್ನಃ ಕ್ರತುಭಿಸ್ತಪೋವ್ರತೈ-
ರ್ದಾನಾದಿಭಿರ್ವಾ ದ್ಯುಜಯೇನ ಫಲ್ಗುನಾ ।
ನ ಯತ್ರ ನಾರಾಯಣಪಾದಪಂಕಜ-
ಸ್ಮೃತಿಃ ಪ್ರಮುಷ್ಟಾತಿಶಯೇಂದ್ರಿಯೋತ್ಸವಾತ್ ॥ 5-19-

ಈ ಭಾರತ ವರ್ಷವನ್ನು ಇಷ್ಟೊಂದು ಹೊಗಳಲು ಕಾರಣವನ್ನು ಹೇಳುವರು. —

ಅರ್ಥ:- (ಅಲ್ಲಿ ಪಡೆಯುವ) ಅಪಾರವಾದ ಇಂದ್ರಿಯ ಸುಖ (ವಿಷಯ ಭೋಗ)ಗಳಲ್ಲಿ ಮಗ್ನರಾಗುವದರಿಂದ, ಜನರಿಗೆ ಸ್ವರ್ಗಾದಿ ಲೋಕಗಳಲ್ಲಿ ಶ್ರೀಮನ್ನಾರಾಯಣನ ಪಾದ ಕಮಲಗಳ ನೆನಪೇ ಹಾರಿಹೋಗುವದು. ಸ್ವರ್ಗಲೋಕದ ಸ್ಥಿತಿಗತಿಯೆ ಇಂತಿರಲು, ಸ್ವರ್ಗಲೋಕವನ್ನು ಪಡೆಯುವದಕ್ಕಾಗಿ (ಬಹುಪ್ರಯಾಸ -ವೆಚ್ಚಗಳಿಂದ) ಮಾಡುವ ಯಜ್ಞಯಾಗಾದಿಗಳಿಂದ ತಪಸ್ಸು, ವ್ರತ ಹಾಗೂ ದಾನಧರ್ಮಗಳಿಂದ, ಏನು ಉಪಯೋಗವಿದೆ ? ಅವು ನಿರರ್ಥಕವಾದವು. ಮುಖ್ಯ ಪುರುಷಾರ್ಥವಾದ ಮೋಕ್ಷಪ್ರಾಪ್ತಿಗೆ ಅವು ಸಾಧನಗಳಾಗಿಲ್ಲ. ಅಂತೆಯೇ ದ್ಯುಜಯ) ಸ್ವರ್ಗವನ್ನು ಪಡೆಯುವದು. (ಫಲ್ಗು) ಒಂದು ಸಣ್ಣ ಸಂಪಾದನೆ.)

ಸ್ವರ್ಗಲೋಕದಲ್ಲಿ ನಾರಾಯಣನ ಪಾದ ಸ್ಮರಣೆಯನ್ನು ಮರೆತುಬಿಡುವದು, ಸಾಮಾನ್ಯ ಜನರ ಬಗ್ಗೆ ಹೇಳಿದ ಮಾತು. ಸ್ವರ್ಗದಲ್ಲಿಯ ದೇವತೆಗಳಿಗೆ ಯಥಾಯೋಗ್ಯವಾದ ಶ್ರೀಹರಿನಾಮಸ್ಮರಣೆ ಇರುವದಾದರೂ, ಅದು ಮೋಕ್ಷಕ್ಕೆ ಸಾಧನವಾಗಿಲ್ಲ. ಅಂತೆಯೆ ಇದ್ದರೂ ಅದು ಇಲ್ಲದಂತೆಯೆ, ಎಂಬ ಅಭಿಪ್ರಾಯ.

||೧೮೭|| **ಕಲ್ಪಾಯುಷಾಂ ಸ್ಥಾನಜಯಾತ್ಪುನರ್ಭವಾ-** ಶುಕರು
**ತ್ಕ್ಷಣಾಯುಷಾಂ ಭಾರತಭೂಜಯೋ ವರಃ ।**
**ಕ್ಷಣೇನ ಮರ್ತ್ಯೇನ ಕೃತಂ ಮನಸ್ವಿನಃ**
**ಸಂನ್ಯಸ್ಯ ಸಂಯಾಂತ್ಯಭಯಂ ಪದಂ ಹರೇಃ ।** 5-19-23

ಸ್ವರ್ಗಲೋಕವನ್ನು ಗೆಲ್ಲುವದರಿಂದ, ದೇವತೆಯ ಸ್ಥಾನಮಾನ ದೊರೆಯುವದು. ಆದರಿಂದ ಒಂದು ಕಲ್ಪದ ಕೊನೆಯವರೆಗಿನ ಸುದೀರ್ಘವಾದ ಆಯುಷ್ಯವು ದೊರೆಯುವದು- ಆದರೆ ಭಾರತ ಭೂಮಿಯನ್ನು ಬಯಸಿ ಅಲ್ಲಿ ಮಾನವ ಜನ್ಮವನ್ನು ತಾಳುವವರ ಆಯುರ್ಮಯಾದೆಯು ಅತ್ಯಲ್ಪವಾದುದು, ಕ್ಷಣಿಕವಾದುದು. ಸ್ವರ್ಗಲೋಕದಲ್ಲಿ ಇಷ್ಟೊಂದು ಬಹುದೊಡ್ಡ ಪ್ರಯೋಜನವಿರಲು, ಅದನ್ನೇಕೆ ತಿರಸ್ಕರಿಸಬೇಕು ? ಎಂಬ ಪ್ರಶ್ನೆಗೆ ಇಲ್ಲಿ ಉತ್ತರ ಹೇಳುವರು.-

ಅರ್ಥ:- ಸ್ವರ್ಗಲೋಕವನ್ನು ಹೊಂದಿ ಕಲ್ಪಾಯುಷ್ಯದ ದೇವತೆಯ ಸ್ಥಾನ ಪಡೆಯುವದಕ್ಕಿಂತಲೂ ಅಲ್ಪಾಯುಷಿಯಾಗಿ (ಕ್ಷಣ ಭಂಗುರ ದೇಹದಿಂದ) ಭಾರತ ಭೂಮಿಯಲ್ಲಿ ಮಾನವನಾಗಿ ಹುಟ್ಟುವದೇ ಹೆಚ್ಚು ಶ್ರೇಯಸ್ಕರವಾಗಿದೆ. ಏಕೆಂದರೆ ಭಗವಂತನಲ್ಲಿ ಸರ್ವದಾ ಮನಸ್ಸನ್ನು ನಿಲ್ಲಿಸಲು ಸಾಧ್ಯವಾಗದಿದ್ದರೂ, ನಶ್ವರವಾದ ಶರೀರದಿಂದ ಮಾಡಿದ ಕರ್ಮವನ್ನು ಭಗವಂತನ ಪಾದಕ್ಕೆ ಭಕ್ತಿಪೂರ್ವಕವಾಗಿ ಸಮರ್ಪಿಸುವದರಿಂದ ಒಂದು ಗಳಿಗೆಯಾದರೂ ಭಗವಂತನ ಪಾದಗಳಲ್ಲಿ

ಮನಸ್ಸನ್ನು ಸ್ಥಿರಗೊಳಿಸುವದರಿಂದ ಅಂಥ ಮಾನವನು ಜನನ-ಮರಣಗಳ ಭಯ ವಿಲ್ಲದ ಸ್ಥಾನವನ್ನು-ಮುಕ್ತಿಯನ್ನು ಪಡೆಯುವನು. ಸ್ವರ್ಗ ಲೋಕದಲ್ಲಿಯೂ ಇದನ್ನೇ ಸಾಧಿಸುವಂತಿದ್ದರೆ, ಈ ಭೂಲೋಕದಲ್ಲಿ ಮಾನವನಾಗಿ ಹುಟ್ಟುವದಕ್ಕೆ ಇಷ್ಟೇಕೆ ಪ್ರಾಶಸ್ತ್ಯ ? ಎಂದು ಕೇಳಿದರೆ, ಸ್ವರ್ಗ ಲೋಕವು ಇದನ್ನು ಸಾಧಿಸ ಲಾರದು. ಸ್ವರ್ಗವನ್ನು ಪಡೆದವನು ಕ್ಷೀಣೇ ಪುಣ್ಯೇ - ತನ್ನ ಪುಣ್ಯದ ಸಂಗ್ರಹವು ತೀರಿಹೋಗಲು ಮತ್ತೆ ಭೂಲೋಕಕ್ಕೆ ಮರಳಿ ಬರುವನು. ಆದರೆ ಭಾರತದಲ್ಲಿ ಜನನವು ನಿತ್ಯಪದವಿಯಾದ ಮೋಕ್ಷಕ್ಕೆ ಸಾಧನವಾದುದರಿಂದ, ಸ್ವರ್ಗಪ್ರಾಪ್ತಿ ಗಿಂತಲೂ ಅದು ಶ್ರೇಷ್ಠವಾಗಿದೆ. ಎಂಬುದು ಅಭಿಪ್ರಾಯವಾಗಿದೆ.

||೧೮೮|| **ನ ಯತ್ರ ವೈಕುಂಠಕಥಾಸುಧಾಪಗಾ** ಶುಕಃ
**ನ ಸಾಧವೋ ಭಾಗವತಾಸ್ತದಾಶ್ರಯಾಃ |**
**ನ ಯತ್ರ ಯಜ್ಞೇಶಮಖಾ ಮಹೋತ್ಸವಾಃ** 5-19-24
**ಸುರೇಶಲೋಕೋಽಪಿ ನ ವೈ ಸ ಸೇವ್ಯತಾಂ ||**
ಶ್ರ-೫-(೨೧, ೨೨, ೨೩, ೨೪)

**ಅರ್ಥ :-** ವೈಕುಂಠದೊಡೆಯನಾದ ಶ್ರೀ ವಿಷ್ಣುವಿನ ಲೀಲಾವತಾರದ ಕಥೆ ಗಳೆ ಅಮೃತದ ನದಿಯಂತೆ ಅತ್ಯಂತ ಮಧುರವಾದವುಗಳು; ಇಂಥ ಕಥಾಕಲಾಪ ಗಳು ಕೇಳಬರದಿರುವಲ್ಲಿ, ಭಾಗವತ ಧರ್ಮಗಳನ್ನಾಚರಿಸುವ ಭಗವದ್ಭಕ್ತರೂ ಹಾಗೂ ಅವರನ್ನು ಅನುಸರಿಸಿ ನಡೆಯುವ ಸಜ್ಜನರೂ ಇರದಿರುವಲ್ಲಿ, ಹಾಗೂ ಯಜ್ಞಸ್ವಾಮಿಯಾಗಿ ಯಜ್ಞಫಲಭೋಕ್ತಾರನಾದ, ಯಜ್ಞನಾಮಕ ಶ್ರೀ ವಿಷ್ಣುವಿನ ಸರ್ವೋತ್ತಮತ್ವ ಪ್ರಚಾರಕ ರೂಪವಾದ ಜ್ಞಾನಯಜ್ಞಗಳೂ, ಅಂಥ ಮಹೋ ತ್ಸವಗಳೂ ಜರುಗದಿರುವಲ್ಲಿ, ಅಂಥ ಪ್ರದೇಶವು ಇಂದ್ರನ ಸ್ವರ್ಗವಾಗಿದ್ದರೂ ಕೂಡ, (ಭಗವದ್ಭಕ್ತರಿಗೆ) ವಾಸಮಾಡಲು ಅದೆಂದಿಗೂ ಯೋಗ್ಯ ಸ್ಥಳವಾಗದು.

||೧೮೯|| **ಯದ್ಯತ್ರ ನಃ ಸ್ವರ್ಗಸುಖಾವಶೇಷಿತಂ**
**ಸ್ವಿಷ್ಟಸ್ಯ ಸೂಕ್ತಸ್ಯ ಕೃತಸ್ಯ ಶೋಭನಂ ।**
**ತೇನಾಜನಾಭೇ ಸ್ಮೃತಿಮಜ್ಜನ್ಮ ನಃ ಸ್ಯಾ-**
**ದ್ವರ್ಷೇ ಹರಿರ್ಭಜತಾಂ ಶಂ ತನೋತಿ ||** ಶ್ರ-೧೯-೧೭
೨೮

ಇದುವರೆಗೆ ಹೇಳಿದುದರ ಪ್ರಯೋಜನದ ಬಗ್ಗೆ, ತಮ್ಮ ಮನಸ್ಸಿನಲ್ಲಿರುವ ಅಭಿಪ್ರಾಯವನ್ನು ತಿಳಿಸುವರು.

ಅರ್ಥ :- ಸ್ವರ್ಗದ ಸುಖವನ್ನು ಅನುಭವಿಸಿದ ಮೇಲೆ ಹೆಚ್ಚಾಗಿ ಉಳಿದಿರುವ ಪುಣ್ಯವು, ವಿಧಿಪೂರ್ವಕವಾಡಿದ ಯಜ್ಞಗಳಿಂದ, ಸತ್ಯವಾದ ಒಳ್ಳೇ ಮಾತುಗಳನ್ನು ಆಡುವದರಿಂದ, ಹಾಗೂ ಯಜ್ಞದಾನಾದಿಕರ್ಮಗಳನ್ನು ಆಚರಿಸುವದರಿಂದ ಇವೆಲ್ಲವುಗಳಿಂದಲೂ ನಾವು ಪುಣ್ಯ ಸಂಪಾದಿಸಿದ್ದರೆ, ಆ ಪುಣ್ಯದ ಪ್ರಭಾವದಿಂದ ಪದ್ಮನಾಭನಾಮಕ ಶ್ರೀ ಹರಿಯ ಪಾದ ಸ್ಮರಣೆಗೆ ಸಾಧನವಾಗಿರುವ ಜನ್ಮವು ಭಾರತವರ್ಷದಲ್ಲಿಯೆ ಒದಗಿಬರಲಿ. ಏಕೆಂದರೆ, ಭಾರತ ವರ್ಷದಲ್ಲಿ ತನ್ನನ್ನು ನಿಷ್ಠೆಯಿಂದ ಆರಾಧಿಸುವ ಜನರಿಗೆ ಭಗವಂತನು ಅವರಿಗೆಲ್ಲರಿಗೂ ನಿತ್ಯ ಸುಖರೂಪವಾದ ಮೋಕ್ಷವನ್ನು ಯಥಾಯೋಗ್ಯವಾಗಿ ಕೊಡುವನು.

ಹೀಗೆ ಹೇಳುವರು :- (ಒಂಬತ್ತು ಭೂಭಾಗ (ವರ್ಷ) ಗಳಿರುವ ಜಂಬೂದ್ವೀಪದಲ್ಲಿ ಭಾರತ ಭೂಪ್ರದೇಶ (ವರ್ಷ) ವೇ ಮಾತ್ರ (ಮುಕ್ತಿಪ್ರಾಪ್ತಿಗೆ) ಸಾಧಕರಿಗೆ ಕರ್ಮಭೂಮಿಯಾಗಿರುವದು. ಜಂಬೂದ್ವೀಪದ ಉಳಿದ ಎಂಟು ವರ್ಷಗಳು ಸ್ವರ್ಗಸುಖವನ್ನು ಅನುಭವಿಸಿದ ಮೇಲೆ, ಮಿಕ್ಕಿದ ಪುಣ್ಯವನ್ನು ಉಪಭೋಗಿಸುವ ಭೂಪ್ರದೇಶಗಳಾಗಿವೆ. ಅಂತೆಯೆ, ಅವುಗಳಿಗೆ ಭೂಲೋಕದ (ಭೌಮ) ಸ್ವರ್ಗಗಳೆಂದು ಕರೆಯುವರು.

ಆದುದರಿಂದ, ದೇವತೆಗಳೂ ಕೂಡ, ಮುಕ್ತಿಗೆ ಸಾಧನ ಮಾಡಿಕೊಳ್ಳಲು ಇದೇ ಭರತಭೂಮಿಯನ್ನೇ ಕೇಳಿಕೊಳ್ಳುವರು. ಧರ್ಮಕ್ಷೇತ್ರ, ಕರ್ಮಕ್ಷೇತ್ರವಾಗಿರುವ ಈ ಭರತ ಭೂಮಿಯಲ್ಲಿ ಜನಿಸಿ ಬಂದ ಭಾಗ್ಯವುಳ್ಳವರು, ಅಂತಿಮ ಪುರುಷಾರ್ಥವಾಗಿರುವ ಮೋಕ್ಷಪ್ರಾಪ್ತಿಗೆ ಸಾಧನವನ್ನು ಮಾಡಿಕೊಳ್ಳುವದನ್ನೇ ತಮ್ಮ ಏಕಮೇವ ಗುರಿಯಾಗಿಟ್ಟುಕೊಳ್ಳಬೇಕು; ಅನ್ಯ ವಿಷಯಗಳತ್ತ ಕಣ್ಣೆತ್ತಿ ಕೂಡ ನೋಡಬಾರದು. ಇದುವೇ ಮುಖ್ಯವಾದ ಅಭಿಪ್ರಾಯವಾಗಿದೆ,

||೮೯೦|| ಮತಿರ್ನ ಕೃಷ್ಣೇ ಪರತಃ ಸ್ವತೋ ವಾ
ಮಿಥೋಽಭಿಪದ್ಯೇತ ಗೃಹವ್ರತಾನಾಂ ।
ಅದಾಂತಗೋಭಿರ್ವಿಶತಾಂ ತಮಿಸ್ರಂ
ಪುನಃಪುನಶ್ಚರ್ವಿತಚರ್ವಣಾನಾಂ || ೭-೫-೩೦

ಪ್ರಹ್ಲಾದರು
ಬಾಲಕರಿಗೆ

ಇಂಥ ಪುಣ್ಯಭೂಮಿಯಾದ ಭರತಖಂಡದಲ್ಲಿ ಆತ್ಮೋದ್ಧಾರದ ಸಾಧನೆಗಾಗಿ ಅಡವಿಗೆ ಹೋಗಬೇಕೆ? ಅಥವಾ ಗೃಹಸ್ಥಜೀವನವನ್ನು ನಡೆಸುತ್ತಲೆ ಸಾಧನೆಮಾಡಬಹುದೆ? ಎಂಬ ಪ್ರಶ್ನೆಗೆ, ಇವೆರಡೂ ಮಾರ್ಗಗಳು ಸಾಧನೆಗೆ ಮುಕ್ತದ್ವಾರವಾಗಿವೆ, ಎಂದು ಹೇಳುವರು. ಇವೆರಡೂ ವರ್ಗಗಳನ್ನು ಏಕಕಾಲಕ್ಕೆ ಅನು

ಸೇರಿಸುವದು ವಿಸಂಗತವಲ್ಲವೆ ? ಎಂದು ಕೇಳಿದರೆ, ಹಾಗೇನಿಲ್ಲ, ಏಕೆಂದರೆ ಇವು ಗಳಲ್ಲಿ ತಮಗೆ ಪಾತ್ರತೆಯುಳ್ಳದ್ದನ್ನೇ ಅವರು ಆಯ್ದುಕೊಳ್ಳುವದರಿಂದ, ಯಾವ ವಿರೋಧವೂ ಈ ಮಾತಿನಲ್ಲಿ ಕಾಣದು. ಈ ಮಾರ್ಗಗಳನ್ನನುಸರಿಸುವ ಅಧಿಕಾರಿಗಳ – ವ್ಯಕ್ತಿಗಳ – ಸ್ವಭಾವದಲ್ಲಿರುವ ವ್ಯತ್ಯಾಸ – ಅಂತರವನ್ನು ಈಗ್ಗೆ ತಿಳಿಸಿ ಹೇಳುವರು.

ಅರ್ಥ :– ಇಂದ್ರಿಯಗಳನ್ನು ಅಂಕಿತದಲ್ಲಿ ಇಟ್ಟುಕೊಳ್ಳಲಾರದೆ, ಅವೇ ಅವೇ ವಿಷಯ ಸುಖಗಳನ್ನು ಮತ್ತೆ ಮತ್ತೆ ಉಪಭೋಗಿಸುವದರಿಂದ ತಮಿಸ್ರಾ (ನಿತ್ಯವೂ ಗಾಢಾಂಧಕಾರ) ವೆಂಬ ನರಕಕ್ಕೆ ಸದೃಶವಾಗಿರುವ ಸಂಸಾರದಲ್ಲಿ ಬಿದ್ದು ಹೊರಳಾಡುತ್ತ, ಕೇವಲ ಕುಟುಂಬಪೋಷಣೆಯಲ್ಲಿ ತತ್ಪರರಾಗಿರುವವರಿಗೆ, ತಮ್ಮ ಸ್ವಂತ ವಿವೇಕಬುದ್ಧಿಯಿಂದಾಗಲಿ, ಅಥವಾ ಭಗವದ್ಭಕ್ತರ ಉಪದೇಶದಿಂದಾಗಲಿ ಇಲ್ಲವೆ ಓರಿಗೆಯಾದವರನ್ನು ಪರಸ್ಪರ ನೋಡಿಕೊಂಡಾಗಲಿ – ಗುಣಪೂರ್ಣನಾದ ಶ್ರೀ ಕೃಷ್ಣಪರಮಾತ್ಮನಲ್ಲಿ ಶ್ರದ್ಧಾಭಕ್ತಿಗಳಿಂದ ಕೂಡಿದ ಆಸಕ್ತಿಯು ಎಂದಿಗೂ ಉಂಟಾಗುವದಿಲ್ಲ. ಪ್ರಲ್ಹಾದರು ದೈತ್ಯಬಾಲಕರಿಗೆ ಹೇಳಿದ ಮಾತು. ?

॥೯೧॥ ತತ್ಸಾಧು ಮನ್ಯೇಽಸುರವರ್ಯ ದೇಹಿನಾಂ
ಸದಾ ಸಮುದ್ವಿಗ್ನಧಿಯಾಮಸದ್ಗ್ರಹಾತ್ ।
ಹಿತ್ವಾತ್ಮಪಾತಂ ಗೃಹಮಂಧಕೂಪಂ
ವನಂ ಗತೋ ಯದ್ಧರಿಮಾಶ್ರಯೇತ ॥ ೭-೫-೫

ಪ್ರಲ್ಹಾದ
ಹಿ. ಕ.

ಇಂದ್ರಿಯ ಜಯವಿಲ್ಲದ ಈ ಬಗೆಯ ಜನರೂ ಇರಲಿ. ಇಂಥವರು ತಮ್ಮ ಸಾಧನೆಗಾಗಿ ವನಕ್ಕೆ ಹೋಗುವದು ಅಗತ್ಯವೆ ? ಅಥವಾ ( ಸಂಸಾರಿಗಳಾಗಿ ) ಮನೆಯಲ್ಲಿ ಇದ್ದುಕೊಂಡೆ ಅವರು ತಮ್ಮ ಸಾಧನೆಯನ್ನು ನಡೆಸಬೇಕೆ ? ಈ ಪ್ರಶ್ನೆಗೆ ಉತ್ತರವನ್ನು ಹೇಳುವರು. ಪ್ರಲ್ಹಾದನು ತನ್ನ ತಂದೆ ಹಿರಣ್ಯಕಶಿಪುವಿಗೆ ಹೇಳುವನು.

ಅರ್ಥ:– ದೈತ್ಯಶ್ರೇಷ್ಠನೆ ! ಅನರ್ಥಕಾರಿಯಾದ ಈ ಸಂಸಾರ ಸುಖವನ್ನೇ ನೆಚ್ಚಿಕೊಂಡು ಯಾವಾಗಲೂ ಚಿಂತೆಗೊಳಗಾಗಿರುವ ಜನರಿಗೆ ಅಧಃಪತನಕ್ಕೆ ಕಾರಣವಾಗಿ ಹಾಳು ಕತ್ತಲೆ ಬಾವಿಯಂತಿರುವ ಈ ಪ್ರಪಂಚದ ಮೋಹವನ್ನು ತೊರೆದು ವನಕ್ಕೆ ಹೋಗಿ ಅಲ್ಲಿಯೇ ಶ್ರೀ ಹರಿಯ ಆರಾಧನೆ ಮಾಡುವದು ಅವರಿಗೆ ಸಮುಚಿತವಾದ ಮಾರ್ಗವಾಗಿದೆ.

ಎಂದು ನನ್ನ ಮತವಾಗಿದೆ. ಈ ಮಾತನ್ನು ನಾರದರು ನನಗೆ (ಪ್ರಲ್ಹಾದರಿಗೆ) ಹೇಳಿರುವರು

'ವನಂ' ಎಂಬ ಶಬ್ದಕ್ಕೆ ('ವನಂ ಸಜ್ಜನಸಂಗಮ ಲಕ್ಷಣಂ') ಭಗವದ್ಭಕ್ತರ ಸಹವಾಸವೆಂಬ ಬೇರೊಂದು ಅರ್ಥ. ಏಕೆಂದರೆ ವನದಲ್ಲಿ ವಾಸಿಸುವ ಕಾಡು ಪ್ರಾಣಿಗಳಿಗೂ (ಕೇವಲ ವನವಾಸದಿಂದ) ಶ್ರೀ ಹರಿಯ ಉಪಾಸನೆ ದೊರೆಯುವದೆಂಬ ಅಪಾರ್ಥವಾಗಬಹುದು 'ವನ' ವೆಂದರೆ 'ಸಜ್ಜನಸಂಗ'ವೆಂಬ ಅರ್ಥವೆ ಶ್ರೀ ವಿಷ್ಣುತೀರ್ಥರಿಗೆ ಅಭಿಪ್ರೇತವಾದುದು,

॥೧೯॥ **ಶಿಲೋಂಛವೃತ್ತ್ಯಾ ಪರಿತುಷ್ಟಚಿತ್ತೋ** ಶ್ರೀಕೃಷ್ಣ
**ಧರ್ಮಂ ಮಹಾಂತಂ ವಿರಜಂ ಜುಷಾಣಃ ।** ಉದ್ಧವರಿಗೆ
**ಮಯ್ಯರ್ಪಿತಾತ್ಮಾ ಗೃಹ ಏವ ತಿಷ್ಠ-**
**ನ್ನಾತಿಪ್ರಸಕ್ತಃ ಸಮುಪೈತಿ ಶಾಂತಿಂ ॥** ೧೧-೧೭-೪೩

ಸಾಧನೆಯ ಬೇರೊಂದು ಮಾರ್ಗಕ್ಕೆ ಪಾತ್ರರಾದ–ಅಧಿಕಾರಿಗಳಾದ–ಜನರು ಯಾರೆಂಬುದನ್ನು ತೋರಿಸುವರು.

ಸಂಸಾರಿಗಳಿಗೆ ನಾಲ್ಕು ಬಗೆಯ ಚರಿತಾರ್ಥದ ಸಾಧನಗಳನ್ನು ಬ್ರಹ್ಮದೇವನು ನಿರ್ಮಿಸಿರುವನು :– (೧) ವಾರ್ತಾ, (೨) ಅಸಂಚಯ, (೩) ಶಾಲೀನ, (೪) ಶಿಲೋಂಛ–ವೆಂಬವು. ಇವುಗಳಲ್ಲಿ 'ಯಾಯಾವರ' ವೆಂದು ಹೇಳಲ್ಪಡುದ ಭಿಕ್ಷಾವೃತ್ತಿಯೆ 'ವಾರ್ತಾ' (೧) ಎನಿಸುವದು. ಅಂದಿನ ದಿನವೇ ಸಂಪಾದಿಸಿದ ಜೋಳ ಮುಂತಾದ ಧಾನ್ಯವನ್ನು ಅಂದಿನ ದಿನವೇ (ಉಳಿಸದಂತೆ) ಉಪಯೋಗಿಸಿ ಬಿಡುವದಕ್ಕೆ 'ಅಸಂಚಯ' (೨) ವೆನ್ನುವರು. ಒಂದು ವರುಷದವರೆಗೆ **ಜೀವನಕ್ಕೆ** ಬೇಕಾಗುವಷ್ಟು ಜೋಳ ಮುಂತಾದ ಕಾಳುಕಡಿಗಳನ್ನು ಬುಟ್ಟಿ – ಪೆಟ್ಟಿಗೆಗಳಲ್ಲಿ ಸಂಗ್ರಹ ಮಾಡುವದಕ್ಕೆ 'ಶಾಲೀನ' (೩) ವೆಂಬ ಹೆಸರು. ರಾಶಿಯನ್ನು ಮುಗಿಸಿ ಒಕ್ಕಲಿಗರು ಕಾಳನ್ನು ಮನೆಗೆ ಸಾಗಿಸಿದ ನಂತರ, ರಾಶಿಯ ಕಣದಲ್ಲಿ ಬಿಟ್ಟಿರುವ ಬತ್ತ ಮುಂತಾದ ಕಾಳುಕಡಿಗಳನ್ನು ಹೆಕ್ಕಿತಂದು ಉಪಜೀವಿಸುವದೇ 'ಶಿಲೋಂಛ' (೪) ವೃತ್ತಿಯಾಗಿದೆ.

**ಅರ್ಥ:–** ( ಈ ನಾಲ್ಕು ಬಗೆಯ ವೃತ್ತಿಗಳಲ್ಲಿ ಯಾವುದಾದರೊಂದು ) ಶಿಲೋಂಛ ವೃತ್ತಿಯಿಂದ (ಯದೃಚ್ಛಯಾ, ವಿಶೇಷ ಪರಿಶ್ರಮವಿಲ್ಲದೆ) ದೊರೆಯುವ ಆಹಾರ ದ್ರವ್ಯಗಳಿಂದ ಸಂತುಷ್ಟ ಮನಸ್ಸುಳ್ಳವರಾಗಿ (ಅಂದರೆ ಇಂದ್ರಿಯಗಳನ್ನು

ತಮ್ಮ ಸ್ವಾಧೀನದಲ್ಲಿ ಇಟ್ಟುಕೊಳ್ಳುವವರಾಗಿ), ಆ ವೃತ್ತಿಯು ಮೂಲಕವಾಗಿಯೇ ಪಾಪಕೃತ್ಯಗಳಿಗೆ ಇಂಬಿಲ್ಲದ ಹಾಗೂ ಪರಮ ಪುರುಷಾರ್ಥವಾದ ಮೋಕ್ಷವನ್ನು ತಂದು ಕೊಡುವ, (ನಿವೃತ್ತ) ಧರ್ಮವನ್ನು ಆಚರಿಸುವರಿಗೆ, ಅದರಂತೆಯೆ ನನಗಾಗಿ (ಶ್ರೀ ಹರಿ ಸೇವೆಗಾಗಿ) ತಮ್ಮ ತನುಮನಗಳನ್ನು ಸಂಪೂರ್ಣವಾಗಿ ಸಮರ್ಪಿಸಿದ ವರಿಗೆ, (ಹೀಗೆ ಮಾಡುವದರಿಂದ) ಜೀವನಕ್ಕೆ ಅತ್ಯಗತ್ಯವಾದುದಕ್ಕಿಂತಲೂ ಹೆಚ್ಚಿನ ಎಲ್ಲ ವಿಷಯಗಳಲ್ಲಿ ನಿರಾಸಕ್ತರಾಗಿರುವರಿಗೆ – ಇವೆಲ್ಲವುಗಳಿಂದ ಯುಕ್ತರಾದ ಅಧಿಕಾರಿ ವ್ಯಕ್ತಿಗಳು ಮನೆಯಲ್ಲಿಯೆ (ನೀರಿನ ಲೇಪವಿಲ್ಲದ ಕಮಲದಂತೆ) ನಿಂತು ಕೊಂಡು ಸಂಸಾರ ಬಂಧನದಿಂದ ಬಿಡುಗಡೆ ಹೊಂದುವರು, ಪರಿಪೂರ್ಣ ಶಾಂತಿ ರೂಪವಾದ ಮೋಕ್ಷವನ್ನು ಪಡೆಯುವರು. ಆದುದರಿಂದ ಅಂಥವರಿಗೆ ಗೃಹಸ್ಥಾ ಶ್ರಮಿಗಳಾಗಿ ಇದ್ದುಕೊಂಡು – ಮನೆ ಮಡದಿಗಳನ್ನು ತ್ಯಜಿಸದೆ, ಅರಣ್ಯಕ್ಕೆ ಹೋಗದೆಯೆ ನಿವೃತ್ತ (ಭಾಗವತ) ಧರ್ಮವನ್ನು ಆಚರಿಸುವದೇ ಸಮುಚಿತ ವಾದ ಸಾಧನಮಾರ್ಗವಾಗಿದೆ.

ಸಾರಾಂಶವೆಂದರೆ,–ಮನೆಮಾರು ಬಿಟ್ಟು (ಸಾಧನಕ್ಕಾಗಿ) ಅಡವಿಗೆ ಹೋಗು ವದನ್ನು ಒಂದು ರೂಢಿ–ಸಾಂಪ್ರದಾಯವೆಂದು ಮಾಡಬೇಕಿಲ್ಲ. ಹಾಗಾದರೆ, ವನಕ್ಕೆ ಹೋಗಬೇಕಾದ ಅಗತ್ಯವೇನು ? ಎಂದು ಕೇಳಿದರೆ, ಇಂದ್ರಿಯಗಳನ್ನು ಅಂಕಿತ ದಲ್ಲಿ ಇಟ್ಟುಕೊಳ್ಳದ ಸಂಸಾರಿಗಳಿಗೆ, ವಿಷಯ ಭೋಗಗಳತ್ತ (ಸ್ವಾಭಾವಿಕ ವಾಗಿಯೆ) ಹರಿಯುವ ಮನಸ್ಸನ್ನು ನಿಗ್ರಹಿಸಿ ಶ್ರೀ ಹರಿಯ ಚರಣಗಳಲ್ಲಿ ನಿಲ್ಲಿಸಲು ಶಕ್ಯವಾಗದು. ವಿಷಯಭೋಗದ ಸಂಸರ್ಗವಿಲ್ಲದ ವನವನ್ನು ತಮ್ಮ ಸಾಧನೆಗಾಗಿ ಅವರು ಆಶ್ರಯಿಸಬೇಕೆಂದು ಹೇಳಿರುವದು ಇದೇ ಕಾರಣದಿಂದ, ಪ್ರಪಂಚದ ಲ್ಲಿಯೇ ನಿಂತುಕೊಂಡು ತಮ್ಮ ಚಿತ್ತವೃತ್ತಿಯನ್ನು ಪರಮಾತ್ಮನಲ್ಲಿ ಪೂರ್ಣವಾಗಿ ನೆಲೆಸುವಂತೆ ಮಾಡಲು ಅವರು ಶಕ್ತರಾದರೆ, ತಮ್ಮ ಸಾಧನೆಗಾಗಿ ವನಕ್ಕೇನೆ ಅವರು ಹೋಗುವ ಅಗತ್ಯವಿಲ್ಲ. ಪ್ರಪಂಚದಲ್ಲಿ ಇದ್ದುಕೊಂಡೇ (ಶ್ರೀ ಹರಿಪಾದ ಗಳಲ್ಲಿ) ಈ ಬಗೆಯ ಚಿತ್ತವೃತ್ತಿಯನ್ನು ಪಡೆಯಲು ಸಾಧ್ಯವಿಲ್ಲದವರು ಅಗತ್ಯ ವಾಗಿ ವನಕ್ಕೆ ಹೋಗಬಹುದು.

॥೧೯೪॥ **ಯದ್ವಾಂಛಯಾ ನೃಪಶಿರೋಮಣಯೋಽಂಗವೈನ್ಯ**
**ಜಾಯಂತನಾಹುಷಗಯಾದಯ ಐಕಪತ್ಯಂ |**
**ರಾಜ್ಯಂ ವಿಸೃಜ್ಯ ವಿವಿಶುರ್ವನಮಂಬುಜಾಕ್ಷ**
**ಸೀದಂತಿ ನಾನುಪದವೀಂ ತ ಇಹಾಸ್ಥಿತಾಃ ಕಿಂ ॥ ೧೦.೬೦-೪೧**

ಇಲ್ಲಿ ಬರುವ ಒಂದು ಆಕ್ಷೇಪವನ್ನು ಹೀಗೆ ನಿವಾರಿಸುವರು :- ಇಲ್ಲಿ ಹೇಳಿರುವ ಎರಡು ಸಾಧನಮಾರ್ಗಗಳಲ್ಲಿ,- ಮನೆ ಮಾರುಗಳನ್ನು ಬಿಟ್ಟು ವನಕ್ಕೆ ಹೋಗದೆಯೆ ಪ್ರಪಂಚದಲ್ಲಿ ಇದ್ದುಕೊಂಡೇ ಪರಮಾತ್ಮನ ಉಪಾಸನೆ ಮಾಡಬೇಕೆನ್ನುವದೇ ಯೋಗ್ಯವೆನಿಸುತ್ತದೆ. ಏಕೆಂದರೆ, ಮನೆ ಮಾರುಗಳನ್ನು ಬಿಟ್ಟು ಸಾಧನಕ್ಕಾಗಿ ವನಕ್ಕೇ ಹೋಗಬೇಕೆನ್ನುವದು ಅಷ್ಟೊಂದು ಸರಿಯಾಗಿ ತೋರುವದಿಲ್ಲ, ವನದಲ್ಲಿ ವಾಸಿಸಿ, ಶ್ರೀ ಹರಿಯ ಆರಾಧನೆಯನ್ನು ಮಾಡುವದರಿಂದ ಪರಮ ಪುರುಷಾರ್ಥವನ್ನು ಪಡೆಯುವಂತಿದ್ದರೆ, ನಿಃಶಂಕವಾಗಿ ಹಾಗೆ ಮಾಡಬಹುದಿತ್ತು. ಆದರೆ, ವನದಲ್ಲಿ ಇದ್ದುಕೊಂಡೂ ಅದನ್ನು ಪಡೆಯದೇ ಹೋದರೆ, ವನದಲ್ಲಿ ಪಡುವ ಶ್ರಮ-ಕಷ್ಟಗಳೆಲ್ಲ ನಿರರ್ಥಕವಾಗುವವು. ಅಂಥವರಿಗೆ ದೈವವೆ ಪ್ರತಿಕೂಲವಾಗಿರುವಂತೆ ಕಂಡುಬರುವದು. ಶ್ರೀ ಹರಿಯಲ್ಲಿ ಚಿತ್ತವನ್ನು ನಿಲ್ಲಿಸುವದರಿಂದ ದೊರೆಯುವ ಮನಸ್ಸಿನ (ಶಾಂತಿ) ಪ್ರಸನ್ನತೆ ಪ್ರಾಪಂಚಿಕ ಜೀವನದಲ್ಲಿ ದೊರೆಯುವದಿಲ್ಲ. ಆದುದರಿಂದಲೆ, ಸಂಸಾರದ ಅಗಣಿತ ವಿವಿಧತಾಪಗಳಿಂದ ಬೆಂದು ಬಳಲುವರು. ಈ ಬಹುಮುಖ ತಾಪಪೀಡೆಗಳಿಂದ ಪಾರಾಗಲು ವನದಲ್ಲಿ ನೆಲೆಸಿದರೆ, ಅಲ್ಲಿಯೂ ಕೂಡ, ಅದಕ್ಕಿಂತಲೂ ಅನೇಕಪಟ್ಟು ಅಧಿಕವಾದ ತೊಂದರೆಯು (ಅನಿಯಂತ್ರಿತ ಇಂದ್ರಿಯಗಳಿಂದ) ಉಂಟಾಗಬಹುದು. ಸೂರ್ಯನ ಬಿಸಿಲಿನಿಂದ ತನ್ನ ಬೋಳು ತಲೆಯು ಕಾದುಕಿಡಿಯಾಗಲು, ಬಿಸಿಲನ್ನು ತಪ್ಪಿಸಲು ತಾಳಗಿಡದ ನೆರಳಿನಲ್ಲಿ ನಿಂತಾಗ, (ದೊಡ್ಡದೊಂದು) ತಾಳದ ಹಣ್ಣು (ಎತ್ತರದಿಂದ) ಬಿದ್ದರೆ, ಬಿಸಿಲಿನ ತಾಪಕ್ಕಿಂತಲೂ ಅಧಿಕ ಸಂಕಟವು ಆತನಿಗೆ ಒದಗಿದಂತಾಗುವದು. ಮನೆಬಿಟ್ಟು ವನಕ್ಕೆ ಹೋಗುವವರ ಸ್ಥಿತಿಯೂ ಹೀಗೇ ಆಗಬಹುದೆಂದು ಆಕ್ಷೇಪಿಸಿದರೆ - ಅದಕ್ಕೆ ಸಮಾಧಾನವನ್ನು ಹೇಳುವರು: ಈ ಯೋಚನೆ ನಿಮಗೆ ಸಂತಾಪಕರವಲ್ಲವೆ ? ಆದರೆ ಈ ಯೋಚನೆಗೆ ಎಳ್ಳಷ್ಟು ಆಸ್ಪದವಿಲ್ಲ. ಏಕೆಂದರೆ, ಶ್ರೀ ಹರಿಚರಣಗಳನ್ನು ಆಶ್ರಯಿಸಿದವರಿಗೆ ಕದಾಚಿತ್ (ಒಮ್ಮೊಮ್ಮೆ) ಪುರುಷಾರ್ಥವು ದೊರೆಯದಿರಬಹುದು ಎಂಬುದು ನಿಮ್ಮ ಅಭಿಪ್ರಾಯವಾಗಿದ್ದರೆ, ನಿಮ್ಮ ಅಭಿಪ್ರಾಯವು ಖಂಡಿತವಾಗಿ ತಪ್ಪಾಗಿರುವದು. ಏಕೆಂದರೆ ಶ್ರೀ ಹರಿ ಚರಣಗಳಿಗೆ ತ್ರಿಕರಣಪೂರ್ವಕವಾಗಿ ಶರಣು ಹೋಗುವವರಿಗೆ ಅವರು ಬಯಸುವ (ಮೋಕ್ಷದ) ಪುರುಷಾರ್ಥವು ಯಾರಿಗಾದರೂ ದೊರೆಯದಿದ್ದುದು ಎಲ್ಲಿಯೂ ಕಂಡುಬರುವದಿಲ್ಲ. ಆದುದರಿಂದ ಅಂಥವರು ವನಕ್ಕೆಹೋಗಿ ಶ್ರೀ ಹರಿಯನ್ನು ಆರಾಧಿಸಬೇಕೆಂಬುವದು ಸಮಂಜಸವೇ ಆಗಿದೆ. ಎಂಬ ಭಾವವು ಈ ಶ್ಲೋಕದಲ್ಲಿದೆ.

**ಅರ್ಥ:–** **ಕಮಲದಂತೆ ಕಣ್ಣುಳ್ಳವನೆ !** ಎಂದು ರುಕ್ಮಿಣಿಯು ಶ್ರೀ ಕೃಷ್ಣನಿಗೆ ಹೇಳುವಳು. ಒಮ್ಮೆ ಶ್ರೀ ಕೃಷ್ಣ ರುಕ್ಮಿಣಿಯರು ಏಕಾಂತದಲ್ಲಿ ಸರಸ ಸಲ್ಲಾಪದಲ್ಲಿ ತೊಡಗಿದಾಗ್ಗೆ, ವಿನೋದದ ರೀತಿಯಲ್ಲಿ ಶ್ರೀ ಕೃಷ್ಣನು ರುಕ್ಮಿಣಿಗೆ ಹೇಳುವನು 'ಮಹಾಸಾಮ್ರಾಜ್ಯದ ದೊರೆಗಳನ್ನೆಲ್ಲ ಬಿಟ್ಟುಕೊಟ್ಟು ಬಡವನಾದ ( ರಾಜ್ಯರಹಿತನಾದ) ನನ್ನನ್ನು ಏಕೆ ವರಿಸಿದೆ ?' ಎಂಬ ಪ್ರಶ್ನೆಗೆ ರುಕ್ಮಿಣಿಯು ಕೊಟ್ಟ ಉತ್ತರವಿದು.

'ಕಮಲನೇತ್ರನಾದ ಶ್ರೀ ಕೃಷ್ಣಾ! ನಿನ್ನ ಪಾದವನ್ನು ಸೇವಿಸಬೇಕು, ಸೇರಬೇಕು, ಎಂಬ ಬಯಕೆಯಿಂದ ಶ್ರೇಷ್ಟ ರಾಜರಾದ ಅಂಗ, ವೇನನ ಮಗನಾದ ಪೃಥುರಾಜ, ಭರತ, ನಹುಷನ ಮಗನಾದ ಯಯಾತಿ ಮುಂತಾದ ರಾಜರು ಏಕ ಛತ್ರಾಧಿಪತ್ಯದ ತಮ್ಮ ಅಖಂಡ ಸಾಮ್ರಾಜ್ಯವನ್ನು ತೊರೆದು (ನಿನ್ನ ಚರಣಸೇವೆಗಾಗಿ ) ವನದಲ್ಲಿ ನೆಲಸಿದರು. ಇವರೆಲ್ಲರೂ ತಮತಮಗೆ ಅನುಗುಣವಾದ ಪುರುಷಾರ್ಥವನ್ನು (ಮುಕ್ತಿಯನ್ನು) ಪಡೆಯದೆ ಕಾಡಿನಲ್ಲಿಯೇ ಕಷ್ಟಪಟ್ಟರೆ ? ಎಂದಿಗೂ ಇಲ್ಲ. ಎಂಬ ಅರ್ಥ, ಅವರೆಲ್ಲ ಸ್ವಯೋಗ್ಯತೆಗೆ ಅನುಗುಣವಾದ ಪದವಿಯನ್ನು ಪಡೆದು ಮುಕ್ತರಾದರು, ಮುಕ್ತಿಯ ನಿರತಿಶಯ ಸುಖವನ್ನು ನಿಶ್ಚಿತವಾಗಿ ಪಡೆದರು.

ಹೀಗಿರಲು, ನಾನು ಕೈಹಿಡಿದ ನೀನು ದರಿದ್ರನೆ ? ನಿನ್ನ ಪಾದವನ್ನು ನಂಬಿದ ನನಗೆ ಕಷ್ಟವೆಂಬುವದುಂಟೆ ? ನಿನ್ನ ಪಾದಸೇವನೆಯಿಂದ ಎಲ್ಲ ಸಂಪತ್ತುಗಳಿಂದಲೂ ಅನಂತಪಟ್ಟು ಅಧಿಕವಾದ ಮುಕ್ತಿಯ ಭಾಗ್ಯವು ನನಗೆ ದೊರೆತಿರುವದು – ಶ್ರೀ ಕೃಷ್ಣನ ವಿನೋದದ ಪ್ರಶ್ನೆಗೆ ರುಕ್ಮಿಣಿಯು ಕೊಟ್ಟ ಮಾರ್ಮಿಕ ಉತ್ತರವಿದು.

'ದೇಶಪ್ರಶಂಸಾ' ಪ್ರಕರಣವು ಮುಗಿಯಿತು.



# ೧೫. ಕಾಲ ಪ್ರಶಂಸಾ ಪ್ರಕರಣ

||೧೯೪|| ಕಲೌ ನ ರಾಜನ್ ಜಗತಾಂ ಪರಂ ಗುರುಂ
ತ್ರಿಲೋಕನಾಥಾನತಪಾದಪಂಕಜಂ ।
ಪ್ರಾಯೇಣ ಮರ್ತ್ಯಾ ಭಗವಂತಮಚ್ಯುತಂ
ಯಕ್ಷ್ಯಂತಿ ಪಾಖಂಡವಿಭಿನ್ನಚೇತಸಃ || ೧೨-೩-೪೩

ಪರೀಕ್ಷಿತ ರಾಜನಿಗೆ ಶ್ರೀ ಶುಕರು ಯುಗಧರ್ಮಗಳನ್ನು ವಿವರಿಸುವರು —

ಸಾಧನೆಯ ದೃಷ್ಟಿಯಿಂದ ಭರತಭೂಮಿಗೆ ಮಹತ್ವವಿರುವಂತೆ, ಸಾಧನೆಗಾಗಿ ಒಂದು ಕಾಲಕ್ಕೂ ಪ್ರಾಶಸ್ತ್ಯವಿರುವದು; ಭರತ ಭೂಮಿಯಲ್ಲಿ ಜನನವು ದುರ್ಲಭವಾಗಿರುವಂತೆ, ಜನಿಸುವ ಕಾಲವೂ ಅಷ್ಟೇ ದುರ್ಲಭವಾದುದು. ಇವೆರಡೂ ದುರ್ಲಭ ಸಂಗತಿಗಳು ಒದಗಿದ್ದಾಗ್ಗೆ, ಮಾನವ ಜನ್ಮದಲ್ಲಿ ಯಾವುದನ್ನು (ಮೋಕ್ಷರೂಪವಾದ ಪುರುಷಾರ್ಥವನ್ನು) ಪಡೆಯಲೇಬೇಕೊ, ಅದನ್ನು ಪಡೆದುಕೊಳ್ಳಬೇಕು. ಹೀಗೆ ಮಾಡದೆ, ಮಾನವ ಜನ್ಮವನ್ನು ಹಾನಿ ಮಾಡುವವರನ್ನು ಹಳಿಯುತ್ತಾರೆ.

ಅರ್ಥ :— (ಪರೀಕ್ಷಿತ) ರಾಜನೆ ! (ಸಾಧನಕ್ಕೆ ಸುಲಭವಾಗಿರುವ) ಇಂಥ ಕಲಿಯುಗದಲ್ಲಿಯೂ, ಅವೈದಿಕ, ಅನೀಶ್ವರ ಮತಗಳ ಪ್ರಭಾವದಿಂದ ದೂಷಿತ ಮನಸ್ಸುಳ್ಳವರಾಗಿ ಮೂರು ಲೋಕಗಳ ಒಡೆಯರಾದ ದೇವತೆಗಳಿಂದ ನಮಸ್ಕರಿಸಲ್ಪಡುವ ಪಾದಕಮಲಗಳುಳ್ಳವನು, ( ಅಜ್ಞಾನವನ್ನು ನಿವಾರಿಸಿ ) ಜಗತ್ತಿನ ಜನರಿಗೆ ಜ್ಞಾನದ ಬೆಳಕನ್ನು ಕೊಡುವ ಪರಮ ಗುರುವಾದವನು, ನಾಶರಹಿತನೂ ( ಅಬಾಧಿತ ಷಡ್ಗುಣೈಶ್ವರ್ಯವುಳ್ಳವನು ) ಆಗಿರುವ ಭಗವಂತನನ್ನು ಮರಣಾಧೀನರಾದ ಮಾನವರು ಸಾಮಾನ್ಯ (ಬಹುತೇಕ) ವಾಗಿ ಆರಾಧಿಸುವದಿಲ್ಲ.

||೧೯೫|| ಯನ್ನಾಮಧೇಯಂ ಮ್ರಿಯಮಾಣ ಆತುರಃ
ಪತನ್ ಸ್ಖಲನ್ವಾ ವಿವಶೋ ಗೃಣನ್ ಪುಮಾನ್ ||
ವಿಮುಕ್ತಕರ್ಮಾರ್ಗಲ ಉತ್ತಮಾಂ ಗತಿಂ
ಪ್ರಾಪ್ನೋತಿ ಯಕ್ಷ್ಯಂತಿ ನ ತಂ ಕಲೌ ಜನಾಃ || ೧೨-೩-೪೪

ಈ ಕಲಿಯುಗದಲ್ಲಿ ಭಗವಂತನ ನಾಮಸಂಕೀರ್ತನದಿಂದಲೆ ಮಾನವ ಜೀವನದ ಧ್ಯೇಯವಾದ ಪುರುಷಾರ್ಥವು (ಸಂಸಾರದಿಂದ ಬಿಡುಗಡೆಯು) ಸಿದ್ಧಿಸುವದು. ಹೀಗೆ ಸಾಧನೆಗೆ ಸುಲಭವೂ ಅನುಕೂಲವೂ ಆಗಿರುವ ಇಂಥ ಕಲಿಯುಗದಲ್ಲಿ ತನ್ನ ಕಾರ್ಯಸಿದ್ಧಿಯನ್ನು ಮಾಡಿಕೊಳ್ಳದೆ ವ್ಯರ್ಥವಾಗಿ ಜೀವಿಸುವವನು ಬುದ್ಧಿವಂತನೆನಿಸಲಾರನು,

**ಅರ್ಥ:-** ಸಾವಿನ ದವಡೆಯಲ್ಲಿದ್ದವನು, ಬೇನೆಯಿಂದ ಬಳಲುತ್ತಿರುವವನು, (ನಡೆಯುವಾಗ್ಗೆ) ಎಡಹುವವನು, ಮುಗ್ಗರಿಸುವವನು, ಅಸಹಾಯನಾಗಿ ತನ್ನ ದೇಹದಮೇಲೆ ತನಗೇ ನಿಯಂತ್ರಣವಿಲ್ಲದವನು, ತನ್ನ ಪ್ರಯತ್ನದಿಂದಾಗಲಿ ಅಥವಾ ಬೇರೊಬ್ಬರ ಪ್ರಚೋದನೆಯಿಂದಾಗಲಿ ಯಾರ (ಶ್ರೀ ಹರಿಯ) ನಾಮೋಚ್ಚಾರಣ ಮಾತ್ರದಿಂದ ಕರ್ಮಪಾಶದಿಂದ ಪೂರ್ಣವಾಗಿ ಬಿಡುಗಡೆ ಹೊಂದಿ ಶ್ರೇಷ್ಠವಾದ ಸದ್ಗತಿ (ಮುಕ್ತಿ) ಯನ್ನು ಪಡೆಯುವನು, ಇಷ್ಟೊಂದು ಮಹಾಮಹಿಮನಾದ, (ಕಲಿಯುಗದಲ್ಲಿಯೂ ಕೂಡ) ಶ್ರೇಷ್ಠ ಸದ್ಗತಿಯನ್ನು ಕೊಡಲು ಸಮರ್ಥನಾದ ಶ್ರೀ ಹರಿಯನ್ನು ಜನರು ಆರಾಧಿಸುವದಿಲ್ಲ.

ಹೀಗೆ ಹೇಳಿರುವರು:-'ಕಲೌ ದೋಷನಿಧೆ ಮುಕ್ತಬಂಧಃ ಪರಂ ವ್ರಜೇತ್' ಕಲಿಯಲ್ಲಿ ಸಕಲ ದೋಷಗಳು ತುಂಬಿಕೊಂಡಿದ್ದರೂ, ಆತನಲ್ಲಿ ಒಂದು ಒಳ್ಳೇ ದೊಡ್ಡ ಗುಣವಿರುವದು. ಅದೆಂದರೆ- ಶ್ರೀ ಕೃಷ್ಣನ ನಾಮ ಸಂಕೀರ್ತನ ಮಾತ್ರದಿಂದಲೆ, ಹುಟ್ಟು-ಸಾವುಗಳ ಸುತ್ತಿನಿಂದ ಬಿಡುಗಡೆ ಹೊಂದಿ ಮಾನವನು ಪರಮಗತಿ (ಮುಕ್ತಿ) ಯನ್ನು ಪಡೆಯುವನು.

**||೧೮೬|| ಯೋಽಯಂ ಕಾಲಸ್ತಸ್ಯ ತೇಽವ್ಯಕ್ತಬಂಧೋ** ದೇವಕೀ
**ಚೇಷ್ಟಾಮಾಹುಶ್ಚೇಷ್ಟತೇ ಯೇನ ವಿಶ್ವಂ |** ಕೃಷ್ಣನ
**ನಿಮೇಷಾದಿರ್ವತ್ಸರಾಂತೋ ಮಹಿಯಾಂ**
**ಸ್ತಂ ತ್ವೇಶಾನಂ ಕ್ಷೇಮಧಾಮ ಪ್ರಪದ್ಯೆ ||** ೧೦-೪-೧೭
3-16

ಕಲಿಯುಗದಲ್ಲಿ ( ವೈದಿಕ-ನಾಸ್ತಿಕ ) ಪಾಖಂಡ ಮತಗಳ ಪ್ರಭಾವದಿಂದ ಜನರು ಶ್ರೀ ಹರಿಯ ಆರಾಧನೆ - ಉಪಾಸನೆ ಮಾಡುವದಿಲ್ಲವೆಂದು ಹಿಂದೆ ಹೇಳಿದುದು - ಕೇವಲ ಒಂದು ನೆಪ - ನಿಮಿತ್ತ ಮಾತ್ರ. ನಿಜವಾದ ಸಂಗತಿಯೆಂದರೆ, ಕಾಲನಾಮಕ ಶ್ರೀ ಹರಿಯ ಪರಮಾನುಗ್ರಹವನ್ನು ಪಡೆದ ಸುಜೀವಿಗೆ ಹರಿಯು ತನ್ನ ಬಗ್ಗೆ ಶ್ರದ್ಧಾ-ಭಕ್ತಿಗಳಿಂದ ಕೂಡಿದ ಸನ್ಮತಿಯನ್ನು ತಾನಾ

ಗಿಯೆ ಕೊಟ್ಟುಬಿಡುವನು. ಆದುದರಿಂದ ಆಯುರಾರೋಗ್ಯಾದಿಗಳನ್ನು ಕೊಟ್ಟು ಸಾಧನಮಾರ್ಗದಲ್ಲಿ ಬರುವ ಎಡರುತೊಡರುಗಳನ್ನೆಲ್ಲ ನಿವಾರಿಸಿ, ಸಾಧನ ಮಾರ್ಗದಲ್ಲಿ (ನಿರಾತಂಕವಾಗಿ) ಮುನ್ನಡೆಸುವನು, ಶ್ರೀ ಹರಿಯೇ ಆಗಿರುವನೆಂಬ ದೃಢವಾದ ಜ್ಞಾನವನ್ನು ಪಡೆಯಬೇಕು, ಎಂಬ ಅಭಿಪ್ರಾಯವು ಈ ಶ್ಲೋಕದಲ್ಲಿ ಅಡಗಿದೆ. ಕೃಷ್ಣನಿಗೆ ದೇವಕಿಯು ಹೇಳಿದ ಮಾತು ಇದು.

**ಅರ್ಥ** :–'(ಬಾಹ್ಯೇಂದ್ರಿಯಗಳಿಗೆ ಕಾಣದ) ಸಕಲ ಜೀವಿಗಳನ್ನೂ ಸಲುಹುವ ಅನಿಮಿತ್ತ ಬಂಧುವೆ! ರೆಪ್ಪೆ ಹಾಕುವಷ್ಟು ಒಂದು ಗಳಿಗೆಯೆಂಬ ಅತಿ ಸೂಕ್ಷ್ಮ ಅವಧಿಯಿಂದ ಒಂದು ವರ್ಷದ ವರೆಗೆ ನಡೆಯುವ ಈ ಕಾಲಕ್ರಮವು ನಿನ್ನ ಪ್ರೇರಣೆ ಯಿಂದಲೆ ನಡೆಯುವದೆಂದು ಜ್ಞಾನಿಗಳು ನಂಬುವರು ಈ ಜಗಚ್ಚಕ್ರವು ನಿನ್ನಿಂದಲೆ ಚಲಿಸುತ್ತಿದೆ. ಕಾಲವು ಕಾಲಾಧಿಪತಿಯಾದ ನಿನಗೆ ಅಧೀನ, ಅದು ಸ್ವತಂತ್ರ ವಾದುದಲ್ಲ. ಸರ್ವ ಪ್ರೇರಕ ಶಕ್ತಿಯು ನಿನ್ನದೇ ಎಂಬುದನ್ನು ಪ್ರಮಾಣಗಳು ಸಾರುವವು ಆದುದರಿಂದ ಕಾಲಕ್ಕೆ ಗತಿಕೊಟ್ಟು ಕಾಲಕ್ಕೇನೆ ನಿಯಾಮಕನಾದ, ಸರ್ವಸ್ವಾಮಿಯಾದ, ಮಂಗಳ (ಕ್ಷೇಮದ) ಧಾಮ (ನೆಲೆ) ನಾದ ನಿನ್ನನ್ನು (ಈಗಿನ) ಕಾಲಕ್ಕೆ ಹೆದರಿ, ನಾನು (ದೇವಕಿಯು) ಶರಣು ಹೊಕ್ಕಿರುವೆ.



3 ಶ್ಲೋಕ

# ೧೬. ದೇಹ ಪ್ರಶಂಸಾ ಪ್ರಕರಣ

||೧೯೭|| ಸೃಷ್ಟ್ವಾ ಪುರಾಣಿ ವಿವಿಧಾನ್ಯಜಯಾSSತ್ಮಶಕ್ತ್ಯಾ
ವೃಕ್ಷಾನ್ ಸರೀಸೃಪಪಶೂನ್ ಖಗದಂಶಮತ್ಸ್ಯಾನ್ |
ತೈಸ್ತೈರತುಷ್ಟಹೃದಯಃ ಪುರುಷಂ ವಿಧಾಯ
ಬ್ರಹ್ಮಾವಲೋಕಧಿಷಣಂ ಮುದಮಾಪ ದೇವಃ || 11-9.

ಪರಮಾರ್ಥ ಸಾಧನೆಗೆ ಅನುಕೂಲವಾದ ದೇಶ, ಅನುಕೂಲವಾದ ಕಾಲ ದುರ್ಲಭವಾಗಿ, ಅಪರೂಪವಾಗಿ (ಪರಮಾತ್ಮನ ಅನುಗ್ರಹದಿಂದ) ದೊರೆಯುವಂತೆ ಪುರುಷಾರ್ಥ ಸಾಧನೆಗೆ ಅನುಕೂಲವಾದ (ಮಾನವ) ದೇಹವೂ ಕೂಡ, (ದುರ್ಮಿಳವಾಗಿ) ಆತನ ಅನುಗ್ರಹದಿಂದಲೆ ದೊರೆಯುವದು. 'ಮಾನವ ಜನ್ಮ ದೊಡ್ಡದು, ಹಾನಿಮಾಡಿಕೊಳ್ಳಬೇಡಿ' ಎಂದು ದಾಸವರ್ಯರೂ ಎಚ್ಚರಿಸುವರು. ಇಂಥ ದುರ್ಮಿಳವಾದ ಜನ್ಮವು-ಮಾನವ ಶರೀರವು-ದೊರಕಿರುವಾಗಲೆ. ಈ ದೇಹದಿಂದ ಮಾಡಿಕೊಳ್ಳಬೇಕಾಗಿರುವ ಮುಖ್ಯ ಕಾರ್ಯವನ್ನು, ಮುಕ್ತಿಗಾಗಿ ಸಾಧನೆಯನ್ನು, ಆಸ್ಥೆ-ಆಸಕ್ತಿಪೂರ್ವಕವಾಗಿ ಮಾನವರು ಮಾಡಿಕೊಳ್ಳಬೇಕು. ಎಂಬುದನ್ನು ತೋರಿಸುವದೇ ಈ ಪ್ರಕರಣದ ಅಭಿಪ್ರಾಯವಾಗಿದೆ. ಜೀವಿಗಳು ಪುರುಷಾರ್ಥ ಸಾಧನೆಯನ್ನು ಮಾಡಿಕೊಳ್ಳಗೋಸುಕವೆ ಶ್ರೀ ಹರಿಯು ಈ ಮಾನವ ಶರೀರವನ್ನು ನಿರ್ಮಾಣ ಮಾಡಿದನು. ಆದುದರಿಂದ ಆ ಸಾಧನೆಗಾಗಿಯೆ ಈ ಮಾನವ ಶರೀರವನ್ನು ಬಳಸುವದು ಯುಕ್ತವಾದುದು.

ಅರ್ಥ :- ತನಗೆ ಅಧೀನವಾದ ಪ್ರಕೃತಿಯಿಂದ, ( ಪ್ರಕೃತಿಗೆ ಅಭಿಮಾನಿಯಾದ ಲಕ್ಷ್ಮೀದೇವಿಯಿಂದ) ಕೂಡಿಕೊಂಡು ಸ್ವರೂಪಭೂತವಾದ ತನ್ನ ಅಚಿಂತ್ಯಾದ್ಭುತ ಶಕ್ತಿಯಿಂದ ಗಿಡಗಳನ್ನು, ನೆಲದಮೇಲೆ (ನಡೆಯದೆ) ಹರಿದಾಡುವ ಪ್ರಾಣಿಗಳನ್ನು, ಓಡಾಡುವ ಪಶುಗಳನ್ನು, ಹಾರಾಡುವ ಪಕ್ಷಿಗಳನ್ನು, ಕಚ್ಚುವ ಹಾಗೂ ಈಜುವ ಪ್ರಾಣಿವರ್ಗಗಳನ್ನು, ಈ ಬಗೆಯ ಜೀವ ವರ್ಗಗಳ ವಿಧವಿಧದ ಶರೀರಗಳನ್ನು ಪರಮಾತ್ಮನು (ಮೊದಲು) ಸೃಷ್ಟಿಸಿದನು. ಆದರೆ ಇವೆಲ್ಲ ಶರೀರಗಳಲ್ಲಿ ಯಾವ ಶರೀರವೂ ಪರಮಾತ್ಮನ ಮನಸ್ಸಿಗೆ ಸಂತೋಷವನ್ನು ತಂದುಕೊಡಲಿಲ್ಲ. ಅನಂತರ (ಕೊನೆಯದಾಗಿ). ತನ್ನನ್ನೇ, ಪರಮಾತ್ಮನ ಅನಂತಗುಣ-ಶಕ್ತಿಗಳನ್ನು ಜಿಜ್ಞಾಸೆಯಿಂದ ತಿಳಿದುಕೊಳ್ಳುವ ಧೀಶಕ್ತಿ-ಬುದ್ಧಿಶಕ್ತಿಯುಳ್ಳ ಮಾನವ ಶರೀರವನ್ನು ನಿರ್ಮಿಸಿದಾಗ್ಗೆ ಪರಮಾತ್ಮನಿಗೆ ಅದರಿಂದ ಸಂತೃಪ್ತಿ ಉಂಟಾಯಿತು.

ಮಾನವ ಶರೀರದ ನಿರ್ಮಿತಿಯಿಂದ ಪರಮಾತ್ಮನಿಗೆ ಏಕೆ ಸಂತೋಷ ಉಂಟಾಯಿತೆಂದರೆ, ಮಾನವ ಶರೀರವು - ಬ್ರಹ್ಮಾವಬೋಧಕ್ಕೆ (ಪರಬ್ರಹ್ಮನ ಜ್ಞಾನ ಮಾಡಿಕೊಳ್ಳುವದಕ್ಕೆ - ಅವಸರವನ್ನು ಒದಗಿಸುತ್ತದೆ, ಎಂಬುದೇ ಉದ್ದೇಶವಾಗಿದೆ. ಬ್ರಹ್ಮಜ್ಞಾನವನ್ನು, ಪರಮಾತ್ಮನ ಮಹಿಮಾದಿಗಳನ್ನು ಯಥಾಶಕ್ತಿ ಅರಿತುಕೊಳ್ಳುವದೆ ಮಾನವ ಶರೀರದ ನಿರ್ಮಾಣದಲ್ಲಿ ಪರಮಾತ್ಮನಿಗೆ ಮುಖ್ಯ ಉದ್ದೇಶವಾಗಿರುವದೆಂಬುದು ಸೂಚಿತವಾಗಿದೆ.

||೧೯೮|| **ಪ್ರಾಪ್ತಾ ನೃಜಾತಿಂ ತ್ವಿಹ ಯೇ ಚ ಜಂತವೋ**
**ಜ್ಞಾನಕ್ರಿಯಾದ್ರವ್ಯ ಕಲಾಪಸಂಭೃತಃ ।**
**ನ ಚೇದ್ಯತೇರನ್ನಪುನರ್ಭವಾಯ**
**ಭೂಯೋ ವನೌಕಾ ಇವ ಯಾಂತಿ ಬಂಧನಂ ||** ೫.೧೯-೨೫

ಪುರುಷಾರ್ಥ ಸಾಧನವಾಗಿರುವ ಮಾನವ ಶರೀರವನ್ನು ಪುಣ್ಯವಶಾತ್ ಪಡೆದುಕೊಂಡಿದ್ದರೂ, ಪುರುಷಾರ್ಥಪ್ರಾಪ್ತಿಗಾಗಿ ಪ್ರಯತ್ನಿಸದವರ ಗತಿ - ಏನಾಗುವದೆಂಬುದನ್ನು ತಿಳಿಸುವರು.

**ಅರ್ಥ** :- ಜ್ಞಾನಸಾಧನವಾದ ಬುದ್ಧಿ (ಪ್ರತಿಭೆ) ಯನ್ನು, ಶ್ರೀ ಹರಿ ಸೇವೆಗೆ ಸಹಾಯಕವಾದ ದೃಢವಾದ ಅವಯವಗಳನ್ನು, ಭಗವತ್ಪೂಜೆಗೆ ಅಗತ್ಯವಿರುವ ಪದಾರ್ಥಗಳನ್ನು ಪಡೆದುಕೊಂಡು, (ಶ್ರೇಷ್ಠವಾದ) ಮಾನವ ಶರೀರವನ್ನು ಧರಿಸಿ ಈ ಭರತ ಭೂಮಿಯಲ್ಲಿ ಜನಿಸಿಬಂದವರು, (ಪುನರ್ಜನ್ಮರಹಿತವಾದ) ಮೋಕ್ಷಕ್ಕಾಗಿ ಪ್ರಯತ್ನಿಸದಿದ್ದರೆ (ಸಾಧನೆ ಮಾಡಿಕೊಳ್ಳದಿದ್ದರೆ), ನರಕದಲ್ಲಿ ನೆಲಸಿದ ಜೀವಿಗಳಂತೆ ಮತ್ತೆ ಮತ್ತೆ ಅತ್ಯಂತ ಕಷ್ಟಕ್ಕೆ ಒಳಗಾಗುತ್ತಾರೆ. ಅಡವಿಯಲ್ಲಿರುವ ಅಜಾಗರೂಕರಾದ ಪಶುಪಕ್ಷಿಗಳು ಬಲೆಯಲ್ಲಿ ಬೀಳುವಂತೆ, ಸಂಸಾರದ ಬಲೆಯಲ್ಲಿ ಬಂಧಿತರಾಗುತ್ತಾರೆ.

ಒಟ್ಟು ಅಭಿಪ್ರಾಯವೆಂದರೆ, ಜೀವಿಗಳು ತಮ ತಮಗೆ ಉಚಿತವಾದ ಮುಕ್ತಿಯನ್ನು ಪಡೆದುಕೊಳ್ಳಲಿ, ಎಂಬುದೇ ಸೃಷ್ಟಿಯನ್ನು ನಿರ್ಮಿಸುವಲ್ಲಿ ಭಗವಂತನ ಉದ್ದೇಶವೆಂಬುದನ್ನು ಯಾರು ಅಲ್ಲಗಳೆಯಲಾರರು. ಜ್ಞಾನ, ಕ್ರಿಯಾಶಕ್ತಿ, ಪದಾರ್ಥಗಳು, ಇವುಗಳನ್ನು ಸಾಧನವಾಗಿ ಬಳಸಿಕೊಂಡೇ ವಿಮುಕ್ತಿಯನ್ನು ಪಡೆಯಬೇಕಾಗುವದು. ಪಶು ಪಕ್ಷಿ, ಕ್ರಿಮಿ-ಕೀಟಕ ಮುಂತಾದ ವಿವಿಧ ಶರೀರಗಳನ್ನು ಸೃಷ್ಟಿಕಾಲದಲ್ಲಿ ಮೊದಲು ನಿರ್ಮಿಸಿ, ಶ್ರೀ ಹರಿಯು ಅವುಗಳಲ್ಲಿ

ಒಂದೊಂದಾಗಿ ಪ್ರವೇಶಿಸಿ ಪರೀಕ್ಷಿಸಿದನು. (ಮಾನವ ಶರೀರವನ್ನು ಬಿಟ್ಟು) ಉಳಿದ ಜೀವಿಯ ಶರೀರದಲ್ಲಿಯೂ ಮೋಕ್ಷಪ್ರಾಪ್ತಿಗೆ ಸಾಧನವಾಗಿರುವ ಜ್ಞಾನ ಕ್ರಿಯಾದಿ ಸಂಪತ್ತು ಕಂಡುಬರಲಿಲ್ಲ. ಕೊನೆಯದಾಗಿ ಶ್ರೀ ಹರಿಯು ಮಾನವ ಶರೀರವನ್ನು ನಿರ್ಮಿಸಿ, ಅದನ್ನು ಒಳಹೊಕ್ಕು ನಿರೀಕ್ಷಿಸಿದನು. ಮುಕ್ತಿ ಸಾಧನೆಯ ಶಕ್ತಿ-ಸಾಮಗ್ರಿಗಳು ಮಾನವ ಶರೀರದಲ್ಲಿ ಆತನಿಗೆ ಕಂಡು ಬಂದವು. ಜೀವಿಗಳಿಗಾಗಿ ತಾನು ಅಪೇಕ್ಷಿಸುವ ಮುಕ್ತಿ ಹಾಗೂ ಅದರ ಪ್ರಾಪ್ತಿಗಾಗಿ ಸಾಧನವಾದ ಜ್ಞಾನ, ಇವೆರಡು ಮಾನವ ಶರೀರದಲ್ಲಿ ಸನ್ನಿಹಿತವಾಗಿರುವುದನ್ನು ಕಂಡು ಶ್ರೀ ಹರಿಯ ಮನಸ್ಸು ಸಂತೃಪ್ತಿಯನ್ನು ಪಡೆಯಿತು. ಆದುದರಿಂದ, ಸಾಧನ ಸಾಮಗ್ರಿಯುಕ್ತವಾದ ಈ ದೇಹದಿಂದ (ಈ ದೇಹವನ್ನು ಅದಕ್ಕಾಗಿಯೆ ವಿನಿಯೋಗಿಸಿ) ಮುಕ್ತಿಯ ಪ್ರಾಪ್ತಿಗಾಗಿ ಪ್ರಯತ್ನಿಸುವವರು ಪರಮಾತ್ಮನ ಮನೋಗತ (ಅಭಿಪ್ರಾಯ) ದಂತೆ ವರ್ತಿಸಿ ಆತನ ಅನುಗ್ರಹಕ್ಕೆ ಪಾತ್ರರಾಗುವರು. ಪರಮಾತ್ಮನ ಪ್ರಸಾದದಿಂದ ತಮ್ಮ ಅಭೀಷ್ಟವಾದ ಮುಕ್ತಿಯನ್ನು ಪಡೆಯುವರು. ಹೀಗೆ ಮಾಡದೆ, ವಿಷಯ ಲೋಲುಪರಾಗಿ ವಿಷಯಭೋಗಗಳಿಗಾಗಿಯೆ ತಮ್ಮ ಬುದ್ಧಿ-ಕ್ರಿಯಾ ಶಕ್ತಿಗಳನ್ನು ಮೀಸಲಾಗಿ ಮಾಡುವವರು ಪರಮಾತ್ಮನ ಕೋಪಕ್ಕೆ ಒಳಗಾಗುವರು. ಒಪ್ಪಿಸಿದ ಕಾರ್ಯಕ್ಕಾಗಿ ರಾಜನು ಕೊಟ್ಟ ಸಾಮಗ್ರಿಯನ್ನು ಸ್ವಾರ್ಥಕ್ಕಾಗಿ ಉಪಯೋಗಿಸಿದರೆ, ಅಂಥ ಸೇವಕನ ಮೇಲೆ ರಾಜನು ಸಿಟ್ಟಾಗುವಂತೆ, ಮುಕ್ತಿಯ ಉದ್ದೇಶಕ್ಕಾಗಿ ತಾನು ಕೊಟ್ಟಿರುವ ಮಾನವ ಶರೀರವನ್ನು ವಿಷಯಭೋಗಕ್ಕಾಗಿ ವಿನಿಯೋಗಿಸಿದರೆ, ಶ್ರೀ ಹರಿಯೂ ಅಂಥವರ ಬಗ್ಗೆ ಕುಪಿತನಾಗುವನು. ರಾಜನ ಆಜ್ಞೆಯನ್ನು ಮೀರಿ ನಡೆದ ರಾಜಸೇವಕರು ರಾಜನಿಂದ ದಂಡಿಸಲ್ಪಟ್ಟು ದುಃಖಪಡುವಂತೆ, ಭಗವದಾಜ್ಞೆಯನ್ನು ಮೀರಿನಡೆಯುವ ವಿಷಯಲೋಲುಪರು ವಿವಿಧ ಕಷ್ಟಗಳಿಗೆ ಗುರಿಯಾಗುವರು. ಈ ವಿಷಯದಲ್ಲಿ ಹೆಚ್ಚಿಗೆ ಹೇಳಬೇಕಾದುದನ್ನು ಆಧ್ಯಾತ್ಮಪ್ರಕರಣದಲ್ಲಿ ಹೇಳಿದೆ.

||೧೯|| ಲಬ್ಧ್ವಾ ಸುದುರ್ಲಭಮಿದಂ ಬಹುಸಂಭವಾಂತೇ
ಮಾನುಷ್ಯಮರ್ಥದಮನಿತ್ಯಮಪೀಹ ಧೀರಃ ।
ತೂರ್ಣಂ ಯತೇತ ನ ಪತೇದನುಮೃತ್ಯು ಯಾವ-
ನ್ನಿಃಶ್ರೇಯಸಾಯ ವಿಷಯಃ ಖಲು ಸರ್ವತಃ ಸ್ಯಾತ್ ॥

೧೧-೯-೨೯

ಈ ಪ್ರಕರಣದ ಸಾರವನ್ನು ಸಂಕ್ಷೇಪವಾಗಿ ಹೇಳುವರುಃ-

ಅರ್ಥಃ- ಅನೇಕ ಯೋನಿಗಳಲ್ಲಿ ಸುತ್ತುಸುತ್ತಾಡಿಬಂದು, (ಬೆನ್ನಹಿಂದೆಯೆ ದೊಂಚುಹಾಕಿನಿಂತಿರುವ ಮೃತ್ಯುವಿನಿಂದ.) ಅನಿತ್ಯ-ಅಶಾಶ್ವತವಾದರೂ ಪುರುಷಾರ್ಥ ಪ್ರಾಪ್ತಿಗೆ ಸಾಧನವಾಗಿರುವ ಈ ಮಾನವ ಶರೀರವನ್ನು ಪಡೆದು (ಮಾನವನಾಗಿ ಹುಟ್ಟಿ ಆ ಮೇಲೆ (ತಡಮಾಡದೆ) ಬಾಲ್ಯಾವಸ್ಥೆಯಲ್ಲಿಯೆ- (ಆ ವಯೋಮಾನದಲ್ಲಿಯೂ ಇಂದು ನಾಳೆ ಎಂದು ಮುಂದಕ್ಕೆ ಹಾಕದೆ) ತ್ವರೆಯಿಂದಲೆ ಮೋಕ್ಷದ ಪ್ರಾಪ್ತಿಗಾಗಿ ಸರ್ವ ಪ್ರಯತ್ನಮಾಡಬೇಕು. (ಇಷ್ಟೊಂದು ಗಡಿಬಿಡಿ ಏಕೆ?- ಎಂದು ಕೇಳಿದರೆ) ಕೊನೆಯ ಉಸಿರಿನವರೆಗೂ ನಿ ರ ಂ ತ ರ ಯತ್ನಿಸಬೇಕು. ಮೃತ್ಯು ಎಂದು ಯಾವಾಗ್ಗೆ ಎರಗುವದೆಂಬುದನ್ನು ನಿರ್ದಿಷ್ಟವಾಗಿ ಹೇಳಲಾಗದು. ಬಾಲ್ಯದಿಂದಲೇ ಮೋಕ್ಷ ಪ್ರಾಪ್ತಿಯ ಕಾರ್ಯದಲ್ಲಿ ತೊಡಗಿದರೆ, ದೇಹಧಾರಣೆಗಾಗಿ ಮಾಡಬೇಕಾದ ಕಾರ್ಯಗಳು, ವಿಷಯಗಳು ಹೇಗೆ ನಡೆಯುವವು (ಸಿದ್ಧಿಸುವವು?-) ಎಂದು ಕೇಳಬಹುದು ಅದಕ್ಕೆ ಉತ್ತರವನ್ನು ಹೇಳುವರು. ದೇಹಪೋಷಣಾದಿಕಾರ್ಯಗಳು ಎಲ್ಲರಿಂದ, ಪಶ್ವಾದಿಗಳ ದೇಹಗಳಿಂದಲೂ ನಡೆಯುವವು. ('ಆಹಾರ-ನಿದ್ರಾ ' ಇವು ಪಶುಪಕ್ಷಿಗಳಿಂದ ಮಾನವರವರೆಗೆ ಸರಿಸಮಾನವಾಗಿ ನಡೆಯುವ ಕಾರ್ಯಗಳು) ದೇಹಾದಿ ಪೋಷಣೆಯೊಂದೇ ಮಾನವ ಶರೀರ ಪಡೆದುದಕ್ಕೆ ಮುಖ್ಯ ಪ್ರಯೋಜನವಾಗಿಲ್ಲ. ದುಃಖಬರಲಿ, ಎಂದು ಅದಕ್ಕಾಗಿ ಯಾರೂ ಯತ್ನಿಸುವದಿಲ್ಲ. ಅದು ತಾನಾಗಿಯೆ ಬರುವದು. ಅದರಂತೆ ವಿಷಯಸುಖವೂ ಕೂಡ ತಾನಾಗಿಯೆ ನಡೆಯುವದು.- ಎಂಬುವದೆ ಇದರ ಅಭಿಪ್ರಾಯವಾಗಿದೆ.

ಹೀಗೆ ಹೇಳಿರುವರುಃ- 'ಸರ್ವೇಷಾಂ ಜಂತೂನಾಂ . ಕ್ರೀಡಾಂಧಾಮಾಪ್ರಮಾದ್ಯತ' (೭-೬-೬;-೭-೬-೭;-೭-೬-೯- ಹಾಗೂ ೭-೬-೧) ಈ ಶ್ಲೋಕಗಳ ಭಾವಾರ್ಥಃ- ಪೋಷಣೆಯ ವಿಷಯದಲ್ಲಿ ಸಕಲಜೀವಿಗಳಿಗೂ ಸಮಾನವಾಗಿ ಜಾಗೃತವಾದ ಅರಿವು ಇರುವದು. ಆದರಲ್ಲಿ ಮಾನವರಿಗೇನು ವೈಶಿಷ್ಟ್ಯವಿದೆ?. ವ್ಯತ್ಯಾಸವಿದೆ?. (ಆದುದರಿಂದ) ಬಾಲ್ಯದಿಂದಲೆ ಪ್ರಾರಂಭಿಸಿ ಭಾಗವತ ಧರ್ಮಗಳನ್ನು ಆಚರಿಸಬೇಕು. ಈ ಭಾರತ ಭೂಮಿಯಲ್ಲಿ ಮಾನವನಾಗಿ ಹುಟ್ಟುವದು ಒಳ್ಳೇ ದುರ್ಲಭವಾದುದು. ಈ ಮಾನವ ಜನ್ಮವು ನಶ್ವರವಾಗಿದ್ದರೂ, ಮೋಕ್ಷವನ್ನು ದೊರಕಿಸಿಕೊಡುತ್ತದೆ. (ಮೋಕ್ಷಪ್ರಾಪ್ತಿಗೆ ಸಾಧನ ಶರೀರವಾಗಿದೆ).- ದೈತ್ಯಬಾಲಕರೆ! ಸ್ವಂತ ಪ್ರಯತ್ನವಿಲ್ಲದೆ ದುಃಖವು ತಾನಾಗಿಯೆ ಒದಗುವಂತೆ, ಇಂದ್ರಿಯ ಸುಖವೂ ಕೂಡ ಶರೀರಸಂಬಂಧದ ಮೂಲಕ ದೈವದಿಂದ ( ಈಶಸಂಕಲ್ಪದಿಂದ ) ತಾನಾಗಿಯೇ ದೊರಕುತ್ತದೆ. ಆದುದರಿಂದ ಇಂದ್ರಿಯ ಸುಖದ ಪ್ರಾಪ್ತಿಗಾಗಿ ಹೆಚ್ಚಿಗೆ ಶ್ರಮ ಮಾಡಕೂಡದು. ಏಕೆಂದರೆ

NO: 213 ನೇ ಪುಟ ಹಿಂದೆ ಇದೆ 222ನೇ ಪುಟ ನೋಡಿ

ಅನೋಘವಾದ ನಮ್ಮ ಆಯುಷ್ಯವು ಅದರಿಂದ ಹಾಳಾಗಿ ಹೋಗುವದು. ಇಕೋ! ದೈತ್ಯಬಾಲಕರಿ! ನಿಮಗೆ ಸರ್ವ ಬಗೆಯಿಂದಲೂ ಮಂಗಳಕರವಾದ ನನ್ನ ಮಾತಿಗೆ ಕಿವಿಗೊಡಿರಿ. ನಿಮ್ಮ ಓರಿಗೆಯವರು (ಅಕಾಲದಲ್ಲಿಯೆ) ಮೃತ್ಯುವಿಗೆ ಬಲಿಯಾದುದನ್ನು ಕಣ್ಮುಂದೆ ತಂದುಕೊಳ್ಳಿರಿ, ಆಟ-ಪಾಟಗಳ ಮೋಹದಿಂದ ಕುರುಡರಂತಾಗಿ ತಪ್ಪುದಾರಿಯನ್ನು ಹಿಡಿಯಬೇಡಿರಿ,

ದೇಹ ಪ್ರಶಂಸಾ ಪ್ರಕರಣವು ಮುಗಿಯಿತು.



# ೧೭ ಧ್ಯಾನ ಪ್ರಕರಣ

॥೨೦೦॥ ಭೂದ್ವೀಪವರ್ಷಸರಿದದ್ರಿನಭಃಸಮುದ್ರ-
ಪಾತಾಲದಿಙ್ನರಕಭಾಗಣಲೋಕಸಂಸ್ಥಂ ।
ಗೀತಂ ಮಯಾ ತವ ನೃಪಾಽದ್ಭುತಮೀಶ್ವರಸ್ಯ
ಸ್ಥೂಲಂ ವಪುಃ ಸಕಲಜೀವನಿಕಾಯಧಾಮ್ನಃ ॥ ಭಾ-೨೬-೩೮

ಶ್ರೀ ರಮಾರಮಣನಿಗೆ ನಮಸ್ಕಾರ. ಪ್ರವೃತ್ತಕರ್ಮವನ್ನು ತ್ಯಜಿಸಬೇಕು, ನಿವೃತ್ತಕರ್ಮವನ್ನು ಮಾಡಬೇಕು. ದೇಶ, ಕಾಲ, ದೇಹಗಳು (ಕಾರ್ಯೋದ್ದೇಶಕ್ಕೆ) ಅನುಕೂಲವಾಗಿವೆ. ಶ್ರೀ ಹರಿಯ ಉಪಾಸನೆಯನ್ನು ಮಾಡಬೇಕೆಂಬ ಉದ್ದೇಶದಿಂದಲೆ ಇವುಗಳನ್ನು ವಿವರಿಸಿದೆ. ಇವೆಲ್ಲವೂ ಇಂದು ಒದಗಿಬಂದಿರಲು, ಶ್ರೀ ಹರಿಯ ಉಪಾಸನೆ-ಆರಾಧನೆಯನ್ನು ನಿಶ್ಚಲ, ದೃಢ ಮನಸ್ಸಿನಿಂದ ನಿರಂತರವಾಗಿ ಕೈಕೊಳ್ಳಬೇಕು. ಎಂಬುದನ್ನು ಹೇಳುವದಕ್ಕಾಗಿಯೆ ಈ ಪ್ರಕರಣ. ಭಗವಂತನ ಚಿಕ್ಕದರಲ್ಲಿ ಅತಿಚಿಕ್ಕದಾದ (ಅಣಿಷ್ಟ) ರೂಪದ ಆರಾಧನೆಯಿಂದಲೆ ಮೋಕ್ಷಪ್ರಾಪ್ತಿಯೆಂಬುದು ಪ್ರಮಾಣಿತವಾಗಿದೆ. ಸಾವಿರ ಬಗೆಯ ಅನ್ಯಸಾಧನಗಳನ್ನು ಮಾಡಿದರೂ, ಬಿಂಬೋಪಾಸನೆಯಿಲ್ಲದೆ ಮುಕ್ತಿಯು ಸಿದ್ಧಿಸದು. ಚಿಕ್ಕದರಲ್ಲಿ ತೀರ ಚಿಕ್ಕದಾದ ರೂಪವೇ ಬಿಂಬವೆನ್ನುವದರಲ್ಲಿ ಯಾವ ಸಂದೇಹವೂ ಇಲ್ಲ. ಬಿಂಬರೂಪನಾದ ಭಗವಂತನಲ್ಲಿ ಮನದ ಓಘವನ್ನು (ಹರಿಯುವಿಕೆಯನ್ನು) ಸುಸ್ಥಿರವಾಗಿ ನಿಲ್ಲಿಸುವ ಕಾರ್ಯವೆ ಆತನ ಉಪಾಸನೆ, ಆರಾಧನೆಯೆನಿಸುವದು. (ಸ್ವಭಾವತಃ ಚಂಚಲವಾಗಿರುವ ಮಾನವ) ಮನಸ್ಸನ್ನು ಮೊಟ್ಟಮೊದಲೆ ಭಗವಂತನ ಅಣಿಷ್ಟ (ಬಿಂಬ) ರೂಪದಲ್ಲಿ ನಿಲ್ಲಿಸುವದು ಶಕ್ಯವಾಗದು. ಮನೋವಾಸನೆಗಳಿಂದ ರಚಿತವಾದ ಒಂದು ಪ್ರತಿಮೆ, ಮೂರ್ತಿಯಲ್ಲಿ ಮನಸ್ಸನ್ನು ಮೊದಲು ಹಿಡಿದು ನಿಲ್ಲಿಸಬೇಕಾಗುವದು. ಭಗವಂತನ ಬಗೆಬಗೆಯ ರೂಪಗಳನ್ನು ನೋಡಿ, ಇಲ್ಲವೆ ಆ ರೂಪಗಳ ಬಗ್ಗೆ ಕೇಳಿ ತಿಳಿದುಕೊಂಬುವದರಿಂದ, ಯಾವದಾದರೊಂದು ರೂಪದ ಬಗ್ಗೆ ಮನೋವಾಸನೆ, ಮನಸ್ಸಿನಲ್ಲಿ ಆಸಕ್ತಿ ಮೂಡುವದು. ಆದುದರಿಂದ (ಹೇಗಾದರೂ ಹರಿದಾಡುವ) ಮನಸ್ಸಿಗೆ ಯೋಗ್ಯವಾದ ಒಂದು ಒಲವನ್ನು ತಂದುಕೊಡಲು (ಯಾವದಾದರೊಂದು) ಸ್ಥೂಲ (ಕಣ್ಣೆದುರು ನಿಲ್ಲಿಸಬಹುದಾದ ಭಗವಂತನ) ಮೂರ್ತಿಯ ಅಗತ್ಯವಿರುವದು. ಮೊದಲು ಇಂಥ ಸ್ಥೂಲ ರೂಪದಲ್ಲಿ ನಿಲ್ಲಿಸಬಹುದಾದ ಮನಸ್ಸನ್ನು ಅನಂತರ (ಕ್ರಮೇಣ) ಸೂಕ್ಷ್ಮರೂಪದಲ್ಲಿ ನಿಲ್ಲಿಸಲು ಶಕ್ಯವಾಗುವದು. ಸ್ಥೂಲ-ಸೂಕ್ಷ್ಮ ರೂಪಗಳಲ್ಲಿ ಸ್ಥೂಲರೂಪವು ಯಾವುದೆಂದರೆ, 'ಪಾತಾಲವು ಹರಿಯ ಪಾದಕ್ಕೆನೆಲೆ

ಇತ್ಯಾದಿಯಾಗಿ ಪಣಿಸಿರುವ ಅತ್ಯಧಿಕ ಸ್ಥೂಲ ರೂಪವನ್ನು ಮೊದಲುಗೊಂಡು ಪುರುಷ ಹಾಗೂ ಬಾಲಕರ ಎತ್ತರದ ಪರಿಮಿತಿಯ ಶ್ರೀ ಹರಿಯ (ವಿವಿಧ ವಸ್ತುಗಳಿಂದ ರಚಿಸಿದ) ಪ್ರತಿಮೆಗಳೆಲ್ಲವೂ ಆತನ ಸ್ಥೂಲರೂಪವೆನಿಸುವವು. ಈ ಬಗೆಯ ಯಾವುದೇ ಸ್ಥೂಲರೂಪದಲ್ಲಿ, ನೀರು ತೆಗ್ಗಿನ ಭೂಮಿಯೆಡೆಗೆ ಹರಿಯುವಂತೆ, ಮನಸ್ಸು ನಿರಾತಂಕವಾಗಿ (ಸುಗಮವಾಗಿ, ಸ್ವಾಭಾವಿಕವಾಗಿ ) ಯಾವ ಸ್ಥೂಲ ರೂಪದಲ್ಲಿ ಹರಿಯುವದೊ, ಅಂಥ ಶ್ರೀಹರಿಯ ಸ್ಥೂಲರೂಪದಲ್ಲಿ ಚಿತ್ತವೃತ್ತಿಯನ್ನು ನಿಲ್ಲಿಸಿ ಪಾದದಿಂದ ಮುಖದ ವರೆಗೆ ಮನಸ್ಸಿನ ಹರಿಯುವಿಕೆ (ಆಸಕ್ತಿ) ಯನ್ನು ಸ್ಥಿರಗೊಳಿಸಬೇಕು. ತಮ್ಮ ತಮ್ಮ ಒಲವಿನ (ಶ್ರೀ ಹರಿಯ) ಯಾವುದೇ ಸ್ಥೂಲರೂಪದಲ್ಲಿ ತಮ್ಮ ಚಿತ್ತವೃತ್ತಿಯನ್ನು ಸ್ಥಿರವಾಗಿ ನಿಲ್ಲಿಸಲು ಸಾಧಿಸಿದ ನಂತರ, 'ಪ್ರಾದೇಶ ಪ್ರಮಾಣದ' ಎಂದೂ 'ತಮ್ಮ ಹೃದಯದೊಳಗೆ' ಎಂದೂ (ಮುಂದಿನ ಶ್ಲೋಕದಲ್ಲಿ) ನಿರೂಪಿಸಿದ ರೂಪದಿಂದ ಮೊದಲು ಮಾಡಿ, ಚಿಕ್ಕದರಲ್ಲಿ ಅತಿಚಿಕ್ಕದಾದ (ಅಣಿಷ್ಟ), ಶ್ರೀ ಹರಿಯ ರೂಪಗಳು ಸೂಕ್ಷ್ಮ ರೂಪಗಳೆಂದು ತಿಳಿಯಲ್ಪಡುತ್ತವೆ. ಆದುದರಿಂದ, ಸ್ಥೂಲರೂಪಗಳನ್ನು ನೋಡುವದು, ಅವುಗಳ ಬಗ್ಗೆ ಕೇಳಿ ತಿಳಿದುಕೊಳ್ಳುವದು, ಇವುಗಳನ್ನು ಕೆಲಕಾಲ ಮಾಡಿಮಾಡುವದರಿಂದ ಜನಿಸುವದೆ ವಾಸನೆ. ಈ ವಾಸನೆಗೇನೆ 'ಸಂಸ್ಕಾರ' ವೆಂದು ಇನ್ನೊಂದು ಹೆಸರು. ಈ ಸಂಸ್ಕಾರದಲ್ಲಿ ಕುಶಲತೆ (ಪರಿಪಕ್ವತೆ) ಯನ್ನು ಪಡೆಯುವ ಮೂಲದ ಸ್ಥೂಲ ರೂಪದಲ್ಲಿ ಸ್ಥಿರವಾಗಿ ನಿಲ್ಲಲು ಮನಸ್ಸಿಗೆ ಯಶಸ್ಸು ದೊರಕುವದು. ಸ್ಥೂಲರೂಪದಲ್ಲಿ ವಿಜಯಿಯಾದ ಮನಸ್ಸನ್ನು ಸೂಕ್ಷ್ಮರೂಪದಲ್ಲಿ ನಿಲ್ಲಿಸಬೇಕಾಗುವದು. ಆದುದರಿಂದ, ಈ ಕಾರ್ಯಕ್ಕೆ ಉಪಯುಕ್ತವಾಗಿರುವದೆಂದು, ಶ್ರೀ ಹರಿಯ ಸ್ಥೂಲರೂಪದ ಆರಾಧನೆಯ ವಿಷಯವನ್ನು ಮೊದಲು ಹೇಳಿಕೊಡುವರು.

**ಅರ್ಥ :**- ಹೇ ರಾಜನ್, ಸಕಲ ಜೀವಿಗಳ ಸಮೂಹಕ್ಕೆಲ್ಲ (ಏಕಮೇವ) ಆಧಾರನಾಗಿರುವ ಶ್ರೀ ಹರಿಯ ಅದ್ಭುತವಾದ ಸ್ಥೂಲರೂಪದ ಸ್ವರೂಪವನ್ನು ನಿನಗೆ ನಿರೂಪಿಸಿರುವೆನು. ಪರಮಾತ್ಮನ ಸ್ಥೂಲಶರೀರವು ಹೇಗಿರುವದೆಂಬುದನ್ನು ಹೇಳುವರು :- (ಮಾನವರು ವಾಸಿಸುವ) ಭೂಮಿ, ಪ್ರಸಿದ್ಧವಾದ ಪೃಥ್ವಿ. ಈ ಪೃಥ್ವಿಯು ಏಳು ದ್ವೀಪ ( ನಡುಗಡ್ಡೆ ) ಗಳಿಂದ ಕೂಡಿರುವದು. ಜಂಬೂ, ಪ್ಲಕ್ಷ, ಶಾಲ್ಮಲೀ, ಕುಶ, ಕ್ರೌಂಚ, ಶಾಕ, ಪುಷ್ಕರ - ಇವೇ ಏಳು ದ್ವೀಪಗಳು ಈ ಪೃಥ್ವಿಯಲ್ಲಿ ಭಾರತ, ಕಿಂಪುರುಷ, ಕುರು, ಹಿರಣ್ಮಯ, ರಮ್ಯಕ, ಕೇತುಮಾಲ, ಹರಿವರ್ಷ, ಭದ್ರಾಶ್ವ, ಇಲಾವೃತ, ಎಂಬ ಒಂಬತ್ತು 'ವರ್ಷ'ಗಳಿರು

ವವು. ಈ ವರ್ಷಗಳಿಗೆ 'ಖಂಡ'ಗಳೆಂತಲೂ ಹೇಳುವರು. 'ಅಜನಾಭ' ವೆಂದು ಮೊದಲು ಕರೆಯಲ್ಪಡುತ್ತಿದ್ದ ದೇಶವೇ ಭರತನ ಆಳಿಕೆಯಿಂದ 'ಭಾರತ'ವೆಂಬ ಹೆಸರನ್ನು ಪಡೆಯಿತು. ಭಾಗೀರಥೀ ಮುಂತಾದವು ನದಿಗಳು. ಮೇರು ಮುಂತಾದ ಪರ್ವತಗಳು, ಲವಣ, ಸುರಸ, ಸುರ, ಘೃತ, ಕ್ಷೀರ, ದಧಿಮಂಡ, ಶುದ್ಧ ಎಂಬಿವು ಏಳು ಸಾಗರಗಳು. ಇವುಗಳಲ್ಲಿಯ ಸುರಸ, ಸಮುದ್ರಕ್ಕೇನೆ-ಇಕ್ಷುರಸ (ಕಬ್ಬಿನರಸ) ಸಮುದ್ರವೆಂದು ಕೆಲವರು ಕರೆಯುವರು. ಭಾಗಣವೆಂದರೆ ಆಕಾಶ ದಲ್ಲಿಯ ಸೂರ್ಯಚಂದ್ರಾದಿ ಗ್ರಹಗಳು, ಅಸಂಖ್ಯ ನಕ್ಷತ್ರ ಸಮೂಹಗಳು, (ಈ ಮೊದಲು ಹೇಳಿರುವ) ದ್ವೀಪ ಹಾಗೂ ಭೂಖಂಡಗಳಲ್ಲದೆ ಬೇರೆ ಹನ್ನೊಂದು ಲೋಕಗಳಿರುವವು. ಭೂಃ, ಸ್ವಃ ಮಹಃ, ಜನಃ, ತಪಃ, ಸತ್ಯ ಎಂಬ ಹೆಸರಿನ ಆರು ಊರ್ಧ್ವ (ಮೇಲಿನ) ಲೋಕಗಳು, ಅತಲ, ವಿತಲ, ಸುತಲ, ತಲಾತಲ, ಮಹಾತಲ, ರಸಾತಲ, - ಎಂಬ ಆರು (ಅಧೋ)- ಕೆಳಗಿನ ಲೋಕಗಳು.

ಇವೆಲ್ಲವೂ ಪರಮಾತ್ಮನ ಅವಯವಗಳಿಂದ ಜನಿಸಿ - ತಮ್ಮಲ್ಲಿ ವ್ಯಾಪ್ತ ನಾಗಿ ನೆಲಸಿರುವ ಪರಮಾತ್ಮನ ಹೆಸರಿನಿಂದಲೆ ಕರೆಯಲ್ಪಡುವವು. ಇವುಗಳನ್ನೆಲ್ಲ ಒಳಗೊಂಡಿರುವ ಸಮಗ್ರ ಬ್ರಹ್ಮಾಂಡವೆ ಪರಮಾತ್ಮನ ಶರೀರದಂತಿದೆ. ಆತನ ಸ್ಥೂಲರೂಪಪ್ರತಿಮೆಯಾಗಿದೆ. ಆ ಪರಮಾತ್ಮನು, ಅಚಿಂತ್ಯಾದ್ಭುತ ಶಕ್ತಿಯು ಳ್ಳವನಾಗಿ, ಎಲ್ಲ ಪ್ರಾಣಿಗಳ ಹೃದಯಗುಹೆ (ಅಂತರಂಗ) ಯಲ್ಲಿ (ಅಂತರಾತ್ಮ ನಾಗಿ, ಪ್ರತ್ಯಗಾತ್ಮನಾಗಿ ) ವಾಸ ಮಾಡುವನು. ( ರಾಜನೆ ! ಈ ಬಗೆಯ, ಶ್ರೀ ಹರಿಯ ಸ್ಥೂಲರೂಪವನ್ನು ನಾನು ನಿನಗಾಗಿ ಬಣ್ಣಿಸಿರುವೆನು).

ಹೀಗೆ ಹೇಳಿರುವರು :- [೧] ('ವ್ಯಾಪ್ಯನಾರಾಯಣಃ ಸ್ಥಿತಃ ..' ಇತ್ಯಾದಿ ಯಾಗಿ ) ಬ್ರಹ್ಮಾಂಡವನ್ನು ವ್ಯಾಪಿಸಿ, ಮೀರಿನಿಂತ ಮಹಾಪುರುಷನಾದ ಶ್ರೀಮನ್ನಾರಾಯಣನ, ಲಕ್ಷ್ಮೀಸನ್ನಿಹಿತವಾದ, ಸತ್ವಾದಿ ಮೂರು ಗುಣಗಳಿಗೂ ಪ್ರಚೋದಕವಾದ ಹಾಗೂ ಆನಂದಮಯವಾದ ಸ್ಥವಿಷ್ಠ (ಸ್ಥೂಲದಲ್ಲಿ ಅತ್ಯಧಿಕ ಸ್ಥೂಲ) ರೂಪವನ್ನು - ಇದುವರೆಗೆ ವರ್ಣಿತವಾದುದನ್ನು ಆದರಪೂರ್ವಕವಾಗಿ ಹೇಳುವರು, (ಸ್ವತಃ) ಕೇಳುವರು, (ಎರಡನೆಯವರಿಗೆ) ಶ್ರವಣ ಮಾಡಿಸುವವರು ಅವರೇ ಆ ಪರಮಾತ್ಮನ ಅಣಿಷ್ಟ (ಚಿಕ್ಕದರಲ್ಲಿ ಚಿಕ್ಕದಾದ) ಬಿಂಬರೂಪವನ್ನು ಪೂರ್ಣಶ್ರದ್ಧೆಯಿಂದಲೂ, ಭಕ್ತಿಯಿಂದ ಪುನೀತವಾದ ಬುದ್ಧಿಯಿಂದಲೂ ಸರಿ ಯಾಗಿ ತಿಳಿದುಗೊಳ್ಳಲು ಪಾತ್ರರಾಗುವರು.

[೨] "ಭಗವಂತನ (ಮೇಲೆ ನಿರೂಪಿಸಿರುವ) ಸ್ಥೂಲರೂಪವನ್ನು (ಕೇಳಿ) ತಿಳಿದುಕೊಂಡು, ಅದೇರೀತಿಯಾಗಿ ( ಮೇಲೆ ಹೇಳಿಕೊಟ್ಟಿರುವ ) ಸೂಕ್ಷ್ಮರೂಪ

ಪೆನ್ನಾದರೂ (ಕೇಳಿ) ತಿಳಿದುಕೊಂಡು ಸ್ಥೂಲರೂಪದಲ್ಲಿ ಸ್ಥಿರವಾಗಿ ನೆಲಿಸಲು ವಿಜಯಿಯಾದ ಮನಸ್ಸನ್ನು ತನ್ನ ಬುದ್ಧಿಯ ನೆರವಿನಿಂದ ಸೂಕ್ಷ್ಮರೂಪದಲ್ಲಿ ನೆಲಿಸುವಂತೆ, (ಯತಿಃ) ಇಂದ್ರಿಯನಿಗ್ರಹ ಉಳ್ಳ ಪುರುಷನು ಸಾಧಿಸಬೇಕು. ಸ್ಥೂಲ ಸೂಕ್ಷ್ಮರೂಪಗಳಲ್ಲಿ, ಮೊದಲು ಯಾವುದರಲ್ಲಿ ಸಿದ್ಧಿಯನ್ನು ಪಡೆಯಬೇಕೆಂಬ ಕ್ರಮವನ್ನು ಇಲ್ಲಿ ಹೇಳಿರುವರು. 'ಯತಿಃ' - ಎಂಬುದಕ್ಕೆ 'ಯಾತಿ' ಎಂಬ ಪಾಠಾಂತರದ ನೇರಿಗೆ, ('ಯಾತಿ'-ಎಂದರೆ, ಜಾನಾತಿ) ಸೂಕ್ಷ್ಮರೂಪವನ್ನು ತಿಳಿದುಕೊಳ್ಳುವನು, ಎಂಬುದಾಗಿ ಇನ್ನೊಂದು ಅರ್ಥ. ಸೂಕ್ಷ್ಮೇಧಿಯಾ, ಎಂಬುದಕ್ಕೆ 'ಸೂಕ್ಷ್ಮಧಿಯಾ' ಎಂಬ ಪಾಠಾಂತರದಿಂದ 'ಸೂಕ್ಷ್ಮರೂಪದ ಉಪಾಸನೆ' ಯಿಂದ ಚಿತ್ತವೃತ್ತಿಯನ್ನು ಅದರಲ್ಲಿ ನೆಲಿಸುವಂತೆ ಮಾಡಬೇಕು" ಎಂಬುದಾಗಿಯೂ ಅರ್ಥವನ್ನು ಮಾಡುವರು.

ಇಲ್ಲಿ ಒಂದು ಆಕ್ಷೇಪವೆಂದರೆ,- ಅತಿಚಿಕ್ಕದಾದ (ಅಣಿಷ್ಠ) ಬಿಂಬರೂಪ ಜ್ಞಾನದಿಂದಲೆ ಮಾತ್ರ ಮುಕ್ತಿಯ ಪ್ರಾಪ್ತಿಯಾಗುತ್ತಿರಲು, (ಭಗವಂತನ) ಸ್ಥೂಲರೂಪವನ್ನು ಏಕೆ ನಿರೂಪಿಸಿರುವಿರಿ ? ಎಂದು ಕೇಳುವವರಿಗೆ ಉತ್ತರವನ್ನು ಹೇಳುವರು.

ಅತಿದೊಡ್ಡ (ಸ್ಥವಿಷ್ಠ) ರೂಪವನ್ನು ತಿಳಿದವನೇ ಅತಿಚಿಕ್ಕ (ಅಣಿಷ್ಠ) ದಾದ ಬಿಂಬರೂಪವನ್ನು ತಿಳಿದುಕೊಳ್ಳಬಲ್ಲನು, ತಿಳಿದುಕೊಳ್ಳಲು ಪಾತ್ರನಾಗಿರುವನು. ಹೀಗೆ ಸ್ಪಷ್ಟವಾಗಿ ಹೇಳಿರುವದರಿಂದ, ಸೂಕ್ಷ್ಮ ರೂಪದ ಜ್ಞಾನಕ್ಕೆ ಸ್ಥೂಲರೂಪದ ಜ್ಞಾನವು ಪೂರ್ವಭಾವಿಯಾಗಿ ಉಪಯುಕ್ತವಾಗಿದೆ, ಸಹಾಯಕವಾಗಿದೆ. ಅಂತೆಯೆ ಸ್ಥೂಲರೂಪವನ್ನು ವಿವರಿಸಲೇ ಬೇಕಾಯಿತು. ಸ್ಥೂಲರೂಪದ ಉಪಾಸನೆಯಿಂದಲೆ ಸೂಕ್ಷ್ಮರೂಪದ ಉಪಾಸನೆಯ ಮೆಟ್ಟಲನ್ನೇರಬೇಕೆಂಬ ಕ್ರಮವನ್ನೂ ಸೂಚಿಸಿದಂತಾಯಿತು. ಆದುದರಿಂದ ಉಪಯುಕ್ತವಾಗಿರುವ ಸ್ಥೂಲ ರೂಪದ ನಿರೂಪಣೆಯು ಸಯುಕ್ತಿಕವಾಗಿದೆ- ಆದರೆ, ಹೀಗೆ ಮಾಡುವದು, 'ನೀರಿಳಿಯದ ಗಂಟಲಿನಲ್ಲಿ ಕಡುಬಂ ತುರುಕಿದಂತೆ', 'ಚೇಳಿಗೆ ಹೆದರಿ ಓಡಿ ಹೋಗುವವನು ಹಾವಿನ ಬಾಯಲ್ಲಿ ಬಿದ್ದಂತಾಗುವದಲ್ಲವೆ ? ಎಂದು ಕೇಳಿದರೆ, ಇಲ್ಲಿ 'ಸ್ಥವಿಷ್ಠ' ವೆಂಬುದು ಸ್ಥೂಲ ರೂಪಗಳಿಗೆ ಪ್ರತೀಕವಾಗಿದೆ, ಉಪಲಕ್ಷಣವಾಗಿದೆ, ದಿಗ್ದರ್ಶಕವಾಗಿದೆ. ಅದರಂತೆಯೇ, 'ಅಣಿಷ್ಠ' ವೆಂಬ ಪದವೂ ಕೂಡ ಭಗವಂತನ ಸೂಕ್ಷ್ಮರೂಪಗಳಿಗೆ ದಿಗ್ದರ್ಶಕವಾಗಿದೆ. ಸಾಧಕನ ಜೀವಸ್ವರೂಪ, ಹಾಗೂ ಸಾಧನೆಯ ಪರಿಮಿತಿಗಳಿಗೆ ಅನುಗುಣವಾದ ಆತನ ಪಾತ್ರತೆಗೆ ಸಮುಚಿತ

ವಾದ ಸ್ಥೂಲ ಸೂಕ್ಷ್ಮರೂಪಗಳ ಉಪಾಸನೆಯನ್ನು ಆತನು ಕೈಕೊಳ್ಳಬಹುದು. ಎಂಬುದೇ ಅಭಿಪ್ರಾಯವಾಗಿದೆ. ಆದುದರಿಂದ ಮೊದಲು ಸ್ಥೂಲರೂಪದ ಉಪಾಸನೆಯ ಬಗ್ಗೆ ಕಾತುರರಾಗುವ ಕಾರಣವಿಲ್ಲ

ಇನ್ನೊಂದು ಆಕ್ಷೇಪವು ಹೀಗೆ :- ಸ್ಥೂಲರೂಪದ ಉಪಾಸನೆಯನ್ನು ಮುಗಿಸಿದ ನಂತರವಾದರೂ, ಸೂಕ್ಷ್ಮರೂಪದ ಉಪಾಸನೆಯನ್ನು ಅಗತ್ಯವಾಗಿ ಮಾಡಲೇಬೇಕಲ್ಲವೆ ? ಹೀಗಿದ್ದರೆ, ಮೊದಲಿಗೇನೆ ಸೂಕ್ಷ್ಮರೂಪಕ್ಕೆ ನಾವು ಏಕೆ ಮೊರೆ ಹೋಗಬಾರದು ? ಅದನ್ನೇ ಏಕೆ ಮೊದಲು ಕೈಕೊಳ್ಳಬಾರದು ? ಎಂದು ಪ್ರಶ್ನಿಸಬಹುದು. ಈ ಪ್ರಶ್ನೆಗೆ ಉತ್ತರವಿದು :- ನೀವು ಹೇಳುವ ಮಾತಿನಲ್ಲಿ ಸತ್ಯಾಂಶವಿದೆ. ಜನ್ಮ ಜನ್ಮಗಳಲ್ಲಿ ಭಗವಂತನ ಸ್ಥೂಲರೂಪಗಳ ಉಪಾಸನೆಯನ್ನು ಮಾಡಿಮಾಡಿ ( ಆತನ ಕೃಪೆಯಿಂದ ) ನಿರ್ದುಷ್ಟ ( ಶುದ್ಧ ) ಭಕ್ತಿಯನ್ನು ಪಡೆದವರು ಮಾತ್ರ ( ನೀವು ಕೇಳುವಂತೆ ) ಸೂಕ್ಷ್ಮರೂಪದ ಉಪಾಸನೆಯನ್ನೇ ಮೊದಲಿಗೆ ಕೈಕೊಳ್ಳಬಹುದು. ಆದರೆ ಜನ್ಮಾಂತರಗಳ ಸ್ಥೂಲೋಪಾಸನೆಯಿಂದ ವಿಶುದ್ಧಭಕ್ತಿಯನ್ನು ಪಡೆಯದವರು ಸ್ಥೂಲದಿಂದ ಸೂಕ್ಷ್ಮಕ್ಕೆ ಎಂಬ ಕ್ರಮವನ್ನೇ ಅನುಸರಿಸಬೇಕಾಗುವದು. ಅವರಿಗೆ ಸ್ಥೂಲರೂಪದ ವಿವರಣೆಯು ಅಗತ್ಯವಾಗಿದೆ, ಉಪಯುಕ್ತವಾಗಿದೆ. ಸ್ಥೂಲೋಪಾಸನೆಯಿಂದ ಒದಗುವ (ನಿರ್ದುಷ್ಟ) ಭಕ್ತಿಯಿಂದ ವಿಶುದ್ಧವಾದ, ಪಾವಿತ್ರ್ಯವನ್ನು ಪಡೆದ ಮನಸ್ಸನ್ನು ಸೂಕ್ಷ್ಮರೂಪದ ಉಪಾಸನೆಯಲ್ಲಿ ಹರಿಯುವಂತೆ, ನೆಡುವಂತೆ ಯತ್ನಿಸಬೇಕು. ಈ ಕಾರ್ಯದಲ್ಲಿ ಬುದ್ಧಿಯ ಸಹಾಯವನ್ನು ತೆಗೆದುಕೊಳ್ಳಬೇಕು. ಅಂತೆಯೆ, ಯಾರು ಸ್ಥೂಲರೂಪವನ್ನು ಮೊದಲು ತಿಳಿದುಕೊಳ್ಳುವರೊ, ಅವರು ವಿಶುದ್ಧವಾದ ಭಕ್ತಿಯನ್ನು ಪಡೆದವರಾಗಿ ಅತಿ ಸೂಕ್ಷ್ಮ (ಅಣಿಷ್ಠ) (ಬಿಂಬರೂಪ) ವನ್ನು ತಿಳಿದುಕೊಳ್ಳುವರು. ಎಂಬುದನ್ನು ಮನನ ಮಾಡಬೇಕು. ಸ್ಥೂಲ (ಪ್ರತಿಮಾ ಮೂರ್ತಿಯ ) ರೂಪದ ಉಪಾಸನೆಯಲ್ಲಾದರೂ ತಮಗೆ ಅಭೀಪ್ಸಿತವಾದ ಭಗವಂತನ ಪ್ರತಿಮೆಯ ಮೊದಲು ಒಂದು ಅವಯವ, ಅದಾದಮೇಲೆ ಎರಡು ಅವಯವಗಳು. ಹೀಗೆ ಮೆಟ್ಟಲು ಮೆಟ್ಟಲುಗಳಿಂದ (ಕ್ರಮೇಣ) ಸಮಗ್ರ ರೂಪದಲ್ಲಿ ಮನಸ್ಸನ್ನು ಸ್ಥಿರವಾಗಿ ನಿಲ್ಲಿಸುವ – ಉಪಾಸನಾಕ್ರಮವನ್ನು ಅನುಸರಿಸಬೇಕು. ಭಗವಂತನ ರೂಪ (ಪ್ರತಿಮೆ) ದಲ್ಲಿ ಮನಸ್ಸನ್ನು ನಿಲ್ಲಿಸಲು ಈ ಕ್ರಮದಿಂದಲೆ ಶಕ್ಯವಾಗಿದೆ. ಆದುದರಿಂದ ಈ ಬಗೆಯ ಅಧಿಕಾರಿಗಳನ್ನು ಕುರಿತು ಈಕ್ರಮವನ್ನು ಇಲ್ಲಿ ಹೇಳಿದೆ.

॥೨೦೧॥ ತಸ್ಯಾಂ ವಿಶುದ್ಧಕರಣಃ ಶಿವವಾರ್ವಿಗಾಹ್ಯ
ಬದ್ಧ್ವಾಸನಂ ಜಿತಮರುನ್ಮನಸಾಽಹೃತಾಕ್ಷಃ ।
ಸ್ಥೂಲೇ ದಧಾರ ಭಗವತ್ಪ್ರತಿರೂಪ ಏತ
ದ್ಧ್ಯಾಯಂಸ್ತದವ್ಯವಹಿತೋ ವ್ಯಸೃಜತ್ಸಮಾಧೌ ॥ ೪-೧೨-೧

ಈ ರೀತಿಯಾಗಿ ಹೇಳಿರುವದನ್ನೆಲ್ಲ ಹೃದಯದಲ್ಲಿ ಬಿಂಬಿಸುವಂತೆ ಮಾಡಿ, ಈ ವಿಷಯದಲ್ಲಿ ಆದರವನ್ನು ಹುಟ್ಟಿಸಲು ಹಿಂದಕ್ಕೆ ಈ ರೀತಿಯಲ್ಲಿಯೆ ಆಚರಿಸಿ ತೋರಿಸಿದವರ ಉದಾಹರಣೆ ಕೊಡುವರು :- ಮೈತ್ರೇಯರು ವಿದುರನಿಗೆ ಹೇಳುವರು.

ಅರ್ಥ :- ಧ್ರುವರಾಜನು ವಿಶಾಲಾ (ಅಳಕನಂದಾ) ನದಿಯ ಪಾವನ ಕರವಾದ ಜಲದಲ್ಲಿ ಮಿಂದು, (ಧ್ಯಾನಕ್ಕೆ ಉಚಿತವಾದ ಯೋಗಾಸನ) ಪದ್ಮಾಸನ ದಲ್ಲಿ ಸ್ಥಿರವಾಗಿ ಕುಳಿತುಕೊಂಡು, (ಪ್ರಾಣಾಯಾಮದ ಕುಂಭಕದಿಂದ) ವಾಯು (ಉಸಿರನ್ನು) ನಿಗ್ರಹಿಸಿ, (ಹರಿದಾಡುವ ಇಂದ್ರಿಯಗಳನ್ನು ಮನೋಬಲದಿಂದಲೆ ಸ್ಥಿರಗೊಳಿಸಿ, ( ಈ ತೆರದ ಪೂರ್ವ ಸಿದ್ಧತೆಯಿಂದ ) ( ಪಾತಾಳ ಮುಂತಾದ ಹದಿನಾಲ್ಕು ಲೋಕಗಳೆ ಭಗವಂತನ ಪ್ರತೀಕ ಪ್ರತಿಮೆಯಾಗಿರುವ) ಭಗವಂತನ ಸ್ಥೂಲರೂಪದಲ್ಲಿ ತನ್ನ ಮನಸ್ಸು ಸ್ಥಿರವಾಗಿ ನೆಲಿಸುವಂತೆ ಮಾಡಿದನು. ಹೀಗೆ ಸ್ಥೂಲರೂಪದ ಚಿಂತನೆಯಲ್ಲಿ ತಲ್ಲೀನನಾಗಿ, ಅಂತಃಕರಣವನ್ನು (ಚಿತ್ತವೃತ್ತಿ ಯನ್ನು) ವಿಶುದ್ಧವಾಗಿ (ವಿಕಾರ ರಹಿತವಾಗಿ) ಮಾಡಿಕೊಂಡು, ಸ್ಥೂಲರೂಪ ವನ್ನು ಸ್ವಸ್ಥಚಿತ್ತನಾಗಿ, ಅಡೆತಡೆಯಿಲ್ಲದಂತೆ-ಚಿಂತಿಸಲು ಶಕ್ತನಾದ ಮೇಲೆ, ಸ್ಥೂಲ ರೂಪದ ಚಿಂತನೆಯಲ್ಲಿ ತೊಡಗಿದ ಮನಸ್ಸನ್ನು ತೆಗೆದುಬಿಟ್ಟು, ಭಗವಂತನ ಸೂಕ್ಷ್ಮ ರೂಪದ ಚಿಂತನೆಯಲ್ಲಿ ನೆಲಿಸುವಂತೆ ಮಾಡಿದನು. ಸೂಕ್ಷ್ಮರೂಪದ ಚಿಂತನೆಯ ಸಾಮರ್ಥ್ಯ ಪಾತ್ರತೆಯು ಬರುವವರೆಗೆ ಮಾತ್ರ ಸ್ಥೂಲರೂಪದ ಉಪಾಸನೆಯು ಕಾಲಾವಧಿಯಾದ್ದರಿಂದಲೆ, ಅದನ್ನು ಬಿಟ್ಟುಕೊಟ್ಟನು.

ಸ್ಥೂಲ-ಸೂಕ್ಷ್ಮರೂಪಗಳಲ್ಲಿ ಭೇಧವಿಲ್ಲವೆಂದು, ಅವೆರಡೂ ಭಗವಂತನ ರೂಪಗಳೆಂಬುದನ್ನು ಕಂಡುಕೊಂಡು ಹೀಗೆ ಮಾಡಿದನು. ಸ್ಥೂಲದಿಂದ ಸನ್ನಿಹಿತ ವಾದ ಸೂಕ್ಷ್ಮರೂಪದ ಐಕ್ಯದಲ್ಲಿಯೆ ಸೂಕ್ಷ್ಮರೂಪವನ್ನು ಚಿಂತಿಸಿದನು.

||೨೦೨|| ಕೋऽತಿಪ್ರಯಾಸೋऽಸುರಬಾಲಕಾ ಹರೇ-
ರುಪಾಸನೇ ಸ್ವೇ ಹೃದಿ ಛಿದ್ರವತ್ಸತಃ |
ಅಸ್ಯಾತ್ಮನಃ ಸಖ್ಯುರಶೇಷದೇಹಿನಾಂ
ಸಾಮಾನ್ಯತಃ ಕಿಂ ವಿಷಯೋಪಪಾದನೈಃ || ೭-೭-೪೦

ಪ್ರಹ್ಲಾದ ಉಪಾಸನೆ

ಈ ರೀತಿಯಾಗಿ ನಿರೂಪಿಸಿರುವ ಶ್ರೀ ಹರಿಯ ಸ್ಥೂಲ ಸೂಕ್ಷ್ಮರೂಪಗಳ (ಕ್ರಮಬದ್ಧವಾದ) ಉಪಾಸನೆಯು ಬಹುಕಷ್ಟಸಾಧ್ಯವಾಗಿದ್ದಂತೆ ತೋರುವದು. ಏಕೆಂದರೆ, ಚಿಕ್ಕ, ಅತಿಚಿಕ್ಕ ( ಅಣಿಷ್ಠ ) ರೂಪ ವಿಶೇಷಗಳಲ್ಲಿರುವ (ಶರೀರದ) ಸೂಕ್ಷ್ಮ ಅವಯುವಗಳನ್ನು (ಕಣ್ಣಿಗೆ ಕಾಣದಿದ್ದರೂ) ಬುದ್ಧಿಗೆ ಗೋಚರಿಸುವದೂ ಅಶಕ್ಯವಾಗುವದು-ಈ ಆಕ್ಷೇಪಕ್ಕೆ ಹೀಗೆ ಉತ್ತರವನ್ನು ಹೇಳುವರು:- ಪ್ರಲ್ಹಾದರು ಗೆಳೆಯರಿಗೆ ಮಾಡಿದ ಉಪದೇಶವಿದು.

**ಅರ್ಥ** ;- ಎಲವೋ ದೈತ್ಯಬಾಲಕರಿ ' ನಮ್ಮ ನಮ್ಮ ಹೃದಯದ ಅಂತ ರಂಗದಲ್ಲಿ ಆಕಾಶದಂತೆ, (ಶರೀರಕೃತ ಕರ್ಮದ) ಯಾವ ಲೇಪವೂ ಇಲ್ಲದಿರುವ ಎಲ್ಲ ದೇಹಧಾರಿಗಳಲ್ಲಿಯ ಜೀವನಿಗೆ ಆಪ್ತಸ್ನೇಹಿತ (ಅನಿಮಿತ್ತ ಬಂಧು-ಉಪಕಾರ ಮಾಡುವನಾಗಿರುವ, ಭಗವಂತನಾದ ಶ್ರೀ ಹರಿಯ (ಧ್ಯಾನ-ರೂಪ) ಉಪಾಸನೆ ಯಲ್ಲಿ ಹೆಚ್ಚಿನ ಶ್ರಮವೇನಿದೆ ? (ಯಾವಶ್ರಮವೂ ಇಲ್ಲ) (ನಿಜವಾಗಿಯೂ ಇಲ್ಲದೇ ಇರುವ ಶ್ರಮದ ಭೀತಿಯಿಂದ ಶ್ರೀ ಹರಿಯ ಉಪಾಸನೆಯನ್ನು ಬಿಡಬೇಕಾಗಿಲ್ಲ) ಸೂಕ್ಷ್ಮ- ಅತಿಸೂಕ್ಷ್ಮರೂಪದಲ್ಲಿ ಮನಸ್ಸನ್ನು ಸ್ಥಿರಗೊಳಿಸುವ ಉಪಾಸನೆಯು ಪ್ರಾರಂಭಕ್ಕೆ ಕಠಿಣವಾದುದು, ನೀಗಲಾರದ್ದು ಎನಿಸಬಹುದು. ಆದರೆ ಆ ಮೊದಲು ತಮ್ಮ ಹೃದಯಾಂತರಾಳದಲ್ಲಿಯೇ ಶ್ರೀ ಹರಿಯ ಸುಲಭಸಾಧ್ಯವಾದ ಸಾಮಾನ್ಯ ಉಪಾಸನೆ ಮಾಡುತ್ತ ಅದರಲ್ಲಿ ಪ್ರವಣತೆಪಡೆದು ಚಿತ್ತಶುದ್ಧಿಯನ್ನು ಮಾಡಿಕೊಳ್ಳಬೇಕು. ಅದರಿಂದ ಶ್ರೀ ಹರಿಯ ಅಂಗಾಂಗಗಳಲ್ಲಿ, ಕ್ರಮೇಣ ಸಮಗ್ರರೂಪದಲ್ಲಿ ಮನಸ್ಸು ಸ್ಥಿರವಾಗಿ ನಿಲ್ಲುವಂತಾದ ನಂತರ, ಸಾಮಾನ್ಯದ ಮುಂದಿನ ಮೆಟ್ಟಿಲಾದ ವಿಶೇಷ ರೂಪದ ಉಪಾಸನೆಗೆ ( ಪೂರ್ವಭಾವಿಯಾಗಿ ) ( ಸ್ಥೂಲರೂಪದ ) ಸಾಮಾನ್ಯ ಉಪಾಸನೆಯನ್ನು ಅಗತ್ಯವಾಗಿ ಮಾಡಬೇಕು. ಹೀಗಿದ್ದರೆ, ವಿಶೇಷ ಉಪಾಸನೆಯ ಜ್ಞಾನವನ್ನು ಮಾಡಿಕೊಳ್ಳುವದೇ ಬೇಡವೆ ? (ಎಂದು ಕೇಳಿದರೆ) ಸಾಮಾನ್ಯ ಉಪಾಸನೆಯಿಂದಲೇ ನಿಮ್ಮ ಉಪಾಸನೆಯನ್ನು ಕೊನೆಗೊಳಿಸಬಾರದು. ಚಿತ್ತಶುದ್ಧಿಯನ್ನು ಪಡೆದವರಿಗೆ, ಭಕ್ತಿಯನ್ನು ಬೆಳೆಸಿ ಕೊಂಡು ಬಂದವರಿಗೆ ವಿಶೇಷೋಪಾಸನೆಯು (ಕ್ರಮಪ್ರಾಪ್ತವಾಗಿ) ತಾನಾಗಿಯೆ

200. 5-24-40

201  4-12-57

202. 7-7-38

ಬರುವದು. ಅದಕ್ಕಾಗಿ ಅವರು ಅತಿಪ್ರಯಾಸಪಡಬೇಕಿಲ್ಲ. (ಮೊದಲು ಸಾಮಾನ್ಯರೂಪದ ಉಪಾಸನೆಯನ್ನೇ ಕೈಕೊಳ್ಳದವರಿಗೆ) ವಿಶೇಷ ಉಪಾಸನೆಯ ಬಗ್ಗೆ ಹೇಳುವದರಲ್ಲಿ ಏನು ಪ್ರಯೋಜನ? ಸಾಮಾನ್ಯ ಉಪಾಸನೆಯಲ್ಲಿ ಪರಿಣಿತಿಯನ್ನು ಪಡೆದ ನಂತರ, ವಿಶೇಷ ಉಪಾಸನೆಯ ಬಗ್ಗೆ ಆಕಾಂಕ್ಷೆ ಉಂಟಾದಾಗ್ಗೆ ಅದನ್ನು ಹೇಳಿಕೊಡಲು ತಕ್ಕ ಸಮಯ. ಪೂರ್ವ ಜನ್ಮಗಳಲ್ಲಿ ದೈತ್ಯ ಬಾಲಕರು ಸ್ಥೂಲೋಪಾಸನೆಯನ್ನು ಸಮೀಚೀನವಾಗಿ ಸಾಧಿಸಿಕೊಂಡವರಾದ್ದರಿಂದ, ಶ್ರೀ ಪ್ರಲ್ಹಾದರು, (ಸ್ಥೂಲೋಪಾಸನೆಯನ್ನು ಈ ಮೊದಲೇ ಮುಗಿಸಿದ್ದ) ದೈತ್ಯ ಬಾಲಕರಿಗೆ ಪ್ರಾರಂಭದಲ್ಲಿಯೆ ಸೂಕ್ಷ್ಮೋಪಾಸನೆಯನ್ನು ಹೇಳಿಕೊಡುವಲ್ಲಿ ಕ್ರಮ ಭಂಗದ ಯಾವ ದೋಷವೂ ಬಾರದು.

**॥೨೦೩॥ ಕೇಚಿತ್ಸ್ವದೇಹಾಂತರ್ಹೃದಯಾವಕಾಶೇ**
**ಪ್ರಾದೇಶಮಾತ್ರಂ ಪುರುಷಂ ವಸಂತಂ ।**
**ಚತುರ್ಭುಜಂ ಕಂಜರಥಾಂಗಶಂಖ-**
**ಗದಾಧರಂ ಧಾರಣಯಾ ಸ್ಮರಂತಿ ॥** 2-2-9

ಸಾಮಾನ್ಯೋಪಾಸನೆಯನ್ನು ಸಾಕಷ್ಟು ಕಾಲ ನಡೆಯಿಸಿ, ಚಿತ್ತಶುದ್ಧಿಯಿಂದ ವಿಶುದ್ಧಭಕ್ತಿಯನ್ನು ಪಡೆದವರಿಗೆ, ವಿಶೇಷೋಪಾಸನೆಯ ಬಗ್ಗೆ ತಿಳಿಸಿ ಹೇಳುವ ಯೋಗ್ಯಸಮಯಯವು ಬರುವದೆಂಬ ಮಾತು ಸತ್ಯವಾಗಿರಲಿ. ಆದರೆ ಸಾಮಾನ್ಯ ಉಪಾಸನೆಯ ಸ್ವರೂಪವೇನು? ಉಪಾಸನೆಯ ಕ್ರಮವೇನು? ಇದನ್ನು ತಿಳಿಸಿ ಹೇಳಿದರೆ, (ಸೂಕ್ಷ್ಮೋಪಾಸನೆಗೆ ಸಹಾಯಕವೆಂದು) ನಾವು ಅದರಲ್ಲಿಯೆ ತೊಡಗುವೆವು. ಈ ಮೊದಲು ಸೂಕ್ಷ್ಮರೂಪದ ಉಪಾಸನೆಯನ್ನು ಅರಿತುಕೊಳ್ಳಲು ಬಯಸುವವರಿಗೆ, ಸ್ಥೂಲೋಪಾಸನೆಯನ್ನು ಯಥಾವತ್ತಾಗಿ ಮುಗಿಸಿ, ಆ ಉಪಾಸನೆಯ ಫಲವನ್ನು ಪಡೆದು, ಸೂಕ್ಷ್ಮರೂಪದ ಉಪಾಸನೆಯನ್ನು ಮಾಡಲು ಅರ್ಹತೆಯನ್ನು ಪಡೆದ ಅಧಿಕಾರಿಗಳಿಗೆ, ಅದರ ಸ್ವರೂಪ, ಪ್ರಕಾರ, ಅದರಲ್ಲಿಯ ವಿಶೇಷ ಸಂಗತಿಗಳನ್ನು ಅವರ ಜ್ಞಾಪಕಕ್ಕೆ (ನೆನಪಿಗೆ) ತಂದುಕೊಡುವೆವು.

**ಅರ್ಥ:-** (ಪರಮಾತ್ಮನ ಉಪಾಸನೆಯನ್ನು ಅನೇಕರು ಅನೇಕ ವಿಧವಾಗಿ ಮಾಡುವರು.) ಈ ಉಪಾಸಕರಲ್ಲಿ, (ಸ್ಥೂಲೋಪಾಸನೆಯಲ್ಲಿ ಸಿದ್ಧಿಯನ್ನು ಪಡೆದು, ಸೂಕ್ಷ್ಮದ ಉಪಾಸನೆಗೆ ಅಧಿಕಾರಿಗಳಾದ) ಕೆಲವರು ತಮ್ಮ ಹೃದಯದ ಅಂತರಂಗದಲ್ಲಿಯೆ (ಅಂತರಾತ್ಮನಾಗಿ) ನೆಲೆಸಿರುವ, ಪ್ರಾದೇಶ ಪರಿಮಿತಿ

ಯುಳ್ಳ, ಗುಣಪೂರ್ಣನೂ, ನಾಲ್ಕು ತೋಳುಗಳುಳ್ಳವನೂ, ಪದ್ಮ, ಚಕ್ರ, ಶಂಖ, ಗದೆಗಳನ್ನು ಧರಿಸಿದವನೂ, ಆದ ಶ್ರೀಹರಿಯನ್ನು ಧಾರಣೆಯಿಂದ (ಬಿಟ್ಟು ಬಿಟ್ಟು ನಡೆಯುವ ಧ್ಯಾನದಿಂದ) ಸ್ಮರಿಸುವರು, ತಮ್ಮ ಧ್ಯಾನ ರೂಪವಾದ ಉಪಾಸನೆಗೆ ವಿಷಯವನ್ನಾಗಿ ಮಾಡಿಕೊಳ್ಳುವರು.

ಅಪರೋಕ್ಷ (ಸಾಕ್ಷಾತ್ಕಾರ) ವನ್ನು ಪಡೆಯಲು ಮೂರು ಬಗೆಯ ಚಿತ್ತ ವೃತ್ತಿಗಳಿರುವವು – ಧಾರಣಾ, ಧ್ಯಾನ, ಸಮಾಧಿ, ಎಂಬಿವೆ ಮೂರು. ಇವುಳಲ್ಲಿ 'ಖಂಡ ಸ್ಮೃತಿ' (ಬಿಟ್ಟು ಬಿಟ್ಟು ಮಾಡುವ) ಧ್ಯಾನವೆ 'ಧಾರಣಾ' ಎನಿಸುವದು 'ಅಖಂಡ ಸ್ಮೃತಿ' (ಅಡೆತಡೆಯಿಲ್ಲದೆ ಧ್ಯಾನವಿಷಯದಲ್ಲಿ ನಿರಂತರವಾಗಿ ಮನಸ್ಸನ್ನು ನಿಲ್ಲಿಸುವದು – ಧ್ಯಾನವೆನಿಸುವದು. ಅದಕ್ಕಾಗಿ ಯಾವ ಪ್ರಯತ್ನದ ಅಗತ್ಯವಿಲ್ಲದೆ ಮನಸ್ಸು (ತಾನಾಗಿಯೆ) ಧ್ಯಾನ ವಿಷಯದಲ್ಲಿ ಸ್ಥಿರವಾಗಿ ನೆಲಿಸುವಂತಾಗುವದೇ 'ಸಮಾಧಿ'ಯು. ಧಾರಣಾ-ಸ್ಮೃತಿಯ ಕ್ರಮವನ್ನು ಈ ಶ್ಲೋಕಗಳಲ್ಲಿ ಶ್ರೀ ಶುಕರು, ಪರೀಕ್ಷಿತರಾಜನಿಗೆ ಹೇಳಿರುವರು. ಈ ಸಾಧನಾರೂಪವಾದ ಧ್ಯಾನದಲ್ಲಿಯೆ ಸಾಧಕರು ಮೊದಲು ಸಿದ್ಧಿಯನ್ನು ಪಡೆಯಬೇಕಾಗುವದು.

**॥೨೦೪॥ ಪ್ರಸನ್ನವಕ್ತ್ರಂ ನಲಿನಾಯತೇಕ್ಷಣಂ**
**ಕದಂಬಕಿಂಜಲ್ಕಪಿಶಂಗವಾಸಸಂ ।**
**ಲಸನ್ಮಹಾಹಾರಹಿರಣ್ಮಯಾಂಗದ-**
**ಸ್ಫುರನ್ಮಹಾರತ್ನಕಿರೀಟಕುಂಡಲಂ ॥** 2-2-10

ಅರ್ಥ :– ಪ್ರಸನ್ನ (ಆನಂದರಸ ಸೂಸುವ) ಮುಖವುಳ್ಳವನು (ಅರಳಿದ) ಕಮಲದಂತೆ ವಿಶಾಲವಾದ ಕಣ್ಣುಗಳುಳ್ಳವನು, ಕಥಂಬಹೂವಿನ ಎಸಳುಗಳ ಬಣ್ಣದ ಪೀತಾಂಬರವನ್ನು ಉಟ್ಟವನು, ಹೊಳೆಯುತ್ತಿರುವ ದೊಡ್ಡ ಸರಗಳನ್ನು, ಬಂಗಾರದ ತೋಳುಬಳೆ (ಭುಜಕೀರ್ತಿ–ಅಂಗದ) ಗಳನ್ನು, ಅನರ್ಘ್ಯ ರತ್ನಗಳಿಂದ ಕೆಚ್ಚಿದ ಬಂಗಾರದ ಕಿರೀಟ ಹಾಗೂ ಕುಂಡಲ (ಕಿವಿಯಾಭರಣ) ಗಳನ್ನು ಧರಿಸಿದವನೂ.

**॥೨೦೫॥ ಉನ್ನಿದ್ರಹೃತ್ಪಂಕಜಕರ್ಣಿಕಾಲಯೇ**
**ಯೋಗೇಶ್ವರಾಸ್ಥಾಪಿತಪಾದಪಲ್ಲವಂ ।**
**ಶ್ರೀಲಕ್ಷಣಂ ಕೌಸ್ತುಭರತ್ನಕಂಧರ-**
**ಮಮ್ಲಾನಲಕ್ಷ್ಮ್ಯಾ ವನಮಾಲಯಾಂಚಿತಂ ॥** 2-2-11

**ಅರ್ಥ :–** (ಭಕ್ತಿಯಿಂದ) ಅರಳಿದ ಹೃದಯಕಮಲದ ನಡುವಿನ ದೇಟಿನಲ್ಲಿ (ಕಣಿಕೆಯಲ್ಲಿ) ಶ್ರೇಷ್ಠರಾದ ಯೋಗಿಗಳು (ಧ್ಯಾನಕ್ಕಾಗಿ) ನೆಲಸಿಕೊಂಡಿರುವ (ಎಸಳಿನಂತೆ–ಚೀರಿನಂತೆ) ಕೋಮಲವಾದ ಪಾದಗಳುಳ್ಳವನು, ಹೃದಯಸ್ಥಳದಲ್ಲಿ ಲಕ್ಷ್ಮೀದೇವಿಯ ಅಂಕಿತವುಳ್ಳವನು, ಕೊರಳಲ್ಲಿ ಕೌಸ್ತುಭನೆಂಬ ಶ್ರೇಷ್ಠರತ್ನವನ್ನು ಧರಿಸಿದವನು, ಬಾಡದ ಬೆಡಗಿನಿಂದ ಕೂಡಿದ ವನಕುಸುಮಗಳ ಮಾಲೆಯನ್ನು (ಪಾದಗಳವರೆಗೆ) ಧರಿಸಿದವನು,

ಯೋಗಿಶ್ರೇಷ್ಠರು ಶ್ರೀ ಹರಿಯ ಪಾದಕಮಲವನ್ನು ತಮ್ಮ ಹೃದಯಕಮಲದಲ್ಲಿ ಧರಿಸಿರುವದು–ಭಕ್ತಿಯ, ಧ್ಯಾನದ ಬಲದಿಂದ: ನೀವಾದರೂ ಧ್ಯಾನದ ಸಾಧನೆ ಮಾಡಿ ಶ್ರೀ ಹರಿ ಕೃಪೆಯನ್ನು ಪಡೆಯಬಲ್ಲಿರಿ, ನಿಮ್ಮ ಶಕ್ತಿಗೆ ಇದು ಮೀರಿದುದು, ಎಂದು ನಿರಾಶೆ ಪಡಬೇಡಿರಿ; ಎಂಬ ಭರವಣೆಯು ಸಾಧನೆಯ ಪ್ರಾರಂಭದಲ್ಲಿ ಅಧೀರರಾದ ಸಾಧಕರಿಗೆ ಇಲ್ಲಿ ಕೊಡಲ್ಪಟ್ಟಿದೆ.

'ಕುಂ' ಎಂದರೆ ಪೃಥ್ವಿಯನ್ನು – 'ಸ್ತುಭ್ನಾತಿ' – ಎಂದರೆ ಸುತ್ತುಗಟ್ಟಿರುವದು 'ಕುಸ್ತುಭ'ವೆಂದರೆ ಸಮುದ್ರ. ಕುಸ್ತುಭ (ಸಮುದ್ರ) ದಿಂದ ಹುಟ್ಟಿದುದು 'ಕೌಸ್ತುಭ' ರತ್ನ.

॥೨೦೬॥ **ವಿಭೂಷಿತಂ ಮೇಖಲಯಾಂಗುಲೀಯಕೈ–** ಶುಕಪು
**ರ್ಮಹಾಧನೈರ್ನೂಪುರಕಂಕಣಾದಿಭಿಃ ।** ರಾಜನಿಗೆ
**ಸ್ನಿಗ್ಧಾಮಲೈಃ ಕುಂಚಿತನೀಲಕುಂತಲೈ–**
**ರ್ವಿರೋಚಮಾನಾನನಹಾಸಪೇಶಲಂ ॥** ೨–೨–॥

**ಅರ್ಥ :–** ಅನರ್ಘ್ಯವಾದ (ಒಳ್ಳೇ ಬೆಲೆಯುಳ್ಳ) ಒಡ್ಯಾಣ, ಉಂಗುರಗಳು ಕಾಲಿನ ಗೆಜ್ಜೆ ( ನೂಪುರ–ಕಾಲಂದುಗ ) ಹಾಗೂ ಕೈಬಳೆ (ಸಲಖಡೆ) ಗಳಿಂದ ಅಲಂಕೃತನಾದವನು, ಒಳ್ಳೇ ನಯವಾದ, ಕುಂದಿಲ್ಲದ ನೀಲಿ ಬಣ್ಣದ ಉಂಗುರು ಗೂದಲುಗಳುಳ್ಳವನು, ತೇಜಸ್ವಿಯಾದ ಮುಖದಲ್ಲಿ ಮಿನಗುವ ಮಂದಹಾಸದಿಂದ ಶೋಭಿಸುವವನು.

॥೨೦೭॥ **ಅದೀನಲೀಲಾಹಸಿತೇಕ್ಷಣೋಲ್ಲಸ–** ಶುಕಬು
**ದ್ಭ್ರೂಭಂಗಸಂಸೂಚಿತಭೂರ್ಯನುಗ್ರಹಂ ।**
**ಈಕ್ಷೇತ ಚಿಂತಾಮಯಮೇನಮೀಶ್ವರಂ**
**ಯಾವನ್ಮನೋ ಧಾರಣಯಾವತಿಷ್ಠತೇ ॥** 2–2–12

**ಅರ್ಥ :–** (ಅನುಗ್ರಹದಿಂದ) ಸಮೃದ್ಧವಾದ, ಸ್ವಾಭಾವಿಕ (ಲೀಲಾ) ವಾದ ಕುಡಿನೋಟದಿಂದ ಕೂಡಿದವನು, ಕಂಗೊಳಿಸುವ ಹುಬ್ಬಿನ ಮಿಡಿತದಿಂದ (ಹಾರುವಿಕೆಯಿಂದ) ಸೂಚಿಸುವ ( ದ್ಯೋತಕವಾದ ) ಪರಮಾನುಗ್ರಹ ಉಳ್ಳವನ್ನು, ಅಪೇಕ್ಷಿತ ಪ್ರದಾಯಕನಾದ ( ಜಗದೊಡೆಯನಾದ ) ಶ್ರೀ ರಮಾಪತಿಯನ್ನು (ಪ್ರಾರಂಭದ) ಖಂಡಿತ ಧ್ಯಾನ (ಬಿಟ್ಟುಬಿಟ್ಟು ಮಾಡುವ ಧಾರಣಾ ರೂಪಧ್ಯಾನ) ದಿಂದ ಆ ಪರಮಾತ್ಮನಲ್ಲಿ ಅಖಂಡವಾಗಿ ನಿರಂತರವಾಗಿ ಚಿತ್ತವೃತ್ತಿಯು ನೆಲಿಸುವವರೆಗೆ ಆರಾಧಿಸಬೇಕು. ಭಗವಂತನಲ್ಲಿ ಚಿತ್ತವೃತ್ತಿಯನ್ನು ಅಖಂಡವಾಗಿ ನೆಲಿಸಸಲು ಶಕ್ಯವಾಗದವರೆಗೆ ಧಾರಣಾಕ್ರಮ. ಅನಂತರ, ನಿರಂತರವಾಗಿ (ಅಖಂಡವಾಗಿ) ನೆಲಿಸುವ ಚಿತ್ತವೃತ್ತಿಯಿಂದ ( ಧ್ಯಾನಕ್ರಮದಿಂದ ) ಭಗವಂತನ ಆರಾಧನೆಯನ್ನು ಮಾಡಬೇಕು. ಈ ಬಗೆಯ ಧ್ಯಾನಕ್ರಮವನ್ನು ಬಹುಕಾಲ ರೂಢಿಸಿಕೊಂಡ ನಂತರ, ( ಇಳುಕಲಿನಲ್ಲಿ ನೀರು ತಾನಾಗಿ ಹರಿಯುವಂತೆ ), ಚಿತ್ತವೃತ್ತಿಯು ಭಗವಂತನಲ್ಲಿ. ಅದಕ್ಕಾಗಿ ಯಾವುದೇ ಪ್ರಯತ್ನದ ಅಗತ್ಯವಿಲ್ಲದೆ ತಾನಾಗಿಯೇ ಸ್ಥಿರವಾಗಿ ನೆಲಿಸುವದು. ಅಪ್ರಯತ್ನವಾಗಿ ಚಿತ್ತವೃತ್ತಿಯು ಭಗವಂತನಲ್ಲಿ ಸ್ಥಿರವಾಗಿ ನೆಲಿಸುವ ಸ್ಥಿತಿಗೆ 'ಸಮಾಧಿ' ಯೆನ್ನುವರು.

'ಚಿಂತಿ ತೋ ವಿಷ್ಣುಃ ಚಿಂತಿತಂ ಪ್ರದಾತಿ' ಎಂದಿರುವದರಿಂದ, ಪರಮಾತನಿಗೆ 'ಚಿಂತಾಯಕ' ನೆನ್ನುವರು.

||೨೦೮|| **ಏಕೈಕಶೋಽಂಽಗಾನಿ ಧಿಯಾ ವಿಭಾವಯೇತ್** ಕಕಪ
**ಪಾದಾದಿ ಯಾವದ್ಧಸಿತಂ ಗದಾಭೃತಃ |**
**ಜಿತಂ ಜಿತಂ ಸ್ಥಾನಮಪೋಹ್ಯ ಧಾರಯೇ-**
**ತ್ಪರಂ ಪರಂ ಶುದ್ಧ್ಯತಿ ಧೀರ್ಯಥಾ ಯಥಾ ||**
೨-೨-(೯,೧೦,೧೧,೧೨,೧೩,೧೪,)

ಇಲ್ಲಿ ಹೇಳಿರುವ ಧ್ಯಾನಪ್ರಕಾರದಿಂದ, ಧ್ಯಾನಕ್ಕೆ ವಿಷಯನಾದ ಪರಮಾತ್ಮನ ಸಕಲ ಅವಯವಗಳಲ್ಲಿ ಸಾಕಲ್ಯೇನ–ಸಮಗ್ರ ಮೂರ್ತಿಯಲ್ಲಿ–ಚಿತ್ತವೃತ್ತಿಯನ್ನು (ತನ್ನಧ್ಯಾನದಲ್ಲಿ) ನಿಲ್ಲಿಸಲು ಶಕ್ತನಾಗದ ಸಾಧಕನು ಏನು ಮಾಡಬೇಕು? – ಎಂಬ ಪ್ರಶ್ನೆಗೆ ಇಲ್ಲಿ ಉತ್ತರ ಹೇಳುವರು.

**ಅರ್ಥ:–** "ಗದಾಧಾರಿಯಾದ ಶ್ರೀ ಮಹಾವಿಷ್ಣುವಿನ ಪಾದದಿಂದ ಮುಖದವರೆಗಿನ ಅವಯುಗಳನ್ನು (ಕೆಳಗಿನಿಂದ ಮೇಲಕ್ಕೆ) ಒಂದೊಂದಾಗಿ ಧ್ಯಾನ

ಮಾಡಬೇಕು. ಒಂದರಲ್ಲಿ ಮನಸ್ಸು ಸ್ಥಿರವಾಗಿ ನಿಲ್ಲುವಂತಾದ ಮೇಲೆ (ಮೇಲಿನ) ಮತ್ತೊಂದು ಅವಯವದಲ್ಲಿ ಅತ್ತಿತ್ತ ಹರಿದಾಡದಂತೆ, ಚಿತ್ತವೃತ್ತಿಯು ಸುಸ್ಥಿರವಾಗಿ ನೆಲಸುವಂತೆ ಪರಮಾತ್ಮನ ಚಿಂತನೆಯನ್ನು ಮಾಡಬೇಕು; ಧ್ಯಾನದಲ್ಲಿ ಸಿದ್ಧಿಯನ್ನು ಪಡೆಯಬೇಕು – 'ಜಿತ' ವಾದ, ಚಿತ್ತವೃತ್ತಿಯು ಸ್ಥಿರವಾದ ಅವಯವವನ್ನು ಬಿಟ್ಟುಕೊಟ್ಟು (ಮುಂದಕ್ಕೆ ಸಾಗಿ) ಮತ್ತೊಂದು ಅವಯವನ್ನು (ಪ್ರಾರಂಭದಲ್ಲಿ) ಖಂಡ ಸ್ಮೃತಿಗೆ ವಿಷಯವನ್ನಾಗಿ ಮಾಡಬೇಕು." ಚಿತ್ತಶುದ್ಧಿಯಾಗುವವರಗೆ ಹೀಗೆ ಮಾಡಬೇಕು. 'ಜಿತಂ ಜಿತಂ–ಪರಂ' ಪರಂ–ಒಂದರಲ್ಲಿ ಚಿತ್ತವೃತ್ತಿಯು ಸ್ಥಿರವಾದ ಮೇಲೆ ಬೇರೆಯೊಂದನ್ನು'– ಎಂದು ಹೇಳಿರುವದು, ಚಿತ್ತವೃತ್ತಿಯನ್ನು (ಒಮ್ಮಿಗೆಲೆ–ಪ್ರಾರಂಭದಲ್ಲಿ) ಸಮಗ್ರರೂಪದಲ್ಲಿ ನಿಲ್ಲಿಸುವದು ಅಶಕ್ಯವೆಂಬುದನ್ನು ಸೂಚಿಸುವದು.

'ಏಕೈಕಶಃ–' ಒಂದೊಂದೇ ಅವಯವದಲ್ಲಿ ಪ್ರಾರಂಭಕ್ಕೆ ಮನಸ್ಸನ್ನು ಸ್ಥಿರಗೊಳಿಸಬೇಕೆಂದು ಹೇಳಿರುವದು, ಶಬ್ದಶಃ ಪಾಲಿಸಲೇಬೇಕೆಂಬ ನಿಯಮವಾಗಿಲ್ಲ. ಅದರ ಆಶಯವೆಂದರೆ, ಎಷ್ಟೆಷ್ಟು ಅವಯವಗಳಲ್ಲಿ ಚಿತ್ತವೃತ್ತಿಯನ್ನು (ಏಕ ಕಾಲಕ್ಕೆ) ನಿಲ್ಲಿಸಲು ತನಗೆ ಶಕ್ಯವಿರುವದೊ, ಅಷ್ಟು ಅವಯವಗಳಲ್ಲಿ ಮಾತ್ರ ಧಾರಣಾರೂಪವಾದ ಧ್ಯಾನದ ಅನುಷ್ಠಾನವನ್ನು ಮಾಡಬೇಕು.

ಒಟ್ಟಿನಲ್ಲಿ ಹೇಳುವದೆಂದರೆ :– ಪರಮಾತ್ಮನ ಸಮಗ್ರರೂಪದಲ್ಲಿ ತನ್ನ ಚಿತ್ತವೃತ್ತಿಯನ್ನು ಸ್ಥಿರವಾಗಿ ನಿಲ್ಲಿಸಲು ಶಕ್ತನಾಗಿರದ ಸಾಧಕನು (ತನ್ನ ಶಕ್ತಿಯ ಮೇರೆಗೆ) ಎರಡು–ಮೂರು, ಮೂರು–ನಾಲ್ಕು ಇಲ್ಲವೆ ಐದು–ಆರು ಅವಯವಗಳಲ್ಲಿ ಧಾರಣಾರೂಪವಾದ ಚಿಂತನೆಯನ್ನು ಮಾಡಬೇಕು, ಇಷ್ಟೊಂದು ಅವಯವಗಳಲ್ಲಿ (ಏಕಕಾಲಕ್ಕೆ) ಧಾರಣಾರೂಪವಾದ ಚಿಂತನೆಯನ್ನು ಮಾಡುವದು ಸಾಧಕನಿಗೆ ಶಕ್ಯವಿರದಿದ್ದರೆ, (ಹಿಂದೆ ನಿರೂಪಿಸಿದಂತೆ) ಕ್ರಮೇಣ ಒಂದೊಂದಾಗಿ ಅವಯವದಲ್ಲಿ ಧಾರಣಾಕ್ರಮವನ್ನು ಅನುಸರಿಸಬೇಕು.

ಧ್ಯಾನಪ್ರಕಾರದ ಈ ನಿರೂಪಣೆಯಿಂದ, 'ಸ್ಮರಣ'ವೆಂಬ ಭಾಗವತ ಧರ್ಮವು ಪ್ರತಿಪಾದಿಸಲ್ಪಟ್ಟಿದೆ – ಎಂಬುದು ಸ್ಪಷ್ಟವಾಗಿದೆ.

ಧ್ಯಾನ ಪ್ರಕರಣವು ಮುಗಿಯಿತು.

**
**

ಶ್ರೀ ಮುರಲೀಧರನಿಗೆ ಪ್ರಣಾಮಗಳು
ಶ್ರೀ ಸತ್ಯಜ್ಞಾನತೀರ್ಥ ಗುರುಗಳಿಗೆ ವಂದನೆ.

13 ಶ್ಲೋಕಗಳು

# ೧೮ ಬಿಂಬೋಪಾಸಕ ಗುರುಪ್ರಾಪ್ತಿ ಪ್ರಕರಣ

ಶ್ಲೋಕಗಳು ... ಪ್ರಶ್ನಾವಳಿ ... ಪ್ರಶ್ನಾವಾಕ್ಯಗಳು

॥೨೧೯॥ ಶುದ್ಧಿರ್ನೃಣಾಂ ನ ತು ತಥೇಡ್ಯ ದುರಾಶಯಾನಾಂ
ವಿದ್ಯಾಶ್ರುತಾಧ್ಯಯನದಾನತಪಃಕ್ರಿಯಾಭಿಃ ।
ಸತ್ತ್ವಾತ್ಮನಾಮೃಷಭ ತೇ ಯಶಸಿ ಪ್ರವೃದ್ಧ-
ಸಚ್ಛ್ರದ್ಧಯಾ ಶ್ರವಣಸಂಭೃತಯಾ ಯಥಾ ಸ್ಯಾತ್ ॥

೧೧-೬-೯

[೧] ಹಿಂದೆ ಹೇಳಿರುವಂತೆ, ತನ್ನ ಯೋಗ್ಯತೆಗೆ ತಕ್ಕಂತೆ (ಪುರುಷಾರ್ಥ ಪ್ರಾಪ್ತಿಗೆ) ಸಹಾಯಕವಾಗಿರುವ ಸಾಧನಸಾಮಗ್ರಿಯನ್ನು ಪಡೆದವನಾಗಿ, ದಿನದಿನಕ್ಕೂ ಹೆಚ್ಚುತ್ತಿರುವ ಭಕ್ತಿಯೆ ಮುಂತಾದ ಸಾಧನಗಳಿಂದ ಕೂಡಿದವನಾಗಿ (ಹಿಂದೆ) ಹೇಳಿರುವ ರೀತಿಯಲ್ಲಿ ಶ್ರೀ ಹರಿಯ ಪಾದಕಮಲಗಳ ಆರಾಧನೆಯನ್ನು ಮಾಡುವವನಾಗಿ. ಏಕಾಂತ (ಜನರಿಲ್ಲದ) ಸ್ಥಳದಲ್ಲಿ (ಧ್ಯಾನಮಾಡುತ್ತ) ಕುಳಿತಿರುವ, (ಉಪಾಸನೆಗೆ ಪಾತ್ರತೆಯುಳ್ಳ) ಅಧಿಕಾರಿಯಾದವನ ಮನಸ್ಸು ಬಹುಮುಖವಾದ ವಿಚಾರದಲ್ಲಿ ತೊಡಗುವದು. ಅದು ಈ ರೀತಿಯಲ್ಲಿ:-(ಇಂದಿನ) ನನ್ನ ಮನಃಶುದ್ಧಿಯು ಹೇಗೆ ಇರುವದು ? ಏಕೆಂದರೆ, ನನ್ನ ಮನಸ್ಸು ಮತ್ತೆ ಮತ್ತೆ ಒಂದಿಲ್ಲೊಂದು (ಲೌಕಿಕ) ವಿಷಯಗಳ ಕಡೆಗೇನೆ ಜೋರಾಗಿ ಹರಿಯುವದು. ಪರಿಪೂರ್ಣವಾದ (ಚಾಂಚಲ್ಯದ ದೋಷವಿಲ್ಲದ) ಚಿತ್ತಶುದ್ಧಿಯು ಏನು ಮಾಡುವದರಿಂದ ಉಂಟಾಗುವದು ? ಸಂಸಾರದ ಜಂಜಾಟವನ್ನೆಲ್ಲ ತೊರೆದು, ದೇಹದಂಡನೆಯಿಂದ ಮಾಡುವ ತೀರ್ಥಾಟನೆಯಿಂದ, ಇಲ್ಲವೆ ಬೇರೊಂದು ಉಪಾಯದಿಂದ ಇದು (ಈ ಬಗೆಯ ಚಿತ್ತಶುದ್ಧಿಯು) ಉಂಟಾಗಬಲ್ಲದೆ ?

[೨] (ಇದೇ ಮೇರೆಗೆ, ಇನ್ನೊಂದು ಬಗೆಯಲ್ಲಿಯೂ ನನ್ನ ಮನಸ್ಸು ಅತ್ತಿತ್ತ ಹರಿಯುವದು. ಹೇಗೆಂದರೆ);- ಇಂದು, ಈ ವಸ್ತು ಇದೆ, ಅದು ಇಲ್ಲ. ಇದು ಕಳೆದು ಹೋಯಿತು; ಈ ವ್ಯಕ್ತಿ ತೀರಿಕೊಂಡನು. ಈ ಬಗೆಯ ಅನೇಕ ಘಟನೆಗಳಿಂದ ಮನಸ್ಸು ನೊಂದುಕೊಳ್ಳುವದು. ಮನಸ್ಸನ್ನು ಕದಡುವ ಈ ಬಗೆಯ ತೊಂದರೆಗಳು (ಮನೆ ಮಾರುಗಳನ್ನು ತೊರೆದು) ಏಕಾಕಿಯಾಗಿ ತೀರ್ಥಾಟನೆ ಮಾಡುವದರಿಂದ, ಅಥವಾ ಬೇರೊಂದು ಉಪಾಯದಿಂದ ತೊಲಗುವವೆ ?

[೩] ಇದು ಮಾತ್ರವಲ್ಲದೆ, (ಏಕಾಗ್ರತೆಯಿಂದ) ಭಗವಂತನ ಉಪಾಸನೆ ಮಾಡಲು ಧಡಪಡಿಸುವವರಿಗೆ, ಅನೇಕ ಆತಂಕಗಳು ಸುತ್ತುಗಟ್ಟಿ ಆತನ ಆಕಾಂಕ್ಷೆಯನ್ನು ಬುಡಮೇಲು ಮಾಡುವವು. ಈ ಆತಂಕಗಳನ್ನು ಹೇಗೆ ನಿವಾರಿಸಬಹುದು ?

[೪] ಮತ್ತೆಂದರೆ, ಯಾವ ಬಗೆಯ ಉಪಾಸನೆಯಿಂದ ಪರಮಾತ್ಮನ ಸಾಕ್ಷಾತ್ಕಾರವಾಗುವದು ? ಅಪರೋಕ್ಷಪ್ರಾಪ್ತಿಯಾಗದೆ ಮುಕ್ತಿ ದೊರೆಯದು. ಬಿಂಬರೂಪವನ್ನು ಬಿಟ್ಟು ಬೇರೊಂದು ರೂಪದ ಆರಾಧನೆಯು ಮುಕ್ತಿಗೆ ಸಾಧನವಾಗಲಾರದು. ಆದುದರಿಂದ 'ವಿಜ್ಞಾನ' ವೆಂದು ಹೇಳುವ ಬಿಂಬರೂಪದ ಜ್ಞಾನವನ್ನು ಪಡೆಯಬೇಕಾಗುವದು. ಬಿಂಬರೂಪದ ಜ್ಞಾನವು ಹೇಗೆ ಲಭಿಸುವದು ? [೫] ನನ್ನಲ್ಲಿರುವ ( ಪರಮಾತ್ಮನಲ್ಲಿ ) ಭಕ್ತಿಯಾದರೂ ಎಂತಹದು ? ನನ್ನ ಭಕ್ತಿಯು ರೊಟ್ಟಿಯ ಮೇಲಿನ ಆಶೆಯಂತಿರುವ, ಫಲಪ್ರಾಪ್ತಿಯವರೆಗೆ ಮಾತ್ರ ಬಾಳುವ (ಕ್ಷಣಿಕ) ಕಾಮುಕ ಭಕ್ತಿಯೆ ? ಇಲ್ಲವೆ, 'ನಾನು-ನನ್ನದು' ಎನ್ನುವ ಸಕಲ ವಸ್ತುಗಳ ಬಗ್ಗೆ ನನಗಿರುವ ಅನುರಾಗಕ್ಕಿಂತಲೂ ಗುಣದಲ್ಲಿ ಅನಂತಪಟ್ಟು ಅಧಿಕವಾಗಿ (ಪರಮಾತ್ಮನಲ್ಲಿ) ಪ್ರೀತಿಯ (ಅನುರಾಗದ) ಪ್ರವಾಹವಾಗಿ ನಿರಂತರವಾಗಿ ಹರಿಯುವ ಭಕ್ತಿಯೆ ? ಶಾಸ್ತ್ರಗಳಲ್ಲಿ ವರ್ಣಿತವಾದ ಈ ಬಗೆಯ ಭಕ್ತಿಯು ನನ್ನಲ್ಲಿ ಹೇಗೆ ಉಂಟಾದೀತು ? [೬] ( ಐಹಿಕ ವಿಷಯಗಳ ಬಗ್ಗೆ) ನನ್ನಲ್ಲಿ ಇಂದು ಉಂಟಾಗಿರುವ ಹೇಯ ಭಾವನೆಯಾದರೂ ಹೇಗಿರುವದು ? ತಾವು ಬಯಸುವ ವಸ್ತು ದೊರೆಯದಿರಲು ತಮಗೆ ಅದು ಬೇಕಾಗಿಲ್ಲವೆಂದು ಬಾಲಕರು ಹೇಳುವ ರೀತಿಯ (ಅಭಾವ) ವೈರಾಗ್ಯವೆ ? ಅಥವಾ ಈ ದೇಹವನ್ನು ಒಂದು ಹೆಣದಂತೆ ಬಗೆಯುವರೆಂಬ, ಶಾಸ್ತ್ರದಲ್ಲಿ ಹೇಳಿರುವ ರೀತಿಯ (ಶುದ್ಧ) ವೈರಾಗ್ಯವೆ ? ಈ ಬಗೆಯ ಶುದ್ಧ-ಶ್ರೇಷ್ಠವೈರಾಗ್ಯವು ನನ್ನಲ್ಲಿ ಹೇಗೆ ಉಂಟಾದೀತು ? ಈ ಬಗೆಯ ಶುದ್ಧ ವೈರಾಗ್ಯವಿದ್ದರೆ ಮಾತ್ರ, ಮುಕ್ತಿಗಾಗಿ ಮಾಡುವ ಉಳಿದ ಎಲ್ಲ ಸಾಧನಗಳು ಸಾರ್ಥಕವಾಗುವವು. ಈ ಬಗೆಯ ವೈರಾಗ್ಯವೇ ಸಕಲ ಸಾಧನಗಳಿಗೆ ಆಧಾರವಾಗಿದೆ. [೭] 'ನನಗೆ ಇದರಿಂದ ಉಪಯೋಗವಿದೆ, ಇದನ್ನು ನಾನು ಪಡೆಯಬೇಕು. ಇದನ್ನು ಪಡೆಯಲು ಯಾರಾದರೂ ಆತಂಕವನ್ನೊಡ್ಡಿದರೆ ಅವನಿಗೆ ಈ ಬಗೆಯ ಪ್ರತೀಕಾರವನ್ನು ಮಾಡಬೇಕು. ಬೇರೊಂದು ರೀತಿಯಿಂದ ಅಡ್ಡಬಂದರೆ, ಈ ರೀತಿಯಿಂದ ಅವನನ್ನು ಎದುರಿಸಬೇಕು' ಲೌಕಿಕ ಸ್ಥೂಲ ವಿಷಯಗಳಲ್ಲಿ ನನ್ನ ಮನಸ್ಸು ಅನೇಕ ಬಗೆಯ ಊಹಾಪೋಹಗಳಲ್ಲಿ ಈ ರೀತಿಯಲ್ಲಿ (ತುಂಬಾ ಆಸ್ಥೆಯಿಂದ) ತೊಡಗುವಂತೆ, ಪಾರಲೌಕಿಕ, ಆಧ್ಯಾತ್ಮಿಕವಾದ ಸೂಕ್ಷ್ಮ ವಿಷಯಗಳಲ್ಲಿ, ತಾತ್ವಿಕ ಸಂಗತಿಗಳಲ್ಲಿ ನನ್ನ ಮನಸ್ಸು

(ಅಷ್ಟೇ) ಆಸ್ಥೆಯನ್ನು ತಾಳುವದಿಲ್ಲ. ಆಧ್ಯಾತ್ಮಿಕ ಸೂಕ್ಷ್ಮ ವಿಷಯಗಳಲ್ಲಿಯೂ ಮನಸ್ಸು ತುಂಬಾ ಆಸ್ಥೆಯನ್ನು ತಾಳುವದು, (ಲೌಕಿಕ ವಿಷಯಗಳಷ್ಟೆ) ಅತ್ಯಾವಶ್ಯಕವಾಗಿದೆ. ಮನಸ್ಸಿನ ಪೂರ್ಣ ಒಲವು (ಆಸ್ಥೆ) ಆಧ್ಯಾತ್ಮಿಕ ವಿಷಯಗಳತ್ತ ಇರುವದೇ ಉಪಾಸನೆಯ (ಪರಮಾತ್ಮನ ಆರಾಧನೆಯ) ಮುಖ್ಯ ತಿರುಳು ಗುಟ್ಟು ಆಗಿದೆ. ಮನಸ್ಸಿನ ಈ ಒಲವನ್ನು ಹೇಗೆ ಪಡೆಯಬಹುದು ? [೮] ಇವೆಲ್ಲ ಊಹಾಪೋಹಗಳು ಇರುವಲ್ಲವೇಕೆ. ಹಿಂದೆ ನಿರೂಪಿಸಿದ ಸಾಮಾನ್ಯ ರೂಪದಿಂದ ಇಂದು ನಾವು ಉಪಾಸನೆ ಮಾಡುತ್ತಿರುವ ಶ್ರೀ ಹರಿಯೆ ಬಿಂಬರೂಪನು, ಆತನ ಆರಾಧನೆಯಿಂದಲೆ ಮುಕ್ತಿಯು ದೊರೆಯುವದು, ಎಂದು ಹೇಳಲಾಗಿದೆ. ಆ ಬಿಂಬರೂಪವು ನಮಗೆ ಹೇಗೆ ದೊರೆಯುವದು ? ಹೇಗೆ ಪ್ರಕಟವಾಗುವದು ? [೯] ಆ ಬಿಂಬರೂಪವು ಎಲ್ಲಿ ನೆಲಿಸಿರುವದು ? [೧೦] ಬಿಂಬರೂಪದ ಉಪಾಸನೆಯನ್ನು ಯಾವ ರೀತಿಯಿಂದ ಮಾಡಬೇಕು ? [೧೧] ಬಿಂಬರೂಪದ ಸಾಕ್ಷಾತ್ಕಾರಕ್ಕಾಗಿ ಸಾಧನೆಯ ಯಾವ ಪ್ರಕಾರವನ್ನು ಕೈಕೊಳ್ಳಬೇಕು ? [೧೨] ಈ ಸಾಧನೆಯ ಮಾರ್ಗವನ್ನು ತೋರಿಸಿಕೊಡುವವರು ಯಾರು ? [೧೩] ಅಂಥ ಮಾರ್ಗದರ್ಶಕನೊಬ್ಬನಿದ್ದರೆ, ಸುದೈವದಿಂದ ನಮಗೆ ಅಂಥವರು ದೊರೆತರೆ, ನಮ್ಮ ಸ್ವರೂಪೋದ್ಧಾರಕನಾಗಿ, ನಮಗೆ ನಿರಪೇಕ್ಷ-ನಿಸ್ವಾರ್ಥ ಉಪಕಾರವನ್ನು ಮಾಡುವ ಹಿತಕರ್ತೃವಿನ ಉಪಕಾರವನ್ನು ನಾವು ಹೇಗೆ ತೀರಿಸಬೇಕು ? [೧೪] ಈ ರೀತಿಯಾಗಿ ಸಾಧಕನ ಚಿತ್ತವೃತ್ತಿಯು ಅನೇಕ ಊಹಾಪೋಹಗಳಲ್ಲಿ ಉಯ್ಯಾಲೆಯಾಡುತ್ತಿದೆ. ಇವೆಲ್ಲ ಊಹೆಗಳಿಗೆ ಮುಂದಿನ ಪ್ರಕರಣಗಳಲ್ಲಿ ಉತ್ತರವನ್ನು ಹೇಳುವರು. ಇವೆಲ್ಲ ಊಹೆಗಳಿಗೆ ಒಂದೇ ಉತ್ತರರೂಪವಾಗಿ, ಒಂದೇ ಮೂಲ ಸಾಧನವಾಗಿರುದೆಂದು 'ಬಿಂಬರೂಪದ ಪ್ರದರ್ಶಕರಾದ ಗುರುವನ್ನು ಪಡೆಯುವದು' ಎಂಬುದು, (ಸಾಧನೆಗಳಿಗಾಗಿ) ಈ ಮೊದಲನೆಯ ಪ್ರಕರಣವಾಗಿದೆ.

ಭೂಭಾರ ಹರಣಕ್ಕಾಗಿ ಶ್ರೀ ಕೃಷ್ಣಾವತಾರದ ಕಾರ್ಯವು ತೀರಿತು. ಈ ಅವತಾರವನ್ನು ಇನ್ನು ಮುಕ್ತಾಯಗೊಳಿಸಬೇಕೆಂದು, ದೇವತೆಗಳೆಲ್ಲ ಶ್ರೀಮನ್ನಾರಾಯಣನನ್ನು ಬೇಡಿಕೊಳ್ಳುವರು, ಪರಮಾತ್ಮನು ಅವತಾರಗಳಲ್ಲಿ ಪ್ರಕಟಿಸುವ ಅದ್ಭುತ ಲೀಲೆಗಳ ಶ್ರವಣದಿಂದ ದೊರೆಯುವ ಮಹಾಪುಣ್ಯಫಲವನ್ನು ಆ ಸಂದರ್ಭದಲ್ಲಿ ವರ್ಣಿಸುವರು.

**ಅರ್ಥ** :- 'ಪರಮಪೂಜ್ಯ (ಈಡ್ಯ) ನಾದ ಶ್ರೀ ಹರಿಯೆ, ಪುರುಷೋತ್ತಮನೆ ! (ಆರು ವೈರಿಗಳನ್ನು ಜಯಿಸಿದ) ಸತ್ವಗುಣ ಪ್ರಧಾನರಾದವರಿಗೆ, (ಜಿತೇಂದ್ರಿ

ಯರಾದವರಿಗೆ ನಿನ್ನ ಕೀರ್ತಿರೂಪವಾದ ಅವತಾರಲೀಲೆಗಳನ್ನು ದಿನದಿನವೂ ಹೆಚ್ಚಾಗುತ್ತಿರುವ ಶುದ್ಧ ಶ್ರದ್ಧೆಯಿಂದ ಕೂಡಿದ ಭಕ್ತಿಪೂರ್ವಕವಾಗಿ ಕೇಳುವದರಿಂದ (ಅವರಲ್ಲಿ) ಉಂಟಾಗುವ ಚಿತ್ತಶುದ್ಧಿಯು, ಕಾಮಾದಿಗಳಿಂದ ಕಲಕಿದ ಮನಸ್ಸುಳ್ಳವರಿಗೆ, ಪಾಂಡಿತ್ಯ, ವೇದಾಭ್ಯಾಸ, ದಾನಧರ್ಮ, (ದೇಹ ದಂಡನೆ) ತಪಸ್ಸು ಮುಂತಾದವುಗಳ ಆಚರಣೆಯಿಂದಲೂ (ಅಂಥ) ಚಿತ್ತಶುದ್ಧಿಯು ದೊರೆಯದು.

ದಾನಾದಿಗಳು ಶ್ರೇಷ್ಠಸಾಧನವೆನಿಸಿದ್ದರೂ, ಭಕ್ತಿ-ಶ್ರದ್ಧೆಗಳಿಂದ ಕೂಡಿದ ಶ್ರೀ ಹರಿಕಥಾಶ್ರವಣದಿಂದ ಒದಗುವ ಚಿತ್ತಶುದ್ಧಿಯು ನಿಶ್ಚಿತವಾದುದು, ಪರಿಪೂರ್ಣವಾದುದು.

ಚಿತ್ತಶುದ್ಧಿಯು ಹೇಗೆ ಆದೀತು ? ಎಂಬ ಮೊದಲನೆಯ ಪ್ರಶ್ನೆಗೆ, ಶ್ರೀ ಹರಿ ಕಥಾ ಶ್ರವಣವೇ ನಿಃಶಂಕವಾದ ಸಾಧನವೆಂಬುದು ಉತ್ತರವು. ಶುದ್ಧವಾದ ಶ್ರದ್ಧಾಭಕ್ತಿಗಳಿಂದ, ಶ್ರೀ ಹರಿಯ ಅದ್ಭುತ ಲೀಲೆಗಳನ್ನು ನಿರಂತರ ಕೇಳುವದರಿಂದ ಒದಗುವ ಚಿತ್ತಶುದ್ಧಿಯೆ ಮೋಕ್ಷಪ್ರಾಪ್ತಿಗೆ ಮೊದಲನೆಯ ಮೆಟ್ಟಲು. ತೀರ್ಥ ಯಾತ್ರಾದಿಗಳಿಂದ ಇಂಥ ಚಿತ್ತಶುದ್ಧಿಯು ದೊರೆಯದು,

||೨೧೦|| ಸಂಕೀರ್ತ್ಯಮಾನೋ ಭಗವಾನನಂತಃ
ಶ್ರುತಾನುಭಾವೋ ವ್ಯಸನಂ ಹಿ ಪುಂಸಾಂ ।
ಪ್ರವಿಶ್ಯ ಚಿತ್ತಂ ವಿಧುನೋತ್ಯಶೇಷಂ
ಯಥಾ ತಮೋಽರ್ಕೋಽಭ್ರಮಿವಾತಿವಾತಃ ॥ ೧೨-೧೨-೪೭

ಎರಡನೆಯ ಶಂಕೆಯನ್ನು ಪರಿಹರಿಸುವದು.

**ಅರ್ಥ** :- ಭಗವಂತನ ಮಹಾಮಹಿಮೆಯನ್ನು ಕೇಳಿ ತಿಳಿದುಕೊಂಡು, ಆತನ (ಅಚಿಂತ್ಯ-ಅದ್ಭುತ) ಲೀಲಾಕೃತಿಗಳನ್ನು ಹೇಳುತ್ತ, ಹಾಡುತ್ತ, ಅನ್ಯರಿಗೆ (ಸಜ್ಜನರಿಗೆ) ನಿವೇದಿಸುತ್ತ (ಸರ್ವದಾ) ಹೀಗೆ ಮಾಡುತ್ತಿರುವ ಜನರ ಮನಸ್ಸಿನಲ್ಲಿ ನೆಲಿಸಿ, ಅವರ ಈ ಬಗೆಯ ಆಚರಣೆಯಿಂದ ಸಂತುಷ್ಟನಾಗಿ, ಸೂರ್ಯನು ಕತ್ತಲೆಯನ್ನು, ಬಿರುಗಾಳಿಯು ಮೋಡವನ್ನು ಚದರಿಸುವಂತೆ, ಪರಮಾತ್ಮನು ಅಂಥವರ ಕಷ್ಟಕಾರ್ಪಣ್ಯಗಳನ್ನು ನಿಃಶೇಷವಾಗಿ (ಒಂದೂ ಉಳಿಯದಂತೆ) ತೊಡೆದು ಬಿಡುವದು.

'ಈ ಸಂಗತಿಯು ಅನೇಕ ಭಗವದ್ಭಕ್ತರ (ಭಾಗವತರ) ನಿಶ್ಚಿತ ಅನುಭವವಾಗಿದೆ' ಎಂಬುದನ್ನು 'ಹಿ' ಎಂಬ ಪದವು ಸೂಚಿಸುವದು.

ಮನಸ್ಸನ್ನು ಕದಡುವ ವಿಚಾರಗಳ ತಾಕಲಾಟವನ್ನು ಹೇಗೆ ತಪ್ಪಿಸಬೇಕು? ಎಂಬ ಎರಡನೆಯ ಶಂಕೆಗೆ, ಭಗವಂತನ ಚರಿತ್ರೆಯ ಶ್ರವಣ, ಕಥನ, (ಮಹಾತ್ಮ್ಯ ಜ್ಞಾನಪೂರ್ವಕ) ಸಂಕೀರ್ತನ, ಹಾಗೂ ಪ್ರತಿಪಾದನ, ಇವುಗಳಿಂದ ಭಗವಂತನ ಪರಮಾನುಗ್ರಹವನ್ನು ಪಡೆಯುವದೇ ಉಪಾಯವೆಂಬುದನ್ನು ಹಿಂದೆ ಹೇಳಿದಂತೆ, ಇಲ್ಲಿಯೂ ಹೇಳಿರುವರು.

'ಶೌಚ' (ಒಳಹೊರಗಿನ) ಶುದ್ಧಿಯೆಂಬ ಭಾಗವತ ಧರ್ಮವು ನಿರೂಪಿತವಾಗಿದೆ.

||೨೧|| ಅವಿಸ್ಮೃತಿಃ ಕೃಷ್ಣಪದಾರವಿಂದಯೋಃ
ಕ್ಷಿಣೋತ್ಯಭದ್ರಾಣಿ ಶಮಂ ತನೋತಿ ಚ ।
ಸತ್ವಸ್ಯ ಶುದ್ಧಿಂ ಪರಮಾಂ ಚ ಭಕ್ತಿಂ
ಜ್ಞಾನಂ ಚ ವಿಜ್ಞಾನವಿರಾಗಯುಕ್ತಂ ॥ ೧೨-೧೨-೫೪

ಎರಡನೆಯದರಿಂದ ಏಳನೆಯವರೆಗಿನ ಐದು ಶಂಕೆಗಳನ್ನು ಈಗ್ಗೆ ನಿವಾರಿಸುವರು.

**ಅರ್ಥ** :- ಶ್ರೀ ಕೃಷ್ಣಪರಮಾತ್ಮನ ಪಾದಕಮಲಗಳ (ನಿರಂತರ) ಸ್ಮರಣೆ (ಚಿಂತನೆ)ಯು (ಧ್ಯಾನಕ್ಕೆ ಅಡ್ಡಬರುವ) ಎಲ್ಲ ಆತಂಕಗಳನ್ನೂ ನಿವಾರಿಸುವದು. ಶಾಶ್ವತ ಶಾಂತಿರೂಪವಾದ ಮೋಕ್ಷಕ್ಕೆ ಭಗವನ್ನಿಷ್ಠೆಯನ್ನು ತಂದುಕೊಟ್ಟು ದಾರಿಮಾಡಿಕೊಡುವದು. ಅಂತಃಕರಣವನ್ನು ವಿಶುದ್ಧಗೊಳಿಸುವದು. ದೋಷರಹಿತವಾದ, ನಿಷ್ಕಾಮ ಭಕ್ತಿಯನ್ನು ತಂದುಕೊಡುವದು. (ಸಾಮಾನ್ಯ) ಜ್ಞಾನವನ್ನೂ, ಅಪರೋಕ್ಷಕ್ಕೆ, ಬಿಂಬರೂಪದ ದರ್ಶನಕ್ಕೆ ಸಹಾಯಕವಾದ, ವೈರಾಗ್ಯಯುಕ್ತವಾದ ವಿಜ್ಞಾನವನ್ನೂ ಒದಗಿಸುವದು.

ಶ್ರೀ ಕೃಷ್ಣಪದಾರವಿಂದದಲ್ಲಿ – 'ಸ್ಮೃತಿ – ಸ್ಮರಣ', ಎಂದು ಹೇಳದೆ, 'ಅವಿಸ್ಮೃತಿಃ', 'ಮರೆವು ಇಲ್ಲದಿರುವದು' ಎಂದು ಹೇಳುವಲ್ಲಿ ವಿಶೇಷಾರ್ಥವಿದೆ. ಪಾದಸ್ಮರಣೆಯನ್ನು ಅರೆನಿಮಿಷವಾದರೂ ಮರೆಯಕೂಡದು, ಸ್ಮರಣೆಯು ಆಗೊಮ್ಮೆ ಈಗೊಮ್ಮೆ ಮಾಡುವಂಥಹದಾಗಿರಬಾರದು. ಶ್ರೀ ಹರಿ ಪಾದಸ್ಮರಣೆಯು 'ತೈಲಧಾರೆಯಂತೆ' ಸಮನಾಗಿ, ಸತತವಾಗಿ ಸಾಗಬೇಕು, ಶ್ರದ್ಧೆ ಆದರಗಳಿಂದ ಕೂಡಿಕೊಂಡಿರಬೇಕು, ಎಂಬುದು ಇಲ್ಲಿ ಬಳಸಿದ 'ಅವಿಸ್ಮೃತಿ' ಯೆಂಬ ಪದದಿಂದ ವ್ಯಕ್ತವಾಗುವದು. ಸಾಧಕನ ಮನಸ್ಸಿನಲ್ಲಿ ಉದಯಿಸುವ ಎಲ್ಲ ಊಹಾಪೋಹಗಳಿಗೆ ಒಂದೇ ಸಮರ್ಪಕವಾದ ಉತ್ತರವೆಂದರೆ, ಶ್ರೀ ಹರಿಪಾದಕಮಲಗಳ ಅವಿರತವಾದ ಸ್ಮರಣೆ. ಆದರಿಂದಲೆ ಎಲ್ಲ ಶಂಕೆಗಳ ನಿವಾರಣೆ. ಧ್ಯಾನಕ್ಕೆ ಅಡ್ಡ

ಬರುವ ಆತಂಕಗಳನ್ನು, ಪಾಪಕರ್ಮ(ಅಭದ್ರ)ಗಳನ್ನು ಶ್ರೀ ಹರಿ ಪಾದಸ್ಮರಣೆಯೆ ನಿವಾರಿಸುವದು – ಎಂಬುವದರಿಂದ ಮೂರನೆಯ ಶಂಕೆಯ ನಿವಾರಣೆ ಆಯಿತು. ನಿರಂತರವಾದ, ನಿಶ್ಚಲವಾದ ಇಂಥ ಭಗವದ್ಧ್ಯಾನದಿಂದಲೆ ಅಪರೋಕ್ಷವು ಸಾಧಿ ಸುವದೆಂದು ಹೇಳಿರುವದು, ( ಅಪರೋಕ್ಷವು ಹೇಗೆ ಸಾಧಿಸುವದು ? ) ಎಂಬ ನಾಲ್ಕನೆಯ ಶಂಕೆಗೆ ಸಮಾಧಾನವಾಗಿದೆ. ಈ ಬಗೆಯ ಧ್ಯಾನದಿಂದಲೆ, ಅಪ ರೋಕ್ಷಕ್ಕೆ ಸಾಧನವಾಗಿರುವ ವೈರಾಗ್ಯಸಮೇತವಾದ ವಿಜ್ಞಾನವು ಜನಿಸುವದರಿಂದ (ಬಿಂಬ ವಿಷಯಕ ಜ್ಞಾನವು ಹೇಗಾಗುವದು ? ಎಂಬ) ಐದನೆಯ ಪ್ರಶ್ನೆಗೆ ಉತ್ತ ರವು ದೊರೆಯುವದು. ವಿಜ್ಞಾನ-ವೈರಾಗ್ಯಗಳಿಂದ ಊರ್ಜಿತವಾದ ಭಕ್ತಿಯು ಈ ಬಗೆಯ ಜ್ಞಾನದಿಂದ ದೊರೆಯುವದರಿಂದ (ಭಕ್ತಿಯ ಸ್ವರೂಪವು ಎಂಥಹದು ? ಎಂಬ) ಆರನೆಯ ಪ್ರಶ್ನೆಗೆ ಉತ್ತರವು ದೊರೆತಿತು. ಅವಿರತ ಸ್ಮರಣೆಯಿಂದ ಜನಿಸುವ ಜ್ಞಾನಭಕ್ತಿಗಳಿಂದ ವೈರಾಗ್ಯವು ಬಲಗೊಳ್ಳುವದು, ಗಟ್ಟಿಮುಟ್ಟಾಗ ವದು, ಎಂಬುವದರಿಂದ (ಪ್ರಶಸ್ತ ವೈರಾಗ್ಯವು ಹೇಗೆ ಉಂಟಾಗುವದು ? ಎಂಬ ಏಳನೆಯ ಪ್ರಶ್ನೆಗೆ ಉತ್ತರವನ್ನು ಕೊಟ್ಟಂತಾಯಿತು.

ಸೂತರು ಶೌನಕಾದಿಗಳಿಗೆ ಭಾಗವತವನ್ನು ಸಮಗ್ರನಿರೂಪಿಸಿ, ಮುಕ್ತಾಯ ಗೊಳಿಸುವಾಗ್ಗೆ ಭಾಗವತದ ತಿರುಳನ್ನೇ ಈ ಶ್ಲೋಕದಲ್ಲಿ ತುಂಬಿರುವರು.

॥೨೧೨॥ **ಯಥಾ ಯಥಾಽಽತ್ಮಾ ಪರಿಮೃಜ್ಯತೇಽಸೌ**
**ಮತ್ಪುಣ್ಯಗಾಥಾಶ್ರವಣಾಭಿಧಾನೈಃ ।**
**ತಥಾ ತಥಾ ಪಶ್ಯತಿ ತತ್ತ್ವಸೂಕ್ಷ್ಮಂ**
**ಚಕ್ಷುರ್ಯಥೈವಾಂಜನಸಂಪ್ರಯುಕ್ತಂ** ॥ ೧೧-೧೪-೨೬

ಕೃಷ್ಣ ಉದ್ಧವ

ಭಕ್ತಿ ಮಾರ್ಗವೆ ಶ್ರೇಷ್ಠವೆಂದು ಶ್ರೀ ಕೃಷ್ಣನು ಉದ್ಧವನಿಗೆ ಉಪದೇಶ ಮಾಡುವನು.

**ಅರ್ಥ :–** ಭಗವಂತನ ಮಂಗಳದಾಯಕವಾದ ಲೀಲಾಕೃತಿಗಳನ್ನು ಮತ್ತೆ ಮತ್ತೆ ಕೇಳುವದರಿಂದ, (ಮತ್ತೊಬ್ಬರಿಗೆ) ಹೇಳುವದರಿಂದ, (ಶ್ರವಣ-ಕಥನಗಳಿಂದ ಹೆಚ್ಚು ಹೆಚ್ಚಾಗುತ್ತ ಹೋಗುವ ಭಕ್ತಿಯ ಬಲದಿಂದ), ಭಕ್ತಿಯು ಹೆಚ್ಚುತ್ತಲಿರ ವಂತೆ, (ಆದರ ಪ್ರಭಾವದಿಂದ) ಮನಸ್ಸು (ಆತ್ಮಾ) ತನ್ನಲ್ಲಿಯ ದೋಷಗಳನ್ನು ಕಳೆದುಕೊಳ್ಳುತ್ತ (ಭಕ್ತಿಯ ಹೆಚ್ಚಳಕ್ಕೆ ಅನುಗುಣವಾಗಿ) ಹೆಚ್ಚು ಹೆಚ್ಚು ಶುದ್ಧಿ ಯನ್ನು ಪಡೆಯುವದು ಕಣ್ಣನ್ನು ನಿರ್ಮಲಗೊಳಿಸುವ ಅಂಜನವನ್ನು (ವಿಶೇಷ ಗುಣದಿಂದ ಕೂಡಿದ ಕಾಡಿಗೆಯನ್ನು) ಕಣ್ಣಿಗೆ ಹಚ್ಚುವದರಿಂದ, ಹೆಚ್ಚು ಹೆಚ್ಚು

ನಿರ್ಮಲವಾಗುವ ಕಣ್ಣು ಹೆಚ್ಚು ಹೆಚ್ಚು ಸೂಕ್ಷ್ಮವಾದ ವಸ್ತುವನ್ನು ಹೆಚ್ಚು ಹೆಚ್ಚು ಸ್ಪಷ್ಟವಾಗಿ ಕಾಣಲು ಸಮರ್ಥವಾಗುವಂತೆ, (ಬೆಳೆಯುತ್ತಿರುವ ಭಕ್ತಿಯ ಪ್ರಭಾವದಿಂದ) ಚಿತ್ತವು ಹೆಚ್ಚು ಹೆಚ್ಚಾಗಿ ಶುದ್ಧವಾಗುತ್ತ ಹೋದಂತೆ, ಮನಸ್ಸು (ಆಧ್ಯಾತ್ಮದ) ಸೂಕ್ಷ್ಮ ತತ್ವಗಳನ್ನು ಹೆಚ್ಚು ಹೆಚ್ಚಾಗಿ ತಿಳಿದುಕೊಳ್ಳಲು ಸಮರ್ಥವಾಗುವದು.

ಶ್ರೀ ಹರಿಯ ಅತೀ ಸೂಕ್ಷ್ಮರೂಪವಾದ ಬಿಂಬರೂಪವು ಹೇಗೆ ಹೊಳೆಯುವದು ? ಎಂಬ ಸಾಧಕನ ಎಂಟನೆಯ ಶಂಕೆಗೆ ಇದು ನಿವಾರಣೆಯಾಗಿದೆ. ಊರ್ಜಿತವಾಗುತ್ತಲಿರುವ ಭಕ್ತಿಯು ಸೂಕ್ಷ್ಮ ಬಿಂಬರೂಪವನ್ನು ಸಾಕ್ಷಾತ್ಕಾರ ಮಾಡಿಕೊಳ್ಳುವ ಶಕ್ತಿಯನ್ನು ಸಾಧಕನಿಗೆ ತಂದುಕೊಡುವದು. ಇದರಲ್ಲಿ ಆಶ್ಚರ್ಯವೇನೂ ಇಲ್ಲ. ಶ್ರೀ ಹರಿಯ ಲೀಲೆಗಳ ಶ್ರವಣ-ಕಥನಗಳಿಂದ ಜನಿಸುವ ಭಕ್ತಿಯೆ ಈ ಶಂಕೆಗೆ ಪರಿಹಾರಕವಾದ ಉಪಾಯವಾಗಿದೆ. ಎಂಬುದನ್ನು ತಿಳಿದುಕೊಳ್ಳಬೇಕು.

ಆಧ್ಯಾತ್ಮದ ವಿಷಯದಲ್ಲಿ, ಎರಡು ವಿಶೇಷ ಸಂಗತಿಗಳಿವೆ :- ಶಿಷ್ಯನು ತನ್ನ ಬುದ್ಧಿ ಹಾಗೂ ಪ್ರತಿಭೆಗಳ ಬಲದಿಂದ ಅವುಗಳ ಮುಖಾಂತರ ತಾನೇ ಊಹಿಸಿ ತಿಳಿದುಕೊಳ್ಳಲು ಶಕ್ಯವಾದವು - ಇಲ್ಲವೆ ಶಕ್ಯವಿರದವು. ಇವುಗಳಲ್ಲಿ ಸ್ವಂತದ ಬುದ್ಧಿ-ಶಕ್ತಿಗಳಿಗೆ ನಿಲುಕುವ ವಿಷಯಗಳ ಬಗ್ಗೆ ಇರುವ ಸಂದೇಹವನ್ನೇ ಮಾತ್ರ ಅಭಿವೃದ್ಧವಾದ ಭಕ್ತಿ ಹಾಗೂ ಅದರಿಂದ ಒದಗುವ ಚಿತ್ತಶುದ್ಧಿಯು ನಿವಾರಿಸುವದು - ಎಂಬುದು ಎಂಟನೆಯ ಶಂಕೆಗೆ ಪರಿಹಾರವಾಗಿದೆ. ಸ್ವಂತದ ಬುದ್ಧಿ ಪ್ರತಿಭೆಗಳಿಗೆ ನಿಲುಕದ ವಿಷಯಗಳ ಬಗ್ಗೆ ಇರುವ ಸಂದೇಹಗಳನ್ನು (ಸ್ಪಷ್ಟಯೋಗ್ಯರಾದ) ಗುರುಗಳ ಉಪದೇಶದಿಂದಲೇನೆ ನಿವಾರಿಸಿಕೊಳ್ಳಬೇಕು - ಎಂಬುದನ್ನು ಇಲ್ಲಿ ಅರಿತುಕೊಳ್ಳಬೇಕು.

॥೨೧॥ ತ್ರಿಭುವನವಿಭವಹೇತವೇಽಪ್ಯಕುಂಠ- | ಕವಿ ನಿಮಿರಾಜಗೆ
ಸ್ಮೃತಿಭಿರಜೇಶಸುರಾದಿಭಿರ್ವಿಮೃಗ್ಯಾತ್ |
ನ ಚಲತಿ ಭಗವತ್ಪದಾರವಿಂದಾ-
ಲ್ಲವನಿಮಿಷಾರ್ಧಮಪಿ ಸ ವೈಷ್ಣವಾಗ್ರ್ಯಃ ॥ ೧೧-೨-೫೩

'ಕವಿ'-ಯೆಂಬ ಋಷಿಯು ನಿಮಿರಾಜನಿಗೆ ಉಪದೇಶಿಸಿದ್ದುದನ್ನು ನಾರದರು ವಸುದೇವನಿಗೆ ತಿಳಿಸಿ ಹೇಳುತ್ತಾರೆ.

ಸಾಧಕನ ಮನಸ್ಸಿನಲ್ಲಿ ಏಳುವ ಇವೆಲ್ಲ ಶಂಕೆಗಳನ್ನೆಲ್ಲ ನಿವಾರಿಸಿ, ಯಾರು ಸರಿಯಾದ ಉಪದೇಶವನ್ನು ಮಾಡಬಲ್ಲರು? ಎಂಬುದು ಸಾಧಕನ ಹದಿಮೂರನೆಯ

ಪ್ರಶ್ನೆ.– ಬಿಂಬೋಪಾಸಕ ಗುರುವೇ (ಸೂಕ್ಷ್ಮವಾದ) ಆಧ್ಯಾತ್ಮಿಕ ಸಂದೇಹಗಳಿಗೆ ಪರಿಹಾರ ಸೂಚಿಸುವವನು, ಆತನೇ ಮಾರ್ಗದರ್ಶಕನು, ಈ ಅಭಿಪ್ರಾಯ ದಿಂದಲೆ, ದೈವಕೃಪೆಯಿಂದ ಸಾಧಕನಿಗೆ ಲಭಿಸುವ ಬಿಂಬೋಪಾಸಕನೂ, ಶ್ರೇಷ್ಠ ವಿಷ್ಣುಭಕ್ತನೂ ಆಗಿರುವ ಗುರುವು ಈ ರೀತಿಯಾಗಿ ಇರುವನು. ಎಂದು ಆತನ ಲಕ್ಷಣ (ವೈಶಿಷ್ಟ್ಯ) ಗಳನ್ನು ಎರಡು ಶ್ಲೋಕಗಳಲ್ಲಿ ವರ್ಣಿಸಿರುವರು.

**ಅರ್ಥ**:– ಮೂರು ಲೋಕಗಳ ಸುಖ-ಸಮೃದ್ಧಿಗಳಿಗೆ ಕಾರಣರಾಗಿರುವ ಬ್ರಹ್ಮ-ರುದ್ರಾದಿ ದೇವತೆಗಳು ಅವಿರತ (ಅಡೆತಡೆಯಿಲ್ಲದಂತೆ) ವಾಗಿ ಧ್ಯಾನ ಮಾಡುತ್ತಿರುವ ಭಗವಂತನ ಪಾದಕಮಲಗಳಲ್ಲಿ ನೆಲಸಿರುವ ತನ್ನ ಚಿತ್ತವೃತ್ತಿ ಯನ್ನು ಗಳಿಗೆ, ಅರಗಳಿಗೆಗಿಂತಲೂ ಕಡಿಮೆಯಾದ ಕಾಲದವರೆಗೂ ಕೂಡ ಚಲಿಸ ಗೊಡದಿರುವವನು, ವಿಷ್ಣುಭಕ್ತರಲ್ಲಿ ಅಗ್ರೇಸರನಾದವನು. (ಅಂಥ ಬಿಂಬೋಪಾ ಸಕನಾದ ಗುರು ಆಗಿರುವನು).

ಒಂದು ಗಳಿಗೆ, ಅರಗಳಿಗೆಯೆಷ್ಟಾದರೂ ಕೂಡ ಭಗವಂತನ ಪಾದಕಮಲ ಗಳಿಂದ ತನ್ನ ಚಿತ್ತವೃತ್ತಿಯನ್ನು ಚಲಿಸಗೊಡದವನೇ ಶ್ರೀ ವಿಷ್ಣುಭಕ್ತನೆಂದ ಮೇಲೆ, ಶ್ರೀ ಭಗವಂತನ ಪಾದಕಮಲಗಳಲ್ಲಿ ಅದಕ್ಕಿಂತಲೂ ದೀರ್ಘಕಾಲ ತನ್ನ ಚಿತ್ತವೃತ್ತಿಯನ್ನು ಸ್ಥಿರವಾಗಿ – ನಿಶ್ಚಂಚಲವಾಗಿ – ನಿಲ್ಲಿಸಬಲ್ಲವನು ವಿಷ್ಣು ಭಕ್ತರಲ್ಲಿ ಶ್ರೇಷ್ಠನೆಂದು ಬೇರೆ ಹೇಳಬೇಕಿಲ್ಲ.

||೨೧೪|| **ವಿಸೃಜತಿ ಹೃದಯಂ ನ ಯಸ್ಯ ಸಾಕ್ಷಾ-** ಕವಿ
**ದ್ಧರಿರವಶಾಭಿಹಿತೋಽಪ್ಯಘೌಘನಾಶಃ |** ನಿಮಿಗೆ
**ಪ್ರಣಯರಶನಯಾ ಧೃತಾಂಘ್ರಿಪದ್ಮಃ**
**ಸ ಭವತಿ ಭಾಗವತಪ್ರಧಾನ ಉಕ್ತಃ ||** ೧೧-೨-೫೫

ಅರ್ಥ :– (ನೋವು – ನರಳಿಕೆಗಳಲ್ಲಿ) ಅಸಹಾಯತೆಯಿಂದ, ನೈಮಿತ್ತ (ಪರವಶನಾಗಿಯಾದರೂ) 'ಹರಿ'ಯೆಂದು ಕೂಗಿದರೆ, (ಸ್ಮರಿಸುವವನ) ಪಾಪಗಳ ಬೆಟ್ಟವನ್ನೇ ನಾಶಮಾಡುವ (ಹರಿ ಶಬ್ದಕ್ಕೆ ಪರಮ ಮುಖ್ಯಾರ್ಥ ಪ್ರತಿ-ಪಾದ್ಯ ನಾದ) ಸಾಕ್ಷಾತ್ ಶ್ರೀ ಹರಿಯು (ಪ್ರೀತಿರೂಪವಾದ) ಸದ್ಭಕ್ತಿಪಾಶದಿಂದ ಬಂಧಿತ ನಾಗಿ ಅಂಥ ಭಕ್ತನ ಹೃದಯವನ್ನೆಂದಿಗೂ ಬಿಡುವದಿಲ್ಲ. (ಅಲ್ಲಿಯೇ ಸ್ಥಿರವಾಗಿ ನೆಲಸುವನು) ಆದುದರಿಂದ ಅಂಥ ಭಕ್ತನೇ ಭಾಗವತೋತ್ತಮನು (ಶ್ರೇಷ್ಠನಾದ ಭಗವದ್ಭಕ್ತನು),– ಇವನೇ ದೈವಕೃಪೆಯಿಂದ ಸಾಧಕನಿಗೆ ಲಭಿಸುವ ಬಿಂಬೋ ಪಾಸಕನಾದ ಗುರುವಾಗಿರುವನು)

'ಉಕ್ತಃ' ( ಹೇಳಲ್ಪಟ್ಟಿರುವನು ) ಎನ್ನುವದರಿಂದ, ಇದು ನನ್ನ (ಕರ್ತೃವಿನ) ಸ್ವಂತದ ಅಭಿಪ್ರಾಯವಾಗಿಲ್ಲ; ಪೂರ್ವಜರ ಅಭಿಪ್ರಾಯವಾಗಿದೆ – ಎಂಬುದು ಸೂಚಿತವಾಗಿದೆ.

॥೨೧೫॥ ಕೃಷ್ಣಾಂಘ್ರಿಪದ್ಮಮಧುಲಿಣ್ಣ ಪುನರ್ವಿಸೃಷ್ಟ-
ಮಾಯಾಗುಣೇಷು ರಮತೇ ವೃಜಿನಾವಹೇಷು ।
ಅನ್ಯಸ್ತು ಕಾಮಹತ ಆತ್ಮರಜಃ ಪ್ರಮಾರ್ಷ್ಟು-
ಮೀಹೇತ ಕರ್ಮಯತ ಏವ ರಜಃ ಪುನಃ ಸ್ಯಾತ್ ॥

೬-೩-೩೦
33

ನಿಸ್ಸೀಮ ವಿಷ್ಣುಭಕ್ತನಾಗಿರುವ ಬಿಂಬೋಪಾಸಕ ಗುರುವಿನ (ಸಾಮಾನ್ಯ) ಲಕ್ಷಣವನ್ನು ಈ ರೀತಿಯಾಗಿ ಹೇಳಿ, ಆತನ ಒಲವು – ಕೃತಿಗಳು ಹೇಗಿರುವದೆಂಬುದನ್ನು ಇಲ್ಲಿ ತೋರಿಸಿಕೊಡುವರು.

(ಪುರುಷಾರ್ಥ–ಪ್ರಾಪ್ತಿಗಾಗಿ ಹಿಂದಿನ ಜನ್ಮಗಳಲ್ಲಿ ಅನೇಕ ಸಾಧನೆಗಳನ್ನು ಮಾಡಿಕೊಂಡವನಾಗಿ, ಅವುಗಳ ಸಂಸ್ಕಾರದ ಪ್ರಭಾವದಿಂದ ಆಧ್ಯಾತ್ಮಸಿದ್ಧಿಗಾಗಿ (ಹಿಂದಿನಂತೆ) ಅದೇದಾರಿಗುಂಟ ಸಾಗಿರುವಾಗ್ಗೆ, ಸಜ್ಜನರೊಡನೆ ಅಲ್ಪಕಾಲದ ಸಹವಾಸದಲ್ಲಿ ಪಡೆದ ಶ್ರೀ ಹರಿಕಥಾ ಶ್ರವಣ ಮುಂತಾದವುಗಳ ಸಹಾಯದಿಂದ (ಪುರುಷಾರ್ಥ ಪ್ರಾಪ್ತಿಯ) ಆತನ ಮನದ ಬಯಕೆಯು ಸಫಲವಾಗಿರಲು, ಬೇರೆ ಯಾವ ವಿಷಯದಲ್ಲಿಯೂ ತನ್ನ ಮನಸ್ಸನ್ನು ಹರಿಯಗೊಡದೆ, ಶ್ರೀ ಹರಿಯ ಪಾದಕಮಲಗಳಲ್ಲಿಯೆ ತನ್ನ ಚಿತ್ತವೃತ್ತಿಯನ್ನು ಸ್ಥಿರವಾಗಿ ನಿಲ್ಲಿಸಿ, ಶ್ರೀ ಹರಿಯ ಅನಂತ ಕಲ್ಯಾಣ ಗುಣಗಳ ಚಿಂತನೆಯಲ್ಲಿಯೆ ಆಸ್ಥೆ–ಆನಂದಗಳನ್ನು ಸವಿಯುತ್ತ ( ಈ ಚಿಂತನೆಯಲ್ಲಿ ) ವಿಘ್ನಗಳು ಮತ್ತೆಮತ್ತೆ ಅಡೆತಡೆಮಾಡುತ್ತಿದ್ದರೂ ಕೂಡ, ತಾನು ಹಿಡಿದ ಪುರುಷಾರ್ಥಪ್ರಾಪ್ತಿಯ ಮಾರ್ಗದಿಂದ ಕಿಂಚಿತ್ತಾದರೂ ಕದಲದವನು – ಹೀಗೆ ಇರುವವನೇ ಬಿಂಬೋಪಾಸಕನಾದ ಗುರು ಆಗಿರುವನು. ಈಗಿನ (ಸದ್ಯದ) ಜನ್ಮದಲ್ಲಿಯೂ ಮತ್ತೆ ಆತನೇ ಬಿಂಬೋಪಾಸಕ ಗುರು ಆಗಿರುವನು.

**ಅರ್ಥ** :– (ಈ ಬಗೆಯ ಬಿಂಬೋಪಾಸಕ ಗುರುವನ್ನು ಪಡೆದು ಭಾಗ್ಯಶಾಲಿಯಾದವನು) ಶ್ರೀ ಕೃಷ್ಣನ ಪಾದಕಮಲಗಳ ( ಮಧು ) ಮಕರಂದ ರಸವನ್ನೇ (ನಿರಂತರ) ಸವಿಯುತ್ತ,–ಪಾಪಕೃತ್ಯಗಳಲ್ಲಿಯೆ ( ಮತ್ತೆ ಮತ್ತೆ ) ತೊಡಗಿಸುವ ಹಾಗೂ ಹೇಯವೆಂಬ (ಅನಿತ್ಯ–ಅಸಾರವೆಂಬ) ಭಾವನೆಯಿಂದ (ಅವು ಪಾಪಕ್ಕೆ ಕಾರಣವೆಂದು) ಹಿಂದೊಮ್ಮೆ ಈಗಾಗಲೆ ಬಿಟ್ಟುಕೊಟ್ಟಿರುವ ಪ್ರಾಪಂಚಿಕ ವಿಷಯ

ಗಳಲ್ಲಿ ಮತ್ತೊಮ್ಮೆ (ಉಳಿದವರಂತೆ) ಆಸಕ್ತಿಯನ್ನು ತಾಳುವದಿಲ್ಲ. ಈ ಬ
ಮನೋವೃತ್ತಿಯಿಲ್ಲದವನಾದ (ಸಾಧಕನಾಗಿರದ) ವ್ಯಕ್ತಿಯು (ಗಜಸ್ನಾನದ
ಕೆಸರನ್ನು ತೊಳೆಯಲು, ಮತ್ತಿಷ್ಟು ಕೆಸರನ್ನೇ ಮೈಮೇಲೆ ಹಾಕಿಕೊಳ್ಳುವ
ತಾನು ಎಸಗಿದ ಪಾಪದಿಂದ ಮುಕ್ತನಾಗಬೇಕೆಂದು ಬಯಸುತ್ತಿದ್ದರೂ, (ಪ್ರ
ವಾದ) ಆಶೆಗಳ ಹೊಡೆತಕ್ಕೆ ಬಾಗಿ, ಪಾಪಜನಕವಾದ ಕೃತಿಗಳಲ್ಲಿಯೆ ತೊಡ
ವನು. ತಾನು ಮಾಡುವ ಕಾರ್ಯವು ಶ್ರೀ ಹರಿಯ ಪೂಜೆಯೆಂಬ ಅನುಸಂಧಾ
(ಮನೋಭಾವನೆ) ಆತನಲ್ಲಿ ಇರುವದಿಲ್ಲ, ಆತನು ಮಾಡುವದೆಲ್ಲವೂ ಕೇವ
ಉದರ ಪೋಷಣೆಗಾಗಿ ಮಾಡುವ ಪ್ರಾಪಂಚಿಕ ಕಾರ್ಯವಾಗುವದು. ಈ ಲೌಕಿ
ಮನೋವೃತ್ತಿಯೆ ಆತನಲ್ಲಿ ರೂಢವಾಗುವದು.

॥೨೧೬॥ **ನ ವೈ ಜನೋ ಜಾತು ಕಥಂಚನಾವ್ರಜೇ-**
**ನ್ಮುಕುಂದಸೇವ್ಯನ್ಯವದಂಗ ಸಂಸೃತಿಂ ।**
**ಸ್ಮರನ್ ಮುಕುಂದಾಂಘ್ರ್ಯುಪಗೂಹನಂ ಪುನ-**
**ರ್ವಿಹಾತುಮಿಚ್ಛೇನ್ನ ರಸಗ್ರಹೀ ಜನಃ ॥** ೧-೫-೧೯

ನಾರದರು
ವ್ಯಾಸರಲ್ಲಿ

ಶ್ರೀ ಮುಕುಂದನ ಪಾದಕಮಲಗಳಲ್ಲಿ ವಿಲೀನವಾದ ಮನಸ್ಸುಳ್ಳ, ಭಗವದ್ಭಕ್ತ
ರಾದ ಭಾಗವತರಲ್ಲಿ, ಅನ್ಯ ಲೌಕಿಕ ವಿಷಯಗಳ ಕಡೆಗೆ ಮನಸ್ಸು ಹರಿಯದಿರು
ವದು ಶಾಸ್ತ್ರಸಿದ್ಧವಾಗಿದೆ, ಯೆಂಬುದು ಈ ಶ್ಲೋಕದ ಅಭಿಪ್ರಾಯವಾಗಿದೆ.

ಭಾಗವತ ರಚನೆಗಾಗಿ ಶ್ರೀ ವೇದವ್ಯಾಸರನ್ನು ಬಿನ್ನವಿಸುವಾಗ್ಗೆ. ವಿಷ್ಣು
ಭಕ್ತರನ್ನು ನಾರದರು ಹೀಗೆ ಸ್ತುತಿಸಿರುವರು.

**ಅರ್ಥ:–** ಪ್ರಿಯತಮನು (ಅಂಗ) ರಾದ ಶ್ರೀ ವೇದವ್ಯಾಸರೆ ! (ಎಲ್ಲದರಲ್ಲಿಯೂ
ಆದರ ತಿರುಳನ್ನೇ) ಅತ್ಯುತ್ತಮವಾದ ಸ ರವನ್ನೇ ತೆಗೆದುಕೊಳ್ಳುವ ಭಗವದ್ಭಕ್ತನು
ತಾನು ಉಪಭೋಗಿಸುತ್ತಿರುವ ) ಶ್ರೀ ನಾರಾಯಣ ಪಾದಸ್ಮರಣೆಯ ಸುಖ
ಸಂತೋಷಗಳನ್ನು (ಸರ್ವದಾ) ಸ್ಮರಿಸುವನಾದ್ದರಿಂದ, ಶ್ರೀ ಹರಿಪಾದ ಸ್ಮರಣೆಯ
ಸುಖದಲ್ಲಿ ಅನುರಕ್ತನಾಗಿ, ನಿರುಪಮವಾದ ಅಂಥ ಸುಖವನ್ನು (ಎಂದಿಗೂ,
ಯಾವ ಕಾರಣಕ್ಕಾಗಿಯೂ) ಬಿಟ್ಟುಕೊಡಲು ಬಯಸುವದಿಲ್ಲ. ಶ್ರೀ ಮುಕುಂದನ
ಪಾದಸೇವೆಯಲ್ಲಿ ನಿರಂತರವೂ ನಿರತನಾದ ಭಗವದ್ಭಕ್ತನು (ಭಾಗವತನು)
ಭಗವದ್ ಭಕ್ತಿಯಿಲ್ಲದ, ಉಳಿದ ಪಾಮರನಂತೆ, ಹುಟ್ಟು-ಸಾವುಗಳ
ಸಂಸಾರದ ತಿರುಗಣಿಯಲಿ ...

||೨೧೭|| ಮುಕ್ತೋಽಪಿ ತಾವದ್ಬಿಭೃಯಾತ್ಸ್ವದೇಹ-
ಮಾರಬ್ಧಮಶ್ನನ್ನಭಿಮಾನಶೂನ್ಯಃ |
ಯಥೋಪಯಾತಂ ಪ್ರತಿಯಾತನಿದ್ರಃ
ಕಿಂತ್ವನ್ಯದೇಹಾಯ ಗುಣಾನ್ನ ವೃಂಕ್ತೇ || ೫-೧-೧೬

ಬ್ರಹ್ಮದೇವರ ಪ್ರಿಯವ್ರತಗೆ

ಇಹ ಹಾಗೂ ಪರಗಳೆರಡರಲ್ಲಿಯೂ ನಿಷ್ಕಾಮ ಭಕ್ತಿಯ ಭಾಗವತೋತ್ತಮರು ನಡೆದುಕೊಳ್ಳುವ ರೀತಿಯು ಅವರ ಉದ್ಧೃತಿಗೆ, ಮೋಕ್ಷಪ್ರಾಪ್ತಿಗೆ ಆತಂಕವೂ, ಬಂಧಕವೂ ಆಗಿರುವದಿಲ್ಲ. ಅಂತೆಯೆ ಸಾಮಾನ್ಯ (ಲೌಕಿಕ) ಜನರಿಗಿಂತಲೂ, ಭಾಗವತ ಜನರ ಜೀವನದ ರೀತಿಯು ಭಿನ್ನವಾಗಿರುವದು, ವಿಲಕ್ಷಣವಾಗಿರುವದು. ಈ ಮಾತನ್ನು ಇಲ್ಲಿ ಹೆಚ್ಚು ತಿಳಿಯಾಗಿ ಹೇಳುವದು. ಬ್ರಹ್ಮದೇವರು ಪ್ರಿಯವ್ರತನಿಗೆ ಮಾಡಿದ ಉಪದೇಶ.

ಸಂಚಿತ, ಪ್ರಾರಬ್ಧ ಹಾಗೂ ಆಗಾಮೀ,-ಕರ್ಮಫಲವು ಹೀಗೆ ಮೂರು ಬಗೆಯಾಗಿದೆ. ಅಪರೋಕ್ಷ ಜ್ಞಾನವಾದೊಡನೆ, ಪರಮಾತ್ಮನ ಸಾಕ್ಷಾತ್ಕಾರವಾದಕೂಡಲೆ, ಹಿಂದಿನ ಜನ್ಮಗಳಲ್ಲಿ ಮಾಡಿದ ಕರ್ಮಗಳ ಫಲವು, (ಸಂಚಿತ-ಸಂಗ್ರಹಿಸಿದ ಕರ್ಮಫಲವು) ನಾಶಹೊಂದುವದು. ಇಂದು ಅನುಭೋಗಿಸುತ್ತಿರುವ ಪ್ರಾರಬ್ಧ-ಕರ್ಮ-ಫಲಕ್ಕೆ-'ಭೋಗೇನೈವನಾಶಃ'. ಬೇರೆ ಗತಿಯಿಲ್ಲದೆ, ಅದನ್ನು ಅನುಭವಿಸಿಯೆ ತೀರಿಸಬೇಕು. ಮೂರನೆಯ ಬಗೆಯ 'ಆಗಾಮೀ' (ಮುಂಬರುವ) ಕರ್ಮಫಲದ ಗತಿಯೇನು ? ಅದು ಹೇಗೆ ನಷ್ಟವಾಗುವದು ? ಸಂಚಿತ ಕರ್ಮಫಲದಂತೆ, ಅಪರೋಕ್ಷ ಜ್ಞಾನ ಮಾತ್ರದಿಂದಲೆ, ಆಗಾಮೀ ಕರ್ಮಫಲವು ನಾಶವಾಗುವದಿಲ್ಲ. ಏಕೆಂದರೆ, ಅಪರೋಕ್ಷ ಜ್ಞಾನವನ್ನು ಪಡೆದನಂತರ ಜ್ಞಾನವು ಊರ್ಜಿತವಿರುವಾಗ್ಗೆ, ಮಾಡುವ ಕರ್ಮಗಳಿಗೆ ಒದಗುವ ಫಲವು ಜ್ಞಾನದಿಂದ ನಾಶವಾಗುವದಿಲ್ಲ. ಪ್ರಾರಬ್ಧ-ಕರ್ಮಫಲದಂತೆ ಅದನ್ನು ಭೋಗಿಸಿಯೂ ತೀರಿಸುವಂತಿಲ್ಲ. ಮುಂಬರುವ ಜೀವನಗಳಲ್ಲಿ ಕರ್ಮ ಮಾಡುತ್ತಲೆ ಇರುವದರಿಂದ, ಅವೆಲ್ಲ ಕರ್ಮಗಳ ಫಲವನ್ನು ಉಪಭೋಗಿಸುವದಕ್ಕೆ ಅಂತವೇ, ಕೊನೆಯೆ ಇಲ್ಲದಾಗುವದು. ಅದರಿಂದ, ಮುಕ್ತಿಯು ಎಂದಿಗೂ ಕೈಗೆ ನಿಲುಕದ ಕನಸಿನ ಗಂಟಿನಂತೆ ದೊರೆಯದಂತಾದೀತು. ಆದರೆ ಆಗಾಮೀ ಕರ್ಮಫಲದ ನಾಶವು,-ಸಂಚಿತ-ಪ್ರಾರಬ್ಧ ಕರ್ಮಗಳ ನಾಶವಾಗುವ ರೀತಿಯಲ್ಲಿ ಆಗದೆ, ಬೇರೊಂದು ವಿಶಿಷ್ಟ ರೀತಿಯಲ್ಲಿ ಸಂಭವಿಸುವದು. ಜ್ಞಾನಿಯಾದ ಜೀವನ್ಮುಕ್ತನು ಮಾಡುವ ಕರ್ಮವು ರಾಗದ್ವೇಷರಹಿತವಾದುದು. ರಾಗದ್ವೇಷಗಳಿಂದ ಮಾಡುವ ಕರ್ಮವೇ ಬಂಧಕವಾದುದು. ಜ್ಞಾನಿಯು ಮಾಡುವ ಕರ್ಮದಲ್ಲಿ ರಾಗದ್ವೇಷಗಳಿರುವದಿಲ್ಲ. ಆದುದರಿಂದ, ಜ್ಞಾನಿಯು ಸಂಸಾರದಲ್ಲಿ ನೆಲೆಸಿದ್ದರೂ, ಆತನಿಗೆ

ಕರ್ಮಃ ಫಲಗಳ ಅನುಭವವು ಭಾಧಿಸುವದಿಲ್ಲ. ಆದುದರಿಂದ ಜ್ಞಾನಿಯಾದವನಿಗೆ ಆಗಾಮಿ ಕರ್ಮಫಲಗಳ ಬಾಧೆಯೆ ಉಂಟಾಗುವದಿಲ್ಲ. ಆತನ ಆಗಾಮೀ ಕರ್ಮ ಫಲಕ್ಕೆ ಇದುವೇ ನಾಶ. ಉಳಿದೆರಡು ಬಗೆಯ ಕರ್ಮಫಲಗಳ ನಾಶದ ರೀತಿ ಗಿಂತಲೂ, ಜ್ಞಾನಿಯ ವಿಷಯದಲ್ಲಿ, ಆಗಾಮೀ ಕರ್ಮಫಲದ ನಾಶವು ಒಂದ ವಿಶಿಷ್ಟ ರೀತಿಯದಾಗಿದೆ. ಜ್ಞಾನಿಯು ಮಾಡುವ ರಾಗದ್ವೇಷರಹಿತ, ಫಲಾಪೇಕ್ಷೆ ಯಿಲ್ಲದ ಕರ್ಮವು ಜನನ-ಮರಣ ಚಕ್ರದಿಂದ ಆತನನ್ನು ಮುಕ್ತನನ್ನಾಗಿ ಮಾಡುವದು.

**ಅರ್ಥ**;- ಅಪರೋಕ್ಷ ಜ್ಞಾನಿಯಾದ ಜೀವನ್ಮುಕ್ತನು ಕೂಡ, ತನ್ನಪ್ರಾರಬ್ಧ ಕರ್ಮದಿಂದ, ಭಗವದಿಚ್ಛೆಯಿಂದ ಒದಗುವ ಸುಖದುಃಖಗಳನ್ನು ದೇಹಾಭಿಮಾನ ರಹಿತನಾಗಿ ಅನುಭವಿಸುತ್ತ, ಆ ಕರ್ಮಫಲದಿಂದ ಪ್ರಾಪ್ತವಾದ ಶರೀರವನ್ನು ತಾಳಲೇಬೇಕು. ಆದರೆ ಆತನು (ಪ್ರತಿ-ಯಾತ ನಿದ್ರಃ) ಅಜ್ಞಾನವೆಂಬ ನಿದ್ರೆ ಯಿಂದ, ಕತ್ತಲೆಯಿಂಡ ಮುಕ್ತನಾದವನು, 'ನಾನು-ನನ್ನದು' ಎಂಬ ದೇಹಾಭಿ ಮಾನವನ್ನು ಬಿಟ್ಟುಕೊಟ್ಟವನು, ( ಯಥೋಯಾತಂ ) ಒದಗುವ ಸುಖದುಃಖ ಗಳನ್ನೆಲ್ಲ ಭಗವದಿಚ್ಛೆಯಿಂದ ಪ್ರಾಪ್ತವಾದವುಗಳೆಂಬ ಭಾವನೆಯಿಂದ ಹಿಗ್ಗದೆ, ಕುಗ್ಗದೆ ಸ್ವೀಕರಿಸುವನು. ಆಗಾಮೀ ಕರ್ಮಫಲದ ಬಾಧೆಗೆ ಆತನು ಒಳಗಾಗು ವದಿಲ್ಲ. ಜನನ-ಮರಣನೆಂಬ ಚಕ್ರದ ಸುಳಿಗೆ ಸಿಲುಕದಂತೆ, ರಾಗದ್ವೇಷ ಹಾಗೂ ದೇಹಾಭಿಮಾನರಹಿತನಾಗಿ ಭಗವದಿಚ್ಛೆಯಿಂದ ಒದಗುವ ಸುಖದುಃಖಗಳನ್ನು ಜೀವನ್ಮುಕ್ತನು ನಿರಾಸಕ್ತನಾಗಿ ಅನುಭವಿಸುವನು.

ಪ್ರಹ್ಲಾದ

||೨೧೮|| **ಏವಂ ಜನಂ ನಿಪತಿತಂ ಪ್ರಭವಾಹಿಕೂಪೇ**
**ಕಾಮಾಭಿಕಾಮಮನು ಯಃ ಪ್ರಪತನ್ ಪ್ರಸಂಗಾತ್** | ನೃಸಿ.
**ಕೃತ್ವಾತ್ಮಸಾತ್ಸುರರ್ಷಿಣಾ ಭಗವನ್ ಗೃಹೀತಃ**
**ಸೋಽಹಂ ಕಥಂ ನು ವಿಸೃಜೇ** ತವ **ಭೃತ್ಯಸೇವಾಂ** ||

**೭-೯-೨೮**

ಶ್ರೀ ಹರಿಯಲ್ಲಿ ಮಾಡುವ ನಿರ್ವ್ಯಾಜ ಭಕ್ತಿಯಿಂದ ಅಪೇಕ್ಷಿತವಾದ ಸಕಲ ಪುರುಷಾರ್ಥ ಭಕ್ತನಿಗೆ ದೊರೆಯುವವು. ಅದರಂತೆಯೆ, ಹಿಂದೆ ನಿರೂಪಿಸಿದ ಸಲ್ಲಕ್ಷಣಗಳಿಂದ ಕೂಡಿದ ಪರಮ ಭಾಗವತನಾದ ಗುರುವನ್ನು ದೈವಯೋಗ ದಿಂದ, ಶ್ರೀ ಹರಿಯ ಅನುಗ್ರಹದಿಂದ ಪಡೆದುಕೊಂಡು, ಅಂಥ ಗುರುವಿನಲ್ಲಿ ಮಾಡುವ ನಿರಪೇಕ್ಷ ಭಕ್ತಿಯೂಕೂಡ, ಸರ್ವಾಭೀಷ್ಟಪ್ರದವಾಗಿರುವದು. ಆದು

ರಿಂದ ಅಂಥ ಗುರುಭಕ್ತಿಯನ್ನು ಕೂಡ ಅವಶ್ಯವಾಗಿ ಪಡೆಯಬೇಕು. ಈ ಅಭಿಪ್ರಾಯವನ್ನೇ ಇಲ್ಲಿ ಹೇಳಿರುವರು.

ಹಿರಣ್ಯಕಶಿಪುವನ್ನು ಸಂಹರಿಸಿದ ನಂತರ, ಪ್ರಹ್ಲಾದನು ಮಾಡಿದ ನೃಸಿಂಹಸ್ತುತಿ ಇದು. ವಿಷ್ಣುಭಕ್ತನ ಕರ್ತವ್ಯವನ್ನು ಇದರಲ್ಲಿ ತೋರಿಸಿರುವರು.

ಅರ್ಥ :- ಹೇ ಲಕ್ಷ್ಮೀನರಸಿಂಹ ! ಸತಿ-ಸುತರೆಂಬ ಹಾವುಗಳಿಂದ ಕೂಡಿದ ಸಂಸಾರವೆಂಬ ದುಃಖಪೂರ್ಣವಾದ ಹಾಳು ಬಾವಿಯಲ್ಲಿ ಈ ಮೊದಲೆ ಕಾಲುಜಾರಿ ಬಿದ್ದಿರುವ ನಾನು, ವಿಷಯ ಸುಖಗಳ ಬೆನ್ನುಹತ್ತಿರುವ ಜನರನ್ನು ಅನುಸರಿಸಿ ಅದೇ ಬಾವಿಯಲ್ಲಿ ಕೆಳಗೆ ಧುಮುಕುತ್ತಿರುವಾಗ್ಗೆ, ನನ್ನ ತಾಯಿಗೆ ಉಪದೇಶ ಮಾಡುವ ಸಂದರ್ಭದಲ್ಲಿ, ತತ್ವೋಪದೇಶವೆಂಬ ಕೈಯನ್ನು ನನಗೆ ಆಧಾರವಾಗಿ ಕೊಟ್ಟು ನನ್ನನ್ನು ನಾರದರು ಎತ್ತಿ ಹಿಡಿದು ಉಳಿಸಿದರು. ನಾರದರ ಕೃಪೆಯಿಂದ ಅಧಃಪತನದಿಂದ ನಾನು ಪಾರಾದೆನು. ದೇವರ್ಷಿಗಳಾದ ನಾರದರು ನನ್ನನ್ನು 'ಆತ್ಮಸಾತ್'ವಾಗಿ, ತಮ್ಮ ಆತ್ಮೀಯರಲ್ಲಿ ನನ್ನನ್ನೂ ಒಬ್ಬರನ್ನಾಗಿ ಮಾಡಿಕೊಂಡರು (ಆ ಮೊದಲು ವಿಷಯುಗಳ ಕಡೆಗೆ ಹರಿಯುತ್ತಿದ್ದ ನನ್ನ ಚಿತ್ತವೃತ್ತಿಯನ್ನು ತಮ್ಮ ಉಪದೇಶದ ಕಡೆಗೆ ಒಲಿಯುವಂತೆ ಮಾಡಿದರು, ಅಥವಾ ಭಗವಂತನಿಗೆ ( ಅನ್ಯಥಾ ಜ್ಞಾನದಿಂದ ) ಕಿಂಚಿತ್ ವಿಮುಖನಾದ ನನ್ನನ್ನು ಭಗವಂತನಿಗೆ ಸಮ್ಮುಖನನ್ನಾಗಿ ಮಾಡಿದರು). ನಾರದರಿಂದ ಅಂದು ನಾನು ಅಧೋಗತಿಯಿಂದ ಪಾರಾದೆನು. ಆದುದರಿಂದ, ಭಗವಂತನ (ನಿನ್ನ) ದಾಸರಾದ ಭಗವದ ಕ್ತರ ಸೇವೆಯನ್ನು ಮಾಡದೆ ನಾನು ಹೇಗೆ ಇರಲಿ !

ಭಗವದ್ಭಕ್ತರು ನಿರ್ನಿಮಿತ್ತವಾಗಿ, ನಿರಪೇಕ್ಷವಾಗಿ, ಸಾಧಕರಿಗೆ ಸಹಾಯ ಮಾಡುವರು, ಸಂಸಾರವೆಂಬ ಹಾಳು ಬಾವಿಯಲ್ಲಿ ಬೀಳದಂತೆ ಎತ್ತಿಹಿಡಿಯುವರು. ತತ್ವೋಪದೇಶದಿಂದ ಉದ್ಧಾರದ ದಾರಿಗೆ ಹಚ್ಚುವರು. ಆದುದರಿಂದ ಭಗವದ್ಭಕ್ತರ ಸೇವೆಯನ್ನು ಮಾಡುವದು, ಅವರಲ್ಲಿ ನಿಷ್ಕಾಮಾತ್ಮಕ ಗುರುಭಕ್ತಿಯನ್ನು ಮಾಡುವದು, ಎರಡೂ ಅತ್ಯಗತ್ಯವೆಂದು ಸೂಚಿಸುವದರಿಂದ, ಭಾಗವತ ಧರ್ಮಗಳ ಎರಡನೆದಾದ ಒಂಬತ್ತನೆಯ ಗುಂಪಿನಲ್ಲಿಯ-'ಸಖ್ಯ'ವೆಂಬ ಭಾಗವತ ಧರ್ಮವನ್ನು ಇಲ್ಲಿ ತೋರಿಸಿದಂತಾಯಿತು,

೨೯|| **ಸೋಽಹಂ ಪ್ರಿಯಸ್ಯ ಸುಹೃದಃ ಪರದೇವತಾಯಾ** ಪ್ರಹ್ಲಾದ

**ಲೀಲಾಕಥಾಸ್ತವ ನೃಸಿಂಹ ವಿರಿಂಚಿಗೀತಾಃ |**

**ಅಂಜಸ್ತಿರಾಮ್ಯನುಗೃಣನ್ಗುಣವಿಪ್ರಮುಕ್ತೋ**

**ದುರ್ಗಾಣಿ ತೇ ಪದಯುಗಾಲಯಹಂಸಸಂಗಃ ||** ೭-೯-೨೮

ಶ್ರೀ ಹರಿಚರಣಗಳಿಗೆ ಅನನ್ಯಭಾವದಿಂದ ಶರಣು ಹೋಗುವದರಿಂದ, ಸಕಲ ಆಪತ್ತುಗಳಿಂದ ಬಿಡುಗಡೆಯಾಗುವದೆಂಬುದನ್ನು ದೃಢಗೊಳಿಸುತ್ತಾರೆ.

ಶ್ರೀ ಹರಿಯಲ್ಲಿ ಮಾಡುವ ಭಕ್ತಿಯಂತೆಯೆ, ಯೋಗ್ಯಗುರುವಿದಲ್ಲಿ ಮಾಡುವ ಭಕ್ತಿಯೂ ಕೂಡ ಸಕಲಪುರುಷಾರ್ಥಗಳ ಪ್ರಾಪ್ತಿಗೆ ಸಾಧನವಾದುದರಿಂದ, ಅಂಥ ಗುರುಭಕ್ತಿಯನ್ನು ಕೂಡ ಬೆಳಿಸಿಕೊಳ್ಳಬೇಕೆಂದು ಹೇಳಿದೆ. ಆದರೆ ಆ ಗುರು ಭಕ್ತಿಯು ಬೇರೆ ಯಾವ ಸಾಧನವನ್ನು ಅಪೇಕ್ಷಿಸದೆ, ನೇರವಾಗಿ ತನ್ನ ಬಲ ದಿಂದಲೆ ಪುರುಷಾರ್ಥ (ವಿಮುಕ್ತಿ) ವನ್ನು ತಂದು ಕೊಡುವದೇ ? ಅಥವಾ ಬೇರೊಂದು ಸಾಧನದ ಮುಖಾಂತರ, ಅದರ ನೆರವಿನಿಂದ ಪುರುಷಾರ್ಥವನು ಪಡೆಯಬೇಕೆ ? ಎಂಬ ಪ್ರಶ್ನೆಗೆ, 'ನೇರವಾಗಿ, ತಾನಾಗಿಯೆ ಅಲ್ಲ, ಶ್ರೀ ಹರಿಭಕ್ತಿ ಮುಖಾಂತರ ಪುರುಷಾರ್ಥ ಸಿದ್ಧಿಸುವದು' ಎಂಬುದು ಉತ್ತರವಾಗಿದೆ.

**ಅರ್ಥ :–** ನೃಸಿಂಹ ರೂಪನಾದ ಪರಮಾತ್ಮನೆ ! ನಿನ್ನ ಚರಣಗಳಲ್ಲಿಯೆ ಆಶ್ರಯವನ್ನು ಪಡೆದ, (ಪೂರ್ಣವಾಗಿ ನಂಬಿದ) ಹಾಗೂ (ನಿನಗೆ ಅತ್ಯಂತ ಪ್ರೀತಿ ಕರವಾದ) ಭಾಗವತ ಧರ್ಮಗಳ ಆಚರಣೆಯಿಂಧ ತಮ್ಮ ಅಂತಃಕರಣವನ್ನು ನಿರ್ಮಲವಾಗಿ (ರಾಗಾದಿದೋಷಗಳನ್ನು ಕಳೆದುಕೊಂಡು) ಮಾಡಿಕೊಂಡ ಶ್ರೇಷ್ಠ ಭಗವದ್ಭಕ್ತರಾದ ಪರಮಹಂಸರ ಸತ್ಸಮಾಗಮದಲ್ಲಿಯೆ ಅನುರಕ್ತವಾದ ಮನಸ್ಸುಳ್ಳವನಾಗಿ, ಭಕ್ತಿಯುತನಾಗಿ, ಹೇ ಲಕ್ಷ್ಮೀನೃಸಿಂಹ ! ಸುರುಚಿರವಾದ ನಿನ್ನ ಲೀಲಾಕೃತಿಗಳನ್ನು ಬಣ್ಣಿಸುವ ಕಥೆಗಳನ್ನು (ಯಾವಾಗಲೂ) ಹೇಳುತ್ತಿರುವ ನಾನು, (ಬಂಧಕವಾಗಿರುವ) ವೈಷಯಿಕ ವಿಷಯಗಳಲ್ಲಿ ಆಸಕ್ತಿಯನ್ನು ಪೂರ್ಣ ವಾಗಿ ತೊರೆದಿರುವೆನು. ಅನಿಮಿತ್ತ ಆಪ್ತನೂ, ಸರ್ವೋತ್ತಮನೂ ಆದ ನಿನ್ನ ಲೀಲಾಕಥೆಗಳನ್ನು ಬ್ರಹ್ಮದೇವರೂ ಕೀರ್ತಿಸುತ್ತಿರುವರು. ಈ ರೀತಿಯಿಂದ ವರ್ತಿ ಸುತ್ತಿರುವ ನಾನು, ಸಕಲ ಆಪತ್ತುಗಳನ್ನೂ ಸುಗಮವಾಗಿ ದಾಟುವೆನು.

ಈ ನಿರೂಪಣೆಯಿಂದ, ಗುರುಭಕ್ತಿಯು ಹರಿಭಕ್ತಿಯನ್ನು ಹುಟ್ಟಿಸುವದು, ಶ್ರೀಹರಿ ಭಕ್ತಿಯೆ (ಮೋಕ್ಷಾದಿ) ಸಕಲ ಪುರುಷಾರ್ಥಗಳ ಪ್ರಾಪ್ತಿಗೆ ಮುಖ್ಯ ಸಾಧನ ವೆಂದು ಸೂಚಿಸಲಾಗಿದೆ.

||೨೨೦|| **ಕಿಶ್ವಿಂ ತ್ವನುಧೃತ್ಯ ಪರಾನುಚಿಂತಾ-** **ಪ್ರಹ್ಲಾದ**
**ವ್ಯತೇ ಪಶುತ್ವಮುಸತೀಂ ನಾಮ ಯುಂಜ್ಯಾತ್ |** **ರಾಜ**
**ಪಶ್ಯನ್ ಜನಂ ನಿಪತಿತಂ ಭವವೈತರಿಣ್ಯಾಂ**
**ಸ್ವಕರ್ಮಜಾನ್ ಪರಿತಾಪಾನ್ ಜುಷಾಣಂ || ೭-೨-೪**
**7**

'ಅವಿಸ್ಮೃತಿಃ ಕೃಷ್ಣಪದಾರವಿಂದೆ' ಶ್ರೀ ಹರಿಚರಣಗಳ ಮರೆವು ಎಂದಿಗೂ ಆಗದಂತೆ ಎಚ್ಚರವಾಗಿ ಇರುವದು, ಶ್ರೀ ವಿಷ್ಣುಭಕ್ತರ ಲಕ್ಷಣವೆಂದು ಪರೀಕ್ಷಿತ ರಾಜನಿಗೆ ಶ್ರೀ ಶುಕರ ಉಪದೇಶ.

ಭಾಗವತೋತ್ತಮರಾದ ಪರಮಹಂಸರಲ್ಲಿ ಸುದೃಢವಾದ ಭಕ್ತಿಯು ಅಗತ್ಯವಾದುದು. ಅಂಥ ಗುರುಭಕ್ತಿಯು ಶ್ರೀ ಹರಿಭಕ್ತಿಯು ಮುಖಾಂತರ ಸಕಲ ಪುರುಷಾರ್ಥಗಳನ್ನು ಪಡೆಯಲು ಸಾಧನವಾಗಿರುವದು. ಇದು ಹೇಗೆ ಸಿದ್ಧಿಸುವದು ? ಎಂಬ ಪ್ರಶ್ನೆಗೆ ಉತ್ತರ ಹೇಳುವರು :- ಪುರುಷಾರ್ಥ (ಮೋಕ್ಷದ) ಪ್ರಾಪ್ತಿಗೆ (ಸತ್ಯತತ್ವದಿಂದ ದೂರವಾಗಿರುವ, ಯಥಾರ್ಥ ಜ್ಞಾನವಾಗಿರದ)ಮಿಥ್ಯಾಜ್ಞಾನವು ಆತಂಕವಾಗಿರುವದು. ಪರಮಹಂಸರಾದ ಸದ್ಗುರುಗಳ ಸದುಪದೇಶದಿಂದಲೆ ಈ ಮಿಥ್ಯಾಜ್ಞಾನದ ನಿವಾರಣೆಯಾಗುವದು. ಮಿಥ್ಯಾಜ್ಞಾನದ ನಿವಾರಣೆಗಾಗಿ ಸದ್ಗುರುವಿನಲ್ಲಿ ದೃಢಭಕ್ತಿಯು ಅಗತ್ಯವಾದುದು. ಅನುಗ್ರಹ ಪೂರ್ವಕವಾಗಿ ಸದ್ಗುರುವಿನ ಉಪದೇಶ ಪಡೆಯಲು, ಸಂತತವಾಗಿ ಗುರು ಸೇವೆಯನ್ನು ಮಾಡಬೇಕಾಗುವದು. ಇದನ್ನು ಹೇಳುವ ಸಂದರ್ಭದಲ್ಲಿ, ಪುರುಷಾರ್ಥಕ್ಕೆ ಪ್ರತಿಬಂಧಕವಾದ ಮಿಥ್ಯಾಜ್ಞಾನವನ್ನು ಬಿಟ್ಟುಕೊಡಬೇಕು. ಎಂಬ ಮಾತನ್ನು ಬಿಂಬಿಸಲು, ಮಿಥ್ಯಾಜ್ಞಾನಿಗಳ ನಿಂದೆ-ತಿರಸ್ಕಾರ ಮಾಡುವರು.

**ಅರ್ಥ:**- ಸಕಲ ಪದಾರ್ಥಗಳಲ್ಲಿ (ಅಧಿಷ್ಠಿತನಾಗಿ) ನೆಲಿಸಿ, ಅವುಗಳಿಗೆಲ್ಲ ತನ್ನ (ಅನಂತ) ಹೆಸರನ್ನೇ ಕೊಟ್ಟು, ಅವೆಲ್ಲವುಗಳಿಂದ (ಅನುಗುಣವಾದ) ಕಾರ್ಯಗಳನ್ನು ಮಾಡಿಸುವವನೂ, (ಮೋಕ್ಷಾದಿ) ಸಕಲ ಪುರುಷಾರ್ಥಗಳನ್ನು ಕೊಡುವವನೂ ಆದುದರಿಂದ, ಶ್ರೀ ಹರಿಯು (ತನಗಾಗಿ ಯಾವ ಪ್ರಯೋಜನವೂ ಇಲ್ಲದೆ) ನಿರಪೇಕ್ಷನಾಗಿ ಸರ್ವರಿಗೂ ಉಪಕಾರಮಾಡುವ ಅನಿಮಿತ್ತ ಬಂಧುವಾಗಿರುವನು. ಶ್ರೀ ಹರಿಯು ಅನಿಮಿತ್ತ ಬಂಧು ಹಾಗೂ ಎಲ್ಲರಿಂದಲೂ' ಎಲ್ಲ ಕಾರ್ಯಗಳನ್ನು ಮಾಡಿಸುವವನಾದರೂ ಶ್ರೀ ಹರಿಯೆ,-ಎಂಬ ವಿಚಾರವನ್ನು ಒಮ್ಮೆಯಾದರೂ ಮನಸ್ಸಿನಲ್ಲಿ ತಾರದೆ, ಶ್ರೀ ಹರಿಯ ಇವೆರಡೂ ವಿಶಿಷ್ಟಗುಣ (ಲಕ್ಷ್ಯಣ) ಗಳು ಕಿಂಚಿತ್ತೂ ಇಲ್ಲದಿರುವರಲ್ಲಿ, ಅವು ಇರುವದೆಂದು ಭಾವಿಸುವ (ಭ್ರಮಿಸುವ) ನಿಗೆ ಮಾನವನೆಂದು ಹೇಳಲಾಗದು, ಅವನು ( ಸಾರಾಸಾರ ) ಜ್ಞಾನವಿಲ್ಲದ ಪಶುವೆ ಆಗಿರುವನು. ಏಕೆಂದರೆ, ಬಾವಿಯಲ್ಲಿ ಬಿದ್ದು, ತೊಳಲುತ್ತಿರುವ ಬೇರೊಂದು ಪಶುವನ್ನು ಕಂಡು, ಬಾವಿಯಲ್ಲಿ ಬೀಳುವದರಿಂದ ಆಗುವ ಆಪತ್ತಿಯನ್ನು ತಿಳಿದು ತಿಳಿದೂ, ಪಶು ಅದೇ ಭಾವಿಯಲ್ಲಿ ಧುಮುಕುವದು, ಇದೇ ರೀತಿಯಾಗಿ, ಅನಿಮಿತ್ತ ಸಹಾಯಕನಾದ ಶ್ರೀ ಹರಿಯನ್ನು ಅನಾದರಿಸಿ, ( ಆತನ ಅನಂತ ಕಲ್ಯಾಣ ಗುಣಗಳ ಚಿಂತನೆಯನ್ನು ಮಾಡದೆ), ವಿಷಯ ಸುಖಗಳಲ್ಲಿ ಮಗ್ನನಾಗುವದೇ

(ಅಸತೀಂ) ಅನರ್ಥಕಾರಿಯೆಂಬುದನ್ನು ತಿಳಿದೂ ತಿಳಿದೂ, (ನರಕದ ಸೀಮೆಯಾದ, ಕೀವು ರಕ್ತಗಳಿಂದ ತುಂಬಿ ಹರಿಯುವ) ವೈತರಣಿ ನದಿಯಂತಿರುವ (ದುಃಖಪೂರಿತ) ಈ ಸಂಸಾರ ಪ್ರವಾಹದಲ್ಲಿ ಆಳವಾಗಿ ಮುಳುಗಿ, ಕರ್ಮಾನುಸಾರವಾಗಿ ಪಡೆಯುವ ಸಂಕಟಗಳನ್ನು ಅನುಭವಿಸುತ್ತಿರುವ ಜನರನ್ನು ಕಂಡೂ ಕಂಡು ಶ್ರೀ ಹರಿಸ್ಮರಣೆಯನ್ನು ಬಿಟ್ಟುಕೊಟ್ಟು, ದುರ್ವಿಷಯಗಳಲ್ಲಿಯೇ ಮತ್ತೆ ಮುಳುಗಿ ಏಳುವವನು (ವಿವೇಕರಹಿತ) ಪಶುವೇ ಅಲ್ಲವೆ ?

ಶ್ರೀಹರಿಯ ಅನಂತ ಕಲ್ಯಾಣ ಗುಣಗಳನ್ನು ಅರಿತುಕೊಂಡು ಅವುಗಳನ್ನು ( ಸರ್ವದಾ ) ಧೇನಿಸದೆ, ದು:ಖದಾಯಕವೆಂದು ತಿಳಿದದ್ದರೂ, ವಿಷಯ ಸುಖಗಳಲ್ಲಿಯೆ ತಲ್ಲೀನವಾಗುವ ಅವಿವೇಕವೇ ಮಿಥ್ಯಾಜ್ಞಾನವು.

ಹೀಗೆ ಹೇಳಿರುವರು :– 'ಚತುರ್ವೇದೆ ... ... ... ಸವ್ಯೆ ಬ್ರಾಹ್ಮಣಗರ್ದಭಃ' ವಾಸುದೇವನನ್ನು (ಸರಿಯಾಗಿ) ತಿಳಿಯದವನು ( ಶ್ರೀ ಹರಿಯೆ ಸರ್ವೋತ್ತಮನೆಂಬ ಜ್ಞಾನವಿಲ್ಲದವನು) ನಾಲ್ಕು ವೇದಗಳಲ್ಲಿ ಪಾರಂಗತನಾಗಿದ್ದರೂ, ಅವನು ವೇದಗಳ ಹೊರೆಯನ್ನು ಹೊತ್ತು ಬ್ರಾಹ್ಮಣನಾದ ಕತ್ತೆಯಂತೆಯೆ ಸರಿ.

||೨೨೧|| **ಯಸ್ಯಾತ್ಮಬುದ್ಧಿಃ ಕುಣಪೇ ತ್ರಿಧಾತುಕೇ**
**ಸ್ವಧೀಃ ಕಲತ್ರಾದಿಷು ಭೌಮ ಇಜ್ಯಧೀಃ |**
**ಯತ್ತೀರ್ಥಬುದ್ಧಿಃ ಸಲಿಲೇ ನ ಕರ್ಹಿಚಿ-**
**ಜ್ಜನೇಷ್ವಭಿಜ್ಞೇಷು ಸ ಏವ ಗೋಖರಃ** || ೧೦-೭೭-೧೩

ಶ್ರೀಕೃಷ್ಣ ಮುನಿಗಳ ವಸುಧೇವ ... ಶಾಸ್ತ್ರಿ

ಶ್ರೀ ಹರಿಯು ಅನಿಮಿತ್ತ ಬಂಧು – ಸಂಸಾರವು ಅನರ್ಥಕಾರಿ, ಎಂಬುದನ್ನು ತಿಳಿಯದಿರುವ ಅನ್ಯಥಾ (ವಿಪರೀತ) ಜ್ಞಾನವೆ ಮಿಥ್ಯಾಜ್ಞಾನ. ಈ ಬಗೆಯ ಮಿಥ್ಯಾಜ್ಞಾನವು ಪುರುಷಾರ್ಥ ಪ್ರಾಪ್ತಿಗೆ ಅಡ್ಡಿಯಾಗುವದು. ಪುರುಷಾರ್ಥವನ್ನು ಬಯಸುವವನು ಮಿಥ್ಯಾಜ್ಞಾನವನ್ನು ಬಿಟ್ಟುಕೊಡಬೇಕು. ಮಿಥ್ಯಾಜ್ಞಾನವನ್ನು ಕಳೆದುಕೊಳ್ಳಲು ನಾವು ಕಳಕಳಿಯಿಂದ ಯತ್ನಿಸಬೇಕು. – ಸರಿ. ಇದೆಲ್ಲವೂ ನಿಜ. ಆದರೆ, ಮಿಥ್ಯಾಜ್ಞಾನದ ನಿವಾರಣೆಯು ಪರಮ ಭಾಗವತರ ಸದುಪದೇಶದಿಂದಲೆ ಮಾತ್ರ ಆಗುವದೆಂಬುದು ಏಕೆ ? – ಭಾಗೀರಥೀ ಮೊದಲಾದ ನದಿಗಳ ಪವಿತ್ರಜಲದಲ್ಲಿ ಸ್ನಾನ ಮಾಡುವದರಿಂದಲೂ, ಪುಣ್ಯ ಕ್ಷೇತ್ರಗಳಲ್ಲಿಯ ದೇವತಾ–ಪೂಜೆ, ಸೇವೆಯನ್ನು ಮಾಡುವದರಿಂದಲೂ ಮಿಥ್ಯಾಜ್ಞಾನವು ತೊಲಗಿ ಹೋಗುವದಿಲ್ಲವೆ? – ಎಂಬ ಪ್ರಶ್ನೆಗೆ ಉತ್ತರ ಹೇಳುವರು. – ನಿಮ್ಮ ಪ್ರಶ್ನೆ ಸರಿಯಾದುದು. ತೀರ್ಥಸ್ನಾನ, ಕ್ಷೇತ್ರದೇವತಾ ಪೂಜೆ, ಇಲ್ಲವೆ

ಇನ್ನೂ ಬೇರೆ ಉಪಾಯದಿಂದ ಮಿಥ್ಯಾಜ್ಞಾನದ ನಿವಾರಣೆ ಆದೀತು. ಹೀಗಿದ್ದರೂ, ಜ್ಞಾನಿಗಳ ಸದುಪದೇಶದ ಅಗತ್ಯವನ್ನು ಅಲ್ಲಗಳೆಯುವಂತಿಲ್ಲ. ತೀರ್ಥಸ್ನಾನ – ಇತ್ಯಾದಿಗಳು ಸ್ವಂತ ತಾವಾಗಿಯೆ ನೇರವಾಗಿ ಮಿಥ್ಯಾಜ್ಞಾನವನ್ನು ತೆಗೆದು ಹಾಕಲಾರವು. ಇನ್ನೊಂದು ಸಾಧನವು ಅವುಗಳಿಗೂ ಅಗತ್ಯವಾಗಿದೆ. ಮಿಥ್ಯಾಜ್ಞಾನದ ನಿವಾರಣೆಗೆ ಸಮ್ಯಕ್ (ಯಥಾರ್ಥವಾದ) ಜ್ಞಾನವೆ (ಏಕಮೇವ) ಸಾಧನವಾಗಿದೆ. ಸಿಂಪು ಬೆಳ್ಳಿಯೆಂಬ ತಪ್ಪು ತಿಳುವಳಿಕೆಯಾದಾಗ್ಗೆ, ಅದು ಬೆಳ್ಳಿಯಾಗಿಲ್ಲ – ವೆಂಬ ಯಥಾರ್ಥಜ್ಞಾನವೇ, ಈ ತಪ್ಪು ತಿಳುವಳಿಕೆಯನ್ನು (ಮಿಥ್ಯಾಜ್ಞಾನವನ್ನು) ತೆಗೆದು ಹಾಕುವದು. ಜ್ಞಾನಿಗಳ ಸದುಪದೇಶವೆ ಯಥಾರ್ಥ – (ಸತ್ಯದ) ಜ್ಞಾನವನ್ನು ತಂದುಕೊಡುವದು. ಜ್ಞಾನಿಗಳು ಅನುಗ್ರಹ ಪೂರ್ವಕವಾಗಿ ಕೊಡುವ ಸದುಪದೇಶವೆ ಫಲಪ್ರದವಾದುದು. ಭಗವಂತನ ಪೂರ್ಣ ಕೃಪೆಗೆ ಪಾತ್ರರಾದ ಭಾಗವತೋತ್ತಮರಲ್ಲಿ ಹೃತ್ಪೂರ್ವಕ ಭಕ್ತಿ – ಆದರ ಭಾವನೆಗಳಿರದಿದ್ದರೆ, ಅವರ ಅನುಗ್ರಹವು ದೊರೆಯಲಾರದು. ಅಂಥವರ ನಿಷ್ಠಾಪೂರ್ವಕ ಸೇವೆಯಿಂದಲೆ ಅವರ ಬಗ್ಗೆ ಭಕ್ತಿಯು ಉಂಟಾಗುವದು. ಆದುದರಿಂದ, ಭಕ್ತಿಯುಕ್ತ ಸೇವೆಯಿಂದ ಮಹಾತ್ಮರ ಅನುಗ್ರಹ ಪೂರ್ವಕ ಸದುಪದೇಶ ಪಡೆಯುವದನ್ನು ಬಿಟ್ಟುಕೊಟ್ಟು, ಬೇರೊಂದು ಮಾರ್ಗವಾದ ತೀರ್ಥ ಕ್ಷೇತ್ರಗಳನ್ನು ಸೇವಿಸುವದರಿಂದ ಅನಗತ್ಯ ಕಾಲವಿಳಂಬವಾಗುವದಲ್ಲದೆ, ಹೆಚ್ಚು ಶ್ರಮವೂ ಹಿಡಿಯುವದು. ಹೀಗಿರುವದರಿಂದ, ಮಿಥ್ಯಾಜ್ಞಾನದ ನಿವಾರಣೆಗಾಗಿ, ಬುದ್ಧಿವಂತರಾದವರು ಜ್ಞಾನಿಗಳಿಂದ ಸದುಪದೇಶವನ್ನು ಪಡೆಯುವ ಮಾರ್ಗವನ್ನೇ ಅನುಸರಿಸಬೇಕು.

ಹೀಗೆ ಹೇಳಿರುವರು :- ನಹ್ಯಮ್ಮಯಾನಿ ತೀರ್ಥಾನಿ ... .. ದರ್ಶನಾದೇವ ಸಾಧವಃ'.

( ತೀರ್ಥಗಳಲ್ಲಿಯ ) ಕಾಣುವ ನೀರೆ ತೀರ್ಥವಲ್ಲ; ಮಣ್ಣು-ಕಲ್ಲುಗಳಿಂದ ಮಾಡಿದ ಪ್ರತಿಮೆಗಳೆ ದೇವತೆಗಳಲ್ಲ. ತೀರ್ಥಗಳಾಗಲಿ, ದೇವತಾ ಪ್ರತಿಮೆಗಳಾಗಲಿ, (ದೀರ್ಘಕಾಲದ ಸೇವನೆ, ಉಪಾಸನೆಗಳಿಂದ) ನಮ್ಮನ್ನು ಪುನೀತ (ಪಾಪ ರಹಿತ) ರನ್ನಾಗಿ ಮಾಡುವವು. ಆದರೆ ಸಾಧುಗಳಾದ ಭಗವದ್ಭಕ್ತರನ್ನು ನೋಡಿದಾಕ್ಷಣವೆ, ನಾವು ಪವಿತ್ರರಾಗುವೆವು.

ವಸುದೇವನ ಯಜ್ಞಸಮಾರಂಭಕ್ಕೆ ಬಂದ ಮುನಿಗಳನ್ನು ಸಾಕ್ಷಾತ್ ಭಗವಂತನೇ ಈ ಶಬ್ದಗಳಲ್ಲಿ ಗೌರವಿಸಿದನು. ತೀರ್ಥಾಟನೆಗಾಗಿ ತಮ್ಮಲ್ಲಿಗೆ ಸರ್ವದಾ ಬರುವ ಭಗವದ್ ಭಕ್ತರಿಂದ ಸಾಧಕರಿಗೆ ಸದುಪದೇಶವನ್ನು ಪಡೆಯುವ ಸುಯೋಗ

ವನ್ನು ಒದಗಿಸಿಯೆ, ಅವರ ಉದ್ಧೃತಿಗೆ ತೀರ್ಥಾದಿಗಳು ಕಾರಣವೆನಿಸುವವು. ತೀರ್ಥಗಳ ಜಲದಲ್ಲಿಯಾಗಲಿ, ಕ್ಷೇತ್ರಗಳ ಪ್ರತಿಮೆಗಳಲ್ಲಾಗಲಿ, ಅವುಗಳಲ್ಲಿ ಅಧಿಷ್ಠಿತ, ಅಭಿಮಾನಿಯಾದ ದೇವತೆಗಳನ್ನು ಮಾನಸಾ ಚಿಂತಿಸಿ, ಆಹ್ವಾನಿಸಿ ದೇವತಾ ಸನ್ನಿಧಾನವನ್ನು ಅನುಸಂಧಾನ ಮಾಡುವದರಿಂದಲೆ, ಅವುಗಳಿಗೆ ಪಾವಿತ್ರ್ಯ ಬರುವದು. ದೀರ್ಘ ಕಾಲದ ಸೇವೆ-ಪೂಜೆಗಳಿಂದ ಸಂತುಷ್ಟರಾದ ಈ ದೇವತೆಗಳು ಭಗವದ್ಭಕ್ತರ ಸತ್ಸಂಗ - ಸದುಪದೇಶಗಳನ್ನು ಒದಗಿಸಿಕೊಡುವವು. ಈ ಸದುಪದೇಶನೆ ಮಿಥ್ಯಾ ಜ್ಞಾನವನ್ನು ನಿವಾರಿಸಿ, ಪುರುಷಾರ್ಥ ಪ್ರಾಪ್ತಿಗೆ ದಾರಿ ಮಾಡಿಕೊಡುವದು.

ಸದುಪದೇಶದಿಂದ ಕಳೆದುಕೊಳ್ಳಬೇಕಾದ ಮಿಥ್ಯಾಜ್ಞಾನವು ಯಾವುದು? ಯಾವುದರ ನಿವಾರಣೆಗಾಗಿ, ಸೇವೆಭಕ್ತಿಗಳಿಂದ ಭಾಗವತರ ಅನುಗ್ರಹವನ್ನು ಪಡೆಯಬೇಕಾಗುವದು ? ಮಿಥ್ಯಾಜ್ಞಾನವು ಯಾವುದೆಂಬದನ್ನು ಸಂಕ್ಷೇಪವಾಗಿ ತೋರಿಸಿಕೊಡುವರು.

**ಅರ್ಥ:**- ವಾತ, ಪಿತ್ತ, ಕಫ (ಶ್ಲೇಷ್ಮ) ಗಳೆಂಬ ಮೂರು ಧಾತುಗಳಿಂದ (ತ್ರಿದೋಷಗಳಿಂದ) ಕೂಡಿದ ಶರೀರವನ್ನೇ (ಅಂತಸ್ಥನಾದ) ಆತ್ಮಾಯೆಂದು ಭಾವಿಸುವವನು (ದೇಹಾತ್ಮವಾದಿಯಾದವನು), ಮನೆ ಮಡದಿ ಮಕ್ಕಳು (ಪರಮಾತ್ಮನ ಕೃಪೆಯಿಂದ ಪಡೆದವರು - ಎಂದು ಭಾವಿಸದೆ) ತನ್ನವರು ಎಂಬ ಮಮಕಾರದಿಂದ ಕೂಡಿರುವವನು, ಕಲ್ಲು-ಲೋಹಗಳಿಂದ ಮಾಡಿದ ಪಾರ್ಥಿವ ಪ್ರತಿಮೆಗಳನ್ನೇ (ಸರಿಯಾದ ಅನುಸಂಧಾನವಿಲ್ಲದೆ) ದೇವತೆಗಳೆಂದು ಪೂಜಿಸುವವನು, ನದೀ ತಡಾಗಗಳ ನೀರನ್ನೇ (ಅಭಿಮಾನಿ ದೇವತೆಗಳ ಅನುಸಂಧಾನವಿಲ್ಲದೆ) ಪಾವನಕರವೆಂದು ತಿಳಿಯುವವನು, (ವಸ್ತುಗಳ ಬಗ್ಗೆ ಹೀಗೆ ವಿಪರೀತ ಜ್ಞಾನ ಮಾಡಿಕೊಳ್ಳುವದೇ ಹಿಂದೆ ಹೇಳಿರುವ 'ಪ್ರಾನುಚಿಂತಾ',-ಇದುವೇ ಮಿಥ್ಯಾ ಜ್ಞಾನ) ಅದರಂತೆಯೆ, ಸಮೀಚೀನವಾದ ಬ್ರಹ್ಮಜ್ಞಾನವನ್ನು ಪಡೆದಿರುವ ಸಜ್ಜನರ ಪರಮಹಂಸರ ಬಗ್ಗೆ ಕಿಂಚಿತ್ತೂ ಪೂಜ್ಯಬುದ್ಧಿಯಿಲ್ಲದವನು, ಈ ಬಗೆಯ ಮಿಥ್ಯಾ ಜ್ಞಾನವುಳ್ಳ ಮಾನವನು ಮಾನವನಲ್ಲ; ಆತನು ನಿಜವಾಗಿಯೂ ಗೋಖರನು.

(ನಾಯಿಯ ಮಾಂಸವನ್ನು ತಿನ್ನುವ ಚಂಡಾಲನು ಮಾನವರಲ್ಲಿ ಅತಿ ನೀಚ ಮಟ್ಟನಾದವನಂತೆ, ಎಲುಬನ್ನು ತಿಂದು ಜೀವಿಸುವ, ಕತ್ತೆಯನ್ನು ಹೋಲುವ ಗೋಖರನೆಂಬ ಕಾಡುಮೃಗವು - ಪಶುಗಳಲ್ಲಿ ಅತಿ ಕೀಳಾದುದು.) ಮಿಥ್ಯಾಜ್ಞಾನಿಯು ಪಶುವೇ ಆಗಿರುವನೆಂದು ಹಿಂದೆ ಹೇಳಿದ್ದನ್ನೇ 'ಗೋಖರ' ನೆಂದು ವಿವರಿಸಿ, ಆತನು ಪಶುಗಳಲ್ಲಿಯೂ ಕೂಡ ಅತಿ ನೀಚ ಪಶುವಾಗಿರುನೆಂಬ

ವಿಶೇಷಾರ್ಥವಿದೆ. ಇಂಥವನು 'ಖರ'-ನೆಂದು ಹೇಳಬಹುದಾದರೂ, ಗೋಖರ ನೆಂದು ಕರೆದು, ಅತಿ ನೀಚನೆಂಬ ವಿಶೇಷಾರ್ಥವನ್ನು ಸೂಚಿಸಿರುವರು.

ಒಟ್ಟು ಅಭಿಪ್ರಾಯವಿದು :- ದೇಹವೇ - ನಾನು ( ಆತ್ಮಾ ) ಎಂಬುದು, ದೇಹಾನುಬಂಧಿಗಳಾದ ಮಡದಿ ಮಕ್ಕಳು 'ನನ್ನವರು' ಎನ್ನುವದು, ಕಲ್ಲುಕಂಚಿನ ಮೂರ್ತಿಗಳೆ ದೇವತೆಗಳೆನ್ನುವದು, ಕಣ್ಣಿಗೆ ಕಾಣುವ ಹರಿಯುವ ನೀರೇ ಪಾವನ ಕ್ಷೇತ್ರವೆನ್ನುವದು, ಯೋಗ್ಯತೆಯಲ್ಲಿ ತನಗಿಂತಲೂ ಅಧಿಕರಾದವರನ್ನು ಕೆಳಮಟ್ಟ ದವರೆಂದೂ, ತನಗಿಂತಲೂ ಕೆಳಗಿನ ಪಾತ್ರತೆಯುಳ್ಳವರನ್ನು ತನಗಿಂತಲೂ ಅಧಿಕ ರೆಂತಲೂ, ತನಗೆ ಮಿಗಿಲಾದವರನ್ನು ಸರಿಸಮಾನರೆಂದು ತನಗೆ ಸರಿಸಮಾನ ರಾದವರನ್ನು ಮಿಗಿಲಾದವರೆಂದು, ಇತ್ಯಾದಿ ವಿಪರೀತ ತಿಳುವಳಿಕೆ ರೂಪವಾದ ಮಿಥ್ಯಾಜ್ಞಾನವು ಪುರುಷಾರ್ಥ ( ಮೋಕ್ಷ ) ಪಡೆಯಲು ಆತಂಕವಾದುದು. ಯಥಾರ್ಥ ಜ್ಞಾನವನ್ನು ಪಡೆದುಕೊಂಡಾಗಲೆ ಅದರ ನಿವಾರಣೆಯಾಗುವದು. ಈ ಮಾತನ್ನು ಈ ಮೊದಲೆ ಹೇಳಿದೆ. ಆದುದರಿಂದ, ಭಕ್ತಿಪೂರ್ವಕವಾಗಿ ಬ್ರಹ್ಮ ಜ್ಞಾನಿಗಳ ಸೇವೆಮಾಡಿ ಅವರ ಅನುಗ್ರಹವನ್ನು ಪಡೆಯುವದು, ಅನುಗ್ರಹಪೂರ್ವಕ ವಾಗಿ ಯಥಾರ್ಥಜ್ಞಾನ ಪಡೆಯುವದು, ಅದರಿಂದ ಮಿಥ್ಯಾಜ್ಞಾನದ ನಿವಾರಣೆ ಯಾಗಿ ಪರಮ ಪುರುಷಾರ್ಥವನ್ನು ಪಡೆಯುವದು. ಆದುದರಿಂದ ಭಾಗವತರಾದ ಸಜ್ಜನರಲ್ಲಿ ಭಕ್ತಿಯು ಅಗತ್ಯವಾದುದು.

ಬಿಂಬೋಪಾಸಕ ಗುರುಪ್ರಾಪ್ತಿ ಪ್ರಕರಣ ಮುಗಿಯಿತು.



 15ನೇ ಸ್ಕಂಧ

# ೧೯. ಅಧ್ಯಾತ್ಮ ಪ್ರಕರಣ

||೨೨೨|| ಭವಾಯ ನಸ್ತ್ವಂ ಭವ ವಿಶ್ವಭಾವನ — ದ್ವಾರಕಾವಾಸಿ

ತ್ವಮೇವ ಮಾತಾಥ ಸುಹೃತ್ಪತಿಃ ಪಿತಾ । — ಶ್ರೀಕೃಷ್ಣ

ತ್ವಂ ಸದ್ಗುರುರ್ನಃ ಪರಮಂ ಚ ದೈವತಂ

ಯಸ್ಯಾನುವೃತ್ತ್ಯಾ ಕೃತಿನೋ ಬಭೂವಿಮ ॥ ೧-೧೧-೭
(1-7)

ಭಗವತ್ ಕೃಪೆಯಿಂದ ಸಾಧಕನು ಬಿಂಬೋಪಾಸಕನಾದ ಗುರುವನ್ನು ಪಡೆಯುವನು. ಸಾಧಕನಾದ ಶಿಷ್ಯನಿಗೆ ಬಿಂಬಜ್ಞಾನವನ್ನು ಮಾಡಿಕೊಡುತ್ತಿರುವಾಗ್ಗೆ, ಅಧ್ಯಾತ್ಮದ, ಆತ್ಮಜ್ಞಾನದ ಬಗ್ಗೆ ಸಾಧಕನ ಒಲವು ನಿಷ್ಠೆಗಳು ಊರ್ಜಿತವಾಗಿರುವದನ್ನು ಕಂಡುಕೊಂಡು ಗುರುವು ಶಿಷ್ಯನಿಗೆ ಆತ್ಮಜ್ಞಾನ (ಅಧ್ಯಾತ್ಮ) ವನ್ನು ಉಪದೇಶಿಸುತ್ತಿರುವನು; ಆ ಬಗ್ಗೆ ಹೆಚ್ಚಿನ ಲವಲವಿಕೆಯುಳ್ಳ ಶಿಷ್ಯನಿಗೆ ಹೆಚ್ಚು ವಿಶದ ( ಸ್ಪಷ್ಟ ) ವಾಗಿ ಹೇಳಿಕೊಡುವನು. ಇದುವೆ ಈ ಪ್ರಕರಣದ ವಿಷಯವಾಗಿದೆ :- ಗುರು ಭಕ್ತಿಯು ಹರಿಭಕ್ತಿಯನ್ನು ಹುಟ್ಟಿಸುವದೆಂದು ಹಿಂದಿನ ಪ್ರಕರಣದಲ್ಲಿ ಹೇಳಿದೆ. ಹರಿಭಕ್ತಿಯ ಉತ್ಪತ್ತಿಗೆ ಕಾರಣವಾದ ವಿಶೇಷ ಸಾಧನವನ್ನು ಮೊದಲಾಗಿ ಇಲ್ಲಿ ಹೇಳುವರು. ಶ್ರೀ ಕೃಷ್ಣನನ್ನು ಸ್ವಾಗತಿಸುವಲ್ಲಿ ದ್ವಾರಕೆಯ ನಿವಾಸಿಗಳು ಮಾಡಿದ ಸ್ತೋತ್ರವಿದು.

**ಅರ್ಥ** :- ಜಗತ್ತಿನ ಹುಟ್ಟು-ಅಳಿವುಗಳಿಗೆ ಕಾರಣನಾದ ಹೇ ಭಗವಂತಾ ನಿನ್ನಲ್ಲಿ ಜ್ಞಾನಭಕ್ತಿ ಮುಂತಾದ ಮಂಗಳಕರ ಸಾಧನೆಗಳನ್ನು ಕೊಟ್ಟು ನಮಗೆ ಸುಪ್ರೀತನಾಗು. ನಮಗೆ 'ತಂದೆತಾಯಿಯು ನೀನೆ, ಬಂಧು ಬಳಗವು ನೀನೆ'. ಅನಿಮಿತ್ತ, ಸ್ವಪ್ರಯೋಜನವಿಲ್ಲದೆ ಹಿತವನ್ನು ಮಾಡುವ - ಗೆಳೆಯನೂ ನೀನೆ, ನೀನೆ ನಮಗೆ ಪ್ರಭು, ಸನ್ಮಾರ್ಗಕ್ಕೆ ಹಚ್ಚುವ (ಜಗದ್ಗುರುವಾದ) ಗುರುವೂ ನೀನೆ ನಾರಾಯಣಾ ! ನಮಗೆ ನೀನೇ ಪರದೈವತ - ನೀನೇ ದೇವೋತ್ತಮ. ಭಕ್ತಿ ಪೂರ್ವಕ ನಿನ್ನ ಆರಾಧನೆ ಮಾಡುವದರಿಂದ (ಪರಮ ಪುರುಷಾರ್ಥವನ್ನು ಪಡೆದು) ನಾವು ಧನ್ಯರಾಗುನೆವು, ಕೃತಕೃತ್ಯರಾಗುವೆವು. ತಂದೆ, ತಾಯಿ ಮುಂತಾದ ಲೌಕಿಕ ( ಕೌಟುಂಬಿಕ ) ಸಂಬಂಧವನ್ನು ಹೊಂದಿಸಿಕೊಂಡು ಪರಮಾತ್ಮನ ಉಪಾಸನೆ ಮಾಡುವದು ಅಗತ್ಯ. ತಂದೆ-ತಾಯಿ ಎಂಬ ಸಂಬಂಧವು ಪರಮಾತ್ಮನಲ್ಲಿ ಅಸಾಧಾರಣವಾದುದು, ನಿರುಪಚರಿತವಾದುದು. 'ವಿಶಿಷ್ಟ, ಇಷ್ಟ, ಅಧಿಕೃತ' ರೆಂದು ಮೂರು ವಿಧವಾಗಿ ದೇವ-ದೇವತೆಗಳಿಗೆ ಆರಾಧನೆ ಸಲ್ಲಿಸುವದು.

॥೨೩॥ ನ ಬ್ರಹ್ಮಣಃ ಸ್ವಪರಭೇದಮತಿಸ್ತವ ಸ್ಯಾ-
ತ್ಸರ್ವಾತ್ಮನಃ ಸಮದೃಶಃ ಸ್ವಸುಖಾನುಭೂತೇಃ । ಯುಧಿಷ್ಠಿರ ಕೃಷ್ಣನಲ್ಲಿ
ಸಂಸೇವತಾಂ ಸುರತರೋರಿವ ತೇ ಪ್ರಸಾದಃ
ಸೇವಾನುರೂಪ ಉದಯೋ ನ ವಿಪರ್ಯಯೋಽತ್ರ ॥

೧೦-೮೦-೩
72

'ಇವರು ಕಡಿಮೆ, ಇವರು ಹೆಚ್ಚು, ಇವರು ಬೇಕಾದವರು, ಇವರು ಬೇಡಾದವರು, ಎಂಬ ವಿಷಮ ( ಪಕ್ಷಪಾತದ ) ದೃಷ್ಟಿಯುಳ್ಳವರ ಬಗ್ಗೆ ಭಕ್ತಿಯು ಎಂದಿಗೂ ಹುಟ್ಟಲಾರದು. ಒಂದು ವೇಳೆ ಹುಟ್ಟಿದರೂ, ಅದು ತೀರ ಮಂದವಾದ (ಸತ್ವವಿಲ್ಲದ) ಭಕ್ತಿ. ಪರಮಾತ್ಮನಲ್ಲಿ ದ್ವೇಷ ಪ್ರೀತಿಗಳೆಂಬ ವಿಷಮ ಭಾವನೆಯಿಲ್ಲವೆಂಬ ಶ್ರದ್ಧೆಯು ಭಕ್ತಿಯ ಉತ್ಪತ್ತಿಗೆ ಮುಖ್ಯ ಸಾಧನವಾಗಿರುವದು. ಅದಕ್ಕಾಗಿ, ಭಗವಂತನಲ್ಲಿ ಯಾವುದೇ ವೈಷಮ್ಯಭಾವ ವಿಲ್ಲವೆಂಬುದನ್ನು ಇಲ್ಲಿ ತೋರಿಸುವರು.

ಶ್ರೀ ಕೃಷ್ಣನ ಜೊತೆಗೆ ಭೀಮಾರ್ಜುನರನ್ನು ಜರಾಸಂಧನ ಸಂಹಾರಕ್ಕಾಗಿ ಕಳಿಸುವ ಸಂದರ್ಭದಲ್ಲಿ ಯುಧಿಷ್ಠಿರನು ಶ್ರೀ ಕೃಷ್ಣನನ್ನು ಸ್ತುತಿಸಿರುವನು :-

**ಅರ್ಥ** :- ಭಗವಂತನು (ಸರ್ವ ವಿಷಯಗಳಲ್ಲಿಯೂ ) ಸ್ವಯಂ ಪರಿಪೂರ್ಣನು, (ಅನಂತ ಕಲ್ಯಾಣಗುಣಪೂರ್ಣನು), ಆನಂದವೇ ತನ್ನ ಸ್ವರೂಪ ಉಳ್ಳವನಾಗಿರುವನು; ವಿಶ್ವಕ್ಕೆಲ್ಲ ಒಡೆಯನು; ಸಕಲ ಜೀವಗಳನ್ನು ಸಮದೃಷ್ಟಿಯಿಂದ ಏಕಪ್ರಕಾರವಾಗಿ ಕಾಣುವನು. ಆದುದರಿಂದ 'ಇವನು ನನ್ನವನು, ಅವನು ಬೇರೊಬ್ಬನು, ಪರಕೀಯನು' ಎಂಬ ಭೇದಭಾವನೆಯು ಭಗವಂತನಲ್ಲಿ ಕಿಂಚಿತ್ತಾದರೂ ಇಲ್ಲ. ಹೀಗಿದ್ದರೆ, (ಭಗವಂತನ ಉಪಾಸನೆಯಿಂದ ಕೆಲವರಿಗೆ ಫಲ ದೊರಕುವದು, ಕೆಲವರಿಗೆ ದೊರಕುವದಿಲ್ಲ. ಉಪಾಸನೆಯ ಫಲದಲ್ಲಿ ಹೀಗೆ ಭೇದ ಉಂಟಾಗಲು ಕಾರಣವೇನು ? ಎಂಬ ಪ್ರಶ್ನೆಗೆ ಉತ್ತರ ಹೇಳುವರು)- ಜನರ ಹೆಚ್ಚು ಕಡಿಮೆ ಸೇವೆಗೆ (ಉಪಾಸನೆಗೆ) ಅನುಗುಣವಾಗಿ (ಸೇವೆಗೆ ಯಥಾಯೋಗ್ಯವಾದ) ಫಲವನ್ನು ಕಲ್ಪವೃಕ್ಷವು ಕೊಡುವಂತೆ, ಭಗವಂತನ ಅನುಗ್ರಹವು ಕೂಡ ಅದೇ ರೀತಿಯಲ್ಲಿಯೆ ಉಪಾಸಕರಿಗೆ ಅವರವರ ಆರಾಧನೆಗೆ ಅನುಗುಣವಾಗಿ (ಅದಕ್ಕೆ ತಕ್ಕಂತೆ) ದೊರಕುವದು. ಭಗವಂತನ ಅನುಗ್ರಹದಿಂದಲೆ ಉಪಾಸನೆಗೆ ಫಲವು ದೊರೆಯುವದೆಂಬುದು ಎಲ್ಲರಿಗೂ ಗೊತ್ತಿದ್ದ ಸಂಗತಿ. ಆದರೆ ಭಗವಂತನ ಅನುಗ್ರಹವು ಸೇವೆ ಉಪಾಸನೆಯನ್ನೇ ಅವಲಂಬಿಸಿರುವದು. ಸೇವೆ ಹೆಚ್ಚಿದ್ದರೆ ಹೆಚ್ಚು ಅನುಗ್ರಹ, ಮಾಡುವ ಸೇವೆಯ ಪ್ರಮಾಣ ಕಡಿಮೆಯಿದ್ದರೆ

ಕಡಿಮೆ ಅನುಗ್ರಹ. ಭಗವಂತನ ಸೇವೆ (ಆರಾಧನೆ) ಮಾಡುವವರಿಗೆ ಆತನ ಅನುಗ್ರಹವು ದೊರೆಯುವದು, ಸೇವೆಯನ್ನೇ ಮಾಡದವರಿಗೆ ಅನುಗ್ರಹವು ದೊರೆಯಲಾರದು. ಅನುಗ್ರಹವೇ ಇಲ್ಲದಿದ್ದರೆ, ಅನುಗ್ರಹದಿಂದ ಒದಗುವ ಫಲವೂ ದೊರೆಯಲಾರದು. ಫಲವು ಅನುಗ್ರಹವನ್ನು ಅನುಸರಿಸುವದು, ಅನುಗ್ರಹವು ಭಗವಂತನ ಸೇವೆ – ಆರಾಧನೆಯನ್ನು ಅನುಸರಿಸುವದು. ಆದುದರಿಂದ ಕೆಲವರಿಗೆ ಫಲ ದೊರಕುವದು, ಕೆಲವರಿಗೆ ದೊರಕುವದಿಲ್ಲನೆಂಬ ವಿಪರ್ಯಾಸಕ್ಕೆ ಆಸ್ಪದವೇ ಇರುವದಿಲ್ಲ.

॥೨೨೪॥ **ಏವಂ ಸುರಾಸುರಗಣಾಃ ಸಮದೇಶಕಾಲ-**
**ಹೇತ್ವರ್ಥಯೋಗಗತಯೋಽಪಿ ಫಲೇ ವಿಕಲ್ಪಾಃ।**
**ತತ್ರಾಮೃತಂ ಸುರಗಣಾಃ ಫಲಮಂಜಸಾಪು-**
**ರ್ಯತ್ಪಾದಪಂಕಜರಜಃಶ್ರಯಣಾನ್ನ ದೈತ್ಯಾಃ॥ ೮-೮-೨೩**

(ಶ್ರದ್ಧಾ-ಭಕ್ತಿಯುತವಾದ) ಭಗವಂತನ ಉಪಾಸನೆಯಿಂದ, ಆತನ ಅನುಗ್ರಹ (ಪ್ರಸಾದ) ವನ್ನು ಪಡೆದು, ಪ್ರಸಾದಕ್ಕೆ ಅನುಗುಣವಾದ ಸೇವಾಫಲವನ್ನು ಹೊಂದುವಿರೆಂದು ಹೇಳಿರುವಿರಿ; ಭಗವಂತನ ಆರಾಧನೆ ಮಾಡದಿದ್ದರೆ ಆತನ ಅನುಗ್ರಹ ಉಂಟಾಗದು. ಅನುಗ್ರಹವಾಗದಿದ್ದರೆ, ಸೇವಾಫಲವೂ ದೊರೆಯಲಾರದು, ಎಂತಲೂ ಹೇಳಿರುವಿರಿ. ಈ ಮಾತಿಗೆ ಯಾವ ಸಂದರ್ಭದಲ್ಲಿ ಉದಾಹರಣೆ ಕಾಣುವದೆಂಬುದನ್ನು ಇಲ್ಲಿ ಹೇಳುವರು :–

**ಅರ್ಥ :–** (ಈ ಬಗ್ಗೆ ಇದುವರೆಗೆ ಹೇಳಿರುವದೆಲ್ಲವನ್ನು ಗಣನೆಗೆ ತಂದು ಕೊಂಡರೆ) (ಅಮೃತ ಮಂಥನದ ಕಾಲದಲ್ಲಿ) ದೇವತೆಗಳಿಗೂ ದಾನವರಿಗೂ, (ತಮ್ಮ ಕಾರ್ಯಕ್ಕೆ ಅಗತ್ಯವಿರುವ ವಸ್ತು ಹಾಗೂ ಸಾಧನಗಳು) ಸದೃಶ–ಸರಿಸಮಾನವಾಗಿದ್ದವು– ಮಂಥನದ ಪ್ರದೇಶವಾದ ಕ್ಷೀರ ಸಮುದ್ರವು ದೇವದಾನವರಿಬ್ಬರಿಗೂ ಅದೇ. ಮಂಥನದ ಸಮಯವೂ ಅದೇ. (ಅಮೃತಪ್ರಾಪ್ತಿಯ) ಉದ್ದೇಶವೂ (ಪ್ರಯೋಜನ–ಅರ್ಥವೂ) ಅದೇ. (ಹೇತು) ಕಡೆಯುವ ಸಾಧನವಾದ ಮಂದರಗಿರಿಯೂ ಅದೇ. (ಯೋಗ–ಉಪಾಯ) ದೇವದಾನವರು (ತಮ್ಮ ಪರಂಪರೆಯ ದ್ವೇಷ–ಹಗೆತನಗಳನ್ನು ತೋರಗೊಡದೆ) ಉದ್ದೇಶಿಸಿದ (ಮಂಥನ) ಕಾರ್ಯಕ್ಕಾಗಿ ಸಿದ್ಧರಾಗಿ ನಿಲ್ಲುವ ಕೃತಿಯೂ ಅದೇ. ದೇವದಾನವರಿಬ್ಬರಿಗೂ ಇವೆಲ್ಲ ಸಂಗತಿಗಳು ಸದೃಶ (ಒಂದೇ ಬಗೆಯ) ಹಾಗೂ ಯಾವ ಹೆಚ್ಚುಕಡಿಮೆಗಳಿಲ್ಲದೆ ಸರಿಸಮಾನವಾಗಿದ್ದವು. ಹೀಗಿದ್ದರೂ ಇವರೀರ್ವರ ಕಾರ್ಯಕ್ಕೆ, ದೇವದಾನವರಿಗೆ ದೊರೆತ ಫಲವು (ನಿಷ್ಪತ್ತಿಯು) ವಿಭಿನ್ನ, ವಿರುದ್ಧವಾಯಿತು.

ಇಲ್ಲಿ ಹೀಗೆ ಆಕ್ಷೇಪಿಸಬಹುದು :- ಇಬ್ಬರಿಗೂ ದೊರೆತ ಫಲವು ವಿರುದ್ಧವೆಂದು ಏಕೆ ಹೇಳುವಿರಿ ? ದೇವತೆಗಳಿಗೆ ಐರಾವತವೂ ದೊರೆತರೆ, ದೈತ್ಯರಿಗೂ ಅಷ್ಟೇ ಶ್ರೇಷ್ಠವಾದ ವಾರುಣೀ - ಸೋಮರಸವು ( ಮದ್ಯವು ) ದೊರೆಯಲಿಲ್ಲವೇನು ? ದೇವದಾನವರಿಗೆ ದೊರೆತ ಫಲವು ವಿರುದ್ಧವೆಂದು ಏಕೆ ಹೇಳಬೇಕು ? ಈ ಆಕ್ಷೇಪಕ್ಕೆ ಇಲ್ಲಿ ಉತ್ತರವನ್ನು ಹೇಳುವರು :- ದೇವತೆಗಳಿಗೆ ದೊರೆತಂತೆ, ದೈತ್ಯರಿಗೂ ಶ್ರೇಷ್ಠ ವಸ್ತುಗಳು ದೊರೆತಿರಬಹುದು. ಆದರೆ ಅಮೃತವನ್ನು ಪಡೆಯುವದೆ ಇಬ್ಬರಿಗೂ ಮುಖ್ಯ ಉದ್ದೇಶವಾಗಿತ್ತು. ದೇವತೆಗಳಿಗೆ ಈ ಮುಖ್ಯ ಉದ್ದೇಶವು ಫಲಿಸಿತು, ಸಿದ್ಧಿಸಿತು. ದೈತ್ಯರಿಗೆ ಅದು ವಿಫಲವಾಯಿತು. ಉದ್ದೇಶ ಮೊದಲಾದ ಎಲ್ಲ ಸಂಗತಿಗಳು ಸದೃಶ - ಸರಿಸಮಾನವಾಗಿದ್ದರೂ, ದೇವತೆಗಳ ಉದ್ದೇಶವು ಈಡೇರಿತು, ದೈತ್ಯರಿಗೆ ನಿರಾಶೆಯಾಯಿತು. ಇಬ್ಬರಿಗೂ ದೊರೆತ ಫಲದಲ್ಲಿ ಇದೇ ವಿಕಲ್ಪವು - ವಿಭಿನ್ನತೆಯು.

ಸಮಾನವಾದ ಉದ್ದೇಶವು ದೇವತೆಗಳಿಗೆ ಸಫಲವಾಗಲು, ದೈತ್ಯರಿಗೆ ವಿಫಲವಾಗಲು ಕಾರಣವೇನಂದರೆ, ( 'ಯತ್ಪಾದಪಂಕಜರಜಃ ಶ್ರಯಣಾತ್' ) ದೇವತೆಗಳು ಪರಮಾತ್ಮನ ಪಾದಕಮಲವನ್ನು ದೃಢವಾಗಿ ನಂಬಿದವರು, ಆತನ ಅನುಗ್ರಹವನ್ನು ಪಡೆದವರು. ಅಂತೆಯೆ ದೇವತೆಗಳ ಸೇವೆಗೆ ಸಮುಚಿತವಾದ ಫಲವು ದೊರೆತಿತು. ಅವರ ಉದ್ದೇಶವು ಸಿದ್ಧಿಸಿತು. ಪರಮಾತ್ಮನ ದ್ವೇಷಿಗಳಾದ ದೈತ್ಯರು ಆತನ ಅನುಗ್ರಹವನ್ನು ಪಡೆದವರಲ್ಲವೆಂಬುದನ್ನು ಬೇರೆ ಹೇಳಬೇಕಿಲ್ಲ. ಪರಮಾತ್ಮನ ಸೇವೆಯಿಂದ ಅನುಗ್ರಹವು ಇದ್ದರೆ, ಹಾಗೂ ಇಲ್ಲದಿದ್ದರೆ ಫಲದಲ್ಲಿ ಆಗುವ ವಿಕಲ್ಪವನ್ನು ಈ ಉದಾಹರಣೆಯಿಂದ ಎತ್ತಿ ತೋರಿಸಿರುವರು.

**||೨೭|| ನೈಷಾ ಪರಾವರಮತಿರ್ಭವತೋ ನನು ಸ್ಯಾ-**
**ಜ್ಜಂತೋರ್ಯಥಾತ್ಮಸುಹೃದೋ ಜಗತಸ್ತಥಾಪಿ |**
**ಸಂಸೇವಯಾ ಸುರತರೋರಿವ ತೇ ಪ್ರಸಾದಃ**
**ಸೇವಾನುರೂಪ ಉದಯೋ ನ ಪರಾವರತ್ವಂ || ೭-೯-೨೭**

ಇಲ್ಲಿ ಇನ್ನೊಂದು ಆಕ್ಷೇಪ ಎತ್ತುವರು :- ಫಲದಾತೃವಾದ ಪರಬ್ರಹ್ಮನಲ್ಲಿ (ಪರಮಾತ್ಮನನಲ್ಲಿ) ಇನ್ನೊಂದು ವೈಷಮ್ಯದ (ಒಬ್ಬರಿಗೊಂದು ಮತ್ತೊಬ್ಬರಿಗೆ ಬೇರೊಂದು ಎಂಬ ) ರೀತಿಯು ಕಾಣಬರುತ್ತದಲ್ಲ - ಹೇಗೆಂದರೆ, ಅದೇ ಪರಮಾತ್ಮನ ಸೇವೆ ಮಾಡುವ ಇಬ್ಬರಲ್ಲಿ ಒಬ್ಬನಿಗೆ ಅಧಿಕ ಫಲ, ಇನ್ನೊಬ್ಬನಿಗೆ ಅಲ್ಪಫಲ ದೊರೆಯುವದು, ಹೀಗಾಗಲು ಕಾರಣವೇನು ? ಒಬ್ಬನು ಸೇವೆ ಮಾಡಿದ್ದಾನೆ, ಅದಕ್ಕೆ ಆತನಿಗೆ ಫಲ ದೊರೆತಿದೆ. ಇನ್ನೊಬ್ಬನು ಸೇವೆಯನ್ನೇ

ಮಾಡಿಲ್ಲ, ಆದುದರಿಂದ ಅವನಿಗೆ ಫಲವೂ ಇಲ್ಲ. ಎಂದು ಮೊದಲು ಹೇಳಿದಂತೆ ಉತ್ತರ ಕೊಟ್ಟರೆ ಈ ಆಕ್ಷೇಪದ ನಿವಾರಣೆಯಾಗದು. ಏಕೆಂದರೆ, ಇಲ್ಲಿ ಸೇವೆಯ ಅಭಾವವೂ ಇಲ್ಲ, ಫಲದ ಅಭಾವವೂ ಇಲ್ಲ. ಇಬ್ಬರೂ (ಭಗವಂತನ) ಸೇವೆಯನ್ನೂ ಮಾಡಿದ್ದಾರೆ, ಫಲವನ್ನೂ ಪಡೆದಿದ್ದಾರೆ. ಆದರೆ ವಿಷಮತೆ (ಹೆಚ್ಚು ಕಡಿಮೆ) ಕಾಣಬರುವದು ಅವರಿಗೆ ದೊರೆತ ಫಲದ ಪ್ರಮಾಣದಲ್ಲಿ. ಈ ವಿಷಮತೆಗೆ, 'ಇವನು ಹೆಚ್ಚಿನವನು (ಮೇಲು), ಅವನು ಕಡಿಮೆಯವನು (ಕೀಳು), ಎಂಬ ಪರಮಾತ್ಮನಲ್ಲಿಯ ವಿಷಮ ದೃಷ್ಟಿಯೇ ಕಾರಣವೆಂದು ಹೇಳಬೇಕಾದೀತು. ಈ ಆಕ್ಷೇಪಕ್ಕೆ ಇಲ್ಲಿ ಸಮಾಧಾನವನ್ನು ಹೇಳುವರು.

**ಅರ್ಥ:**- ವಿಶ್ವಕ್ಕೆಲ್ಲ ಅನಿಮಿತ್ತ ಬಂಧು-ನಿರಪೇಕ್ಷ ಹಿತಚಿಂತಕನು ಆಗಿರುವ ನಿನ್ನಲ್ಲಿ (ಪರಮಾತ್ಮನಲ್ಲಿ) ಸಕಲ ಮಾನವರ ವಿಷಯದಲ್ಲಿಯೇ, 'ಇವನು ಮೇಲು, ಇವನು ಕೀಳು (ಉಚ್ಚ-ನೀಚ) ಎಂದು ಕಾಣುವ ವಿಷಮ ದೃಷ್ಟಿಯು ಕಿಂಚಿತ್ತಾದರೂ ಇಲ್ಲವೇ ಇಲ್ಲ. ಹೀಗಿದ್ದರೂ, ಸರ್ವಥಾ ವೈಷಮ್ಯರಹಿತನಾದ ನಿನ್ನಲ್ಲಿ ಫಲ ಕೊಡುವಲ್ಲಿ ಕಂಡುಬರುವ ತಾರತಮ್ಯವು ಹೆಚ್ಚುಕಡಿಮೆಯು, ಆರಾಧಕರಿಗೆ ಕಲ್ಪವೃಕ್ಷವು ನೀಡುವ ಫಲದಂತೆ, ನೀನು ಕೊಡುವ ಪ್ರಸಾದವನ್ನು, ಮಾಡುವ ಅನುಗ್ರಹವನ್ನು ಅವಲಂಬಿಸಿರುವದು. ವಿಷಮ ಭಾವನೆಯು ಅದಕ್ಕೆ ಕಿಂಚಿತ್ತು ಕಾರಣವಾಗಿಲ್ಲ. ಒಟ್ಟು ಅಭಿಪ್ರಾಯವೆಂದರೆ, - ದೈವ ಕೃಪೆಯಿಂದ ಕಲ್ಪತರು ದೊರೆತಾಗ್ಗೆ, ಅನೇಕರು ಅದರ ಸೇವೆಯನ್ನು ಮಾಡಬಹುದು. ಈ ಸೇವೆಯಿಂದ ದೊರೆಯುವ ಫಲದಲ್ಲಿ ಮಾತ್ರ ಹೆಚ್ಚುಕಡಿಮೆ ಇರುವದು. ಹೀಗೆ ಸೇವೆ ಮಾಡುವರಲ್ಲಿ ಒಬ್ಬನಿಗೆ ರಾಜ್ಯಪದವಿ, ಇನ್ನೊಬ್ಬರಿಗೆ ಮಂತ್ರಿಯ ಸ್ಥಾನ ಮಾತ್ರ. ಹೆಚ್ಚು ಕಡಿಮೆಯಾಗುವ ಫಲಕ್ಕೆಕಾರಣವು, ಕಲ್ಪವೃಕ್ಷವು(ಮನಸ್ಸಿಗೆ ಬಂದಂತೆ) ಮಾಡುವ ಅನುಗ್ರಹದ ತಾರತಮ್ಯವನ್ನು ಅವಲಂಬಿಸಿದೆ - ಎಂದು ಹೇಳುವದು ಕಲ್ಪವೃಕ್ಷದ ಬಗ್ಗೆ ಸ್ವಚ್ಛಂದ ಮನೋವೃತ್ತಿಯ ದೋಷವನ್ನು ಹೊರಸಿದಂತಾದೀತು. ಈ ದೋಷಾರೋಪಣೆಯು ಚಿಂತಿಸಲೂ ಕೂಡ ಸರ್ವಥಾ ಅಯೋಗ್ಯ - ಅಸಮರ್ಥನೀಯವಾದುದು. 'ಕಲ್ಪವೃಕ್ಷವು ಸೇವೆಗೆ ಅನುಗುಣವಾಗಿ ಅನುಗ್ರಹ ಮಾಡುವದರಿಂದ ದೋಷನೆಲ್ಲಿದೆ' ? ಎಂದು ಉತ್ತರ ಬಂದರೆ, ನಾವು ಹೇಳುವದಾದರೂ ಇದೇ ಆಗಿರುವದು.

||೨೨೬|| ನಾಹಂ ತು ಸಖ್ಯೋ ಭಜತೋಽಪಿ ಜಂತೂನ್
ಭಜಾಮ್ಯಮೀಷಾಮನುವೃತ್ತಯೋ ಯಥಾ |
ತಥೈವ ಮತ್ತಃ ಫಲಸಂಪದಃ ಸ್ಯುಃ
ಉಚ್ಚಾವಚಾಃ ಕಲ್ಪತರೋರಿವಾರ್ಥಿನಾಂ || ೧೦-೩೦-೨೦

ಹಿಂದೆ ಹೇಳಿದ ಮಾತು ಮನಸ್ಸಿನಲ್ಲಿ ದೃಢವಾಗಿ ಬಿಂಬಿಸಬೇಕೆಂದು, ಅದನ್ನೇ ವಿವರವಾಗಿ ಸ್ಪಷ್ಟಗೊಳಿಸುವರು :- ರಾಸ ಕ್ರೀಡೆಯಲ್ಲಿ ಶ್ರೀ ಕೃಷ್ಣನು ಕೇವಲ ತಮ್ಮವನೆಂಬ ಕ್ಷಣಿಕ ಅಭಿಮಾನವು ವೃಂದಾವನದ ಗೋಪಿಯರಿಗೆ ಆಗಲು, ಭಗವಂತನು ಒಮ್ಮೆಲೆ ಕಾಣದಂತಾಗುವನು. ಅನುತಾಪದಿಂದ ಪ್ರಲಾಪಿಸುವ ಗೋಪಿಯರಿಗೆ ಮತ್ತೆ ಪ್ರತ್ಯಕ್ಷನಾದಾಗ್ಗೆ, ಗೋಪಿಯರಿಗೆ ಹೇಳಿದ ಮಾತು.

ಅರ್ಥ :- ಹೇ ಸಖಿಯರೆ ( ಗೋಪಿಯರೆ ) ! 'ಇವರು ನನ್ನ ಉಪಾಸನೆ ಮಾಡುವವರು, ಇವರು ಉಪಾಸನೆ ಮಾಡದವರು', ಇದೊಂದೇ ಕಾರಣದಿಂದ (ಇದೊಂದೇ ಸಂಗತಿಯನ್ನು ನಿರೀಕ್ಷಿಸಿ) ನಾನು ಜೀವಿಗಳ ಮೇಲೆ ಒಲಿಯುವದಿಲ್ಲ, ಭಜಿಸುವವರು ನನ್ನವರು, ಭಜಿಸದವರು ಪರಕೀಯರು – ಎಂದು ಅವರನ್ನು ನಾನು ಭಾವಿಸುವದಿಲ್ಲ, ಇದೇ ಮೇರೆಗೆ ನನ್ನ ಭಕ್ತರಲ್ಲಿಯೂ ಕೂಡ ಒಬ್ಬರು ಮೇಲು, ಇನ್ನೊಬ್ಬರು ಕೀಳು ಎಂಬ ದೃಷ್ಟಿಯಿಂದ ನಾನು ಹೆಚ್ಚು ಕಡಿಮೆಯಾಗಿ ಅನುಗ್ರಹ ಮಾಡುವದಿಲ್ಲ. ಹೀಗಿದ್ದರೂ ಭಗವಂತನು ಮಾಡುವ ಅನುಗ್ರಹದಲ್ಲಿ ಹೆಚ್ಚು ಕಡಿಮೆಯಾಗಿರಲು ಕಾರಣವನ್ನು ಹೇಳುವರು :- ಭಕ್ತರು ಮಾಡುವ ನನ್ನ ಸೇವೆ ( ನಿಷ್ಠಾಯುತವಾದ ಆರಾಧನೆ ) ಯಾವ ಬಗೆಯದಾಗಿರುವದೊ, ಎಷ್ಟು ಅನನ್ಯವಾಗಿರುವದೊ, ಅವುಗಳಿಗೆ ಅನುಗುಣವಾಗಿಯೆ, ಅವರ ಸೇವೆಗೆ ತಕ್ಕುದಾದ ಫಲವನ್ನು ಕೊಡುವೆನು. ಸೇವೆಗೆ ತಕ್ಕಂತೆ ಫಲ ಕೊಡುವಲ್ಲಿ, ಭಗವಂತನು ಕಲ್ಪವೃಕ್ಷದ ರೀತಿಯನ್ನೇ ಅನುಸರಿಸುವನು. ಉನ್ನತ ಮಟ್ಟದ ಸೇವೆಗೆ, ಉತ್ಕೃಷ್ಟ ಫಲವು, ಕೆಳಮಟ್ಟದ ಸೇವೆಗೆ ಕನಿಷ್ಠ ಫಲವು. ಕಲ್ಪವೃಕ್ಷವಾದರೂ ತನ್ನನ್ನು ಆಶ್ರಯಿಸುವರ ಸೇವೆಯ ಹೆಚ್ಚು ಕಡಿಮೆಯತೆಯೆ ಅವರಿಗೆ ಉನ್ನತ ಇಲ್ಲವೆ ಕನಿಷ್ಠ ಫಲವನ್ನು ಕೊಡುವದು.

**॥೨೨೭॥ ತ್ವಯೈವ ದತ್ತಂ ಪದಮೈಂದ್ರಮೂರ್ಜಿತಂ**
**ಹೃತಂ ತ್ವಯೈವಾದ್ಯ ತದೇವ ಶೋಭನಂ ।**
**ಮನ್ಯೇ ಮಹಾನಸ್ಯ ಕೃತೋಽಪ್ಯನುಗ್ರಹೋ**
**ವಿಭ್ರಂಶಿತೋ ಯಚ್ಛ್ರಿಯ ಆತ್ಮಮೋಹನಾತ್** ॥ ೮-೨೧-೧೬

ಪರಮಾತ್ಮನಲ್ಲಿ – 'ತನ್ನವರು, ಪರಕೀಯರು' ಎಂಬ ಭೇದಭಾವನೆಯಿಲ್ಲ. ಪರಮಾತ್ಮನಲ್ಲಿ ವಿಷಮ ಭಾವನೆಯಿಲ್ಲವೆಂಬ ಆತನ ವಿಶಿಷ್ಟ ಗುಣವನ್ನು ಸಾಧಕನು ತನ್ನ ಮನಸ್ಸಿನಲ್ಲಿ ಬಿಂಬಿಸಿಕೊಳ್ಳುವಂತೆ, ಪರಮಾತ್ಮದ ಕರುಣೆಯು ಅಪಾರವಾದುದೆಂಬ ಆತನ ಕಲ್ಯಾಣ ಗುಣವು ತನ್ನ ಮನಸ್ಸಿನಲ್ಲಿ ಬೇರೂರುವಂತೆ ಮಾಡಿಕೊಳ್ಳುವದೂ ಸಾಧಕನ ಕರ್ತವ್ಯವಾಗಿದೆ. ಹೀಗೆ ಮಾಡುವದರಿಂದ

ಧಿಸಿ ಭಕ್ತಿಯು ದೃಢವಾಗುವದು, ನಿರ್ಮಲವಾಗುವದು. ಇಲ್ಲಿ ನೆನಪಿನಲ್ಲಿ ಇಡಬೇಕಾದ ಮಾತೆಂದರೆ, ಸಾಧನದ ಪ್ರಥಮ ಹಂತದಲ್ಲಿಯೇ ಪರಮಾತ್ಮನು (ಕರುಣಾ ಸಮುದ್ರನಾಗಿದ್ದರೂ) ತನ್ನ ಕರುಣೆಯನ್ನು ತೋರಿಸುವದಿಲ್ಲ. ಹೀಗೆ ಮಾಡದೆ, ಸಾಧಕನನ್ನು ಬಹುಕಾಲ, ಬಹು ಬಗೆಯಾಗಿ ಪರೀಕ್ಷಿಸುವನು. ಸಾಧಕನ ಭಕ್ತಿಯು ಅಚಲವಾಗಿದೆ, ಗಟ್ಟಿಮುಟ್ಟಿಯಾಗಿದೆ ಯೆಂಬುದನ್ನು ಒರೆಗೆ ಹಚ್ಚಿ, ಅನಂತರ ಅನುಗ್ರಹವನ್ನು ಮಾಡುವನು. ಈ ಮಾತು ಬಲಿರಾಜನ ಚರಿತ್ರೆಯಲ್ಲಿ ಕಂಡುಬರುವದು. (ತತ್ವನಿಷ್ಠೆಯ ಪರೀಕ್ಷೆಯಲ್ಲಿ) ಬಲಿಯು ತನ್ನ ಸಾಮ್ರಾಜ್ಯವನ್ನೆಲ್ಲ ಕಳೆದುಕೊಳ್ಳುವನು; ವರುಣಪಾಶದಿಂದ ಬಂಧಿತನಾಗಿರುವನು. ಆ ದುರ್ದೆಸೆಯಲ್ಲಿ ಪ್ರಲ್ಹಾದರು ಬಲಿಯನ್ನು ಕಾಣುವರು. ಪ್ರಲ್ಹಾದರು ಅದರಿಂದ ರೇಗಲಿಲ್ಲ, ರೊಚ್ಚಿಗೇಳಲಿಲ್ಲ. ಬಲಿಯ ರಾಜ್ಯಾಪಹರಣ, ಪಾಶಬಂಧನಗಳಲ್ಲಿಯೂ ಕೂಡ ಪ್ರಲ್ಹಾದರಿಗೆ ಪರಮಾತ್ಮನ ಮಂಗಳಕರವಾದ ಕಾರುಣ್ಯವೇ ಕಂಡುಬರುವದು. ಆ ಕಾಲಕ್ಕೆ ಪ್ರಲ್ಹಾದರು ಭಗವಂತನನ್ನು ಕುರಿತು ಆಡಿದ ಮಾತುಗಳಿವು,

**ಅರ್ಥ** :- ಪ್ರಭುವೆ ! ಉನ್ನತವಾದ ಇಂದ್ರಪದವಿಯನ್ನು (ಬಲಿರಾಜನಿಗೆ) ಈ ಮೊದಲು ನೀನೆ ಕೊಟ್ಟಿರುವಿ, ಇಂದು ಆ ಪದವಿಯನ್ನು ಆತನಿಂದ ನೀನೇ ಕಿತ್ತುಕೊಂಡಿರುವಿ. ಅಂದು ಬಲಿರಾಜನಿಗೆ ಇಂದ್ರ ಪದವಿಯನ್ನು ದಯಪಾಲಿಸಿದ್ದು ಇಂದು ತಿರುಗಿ ತೆಗೆದುಕೊಂಡಿದ್ದು ಇವೆರಡೂ ಕಲ್ಯಾಣ ಕರ್ಮಗಳೆಂತಲೆ ನಾನು ಭಾವಿಸುವೆ. ಶ್ರೀ ಹರಿಯ (ನಿನ್ನ) ಇಚ್ಛೆಯಿಂದ (ಭಗವದಿಚ್ಛೆಯಿಂದ) ಜೀವನದಲ್ಲಿ ಒದಗುವದೆಲ್ಲವೂ ಕಲ್ಯಾಣಕರ. ತಮ್ಮ ಹಿತಕ್ಕಾಗಿಯೆ ಇರುವವೆಂದು ಭಗವದ್ಭಕ್ತರಾದ ಭಾಗವತರು (ನಿಃಸಂದೇಹವಾಗಿ) ಭಾವಿಸಬೇಕು. ಇದೇ ಆಶಯವಾಗಿದೆ. ಭಗವದಿಚ್ಛೆಯಿಂದ ಒದಗುವದು ಹಿತಕರಮಾತ್ರವಲ್ಲ, ಅದು ಪರಮಾತ್ಮನ ಪರಮಾನುಗ್ರಹ ಪಡೆಯುವ ಸಾಧನವೂ ಆಗಿರುವದೆಂಬ ಭಾವವನ್ನು 'ಮಹಾನ್ ಅನುಗ್ರಹಃ' ಎಂಬ ಶಬ್ದಗಳಿಂದ ಸೂಚಿಸುವರು.

(ಪ್ರಲ್ಹಾದರು ಹೇಳುವರು):- ಬಲಿರಾಜನ ಸಂಪತ್ತನ್ನು ಸೆಳೆದುಕೊಳ್ಳುವದೆಂದರೆ, (ಸಂಪತ್ತಿನ ಹಾಗೂ ಇಂದ್ರಪದವಿಯ ಬಗ್ಗೆ) ಆತನ ಮನಸ್ಸಿನಲ್ಲಿ ನೆಲೆಯೂರಿದ ಮೋಹ (ಲೋಭ-ಮಮತ್ವ) ವನ್ನೇ ಕಳಚಿಬಿಟ್ಟಂತಾಯಿತು. ಸಂಪತ್ತನ್ನು ಕಸಿದುಕೊಳ್ಳುವದರಲ್ಲಿ ಹೀಗೆ ಮಾಡುವದೇ ನಿನ್ನ ಉದ್ದೇಶಹಾಗಿರುವದು. ಆದುದರಿಂದ, ಬಲಿರಾಜನ ಸಂಪತ್ತು - ಸ್ಥಾನಮಾನಗಳನ್ನು ಸೆಳೆದುಕೊಂಡದ್ದು ಆತನ ಮೇಲೆ ನೀನು ಮಾಡಿರುವ ಮಹಾನ್ ಅನುಗ್ರಹವೇ ಸರಿ-ಎಂದು ನಾನು ಭಾವಿಸುವೆನು.

ಹೀಗೆ ಹೇಳಿರುವರು :-

" ಬ್ರಹ್ಮನ್ಯಂ ಅನುಗೃಹ್ಣಾಮಿ .. ನಮುಹ್ಯೇತ್ ಮತ್ಪರಃ "

( ೮-೩೧-೨೪,-೨೫,-೨೭ )

**ಅರ್ಥ** ;- (ಭಗವಂತನು ಬ್ರಹ್ಮನಿಗೆ **ಹೇಳಿರುವ ಮಾತು** ಇದು) ಬ್ರಹ್ಮನೆ, ಯಾವ ಸಂಪತ್ತಿನಿಂದ ಮಾನವನು **ಸೊಕ್ಕಿದವನಾಗಿ** ನನ್ನ ಅಂತರ್ಯಾಮಿಯಾದ ಜಗತ್ತನ್ನು, ಜಗದ **ಅಂತರ್ಯಾಮಿಯಾದ** (ನಿಯಾಮಕನಾಗಿ ಒಳಗೆ ನೆಲಿಸಿರುವ) ನನ್ನನ್ನು **ಕಡೆಗಣಿಸುವನೊ, ಅವನ ಸಂಪತ್ತೇ** ಅವನಿಂದ ತೊಲಗುವಂತೆ ನಾನು ಮಾಡುವೆನು. - ಮಾನವನು ಅನೇಕ ಯೋನಿಗಳಲ್ಲಿ ಸುತ್ತು ಸುತ್ತಾಡಿ, ದೈವಕೃಪೆಯಿಂದ ಮಾಡಿದ **ಪುಣ್ಯ**ಕೃತಿಗಳ ಪರಿಪಾಕದಿಂದ, ಮಾನವ ಜನ್ಮವನ್ನು ಪಡೆದಾಗ್ಗೆ, ಕುಲ, ಕರ್ಮ, ವಯಸ್ಸು, ಸೌಂದರ್ಯ, ವಿದ್ಯೆ, ವೈಭವ, ಸಂಪತ್ತು ಮುಂತಾದ (ಮದಜನಕ) **ಸಂಗತಿಗಳಿಂದ** ಸ್ತಂಭಿತನಾಗದಿರುವದೆ ( ಭಗವಂತನ ಸೇವೆ - ಆರಾಧನಾಕಾರ್ಯಗಳಲ್ಲಿ ಉದಾಸೀನನಾಗದಿರುವದೇ) - ಇದುವೆ ನಾನು ಆತನಿಗೆ ಮಾಡುವ ಅನುಗ್ರಹವಾಗಿದೆ. ಗರ್ವಿಷ್ಟತೆ, ನಮ್ರತೆ ಇಲ್ಲದಿರುವದು ಅಥವಾ ಸಾರಾಸಾರ ವಿವೇಕವಿಲ್ಲದಿರುವದು, - ಇವುಗಳ ಕಾರಣದಿಂದ ಬರುವ ಜನ್ಮ ಜನ್ಮಾಂತರಗಳು ಸರ್ವಬಗೆಯಿಂದಲೂ ಪುರಷಾರ್ಥ (ಶ್ರೇಯಃ)ದ ಪ್ರಾಪ್ತಿಗೆ ಆತಂಕ - (ವಿರುದ್ಧ) ವಾದವುಗಳೆಂದು ಮನವರಿಕೆ ಮಾಡಿಕೊಂಡು, ಅವುಗಳ ಮೋಹಕ್ಕೆ ಒಳಗಾಗದವನು (ಈ ದೋಷಗಳನ್ನು ಬಿಟ್ಟು ಕೊಡುವವನು) ನನ್ನ ಭಕ್ತನಾಗಿರುವನು.

॥೨೨೮॥ **ಯತ್ಪಾದಯೋರಶಠಧೀಃ ಸಲಿಲಂ ಪ್ರದಾಯ**
**ದೂರ್ವಾಂಕುರೈರಪಿ ವಿಧಾಯ ಸತೀಂ ಸಪರ್ಯಾಂ** ।
**ಅಪ್ಯುತ್ತಮಾಂ ಗತಿಮಸೌ ಭಜತೇ ತ್ರಿಲೋಕೀಂ**
**ದತ್ವಾ ನ ವಿಕ್ಲವಮನಾಃ ಕಥಮಾರ್ತಿಮೃಚ್ಛೇತ್** ॥

೮-೨೧-೨೩

ಪಾಶದಿಂದ ಬಿಗಿಯಲ್ಪಟ್ಟ ಬಲಿರಾಜನನ್ನು ಕಂಡು ಪ್ರಲ್ಹಾದರು ಶ್ರೀನೃಸಿಂಹ ಮೂರ್ತಿಯನ್ನು ಪ್ರಾರ್ಥಿಸಿದರೆಂದು ಹಿಂದೆ ಹೇಳಿದೆ. - ಬಲಿರಾಜನ ಬಗ್ಗೆ ಕರುಣೆಯಿಂದ ಬ್ರಹ್ಮ-ದೇವರು ಶ್ರೀ ನೃಸಿಂಹನಿಗೆ ಮಾಡಿರುವ ಸ್ತುತಿಯು ಇದು.

**ಅರ್ಥ** ಃ- ( ನಿನ್ನ ಅಚಿಂತ್ಯಮಹಿಮೆಯ ಜ್ಞಾನವಿಲ್ಲದೆ ) ಬುದ್ಧಿಪೂರ್ವಕವಾಗಿ ( ತಿಳಿದುಕೊಂಡು ) ಅಲ್ಲದಿದ್ದರೂ, ನಿನ್ನ ಪಾದಗಳಿಗೆ ನೀರಿನಿಂದ ಅಭಿಷೇಕ ಮಾಡುವವನು, (ಬೇರೆ ಪೂಜಾದ್ರವ್ಯಗಳಿರದಿದ್ದರೂ) ಎಳೆ ಗರಿಕೆಯಿಂದ

ಲಾದರೂ ನಿನಗೆ ಉತ್ತಮವಾದ (ಭಕ್ತಿಯುಕ್ತವಾದ) ಪೂಜೆಯನ್ನು ಸಮರ್ಪಿಸಿದವನು – ಅಂಥವನಿಗಾದರೂ ಕೂಡ ಶ್ರೇಷ್ಠವಾದ ಸದ್ಗತಿಯನ್ನು ಪಾಲಿಸಿದವನು ನೀನು. (ಇಂತು ಅಪಾರ ಕರುಣೆಯುಳ್ಳ ನಿನಗೆ) ಕಿಂಚಿತ್ತೂ ಮನನೊಂದುಕೊಳ್ಳದೆ ಮೂರು ಲೋಕಗಳ ತನ್ನ ಒಡೆತನವನ್ನೂ ಸಮರ್ಪಿಸಿದ ಈ ಬಲಿರಾಜನು ಪಾಶಬಂಧ ಮುಂತಾದ ಕೋಟಲೆ–ಹಾನಿಗಳಿಗೆ ಒಳಗಾಗಿದ್ದರೂ, ನಿನ್ನ ಕೃತಿಯಿಂದ ಅವನಿಗೆ ಕ್ಲೇಶವು (ಮನೋವೇದನೆಯು) ಎಂದಿಗೂ ಒದಗಲಾರದು. ಅವನಿಗೆ ಕ್ಲೇಶ ಕೊಡುವದು ಸರ್ವಥಾ ಉಚಿತವಾದುದಲ್ಲ. ಆದುದರಿಂದ, ಅಂಥ ಬಲಿರಾಜನ ಮೇಲೆ ನೀನು ಅನುಗ್ರಹ ತೋರಿಸಬೇಕು. ಇಲ್ಲಿ ಒಂದು ವಿಶೇಷ ಸಂಗತಿಯೆಂದರೆ, ಪ್ರಲ್ಹಾದರ ಸ್ತೋತ್ರದಲ್ಲಿ ಒಡೆದುಕಾಣದ ಬಿನ್ನಹವನ್ನು ಬ್ರಹ್ಮದೇವರು ಸ್ಪಷ್ಟಮಾತುಗಳಲ್ಲಿ ಮಾಡಿಕೊಂಡಿರುವರು.

||೨೯|| ಬಿಭೇಮಿ ನಾಹಂ ನಿರಯಾತ್ಪದಚ್ಯುತೋ
ನ ಪಾಶಬಂಧಾದ್ವ್ಯಸನಾದ್ದುರತ್ಯಯಾತ್
ನ ಚಾರ್ಥಕೃಚ್ಛ್ರಾದ್ಭವತೋ ವಿನಿಗ್ರಹಾ-
ದಸಾಧುವಾದಾದ್ಭೃಶಮುದ್ವಿಜೇ ಯಥಾ || ೮-೨೧-೩

ಬಲಿರಾಜನಿಗೆ ಒದಗಿದ ಕಷ್ಟನಷ್ಟಗಳನ್ನು ಕಂಡು, ಮನನೊಂದುಕೊಂಡು ಅವುಗಳ ನಿವಾರಣೆಗಾಗಿ, ಬೇರೆಯವರೆ ಭಗವಂತನಿಗೆ ಬೇಡಿಕೊಂಡರು. ಆದರೆ ತನ್ನ ದುಃಖ ನಿವಾರಣೆಗಾಗಿ, ಬಲಿರಾಜನು ತನ್ನ ಪ್ರಾರ್ಥನೆಯಲ್ಲಿ ಚಕಾರ ಶಬ್ದವನ್ನು ನುಡಿಯಲ್ಲಿಲ್ಲ. ಇಷ್ಟೇ ಏಕೆ ? ಅದಕ್ಕಾಗಿ ಆತನ ಮನಸ್ಸು ಕಿಂಚಿತ್ತಾದರೂ ನೊಂದುಕೊಳ್ಳಲಿಲ್ಲ. ಅಬ್ಬಾ ! ಭಕ್ತರ ದಾರ್ಢ್ಯವನ್ನು ಭಗವಂತನು (ತೋರಿಕೆಯಲ್ಲಿ) ಎಷ್ಟು ನಿಷ್ಠುರವಾಗಿ ಪರೀಕ್ಷಿಸುವನು ! ಭಗವಂತನ ಕರುಣೆಯೂ ಅಷ್ಟೇ ಅಪಾರವಾದುದು ! ಭಕ್ತಿಯ ಒರೆಗಲ್ಲಿನಲ್ಲಿ ತೇರ್ಗಡೆಯಾದ ಬಲಿರಾಜನಿಗೆ ಆತನ ಪೂರ್ವದ ಅಧಿಕಾರ ಐಶ್ವರ್ಯಗಳಿಗಿಂತಲೂ ಅಧಿಕ ಪಟ್ಟು ಕೊಡುವನು. ಅದರಿಂದಲೂ ಭಗವಂತನಿಗೆ ತೃಪ್ತಿಯಾಗಲಿಲ್ಲ. (ಭಕ್ತಿಯ ಒರೆಗೆ ನಿಂತ ಭಕ್ತರಿಗೆ ಎಷ್ಟು ಕೊಟ್ಟರೂ ಭಗವಂತನಿಗೆ ತೃಪ್ತಿಯೆಂಬುದಲ್ಲ). ಬಲಿರಾಜನ ರಕ್ಷಣೆಗೆ ಶ್ರೀ ಹರಿಯು ಗದಾಧಾರಿಯಾಗಿ ದ್ವಾರಪಾಲಕನ ಕಾರ್ಯ ಮಾಡುವನು. ಬಲಿರಾಜನ ಮಾತುಗಳಿಂದಲೆ ಈ ಭಾವವನ್ನು ವ್ಯಕ್ತಗೊಳಿಸುವರು.

ಬಟುರೂಪಿಯಾದ ವಾಮನಿಗೆ ಮೂರು ಪಾದಗಳ ಪರಿಮಿತಿಯಷ್ಟು ಭೂಮಿಯನ್ನು ಬಲಿರಾಜನು ವಾಗ್ದಾನ ಮಾಡುವನು. ಎರಡು ಪಾದಗಳಲ್ಲಿಯೆ ಭೂಮಿ

ಆಕಾಶಗಳು ತುಂಬಿ ಹೋದವು ಮೂರನೆಯ ಪಾದಕ್ಕೆ ತನ್ನ ತಲೆಯನ್ನೇ ಒಡ್ಡಿ, ದಾನ ಪೂರ್ತಿಮಾಡಬೇಕೆಂದು ಬಲಿರಾಜನು ಬೇಡಿಕೊಳ್ಳುವನು.

**ಅರ್ಥ** :– (ವಾಗ್ದಾನ ಮಾಡಿದಂತೆ ದಾನವನ್ನು ಪೂರ್ತಿ ಗೊಳಿಸದಿದ್ದರೆ ಒದಗುವ) ಇಂದ್ರಪದವಿಯನ್ನು ಕಳೆದುಕೊಂಡು (ನರಕದ ಯಾತನೆಗೂ) ನಾನು ಹೆದರುವದಿಲ್ಲ. (ವಾಮನರೂಪೀ ಶ್ರೀ ಹರಿಯು ಮನಸ್ಸಿನಲ್ಲಿಯ ವಿಚಾರವನ್ನು ತಿಳಿದುಕೊಂಡು ಪಕ್ಷಿರಾಜ ಗರುಡನು ವರುಣ ಪಾಶದಿಂದ ಬಲಿಯನ್ನು ಬಂಧಿಸುವನು). ಪಾಶದಿಂದ ಬಿಗಿಯಲ್ಪಟ್ಟು, ಸಹಿಸಲಾರದ ಅದರ ನೋವಿಗೂ ನಾನು ಸೊಪ್ಪು ಹಾಕುವದಿಲ್ಲ. ರಾಜ್ಯಭಾಂಡಾರವೆಲ್ಲ ಕಳೆದು ಹೋಯಿತೆಂದೂ ನಾನು ಕಳವಳ ಪಡುವದಿಲ್ಲ. (ಭಗವಂತಾ !) ಈಗ್ಗೆ ನೀನು ನನಗೆ ಮಾಡಿದ, ಇಲ್ಲವೆ ಇನು ಮುಂದೆ ಮಾಡಬಹುದಾದ ಶಿಕ್ಷೆಗೂ (ನಿಗ್ರಹಕ್ಕೂ) ನನಗೆ (ಎಳ್ಳಷ್ಟೂ) ಭೀತಿಯಿಲ್ಲ, ಅದರಿಂದ ನನ್ನ ಮನಸ್ಸು ಕಿಂಚಿತ್ತೂ ಖಿನ್ನವಾಗುವದಿಲ್ಲ. (ಹಾಗಾದರೆ ನೀನು ಹೆದರುವದಾದರೂ ಏತಕ್ಕಾಗಿ ? ಎಂದು ಕೇಳಿದರೆ, ತನ್ನ ಅಭಿಪ್ರಾಯವನ್ನು ಬಲಿರಾಜನು ಸೂಚಿಸುವನು). ಆದರೆ ನಾನು ಹೆದರುವದು ಒಂದು ಸಂಗತಿಗೆ ಮಾತ್ರ. ಅದೆಂದರೆ, (ಅಸಾಧುವಾದ) ಕೊಟ್ಟ ಭಾಷೆಗೆ ತಪ್ಪುವದಕ್ಕೆ ಮಾತ್ರ ನಾನು ತುಂಬಾ ಹೆದರುವೆನು; ಉಳಿದ ಯಾವ ನೋವು ನಷ್ಟಗಳಿಗೂ ನಾನು ಭಯಪಡುವದಿಲ್ಲ ಅದೆಂದರೆ, ಮೂರು ಪಾದಗಳಷ್ಟು ಕೊಡುವೆನೆಂದು ಭಾಷೆಕೊಟ್ಟು, ನನ್ನಿಂದ ನಿನಗೆ ಅಷ್ಟು ಕೊಡುವದಾಗಲಿಲ್ಲ. ಇದೊಂದು ಸಂಗತಿಯಿಂದ ನನ್ನ ಮನಸ್ಸು ತುಂಬಾ ಖಿನ್ನವಾಗಿರುವದು, ಎಂಬುದೇ ಬಲಿರಾಜನ ಅಭಿಪ್ರಾಯ.

ಹೀಗೆ ಹೇಳಿರುವರು :– ‘ಕ್ಷೀಣೋವಿಭ್ರಂಸಿತಃ [illegible] .... ತೇ ಭಾವ ಆಸ್ತಃ’ ೮–೨೧–೨೯–೩೦–೩೧–೩೨–೩೩–೩೪,೩೫,೩೬,೩೭–೯ ಭಾಗವತರ ಶ್ಲೋಕಗಳು)

**ಅರ್ಥ** :– ಸತ್ಯಕ್ಕೆ ತಪ್ಪಿದ್ದರಿಂದ ಕ್ಷೀಣ(ನಷ್ಟವಾದ) ಪುಣ್ಯನಾಗಿ ತನ್ನ ಉನ್ನತ ಸ್ಥಾನವನ್ನು ಕಳೆದುಕೊಂಡವನು, ಹಗೆಗಳಿಂದ ಹಗ್ಗದಿಂದ ಬಿಗಿಯಲ್ಪಟ್ಟವನು, ಸ್ವಕೀಯರಿಂದ ತ್ಯಜಿಸಲ್ಪಟ್ಟವನು, (ಶಾರೀರಿಕ ಹಾಗೂ ಮಾನಸಿಕ) ತೀವ್ರವೇದನೆಗೆ ಒಳಗಾದವನು, ಗುರುಗಳಾದ (ಶುಕ್ರಾಚಾರ್ಯರಿಂದ) ಸಿಟ್ಟು ಮಾಡಿಸಿಕೊಂಡವನು, ಗುರುವಿನ ಶಾಪಕ್ಕೂ ತಲೆಯೊಡ್ಡಿದವನು, ಸತ್ಯಭಾಷಣದ ತನ್ನ ವ್ರತವನ್ನು ನಿಷ್ಠೆಯಿಂದ ಪಾಲಿಸುವ ಈ ಮಹಾಪುರುಷನು ಸತ್ಯವನ್ನು ಬಿಡದೆ, ತಾನು ಕೊಟ್ಟ ಭಾಷೆಯನ್ನು ಕೊನೆಯವರೆಗೂ ಪಾಲಿಸಿದನು. ‘ಈ (ಬಲಿರಾಜನ) ಕುಲದಲ್ಲಿ ಯಾವ ಜೀವಿಯೂ ಸತ್ವಹೀನನಾಗಿರಲಿಲ್ಲ, ಕೃಪಣನಾಗಿರಲಿಲ್ಲ’

ಎಂದು ನಾನು ಕಪಟನಿಮಿತ್ತ (ಛಲ) ದಿಂದ ನಾನು ಧರ್ಮದ ಮಾತನ್ನು ಎತ್ತಿದೆನು. ಸತ್ಯನಿಷ್ಠನಾದ ಬಲಿರಾಜನು ಅದನ್ನೇ ಧರ್ಮವೆಂದು ನಂಬಿ, ತನ್ನ ಧರ್ಮವನ್ನು ಬಿಡುವದಿಲ್ಲ. ಒಳ್ಳೇ ಕೀರ್ತಿವಂತನಾಗಿ (ನನ್ನನ್ನೇ ಆಶ್ರಯಿಸಿದವನಾಗಿ) ಸಾವರ್ಣಿ ಮನ್ವಂತರದಲ್ಲಿ ದೇವತೆಗಳಿಗೂ ದೊರಕದ ಮುಂಬರುವ ಇಂದ್ರ ಪದವಿಯನ್ನು ಈತನಿಗೆ ಕೊಡುವೆನು. 'ಇಂದ್ರಸೇನ ಮಹಾರಾಜನೆ (ಬಲಿರಾಜನೆ) ಇತ್ತ ನಿನಗೆ ಸುಮಂಗಳವಾಗಲಿ. ನಿನ್ನ ಬಂಧುಗಳಿಂದ ಕೂಡಿಕೊಂಡು, ದೇವತೆಗಳೂ ಬಯಸುವ ಸುತಲ ಲೋಕಕ್ಕೆ ಪ್ರಯಾಣ ಮಾಡು. ದಿಕ್ಪಾಲಕರೂ ನಿನ್ನನ್ನು ಗೆಲಿಯಲಾರರು, ಉಳಿದವರ ಪಾಡೇನು ? ನಿನ್ನ ಶಾಸನ (ಆಜ್ಞೆ) ವನ್ನು ಮೀರುವ ದೈತ್ಯರನ್ನು ನನ್ನ ಈ ಚಕ್ರಾಯುಧವು ಸಂಹರಿಸುವದು. ಬಾಂಧವರಿಂದ, ಪರಿವಾರದವರಿಂದ, ಐಶ್ವರ್ಯದಿಂದ ಕೂಡಿದ ನಿನ್ನನ್ನು ನಾನು ಸರ್ವತ್ರ ಕಾಪಾಡುವೆನು. ನೀನಿರುವಲ್ಲಿಯೆ ಸರ್ವದಾ ಸನ್ನಿಧನಾಗಿರುವ ನನ್ನನ್ನು ನೀನು ಕಾಣುವೆಯಂತೆ. ದಾನವ ಹಾಗೂ ದೈತ್ಯರ ಸಹವಾಸದಿಂದ ನಿನ್ನಲ್ಲಿ ಉಂಟಾಗಬಹುದಾದ ಆಸುರೀ (ತಾಮಸ) ಭಾವವು ನನ್ನ ಮಹಿಮೆ ಪ್ರಭಾವಗಳಿಂದ ಕೂಡಲೆ ಕಳಚಿ ಹೋಗುವದು.

||೨೩೦|| **ಭ್ರಾತುರ್ವಿರೂಪಕರಣಂ ಯುಧಿ ನಿರ್ಜಿತಸ್ಯ**
**ಪ್ರೋದ್ವಾಹಪರ್ವಣಿ ಚ ತದ್ವಧಮಕ್ಷಗೋಷ್ಠ್ಯಾಂ ।**
**ದುಃಖಂ ತದತ್ಥಮಸಹೋऽಸ್ಮದಯೋಗಭೀತ್ಯಾ**
**ನೈವಾಬ್ರವೀಃ ಕಿಮಪಿ ತೇನ ವಯಂ ಜಿತಾಸ್ತೇ ॥ ೧೦-೬೫-೬೦**

ಕೃಷ್ಣ ರುಕ್ಮಿಣಿ
60-56

ಭಗವಾನ್ ಶ್ರೀ ಕೃಷ್ಣನು (ಶ್ರೀ ಮಹಾಲಕ್ಷ್ಮಿ ಸ್ವರೂಪಳಾದ) ರುಕ್ಮಿಣಿ ದೇವಿಯನ್ನು ಕೂಡ (ನಿಷ್ಠೆಯ ಒರೆಗಲ್ಲಿನಿಂದ) ಪರೀಕ್ಷಿಸಿ ಸಂತುಷ್ಟನಾದ, ನಂತರವೆ ಆವಳ ಮೇಲೆ ಅನುಪಮ (ಯಾರೂ ಸರಿಗಟ್ಟದೆ) ಅನುಗ್ರಹವನ್ನು ದಯಪಾಲಿಸಿದನು. ಹೀಗಿರಲು, ತನ್ನ ಭಕ್ತರನ್ನು ನಿಷ್ಠೆಯ ನಿಕಷದಿಂದ ಪರೀಕ್ಷಿಸಿದ ನಂತರವೆ ಭಗವಂತನು ಅವರ ಮೇಲೆ ಅನುಗ್ರಹ ಮಾಡುವನೆಂದು ಬೇರೆ ಹೇಳಬೇಕಿಲ್ಲ. ಈ ಅಭಿಪ್ರಾಯವನ್ನು ಸೂಚಿಸಲು, ಶ್ರೀ ಕೃಷ್ಣನು ರುಕ್ಮಿಣಿಗೆ (ಅವಳ ಏಕನಿಷ್ಠೆಯನ್ನು ಮೆಚ್ಚಿಕೊಂಡು) ಆಡಿದ ಮಾತುಗಳನ್ನು ಇಲ್ಲಿ ಎತ್ತಿ ತೋರಿಸುವರು.

**ಅರ್ಥ :**– ನಿನ್ನ (ರುಕ್ಮಿಣಿಯ) ಅಣ್ಣನಾದ ರುಕ್ಮಿಯು ಯುದ್ಧದಲ್ಲಿ ಸೋತಿರಲು (ಗಾಯದ ಮೇಲೆ ಬರೆಕೊಟ್ಟಂತೆ) ತಲೆಗೂದಲನ್ನು ಬೋಳಿಸಿ ಆತನ ರೂಪವನ್ನು ಅಂದಗೆಡಿಸಿ ಅವಮಾನಗೊಳಿಸಿದ್ದು, ಇದು ಮಾತ್ರವಲ್ಲದೆ

(ರಣಭೂಮಿಯಲ್ಲಿ ಪ್ರತಿಪಕ್ಷಿಯ ಸಂಹಾರದೋಷವೆನಿಸಲಿಕ್ಕಿಲ್ಲ, ಆದರೆ) ಅನಿರುದ್ಧನ ಮದುವೆಯ ಮಂಗಳ ಕಾರ್ಯದಲ್ಲಿ ನನ್ನ ಅಣ್ಣನಾದ ಬಲರಾಮನು ಲೆತ್ತದಾಟದ ಜಗಳದಲ್ಲಿ ನಿನ್ನ ಅಣ್ಣನನ್ನು ಕೊಂದುಬಿಟ್ಟಿದ್ದು, ನನಗೆ ಮನಃಕ್ಷೋಭೆ (ಮನಸ್ತಾಪ) ವಾಗಬಾರದೆಂದು (ಅಣ್ಣನಾದ ರುಕ್ಮಿಗೆ ನಾವು ಮಾಡಿದ ಅವಮಾನ ಹಾಗೂ ಆತನ ಸಂಹಾರ) ಇವುಗಳಿಂದ ನಿನಗೆ ಉಂಟಾದ (ಅಸಹನೀಯ) ವೇದನೆಯನ್ನು ನೀನು ಪಿಟ್ಟೆನ್ನದೆ ತಾಳಿಕೊಂಡೆ. ನನ್ನಲ್ಲಿಯ ಏಕನಿಷ್ಠೆಯಿಂದ ಇದೆಲ್ಲವನ್ನು ಸಹಿಸಿದೆ. ನಾವು ಮಾಡಿದ ಕೃತಿಗಳು ಹೀನವೆಂಬ ದೂಷಣೆಯ ಒಂದು ಮಾತನ್ನೂ ಕೂಡ ಆಡಲಿಲ್ಲ. ನಿನ್ನ ಸ್ಥಾನದಲ್ಲಿ ಬೇರೊಬ್ಬ ಸ್ತ್ರೀಯು ಇದ್ದರೆ ನನ್ನ ಮನಸ್ಸಿಗೆ ತುಂಬಾ ವ್ಯಥೆಯಾಗುವಂತೆ, ಎದೆ ಎದೆ ಬಡಿದುಕೊಂಡು ನನ್ನ ಬಗ್ಗೆ ನಿಂದೆಯ ಅಪಶಬ್ದಗಳನ್ನು ಆಡುತ್ತ ರಂಭಾಟ ಮಾಡಿಬಿಡುತ್ತಿದ್ದಳು. ನಾವು ನಿನಗೆ ಇಷ್ಟೊಂದು ಅಪಕಾರ (ನಿಂದ್ಯಕೃತ್ಯ) ವನ್ನು ಮಾಡಿದ್ದರೂ, (ನಿನ್ನ ಮೇಲಿನ ನಿಷ್ಠೆ-ಗೌರವಗಳಿಗಾಗಿ) ನಿನ್ನ ಮನಸ್ಸು ಕಿಂಚಿತ್ತೂ ಕ್ಷೋಭೆಗೊಳ್ಳಲಿಲ್ಲ - ನಿನ್ನ ನಿಷ್ಠೆಯಿಂದ ನಮ್ಮನ್ನು ನೀನು ಗೆದ್ದುಬಿಟ್ಟಿರುವೆ (ಪ್ರಭಾವಿತರನ್ನಾಗಿ ಮಾಡಿರುವೆ) ದೃಢ ಭಕ್ತಿಯಿಂದ ನಮ್ಮನ್ನು ಗೆದ್ದ ನಿನಗೆ ಯಾರೂ ಸರಿಗಟ್ಟದಂತಹ ಅನುಪಮವಾದ ಅನುಗ್ರಹವನ್ನು ಮಾಡುವೆವು.

**||೨೩೦|| ಅಹೋ ಬಕೀಯಂ ಸ್ತನಕಾಲಕೂಟಂ**
**ಜಿಘಾಂಸಯಾಽಪಾಯಯದಪ್ಯಸಾಧ್ವೀ ।**
**ಲೇಭೇ ಗತಿಂ ಧಾತ್ರ್ಯುಚಿತಾಂ ತತೋಽನ್ಯಂ**
**ಕಂ ವಾ ದಯಾಲುಂ ಶರಣಂ ವ್ರಜೇಮ** ೩-೨-೨೩

ಪರಂಧಾಮಕ್ಕೆ ತೆರಳಿದ ಭಗವಂತನ ವಿಯೋಗದಿಂದ ಉದ್ಧವನು ಅತೀವ ದುಃಖಿತನಾಗಿರಲು, ವಿದುರನಿಗೆ ಶ್ರೀ ಕೃಷ್ಣ ಮಹಿಮೆಯನ್ನು ಕೊಂಡಾಡುವನು

ತನ್ನನ್ನು ಆರಾಧಿಸಿದ ಸಜ್ಜನರಿಗೆ ಭಗವಂತನು ತನ್ನ ಕರುಣೆಯ ಪರಮಾವಧಿಯನ್ನು ತೋರಿಸಿದನೆಂದು ಹೇಳಬೇಕಾದ ಅಗತ್ಯವೇನು ? ಏಕೆಂದರೆ, ಉನ್ನತ ವಿಷ್ಣುಪಾದದಿಂದ ಹರಿಯುವ ಸುರನದೀ-ಗಂಗೆಯು - ತಗ್ಗಾದ, ಹೀನ ಪ್ರದೇಶಗಳಲ್ಲಿ (ಕೂಡ) ಹರಿಯುವಂತೆ, (ತನ್ನನ್ನು ಘಾತಿಸಲು ಬಂದ) ದುಷ್ಕರ್ಮಿಯೂ, ದುಷ್ಟೆಯೂ ಆದ ಪೂತನಿಗೆ ಕೂಡ ಭಗವಂತನು ಅನುಗ್ರಹವನ್ನು ತೋರಿಸಿದನು.

ಅರ್ಥ :– ( ಬಾಲಕರನ್ನು ಭಕ್ಷಿಸುವವಳು – ಮಾಂಸ ಮುಂತಾದ ದುಷ್ಟ ಆಹಾರದಿಂದ ಜೀವಿಸುವವಳು, ಶಿಶುವಾದ ಶ್ರೀ ಕೃಷ್ಣನನ್ನು ಕೊಲ್ಲಬೇಕೆಂಬ ಉದ್ದೇಶದಿಂದಲೆ ತನ್ನ ಮೊಲೆಗಳಲ್ಲಿ ತುಂಬಿಕೊಂಡು ಬಂದ ಕಾಲಕೂಟವೆಂಬ ಘೋರ ವಿಷವನ್ನು ಆತನಿಗೆ ಕುಡಿಸಿದಳು. (ಆದರೂ) ಮಕ್ಕಳ ಜೋಪಾಸನೆಯನ್ನು ಮಾಡುವ ತಾಯಿಯಾದ ಯಶೋದೆಗೆ ಉಚಿತವಾದ ಸದ್ಗತಿಯನ್ನೇ ಅವಳು ಹೊಂದಿದಳು. ಆದಕಾರಣ, ಭಗವಂತನನ್ನು ಬಿಟ್ಟು ಬೇರೊಬ್ಬ ಯಾವ ಕರುಣಿಗೆ ನಾವು ಶರಣು ಹೋಗೋಣ ? ( ಭಗವಂತನಿಗೆ ಸರಿಸಮನಾದ ಬೇರೊಬ್ಬ ದಯಾಳು ಇಲ್ಲವೆಂತಲೇ ಅರ್ಥ).

ವಿಷ ಕುಡಿಸಲು ಬಂದ ಪೂತನಿಗೆ ಸದ್ಗತಿಯಾಯಿತೆಂದು ಹೇಳುವಲ್ಲಿ ಒಂದು ಮಾತನ್ನು ನೆನಪಿನಲ್ಲಿ ಇಡಬೇಕು. ಅದೆಂದರೆ, ಪೂತನೆಯ ದೇಹದಲ್ಲಿ ರಾಕ್ಷಸಿಯಾದ ತಾಟಕೆ, ಅಪ್ಸರೆಯಾದ ಊರ್ವಶೀ, ಇವೆರಡೂ ಜೀವಿಗಳು ನೆಲೆಸಿದ್ದರು. ಅವರೀರ್ವರ ಆವೇಶವಿತ್ತು, ಅವರಲ್ಲಿ ರಾಕ್ಷಸಿಯಾದ ತಾಟಕಿಗೆ ಅನುಗುಣವಾದ ಅಂಧಃ ತಮಸ್ಸು) ದೇವತಾ ಲೋಕದ ಸ್ತ್ರೀಯಾದ ಅಪ್ಸರೆಗೆ ಅನುಗುಣವಾದ ದಿವ್ಯಗತಿಯು ದೊರಕಿತು. ಎಂಬುದು ಶಾಸ್ತ್ರಪ್ರಮಾಣಕ್ಕೆ ಒಪ್ಪಿತವಾದ ಮಾತು.

ಕಂಸ ಪೂತನಾದಿಗಳು ಎರಡು ಜೀವಿಗಳ ಆವೇಶವುಳ್ಳವರಾಗಿದ್ದರಿಂದ, ಆಯಾ ಜೀವಿಗಳಿಗೆ ಅನುರೂಪವಾದ ಗತಿಯನ್ನು ಪಡೆಯಲು ಬಾಂಧವರಾಗಿ ಬಂದಿದ್ದರು.

॥೨೩೨॥ ಕಃ ಪಂಡಿತಸ್ತ್ವದಪರಂ ಶರಣಂ ಸಮೀಯಾ-
ದ್ಭಕ್ತಪ್ರಿಯಾದೃತಗಿರಃ ಸುಹೃದಃ ಕೃತಜ್ಞಾತ್ ।
ಸರ್ವಾನ್ ದದಾತಿ ಸುಹೃದೋ ಭಜತೋಽಭಿಕಾಮಾ-
ನಾತ್ಮಾನಮಪ್ಯುಪಚಯಾಪಚಯೌ ನ ಯಸ್ಯ ॥

ಅಕ್ರೂರ ಕೃಷ್ಣ ಪ್ರತಿ

೧೦-೪೮-೨೬

48-26

ತಾಯಿ ತಂದೆಯಾಗಿ, ಮೇಲು – ಕೀಳೆಂಬ ಭೇಧಭಾವವಿಲ್ಲದ, ಹಾಗೂ ಅಪಾರ ಕರುಣೆಯುಳ್ಳ ಶ್ರೀ ಹರಿಯಲ್ಲಿ ನಿರತಿಶಯವಾದ ಭಕ್ತಿಯನ್ನು ಮಾಡಬೇಕು, ಎಂಬ ಅಭಿಪ್ರಾಯದಿಂದ, ಈ ಕೃತಿಯಲ್ಲಿ ಆದರ–ಆಸಕ್ತಿಯನ್ನು ಹುಟ್ಟಿಸಲು ಸರ್ವೋತ್ತಮನಾದ ಶ್ರೀ ಹರಿಯನ್ನು ಬಿಟ್ಟು ಬೇರೆ ಕಡೆಯಲ್ಲಿ ಮಾಡುವ ಭಕ್ತಿಯೆಂದರೆ, ಗಂಗಾನದಿಯ ತೀರದ ಉಸುಕಿನಲ್ಲಿ ಬಾವಿಯನ್ನು ತೋಡುವ ಮೂರ್ಖ

ತನವಾಗುವದೆಂಬುದನ್ನು ಇಲ್ಲಿ ಹೇಳಿಕೊಡುವರು :- ಸರ್ವರಿಗೂ ಶ್ರೀ ಕೃಷ್ಣನೇ ಗತಿಯೆಂದು ಅಕ್ರೂರನು ಮಾಡಿದ ಶ್ರೀ ಕೃಷ್ಣನ ಸ್ತುತಿ ಇದು.

ಅರ್ಥ :- ಪ್ರೀತಿಪಾತ್ರರಾಗಿ ನಿನ್ನನ್ನು ಆರಾಧಿಸುವ ಭಕ್ತರಿಗೆ, ಭಕ್ತರಪ್ರೀತಿ ಯುತ ಮಾತುಗಳನ್ನು ಮೆಚ್ಚಿ ಅವರಿಗೆ ಕೃಪೆ ಮಾಡುವ ಹಾಗೂ ಅವರವರ ಭಕ್ತಿಗೆ ಅನುಗುಣವಾಗಿ ಕೃಪೆ ಮಾಡುವ (ಹೇ ಕೃಷ್ಣಾ !) ನೀನು ಅವರಿಗೆ ತಂದೆ ತಾಯಿಗಳಾಗಿ ನಿನ್ನನ್ನೇ ಕೊಟ್ಟು ಬಿಡುವೆ, ಸಾಯುಜ್ಯರೂಪವಾದ ಮೋಕ್ಷವನ್ನೇ ಕೊಟ್ಟುಬಿಡುವೆ. ಹೀಗಿರಲು ಅವರ ಸಕಲ ಅಪೇಕ್ಷೆಗಳನ್ನು ಪೂರೈಸುವೆಯೆಂಬು ದರಲ್ಲಿ ಏನು ಆಶ್ಚರ್ಯ ? ಈ ರೀತಿಯಾಗಿ ಸಕಲಭಕ್ತರಿಗೆ ಸಕಲ ವಸ್ತುಗಳನ್ನು ಸರ್ವಸ್ವವನ್ನು ನೀನು ಕೊಟ್ಟರೂ, ನಿರುಪಮವಾದ ನಿನ್ನ ಸ್ವಾಭಾವಿಕ ಐಶ್ವರ್ಯ ದಲ್ಲಿ ವೃದ್ಧಿ-ಹ್ರಾಸಗಳೆಂಬ ವ್ಯತ್ಯಾಸಗಳೆಂದಿಗೂ ಆಗುವದಿಲ್ಲ. ಈ ಬಗೆಯ ಗುಣಗಳುಳ್ಳ ನಿನ್ನನ್ನಲ್ಲದೆ ಬೇರೆ ಯಾರನ್ನು ವಿವೇಕಿಯಾದವನು ಮೊರೆ ಹೋಗುವನು ?

ಇಲ್ಲಿ 'ಸುಹೃದ್' ಶಬ್ದವು ತಂದೆತಾಯಿಗಳಿಗೂ ಲಾಕ್ಷಣಿಕವಾಗಿದೆ. ಭಕ್ತ ಪ್ರಿಯಾ ದೃತಗಿರಃ' ಎಂಬಲ್ಲಿ 'ಭಕ್ತಪ್ರಿಯಾತ್, ಯತಗಿರಃ' ಎಂದ ಪದಚ್ಛೇದವು ಅಥವಾ ಒಂದೇ ಶಬ್ದವಾಗಬಹುದು. ಭಕ್ತರು ಯಾರಿಗೆ ಪ್ರೀತಿಸುವರು,-ಅಥವಾ ಭಕ್ತರಿಗೆ ಪ್ರಿಯನಾದವನು, ಎಂತಲೂ ಅರ್ಥ. 'ಋತಾಃ ಸತ್ಯಾಃ ಗೀಃಯಸ್ಯ' ಯಾರ ವಚನವು ನಿತ್ಯ ಸತ್ಯವಾದುದು, ಎಂಬ ಅರ್ಥ.

ಭಕ್ತಿಗೆ ಪಾತ್ರನಾದ ಪುರುಷನಲ್ಲಿ ಭಕ್ತನಾದವನು ಮೂರು ಗುಣಗಳನ್ನು ಅಪೇಕ್ಷಿಸುವನು ;- [೧] ತಂದೆತಾಯಿಗಳ (ಅನಿಮಿತ್ತ) ಬಂಧುತ್ವ, [೨] ಸ್ವ-ಪರ ಭೇದವಿಲ್ಲದ ಸಮದೃಷ್ಟಿ(ಪಕ್ಷಪಾತವಿಲ್ಲದಿರುವದು); [೩] ಅಪಾರ ಕರುಣೆ-ಭಗವಂತ ನಲ್ಲಿ ಈ ಮೂರೂ ಗುಣಧರ್ಮಗಳಿರುವವು.

॥೨೩೩॥ ಯತ್ಸಾನುಬಂಧೇಽಸತಿ ದೇಹಗೇಹೇ
ಮಮಾಹಮಿತ್ಯೂಢದುರಾಗ್ರಹಾಣಾಂ ।
ಪುಂಸಾಂ ಸುದೂರಂ ವಸತೋಽಪಿ ಪುರ್ಯಾಂ
ಭಜೇಮ ತತ್ತೇ ಭಗವನ್ಪದಾಬ್ಜಂ ॥ ೩-೬-೨೨

ಮೈತ್ರೇಯರು ವಿದುರಗೆ 5-43

ಭಗವಂತನ ಮಹಿಮಾತಿಶಯವನ್ನು ವಿವರವಾಗಿ ಕೇಳಬಯಸುವ ವಿದುರ ನಿಗೆ ಮೈತ್ರೇಯರು ಹೇಳುತ್ತಾರೆ.

ಭಕ್ತಿಗೆ ಪಾತ್ರನಾಗಿರುವ ಆರಾಧ್ಯದೈವತದಲ್ಲಿ (೧) ತಂದೆಯ ಅನಿಮಿತ್ತ ವಾತ್ಸಲ್ಯ, (೨) ಸರ್ವರಲ್ಲಿ ಸಮದೃಷ್ಟಿರೂಪವಾದ - ಪಕ್ಷಪಾತವಿಲ್ಲದಿರುವಿಕೆ, (೩) ಅಪಾರ ಕರುಣೆ. ಇವುಗಳಲ್ಲಿ ಒಂದನೆಯದಾದ 'ಪಿತೃತ್ವ'ವು ಪರಮಾತ್ಮನಿಗೆ ಹೇಗೆ ಹೊಂದುಕೊಳ್ಳುವದು ? ಇದು ನಮಗೆ ತಿಳಿಯದು. ಎಂದರೆ, ಅದನ್ನು ಸ್ಪಷ್ಟಗೊಳಿಸಲೋಸುಗ ಇಲ್ಲಿ ಹೇಳುವರು. ಆತ್ಮಜ್ಞಾನದ ಬಗ್ಗೆ, ಪರಮಾತ್ಮನ ಬಗ್ಗೆ ತಿಳಿದುಕೊಳ್ಳಬೇಕೆಂಬ ಮನಸ್ಸಿನ ಒಲವು ಎಲ್ಲರಲ್ಲಿಯೂ ಇರುವದಿಲ್ಲ. ಶ್ರೀ ಹರಿಯ ವಿಶೇಷ ಅನುಗ್ರಹ ಪಡೆದರೆ ಮಾತ್ರ, ಆ ಒಲವು, ಮನಸ್ಸು ಅತ್ತಕಡೆಗೆ ಹರಿಯುವದು. ಸುಲಭವಾಗಿ ದೊರೆಯುವದು. ಆದುದರಿಂದ, ಆತ್ಮಜ್ಞಾನದ ಲವಲವಿಕೆಯನ್ನು ಮೊದಲು ಪ್ರಶಂಸಿಸುವರು, ಅದು ಅಪರೂಪವಾದುದೆಂದು ಕೊಂಡಾಡುವರು.

**ಅರ್ಥ** :- ಹೇ ಭಗವಂತಾ ! ಮನೆಮಾರು ಮಡದಿ ಮಕ್ಕಳೆಲ್ಲ 'ನನ್ನವರು' ಎಂಬ ಮಮಕಾರದಿಂದ ಅಂಟಿಕೊಂಡಿರುವ ಈ ಅಮಂಗಳವಾದ ದೇಹವೇ'ನಾನು' ಎಂಬ ದುರಭಿಮಾನದಿಂದ ಕೂಡಿದ ಮಾನವರಿಗೆ, (ಹೇ ಭಗವಂತಾ) ನೀನು ನಿಯಾಮಕನಾಗಿ, ಅಂತರ್ಯಾಮಿಯಾಗಿ, ಅವರ ದೇಹ (ಅಂತರಂಗ) ದಲ್ಲಿ ಸ್ಥಿರವಾಗಿ ನೆಲಿಸಿದ್ದರೂ, (ನಾನು-ನನ್ನದೆಂಬ ದುರಭಿಮಾನದಿಂದ ಪೀಡಿತರಾದ) ಅಂಥ ಜನರಿಗೆ ನಿನ್ನ ಪಾದಕಮಲಗಳ ಆಸರವು ದೊರೆಯದು, ನಿನ್ನ ಬಗ್ಗೆ ತಿಳಿದುಕೊಳ್ಳಬೇಕೆಂಬ ಲವಲವಿಕೆಯು ಅವರಲ್ಲಿ ಎಂದಿಗೂ ಕಾಣಬರದು. ಈ ಬಗೆಯ ಮಹಿಮೆಯುಳ್ಳ ನಿನ್ನ ಪಾದಕಮಲವನ್ನು ನಾವು ಆಶ್ರಯಿಸುವೆವು.

**॥೨೩॥ ಭೂತೈರ್ಮಹದ್ಭಿರ್ಯ ಇಮಾಃ ಪುರೋ ವಿಭುರ್-**
**ನಿರ್ಮಾಯ ಶೇತೇ ಯದಮೂಷು ಪೂರುಷಃ ॥**
**ಭುಂಕ್ತೇ ಗುಣಾನ್ ಷೋಡಶಷೋಡಶಾತ್ಮಕಃ**
**ಸೋSಲಂ ಕೃಷೀಷ್ಟ ಭಗವಾನ್ ವಚಾಂಸಿ ಮೇ ॥** ೨-೪-೨೩

ಪ್ರಾರ್ಥನಾ

ಭಗವಂತನ ಪಿತೃತ್ವವು (ತಂದೆಯೆಂಬ ಭಾವನೆಯು) ಅನುಭವದಿಂದ ನಮಗೆ ತಿಳಿದು ಬರುವದಿಲ್ಲ ಎಂದು ಹೇಳುವವರಿಗೆ ಒಂದು ಪ್ರಶ್ನೆಯನ್ನು ಕೇಳಬೇಕು. 'ದೇವದತ್ತನು (ನಿಮ್ಮ) ತಂದೆಯಾಗಿರುವನು, ಎಂದು ಹೇಗೆ ಹೇಳುವಿರಿ ?' ಈ ಪ್ರಶ್ನೆಗೆ ಆತನು ಕೊಡುವ ಉತ್ತರವಿದು. 'ನನ್ನ ದೇಹವು ದೇವದತ್ತನಿಂದ ಹುಟ್ಟಿಬಂದ್ದುದು. ದೇಹವನ್ನು ಹುಟ್ಟಿಸುವವನೇ 'ತಂದೆ-ಪಿತಾ' ಎನಿಸುವನು. ಮಗುವಿನ ದೇಹಕ್ಕೆ ತಂದೆಯೆ ಜನಕನಾಗಿರುವದು ಸ್ವಾನುಭವ

ದಿಂದ ತಿಳಿಯುವ ಮಾತು. ಎಂದು ವಾದಿಸಿದರೆ, 'ನಮಗೆ ದೇಹಾದಿಗಳನ್ನು ಕೊಡುವ ಭಗವಂತನೂ ಇದೇ ರೀತಿಯಲ್ಲಿಯೆ ನಮಗೆಲ್ಲರಿಗೂ ತಂದೆಯಾಗಿರುವ ನೆಂದು ವಿವೇಕಿಯಾದವನು ತಿಳಿದುಕೊಳ್ಳಬೇಕು, ಭಗವಂತನ ಪಿತೃತ್ವವನ್ನೂ ಅನುಭವಕ್ಕೆ ತಂದುಕೊಳ್ಳಬೇಕು. ಇದೇ ಅಭಿಪ್ರಾಯವು ಈ ಶ್ಲೋಕದಲ್ಲಿ ಕಂಡು ಬರುವದು. ಶ್ರೀ ಶುಕರು ಬ್ರಹ್ಮನಾರದರ ಸಂವಾದದಲ್ಲಿ ಪರೀಕ್ಷಿತನಿಗೆ ಭಗ ವಂತನ ಮಹಿಮೆಗಳನ್ನು ಬಣ್ಣಿಸುತ್ತ ಆತನಿಗೆ ವಂದಿಸುವರು.

**ಅರ್ಥ** :- ಸರ್ವಶಕ್ತನಾದ ಭಗವಂತನು ಪೃಥ್ವಿಯೇ ಮುಂತಾದ ಐದು ಮಹಾಭೂತಗಳಿಂದ ( ಜೀವಿಗಳ ) ದೇಹಗಳನ್ನು ಸೃಜಿಸುವನು, ಅವುಗಳಲ್ಲಿಯೇ (ಸ್ವಾಮಿಯಾಗಿ) ನೆಲೆಸಿರುವನು. ಅಂತೆಯೆ ಅವನಿಗೆ (ಪುರಃ-ದೇಹಗಳು, ಅವು ಗಳಲ್ಲಿ ನೆಲಿಸಿದವನು) 'ಪುರುಷ'ನೆಂಬ ಹೆಸರು. (ಈ ಶರೀರದಲ್ಲಿಯ ಹದಿನಾರು ತತ್ವಗಳು ಪರಮಾತ್ಮನ ನೆಲೆಗಳು - ಅಧಿಷ್ಠಾನಗಳು - ಈ ತತ್ವಗಳು ಹೀಗಿವೆ :- [೧] ಕಣ್ಣು, ಕಿವಿ, ನಾಲಿಗೆ, ಮೂಗು, ಚರ್ಮ ( ಸ್ಪರ್ಶ ) ಇವು ಐದು ಶ್ರೋತ್ರಾದಿ ತತ್ವಗಳು. [೨] ಬಾಯಿ ( ವಾಕ್ ), ಕೈ, ಕಾಲು, ವಾಯು (ಗುದದ್ವಾರ), ಉಪಸ್ಥ (ಜನನೇಂದ್ರಿಯ)-ಇವು ಐದು ವಾಗಾದಿ ಇಂದ್ರಿಯಗಳು [ ] ಮನಸ್ಸು, ಬುದ್ಧಿ, ಅಹಂಕಾರ, ಚಿತ್ತ ಮತ್ತು ಚೇತನ - ಇವು ಐದು ಮನಾದಿ ಇಂದ್ರಿಯಗಳು. ಈ ಹದಿನೈದರ ಜೊತೆಗೆ ಬುದ್ಧಿ ( ನಿಶ್ಚಯ ಶಕ್ತಿ ) ಯೆಂಬುದು ಹದಿನಾರನೆಯದು. ಇವೆಲ್ಲ ಹದಿನಾರು ಅಧಿಷ್ಠಾನಗಳಿಗೆ ನಿಯಾ ಮಕನಾಗಿ, ಸರ್ವತಂತ್ರ ಸ್ವತಂತ್ರನಾಗಿ, ಅವುಗಳಿಗೆ ಅವುಗಳ ಕಾರ್ಯಶಕ್ತಿ ಯನ್ನು ಕೊಡುವವನಾಗಿ ಪರಮಾತ್ಮನು ಹದಿನಾರು ರೂಪಗಳಿಂದ ನೆಲೆಸಿರುವನು, ಹಾಗೂ ಹದಿನಾರು ಬಗೆಯ ವಿಷಯಗಳನ್ನು (ಅವುಗಳ ಸೋಂಕು ಕೂಡ ತಟ್ಟದೆ ನಿರ್ಲೇಪನಾಗಿ) ತನಗೆ ಯಾವ ಪ್ರಯೋಜನವಿಲ್ಲದಿದ್ದರೂ, ತಾನು ಅನುಭವಿಸಿ ಜೀವನ ಅನುಭವಕ್ಕೆ ತಂದು ಕೊಡುತ್ತಾನೆ. ಈ ಬಗೆಯ ಮಹಿಮಾಶಾಲಿಯಾದ ಭಗವಂತನು ನನ್ನ ಮಾತುಗಳಿಗೆ ಭೂಷಣನಾಗಿ ನೆಲಿಸಲಿ, ಭಗವಂತನ ಭಕ್ತರಿಗೆ ನನ್ನ ನುಡಿಗಳು ಭಗವಂತನ ಬಗ್ಗೆ ಪ್ರೀತಿಯನ್ನು ಹುಟ್ಟಿಸುವಂತಾಗಲಿ.

ಜೀವಿಗಳೆಲ್ಲರ ಶರೀರಗಳನ್ನು ಭಗವಂತನೇ ಮುಖ್ಯತಃ ನಿರ್ಮಿಸುವವನಾದ್ದ ರಿಂದ, ಆತನೇ ಮುಖ್ಯ (ನಿರುಪ ಚರಿತ) ತಂದೆ, ಲೌಕಿಕ ತಂದೆ ನಿಮಿತ್ತಮಾತ್ರಕ್ಕೆ ಔಪಚಾರಿಕ ತಂದೆ, ಕಾರಣಾಂತರದಿಂದ ಅವನಿಗೆ ತಂದೆಯೆಂದು ಕರೆಯಬೇಕಷ್ಟೆ'

ಸಹಸ್ರನಾಮಗಳಲ್ಲಿ ಬರುವ - 'ವಿಶ್ವಭಾವನ'-ವೆಂಬ ನಾಮದ ಅರ್ಥವು ಇಲ್ಲಿ ವ್ಯಕ್ತವಾಗಿದೆ.

ಹದಿನಾರು ಗುಣಗಳು–ಇಂದ್ರಿಯಗಳಿಗೆ ಸಂಬಂಧಿಸಿದ ವಿಷಯಗಳು. ಅವೆಂದರೆ ಕಿವಿಗೆ ಶಬ್ದ, ಕಣ್ಣಿಗೆ ರೂಪ, ನಾಲಿಗೆಗೆ ರಸ, ಮೂಗಿಗೆ ಗಂಧ, ಚರ್ಮಕ್ಕೆ ಸ್ಪರ್ಶ ಇದೇ ಮೇರೆಗೆ, ವಾಗಾದಿ ಹಾಗೂ ಮನಾದಿ ಇಂದ್ರಿಯಗಳಿಗೆ ಆದಾನ, (ಸ್ವೀಕರಿಸುವದು, ಗಮನ (ನಡಿಗೆ), ಮಾತನಾಡುವದು (ವಚನ), ಬಿಟ್ಟುಕೊಡುವದು (ವಿಸರ್ಜನ) ಹಾಗೂ ರತಿ, ಸಂಕಲ್ಪ–ವಿಕಲ್ಪ, ನಿಶ್ಚಯ, 'ಅಹಂ'–ಎಂಬ ಭಾವನೆ, ಸ್ಮರಣ, ವಿಜ್ಞಾನ, ಬುದ್ಧಿ ( ಸಾರಾಸಾರ ವಿಚಾರ, ವಿವೇಕ ) ಇವು ಉಳಿದ ವಿಷಯಗಳು.

ಇಲ್ಲದಿರುವದನ್ನು ಇದೆಯೆಂದು ತಿಳಿದುಕೊಳ್ಳುವದು–'ಅಹಂಕಾರ, ನೆನಪಿಗೆ ಸಾಧನವಾದುದು 'ಚಿತ್'. ಚೇತಸ್ಸಿನ ವ್ಯಾಪ್ತಿಯೆ 'ಚೇತನಾ', ಅಥವಾ ವಿಪುಲವಾದ ಸ್ಮರಣ ಶಕ್ತಿಯು 'ಚೇತನಾ'. ತೈಜಸದಿಂದ ಉತ್ಪನ್ನವಾದ ಬುದ್ಧಿ ತತ್ವವೇ 'ಬುದ್ಧಿ'ಯು. ಶ್ರೋತ್ರಾದಿ ( ಕಿವಿ ಮುಂತಾದ ) ಇಂದ್ರಿಯಗಳಿಗೆ ಬುದ್ಧಿಯ ಅನುಗ್ರಹ (ಸಹಕಾರ) ದಿಂದಲೆ ಜ್ಞಾನವನ್ನು ಹುಟ್ಟಿಸುವ ಶಕ್ತಿಯು ಉಂಟಾಗುವದು

||೨೩೫|| ಸೃಷ್ಟ್ವಂ ಸ್ವಶಕ್ತ್ಯೇದಮನುಪ್ರವಿಶ್ಯ — ರುದ್ರದೇವ
ಚತುರ್ವಿಧಂ ಪುರಮಾತ್ಮಾಂಶಕೇನ | — ಪ್ರಾಚೇತಸರ
ಅಥೋ ವಿದುಸ್ತ್ವಾಂ ಪುರುಷಂ ಸಂತಮತ್ರ
ಭುಂಕ್ತೇ ಹೃಷೀಕೈರ್ಮಧು ಸಾರಘಂ ಯತಃ || ೪-೨೪-೬೫

ಪ್ರಾಚೇತರಿಗೆ ಶ್ರೀ ರುದ್ರದೇವರು ಉಪದೇಶಮಾಡಿದ 'ರುದ್ರಗೀತೆ'ಯಲ್ಲಿರುವ ಶ್ರೀನಾರಾಯಣನ ಸ್ತುತಿ ಇದು.

ಭಗವಂತನು ಈ ಶರೀರದಲ್ಲಿ ನಿಂತುಕೊಂಡು, ಇಂದ್ರಿಯಗಳನ್ನು ತನ್ನ ಅಧಿಷ್ಠಾನಗಳನ್ನಾಗಿ ಮಾಡಿಕೊಂಡು, ವಿಷಯಭೋಗದ ದಾರಿಯಲ್ಲಿ ಸಾಗುತ್ತಿರಲು ಆ ದಾರಿಯಲ್ಲಿ ಏರು ಇಳಿತ–ತಗ್ಗುದಿನ್ನೆಗಳು ಇರುವವು. ( ವಿಷಯ ಭೋಗದ ದಾರಿಯು ಸಮ ನೆಲವಾಮದಲ್ಲ ) ವಿಷಯ ಭೋಗದಲ್ಲಿ ಆತನು ಕಾಲುಜಾರಿ ಬೀಳಬಹುದಾದ ಪ್ರಸಂಗಗಳು ಬರಬಹುದು. (ಭಗವಂತನು ಹಾಗೆಂದಿಗೂ ಮಾಡಲಾರನು, ಎಂಬುದನ್ನು ತೋರಿಸುವರು).

**ಅರ್ಥ ;–** (ಅನ್ಯರಸಹಾಯದ ಆಗತ್ಯವಿಲ್ಲದ) ನಿನ್ನ ಸ್ವರೂಪ ಭೂತವಾದ (ಅಂಶಃ )ಶಕ್ತಿಯಿಂದಲೆ (ಉದ್ಭಿಜ, ಜರಾಯುಜ, ಸ್ವೇದಜ ಹಾಗೂ ಅಂಡಜಗಳೆಂಬ ನಾಲ್ಕು ಬಗೆಯ) ಈ ದೇಹವನ್ನು ನಿರ್ಮಿಸಿ, (ಆನಂದೋದ್ರೇಕದ ನಿನ್ನ

ಲೀಲೆಗಾಗಿ) ಸ್ವರೂಪಭೂತಗಳಾದ ಬಿಂಬಗಳಿಂದ ಆ ದೇಹದಲ್ಲಿ ಪ್ರವೇಶಿಸಿ ಆ ದೇಹದಲ್ಲಿ ನೀನು ( ಬಿಂಬರೂಪನಾಗಿ, ಅಂತರ್ನಿಯಾಮಕನಾಗಿ ) ನೆಲಿಸಿದವನು. ಹೀಗೆ ಮಾಡಿರುವದರಿಂದಲೆ, 'ಪುರುಷ' (ದೇಹದಲ್ಲಿ ನೆಲಿಸಿದವನು) ಎಂಬ ಹೆಸರಿನಿಂದ ನೀನು ಕರೆಯಲ್ಪಡುವೆ. (ಜೀವಿಗಳ) ದೇಹದಲ್ಲಿ ಶ್ರೀ ದೇವಿಯಿಂದ ಸಹಿತವಾಗಿ ನಿಂತುಕೊಂಡು, ನಿನ್ನದೇ ಆದ ಅಂಶರೂಪಗಳಿಂದ ನಿಯಂತ್ರಿತವಾಗಿರುವ ಇಂದ್ರಿಯಗಳಿಂದ, ( ನಿರಪೇಕ್ಷನೂ, ಆನಂದ ಸ್ವರೂಪನೂ ಆಗಿರುವ ) ನೀನು ವಿಷಯಗಳನ್ನು ಜೀವೇಂದ್ರಿಯಗಳಿಂದ ಭೋಗಿಸುವೆ. ನೀನು ಉಪಭೋಗಿಸುವದು ಉಳಿದವರು ಉಪಭೋಗಿಸುವ ಸಾಮಾನ್ಯವಸ್ತುವಾಗಿಲ್ಲ: ಅದು ಕೇವಲ (ದುಃಖವು ಕಿಂಚಿತ್ತೂ ಬೆರೆಯದ) ಸುಖ (ಮಧು) ಸ್ವರೂಪವಾದುದು. ಉಪಭೋಗಿಸುವದಾದರೂ ನಿನ್ನಸ್ವ-ಸಾಮರ್ಥ್ಯದಿಂದಲೇ. ವಸ್ತುವಿನಲ್ಲಿಯ ಸಾರಭೂತವಾದುದನ್ನು (ದೋಷರಹಿತವಾಗಿ ಅತ್ಯುತ್ಕೃಷ್ಟವಾದುದನ್ನು) ಮಾತ್ರ ನೀನು ತೆಗೆದುಕೊಳ್ಳುವಿ.

ಒಟ್ಟಾರೆ ಅಭಿಪ್ರಾಯವಿದು :- ಅಗತಿಕನಾದ, ಅಸ್ವತಂತ್ರನಾದ ಲೋಭಿಯೊಬ್ಬನು ದೈವ ಕೃಪೆಯಿಂದಲೊ, ಇನ್ನೊಬ್ಬರ ಕೃಪೆಯಿಂದಲೊ (ತನ್ನದಲ್ಲದ) ಮತ್ತೊಬ್ಬರ ರಥದಲ್ಲಿ ಕೂಡಿಸಲ್ಪಡುವನು. ಬೇರೊಬ್ಬರು ಕೊಟ್ಟ ರಥದಲ್ಲಿ ಕುಳಿತ ಅವರೇ ಕೊಟ್ಟ ಸಾರಥಿ ಹಾಗೂ ಕುದುರೆಗಳಿಂದ ಸಮಭೂಮಿಯಿಲ್ಲದ ದಾರಿಯಲ್ಲಿ ಸಾಗುವಾಗ್ಗೆ, ದಾರಿಯ ಏರಿಳಿತಗಳಿಂದ ಒದಗುವ ನೋವು ನಲಿವುಗಳನ್ನು (ಪರಾಧೀನನಾಗಿ) ಆತನು ಅನುಭವಿಸಬೇಕಾಗುವದು. ಆದರೆ ತನ್ನ ರಥವನ್ನು ಸ್ವಯಂ ತಾನೇ ಇಲ್ಲವೆ ಬೇರೊಬ್ಬರಿಂದ (ಅಧಿಕಾರದಿಂದ) (ತನ್ನ ಅಪೇಕ್ಷೆಯಂತೆ) ನಿರ್ಮಿಸಿಕೊಂಡು, ತನ್ನ ಅಂಕೆಯಲ್ಲಿಯೆ ಇರುವ ಸಾರಥಿ ಹಾಗೂ ಕುದುರೆಗಳಿಂದ, ತನಗೆ ಮನಬಂದಂತೆ ಸಾಗಬೇಕಾದ ಮಾರ್ಗವಿರಲು, ಬಲಿಷ್ಠನೂ (ಸ್ವತಂತ್ರನೂ) ಆಗಿರುವ ವಿವೇಕಿಯಾದ ಯಾವ ವ್ಯಕ್ತಿಯು ಸಮಭೂಮಿಯ ದಾರಿಯನ್ನು ಬಿಟ್ಟುಕೊಟ್ಟು, ತೆಗ್ಗುದಿನ್ನೆಗಳಿಂದ ದಾರಿಯು ದುರ್ಗಮವಾಗಿದೆಯೆಂಬುದನ್ನು ತಿಳಿದೂ ತಿಳಿದೂ ಆ ದಾರಿಯಿಂದ ಸಾಗುವನು ? ಏರಿಳಿತಗಳ ಪರಿವೆ ಇರುವದರಿಂದ, ಒಂದು ವೇಳೆ ಅಂಥ ದಾರಿಯಿಂದ ಸಾಗಿದರೂ, ಜಾರಿ ಬೀಳುವ ಆತಂಕಕ್ಕೆ ಆತನು ಎಂದೂ ಒಳಗಾಗುವದಿಲ್ಲ.

॥೨೩೬॥ ಸ ವಾ ಇದಂ ವಿಶ್ವಮಮೋಘಲೀಲಃ
ಸೃಜತ್ಯವತ್ಯತ್ತಿ ನ ಸಜ್ಜತೇಽಸ್ಮಿನ್ ।

ಸೊಪಮ
ಶನಕಾದಿಗಳಿಗೆ

**ಭೂತೇಷು ಚಾಂತರ್ಹಿತಆತ್ಮತಂತ್ರಃ**

**ಷಾಡ್ವರ್ಗಿಕಂ ಜಿಘ್ರತಿ ಷಡ್ಗುಣೇಶಃ ॥ ೧೩-೩೪**

ಇಲ್ಲಿ ಹೀಗೆ ಆಕ್ಷೇಪಿಸಬಹುದು :-(ಮಹಾಭೂತಾದಿಗಳಿಂದ) ತನ್ನ ಸ್ವ
ಭೂತವಾದ ಶಕ್ತಿಯಿಂದಲೆ (ಜೀವಿಗಳ) ಶರೀರವನ್ನು ಸೃಷ್ಟಿಸುವನು, ಆ ಶ
ವನ್ನು (ಬಿಂಬರೂಪವಾದ) ತನ್ನ ಶರೀರಕ್ಕೆ ಅಧಿಷ್ಠಾನ (ನೆಲೆಯನ್ನಾಗಿ) ಮ
ಮಾಡಿಕೊಳ್ಳುವನು, ತನ್ನ (ಅಂಶ ರೂಪವಾದ) ಇಂದ್ರಿಯಗಳಿಂದಲೆ ಜೀ
ಇಂದ್ರಿಯಗಳನ್ನು (ನಿಯಾಮಕನಾಗಿ) ವ್ಯಾಪಿಸಿ, ಆ ಜೀವೇಂದ್ರಿಯಗಳಿಂದ ತ
ಸ್ವರೂಪ ಭೂತವಾದ ಭೋಗ್ಯವಿಷಯಗಳಲ್ಲಿ ಅತ್ಯುತ್ಕೃಷ್ಟವಾದುದನ್ನು ವ
ಭೋಗಿಸುವ ಭಗವಂತನ ಕೃತಿಯು ಹೇಗಿರುವದೆಂದರೆ, ತಮ್ಮ ಮನೆಯ
ಊಟದ ಪದಾರ್ಥಗಳನ್ನು ಇನ್ನೊಬ್ಬರ ಮನೆಗೆ ತೆಗೆದುಕೊಂಡು ಹೋಗಿ
ಊಟಮಾಡುವ ಬಾಲಕರ ಕೃತಿಯನ್ನು ಹೋಲುವದು. ಎಂಬ ಆಕ್ಷೇ
ಉತ್ತರವಿದು. 'ನಿಮ್ಮ ಮಾತು ದಿಟವಾಗಿದೆ. ಹೀಗಿದ್ದರೂ ಭಗವಂತನ
ಯೋಪಭೋಗದಲ್ಲಿ ಕಿಂಚಿತ್ತೂ ಸ್ವಾರ್ಥವಿಲ್ಲ, ಸ್ವಂತದ ಪ್ರಯೋಜನವಿಲ್ಲ. ಭ
ಸುವದೇಕೆಂದರೆ, ಸ್ವಕೀಯ ಆನಂದವು (ಹಾಲಿನಂತೆ) ಉಕ್ಕೇರಿದಾಗ, ಭಗವ
ಭೋಗವು ಒಂದು ಲೀಲೆಯಾಗಿದೆ, ಮಕ್ಕಳ ಆಟದಂತೆ ಕ್ರೀಡೆಯಾಗಿದೆ.
ಜೀವಿಗಳಿಗೆ ಯಥಾಯೋಗ್ಯವಾದ ತ್ರಿವಿಧ ಗತಿಗಳನ್ನು ದಯಪಾಲಿಸುವದಕ
ಸೃಷ್ಟಿ ಮುಂತಾದ ಪರೋಪಕಾರಿ ಕಾರ್ಯಗಳನ್ನು ಸ್ವಪ್ರಯೋಜನವಿಲ್ಲದೆ ಮ
ವಲ್ಲಿ, ಭಗವಂತನು ತನ್ನ ಅಪಾರ ಕರುಣೆಯನ್ನು ತೋರಿಸುವನು. 'ಬ್ರ
ಪದೇಶ ಪ್ರಕರಣ' ದಲ್ಲಿ ಈ ಮಾತನ್ನು ಹೀಗೆ ಹೇಳಿದೆ.

ಸೂತರು ಭಗವಂತನ ಮಹಿಮಾತಿಶಯವನ್ನು ಇಲ್ಲಿ ಹೇಳಿರುವರು.

**ಅರ್ಥ** :- ಸರ್ವಶಕ್ತನಾದ ಭಗವಂತನು ಸಮಗ್ರವಾದ ಜಗ
ಸೃಷ್ಟಿಸುವನು, ( ಅನ್ನಾದಿಗಳನ್ನು ಕೊಟ್ಟು ) ರಕ್ಷಿಸುವನು ( ಪಕ್ವಕಾ
ನಾಶಗೊಳಿಸುವನು. ( ಪೃಥ್ವೀ ಮುಂತಾದ ಪಂಚಮಹಾಭೂತಗ
ನಿರ್ಮಿತವಾದ ) ಶರೀರಗಳಲ್ಲಿ ( ಬಿಂಬರೂಪಕನಾಗಿ, ಅಂತರ್ನಿಯಾ
ನಾಗಿ) ನಿಂತುಕೊಂಡು, (ಕಣ್ಣು, ಕಿವಿ ಮುಂತಾದ ಐದು ಜ್ಞಾನೇಂದ್ರಿಯ
ಹಾಗೂ ಮನಸ್ಸು), ಈ ಆರು ಇಂದ್ರಿಯಗಳಿಗೆ ಅಧಿಪತಿಯಾಗಿ, ಪ್ರೇರಕ
ನಿಯಾಮಕನಾಗಿ, ಅವುಗಳ ಮುಖಾಂತರ ವಿಷಯಗಳನ್ನು, ಸರ್ವತಂತ್ರ ಸ್ವ
ನಾಗಿ ಆತನು ಉಪಭೋಗಿಸುವನು. 'ವೈ', ಎಂದರೆ, ಈ ಮಾತಿಗೆ ಶಾ

ಕಾರಣ್ಯವಿದೆ, ವೇದಗಳ ಆಧಾರವಿದೆ. ( ನಿಷ್ಕಾಮನು, ನಿರಪೇಕ್ಷನು, ಸ್ವಂತದ ಯಾವ ಪ್ರಯೋಜನವಿಲ್ಲದವನು ಆದ ಭಗವಂತನು ಸೃಷ್ಟಿ ಮುಂತಾದ ಕಾರ್ಯಗಳಲ್ಲಿ ತೊಡಗಿರುವದು ಯೋಗ್ಯರಾದವರಿಗೆ ಮೋಕ್ಷಾದಿ ಪುರುಷಾರ್ಥವನ್ನು ಕೊಡುವ ಪರೋಪಕಾರದ ಪ್ರಯೋಜನಕ್ಕಾಗಿ. ಆದುದರಿಂದ ಕ್ರೀಡಾರೂಪವಾದ ಆತನ ಕಾರ್ಯವು ವ್ಯರ್ಥವು, ನಿರರ್ಥಕವೂ ಆದುದಲ್ಲ). ಭಗವಂತನ ಲೀಲಾರೂಪವಾದ ಯಾವ ಕೃತಿಯೂ ನಿರರ್ಥಕವಾದುದಲ್ಲ.

ಒಟ್ಟಾರೆ ಅಭಿಪ್ರಾಯವಿದು :- ಭಗವಂತನ ಸೃಷ್ಟ್ಯಾದಿ ಕಾರ್ಯಗಳು ಜೀವಿಗಳಿಗೆ ಮುಕ್ತಿ ಕೊಡುವದಕ್ಕಾಗಿ, ಜೀವಿಗಳಿಗೆ ಸ್ವಸ್ವಯೋಗ್ಯವಾದ ಮುಕ್ತಿಯು ದೊರೆಯುವಂತೆಯೆ ಆತನು ಕಾರ್ಯ ಮಾಡುವನು. ಅದು ಹೇಗೆಂದರೆ, ಪಶುಪಕ್ಷಿಗಳನ್ನು ಸೃಷ್ಟಿಸಿದಾಗ್ಗೆ ಭಗವಂತನಿಗೆ ತೃಪ್ತಿಯಾಗಲಿಲ್ಲ, 'ಬ್ರಹ್ಮಾವಬೋಧ' ಭಗವಂತನನ್ನೇ ತಿಳಿದುಕೊಳ್ಳುವ ಬುದ್ಧಿಶಕ್ತಿಯುಳ್ಳ ಮಾನವ ಶರೀರವನ್ನು ನಿರ್ಮಿಸಿದಾಗ್ಗೆ ಭಗವಂತನಿಗೆ ಸಂತೋಷವಾಯಿತು.

ಪಶು-ಪಕ್ಷಿ ಮುಂತಾದ ಅನ್ಯ ಶರೀರಗಳನ್ನೆಲ್ಲ ಬಿಟ್ಟುಕೊಟ್ಟು, ಮಾನವ ಶರೀರವನ್ನು ನಿರ್ಮಿಸಿ, ಆ ಮಾನವ ಶರೀರದಲ್ಲಿ, ತನ್ನ ( ಭಗವಂತನ ) ಉಪಾಸನೆಗೆ ಸಹಕಾರಿಗಳಾದ (ಉಪಯುಕ್ತವಾಗಿರುವ) (ಜ್ಞಾನೇಂದ್ರಿಯ ಮುಂತಾದ) ಇಂದ್ರಿಯಗಳನ್ನು ಒದಗಿಸಿ, ಪೂಜೆಗೆ ಉಪಯುಕ್ತವಾದ ( ಹೂ, ತುಳಸಿ ) ಮುಂತಾದ ಪೂಜಾದ್ರವ್ಯಗಳು ಆತನಿಗೆ ದೊರೆಯುವಂತೆ ಮಾಡಿ, ಪರಮಾತ್ಮನು ತನ್ನ (ಅಪ್ರಾಕೃತ) ಶರೀರದಿಂದ, ತನ್ನ ಇಂದ್ರಿಯಗಳಿಂದಲೆ (ವಿಷಯಗಳೆ ತಾನಾಗಿರುವ) ಸ್ವರೂಪಭೂತವಾದ ವಿಷಯುಗಳನ್ನು ನಿರಂತರ ಅನುಭವಿಸುತ್ತಲಿದ್ದರೂ, ತನ್ನ ಶರೀರದಿಂದ ಮಾನವ ಶರೀರಗಳನ್ನು, ತನ್ನ ಇಂದ್ರಿಯಗಳಿಂದ ಅವರ ಇಂದ್ರಿಯುಗಳನ್ನು, ತನ್ನ (ಸ್ವರೂಪ ಭೂತವಾದ) ವಿಷಯುಗಳು ಲೌಕಿಕ ವಿಷಯುಗಳಲ್ಲಿ ನೆಲಿಸುವಂತೆ ಮಾಡಿ, ಪೂಜೆಯ ದ್ರವ್ಯಗಳಿಂದ ತನ್ನನ್ನು ತಾನೇ ಪೂಜಿಸುತ್ತ ಪರಮಾತ್ಮನು ಮಾನವ ಶರೀರಗಳಲ್ಲಿ ನಿಂತು ತನ್ನ ಪೂಜೆ ಉಪಾಸನೆ, ಅವರಿಂದ ಮಾಡಿಸಿಕೊಳ್ಳುವ ಪ್ರಭುವಾಗಿರುವನು. ಈ ಮಾತಿಗೆ ಉದಾಹರಣೆ ಕೊಡುವರು- ರಾಜನು ತನ್ನ ಪುರೋಹಿತನಿಗೆ ಒಳ್ಳೇ ಮನೆ ಕಟ್ಟಿಸಿಕೊಡುವನು. ಜೀವನೋಪಯೋಗಿರುವ ಸಕಲ ಪದಾರ್ಥಗಳನ್ನೂ ಆ ಮನೆಯಲ್ಲಿ ಸಮೃದ್ಧವಾಗಿ ಒದಗಿಸುವನು. ರಾಜನು ಅದೇ ಮನೆಯಲ್ಲಿ ಕೆಲಕಾಲ ವಾಸಿಸಿ (ಪುರೋಹಿತನಂತೆಯೆ), ಅಲ್ಲಿಯೇ ಊಟ ನಿದ್ರೆಗಳನ್ನು ಮಾಡುವನು. ಪ್ರೀತಿವಶನಾಗಿ, ಪುರೋಹಿತನಿಗೆ ಅದರಿಂದ ಜಗತ್ತಿನಲ್ಲಿ ಒಳ್ಳೇ ಕೀರ್ತಿಯನ್ನು ತಂದುಕೊಡುವನು. ಇದರಂತೆಯೇ ( ಸರ್ವಸ್ವವೂ ತನ್ನದೇ ಆಗಿದ್ದರೂ, ತಾನೇ ಮಾಡಿ ಮಾಡಿಸುತ್ತಿದ್ದರೂ ) ಭಗವಂತನು

ನ್ನ ಭಕ್ತರಿಗೆ ಕೀರ್ತಿ-ಉದ್ಧೃತಿಗಳನ್ನು ತಂದುಕೊಡುವನು; ಆದುದರಿಂದ, ರೀರವನ್ನು ಸೃಷ್ಟಿಸುವದರಿಂದ ಪಿತೃತ್ವವು, ಪ್ರಳಯ ಕಾಲದಲ್ಲಿ ತನ್ನ ಉದರ ೊಳಗೆ ಲೀನವಾದ ವಿಶ್ವವನ್ನು ಸೃಷ್ಟಿಕಾಲದಲ್ಲಿ ಉದರದಿಂದ ಹೊರಗೆ ಹಾಕುವ ರಿಂದ ನೇರವಾಗಿ ಯಾವ ಉಪಾಧಿಯೂ ಇಲ್ಲದೆ ಜನ್ಮಕೊಡುವ ಮಾತೃತ್ವವು ತಾಯಿತನವು), ಆಗಾಗ್ಗೆ ಒದಗುವ ಆಧ್ಯಾತ್ಮಿಕ ಮುಂತಾದ ಆಪತ್ತುಗಳನ್ನು ಹರಿಸಿ ರಕ್ಷಿಸುವದರಿಂದ ಅನಿಮಿತ್ತ ಬಂಧುವೆನಿಸುವ ಪ್ರೀತಿಯ ಬಾಂಧವ್ಯವು, ಜ್ಞಾನಾದಿಗಳನ್ನು ಕೊಡುವದರಿಂದ ಸದ್ಗುರುವಿನ ಸ್ವರೂಪವು, ಭವದ ಬಂಧನ ಂದ ಬಿಡುಗಡೆ ಮಾಡುವದರಿಂದ ದೇವತೆಗಳಲ್ಲಿ ಸರ್ವೋತ್ತಮತ್ವವು-

ಈ ರೀತಿಯಾಗಿ ತಂದೆ, ತಾಯಿ, ಅನಿಮಿತ್ತ ಬಂಧು, ಸದ್ಗುರು ಹಾಗೂ ಸರ್ವೋತ್ತಮ ದೈವತ - ಪರಮಾತ್ಮನ ಬಗ್ಗೆ ಇರುವ ಇವೆಲ್ಲ ಐದು ಬಗೆಯ ಸಂಬಂಧಗಳನ್ನು ಇಲ್ಲಿ ಈ ರೀತಿಯಾಗಿ ಮನವರಿಕೆ ಮಾಡಿಕೊಡಲಾಗಿದೆ. ಎಂಬು ವನ್ನು ತಿಳಿದುಕೊಳ್ಳಬೇಕು. ಶಿಷ್ಯನು ತನ್ನ ಬುದ್ಧಿಮತ್ತೆಯಿಂದಲೆ ಯಾವ ವಿಷಯವನ್ನು ತಿಳಿದುಕೊಳ್ಳಲಾರನೆಂಬ ಪ್ರಶ್ನೆಗೆ ಉತ್ತರವನ್ನು ಇಲ್ಲಿ ಹೇಳಿದಂತಾ ಯಿತು. ಅಂಥ ವಿಷಯಗಳನ್ನು ಗುರುವೇ ತಿಳಿಸಿ ಹೇಳುವನು.

ಇಲ್ಲಿ ಶಮ ಹಾಗೂ ಆತ್ಮವಿಮರ್ಶೆ ಎಂಬ ಎರಡು ಭಾಗವತ ಧರ್ಮಗಳನ್ನು ನಿರೂಪಿಸಿದಂತಾಯಿತು. ಶಮದಿಂಧ ಅಭಯವೂ ಪ್ರಾಪ್ತವಾಗುತದು.

ಅಧ್ಯಾತ್ಮ ಪ್ರಕರಣ ಮುಗಿಯಿತು.



77 ಶ್ಲೋಕಸ್ಥಂ

# ೨೦. ಧರ್ಮೋಪದೇಶ ಪ್ರಕರಣ

ಋಷಿಮುನಿ ವೇದ ಕರ್ತ್ತಃ ಪರ್ವತಾಲ್ಲಿ

॥೨೩೭॥ ಪಾನೇನ ತೇ ದೇವ ಕಥಾಸುಧಾಯಾಃ
ಪ್ರವೃದ್ಧಭಕ್ತ್ಯಾ ವಿಶದಾಶಯಾ ಯೇ ।
ವೈರಾಗ್ಯಸಾರಂ ಪ್ರತಿಲಭ್ಯ ಬೋಧಂ
ಯಥಾಂಜಸಾ ತ್ವಾಪುರಕುಂಠಧಿಷ್ಣ್ಯಂ ॥ ೩-೩-೨೪
5-45

ತತ್ತ್ವಾಭಿಮಾನಿಗಳು ಪರಮಾತ್ಮನಿಗೆ ಮಾಡಿದ ಪ್ರಾರ್ಥನೆ-

ಎಂಟು ಶಂಕೆಗಳಿಗೆ ಸಮಾಧಾನವನ್ನು ಹೇಳಿದ್ದಾಯಿತು. ಇದುವರೆಗೆ ಹೇಳಿರುವ ಸಾಧನಗಳ ಅನುಷ್ಠಾನವನ್ನು ಮಾಡುವ ಅಧಿಕಾರಿ ಜೀವನಿಗೆ ಬಿಂಬದ (ಬಿಂಬರೂಪನಾದ ಪರಮಾತ್ಮನ) ಉಪಾಸನೆಯನ್ನು ಮಾಡುವ ಸುಯೋಗವು ಲಭಿಸುವದು. ಈ ಸುಯೋಗವನ್ನು ಪಡೆಯಲು ಸಾಧನವೇನು? ಎಂಬ ಹನ್ನೆರಡನೆಯ ಪ್ರಶ್ನೆಗೆ ಉತ್ತರವನ್ನು ಕೊಡುವಾಗ್ಗೆ, ಭಾಗವತ ಧರ್ಮಗಳ ಉಪದೇಶವನ್ನು ಈ ಪ್ರಕರಣದಲ್ಲಿ ಮಾಡುವರು.

**ಅರ್ಥ:**- ಭಗವಂತಾ! (ಅದ್ಭುತವಾದ) ನಿನ್ನ ಲೀಲೆಗಳ ಕಥೆಯು ಅಮೃತದಷ್ಟು ಮಧುರವಾದದು. ಈ ಕಥಾಮೃತವನ್ನು (ಕೇಳುವದರಿಂದ) ಸೇವಿಸುತ್ತಿರುವಂತೆಯೇ, ನಿತ್ಯವೂ ಹೆಚ್ಚು ಹೆಚ್ಚಾಗುವ ಭಕ್ತಿಯಿಂದ ನಿನ್ನ ಭಕ್ತರ ಅಂತರಂಗದಲ್ಲಿಯ ಸಂದೇಹಗಳೆಲ್ಲ ತೊಲಗಿ ಅವರ ಜ್ಞಾನವು ನಿರಂತರವೂ ಸ್ವಚ್ಛ (ನಿರ್ದೋಷ) ವಾಗುತ್ತಲಿರುವದು. ಅಂಥ ಜ್ಞಾನವು ವೈರಾಗ್ಯದ ತಿರುಳಾಗಿರುವದು. ಶ್ರೇಷ್ಠ ವೈರಾಗ್ಯದಿಂದ ಕೂಡಿದ ಜ್ಞಾನವನ್ನು ಪಡೆದ ನಿನ್ನ ಭಕ್ತರು ಅಪ್ರತಿಹತವಾದ (ನಿರಾತಂಕವಾದ, ತಿರುಗಿ ಸಂಸಾರಕ್ಕೆ ಬರುವ ಭೀತಿಯಿಲ್ಲದ) ವೈಕುಂಠವೆಂಬ ನಿನ್ನ (ದಿವ್ಯ) ಸ್ಥಾನವನ್ನು ಸುಗಮವಾಗಿ ಹೊಂದುವರು; (ಇಷ್ಟಪ್ರಾಪ್ತಿ, ಅನಿಷ್ಟಪರಿಹಾರ ರೂಪವಾದ ಮೋಕ್ಷದ ಶಾಶ್ವತ ಸುಖವನ್ನು ಪಡೆಯುವರು.)

ಭಕ್ತಿಯೋಗದ ಸಾಧನಕ್ರಮವು ಇಲ್ಲಿ ಸೂಚಿತವಾಗಿದೆ. ಭಾಗವತ ಧರ್ಮಗಳ ಬಗ್ಗೆ ಆದರ-ಆಸಕ್ತಿಗಳನ್ನು ಉಂಟು ಮಾಡಲು ಇಲ್ಲಿ ಭಕ್ತಿ ಮಾರ್ಗವನ್ನು ಹೊಗಳಿರುವರು. ಎರಡು ಬಗೆಯ ಯೋಗಿಗಳು:- ಭಗವತ್-ಕಥಾ ಶ್ರವಣದಿಂದ ಉಂಟಾಗುವ ಭಕ್ತಿಯೆ ಪ್ರಧಾನ (ಮುಖ್ಯ ಸಾಧನ) ವಾಗಿರುವವರು 'ಭಕ್ತಿಯೋಗಿ' ಗಳು. (ಪ್ರಾಣಾಯಾಮದ ರೀತಿಯಿಂದ) ಶ್ವಾಸ (ವಾಯು) ನಿಗ್ರಹವೆ

ಮುಖ್ಯ ಸಾಧನವಾಗಿರುವವರು 'ಸಮಾಧಿ ಯೋಗಿ'ಗಳು; 'ಹಠಯೋಗಿ'ಗಳೆಂಬುದು ಇವರಿಗೆ ಇನ್ನೊಂದು ಹೆಸರು. ಶ್ವಾಸನಿರೋಧಕ್ರಮದಿಂದ ಅತಿ ಬಲಿಷ್ಠವಾದ ಪ್ರಕೃತಿಯನ್ನು, ನಿಸರ್ಗ ಧರ್ಮವನ್ನು ಇವರು ಗೆಲ್ಲಬೇಕಾಗುವದು. ಇವರಲ್ಲಿ ಭಕ್ತಿಯೋಗಿಗಳಿಗೆ ತುಸು ತಡವಾಗಿ ಮೋಕ್ಷ ಪ್ರಾಪ್ತಿಯಾದರೂ, ಆ ಮುಕ್ತಿಯು ಪರಿಪೂರ್ಣವಾದುದು, ಯಥಾರ್ಥವಾದುದು.

ಎರಡನೆಯವರಾದ ಹಠಯೋಗಿಗಳಿಗೆ ಮುಕ್ತಿಯು ಬೇಗನೆ ದೊರೆಯುತ್ತಿದ್ದರೂ, ಅವರ ಮಾರ್ಗವು ಸುಗಮವಾದುದಲ್ಲ. ಅವರಿಗೆ ದೊರೆಯುವ ಮುಕ್ತಿಯೂ ಪರಿಪೂರ್ಣವಾದುದಲ್ಲ ಮೋಕ್ಷ ದೊರೆಯುವದು ಇಬ್ಬರಿಗೂ ಸಮಾನವಾಗಿದ್ದರೂ, ದೊರಕಿಸುವ ಮಾರ್ಗ ಹಾಗೂ ಮುಕ್ತಿಯ ಸ್ವರೂಪದಲ್ಲಿ ವಿಶಿಷ್ಟತೆ ಇರುವದು. ಆ ವಿಶಿಷ್ಟತೆ (ವಿಶೇಷ ವ್ಯತ್ಯಾಸವು) ಯಾವುದೆಂದರೆ, ಶ್ವಾಸ ನಿಗ್ರಹದ ಪ್ರಾಣಾಯಾಮದಲ್ಲಿ ಧೀರರಾದ ಹಠಯೋಗಿಗಳಿಗೆ ತುಂಬಾ ಶ್ರಮವಾಗುವದು. ಭಕ್ತಿಯೋಗಿಗಳಿಗೆ ಹರಿಕಥಾ ಶ್ರವಣಾದಿಗಳಲ್ಲಿ ಕಿಂಚಿತ್ತೂ ಶ್ರಮವಿಲ್ಲ-ಇಷ್ಟೇ ಅಲ್ಲ. ಶ್ರವಣಾದಿಗಳಲ್ಲಿ ಅವರಿಗೆ ಅಲೌಕಿಕವಾದ ಸುಖವು ಉಂಟಾಗುವದು. ವೈರಾಗ್ಯಪ್ರಕರಣದ 'ಯಾ ನಿವೃತ್ತಿ:' ಎಂಬ ಶ್ಲೋಕದಲ್ಲಿ ಈ ಸುಖದ ಬಗ್ಗೆ ವಿವರಿಸಿದೆ. ಭಕ್ತಿಯೋಗಿಗಳ ಸಾಧನ ಕ್ರಮವನ್ನು ಇಲ್ಲಿ ಮೊದಲು ಹೇಳಿಕೊಟ್ಟಿದೆ.

**॥೨೩೮॥ ತಥಾಪರೇ ತ್ವಾತ್ಮಸಮಾಧಿಯೋಗ-**
**ಬಲೇನ ಜಿತ್ವಾ ಪ್ರಕೃತಿಂ ಬಲಿಷ್ಠಾಂ ।**
**ತ್ವಾಮೇವ ಧೀರಾಃ ಪುರುಷಂ ವಿಶಂತಿ**
**ತೇಷಾಂ ಶ್ರಮಃ ಸ್ಯಾನ್ನ ತು ಸೇವಯಾ ತೇ ॥ ೩-೬-೨೫**
5-46

ಹಠಯೋಗಿಗಳ ಸಾಧನ ಕ್ರಮವನ್ನು ಇಲ್ಲಿ ಹೇಳಿದೆ.–

**ಅರ್ಥ** :– (ಎರಡನೆ ಬಗೆಯ) ಹಠಯೋಗಿಗಳು ಧೀರರು, ದೃಢಮನಸ್ಸಿನ ಸಾಹಸಿಗರು. ಪ್ರಾಣಾಯಾಮದ (ಶ್ವಾಸನಿಗ್ರಹದ) ದುಷ್ಕರವಾದ ವಿಧಾನಗಳಿಂದ ಚಂಚಲವಾದ ಚಿತ್ತವೃತ್ತಿಯನ್ನು ಸಮಾಧಿಯ ಸ್ಥಿತಿಯಲ್ಲಿ ಸ್ಥಿರಗೊಳಿಸುವರು. (ಚಿತ್ತವೃತ್ತಿಯನ್ನು ನಿರೋಧಿಸುವ) ಈ ಯೋಗದ ಸಾಮರ್ಥ್ಯದಿಂದ (ಇಂದ್ರಿಯವಿಷಯಗಳತ್ತಸೆಳೆಯುವ) ಅತಿ ಬಲಿಷ್ಟವಾದ ಪ್ರಕೃತಿಯನ್ನು (ಇಂದ್ರಿಯಗಳನ್ನು) ಗೆದ್ದು (ಅವುಗಳಸೆಳೆತಕ್ಕೆ ಸಿಲುಕದೆ, ತಮ್ಮ ಶ್ರೇಯಸ್ಸಿಗೆ ಅವುಗಳನ್ನು ಅನುಕೂಲವಾಗಿ ಮಾಡಿಕೊಂಡು) ಗುಣ ಪೂರ್ಣನಾದ ನಿನ್ನನ್ನೇ (ಶ್ರೀಹರಿಯನ್ನೇ) ಅವರು ಪಡೆಯುವರು – (ನಿನ್ನ ಅನುಗ್ರಹರೂಪವಾದ (ಮುಕ್ತಿ

ಯನ್ನು ದೊರಕಿಸುವರು.) (ಆದರೆ, ಭಕ್ತಿಯೋಗಿಗಳಿಗೂ ಈ ಹಠಯೋಗಿಗಳಿಗೂ ಅಂತರವಿದೆ.) ಶ್ವಾಸ ನಿರೋಧಾದಿಗಳಿಂದ ಹಠಯೋಗಿಗಳು ಬಹಳೇ ಕಷ್ಟ ಪಡಬೇಕಾಗುವದು. ಆದರೆ (ಶ್ರವಣಾದಿ ಸಾಧನಗಳಿಂದ) ನಿನ್ನನ್ನು ಆರಾಧಿಸುವ ಭಕ್ತಿಯೋಗಿಗಳಿಗೆ ಕಿಂಚಿತ್ತೂ ಶ್ರಮವಿಲ್ಲ ಶ್ರವಣಾದಿಗಳಿಂದ ವಿಶಿಷ್ಟ ಆನಂದವನ್ನೂ ಅವರು ಪಡೆಯುವರು. –

ಭಕ್ತಿಮಾರ್ಗದ ಶ್ರೇಷ್ಠತೆಯನ್ನು ಈ ರೀತಿಯಾಗಿ ತೋರಿಸಿದ್ದಾಯಿತು. ಭಕ್ತಿಯ ಅಭಿವೃದ್ಧಿಗೆ ಸಹಾಯಕಗಳಾದ ಭಾಗವತಧರ್ಮಗಳನ್ನು ತಿಳಿಸಿ ಹೇಳುವ ಸದ್ಗುರು ದೊರೆಯುವದೇ ಕಠಿಣ. ಆದುದರಿಂದ ಭಾಗವತ ಧರ್ಮಗಳ ಜ್ಞಾನವನ್ನು ಮಾಡಿಕೊಳ್ಳುವದೂ ಅಷ್ಟೇ ಕಠಿಣ. ಹೀಗಿರುವದರಿಂದ, ಅಂಥ ಜ್ಞಾನವನ್ನು (ಅಧಿಕಾರಿಗಳು) ಪಡೆಯಲೆಂಬ ಉದ್ದೇಶದಿಂದ, ಭಾಗವತ ಧರ್ಮಗಳ ಲಕ್ಷಣ (ರೂಪ-ರೀತಿ) ಗಳನ್ನು ಇಲ್ಲಿ ಹೇಳಿರುವರು:- (ಭಾಗವತ ಧರ್ಮಗಳನ್ನು ತಿಳಿಯುವದು ಬಹು - ಕಷ್ಟವೆಂದು ಯಮಧರ್ಮನು ತನ್ನ ಭಕ್ತರಿಗೆ ಅವುಗಳ ಬಗ್ಗೆ ದಕ್ಷರಾಗಿರಲು ಎಚ್ಚರಿಕೆ ಕೊಡುವನು.

**ಅರ್ಥ** :- ಅವುಗಳನ್ನು ಆಚರಿಸುವ ಭಕ್ತರಿಗೆ ನೇರವಾಗಿ ಮುಕ್ತಿಯು ದೊರೆಯಬೇಕೆಂತಲೆ ಸಾಕ್ಷಾತ್ ಭಗವಂತನೇ ರಚಿಸಿದ ಧರ್ಮವೇ ಭಾಗವತ ಧರ್ಮವಾಗಿದೆ. - (ಇಲ್ಲಿ ಹೇಳಿರುವ ಭಾಗವತ ಧರ್ಮದ ಈ ಲಕ್ಷಣವು ಇತ್ತೀಚಿಗಿನವರು ಸ್ವಂತ ಬುದ್ಧಿಯಿಂದ ಕಲ್ಪಿಸಿಕೊಂಡದ್ದಾಗಿಲ್ಲ. ಭಗವಂತನಿಂದಲೆ ಈ ಧರ್ಮದ ಉಪದೇಶವನ್ನು ಪಡೆದ ಭಾಗವತೋತ್ತಮರಾದ ಸನಕಾದಿ ಋಷಿಗಳ ಅಭಿಪ್ರಾಯವೂ ಇದೇ ಆಗಿದೆ. ಸಾಕ್ಷಾತ್ ಭಗವಂತನೆ ನಿರೂಪಿಸಿದ ಧರ್ಮವೇ ಭಾಗವತ ಧರ್ಮವೆಂದು ಜ್ಞಾನಿಗಳೆಲ್ಲರೂ ಯಥಾಶಕ್ತಿ ತಿಳಿದುಕೊಂಡಿರುವರು. (ಪೂರ್ಣವಾಗಿ ಈ ಧರ್ಮವನ್ನು ಅರಿತುಕೊಂಡವರು ಇಲ್ಲವೆಂದರೂ ಸರಿ). ಋಷಿಗಳು (ಮಿಕ್ಕ) ದೇವತೆಗಳು, ಶ್ರೇಷ್ಠರಾದ ಸಿದ್ಧರೂ, ವಿದ್ಯಾಧರರು, ಚಾರಣರು (ಮಾನವನಿಗೆ ಮಿಗಿಲಾದ) ಈ ವರ್ಗದವರು ಈ ಧರ್ಮವನ್ನು ಮೊದಲು-ಕಡೆಯಾಗಿ ತಿಳಿದುಕೊಂಡಿಲ್ಲ. ಹೀಗಿರಲು (ಅವರಿಗಿಂತಲೂ ಕೆಳಮಟ್ಟದ) ಮಾನವರು, ದೈತ್ಯರು ಭಾಗವತ ಧರ್ಮವನ್ನು (ಸಂಪೂರ್ಣವಾಗಿ) ತಿಳಿದುಕೊಳ್ಳಲು ಹೇಗೆ ಶಕ್ತರಾಗುವರು ?

ಹೀಗೆ ಹೇಳಿರುವರು :- ಯೇ ಭಾಗವತಾಃ ಪ್ರೋಕ್ತಾ .... ಭಾಗವತಾನ್ ಹಿತಾನ್ (೧೧-೨-೩೪)

**ಅರ್ಥ** :- ಮೋಕ್ಷಪ್ರಾಪ್ತಿಯ ಉಪಾಯಗಳನ್ನು ಅರಿಯದ ಅಜ್ಞಜನರಿಗೆ ಭಗವಂತನು ಕರುಣೆಯಿಂದ ಹೇಳಿಕೊಟ್ಟ (ಮೋಕ್ಷಕ್ಕೆ ಸಾಧನವಾದ) ಧರ್ಮಗಳೇ

ಭಾಗವತ್ ಧರ್ಮಗಳು. [೨] ಯೈಃ ಪ್ರಸನ್ನಃ..... ಅಜಃ' (೧೧-೩-೩೧) :- ಅರ್ಥ :- ಈ ಧರ್ಮಗಳ ಆಚರಣೆಯಿಂದ ಪ್ರಸನ್ನನಾಗಿ, ತನಗೆ ಶರಣು ಬಂದ ಭಕ್ತನಿಗೆ (ಹುಟ್ಟು-ಸಾವುಗಳಿಲ್ಲದ ಶಶ್ವದೇಕ ಸ್ವರೂಪನಾದ) ಭಗವಂತನು ತನ್ನನ್ನೆ (ಸಾಯುಜ್ಯ ಮೋಕ್ಷವನ್ನೇ) ಕೊಟ್ಟುಬಿಡುವನು. ( ಆದರೆ ) ಭಾಗವತ ಧರ್ಮ ವನ್ನು ತಿಳಿಸಿಕೊಡುವ ಸದ್ಗುರು ದೊರೆಯುವದೇ ಅಪರೂಪ ಎಂಬ ಅಭಿಪ್ರಾಯ ದಿಂದ ಹೇಳುವರು. ಭಾಗವತರಾದ ದೈತ್ಯರಿಗೂ ಈ ಧರ್ಮಗಳು (ಪೂರ್ಣವಾಗಿ) ತಿಳಿದಿಲ್ಲ; ಸಾಮಾನ್ಯ ಮಾನವರ ಪಾಡೇನು ?

ಭಾಗವತ ಧರ್ಮದ ಜ್ಞಾನವನ್ನು ಪಡೆಯುವದು ಕಷ್ಟಕರವೆಂಬುದೇನೊ ಸರಿ. ಆದರೆ ಈ ಮಾತಿನಿಂದ (ನಿಜವಾದ) ಭಗವದ್ಭಕ್ತರು ಧೈರ್ಯಗೆಡಬಾರದು. ಭಾಗವತ ಧರ್ಮವನ್ನು ಯಥಾವತ್ತಾಗಿ ತಿಳಿದ (ವಿಶೇಷ ಅಧಿಕಾರಿಗಳಾದ) ಕೆಲವ ಭಗವದ್ಭಕ್ತರು ಇದ್ದೇ ಇರುವರು. ಭಾಗವತ ಧರ್ಮದ ಜ್ಞಾನವನ್ನು ಪರಂಪರ ಯಾಗಿ ನೀವೂ (ಭಕ್ತರು) ಪಡೆಯಬಹುದು, ಹೆದರಬೇಕಿಲ್ಲ, ಎಂಬ ಭಾವನೆ ಯಿಂದ ಹೀಗೆ ಹೇಳುವರು. 'ಸ್ವಯಂಭೂರ್ನಾರದಃ.... ವಯಮ್,..... ದ್ವಾದಶೈತೆ... ಅಮೃತಮಶ್ನುತ'-(೬-೩-೨೦,೨೧) ಅರ್ಥ:- ಸ್ವಯಂಭೂ [ಬ್ರಹ್ಮ], [ಬ್ರಹ್ಮ ಪುತ್ರ] ನಾರದ, ಶಂಭು, ಸನತ್ಕುಮಾರ, ಕಪಿಲಮುನಿ, ಪ್ರಲ್ಹಾದ, ಜನಕರಾಜ [ಪಿತಾಮಹ] ಭೀಷ್ಮ, ದೈತ್ಯರಾಜ ಬಲಿ, ಹಾಗೂ ನಾನು [ಯಮರಾಜ] ಇ ಹೇಳಿರುವ ಹನ್ನೆರಡು ಭಾಗವತೋತ್ತಮರು, ಭಾಗವತ ಧರ್ಮವನ್ನು ಸಂಪೂರ್ಣ ವಾಗಿ ಅರಿಯುದಿದ್ದರೂ, ಆ ಧರ್ಮದ ಯಥಾರ್ಥ ಜ್ಞಾನಮಾಡಿಕೊಂಡಿರುವೆವ ಹೇ ದೂತರೆ, ಗುಹ್ಯ [ಗುಪಿತ] ವೂ, ದೋಷರಹಿತವೂ, ತಿಳಿಯಲು ಕಠಿಣವಾ ಈ ಧರ್ಮವನ್ನು ತಿಳಿದುಕೊಳ್ಳುವ ಮಾನವನು ಮುಕ್ತಿಯನ್ನು ಪಡೆಯುವನು. [೬-೩-೨೧]

ಮೋಕ್ಷ ಪ್ರಾಪ್ತಿಗೆ ಸಾಧನವಾಗುವಂತೆ ಭಗವಂತನು ಉಪದೇಶಿಸಿದ ಧರ್ಮವು ಮುವತ್ತು ವಿಧವಾಗಿದೆ; ಒಂದೊಂದು ಪ್ರಕಾರವೂ ವಿಶಿಷ್ಟ [ ತನ್ನದ ಆಗಿರುವ] ಗುಣಗಳಿಂದ ಯುಕ್ತವಾಗಿದೆ. ಈ ಪ್ರಕಾರಗಳಿಗೆ ಶಾಸ್ತ್ರಪ್ರಮಾಣ ಆಧಾರವಿರುವದೆಂಬುದು 'ವೈ' ಶಬ್ದದಿಂದ ಸೂಚಿತವಾಗಿದೆ.

ಹೀಗೆ ಹೇಳಿದೆ, 'ಭಗವಾನ್ ಶ್ರೋತುಮಿಚ್ಛಾಮಿ .. ವಿಂದತೀ ಪರಂ ಮ ಭವಾನ್ ಪ್ರಜಾಪತೇಃ . ನ ತಥಾಪರೆ' [೭-೧೧-೨,೩,೪] ಅರ್ಥ :- ಯುಧಿ ರನು ಆ ನಾರದರಿಗೆ ಮಾಡಿದ ಪ್ರಶ್ನೆ:- ಮಂದ್ಯರೆ, ನೀವು ಪ್ರಜಾಪತಿಯಾದ ಬ್ರ ದೇವರ ಸಾಕ್ಷಾತ್ ಮಗನಾಗಿರುವಿರಿ. ನಿಮ್ಮ ತಪಸ್ಸು, ಯೋಗ ಹಾಗೂ ಸಮಾ

ಗಳಿಂದ ತಂದೆಯ ಮನ್ನಣೆಯನ್ನು ಪಡೆದಿರುವಿರಿ. ನೀವೂ ನನಗೆ ಕೃಪೆಮಾಡಿ ಹೇಳಿರಿ- "ನಾಲ್ಕು ವರ್ಣಗಳು, ನಾಲ್ಕು ಆಶ್ರಮಗಳು-ಅವುಗಳಲ್ಲಿಯ ಸದಾಚಾರ ವಿಧಾನಗಳು, ಇವೆಲ್ಲವುಗಳನ್ನು ಒಳಗೊಂಡ, ಹಾಗೂ ಮಾನವರಿಗೆ, ಪರಮ ಪುರುಷಾರ್ಥವನ್ನು ತಂದುಕೊಡುವ, ಮಾನವರಿಗಾಗಿ ನಿರೂಪಿಸಿದ ಸನಾತನ [ಶಾಶ್ವತ] ಧರ್ಮದನ್ನು ನಿಮ್ಮಿಂದ ತಿಳಿದುಕೊಳ್ಳಲು ನಾನು ಬಯಸುವೆ. 'ನಾರಾಯಣ ಪರಾಃ ನತಥಾ ಪರೆ' [೭-೧೨-೪] ಅರ್ಥ :- ನಿಮ್ಮಂತೆಯೆ [ನಾರದರಂತೆಯೆ] ಇರುವ ಕಾರುಣಿಕರೂ, ಶಾಂತಸ್ವಭಾವದ ಸಾಧುಗಳೂ ಹಾಗೂ ಭಗವಂತನಾದ ನಾರಾಯಣನಲ್ಲಿ ಪರಮನಿಷ್ಠೆಯುಳ್ಳ ಬ್ರಾಹ್ಮಣರು ಭಾಗವತ ಧರ್ಮವನ್ನು ಹೇಗೆ ಯಥಾರ್ಥವಾಗಿ ತಿಳಿದುಕೊಂಡಿರುವರೊ, ಉಳಿದವರಿಗೆ ಅದು ತಿಳಿದಿಲ್ಲ.

ಧರ್ಮರಾಜನ ಈ ಪ್ರಶ್ನೆಗೆ ಉತ್ತರ ಹೇಳುವರು :- 'ನತ್ವಾ ..... ಆತ್ಮಾ ಪ್ರಸೀದತಿ' [೭-೧೨-೫,೬,೭] ಅರ್ಥ ಃ- ಭಗವಂತನಿಗೂ, [ತಂದೆಯಾದ] ಬ್ರಹ ದೇವರಿಗೂ ನಮಸ್ಕರಿಸಿ, ಜನರಲ್ಲಿ ಧರ್ಮದ ಪ್ರಸಾರವಾಗಲೆಂದು, ನಾರಾಯಣನ ಮುಖದಿಂದ ಹೊರಬಂದ [ನಾರಾಯಣನೇ ಹೇಳಿರುವ] ಸನಾತನ ಧರ್ಮವನ್ನು ನಿರೂಪಿಸುವೆ. ದಕ್ಷಪ್ರಜಾಪತಿಯ ಮಗಳಾದ ಮೂರ್ತಿದೇವಿಯಲ್ಲಿ ಪ್ರಜಾಪತಿ ಯಾದ ಧರ್ಮನಿಂದ ಶ್ರೀ ಮನ್ನಾರಾಯಣನು ತನ್ನದೊಂದು ಅಂಶದಿಂದ ಅವತ ರಿಸಿ, ಜಗತ್ತಿನ ಕಲ್ಯಾಣಕ್ಕಾಗಿ ಬದರಿಕಾಶ್ರಮದಲ್ಲಿ (ಇಂದಿಗೂ) ತಪಸ್ಸನ್ನು ಆಚರಿ ಸುತ್ತ ನೆಲೆಸಿರುವನು. ಭಗವಂತನು ಧರ್ಮಕ್ಕೆ [ಮೂಲ-ಉಗಮ] ವಿಷಯ ನಾಗಿರುವದು ಮಾತ್ರವಲ್ಲದೆ, ಧರ್ಮದ ಪ್ರತಿಷ್ಠಾಪಕನೂ ಉಪದೇಶಕನೂ ಆತನೆ. ವೇದಮಯ, -ಸಕಲ ವೇದಗಳೂ ಆತನನ್ನೇ ಪ್ರತಿಪಾದಿಸುವವು. [ಶ್ರುತಿ] ಸ್ಮೃತಿ ಗಳಿಗೂ ಆತನೇ ವಿಷಯ. ಭಗವಂತನು ಹೇಳಿದ ಧರ್ಮವನ್ನು [ಸರಿಯಾಗಿ] ತಿಳಿದುಕೊಂಡವರಿಗೆ ಆತನು ಪ್ರಸನ್ನನಾಗುವನು.

ಪರಮ ಪುರುಷಾರ್ಥವನ್ನು ದೊರಕಿಸಿಕೊಡುವದೆ ಭಾಗವತ ಧರ್ಮದ [ಮುಖ್ಯ] ಲಕ್ಷಣ-ಹೆಗ್ಗುರುತು ಆಗಿರುವದು. ಈ ಧರ್ಮವನ್ನು ತಿಳಿಸಿಕೊಡಲ್ಕ ಶ್ರುತಿ-ಸ್ಮೃತಿಗಳೆ ಸಾಧನ [ಜ್ಞಾಪಕ] ಗಳು. ಗುಪಿತ [ರಹಸ್ಯಪೂರ್ಣ] ವಾದ ಭಾಗವತ ಧರ್ಮದ ಬಗ್ಗೆಯೆ ನೀನು ಪ್ರಶ್ನೆ ಮಾಡಿರುವಿ. ಹೀಗೆ ಹೇಳಿ, ಭಾಗವತ ಧರ್ಮದಲ್ಲಿ ಬರುವ ಭಾಗಗಳನ್ನು ತೋರಿಸಿಕೊಡುವರು.

(೧) ಸತ್ಯ, (೨) ದಯಾ, (೩) ಶೌಚ, (೪) ತಪ, (೫) ತಿತಿಕ್ಷಾ, (೬) ಇಜ್ಯಾ, (೭) ಶಮ, (೮) ದಮ, (೯) ಅಹಿಂಸಾ, (೧೦) ಬ್ರಹ್ಮ

ಚರ್ಯ, (೧೧) ತ್ಯಾಗ, (೧೨) ಸ್ವಾಧ್ಯಾಯ, (೧೩) ಆರ್ಜವ, (೧೪) (೭-೧೨-೮) ಸಂತೋಷ, (೧೫) ಸಮದೃಕ್-ಸೇವಾ, (೧೬) ಗ್ರಾಮ್ಯೇಹೋಪರಮ, (೧೭) ಶನೈಃ ನೃಣಾಂ ವಿಪರ್ಯಯಹೇಕ್ಷಾ, (೧೮) ಮೌನ, (೧೯ ಆತ್ಮವಿಮರ್ಶನ (೭-೧೨-೯) (೨೦) ಅನ್ನಾದ್ಯೇಃ ಸಂವಿಭಾಗಃ ಭೂತೇಭ್ಯ ಯಥಾರ್ಹತಃ, (೨೧) ತೇಷು ಆತ್ಮದೇವತಾ-ಬುದ್ಧಿಃ ಸುತರಾಂನೃಷು (೭-೧೨-೧೦)- (೨೨) ಶ್ರವಣ, (೨೩) ಕೀರ್ತನ, (೨೪) ಸ್ಮರಣ, (೨೫ ಮಹತಾಂಗತೇಃ ಸೇವಾ, (೨೬) ಇಜ್ಯಾ, (೨೭) ಅವನತಿಃ, (೨೮) ಸಖ್ಯ (೨೯) ದಾಸ್ಯ, (೩೦) ಆತ್ಮಸಮರ್ಪಣ - ಈ ರೀತಿಯಾಗಿ ಭಾಗವತ ಧರ್ಮ ಲಕ್ಷಣ ಹಾಗೂ ಆ ಧರ್ಮದಲ್ಲಿ ಸಮಾವೇಶವಾಗಿರುವ ವಿಭಾಗಗಳನ್ನು ಹೇ ಯುಧಿಷ್ಠಿರನು ತಿಳಿಯ ಬಯಸಿದ ಧರ್ಮದ ವಿಷಯವನ್ನು ಮುಗಿಸುವರು. 'ಪರಮಾತ್ಮನನ್ನು ಸುಪ್ರೀತನನ್ನಾಗಿ ಮಾಡುವ ಹಾಗೂ ಮೂವತ್ತು ಲಕ್ಷಣ ಗಳಿಂದ ಯುಕ್ತವಾದ ಈ ಭಾಗವತ ಧರ್ಮವೇ ಸಕಲ ಜನರಿಗೂ ಅತಿ ಶ್ರೇಷ ವಾದ ಧರ್ಮವು; ಅದನ್ನೇ ನಿನಗೆ (ಯುಧಿಷ್ಠಿರನಿಗೆ) ಹೇಳಿರುವೆ, - ಎಂದ ವಿಷಯದ ಸಮಾರೋಪ ಮಾಡುವರು. (೭-೧೨-೨) - ಬ್ರಾಹ್ಮಣಾದಿ ನಾಲು ವರ್ಣಗಳ ಜನರಿಗೂ, ಬ್ರಹ್ಮಚರ್ಯಾದಿ ನಾಲ್ಕು ಆಶ್ರಮಗಳನ್ನು ಪಾಲಿಸುವ ರೆಲ್ಲರಿಗೂ ಈ ಭಾಗವತಧರ್ಮವು ಅನ್ವಯಿಸುವದು, ಎಂಬುದಕ್ಕೆ (ಸರ್ವೇಷಾ ನೃಣಾಂ) ಈ ಧರ್ಮವು 'ಸಕಲ ಮಾನವರಿಗಾಗಿ' ಎಂದು ಹೇಳಿರುವರು ಅದರಂತೆ ಭಾಗವತ ಧರ್ಮವೇ 'ಸರ್ವಶ್ರೇಷ್ಠ' (ಪರೋಧರ್ಮಃ) ಎಂದು ಹೇ ರುವದಕ್ಕೆ,-'ಭಾಗವತ ಧರ್ಮಾನುಷ್ಠಾನದಿಂದ ಭಗವಂತನು ಸುಪ್ರೀತನಾಗ ವನು, ಪರಮ ಪುರುಷಾರ್ಥವಾದ ಮೋಕ್ಷವು ದೊರಕುವದು' - ಎಂಬ ಮಾತ ಗಳಿವೆ.-

ಹೀಗೆ ಮೂವತ್ತು ವಿಭಾಗಗಳಾಗಿರುವ ಭಾಗವತ ಧರ್ಮವನ್ನು ಎತ್ತಿ ತೋರಿಸಿದರೆ, (ಜಿಜ್ಞಾಸುಗಳಾದ) ಸಾಧಕರ ಮನಸ್ಸಿನಲ್ಲಿ ಒಂದು ಸಂಶಯ ಬರಬಹುದು. ಅದೇಂದರೆ,- ಭಾಗವತದ ಪ್ರಾರಂಭದಲ್ಲಿ 'ಪ್ರೋಜ್ಝಿತಕೈತವ' ಕಪಟ ವಿಲ್ಲದ ಒಂದೇ ಪರಮಧರ್ಮವೇ ಮುಖ್ಯವಾದುದು, ಜಿಜ್ಞಾಸುಗಳು ಅದನ್ನೇ ತಿಳಿದುಕೊಳ್ಳಬೇಕು. ಮೋಕ್ಷಾರ್ಥಿಗಳು ಅದೇ ಪರಮ ಧರ್ಮವನ್ನು ಆಚರಿಸ ಬೇಕೆಂದು ಹೇಳಿದೆ. (ಮೂವತ್ತು ವಿಭಾಗಗಳ ಉಲ್ಲೇಖವು ಅದರಲ್ಲಿ ಕಂಡುಬರುವದಿಲ್ಲ). ವಿಭಾಗಗಳಿಂದ ಕೂಡಿದ ಭಾಗವತ ಧರ್ಮವೇ ಪರಮ ಧರ್ಮವೆಂದು ಈಗ್ಗೆ ಹೇಳಿರುವದು ಹೇಗೆ ? ಎಂದರೆ, ಅದಕ್ಕೆ ಉತ್ತರ ಹೇಳುವರು 'ನೃಣಾಂ ಅಯಂ ಪರೋ ಧರ್ಮಃ ತ್ರಿಶಂಲಕ್ಷಣ ಸಂಯುತಃ' (೭-೧೨-೧೨

ಜೀವಿಗಳಿಗೆ (ಯಥಾಯೋಗ್ಯ) ಮುಕ್ತಿಯನ್ನು ತಂದು ಕೊಡುವದೇ ಮುಖ್ಯ ಲಕ್ಷಣವಾಗಿರುವ ಹಾಗೂ ಮೂವತ್ತು ವಿಭಾಗಗಳಿಂದ ಯುಕ್ತವಾಗಿರುವ ನಿನಗೆ ಹೇಳಿರುವ ಇದೇ ಭಾಗವತ ಧರ್ಮವೆ, ( ಭಾಗವತದ ಪ್ರಾರಂಭದಲ್ಲಿ ಹೇಳಿರುವ ) ಪರಮ ಧರ್ಮವಾಗಿದೆ. 'ಈ ಮುವತ್ತೂ ಲಕ್ಷಣ (ಅಂಶ) ಗಳಿಂದ ಕೂಡಿದ ಈ ಪರಮ ಧರ್ಮವೆ ಸಕಲ ಮಾನವರಿಗಾಗಿ ಹೇಳಲ್ಪಟ್ಟಿದೆ, ಸರ್ವೇಶನೂ, ಸರ್ವಾಂತರ್ಯಾಮಿಯೂ ಆದ ಪರಮಾತ್ಮನು ಈ (ಭಾಗವತ) ಧರ್ಮದ ಆಚರಣೆಯಿಂದಲೆ ಸುಪ್ರೀತನಾಗುವನು. ಇದಕ್ಕಿಂತಲೂ ಬೇರೆಯಾದ ಯಾವ ಶ್ರೇಷ್ಠ ಧರ್ಮವೂ ಇರುವದಿಲ್ಲ. ಪ್ರಾರಂಭದಲ್ಲಿ ಹೇಳಿದ ಪರಮೋ ಧರ್ಮವೂ, ಮೂವತ್ತು ಅಂಶ ಗಳಿಂದ ಕೂಡಿದ ಪರಮ ಧರ್ಮವು ( ಭಾಗವತ ಧರ್ಮವು ) ಬೇರೆಯಾಗಿಲ್ಲ, ಅವೆರಡೂ ಒಂದೇ ಆಗಿವೆ.

ಈ ಮಾತನ್ನು ನಾವು ಹೇಳುತ್ತಿಲ್ಲ; ಭಾಗವತವನ್ನು ರಚಿಸಿದ ಶ್ರೀ ವೇದ ವ್ಯಾಸರೆ ಅದನ್ನು ಹೇಳಿರುವರು. (ನೃಣಾಮಿತಿ):- ಮೂವತ್ತು ಲಕ್ಷಣಯುಕ್ತ ವಾದ ಹಾಗೂ ಭಗವಂತನ ಪ್ರೀತಿಯನ್ನು ಪಡೆಯುವ ಭಾಗವತ ಧರ್ಮವೇ ನಿಜ ವಾಗಿಯೂ ಭಾಗವತ ಧರ್ಮವೇ ಆಗಿದೆ. "ಧರ್ಮಾನ್ 'ಶ್ರುತಯೆ ಕ್ಷಮಂ' ( ಕೇಳಲು ನಾವು ಪಾತ್ರರಾಗಿದ್ದರೆ, ಭಾಗವತ ಧರ್ಮಗಳನ್ನು ಹೇಳಿರಿ) ಎಂಬ ನಿಮಿರಾಜನ ಪ್ರಶ್ನೆಗೆ, ವೃಷಭರ ನಾಲ್ಕನೇ ಮಗನಾದ ಪ್ರಬುದ್ಧರು ಕೊಟ್ಟ ಉತ್ತರವಿದು. 'ತನಗೆ ದೇವತಾ ಸ್ವರೂಪನಾದ ಸದ್ಗುರುವಿನಿಂದ ಭಾಗವತ ಧರ್ಮಗಳನ್ನು ತಿಳಿದುಕೊಳ್ಳಬೇಕು". ಇತ್ಯಾದಿಯಾಗಿ ಆ ಧರ್ಮವನ್ನು ವಿವರಿಸಿ ಹೇಳುವರು. ಇಷ್ಟೇ ಏಕೆ ? ಇದೇ ಧರ್ಮವು ಭಾಗವತದಲ್ಲಿ ಪ್ರತಿಪಾದಿತವಾಗಿ ರುವದರಿಂದ, ಅಸಂತುಷ್ಟ (ಭಾರತಾದಿ ಅನೇಕ ಗ್ರಂಥಗಳನ್ನು ರಚಿಸಿಯೂ ಅಲಂ ಬುದ್ಧಿಯಾಗದ) ಶ್ರೀ ವೇದವ್ಯಾಸರಿಗೆ ಈ ಭಾಗವತ ಧರ್ಮವನ್ನೇ ವಿವರವಾಗಿ, ನಿಚ್ಚಳವಾಗಿ ಮೇಲೆಯೆ ಒಡೆದು ತೋರುವ ( ಸಮಾಧಿ ) ಭಾಷೆಯಲ್ಲಿ ನಿರೂಪಿಸ ಬೇಕೆಂದು ನಾರದರು ಬಿನ್ನವಿಸಿಕೊಂಡರೆಂತಲೇ ಹೇಳಬೇಕು. ಇಲ್ಲವಾದರೆ, ನಾರದರು ಪ್ರಸ್ತಾಪಿಸಿದ (ತಮಗೆ ಕೇಳಿಕೊಂಡ) ವಿಷಯ ಬೇರೆ, ಶ್ರೀ ವ್ಯಾಸರು ನಿರೂಪಿಸಿದ ವಿಷಯವು ಬೇರೊಂದು, ಎಂಬ ವಿಸಂಗತಿಯು ಉಂಟಾದೀತು. (ಭಾಷೆಯು ಮೂರು ವಿಧ-ಗುಹ್ಯ, ದರ್ಶನ ಹಾಗೂ ಸಮಾಧಿ, ಎಂದು ಮೇಲೆಯೆ ಒಡೆದು ತೋರಿ ಮನಸ್ಸಿನಲ್ಲಿ ಬಿಂಬಿಸುವ ಭಾಷೆಯೆ 'ಸಮಾಧಿ' ಭಾಷೆ. 'ವಿಷ್ಣುಃ ಪರಮಃ' ಎಂದು ವಿಷ್ಣುವಿನ ಸರ್ವೋತ್ತಮತ್ವವು ಕೂಡಲೆ ಮನಸ್ಸಿಗೆ ಹೊಳೆಯು ವಂತೆ ಸ್ಪಷ್ಟ ಶಬ್ದಗಳಲ್ಲಿ ಹೇಳಿಬಿಡುವದೆ 'ಸಮಾಧಿ' ಭಾಷೆಗೆ ಉದಾಹರಣೆ)

ಹೀಗೆ ಹೇಳಿರುವರು :- '(ಉರುಕ್ರಮಸ್ಯ... ಯದ್ವಿಚೇಷ್ಟಿತಮ್')(೧-೭)
ತ್ರಿವಿಕ್ರಮನಾದ ಶ್ರೀ ವಿಷ್ಣು ( ತಾನು ವಿಧಿಸಿರುವ ) ಸಕಲ ಧರ್ಮಗಳ ಉಳಿಯುವಂತೆ ಮಾಡಲು (ಜೀವಿಗಳನ್ನು ಭವ ಬಂಧನದಿಂದ ಬಿಡುಗಡೆ ಮಾಡಲು) ಮಾಡಿದ ಲೀಲಾಕಾರ್ಯಗಳನ್ನು ತಟ್ಟನೇ ತಿಳಿಯುವ (ಸಮಾಧಿ) ಭಾಷೆಯನ್ನ ನಿರೂಪಿಸಿರಿ ( ಎಂದು ) ನಾರದರು ಬಿನ್ನವಿಸಿಕೊಂಡರು. ಇಷ್ಟೇ ಏಕೆ ( ನಾರದರು ) ಪ್ರಸ್ತಾಪಿಸಿದ ಹಾಗೂ ( ಭಗವದವತಾರರಾದ ) ಶ್ರೀ ವ್ಯಾಸರ ನಿರೂಪಿಸಿದ ಧರ್ಮವು (ಪ್ರಾರಂಭದ) 'ಪ್ರೋಜ್ಝಿತ ಕೈತವಃ' ವೆಂಬ ಸಾಕ್ಷಾತ್ ಭಗವಂತನೆ ಹೇಳಿರುವ ಶ್ಲೋಕದಲ್ಲಿ ಪ್ರತಿಪಾದಿಸಿರುವ ಧರ್ಮವೂ ಬೇರೆಯಾಗಿಲ್ಲ ಆವೆರಡೂ ಒಂದೇ ಭಾಗವತ ಧರ್ಮವನ್ನು ಬೋಧಿಸುವವೆಂತಲೇ ಹೇಳಬೇಕಾ ಗುವದು. ಇದಲ್ಲದೆ 'ಧರ್ಮಃ ಪ್ರೋಜ್ಝಿತಕೈತವಃ' (ಕಪಟರಹಿತವಾದ ಧರ್ಮವೇ) ಪರಮ ಧರ್ಮವೆಂದು ಭಗವಂತನು ಪ್ರತಿಪಾದಿಸಿರುವನೆಂಬು (ಪ್ರಾರಂಭದಲ್ಲಿ) ಹೇಳಿದ ಧರ್ಮವೇ ಇಲ್ಲಿ ಹೇಳಿರುವ (ಮೂವತ್ತು ಅಂಶಗಳಿಂದ ಕೂಡಿದ) ಭಾಗವತ ಧರ್ಮವೆಂದು, ( 'ಅಮಾಯಯಾ ......ಹರಿಃ' ನಿಷ್ಕಪಟವಾದ ಸೇವೆಯಿಂದಲೇ ಶ್ರೀ ಹರಿಯು ಸುಪ್ರೀತನಾಗುವನು.) ತೋರಿಸಲು ಭಗವದುಕ್ತಿ (೧೧-೩-೨೩) ಯಾಗಿದೆ. ನಾರದರು ಇದೇ ಭಾಗವನ್ನೇ ಭಗವಂತನ ಗಮನಕ್ಕೆ ತಂದು ಕೊಟ್ಟಿರುವದು. ಇಲ್ಲದಿದ್ದರೆ, 'ದೇವತಾ ಸ್ವರೂಪನಾದ ಸದ್ಗುರುವಿನಿಂದ ಭಾಗವತ ಧರ್ಮಗಳನ್ನು ತಿಳಿದುಕೊಳ್ಳಬೇಕು' ಎಂದು ಉಪದೇಶಿಸಿ, 'ಭಾಗವತ ಧರ್ಮಗಳು ಯಾವವು ?' ಎಂಬ ಸಾಶಂಕ ಪ್ರಶ್ನೆಗೆ 'ಸರ್ವ (ಲೌಕಿಕ) ವಿಷಯ ಗಳಿಂದಲೂ ಮನಸ್ಸಿನ ಆಸಕ್ತಿಯನ್ನು ತೆಗೆದು ಹಾಕುವದು,' ಇತ್ಯಾದಿ ಅಂಶ ಗಳನ್ನು ಭಾಗವತ ಧರ್ಮಗಳೆಂದು ಏಕೆ ಉತ್ತರ ಹೇಳಬೇಕಿತ್ತು ? ಈ ಉತ್ತರವು ಭಾಗವತ ಧರ್ಮಗಳಿಗೆ ಸಂಬಂಧಿಸಿದೆ. ಇಲ್ಲವಾದರೆ ಕೇಳಿದ ಪ್ರಶ್ನೆಗೆ ಕೊಟ್ಟ ಈ ಉತ್ತರವು ನಿರರ್ಥಕವಾಗುತ್ತಿತ್ತು. ಇದೇ ರೀತಿಯಲ್ಲಿ:- ಮುಕ್ತಿಯನ್ನು ಬಯ ಸುವವರಿಗೆ, ಹಾಗೂ ಮುಕ್ತಿಪ್ರಾಪ್ತಿಗೆ ಯಾವ ಸಾಧನಗಳಿರುವವೆಂಬುದನ್ನು ತಿಳಿಯದ ಅಜ್ಞಾನಿಗಳಿಗೆ ಭಗವಂತನು ಹೇಳಿಕೊಟ್ಟ ಸಾಧನಗಳ ಗುಂಪಿಗೇನೆ ಭಾಗವತ ಧರ್ಮಗಳೆಂಬ ಹೆಸರು. ಭಗವಂತನ ಪಾದವನ್ನು ಹೊಂದುವದೇ ಮೋಕ್ಷವಾಗಿದೆ. ಮೋಕ್ಷದ ಪ್ರಾಪ್ತಿಗೆ ಭಗವಂತನ ಪರಮಾನುಗ್ರಹವೇ ಸಾಧನ. ಈಗ್ಗೆ ಹೇಳಿರುವ ಸಾಧನ ( ಭಾಗವತ ಧರ್ಮ ) ಗಳ ಅನುಷ್ಠಾನದಿಂದಲೆ ಭಗ ವಂತನ ಪರಮ ಪ್ರಸಾದ (ಅನುಗ್ರಹ) ದೊರೆಯುವದು. ಭಗವಂತನು ಪ್ರೀತ ನಾಗುವ ರೀತಿಯಲ್ಲಿಯೆ ಭಾಗವತ ಧರ್ಮಗಳನ್ನು ಆಚರಿಸಬೇಕು. ಈ ಆಚರಣೆ ಎರಡು ಮುಖವಾಗಿದೆ :- ಆಚರಣೆಯಲ್ಲಿ ವಂಚಕತನವಿರಬಾರದು, ಎರಡನೆಯ ದಾಗಿ ಅದರಲ್ಲಿ 'ಪರಮತ್ವ' ವಿರಬೇಕು, ಉತ್ಕೃಷ್ಟಮಟ್ಟದ್ದಿರಬೇಕು, ನೀಚತ್ವ

ಹೀನತ್ವಗಳಿಂದ ರಹಿತವಾಗಿರಬೇಕು. ಉದಾಹರಣೆಗಾಗಿ, ದ್ರವ್ಯ - ಸಂತತಿ ನೆ
ಇತ್ಯಾದಿ ದೊರೆಯಬೇಕೆಂದು ಮನಸ್ಸಿನಲ್ಲಿ ಬಯಕೆಯನ್ನು ಕಟ್ಟಿಕೊಳ್ಳುವದು,
'ಶ್ರೀ ವಿಷ್ಣು ಪ್ರೀತಿಗಾಗಿ' ಬ್ರಾಹ್ಮಣ ಭೋಜನ ಮಾಡಿಸುವೆ, ಎಂಬ ಸಂಕಲ್ಪ
ವನ್ನು ಬಾಯಿಂದ ಉಚ್ಚರಿಸುತ್ತ ನೂರಾರು ಬ್ರಾಹ್ಮಣರಿಗೆ ಮತ್ತು ನೂರಾರು
ಉಳಿದ ಆಪ್ತೇಷ್ಟರಿಗೆ ಊಟ ಹಾಕುವದು. ಇದುವೆ ಕೈತವ, ವಂಚನೆ. ಈ
ವಂಚನೆಯಿಂದ ದೂರವಾಗುವದೇ ( ಪ್ರಾರಂಭದಲ್ಲಿ ಹೇಳಿರುವ ) 'ಪ್ರೋಜ್ಝಿತ
ಕೈತವಃ'ವಾಗಿದೆ. ಭಾಗವತ ಧರ್ಮಾಚರಣೆಯ ಇನ್ನೊಂದು ಅಂಗವೆಂದರೆ,
'ಪರಮತ್ವ' ಪರಮ ಪುರುಷಾರ್ಥವಾದ ಮೋಕ್ಷಕ್ಕೆ ಅಡ್ಡಿಯಾಗಿ ಬರುವದೆಲ್ಲವೂ
ನೀಚತ್ವವೆನಿಸುವದು. ಮೋಕ್ಷಕ್ಕೆ ಆತಂಕವಾದುದರ (ನೀಚತ್ವದ) ನಿವಾರಣೆಯೆ
ಪರಮತ್ವ (ಉತ್ತಮತ್ವ) ವೆನಿಸುವದು. ವಂಚಕತ್ವ ಹಾಗೂ ನೀಚತ್ವಗಳನ್ನು
ಬಿಟ್ಟುಕೊಡಬೇಕೆಂಬುವದನ್ನು ಭಾಗವತ ಧರ್ಮದ ನಿರೂಪಣೆಯಲ್ಲಿ ಪ್ರತಿ ಶಬ್ದ
ದಲ್ಲಿಯೂ ಹೇಳಿದೆ. ಕಪಟರಾಹಿತ್ಯ, ಹಾಗೂ ಮೋಕ್ಷಕ್ಕೆ ಆತಂಕವಾಗದಿರುವದು,
ಇವೆರಡೂ ಗುಣಗಳಿಂದ ಯುಕ್ತವಾದ ಧರ್ಮಗಳ ಆಚರಣೆಯೆ ಪುರುಷಾರ್ಥ
ವಾದ ಮೋಕ್ಷಪ್ರಾಪ್ತಿಗೆ ಉಪಾಯ-ಸಾಧನವಾಗಿದೆ. ಈ ಮಾತನ್ನು ಮನಸ್ಸಿ
ನಲ್ಲಿ ಇಟ್ಟುಕೊಂಡೇ 'ಅಮಾಯಯಾ ಅನುವೃತ್ತ್ಯಾ ತುಷ್ಯೇತ್ ಹರಿಃ' ವಂಚನೆ
ಯಿಲ್ಲದ ಉಪಾಸನೆಯಿಂದಲೆ ಪರಮಾತ್ಮನು ಪ್ರೀತನಾಗುವನು [೧೧-೩-೨೩]
ಎಂದು ಹೇಳಿರುವರು :- ಹೀಗೆ ಹೇಳಿರುವರು :- 'ಭಾಗವತಾನ್ ಧರ್ಮಾನ್'
ಹೀಗೆ ಪ್ರಾರಂಭಿಸಿ, ಗುರುಕುಲದಲ್ಲಿ ಕಲಿಯಬೇಕಾದ ಈ ಭಾಗವತ ಧರ್ಮಗಳನ್ನು
ನಿರೂಪಿಸಿರುವರು :- [೧] (ಭಗವಂತನನ್ನು ಬಿಟ್ಟು) ಉಳಿದೆಲ್ಲ ವಿಷಯಗಳಲ್ಲಿಯೂ
ಆಸಕ್ತಿತಾಳದಿರುವದು, [೨] ಭಗವದ್ಭಕ್ತರ ಸಹವಾಸ, [೩] ದಯೆ, [೪] ಅನಿ
ಮಿತ್ತ ಸಹಾಯ ( ಮೈತ್ರಿ ), [೫] ಸರ್ವ ಪ್ರಾಣಿಗಳಲ್ಲಿ ಯಥಾ ಯೋಗ್ಯವಾದ
ನಮ್ರತೆ, [೬] (ಒಳ ಹೊರಗಿನ) ಶುಚಿತ್ವ, [೭] ತಪಸ್ಸು, [೮] ತಾಳ್ಮೆ[ಸಹಿಷ್ಣುತೆ]
[೯] ಮೌನ, [೧೦] ಸ್ವಾಧ್ಯಾಯ, [೧೧] ಆರ್ಜವ, [೧೨] ಬ್ರಹ್ಮಚರ್ಯ,
[೧೩] ಅಹಿಂಸೆ, [೧೪] ಸುಖದುಃಖ ಮೊದಲಾದ ದ್ವಂದ್ವಗಳಲ್ಲಿ ಸಮಬುದ್ಧಿ
[೧೫] ಸರ್ವತ್ರ, ಸರ್ವದಲ್ಲಿ ಪರಮಾತ್ಮನ ಇರುವಿಕೆಯನ್ನು ಕಾಣುವದು,
[೧೬] ಕೈವಲ್ಯ, [೧೭] ಅನಿಕೇತನ, [೧೮] ವಿವಿಕ್ತ [ಏಕಾಂತವಾಸ] [೧೯] ಚೀರ
ವಸನ [೨೦] ಸಂತೋಷ, ಬಂದುದರಲ್ಲಿಯೇ ತೃಪ್ತಿ, [೨೧] ಭಾಗವತ ಶಾಸ್ತ್ರದಲ್ಲಿ
ಶ್ರದ್ಧೆ, [೨೨] ಮನಸ್ಸು ಮಾತು ಹಾಗೂ ದೇಹ ಇವುಗಳ ನಿಗ್ರಹ, [೨ ] ಸತ್ಯ
[೨೫] ಶಮ, [೨೬] ದಮ, [೨೭] ಶ್ರವಣ, [೨೮] ಕೀರ್ತನ, [೨೯] ಶ್ರೀ ಹರಿಯ
ಅದ್ಭುತ ಕೃತಿಗಳು, ಜನ್ಮಕರ್ಮ ಗುಣಗಳು, ಆಚರಿಸಿದ ಅನೇಕ ಲೀಲಾಕೃತಿಗಳು

ಇವುಗಳ ಧ್ಯಾನಮಾಡುವದು, [೩೦] ತಾನು ಮಾಡಿದ ಪೂಜೆ, ದಾನ, ತಪಸ್ಸು, ಜಪ, ಗುಡಿ ಬಾವಿಗಳನ್ನು ಕಟ್ಟಿಸುವ [ಪೂರ್ತ] ಪರೋಪಕಾರದ ಕೃತಿಗಳು, ಹಾಗೂ ತನಗೆ ಪ್ರಿಯರಾದ ಮನೆ ಮಡದಿ ಮಕ್ಕಳು, ತನ್ನ ಪ್ರಾಣವನ್ನೂ ಕೂಡ ಪರಮಾತ್ಮನಿಗೆ ಸಮರ್ಪಿಸುವದು,- ಈ ಭಾಗವತ ಧರ್ಮಗಳನ್ನು ನಿರೂಪಿಸಿರುವರು,

ಈ ರೀತಿಯಾಗಿ ಶ್ರೀಕೃಷ್ಣನನ್ನೇ ತಮ್ಮ ಸ್ವಾಮಿಯಾಗಿ ಮಾಡಿಕೊಂಡಿರುವ ಭಗವದ್ಭಕ್ತರಲ್ಲಿ ಹಾಗೂ ಮಹಾತ್ಮರಾದ ಸಜ್ಜನರಲ್ಲಿ ಸ್ನೇಹ ಹಾಗೂ ಅವರ ಸೇವೆ; ಭಗವಂತನ ಮಂಗಳಕರ ಕೀರ್ತಿಯುಳ್ಳ ಕ್ರೀಡೆ-ಲೀಲೆ-ಆಚರಣೆಗಳನ್ನು ಒಬ್ಬರಿಗೊಬ್ಬರು ಹೇಳುವದು, ಕೇಳುವದು. ಅವುಗಳಲ್ಲಿ ಪ್ರೀತಿ, ಸಂತುಷ್ಟಿ, ಸಂತೋಷಗಳನ್ನು ಪಡೆಯುವದು, ಪಾಪಗಳ ರಾಶಿಯನ್ನೇ ನಾಶಮಾಡಿಸುವ ಶ್ರೀಹರಿಯ ಸ್ಮರಣೆಯನ್ನು ತಾವು ಮಾಡಿ, ಉಳಿದವರಿಗೂ ಸ್ಮರಣೆ ಮಾಡಿಸುವದು, ಇವೆಲ್ಲ ಭಗವದ್ಧರ್ಮಗಳ ಆಚರಣೆಯಿಂದ ಊರ್ಜಿತ ಭಕ್ತಿಯುಳ್ಳವರಾದ ಭಗವದ್ಭಕ್ತರು ರೋಮಾಂಚವುಳ್ಳವರಾಗುವರು. ಈ ರೀತಿಯಲ್ಲಿ ಭಾಗವತ ಧರ್ಮಗಳನ್ನು ಆತ್ಮಸಾತ್ ಮಾಡಿಕೊಂಡು ಅದರಿಂದ ಭಕ್ತಿಯ ಅಭಿವೃದ್ಧಿಯನ್ನು ಮಾಡಿಕೊಂಡು ನಾರಾಯಣನನ್ನೇ ಪೂರ್ಣವಾಗಿ ನಂಬಿದ ಭಕ್ತರು ದಾಟಲು ದುಸ್ತರವಾದ ಭಗವಂತನ ಮಾಯೆಯನ್ನು ( ಈ ಸಂಸಾರದ ಬಂಧನವನ್ನು ) ಸುಲಭವಾಗಿ ತಪ್ಪಿಸಿಕೊಳ್ಳುವರು.

( ೧೧-೩-೨೩ ರಿಂದ ೧೧-೩-೩೪ ರ ವರೆಗೆ

(೧) ಅಥವಾ:- 'ನಾಹಂಕರ್ತಾ .. ಸರ್ವಂಕರ್ಮ ತತ್ಪೂಜಾತ್ಮಕಂ'.... ಸ್ವತಂತ್ರವಾಗಿ ಮಾಡುವವನು ನಾನಲ್ಲ, ಶ್ರೀ ಹರಿಯೆ ಮಾಡುವವನು, ಮಾಡುವ ಕರ್ಮವೆಲ್ಲವೂ ಶ್ರೀ ಹರಿ ಪೂಜೆ, ಎಂಬ ದೃಢವಾದ ನಂಬಿಕೆಯಿಂದ ಆಚರಿಸುವ ಭಾಗವತ ಧರ್ಮವು ಸಂಸಾರಬಂಧನದ ಬಿಡುಗಡೆಗೆ ಸಾಧನವೆಂದು ಹೇಳಿದೆ. ಮುಕ್ತಿಗೆ ಕರೆದೊಯ್ಯಲು ಇದೊಂದೇ ದಾರಿ. ಉಳಿದ ದಾರಿಗಳಂತೆ ಈ ದಾರಿಯು ಕಠಿಣವಾದುದು (ಆತಂಕಗಳುಳ್ಳದ್ದು) ಆಗಿರುವದಿಲ್ಲ. ಈ ಮಾರ್ಗದಲ್ಲಿ ಕಣ್ಣು ಮುಚ್ಚಿಕೊಂಡು ಓಡಿದರೂ ಎಡವುವಂತಿಲ್ಲ, ಬೀಳುವಂತಿಲ್ಲ. ಭಾಗವತ ಧರ್ಮದ ಈ ದಾರಿಯು ಅಷ್ಟೊಂದು ಸುಗಮವಾಗಿದೆ, ಸುರಕ್ಷಿತವಾಗಿದೆ. ಆದುದರಿಂದ ಮುಕ್ತಿಗೆ ತಲುಪಬೇಕೆನ್ನುವ ಮೋಕ್ಷದ ಸಾಧಕರು ಈ ಮಾರ್ಗದಿಂದಲೇ ಮುನ್ನಡೆಯಬೇಕು. ಈ ಅಭಿಪ್ರಾಯದಿಂದ ಈ ಮಾರ್ಗದ ಬಗ್ಗೆ ಗೌರವಭಾವನೆಯನ್ನು ಹುಟ್ಟಿಸಲು- ಈ ಮಾರ್ಗವು ( ಅಪಾತ್ರರಿಗೆ ಹೇಳಬಾರದಷ್ಟು ) ಅತಿ ಗೌಪ್ಯವಾದದು, ಅಲ್ಪ ಪುಣ್ಯವುಳ್ಳವರಿಗೆ ಎಟುಕದಂತಹದು, ಎಂದು ಹೇಳಿರುವರು.

'ಧರ್ಮಂತು' ಎಂಬ ಮಾತಿನಲ್ಲಿ ಭಗವಂತನಿಂದ ರಚಿತವಾದ ಈ ಧರ್ಮವನ್ನು 'ದೇವತೆಗಳೇ ಮುಂತಾದವರು ಕೂಡ ತಿಳಿಯಲಾರರು', ಎಂಬುದು ಈ ಧರ್ಮದ ಗೂಢತೆಯನ್ನು, 'ಪಾಮರರ ಪಾಡೇನು ?' ಎಂಬುದು ಅಲ್ಪ ಪುಣ್ಯವುಳ್ಳವನಿಗೆ ಈ ಭಾಗವತ ಧರ್ಮವು ಸಿದ್ಧಿಸಲಾರದೆಂಬುದು' ಎಂಬುದನ್ನು ಸೂಚಿಸುತ್ತಿವೆ.

ಹೀಗೆ ಹೇಳಿರುವರು:- 'ಯಾನ್ ಆಸ್ಥಾಯ ... ನ ಪತೇತ್' [೧೧-೩-೩ ]

ರಾಜನೆ ! ಈ ಭಾಗವತ ಧರ್ಮಗಳನ್ನು ಅನುಸರಿಸುವ ಮಾನವನು ಎಂದೂ ತಪ್ಪು ಹೆಜ್ಜೆ ಹಾಕುವದಿಲ್ಲ. ಕಣ್ಮುಚ್ಚಿ ಓಡಿದರೂ ಸಹ ಅವನು ಎಡಹುವದಿಲ್ಲ, ಎಡವಿ ಬೀಳುವದಿಲ್ಲ. ಅಥವಾ '[ ಭಗವಂತನ ಹೊರತಾಗಿ ] ಉಳಿದೆಲ್ಲ ವಿಷಯಗಳಲ್ಲಿಯೂ ಆಸಕ್ತಿಯನ್ನು ತಾಳದಿರುವದು'. ಇತ್ಯಾದಿ ಹೇಳಲ್ಪಡುವ [ಮೂವತ್ತು ವಿಧ] ಭಾಗವತ ಧರ್ಮಗಳಲ್ಲಿ ಭಕ್ತಿಯೂ ಸಮಾವೇಶವಾಗಿದೆ, ವ್ಯಾಪಿಸಿದೆ. ಆದುದರಿಂದ ಭಕ್ತಿಯ ಬಗ್ಗೆ ಭಾವನೆಯನ್ನು ಇಲ್ಲಿ ಹೇಳಿಕೊಡುವರು. ಹೀಗೆ ಮಾಡದಿದ್ದರೆ, ಭಕ್ತಿಯನ್ನು ಊರ್ಜಿತಗೊಳಿಸಬೇಕೆಂದೇ ಒಟ್ಟು ಭಾಗವತ ಧರ್ಮಗಳ ಆಚರಣೆ. ಭಕ್ತಿಯೆ ದೂಷಿತವಾದರೆ, ಏನು ಗತಿ ? 'ಇದ್ದೊಬ್ಬ ಮಗಳು ಹಾದಿ [ನೀತಿ] ಬಿಟ್ಟು ನಡೆದರೆ, ಒಟ್ಟು ಸಂಸಾರವೆ ಹಾಳಾಗಿ ಹೋಗುವದು' ಎಂಬ ನಾಣ್ನುಡಿಗೆ ಗುರಿಯಾಗಬೇಕಾದೀತು! ಭಕ್ತಿಯ ಸ್ವರೂಪವು ಹೀಗಿರುವದು:- ಎಲ್ಲ ದೇಹಧಾರಿ [ಜೀವಿ] ಗಳಿಗೆ ಸ್ವಂತದ ಬಗ್ಗೆ ಆಸ್ಥೆ ಆದರವಿರುವದು ಎಲ್ಲರಿಗೂ ಅನುಭವಕ್ಕೆ ಬರುವ ಮಾತು. ಸ್ವಂತದ ಬಗ್ಗೆ ಇರುವ ಆದರವೇ ಪ್ರೇಮ; ಅದಕ್ಕೆ ಭಕ್ತಿಯೆಂಬುದು ಇನ್ನೊಂದು ಹೆಸರು. ಅದಕ್ಕೇನೆ 'ಅನುವೃತ್ತಿ' ಸೇವೆ, ಉಪಾಸನೆಯೆಂತಲೂ ಕರೆಯುವರು. ವೈರಾಗ್ಯವಿಲ್ಲದೆ ಪ್ರೇಮಸ್ವರೂಪವಾದ ಭಕ್ತಿ ಎಂದಿಗೂ ಉಂಟಾಗದು. [ ಭಗವಂತನನ್ನುಳಿದು ] ಉಳಿದೆಲ್ಲ ವಿಷಯಗಳ ಸಂಪರ್ಕ-ಸಹವಾಸಗಳನ್ನು ಬಿಟ್ಟುಕೊಡುವದೇ ವೈರಾಗ್ಯವೆಂದಾಯಿತು. 'ಓಹೊ! ಇದೇನು ಬಹಳ ಸುಲಭವಾದುದು. ಮನೆ ಮಾರು ಬಿಟ್ಟು ಅಡವಿಗೆ ಹೋಗುವ ಮಾತ್ರದಿಂದ ಎಲ್ಲರಿಗೂ ವೈರಾಗ್ಯ ಸಿದ್ಧಿಸಬಹುದಲ್ಲವೆ ? ಇದೇನು ಮಹಾ ? ಎಂದು ಕೇಳುವವರಿಗೆ ಹೀಗೆ ಹೇಳಬೇಕು. ನೀವು ಹೇಳುವದು ತಪ್ಪು. ವೈರಾಗ್ಯವು ಇಷ್ಟು ಸುಲಭವಾದುದಲ್ಲ. ಸಂಗ ಬಿಡುವದು, ಎಂಬಲ್ಲಿ 'ಸಂಗ' ಶಬ್ದಕ್ಕೆ 'ರಾಗ' ಆಸಕ್ತಿಯೆಂಬುದೆ ಉದ್ದೇಶಿತ ಅರ್ಥವಾಗಿದೆ. 'ಸಂಗ' ವೆಂದರೆ, ಸಮೀಪದಲ್ಲಿ ಇರುವದು, ಕೂಡಿಕೊಂಡು ಇರುವದು, ಎಂಬುದು (ಅಸಂಗವೆಂಬಲ್ಲಿ) ಅರ್ಥವಾಗಿಲ್ಲ ಸಂಗ ಶಬ್ದಕ್ಕೆ ಇದೇ ಅರ್ಥವನ್ನು ತೆಗೆದುಕೊಂಡರೆ, ಮನೆ ಮಡದಿಗಳಿಂದ, ಐಹಿಕ ವಿಷಯಗಳಿಂದ ದೂರವಾಗಿ ಇರುವದೆ ವೈರಾಗ್ಯವೆನಿಸಬಹುದಾಗಿತ್ತು. ಆದರೆ

ತಪ್ಪು ಅರ್ಥ. ಸಂಗವೆಂದರೆ 'ರಾಗ'ವು, ರಾಗಕ್ಕೆ 'ಸ್ನೇಹ'ವೆಂತಲೂ ಹೇಳುವರು 'ತನ್ಮಾತ್ರ'ಗಳಾದ ರೂಪ, ರಸ, ಗಂಧ-ಮುಂತಾದವುಗಳ ಸನ್ನಿಧಿಯಿಂದ ದೂ ವಾಗಿರುದಕ್ಕೇನೆ ರಾಗವನ್ನು ಬಿಟ್ಟುಕೊಡುವದು, ಎಂಬ ಅರ್ಥವಿಲ್ಲ. ಅಸಂಗ ವೆಂದರೆ ( ವಿಷಯಗಳಲ್ಲಿ ) ರಾಗವನ್ನು, ಆಸ್ಥೆ-ಆಸಕ್ತಿಯನ್ನು ಬಿಟ್ಟುಕೊಡುವದು, ವಿಷಯಗಳತ್ತ ಮನಸ್ಸು ಎನಿತೂ ಹರಿಯದಂತಾಗುವದು. ಮನಸ್ಸನ್ನು ಸೆಳೆಯುವ ರೂಪ, ರಸ, ಮುಂತಾದವುಗಳಿಂದ ಮನಸ್ಸನ್ನು ಹಿಂದೆಳೆದು ಶ್ರೀ ಹರಿಯ ಕಡೆಗೆ ಅದು ಹರಿಯುವಂತೆ, ಅದರಲ್ಲಿ ಆಸ್ಥೆ ಆನಂದವನ್ನು ಪಡೆಯುವಂತೆ ಮಾಡುವದು. 'ಸರ್ವತೊ ಮನಸಃ ಅಸಂಗಮ್' ಎಂದು ಹೇಳಿರುವಲ್ಲಿ ಇದೇ ಅಭಿಪ್ರಾಯವಿದೆ.

ಪ್ರೇಮವೇ ಭಕ್ತಿಯಾಗಿರಲಿ, ರಾಗವನ್ನು (ಆಸಕ್ತಿಯನ್ನು) ತೊರೆಯುವದೆ ರಾಗ- ವೈರಾಗ್ಯವಿರಲಿ. ಹೀಗಿದ್ದರೂ ವೈರಾಗ್ಯವಿಲ್ಲದಿದ್ದರೆ, ಭಕ್ತಿಯೇ ಉಂಟಾಗುವದಿಲ್ಲವೆಂದು ಹೇಗೆ ಹೇಳುವಿರಿ? ಎಂದು ಕೇಳಿದರೆ ಉತ್ತರವಿದು. 'ಹೊಗೆ ಇದ್ದಲ್ಲಿ ಅಗ್ನಿಯು ಇರುವದು, ಇಲ್ಲದಿದ್ದರೆ ಇರದು' ಎಂಬುದು ತರ್ಕದ ಒಂದು ರೀತಿ. ಇದಕ್ಕೆ ವ್ಯತಿರೇಕವೆನ್ನುವರು. 'ವೈರಾಗ್ಯವಿರುವಲ್ಲಿ ಭಕ್ತಿ, ಇಲ್ಲದಲ್ಲಿ ಭಕ್ತಿಯಿಲ್ಲ' ಎಂಬ ವ್ಯತಿರೇಕ ವಿಧಾನದಿಂದಲೆ, ವೈರಾಗ್ಯವಿಲ್ಲದೆ ಭಕ್ತಿಯು ಉಂಟಾಗದು, ಎಂದು ಹೇಳಿದೆ. ಹೇಯ, (ನಿಂದ್ಯ, ತ್ಯಾಜ್ಯ) ಕೆಟ್ಟ ವಸ್ತುವಿನಲ್ಲಿ (ರಾಗ) ಆಸಕ್ತಿ ಇರುವವನಿಗೆ ಒಳ್ಳೇರು (ಉಪಾದೇಯ) ವಸ್ತುವಿನ ಬಗ್ಗೆ ಪ್ರೇಮ (ಆಸಕ್ತಿ) ಎಂದಿಗೂ ಉಂಟಾಗಲಾರದು. 'ಸರ್ವತಃ ಅಸಂಗಮ್' ಎಂದು ಹೇಳುವಲ್ಲಿ ಇದೇ ಅಭಿಪ್ರಾಯವಿರುವದು. ( ಭಗವಂತನನ್ನು ಬಿಟ್ಟು ಉಳಿದೆಲ್ಲ ವಸ್ತುಗಳ ಬಗ್ಗೆ ಆಸಕ್ತಿಯನ್ನು ತಾಳದಿರುವ ಈ ಅಂಶಕ್ಕೇನೆ ಭಾಗವತ ಧರ್ಮಗಳಲ್ಲಿ ಅಗ್ರ (ಮೊದಲನೆಯ) ಸ್ಥಾನವಿದೆ. [೧] 'ಸರ್ವತಃ ಅಸಂಗ'ವೆಂಬ ಈ ಭಾಗವತ ಧರ್ಮವನ್ನು ಕಲಿಯ (ಆತ್ಮಸಾತ್ ಮಾಡಿಕೊಳ್ಳ) ಬೇಕು.

ಭಾಗವತ ಧರ್ಮಗಳಲ್ಲಿಯೇ ಒಂದೆನಿಸಿದ ಭಕ್ತಿಯನ್ನು ದೃಢಗೊಳಿಸಲು 'ಸರ್ವತಃ ಅಸಂಗ'ವೆಂಬ ಇನ್ನೊಂದರ ನೆರವನ್ನು ಹೇಳುವಿರಾ ? ಎಂದು ಕೇಳುವವರಿಗೆ ಉತ್ತರವಿದು. ನೀವು ಹೇಳುವದು ಸತ್ಯವಾದುದು. ಇದ್ದುದಕಿಂತಲೂ ಭಕ್ತಿಯು ಇನ್ನಿಷ್ಟು ಊರ್ಜಿತವಾಗಬೇಕೆಂಬುದೆ ಇದರ ಅಭಿಪ್ರಾಯವಾಗಿದೆ. ದೆ ಈ ಮಾತನ್ನು ಎಲ್ಲರಿಗಾಗಿ ಹೇಳಿಲ್ಲ, ಹೆಚ್ಚುಕಡಿಮೆ ಭಕ್ತಿವೈರಾಗ್ಯವುಳ್ಳ ಭಿನ್ನವ್ಯಕ್ತಿಗಳ ಪಾತ್ರತೆಗೆ ಅನುಗುಣವಾಗಿ ಈ ಮಾತು ಅನ್ವಯಿಸುವದು. ಈ ಕಾರಣಗಳಿಗಾಗಿ 'ವೈರಾಗ್ಯದಿಂದಲೆ ಭಕ್ತಿಯು ಉಂಟಾಗುವದು' ಎಂದು ಹೇಳುವಲ್ಲಿ ದೋಷವಿಲ್ಲ.

ಭಗವದ್ಭಕ್ತಿಯಿಂದ ಭಗವಂತನ ಪರಮಾನುಗ್ರಹ ಉಂಟಾಗುವದು. ಪರಮಾನುಗ್ರಹದಿಂದಲೆ ಮುಕ್ತಿಯು ದೊರೆಯುವದು. ಮುಕ್ತಿಗಿಂತಲೂ ದುರ್ಮಿಳವಾದ ಬೇರೊಂದು ಪುರುಷಾರ್ಥವೇ ಇಲ್ಲ. ಹೀಗಿರಲು ಇನ್ನುಳಿದ ಭಾಗವತ ಧರ್ಮಗಳನ್ನು ವಿವೇಚಿಸುವ ಮುಂದಿನ ಗ್ರಂಥವೇಕೆ ಬೇಕು ? ಭಕ್ತಿಯ ಸಾಧನಗಳನ್ನು ವಿವರಿಸುವದೇ ಮುಂದಿನ ಗ್ರಂಥದ ಉದ್ದೇಶವೆಂದು ಹೇಳುವದಾದರೆ, 'ಸಂಗಂ' ಈ ಪದ್ಯದಿಂದ ಪ್ರಾರಂಭಿಸಿ 'ಯಥೋಚಿತಂ..' ಎಂಬ ಕೊನೆಯವರೆಗೆ ಹೇಳಿರುವದೆಲ್ಲವೂ ವ್ಯರ್ಥವೆಂದೇ ತೋರುವದು. ಏಕೆಂದರೆ, ಭಕ್ತಿಗೆ ಸಾಧನವೆನಿಸುವ ಯಾವ ಸಂಗತಿಯನ್ನೂ ಈ ಶ್ಲೋಕದಲ್ಲಿ ಹೇಳಿರುವದಿಲ್ಲ. ಅವುಗಳಲ್ಲಿ ಹೇಳಿರುವದೇನೆಂದರೆ ಭಗವದ್ಭಕ್ತರಲ್ಲಿ ಭಕ್ತಿ ಮಾಡಬೇಕೆಂಬುದು ಮಾತ್ರ. 'ಸಂಗ' ಶಬ್ದಕ್ಕೆ 'ರಾಗ' ( ಆಸಕ್ತಿ ) ಯೆಂಬುದು ಉದ್ದೇಶಿತ ಅಪೇಕ್ಷಿತ ಅರ್ಥವಾಗಿದೆ. ಯೆಂಬುದನ್ನು ಎಲ್ಲಿಯೂ ಬಿಡದೆ ಸಂತತವಾಗಿ ಹೇಳುತ್ತ ಬಂದಿದೆ. 'ಸಂಗ' ಶಬ್ದದ ವಿವೇಚನೆಗಾದರೂ ಮುಂದಿನ ಗ್ರಂಥದ ಯಾವ ಪ್ರಯೋಜನವೂ ಇಲ್ಲ. ಏಕೆಂದರೆ, ಭಗವಂತನಲ್ಲಿ ಭಕ್ತಿಯೊಂದು ಇದ್ದರಾಯಿತು, ಅದರಿಂದ ಉಳಿದೆಲ್ಲ ಭಾಗವತ ಧರ್ಮವಗಳನ್ನು ಸಾಧಿಸಿದಂತೆ ಆಗುವದಿಲ್ಲವೆ ?

ಈ ಆಕ್ಷೇಪಕ್ಕೆ ಉತ್ತರವಿದು :- ನೀವು ಎತ್ತಿದ ದೋಷವು ಸರಿಯಾದುದಲ್ಲ ಏಕೆಂದರೆ, ದೋಷರಹಿತವಾಗಿದ್ದರೆ ಮಾತ್ರ ಭಕ್ತಿಯು ಮೋಕ್ಷಕ್ಕೆ ಸಾಧನವಾಗುವದು. ಆದುದರಿಂದ ಭಕ್ತಿಯಲ್ಲಿಯ ಸಂಭವನೀಯ ದೋಷಗಳನ್ನು ತೋರಿಸಿ ಕೊಟ್ಟು, ಅವುಗಳನ್ನು ಹೇಗೆ ನಿವಾರಿಸಬೇಕೆಂಬುವದನ್ನು ವಿವೇಚಿಸಲು, ಮುಂದಿನ ಗ್ರಂಥದ ಅಗತ್ಯವಿದೆ.

ಭಗವಂತನಲ್ಲಿ ಭಕ್ತಿಮಾಡುವಂತೆ; ಭಗವಂತನ ಭಕ್ತರಲ್ಲಿಯೂ ಕೂಡ ಭಕ್ತಿಯನ್ನು ಮಾಡದಿರುವದು, ಅವರನ್ನು ಉಪೇಕ್ಷಿಸುವದು, ಭಕ್ತಿಯಲ್ಲಿಯ ಮುಖ್ಯ ದೋಷವಾಗಿದೆ. ಭಗವಂತನಲ್ಲಿ ಭಕ್ತಿಯನ್ನು ತಾಳಿ, ಆತನ ಭಕ್ತರಲ್ಲಿ ಭಕ್ತಿಯನ್ನು ಮಾಡದಿದ್ದರೆ ಭಗವಂತನ ಅಂಥ ಭಕ್ತರಿಗೆ ಯಾವ ದೋಷವು ತಟ್ಟುವದು ? – ಆತನ ಭಗವದ್ಭಕ್ತಿಯಲ್ಲಿ ಯಾವ ಕೊರತೆ ಉಂಟಾಗುವದು ? – ಎಂದು ಕೇಳಿದರೆ, ಅಂಥ ಭಕ್ತಿಯು ನಮಗೆ ಅಪೇಕ್ಷಿತವಾದ, ವಿಶೇಷತಃ ನಾವು ಬೇಡುತ್ತಿರುವ (ಮುಕ್ತಿರೂಪ) ಫಲವನ್ನು ನನುಗೆ ಅದು ತಂದು ಕೊಡಲಾರದು – ಎಂಬುದೇ ನಮ್ಮ ಉತ್ತರ. ಭಕ್ತಿಯಿಂದಲೆ ಮುಕ್ತಿಯನ್ನು ತಂದು ಕೊಡುವ ಭಗವಂತನ ಪರಮಾನುಗ್ರಹ ದೊರೆಯುತ್ತಿರಲು, ಭಕ್ತರಲ್ಲಿ ಭಕ್ತಿಯಿಲ್ಲದಿದ್ದರೂ, ಹರಿಭಕ್ತಿಯು ಮುಕ್ತಿಯನ್ನೇಕೆ ತಂದುಕೊಡಬಾರದು ? – ಎಂದು

ಕೇಳಿದರೆ, ಅಂಥ ಭಕ್ತಿಯು ಮುಕ್ತಿಗೆ ಹಾದಿಯಾಗುವಂಥ ಭಗವಂತನ ಪರಮಾನುಗ್ರಹವನ್ನು ಕೇವಲ ಹರಿಭಕ್ತರಿಗೆ ತಂದು ಕೊಡಲಾರದು. ಅದಕ್ಕೇನು ಕಾರಣ ? – ಎಂದರೆ, ಅದನ್ನು ತಂದು ಕೊಡುವ ವೈಶಿಷ್ಟ್ಯವು – ಅಗತ್ಯವಾದ ಪಾತ್ರತೆಯು – ಅಂಥ ಭಕ್ತಿಯಲ್ಲಿ ಇರುವದಿಲ್ಲ ಪಾತ್ರತೆ ಏಕಿರಬಾರದು ? – ಎಂದು ಕೇಳಿದರೆ, ಅನುಗ್ರಹ ಪ್ರಾಪ್ತಿಗೆ ಆತಂಕವಾಗಿರುವ ದೋಷವು ಅಂಥ ಭಕ್ತಿಯಲ್ಲಿ ಇರುವದು. ಆದುದರಿಂದ, (ಭಕ್ತರಲ್ಲಿ ಭಕ್ತಿಯಿಲ್ಲದ) ಭಗವದ್ಭಕ್ತಿಯು ನಾವು ವಿಶೇಷವಾಗಿ ಬಯಸುವ (ಮುಕ್ತಿರೂಪ) ಫಲವನ್ನು ತಂದುಕೊಡಲಾರದು. ಈ ವಿಶಿಷ್ಟ ಫಲ ದೊರೆಯಬೇಕಿದ್ದರೆ, (ನಿರ್ದೋಷವಾದ) ವಿಶೇಷ ಭಕ್ತಿಯೇ ಬೇಕಾಗುವದು. ಭಗವದ್ಭಕ್ತರಲ್ಲಿ ಮಾಡಬೇಕಾದ ಭಕ್ತಿಯು ಭಗವದ್ಭಕ್ತಿಯ ಪ್ರಧಾನ ಅಂಗವಾಗಿದೆ. ಈ ಪ್ರಧಾನ ಅಂಗವನ್ನು ಮಾಡದಿದ್ದರೆ, ಭಕ್ತಿಯಲ್ಲಿಯ ದೋಷವು ಹಾಗೆಯೆ ಉಳಿದಂತಾಗುವದು, ಅಂಥ ಸದೋಷ ಭಕ್ತಿಯು ಫಲಪ್ರದವಾಗಲಾರದು. ಆದುದರಿಂದ ಭಾಗವತರ ಬಗ್ಗೆ ಭಕ್ತಿಯಿಂದ ಕೂಡಿದ ಭಗವದ್ಭಕ್ತಿಯೆ ಅಪೇಕ್ಷಿತವಾದ (ಮೋಕ್ಷರೂಪ) ಫಲವನ್ನು ತಂದು ಕೊಡಲು ಸಾಧನವಾಗುವದು. ಈ ಮಾತಿನ ಮನವರಿಕೆ ಮಾಡಿಕೊಡಲು ಗ್ರಂಥವು ಮುಂದೆ ಸಾಗಿರುವದು. ಇನ್ನೊಂದು ಆಕ್ಷೇಪ :– ಮಂತ್ರಿಯಲ್ಲಿ ಹಾಗೂ ರಾಜನಲ್ಲಿ ಭಕ್ತಿಯಿರುವ ಮಾನವನಿಗೂ, (ಗುರುಗಳಾದ) ನಾರದರಲ್ಲಿ, ಹಾಗೂ ಸ್ವಾಮಿಯಾದ ನೃಸಿಂಹನಲ್ಲಿ ಭಕ್ತಿಯನ್ನಿಟ್ಟ ಪ್ರಲ್ಹಾದನಿಗೂ ಭಕ್ತಿಯಿಂದ ಪರಮ ಪುರುಷಾರ್ಥವು ದೊರೆಯಿತು. ಅದಕ್ಕೆ ಪ್ರತಿಯಾಗಿ (ಮಂತ್ರಿಯನ್ನು ಬಿಟ್ಟುಕೊಟ್ಟು) ರಾಜನಲ್ಲಿ ಭಕ್ತಿ ಮಾಡುವ ಪುರುಷನಿಗೆ ಹಾಗೂ ಇಂದ್ರಾದಿ ದೇವತೆಗಳಲ್ಲಿ ಭಕ್ತಿಯನ್ನು ಮಾಡದೆ, [ಕೇವಲ] ಬ್ರಹ್ಮಾದಿ ದೇವತೆಗಳಲ್ಲಿ ಭಕ್ತಿಯನ್ನು ಮಾಡಿದ ಶ್ರೇಷ್ಠ ದೈತ್ಯರಿಗೆ, ಅವರವರ ಭಕ್ತಿಯಿಂದ [ನೀವು ಹೇಳುವಂತೆ] ಅಲ್ಪ ಫಲ [ಸಾಮ್ರಾಜ್ಯ, ಅಧಿಕಾರ ಮುಂತಾದವು] ದೊರೆಯಿತೆಂಬುದನ್ನು, ಭಕ್ತಭಕ್ತಿಸಹಿತವಾದ ಹರಿಭಕ್ತಿಯಿಂದಲೆ ಅಪೇಕ್ಷಿತ [ವಿಶಿಷ್ಟ] ಫಲವು ದೊರೆಯುವದೆಂಬುದನ್ನು ಒಪ್ಪಿಕೊಳ್ಳೋಣ. ಹೀಗಿದ್ದರೂ, 'ಸಾಧುಷು ಸಂಗಂ' ಹರಿಭಕ್ತರ ಬಗ್ಗೆ ಆದರವನ್ನು ತಾಳಬೇಕು, ಎಂಬ ಇಷ್ಟೊಂದು ಮಾತು ಹೇಳಿಬಿಟ್ಟಿದ್ದರೆ ಸಾಕಾಗುತ್ತಿತ್ತು. ಹೀಗೆ ಮಾಡದ್ದರಿಂದ, ಭಾಗವತ ಧರ್ಮದ ಉಳಿದ ಅಂಗಗಳನ್ನು ಹೇಳುವುದು ನಿರರ್ಥಕ, ಎಂಬ ಆಕ್ಷೇಪವನ್ನು ನಿರಾಕರಿಸಿದಂತೆ ಆಗಲಿಲ್ಲ. ನಿಮ್ಮ ಆಕ್ಷೇಪವು ಸರಿಯಾದುದು. ಆದರೆ ಒಂದು ಮಾತನ್ನು ಗಮನಿಸಬೇಕು. ಅದೆಂದರೆ, ಭಗವದ್ಭಕ್ತಿಗೆ ತಟ್ಟಬಹುದಾದ ದೋಷಗಳನ್ನು ತೋರಿಸಿಕೊಟ್ಟು ಅವುಗಳನ್ನು ತಡೆಗಟ್ಟುವಂತೆ ಮಾಡುವದೇ, ಮುಂದಿನ ಗ್ರಂಥದ ಸಮಾನ ಉದ್ದೇಶವಾಗಿದೆ. ಆದುದರಿಂದ ಭಾಗವತ ಧರ್ಮದ ಉಳಿದ ಅಂಗಗಳ ವಿವೇಚನೆಯನ್ನು ಮಾಡುವದರಲ್ಲಿ ಏನೂ ತಪ್ಪಿಲ್ಲ.

ಮತ್ತೆಂದರೆ, ಶರೀರವನ್ನು ತಾಳಿ ಬಂದ ಪ್ರತಿಯೊಬ್ಬ [ಮಾನವ] ಜೀವಿಗೆ ಮಾತ್ರ, ಏಕೆ ಯೆಂಬುದನ್ನು ತಿಳಿಯದೆಯೇ ಸ್ವಂತದ ಬಗ್ಗೆ ಆದರಾಭಿಮಾನವಿರುವದೆಂಬುದು ಎಲ್ಲರಿಗೂ ಅನುಭವಸಿದ್ಧ ಮಾತು. ಈ ಬಗೆಯ ಆದರಾಭಿಮಾನಕ್ಕೆ 'ಭಕ್ತಿ'ಯೆಂದು ಹೇಳುವದು. ಇದೇ ಮೇರೆಗೆ, ಜಗತ್ತಿಗೆ ಒಡೆಯನಾದ ಚಕ್ರವರ್ತಿಯು ತನ್ನ ಮನೆಗೆ ದಯಪಾಲಿಸಿದರೆ, [ಸ್ವಂತದ ಬಗ್ಗೆ ಇರುವ] ಆದರ ಕಿಂತಲೂ ಅನೇಕಪಟ್ಟು ಅಧಿಕವಾದ ಆದರಾತಿಥ್ಯವನ್ನು ಮನೆಯ ಯಜಮಾನನು ಚಕ್ರವರ್ತಿಗೆ ನೀಡುವದು ಕಂಡುಬರುವದು. ಚಕ್ರವರ್ತಿಯಾದ ಮಹಾನುಭಾವನಿಗೆ ಯಥೋಚಿತವಾದ, [ಚಕ್ರವರ್ತಿಗೆ ಅನುರೂಪವಾದ] ಗೌರವವನ್ನು ಸಲ್ಲಿಸುವದೆ ಯಜಮಾನನಿಗೆ ಶಕ್ಯವಿರುವ ಒಂದೇ ಮಾರ್ಗ. ಸ್ಥಾನ ಮಾನಗಳಲ್ಲಿ ಚಕ್ರವರ್ತಿಗಿಂತಲೂ ಕೆಳಗಿನವರಾದ ಮಂತ್ರಿ ಮುಂತಾದ ಅಧಿಕಾರಿಗಳು ಮನೆಗೆ ಬರಲು, ಅವರವರ ದರ್ಜೆಗೆ ಅನುಗುಣವಾದ ಗೌರವವನ್ನು ಸಲ್ಲಿಸುವದೇ ಸಮರ್ಪಕವಾದ ರೀತಿಯಾಗಿದೆ. ಅದಕ್ಕೆ ವಿಪರೀತವಾಗಿ ನಡೆದರೆ [ಮಂತ್ರಿಯಂತೆಯೆ ಚಕ್ರವರ್ತಿಯ ಬಗ್ಗೆ ನಡೆದುಕೊಂಡರೆ, ಆಗುವ ಪರಿಣಾಮವು ತುಂಬಾ ಅನರ್ಥಕಾರಿಯಾದುದು. ಅದರಿಂದ ಚಕ್ರವರ್ತಿಯ ಮಹಾನುಗ್ರಹವು ದೊರೆಯದೆ ಹೋಗುವದು. ಇದೇ ಮೇರೆಗೆ (ಸಕಲ ಲೋಕಗಳಿಗೂ ಸ್ವತಂತ್ರ) ಸಾರ್ವಭೌಮನಾದ ಭಗವಂತನ ವಿಷಯದಲ್ಲಿ, ನಾವು ಸಲ್ಲಿಸಬೇಕಾದ ಆದರವು (ಭಕ್ತಿಯು) ಸ್ವಂತದಬಗ್ಗೆ, ಇಲ್ಲವೆ ತನ್ನವರ ಬಗ್ಗೆ ತಾಳುವ, ಆದರಕ್ಕಿಂತಲೂ ಅನೇಕಪಟ್ಟು ಅತ್ಯಧಿಕವಾಗಿರಬೇಕು. ಭಗವದ್ಭಕ್ತರು ಭಗವಂತನಲ್ಲಿ ಅರ್ಪಿಸುವ ಭಕ್ತಿಯು ಹೆಚ್ಚುಕಡಿಮೆ ಪ್ರಮಾಣಕ್ಕೆ ಅನುಗುಣವಾಗಿ ಅವರವರಿಗೆ ಯಥೋಚಿತವಾದ ಭಕ್ತಿಯ ಕಾಣಿಕೆಯನ್ನು ಸಲ್ಲಿಸಬೇಕು. (ಸ್ಥಾನಮಾನದಲ್ಲಿ) ತನಗಿಂತಲೂ ಹೆಚ್ಚಿನವರಿಗೆ, (ಸ್ವಂತದ ಬಗ್ಗೆ ಇರುವ ಆದರಕ್ಕಿಂತಲೂ) ಹೆಚ್ಚಿನ ಆದರವನ್ನು ತನಗಿಂತಲೂ ಕೆಳಮಟ್ಟದವರಿಗೆ, ಕಡಿಮೆ ಆದರವನ್ನು ತೋರಿಸುವದು ಮನೆಯ ಯಜಮಾನನ ಕರ್ತವ್ಯವಾಗಿದೆ. ಮೇಲಿನವರಿಗೆ ಕಡಿಮೆ, ಕೆಳಗಿನ ಸ್ಥಾನದವರಿಗೆ ಹೆಚ್ಚು ಆದರವನ್ನು ತೋರಿಸುವ ವಿಪರೀತ ಕ್ರಮದಿಂದ ಅಪೇಕ್ಷಿತವಾದ (ಮಹಾಫಲವು) ಅನುಗ್ರಹವು ಎಂದಿಗೂ ದೊರೆಯದು. ಯಾರಿಂದ ಯಾವ ಫಲವನ್ನು ನಾವು ಬಯಸುವೆವೋ, ವಿಶಿಷ್ಟವಾದ ಆ ಫಲವು ದೊರೆಯುವಂತೆ, ಅವರವರಿಗೆ ಯಥೋಚಿತವಾದ ಭಕ್ತಿ-ಆದರಗಳನ್ನು ಸಲ್ಲಿಸುವದು ನಮ್ಮ ಕರ್ತವ್ಯವಾಗಿದೆ.

'ಸಂಗಂ ಚ ಸಾಧುಷು' ಎಂದು ಹೇಳಿದುದರಲ್ಲಿ, ಭಗವದ್ಭಕ್ತರಲ್ಲಿ ತೋರಿಸಬೇಕಾದ (ಸಂಗ-ರತಿ-ಆಸಕ್ತಿರೂಪವಾದ) ಆದರವನ್ನು ನಮಗಿಂತಲೂ ಶ್ರೇಷ್ಠರಾದವರ ಬಗ್ಗೆ ತೋರಿಸಿದರೆ ಅದಕ್ಕೆ 'ಪ್ರಶ್ರಯ' (ಪೂಜ್ಯಭಾವನೆ), ಅದೇ

ಆದರವು ಸರಿಸಮಾನರಲ್ಲಿ 'ಮೈತ್ರಿ' (ಸ್ನೇಹ-ಗೆಳೆತನ) ಎನಿಸುವದು, ಕೆಳಗಿನವರಲ್ಲಿ 'ದಯೆ' ಯೆಂದು ಕರೆಯಲ್ಪಡುವದು. ಇಲ್ಲಿ ಹೇಳಿರುವಂತೆ ನಾವು ತೋರಿಸುವ ಆದರವು ಸ್ಥಾನಮಾನಕ್ಕೆ ಯಥೋಚಿತವಾಗಿದ್ದರೆ ಮಾತ್ರ ಅದಕ್ಕೆ ಅನುರೂಪವಾದ ಫಲವು ದೊರೆಯುವದು. ಹೀಗೆ ಮಾಡದಿದ್ದರೆ, ದೊರೆಯುವ ಫಲವು ಅಲ್ಪವಾಗುವದು. ಅದನ್ನೇ ಹೀಗೆ ಹೇಳಿರುವರು :- 'ದಯಾಂ ... ಯಥೋಚಿತಮ್' (೧೧-೩-೨೩). ಆದುದರಿಂದ ಭಗವದ್ಭಕ್ತರಲ್ಲಿ ಯಥಾಯೋಗ್ಯ ತಾರತಮ್ಯದಿಂದ ಕೂಡಿದ ಭಕ್ತಿಯು ಭಗವಂತನಲ್ಲಿ ನಾವು ಅರ್ಪಿಸುವ ಭಕ್ತಿಯಲ್ಲಿ ಸಮಾವಿಷ್ಟವಾಗಿರಬೇಕು ( ಬೆರೆತುಕೊಂಡಿರಬೇಕು ). ಅಂದರೇನೆ ಅದರಲ್ಲಿ 'ಅಮಾಯಿತ್ವ' ಕಪಟವಿಲ್ಲದಿರುವದು ಸಂಭವಿಸುವದು. ಭಗವದ್ಭಕ್ತರಲ್ಲಿ ಮಾಡಬೇಕಾದ ಭಕ್ತಿಗೂ ಕೂಡ ಈ ತಾರತಮ್ಯದ ತತ್ವವು ಅನ್ವಯಿಸುವದು

ಭಗವಂತನ ಬಗ್ಗೆ ವಿಶಿಷ್ಟ ಭಕ್ತಿಯಾಗಿರಲಿ, ಭಗವದ್ಭಕ್ತರ ಬಗ್ಗೆ ಮಾಡಬೇಕಾದ ವಿಶಿಷ್ಟ ಭಕ್ತಿಯಾಗಿರಲಿ, ಯಥೋಚಿತವಾದ ತಾರತಮ್ಯ ಭಾವನೆಯಿಂದ ಯುಕ್ತವಾಗಿರದಿದ್ದರೆ, ಅಂಥ ಭಕ್ತಿಯು (ಸಮಾಯ) ಮಾಯೆಯಿಂದ-ವಂಚನೆಯಿಂದ ಯುಕ್ತವಾದುದೇ ಆಗುವದು, ಎಂಬ ಮಾತು ಸಿದ್ಧವಾಗುವದರಿಂದ, ನಿಷ್ಕಪಟವಾದ ಉಪಾಸನೆ-ಆರಾಧನೆಯಿಂದಲೆ ಶ್ರೀ ಹರಿಯು ಪ್ರೀತನಾಗುವನು. ವಂಚನೆಯಿಲ್ಲದೆ ಆಚರಿಸುವ ಒಟ್ಟು ಭಾಗವತ ಧರ್ಮಗಳಿಂದ ವಿಶಿಷ್ಟವಾದ (ತಾರತಮ್ಯದಿಂದ ಕೂಡಿದ) ಭಕ್ತಿಯೂ ಉಂಟಾಗುವದಲ್ಲದೆ, ಭಾಗವತ ಧರ್ಮಗಳ ಅನುಷ್ಠಾನವು ಸಾರ್ಥಕವಾಗುವದು, ಅಪೇಕ್ಷಿತ ಫಲವನ್ನು ಕೊಡುವದು. ಹೀಗೆ ಮಾಡಿದರೆ ('ಇದ್ದೊಬ್ಬ ಮಗಳು ಅಡ್ಡದಾರಿ ಹಿಡಿದರೆ ') ಎಂದು ಹಿಂದೆ ಉದಹರಿಸಿದ ಗಾದೆಯ ಮಾತು ನಿಷ್ಕಪಟ ಭಕ್ತಿಗೆ ಅನ್ವಯಿಸದಂತಾಗುವದು. ನಿಷ್ಕಪಟವಾದ ಭಗವದ್ಭಕ್ತಿಯನ್ನೇ ಮಾಡುವದು ಕರ್ತವ್ಯ. ಹೀಗೆ ಮಾಡದಿದ್ದರೆ ಅಪೇಕ್ಷಿತವಾದ (ವಿಶೇಷ ಗುಣದಿಂದ ಕೂಡಿದ) ಭಗವಂತನ ಅನುಗ್ರಹವು ಆಗದೇ ಹೋದೀತು. ವಿಶಿಷ್ಟ ಫಲವು ದೊರೆಯಲೆಂದು, 'ಹೀಗಿರಬೇಕು', ಎಂದು ಹೇಳಿದ ರೀತಿಯಲ್ಲಿಯೆ ಭಗವದ್ಭಕ್ತಿಯನ್ನು ಮಾಡಬೇಕು. ಎಂದು ಹೇಳಿದಾಗ್ಗೆ, ಒಂದು ಸಂದೇಹವು ಮುಂದೆ ಬರುವದು. ಅದೆಂದರೆ, (ನಿಷ್ಕಪಟವಾಗಿರಬೇಕು) ಎಂದು ಹೇಳಿದ ರೀತಿಯಲ್ಲಿ ಭಗವದ್ಭಕ್ತಿಯನ್ನು ಮಾಡದಿದ್ದರೆ, ಅದರಿಂದ ಅಪೇಕ್ಷಿತ ಫಲವು ಹೇಗೆ ಲಭಿಸುವದಿಲ್ಲವೊ, ಭಾಗವತರ ಬಗ್ಗೆ ಭಕ್ತಿಯನ್ನು ಹೇಳಿದ ರೀತಿಯಂತೆ ಮಾಡದಿದ್ದರೆ, ಅದರಿಂದಲೂ ಅಪೇಕ್ಷಿತ ಫಲವು ದೊರೆಯಲಿಕ್ಕಿಲ್ಲ.' ಈ ಸಂದೇಹಕ್ಕೆ ಉತ್ತರವೆಂದರೆ, 'ನಿಮ್ಮ ಸಂದೇಹವನ್ನು ಯಾರೂ ಅಲ್ಲಗಳೆಯಲಾರರು.

ಹಾಗಾದರೆ, ಭಾಗವತರ ಬಗ್ಗೆ ಮಾಡುವ ಭಕ್ತಿಯೂ ಈ ರೀತಿಯದೇ ಆಗಿರಬೇಕೆಂದು ಹೇಳಬೇಕಾಗಿತ್ತಲ್ಲ ? ಎಂದರೆ, ಹಾಗೆ ಹೇಳಿಯೆ ಬಿಟ್ಟಿರುವೆವು. ಭಗವದ್ಭಕ್ತಿಯ ಬಗ್ಗೆ ಹೇಳಿದುದೆಲ್ಲವೂ ಭಾಗವತರ ವಿಷಯಕ್ಕಿರುವ ಭಕ್ತಿಗೆ ಸಮಾನವಾಗಿ ಅನ್ವಯಿಸುವದು. ಮತ್ತೊಬ್ಬರಿಂದ ತನಗೆ ಎಳ್ಳಷ್ಟಾದರೂ ಪ್ರಯೋಜನವಿಲ್ಲದಿದ್ದರೂ (ಏನನ್ನೂ ಬಯಸಬೇಕಾಗಿರದ್ದರೂ,) ಅ ವ ರಿಂ ದ (ವಿಶುದ್ಧ) ಭಕ್ತಿಯನ್ನೊಂದೇ ಅಪೇಕ್ಷಿಸಿ ಶ್ರೀಹರಿಯು ತನ್ನ ಭಕ್ತರಿಗೆ (ಭಕ್ತಿಗೆ ಅನುಗುಣವಾದ) ಪುರುಷಾರ್ಥವನ್ನು ಕೊಡುವನು. ಹೀಗಿರಲು, ಹುಬ್ಬು ಹಾರಿ ಸಲು (ಕಣ್ಣೆವೆ ಹಾಕಲು) ಕೂಡ ಭಗವಂತನ (ಕರುಣೆಯನ್ನು) ಅಪೇಕ್ಷಿಸುವ ಭಗವಂತನ ಭಕ್ತರು ತಮ್ಮ ಅನುಯಾಯಿಗಳಲ್ಲಿ ಭಗವಂತನ ಬಗ್ಗೆ (ಶುದ್ಧ ವಾದ) ಭಕ್ತಿಯನ್ನು ಅಪೇಕ್ಷಿಸದೆಯೆ ಅವರಿಗೆ ಪುರುಷಾರ್ಥವನ್ನು ಕೊಡಲು ಹೇಗೆ ಸಮರ್ಥರಾಗುವರು ? – ಎಂದು ಹೇಳಬೇಕಿಲ್ಲ. ಈ ಭಕ್ತಿಯು ಯಥಾ ಯೋಗ್ಯ ತಾರತಮ್ಯ ಭಾವನೆಯಿಂದ ಯುಕ್ತವಾಗಿರಬೇಕೆಂಬುದನ್ನು ಈ ಮೊದಲೆ ಹೇಳಿಬಿಟ್ಟಿದೆ. ಭಗವಂತನಲ್ಲಿ ಮಾಡುವ ಭಕ್ತಿಗೆ ಇಂತಿಷ್ಟು ಯೆಂಬ ಕೊನೆಯಿಲ್ಲ, ಅದು ನಿರವಧಿಕವಾದುದು; ಆದರೆ ಭಗವಂತನ ಭಕ್ತರಲ್ಲಿ ಇಡುವ ಭಕ್ತಿಯಲ್ಲಿ 'ತಾರತಮ್ಯ' ಇರಲೇಬೇಕು, ಅದು ಪಾತ್ರತೆಗೆ ಉಚಿತವಾಗಿರಬೇಕು. ಹೀಗಿ ದ್ದರೇನೆ ಆ ಭ ಕ್ತಿ ಯ ಲ್ಲಿ 'ಅಮಾಯತ್ವ' – ನಿಷ್ಕಾಪಟ್ಯವು – ಒದಗುವದು. ಭಗವದ್ಭಕ್ತಿಯನ್ನಾಗಲಿ, ಇಲ್ಲವೆ ಭಗವಂತನ ಭಕ್ತರಲ್ಲಿ ಮಾಡುವ ಭಕ್ತಿಯ ಲ್ಲಿಯ ತಾರತಮ್ಯವನ್ನಾಗಲಿ, ಇವೆರಡರಲ್ಲಿ ಯಾವುದನ್ನು ಬಿಟ್ಟರೂ, ಅಂಥ ಭಕ್ತಿಯು 'ಸಮಾಯ' ವಾಗುವದು, ಕಪಟ ಭಕ್ತಿಯಾಗುವದು. – ಭಗವದ್ಭ ಕ್ತರಲ್ಲಿ ಮಾಡುವ ಭಕ್ತಿಯು ತನ್ನಿಂದ ತಾನೇ ಪುರುಷಾರ್ಥವನ್ನು ಕೊಡಲಾ ರದು; ಭಗವಂತನ ಪರಮಾನುಗ್ರಹದ ಮುಖಾಂತರವೆ (ಅನುಗ್ರಹವನ್ನು ಪಡೆ ದುಕೊಂಡೇ) ಪುರುಷಾರ್ಥವನ್ನು ಕೊಡುವದೆಂದು ಈ ಮೊದಲೆ ಹೇಳಿದೆ. – ಅದು ದರಿಂದ ಭಗವದ್ಭಕ್ತರಲ್ಲಿ ವಹಿಸುವ ಭಕ್ತಿಯ ನೆರವಿನಿಂದಲೆ ಪುರುಷಾರ್ಥವನ್ನು ಪಡೆಯ ಬಯಸುವ ಭಗವಂತನ ಭಕ್ತರೂ ಕೂಡ, ಭಾಗವತರನ್ನು (ಭಗವ ದ್ಭಕ್ತರನ್ನು) ನಿಷ್ಕಪಟವಾದ ಭಕ್ತಿಯಿಂದಲೆ ಸೇವಿಸಬೇಕು. ಅಂಥ ನಿಷ್ಕಪಟ ಭಕ್ತಿಯಿಂದಲೆ ಶ್ರೀಹರಿಯು ಪ್ರೀತನಾಗುವನು. 'ಅಮಾಯಯಾ ಅನುವೃತ್ತ್ಯಾ ತುಷ್ಯೇತ್.... ಹರಿಃ ? (೧೧–೩–೨೩) ನಿಷ್ಕಪಟ ಆರಾಧನೆ (ಭಕ್ತಿ) ಯಿಂದಲೆ ಶ್ರೀಹರಿಯು ಪ್ರೀತನಾಗುವನು – ಎಂಬುದನ್ನು ಈ ಮಾತಿನ ಮನವರಿಕೆಗಾಗಿಯೆ ಹೇಳಿರುವರು. –

**ಅರ್ಥ :**– ಇನ್ನು ಮೇಲೆ ಹೇಳಲಿರುವ ಭಗವದ್ಭಕ್ತಿಯಲ್ಲಿಯೂ, ಈಗ ಇಲ್ಲಿ ಹೇಳಿರುವ ಭಕ್ತರ ವಿಷಯದಲ್ಲಿಯ ಭಕ್ತಿಯಲ್ಲಿಯೂ – ಅವೆರಡೂ ಹೇಗಿರಬೇಕೆಂಬ ರೂಪು – ರೀತಿಗಳನ್ನು ಹೇಳಿದ್ದಾಯಿತು. ಅಂಥ ಭಕ್ತಿಯಿಂದ ಮಾಡುವ ಪೂಜಾ-ಆರಾಧನೆಗಳೂ (ಭಕ್ತಿಯಂತೆಯೆ) ನಿಷ್ಕಪಟವಾಗಿರಬೇಕೆಂಬುದನ್ನು ನೆನಪಿಗೆ ತಂದು ಕೊಡಲು.–'ನಿಷ್ಕಪಟ ಆರಾಧನೆಯಿಂದಲೆ ಶ್ರೀಹರಿಯು ಸಂತುಷ್ಟನಾಗುವನು '– ಎಂದು ಶ್ರೀ ಮದ್ಭಾಗವತದಲ್ಲಿ ಹೇಳಿರುವರು.– 'ಅಮಾಯಿತ್ವ' ವೆಂದರೇನೆಂಬುವದನ್ನು 'ಪ್ರೋಜ್ಝಿತಕೈತವ' ನಿಷ್ಕಪಟವೆಂದರೆ, ಯಥಾಯೋಗ್ಯ ತಾರತಮ್ಯ ಭಾವನೆಯಿಂದ ಕೂಡಿರುವದೆಂಬುದನ್ನು ಈ ಮೊದಲು ವಿವರಿಸಿದೆ.

ಅಥವಾ, ('ಆತ್ಮಾತ್ಮೀಯ ಸಮಸ್ತವಸ್ತುಭ್ಯ ') ತಾನು, ತನ್ನವರು, ತನ್ನದೆಲ್ಲವುಗಳಿಗಿಂತಲೂ ಅನೇಕಪಟ್ಟು ಹೆಚ್ಚಾಗಿರುವ ಆದರವೇ ಭಕ್ತಿಯ ಸ್ವರೂಪವೆಂಬುದನ್ನು ತೋರಿಸಿಕೊಟ್ಟು, ಇಂಥ ಭಕ್ತಿಯ ಮಾರ್ಗದಿಂದಲೆ, ಅಪೇಕ್ಷಿತ ಪುರುಷಾರ್ಥವನ್ನು ಪಡೆಯಲೆತ್ನಿಸುವವನು, ತನ್ನ ಭಕ್ತಿಗೆ ಯಾವ ದೋಷವೂ ಸೋಂಕದಂತೆ ನೋಡಿಕೊಳ್ಳಬೇಕು ಹೀಗೆ ಮಾಡದಿದ್ದರೆ, ಅಪೇಕ್ಷಿತ ಪುರುಷಾರ್ಥವು ಎಂದಿಗೂ ದೊರೆಯದು.

'ಅಮಾಯಯಾ', ಇಲ್ಲಿ, 'ಮಾಯಾ' ಶಬ್ದಕ್ಕೆ (ಪುರುಷಾರ್ಥ ಪ್ರಾಪ್ತಿಗೆ) ಪ್ರತಿಬಂಧಕ (ಅಡ್ಡಿಯಾಗುವ) ಶಕ್ತಿಯೆಂಬ ಅರ್ಥವಿರುವದು. 'ದೃಷ್ಟ್ವಾಸ್ತ್ರಿಯಂ ದೇವಮಾಯಾಂ' (ದೇವ ಮಾಯೆಯಾದ ಸ್ತ್ರೀಯನ್ನು ಕಂಡು) ಎಂಬ ಭಾಗವತ ವಾಕ್ಯದಲ್ಲಿಯೂ ಮಾಯಾ ಶಬ್ದವು ಇದೇ ಅರ್ಥ ಕೊಡುವದು.

ಮೋಹವನ್ನು ಹುಟ್ಟಿಸುವದೇ ಮಾಯೆ. ( ಮೋಹಕಾರಣ ಭೂತಾ ..... ಮಯಾ) ಯೆಂದು ಬಲ್ಲವರು ಹೇಳಿರುವರು. ಪ್ರತಿಬಂಧಕವಾಗಿರುವ ಕಾಪಟ್ಯವಿಲ್ಲದ ಭಕ್ತಿಯಿಂದಲೆ, ಶ್ರೀ ಹರಿಯು ಸುಪ್ರೀತನಾಗುವನು, ತನ್ನನ್ನೇ ಕೊಡುವನು, ತನ್ನ ಸಾಕ್ಷಾತ್ಕಾರವನ್ನು ಅನುಗ್ರಹಿಸುವನು. ಇಲ್ಲಿ ಮಾಯೆಯೆಂದರೆ (ಅದ್ವೈತಿಗಳ) ಮಿಥ್ಯಾ ಆಗಿಲ್ಲ. ಅದು ಮೋಹವನ್ನು ಹುಟ್ಟಿಸುವ ಶಕ್ತಿ, ಇಲ್ಲದ್ದನ್ನು ಇದೆಯೆಂದು ಮನಸ್ಸಿಗೆ ತಂದುಕೊಡುವ ಶಕ್ತಿ. 'ನಾನು' ಎಂಬ ಅಹಂಕಾರ, 'ನನ್ನದು' ಎಂಬ ಮಮಕಾರ, ಇವು ಮಾಯೆಯ ಎರಡು ಮುಖಗಳು. ಮಾಯಾರಹಿತವಾದ ಭಕ್ತಿಯಿಂದಲೆ ಮಾತ್ರ ಸಂತುಷ್ಟನಾದ ಭಗವಂತನು ಆತ್ಮಸಾಕ್ಷಾತ್ಕಾರ ಮಾಡುವನು. ಇಲ್ಲವಾದರೆ ಮಾಡಿಸುವದಿಲ್ಲ. ಈ ಬಗ್ಗೆ ಇನ್ನೂ ಹೆಚ್ಚಾಗಿ ಹೇಳಬೇಕಾದುದನ್ನು ಮುಂದೆ ಹೇಳುವರು.

ಅಥವಾ, 'ತತ್ರ ಭಾಗವತಾನ್ ಧರ್ಮಾನ್ ಶಿಕ್ಷೇತ್'- ಭಾಗವತ ಧರ್ಮ ಗಳನ್ನು ಯಾವ ರೀತಿಯಲ್ಲಿ ಕಲಿಯಬೇಕೆಂದು ಕೇಳುವವರಿಗೆ ಉತ್ತರ ಹೇಳುವರು:

'ಅಮಾಯಯಾ'- ಭಾಗವತ ಧರ್ಮಗಳನ್ನು (ಅಮಾಯಯಾ) ನಿಷ್ಕಪಟ ವಾಗಿ ಆಚರಿಸುವ ಸೇವೆಯಿಂದ, ಅಂತರಂಗದಲ್ಲಿ ನಿಂತು ಜ್ಞಾನ ಕೊಡುವ ಕಾರಣದಿಂದ, 'ಆತ್ಮಾ' ಎಂದು ಕರೆಯಲ್ಪಡುವ ಶ್ರೀಹರಿಯು ತನ್ನನ್ನೇ ಕೊಡು ವವನಾಗಿ ಸಂತುಷ್ಟನಾಗುವನು. ಆದುದರಿಂದ ಮೋಕ್ಷ ಪ್ರಾಪ್ತಿಗೆ ಸಾಧನ ವಾಗಿರುವದೇ ಭಾಗವತ ಧರ್ಮದ ಲಕ್ಷಣವಾಗಿದೆ. ಆಚರಣೆಯಿಂದಲೇ ಅಲ್ಲ, ಆದರೆ ಭಾಗವತ ಧರ್ಮಗಳ ಅನುಷ್ಠಾನದಿಂದ ಅಂತರಂಗದಲ್ಲಿ ಜನಿಸುವ ಜ್ಞಾನದ ಬಲದಿಂದ. -ತನ್ನ ಅಂಗಸಹಿತವಾದ ಭಾಗವತ ಧರ್ಮದ ಲಕ್ಷಣವನ್ನು ಹೇಳಿ, ಈ ಭಾಗವತ ಧರ್ಮವು ಮೂವತ್ತು ಲಕ್ಷಣಗಳಿಂದ ಕೂಡಿದ್ದಾಗಿದೆ. ಈ ಲಕ್ಷಣ ಗಳೇ ಭಾಗವತ ಧರ್ಮದ ಅಂಗೋಪಾಂಗಗಳು. ಅವುಗಳನ್ನು ಒಂದೊಂದಾಗಿ ನಿರೂಪಿಸುವರು.

(1) -ಸರ್ವತಃ ಇತಿ :- ವಿಷಯಗಳ ಬಗ್ಗೆ ಎಲ್ಲ ಬಗೆಯಿಂದಲೂ ಮನಸ್ಸಿನಲ್ಲಿ ಆಸಕ್ತಿಯನ್ನು ತಾಳದಿರುವದು- (ಭಾಗವತ ಧರ್ಮದ) ಈ ಲಕ್ಷಣವನ್ನು ಅರಿತು ಕೊಳ್ಳಬೇಕು. (೧):- ( ಉಳಿದೆಲ್ಲ ಅಂಗಗಳ ನಿರೂಪಣೆಯಲ್ಲಿಯೂ ಈ ಮಾತನ್ನು ಮೊದಲಿಗೆ ಜೋಡಿಸಿಕೊಳ್ಳಬೇಕು. ) ವಿಷಯಗಳ ಬಗ್ಗೆ ಸರ್ವಥಾ ಸರಿಪೂರ್ಣ ವಾಗಿ ಆಸಕ್ತಿ ಇಲ್ಲದಿರುವದೆಂಬುದಕ್ಕೆ- ಪರಮಾತ್ಮನ ಗುಣ, ಸ್ವರೂಪ, ಮಹಿಮೆ ಗಳ ಬಗ್ಗೆ ಚಿಂತಿಸುವದು, ಆಲೋಚಿಸುವದು, ಎಂಬುದೇ ಅಭಿಪ್ರಾಯವಾಗಿದೆ. ಈ ಬಗೆಯ ವಿಮರ್ಶೆಯೆ ಅಧ್ಯಾತ್ಮವಿಚಾರವೆನಿಸುವದು. ಇಂದ್ರಿಯ ವಿಷಯ ಗಳಲ್ಲಿ ಆಸಕ್ತಿಯನ್ನು ಪೂರ್ಣವಾಗಿ ಬಿಟ್ಟು ಕೊಟ್ಟಾಗಲೆ ಮಾತ್ರ, ಅಧ್ಯಾತ್ಮ ಜ್ಞಾನವು ಉದಯಿಸುವದು, ಅದರ ಅರಿವು ಮೂಡುವದು - ಇದನ್ನು ಸೂಚಿ ಸಲೆಂದೇ 'ಅಸಂಗ' ವೆಂಬ ಈ ಅಂಗವನ್ನು ಮೊದಲಿಗೆ ಎತ್ತಿಕೊಂಡಿರುವದು. ಭಕ್ತಿಗೆ ಮುಖ್ಯ ಸಾಧನವೆಂದು ಈ ಅಸಂಗವನ್ನು ಮೊದಲು ಪಡೆದುಕೊಳ್ಳ ಬೇಕು, ( ಯಥಾಶಕ್ತಿ ) ಭಗವಂತನ ಮಹಿಮೆಯನ್ನು ತಿಳಿದು ಭಗವಂತನಲ್ಲಿ ಇಡುವ ಪ್ರೀತಿಗೇನೆ ಭಕ್ತಿಯೆನ್ನುವರು. ಭಕ್ತಿಯನ್ನು ಹುಟ್ಟಿಸಲೆಂದೇ ಭಗವಂತನ ಮಹಿಮೆಯ ನಿರೂಪಣೆ. ಇದು ಸಿದ್ಧವಾದ ಸಂಗತಿಯೆ ಆಗಿದೆ. ಅಧ್ಯಾತ್ಮ ಪ್ರಕ ರಣದ ೨೨ ನೇ ಶ್ಲೋಕದಲ್ಲಿ ಈ ಮಾತನ್ನು ಹೇಳಿದೆ. ಭಗವನ್ಮಹಿಮೆಯನ್ನು ಅರಿತುಕೊಂಡು ಭಗವಂತನಲ್ಲಿ ಸುದೃಢವಾದ ಪ್ರೀತಿ (ಸ್ನೇಹ) ಉಂಟಾದ ನಂತರವೆ ವೈರಾಗ್ಯದ ಉತ್ಪತ್ತಿಯಾಗುವದೆಂದು ಅಭಿಪ್ರಾಯ. 'ಅಸಂಗ'ವೆನ್ನುವ ಬದಲಾಗಿ 'ವೈರಾಗ್ಯ'ವೆಂದು ಹೇಳಬಹುದಾಗಿತ್ತು. ಆದರೆ, ಪರಮಾತ್ಮನಲ್ಲಿ ಸುದೃಢವಾದ

ಸ್ನೇಹ ಹಾಗೂ ವೈರಾಗ್ಯ, ಇವೆರಡನ್ನೂ ಒತ್ತಟ್ಟಿಗೆ ಬೆರಿಸಬೇಕೆಂತಲೆ 'ಮನಸ್ಸಿನ ಅಸಂಗ' (ಅಸಕ್ತಿಯಿಲ್ಲದಿರುವದು) ಎಂದು ಹೇಳಿರುವರು. ಇದನ್ನು ಮನಸ್ಸಿನಲ್ಲಿ ಇಟ್ಟುಕೊಂಡೇ ಹೇಳಿರುವರು :- 'ಆತ್ಮವಿಮರ್ಶನ ಮಿತಿ' ಅಸಂಗಕ್ಕೆ 'ಯಮ' ವೆಂದು ಇನ್ನೊಂದು ಹೆಸರು. ಆದರಿಂದ ಈ ಗುಣವು ಅಸಂಗ-ವೈರಾಗ್ಯಗಳೆರಡರಲ್ಲಿಯೂ ಸೇರಿದಂತಾಯಿತು. (೧) ಇಲ್ಲಿ ಒಂದು ಆಕ್ಷೇಪ :- ಭಾಗವತ ಧರ್ಮದ ಆಚರಣೆಯು ಮೋಕ್ಷಪ್ರಾಪ್ತಿಗೆ ಸಾಧನವೆಂದು ಹೇಳಿರುವಿರಿ. ಈ ಭಾಗವತ ಧರ್ಮದ ಅನುಷ್ಠಾನದಿಂದ ಜ್ಞಾನಭಕ್ತಿ ವೈರಾಗ್ಯ ಆತ್ಮವಿಮರ್ಶನ ಮೊದಲಾದ ಮುಕ್ತಿ ಸಾಧನಗಳ ಸಮೂಹವೆಲ್ಲ ಹೇಗೆ ಒದಗುವವು ? ಈ ಪ್ರಶ್ನೆಗೆ ಉತ್ತರವೆಂದರೆ, ಸಾಧುಸಂಗವೆ, ( ಮೋಕ್ಷಪ್ರಾಪ್ತಿಗೆ ) ಮುಖ್ಯ ಸಾಧನವಾಗಿದೆ.

2 ಸಂಗಮಿತಿ (೨) ಸಾಧುಗಳಾದ ಭಗವದ್ಭಕ್ತರ ಸಹವಾಸ, ಸಮಾಗಮವೆ (ಮುಕ್ತಿಗೆ) ಸಾಧನವೆಂಬುದನ್ನು ಅರಿತುಕೊಳ್ಳಬೇಕು. ಭಾಗವತರ ಸಹವಾಸವೇ ಜ್ಞಾನಭಕ್ತಿ ಮುಂತಾದ, ಮುಕ್ತಿಯ ಸಕಲ ಸಾಧನಗಳನ್ನು ತಂದುಕೊಡುವದು. (ಮಹತ್ಸಮಾಗಮ ಪ್ರಕರಣದ ೧೧೧ನೇ ಶ್ಲೋಕದ ಟಿಪ್ಪಣಿಯಲ್ಲಿ ಈ ಮಾತನ್ನು ಹೇಳಿದ್ದಾಗಿದೆ) 'ಸಂಗ'ವೆಂದ ಶಬ್ದದಿಂದ ಇಲ್ಲಿ, ಭಾಗವತರ ಸಮಾಗಮ ಹಾಗೂ ಭಾಗವತರಲ್ಲಿ ಭಕ್ತಿ, ಎಂಬ ಇವೆರಡೂ ಅರ್ಥಗಳನ್ನು ಹೇಳಿಕೊಡುವದು ಉದ್ದೇಶವಾಗಿದೆ. ಆ ಉದ್ದೇಶದಿಂದಲೆ, 'ಸಂಗತಿ' ಮುಂತಾದ ಶಬ್ದಗಳನ್ನು ಬಿಟ್ಟು ಕೊಟ್ಟು, ( ಇವೆರಡೂ ಅರ್ಥಗಳನ್ನು ಕೊಡುವ ) 'ಸಂಗ'ವೆಂಬ ಶಬ್ದವನ್ನೇ ( ಆಯ್ದು ) ಬಳಸಲಾಗಿದೆ 'ದಯಾ, ಮೈತ್ರಿ, ಪ್ರಶ್ರಯ'ಗಳೆಂದು ಸಂಗದ ಮೂರು ಪ್ರಕಾರಗಳನ್ನು ಹೇಳಿದ ನಂತರ ಸಂಗದ ಬಗ್ಗೆ ಎಲ್ಲವನ್ನೂ ಹೇಳಿದಂತಾಯಿತು. 'ಸಂಗ'ದ ಪ್ರಸ್ತಾಪವು ಮತ್ತೇಕೆ ? ಅದು ವ್ಯರ್ಥವಾದುದಲ್ಲವೆ ? ಎಂಬ ಆಕ್ಷೇಪವನ್ನು ನಿರಾಕರಿಸಿದಂತಾಯಿತು. ಏಕೆಂದರೆ ಇದರಿಂದ, ಸಂಗ ಶಬ್ದಕ್ಕೆ (ಭಕ್ತಿಯೆಂಬ ಅರ್ಥವಲ್ಲದೆ) ಸತ್ಸಮಾಗಮ ವೆಂಬ ಬೇರೊಂದು ಪ್ರಯೋಜನವು ಇರುವದೆಂಬುದನ್ನು ತೋರಿಸಿಕೊಟ್ಟಂತಾಯಿತು. ಇದಲ್ಲದೆ ಸಂಗದ ಮೂರು ಒಳಭೇದಗಳನ್ನು ಹೇಳಿರುವದು ಕೂಡ ನಿರರ್ಥಕವಾಗಿಲ್ಲ, ಈ ಒಳಭೇದಗಳನ್ನು ಹೇಳುವ ಅಗತ್ಯದಲ್ಲಿಯೂ ಒಂದು ಹೆಚ್ಚಿನ ಚಾತುರ್ಯವಿದೆ ಎಂಬುದು ಇಲ್ಲಿ ಕಂಡುಬರುವದು. ಅದೆಂದರೆ, ಇನ್ನೂ ಬೇರೆ (ಈ ಮೂರು ಪ್ರಕಾರಗಳಿಗಿಂತಲೂ ) ಹೆಚ್ಚಿನ ಪ್ರಯೋಜನವು ಇದೆ ಯೆಂಬುದನ್ನು ಅದರಿಂದ ನೆನಪಿಗೆ ತಂದುಕೊಟ್ಟಂತಾಗುವದು. ಹೀಗೆ ಹೇಳಿರುವದಲ್ಲವೆ ? (ತನಗಿಂತ) ದೊಡ್ಡವರ

ಗೌರವ, ಕೆಳಗಿನವರಲ್ಲಿ ದಯೆ, ಸರಿಸಮಾನರಲ್ಲಿ ಮಿತ್ರತ್ವ (ಗೆಳೆತನ) ಈ ಭಾವನೆಗಳಿಂದ ನಡೆದುಕೊಂಡರೇನೆ ಭಗವಂತನು ಸುಪ್ರೀತನಾಗುವನು ಎಂದು;

(೩) ಶೌಚಂಶಿ ಕ್ಷೇತ್:- ( ಒಳಹೊರಗಿನ )ಶುಚಿತ್ವವನ್ನು ಪಡೆಯಬೇಕು. ಇಲ್ಲಿ ಒಂದು ಆಕ್ಷೇಪ :- 'ಅಹಿಂಸಾ, ಸತ್ಯ, ಕಳವು ಮಾಡದಿರುವದು, ಬ್ರಹ್ಮಚರ್ಯ, ಕರುಣೆ, ಸರಳತೆ, ಕ್ಷಮಾಗುಣ, ಧೈರ್ಯ ಹಾಗೂ ಶುಚಿತ್ವ' ಈ ಹತ್ತು ಧರ್ಮಗಳನ್ನು ಶ್ರೀ ಯಾಜ್ಞವಲ್ಕ್ಯರು 'ಯಮ'ದ ಗುಂಪಿನಲ್ಲಿ ಸೇರಿಸಿರುವರು. ಹೀಗಿರಲು ಶುಚಿತ್ವವು 'ಯಮ'ದ ಗುಂಪಿನಲ್ಲಿ ಸೇರಿರಲು, 'ನಿಯಮ'ದ ಗುಂಪಿನಲ್ಲಿ ಶುಚಿತ್ವ (ಶೌಚ) ವನ್ನು ನೀವು ಸೇರಿಸುವದು ಹೇಗೆ ? ಅದಲ್ಲದೆ ಭಾಗವತ ಧರ್ಮಗಳಲ್ಲಿಯೂ ಅದನ್ನು ಒಂದನ್ನಾಗಿ ಹೇಗೆ ಮಾಡಿರುವಿರಿ ? ಈ ಆಕ್ಷೇಪಕ್ಕೆ ಉತ್ತರವಿದು. ನೀವು ಹೇಳುವದು ಸರಿಯಾದುದಲ್ಲ. ಬೇರೆ ಗ್ರಂಥಗಳಲ್ಲಿ ಶುಚಿತ್ವವನ್ನು ಯಮಗಳ ಗುಂಪಿನಲ್ಲಿ ತೆಗೆದುಕೊಂಡಿರುವರಾದರೂ, ಅದನ್ನು ಇಲ್ಲಿ 'ನಿಯಮ'ಗಳ ಗುಂಪಿನಲ್ಲಿ ಸೇರಿಸಿರುವದರಿಂದ ಒಂದು ಸಂಗತಿಯನ್ನು ಸೂಚಿಸುವರು. ಅದೇಂದರೆ, ಶುಚಿತ್ವವನ್ನು ನಿಯಮಗಳಲ್ಲಿ ಒಂದಾಗಿ ಆಚರಿಸುವದರಿಂದ ಒಂದು ಹೆಚ್ಚಿನ ಪ್ರಯೋಜನವಿದೆ. ಮಣ್ಣು ನೀರುಗಳಿಂದ ಕೈಕಾಲು ತೊಳೆದುಕೊಳ್ಳುವದನ್ನೇ 'ಶೌಚ' ವೆಂದು ಅನ್ಯ ಗ್ರಂಥಗಳು ಹೇಳುವವು. ಆದರೆ ಈ (ಹೊರಗಿನ) ಶುಚಿತ್ವ, ಶುದ್ಧಿಯಿಂದ ಅಪೇಕ್ಷಿತವಾದ ಉತ್ಕೃಷ್ಟ ಫಲವು ದೊರೆಯುವದಿಲ್ಲ. ಆದುದರಿಂದ 'ಶೌಚ'ವನ್ನು ನಿಯಮ ಧರ್ಮಗಳಲ್ಲಿ ಸೇರಿಸುವದು ಯುಕ್ತವಾದುದಲ್ಲ, ಮಣ್ಣು ನೀರುಗಳಿಂದ ಶುದ್ಧಿಗೇನೆ 'ಶೌಚ'ವೆಂದು ನಿಯಮಗಳ ಗುಂಪಿಗೆ ಸೇರಿಸಿದರೂ ಅಷ್ಟೆ, ಬಿಟ್ಟರೂ ಅಷ್ಟೇ, ಈ ಬಗೆಯ ಶುಚಿತ್ವವು ಕೀಳಾದರೂ, ಯಮ-ನಿಯಮಗಳೆಂಬ ಎರಡೂ ಗುಂಪುಗಳಲ್ಲಿ ಸೇರಿಸುವದರಿಂದ, ಶೌಚ ಶಬ್ದವು ಬೇರೊಂದು ಉತ್ಕೃಷ್ಟವಾದ ಅರ್ಥವನ್ನು ಪ್ರತಿಪಾದಿಸುವದರಿಂದಲೂ, ವಿಶೇಷ ಫಲ ಪಡೆಯಲು ಅದು ಸಾಧನವಾಗುವದರಿಂದಲೂ, ನಿಯಮ ಧರ್ಮದಂತೆ ಅದನ್ನು ಆಚರಿಸುವದರಿಂದ ಲಾಭವಿದೆ. ಆದುದರಿಂದ ನಿಯಮ ಧರ್ಮಗಳಿಗೆ ಸದೃಶವಾಗಿರುವ ಭಾಗವತ ಧರ್ಮಗಳ ಗುಂಪಿನಲ್ಲಿ ಅದಕ್ಕೆ ಸ್ಥಾನವನ್ನು ಕೊಟ್ಟಿರುವದು ಯುಕ್ತವೇ ಆಗಿದೆ. ಶುಚಿಯೆಂಬ ಭಾವವೇ 'ಶೌಚ'ವು ಅಥವಾ ಶುದ್ಧಿಯೆಂಬುದು. ಪರಮ (ಅತ್ಯುತ್ಕೃಷ್ಟವಾದ) ಶುದ್ಧಿಯು ನಿಷ್ಕಾಮತ್ವ ನಿರಪೇಕ್ಷತೆಯಿಂದ, (ಫಲವನ್ನು ಬಯಸದೆ ಕರ್ಮ ಮಾಡುವದರಿಂದ) ಲಭಿಸುವದು ನಿಷ್ಕಾಮತೆಗೆ ಸಾಧನವಾಗಿರುವದರಿಂದ, ( ಈ ವರೆಗೆ ಹೇಳಿದ ) ಶೌಚವೆಂಬ ಶಬ್ದಕ್ಕೆ ಇಲ್ಲಿ ನಿಷ್ಕಾಮತ್ವ, - ಫಲವನ್ನು ಬಯಸದಿರುವದು, ಎಂಬುದೇ ಅರ್ಥವಾಗಿದೆ.

ಹೀಗೆ ಹೇಳಿರುವರು, 'ಕರ್ಮಸು ಅಸಂಗಮಃ ಶೌಚಮ್' ಕರ್ಮದಲ್ಲಿ ಫಲಾ
ಸಕ್ತಿಯನ್ನು ತಾಳದಿರುವದೇ ಶೌಚವು ಫಲವನ್ನು ಬಯಸದೆ, ಫಲದ ಕಡೆಗೆ
ದೃಷ್ಟಿಯನ್ನಿಡದೆ ಮಾಡುವದರಿಂದ ಮಾತ್ರ ಕರ್ಮವು ಬಂಧನವಾಗುವದಿಲ್ಲ. (೩)

(೪) **ತಪಃ ಶಿಕ್ಷೇತ್** :- ತಪವೆಂಬ ಭಾಗವತ ಧರ್ಮವನ್ನು ಪಡೆಯಬೇಕು.
(ಭಾಗವತದ ೧೧-೧೯-೩೪ನೇ ಶ್ಲೋಕ) ಹಾಗೂ ಶ್ರೀ ಯಾಜ್ಞವಲ್ಕ್ಯರು-ತಪಸ್ಸು,
ಸಂತೃಪ್ತಿ. ದೇವನಿರುವನೆಂಬ ನಂಬಿಗೆ, ದಾನ, ಪರಮಾತ್ಮನ ಆರಾಧನೆ, ವೇದಾಂತ
ವನ್ನು ಕೇಳುವದು, ಅಕಾರ್ಯದ ಬಗ್ಗೆ ನಾಚಿಕೆ (ಹೇಯಬುದ್ಧಿ), ಚಿಂತನೆ, ಜಪ,
ಯಜ್ಞ, ಇವು ಹತ್ತು 'ನಿಯಮ'ಗಳೆಂದು ಹೇಳಿರುವರು. ಭಾಗವತದಲ್ಲಿ, ಯೋಗದ
ಗ್ರಂಥಗಳಲ್ಲಿ ತಪಸ್ಸು ನಿಯಮಗಳಲ್ಲಿ ಒಂದಾಗಿದೆ. ಇಲ್ಲಿ ಒಂದು ಆಕ್ಷೇಪ :-
ಭಾಗವತ ಧರ್ಮಗಳನ್ನು ಹೇಳುವ ಭಾಗವತದ (೭-೧೧) ಎರಡು ಸ್ಕಂಧಗಳಲ್ಲಿಯೂ
ತಪಸ್ಸನ್ನು ನಿಯಮಗಳಲ್ಲಿ ಒಂದೆಂದು ಏಕೆ ಕೂಡಿಸಿಕೊಂಡಿರುವರು ? ಈ ಆಕ್ಷೇ
ಪಕ್ಕೆ ಉತ್ತರ ಹೇಳುವರು ;- ಹಿಂದೆ ತಿಳಿಸಿ ಹೇಳಿದ ಮಾತನ್ನು ಇಲ್ಲಿ ಮರೆಯ
ಬೇಡಿರಿ. 'ಶೌಚ' ಎಂಬ ಶಬ್ದಕ್ಕೆ ಇರುವ ಬೇರೊಂದು ಅರ್ಥದಿಂದ, ವಿಶೇಷ
ಫಲಪ್ರಾಪ್ತಿಗೆ ಅದು ಹೇಗೆ ಸಾಧನನಾಗುವದೊ, ತಪಸ್ಸನ್ನೂ ಕೂಡ ಬೇರೊಂದು
ಅರ್ಥದಿಂದ ವಿಶೇಷ ಫಲ ಪ್ರಾಪ್ತಿಗೆ (ಪರಮಾತ್ಮನ ಅನುಗ್ರಹ ಪ್ರಾಪ್ತಿಗೆ) ಸಾಧನ
ವೆಂದು ತಿಳಿಯಬೇಕು. ಅದಕ್ಕಾಗಿಯೆ ಎರಡೂ ಸಂದರ್ಭಗಳಲ್ಲಿಯೂ ತಪಸ್ಸಿಗೆ
ಸ್ಥಾನ ದೊರೆತಿದೆ. (ಶಾಸ್ತ್ರಗಳಲ್ಲಿ) ನಿಷಿದ್ಧ (ಮಾಡಲೇಬಾರದು) ಎಂದು ಹೇಳುವ
ಕರ್ಮಗಳಲ್ಲಿ ಹರಿಯಗೊಡದಂತೆ ಮನಸ್ಸನ್ನು ನಿಗ್ರಹಿಸುವದೆ (ಬಿಗಿ ಹಿಡಿಯುವದೆ)
ಅತಿ ಶ್ರೇಷ್ಠನಾದ ತಪಸ್ಸು. 'ಕಾಮತ್ಯಾಗನೇ ಶ್ರೇಷ್ಠ ತಪಸ್ಸು' ಎಂತಲೂ
ಹೇಳಿದೆ - ಇದರ ವಿವರಣೆಯನ್ನು - 'ಮಹನ್ನಿಂದಾ - ಆತ್ಮಪ್ರಶಂಶಾ ವರ್ಜನ
ಪ್ರಕರಣಗಳಲ್ಲಿ (೧೩೭ ಶ್ಲೋಕದಲ್ಲಿ) ಹೇಳಿಕೊಟ್ಟಿದೆ.

(೫) **'ತಿತಿಕ್ಷಾಂ ಶಿಕ್ಷೇತ್'** :- ಸಹನ ಗುಣವೆ ತಿತಿಕ್ಷಾ (ತಾಳ್ಮೆ) 'ತಿತಿಕ್ಷಾ
ದುಃಖ ಸಮ್ಮರ್ಷಃ'- ದುಃಖವಾದಾಗ್ಗೆ ಮನಸ್ಸು ಕದಡದಿರುವದು, ದುಃಖ
ಉದ್ವೇಗವನ್ನು ತಾಳಿಕೊಳ್ಳುವದಕ್ಕೆ 'ತಿತಿಕ್ಷೆ' ಯೆನ್ನುವರು. ದುಃ
ದಿಂದ ಉಂಟಾಗುವ ಮನಃ ಕ್ಷೋಭೆಯನ್ನೇ ತಾಳಿಕೊಳ್ಳುವದು ಮುಖ್ಯ
ಗಿದ್ದರೂ, ದುಃಖವನ್ನುಂಟು ಮಾಡುವ ಸಂಗತಿಗಳಿಂದ ಆಗುವ ಚಿತ್ತಕ್ಷೋ
ಭೆಯನ್ನು ತಡೆದುಕೊಳ್ಳುವದು ಅದಕ್ಕಿಂತಲೂ ಮುಖ್ಯವಾದುದು ಹೀಗಿದ್ದರು
ದುಃಖವನ್ನೇ (ಹೇಗಾದರೂ) ತಾಳಿಕೊಳ್ಳಲು (ಸಹಿಸಲು) ಸಮರ್ಥರಾದವರಿ
ದುಃಖಕ್ಕೆ ಕಾರಣವಾಗಿರುವ ಸಂಗತಿಗಳಿಂದ ಮನಸ್ಸನ್ನು ಕದಡಗೊಡದಿರುವದ

(ದುಃಖದ ಸಹನೆಗಿಂತ) ಹೆಚ್ಚು ಮುಖ್ಯವಾದುದು. ಈ ವಿಚಾರವನ್ನು ಮನಸ್ಸಿನಲ್ಲಿ ಇಟ್ಟುಕೊಂಡೇ ದುಃಖದ-'ಸಂಮುಷ ಃ'-ಎಂದು ಹೇಳಿರುವರು.- ದುಃಖದ ಉದ್ವೇಗವನ್ನೇ ಸಹಿಸಲು ಶಕ್ತರಾದರೆ, ದುಃಖದ ಸಾಧನಗಳ ಉದ್ವೇಗವನ್ನು ತಡೆದು ಕೊಳ್ಳುವದು ಅದಕ್ಕಿಂತಲೂ ಸುಲಭವಾಗುವದು.-'ಇಂದ್ರಿಯ ಜಯ' ವೆಂಬ ಪ್ರಕರಣ (ಯನ್ಮೈಥುನಾದಿ ೧೪೧ ನೇ ಶ್ಲೋಕ) ದಲ್ಲಿ ಈ ವಿಚಾರವನ್ನು ಸ್ಪಷ್ಟಗೊಳಿಸಿದೆ.

(೬) **ಮೌನಂ ಶಿಕ್ಷೇತ್ :-** ಯೋಗ- ಮುಂತಾದ ಬೇರೆ ಶಾಸ್ತ್ರಗಳಲ್ಲಿ, ಮೌನ (ಮಾತನಾಡದಿರುವದು)ವನ್ನು ಯಮ-ನಿಯಮಗಳೆಂಬ ಎರಡೂ ಗುಂಪುಗಳಲ್ಲಿ ಸೇರಿಸಿಲ್ಲ. ಆದರೆ ಈ (ಭಾಗವತ) ಗ್ರಂಥದಲ್ಲಿ ಮೌನವನ್ನು ಯಮದ ಗುಂಪಿನಲ್ಲಿಯೂ, ಇನ್ನೊಂದು (ನಿಯಮದ) ಗುಂಪಿನಲ್ಲಿಯೂ - ಏಕೆ ತೆಗೆದು ಕೊಂಡಿರುವಿರಿ?- ಎಂಬ ಆಕ್ಷೇಪಕ್ಕೆ ಹೀಗೆ ಸಮಾಧಾನ ಹೇಳುವರು:- (ಮೌನವನ್ನು ಯಮ ನಿಯಮಗಳೆರಡರಲ್ಲಿಯೂ ಸೇರಿಸದಿದ್ದರೆ,) - ಮೌನವೆಂಬ ಭಾಗವತ ಧರ್ಮವನ್ನು ಆಚರಿಸದಿದ್ದರೆ, ದೊಡ್ಡ ಹಾನಿಯುಂಟು; ಆಚರಿಸಿದರೆ, ಶ್ರೇಷ್ಠ ಪುರುಷಾರ್ಥದ ಪ್ರಾಪ್ತಿಗೆ ಅದು ಸಾಧನವಾಗುವದು. ಈ ಬಗ್ಗೆ (೩೦೭ ನೇ ಶ್ಲೋಕದಲ್ಲಿ) ಮುಂದೆ ವಿವರಿಸುವೆವು.

(೭) **ಸ್ವಾಧ್ಯಾಯಂ ಶಿಕ್ಷೇತ್:-** (ಯೋಗ ಮುಂತಾದ) ಬೇರೆಡೆಯಲ್ಲಿ ಸ್ವಾಧ್ಯಾಯಕ್ಕೇನೆ ಬೇರೊಂದು ಹೆಸರನ್ನು ಕೊಟ್ಟು ನಿಯಮಗಳಲ್ಲಿ ಸೇರಿಸಿಲ್ಲವೆ?- ಎಂಬ ಆಕ್ಷೇಪಕ್ಕೆ ಉತ್ತರ ಹೇಳುವರು:- ನೀವು ಹೇಳುವದು ಸರಿಯಲ್ಲ. ಅನ್ಯತ್ರ ಹೇಳಿದ ಸ್ವಾಧ್ಯಾಯಕ್ಕಿಂತಲೂ ಭಿನ್ನವಾದ ಧರ್ಮಕ್ಕೆ 'ಶ್ರುತಿ' - ಯೆಂಬ ಬೇರೊಂದು ಸಮಾನ ಶಬ್ದದಿಂದ ಎರಡೂ ಗುಂಪುಗಳಲ್ಲಿಯೂ ಇಲ್ಲಿ ಅದನ್ನು ಸೇರಿಸಲಾಗಿದೆ.- ಸ್ವಾಧ್ಯಾಯವೆಂಬುದು ವೇದಾಧ್ಯಯನ ಮಾತ್ರವಾಗಿಲ್ಲ. ವೇದಗಳೆಲ್ಲವೂ ಭಗವಂತನ ನಾಮಗಳೆ, ಪರಮ ಮುಖ್ಯ ವೃತ್ತಿಯಿಂದ ಸಕಲ ವೇದಗಳು ಪರಮಾತ್ಮನನ್ನೇ ಪ್ರತಿಪಾದಿಸುವವು; 'ಭಗವಂತನ ಗುಣಗಳನ್ನೇ ನಿರೂಪಿಸುವವು - ಎಂಬುದನ್ನು ತಿಳಿಯುವದೇ ಸ್ವಾಧ್ಯಾಯವಾಗಿದೆ.-, ಮೌನಧರ್ಮದ ನಿರೂಪಣೆಯಲ್ಲಿ (೩೦೭ ನೇ ಶ್ಲೋಕದಲ್ಲಿ) ಈ ಬಗ್ಗೆ ಹೆಚ್ಚಿಗೆ ಹೇಳುವದಿದೆ.

(೮) **ಆರ್ಜವಂ ಶಿಕ್ಷೇತ್:-** ದೇಹ, ಮಾತು, ಮನಸ್ಸು (ತ್ರಿಕರಣ)ಗಳಲ್ಲಿ (ಬೇರೆ ಬೇರೆಯಾಗಿರದೆ) ಏಕರೂಪವಾಗಿರಬೇಕೆಂಬ ಎಂಟನೆಯ ಭಾಗವತ ಧರ್ಮವು.- ಯೋಗ ಮುಂತಾದ ಶಾಸ್ತ್ರಗಳಲ್ಲಿ ಆರ್ಜವವು ಯಮಗಳ ಗುಂಪಿನಲ್ಲಿ ಒಂದಾಗಿದೆ. ಇಲ್ಲಿ ಯಮನಿಯಮಗಳಲ್ಲಿ ಅದನ್ನು ಸೇರಿಸಿದೆ, (೭-೧೧ಸ್ಕಂ

ದಗಳಲ್ಲಿ) ಹೇಳಿರುವ ಭಾಗವತ ಧರ್ಮಗಳಲ್ಲಿ ಆರ್ಜವವನ್ನು ಗಣನೆ ಮಾಡು ವದರಲ್ಲಿ ಏನು ವಿಶೇಷವಿದೆ?- ಎಂಬ ಆಕ್ಷೇಪಕ್ಕೆ ಹೀಗೆ ಸಮಾಧಾನ ಹೇಳು ವರು.- ನೀವು ಹೇಳುವದು ಸರಿಯಲ್ಲ.-ಸಕಲ ಭಾಗವತ ಧರ್ಮಗಳಿಗೂ ದೋಷ ದಂತಿರುವ (ಅವುಗಳನ್ನೆಲ್ಲ ಕೆಡಿಸಿಬಿಡುವ) ಕಾಪಟ್ಯ (ಮೋಸ-ವಂಚನೆ) ವನ್ನು ಆರ್ಜವ ಧರ್ಮವೆ ನಿವಾರಿಸುವದು; (ಅದರಿಂದ) ಸಕಲ ಭಾಗವತ ಧರ್ಮಗ ಳಿಗೂ ಅದು ಉಪಕಾರಿ (ಸಹಾಯಕ) ವಾಗಿರುವದು. ಆರ್ಜವದಲ್ಲಿಯ ಈ ಶ್ರೇಷ್ಠತೆಯನ್ನು ನೆನಪಿಗೆ ತಂದು ಕೊಡುವದಕ್ಕಾಗಿಯೆ ಎರಡೂ ಸ್ಕಂದಗಳಲ್ಲಿ ಅದಕ್ಕೆ ಸ್ಥಾನವನ್ನು ಕೊಟ್ಟದೆ. ಆರ್ಜವವೆಂದರೆ, (ಕಾಯಾ, ವಾಚಾ, ಮನಸಾ) ತ್ರಿಕರಣಗಳಲ್ಲಿ ಒಂದೇ ರೀತಿಯದ್ದಾಗಿರುವದು, ಇದಕ್ಕೆ ವಿರುದ್ಧವಾದುದು (ಕೈತವ) ಕಪಟತನ, ವಂಚನೆ, ಡಂಭಾಚಾರ. ಆರ್ಜವವು ಕಪಟತನವನ್ನು ನಿವಾರಿಸುವದ ರಿಂದ, ಅದಕ್ಕೆ ಕೊಟ್ಟಿರುವ ಶ್ರೇಷ್ಠತೆಯು ಯೋಗ್ಯವೇ ಆಗಿದೆ. ಅಪೇಕ್ಷಿತ ಪುರುಷಾರ್ಥವನ್ನು ತಂದುಕೊಡುವ ಸಾಧನವಾಗಿರುವದರಿಂದ, ಸಕಲ ಭಾಗವತ ಧರ್ಮಗಳಿಗೂ ಆರ್ಜವವು ಉಪಯುಕ್ತವಾಗಿದೆ, ಸಹಕಾರಿಯಾಗಿದೆ. ಈ ಮಾತನ್ನು ಈ ಮೊದಲು ಹೇಳಿದೆ. ಫಲಾಪೇಕ್ಷೆಯಿಲ್ಲದೆ ಕರ್ಮ ಮಾಡುವ, ನಿಷ್ಕಾಮ ರೂಪವಾದ ಶುಚಿತ್ವವೆ ಆರ್ಜವಕ್ಕೆ ಕಾರಣವೆಂಬುದನ್ನು ತಿಳಿದುಕೊಳ್ಳ ಬೇಕು ಆದುದರಿಂದ ಆರ್ಜವದಂತೆಯೆ, (ಅಂತರ-ಬಾಹ್ಯ) ಶುಚಿತ್ವವೂ ಸಕಲ ಭಾಗವತ ಧರ್ಮಗಳಿಗೂ ಉಪಕಾರಿಯಾದುದರಿಂದ, ಅವೆಲ್ಲವುಗಳಲ್ಲಿ ಅದು ಹಾಸು ಹೊಕ್ಕಾಗಿದೆ ಯೆಂಬುದನ್ನು ತಿಳಿದುಕೊಳ್ಳಬೇಕು. ಅಥವಾ, (ಯೋಗ ಮುಂತಾದ) ಉಳಿದೆಡೆಗಳಲ್ಲಿ ಆರ್ಜವವನ್ನು ಯಮಗಳ ಗುಂಪಿನಲ್ಲಿ ಸೇರಿಸಿದ್ದರೂ, ಇಲ್ಲಿ ಯಮ-ನಿಯಮಗಳೆರಡರಲ್ಲಿಯೂ ಅದನ್ನು ಸೇರಿಸಿದೆ, (೭-೧೧ಳ ಸ್ಕಂಧಗಳಲ್ಲಿ) ಎರಡರಲ್ಲಿಯೂ ಹೇಳಿರುವ ಭಾಗವತ ಧರ್ಮಗಳಲ್ಲಿ ಸಮಾವೇಶ ಮಾಡಿರುವದು- ಅದರ ಸರ್ವೋಪಯೋಗಿತ್ವವನ್ನು ತೋರಿಸುವದು. ಆರ್ಜವವನ್ನು ಭಾಗವತ ಧರ್ಮಗಳಲ್ಲಿ ಸೇರಿಸಲು, ಯಮ-ನಿಯಮಗಳಲ್ಲಿ ಆರ್ಜವವು ಅಂತರ್ಭೂತವಾಗ ಬೇಕೆಂಬುದು ಕಾರಣವಿಲ್ಲ. ಮತ್ತೆಂದರೆ, ಮುಕ್ತಿಗೆ ಪಾತ್ರನಾಗಿರುವ ಮಾನವ ನಿಗೆ, ಆರ್ಜವವು ಸ್ವಾಭಾವಿಕ (ಹುಟ್ಟು) ಗುಣ (ಪ್ರಕೃತಿ ಗುಣ) ವಾಗಿದೆ. (ಸಾತ್ವಿಕರು, ಯಾರೆಂಬುವದನ್ನು ಹೇಳುವಾಗ್ಗೆ ಗೀತೆಯಲ್ಲಿ ಭಗವಂತನೂ ಇದನ್ನು ಹೇಳಿರುವನು) ಅಂತೆಂದಲೆ, ಸಾಧಕರಿಗೆ ಆರ್ಜವವು ಅತ್ಯಗತ್ಯವಾದ ಭಾಗವತ ಧರ್ಮವು.

(೯) **ಬ್ರಹ್ಮಚರ್ಯ ೯೦ ಶಿಕ್ಷೇತ್**:- ಇಲ್ಲಿ ಒಂದು ಆಕ್ಷೇಪ :- 'ಶ್ರವಣಂ ....ಪ್ರವದಂತಿ ಮನೀಷಿಣಃ (ಸ್ತ್ರೀ ಸಂಭೋಗವು ಎಂಟು ಬಗೆಯದಾಗಿದೆ)(ಸ್ತ್ರೀಯರ

ಸರಸಸಲ್ಲಾಪ) ನೆನಪಿಗೆ ತಂದುಕೊಳ್ಳುವದು, ಹೇಳುವದು, (ಅವರೊಡನೆ) ಕಾಮುಕ ಕ್ರೀಡೆ, (ಅವರಕಡೆ) ನೋಡುವದು, ಏಕಾಂತದಲ್ಲಿ ಮಾತನಾಡುವದು, ಯೋಚಿಸುವದು, ನಿರ್ಣಯಿಸುವದು, ಸಂಭೋಗ ಕ್ರಿಯೆಯನ್ನು ಮಾಡಿಬಿಡುವದು. ಹೀಗೆ ಎಂಟು ಬಗೆಯ ಸ್ತ್ರೀ ಸಂಭೋಗವಿರುವದೆಂದು ಜ್ಞಾನಿಗಳು ಹೇಳುವರು. ಈ ಬಗೆಯ ಎಂಟು ರೀತಿಯ ಸಂಭೋಗವನ್ನು- ಕೃತಿಯಲ್ಲಿ, ಮನಸ್ಸಿನಲ್ಲಿ, ಮಾತಿನಲ್ಲಿ, ಎಲ್ಲೆಲ್ಲಿಯೂ, ಎಂದೆಂದಿಗೂ ಬಿಟ್ಟುಕೊಡುವದೇ ಬ್ರಹ್ಮಚರ್ಯವಾಗಿದೆ. ಈ ಬಗೆಯ ಬ್ರಹ್ಮಚರ್ಯವನ್ನು ಆಚರಿಸುವದರಿಂದ ಏನು ಫಲ ? ಎಂದು ಕೇಳಿದರೆ, ಅದು ಭಗವಂತನ ಬಗ್ಗೆ ಮನಸ್ಸು ಹರಿಯುವಂತೆ, ಆಸ್ಥೆ ಹುಟ್ಟುವಂತೆ ಮಾಡುವದು. ಭಗವಂತನಲ್ಲಿ ಆಸಕ್ತಿಯನ್ನು, ಭಕ್ತಿಯನ್ನು ಹುಟ್ಟಿಸುವ ಬ್ರಹ್ಮಚರ್ಯವೆ ಭಾಗವತ ಧರ್ಮಗಳಲ್ಲಿ ಒಂದೆನಿಸುವದು. ಬ್ರಹ್ಮಚರ್ಯವನ್ನು ಯಾವ ರೀತಿಯಲ್ಲಿ ಆಚರಿಸುವದರಿಂದ ಭಗವದ್ಭಕ್ತಿಯು (ಹೆಚ್ಚು ಹೆಚ್ಚಾಗಿ) ಉಂಟಾಗುವದೋ, ಆ ರೀತಿಯಿಂದಲೆ ಬ್ರಹ್ಮಚರ್ಯವನ್ನು ಆಚರಿಸಬೇಕು.

ಅದನ್ನು ಹೇಗೆ ಆಚರಿಸಬೇಕೆಂಬ ವಿಧಾನವನ್ನು ತೋರಿಸಿಕೊಡುವದಕ್ಕಾಗಿ ಭಾಗವತ ಧರ್ಮಗಳಲ್ಲಿ ಒಂದಾಗಿ ಅದನ್ನು ಇಲ್ಲಿ ಸೇರಿಸಿದೆ' ಎಂದು (ಏನು ಫಲ ?) ಎಂಬ ಪ್ರಶ್ನೆಗೆ ಉತ್ತರವಾಗಿದೆ, ಎಂದರೆ ಅದಕ್ಕೆ ಹೀಗೆ ಆಕ್ಷೇಪಿಸಬಹುದು. ('ಫಲಾಪೇಕ್ಷೆಯಿಲ್ಲದೆ ಭಗವಂತನಲ್ಲಿ ಸಮರ್ಪಣ ಭಾವದಿಂದ ಮಾಡುವ) ಎಲ್ಲ ನಿವೃತ್ತ ಕರ್ಮಗಳಿಗೂ ಭಗವದ್ಭಕ್ತಿಯನ್ನು ಹುಟ್ಟಿಸುವದೆ ಸಮಾನ ಗುರಿಯಾಗಿರಲು ಬ್ರಹ್ಮಚರ್ಯವನ್ನೇ (ಇತಿಕರ್ತವ್ಯ) ಈ ಉದ್ದೇಶಕ್ಕಾಗಿ ಮಾಡಲೇಬೇಕೆಂದು ನೀವು ಹೇಳುವದು ನಿರರ್ಥಕವಾಗಿದೆ. ಆದುದರಿಂದ ಇಲ್ಲಿ ಹೇಳುವ ಭಾಗವತ ಧರ್ಮಗಳಲ್ಲಿ ಬ್ರಹ್ಮಚರ್ಯವನ್ನು ಸೇರಿಸಿರುವದು, ಸಮಂಜಸವಾದುದಲ್ಲ, ಎಂಬ ಆಕ್ಷೇಪಕ್ಕೆ ಹೀಗೆ ಉತ್ತರ ಹೇಳುವರು ;- ನೀವು ಹೇಳುವದು ಸರಿಯಾದುದಲ್ಲ. ಬ್ರಹ್ಮಚರ್ಯವೆಂಬ ಶಬ್ದಕ್ಕೆ ಇಲ್ಲಿ ಬೇರೊಂದು ಅರ್ಥವನ್ನು ಹೇಳುವದರಿಂದ, ಭಾಗವತ ಧರ್ಮಗಳಲ್ಲಿ ಸೇರ್ಪಡೆ ಮಾಡಿರುವದು ಸಮಂಜಸವೇ ಆಗಿದೆ. ಸಕಲ ಇಂದ್ರಿಯಗಳು ಹಾಗೂ ಅವುಗಳ ವೃತ್ತಿ (ಕಾರ್ಯ) ಗಳು, ದೇಹ ಹಾಗೂ ದೇಹದಿಂದ ಮಾಡುವ ಎಲ್ಲ ಚಟುವಟಿಕೆಗಳು, ಇವೆಲ್ಲವುಗಳನ್ನೂ (ಬ್ರಹ್ಮ) ಪರಮಾತ್ಮನ ಉದ್ದಿಶ್ಯವಾಗಿಯೆ (ಪ್ರೀತ್ಯರ್ಥವಾಗಿ) ವಿನಿಯೋಗಿಸುವದು, ತಮ್ಮ ತಮ್ಮ ಕಾರ್ಯಗಳನ್ನು ಮಾಡಲು ಹಚ್ಚುವದೇ ಬ್ರಹ್ಮಚರ್ಯವೆಂಬ ಅರ್ಥವನ್ನು ಇಲ್ಲಿ ನಾವು ತೆಗೆದುಕೊಂಡಿರುವೆವು, (ಬ್ರಹ್ಮಚರ್ಯಕ್ಕಿರುವ ಸರ್ವಸಾಮಾನ್ಯ ಅರ್ಥಕ್ಕಿಂತಲೂ ನಮ್ಮ ಅರ್ಥವು ಬೇರೆಯಾಗಿದೆ. ೨೫ ನೇ ಶ್ಲೋಕದ 'ತತ್ರೈವ ಮನ ...' ಎಂಬ ಶ್ಲೋಕದಲ್ಲಿ ಬ್ರಹ್ಮಚರ್ಯದ ಪ್ರಕಾರಗಳನ್ನು ವಿವರಿಸಲಾಗಿದೆ.

ಕಣ್ಣು, ಕಿವಿ, ಮುಂತಾದ ಐದು ಕರ್ಮೇಂದ್ರಿಯಗಳು ಹಾಗೂ ಮನಸ್ಸು,- ಈ ಆರು ಇಂದ್ರಿಯಗಳಿಂದ ಮಾಡುವ ಭಗವತ್ಸೇವೆ, ('ಷಡಂಗ ಸೇವೆ') ಇದು ಬ್ರಹ್ಮಚರ್ಯ. ಇದುವೆ ಭಗವದ್ಭಕ್ತಿಯನ್ನು ಹುಟ್ಟಿಸುವ ಮುಖ್ಯ ಸಾಧನವು. ಹೆಚ್ಚಿಗೆ ಹೇಳಬೇಕಾದುದನ್ನು ಮುಂದೆ ಹೇಳುವರು.

(೧೦) **ಅಹಿಂಸಾಂ ಶಿಕ್ಷೇತ** :- ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರ, ಇವು ಮೋಕ್ಷಾರ್ಥಿಯಾದವನಿಗೆ ಆರು ವೈರಿಗಳು. ಈ ಆರು ಹಗೆಗಳಲ್ಲಿ ಮೂವರು ಪ್ರಬಲರು, ಈ ಮೂರರಲ್ಲಿ ಒಬ್ಬನು ಇನ್ನೂ ಪ್ರಬಲನು [ಶ್ರೇಷ್ಠನು]; ಆರರಲ್ಲಿ ಮೊದಲನೆಯವನಾದ ಕಾಮನೇ ಇವನು. ಈ ಕಾಮನನ್ನು ಆಶ್ರಯಿಸಿ [ಆತನನ್ನು ಮುಂದೆ ಮಾಡಿಕೊಂಡೇ ಉಳಿದವರು ಮೋಕ್ಷಕ್ಕಾಗಿ ಯತ್ನಿಸುವವರಿಗೆ ಪೀಡಿಸುವರು.

ಇಲ್ಲಿ ಹೀಗೆ ಕೇಳಬಹುದು :- ಬೇಕುಸಿದ್ದನ್ನು ಕೊಟ್ಟು ಮಗುವನ್ನು ಸಮಾಧಾನ ಗೊಳಿಸುವಂತೆ, ಕಾಮನನ್ನು ಶಾಂತಗೊಳಿಸಿದರೆ, ಅವನೇಕೆ ಪೀಡಿಸುವನು? ಎಂದು ಕೇಳಬಹುದು - ಸರಿ, ನೀವು ಹೇಳುವದೇನೊ ನಿಜ, ಆಗಿನ ಮಟ್ಟಿಗೆ ತಾತ್ಕಾಲಿಕವಾಗಿ ಕಾಮನನ್ನು ಸಮಾಧಾನಗೊಳಿಸಬಹುದು. ಆದರೆ ಈ ಪ್ರಬಲ ಶತ್ರುವಾದ ಕಾಮನು ಕೇಳಿದ ಒಂದನ್ನು ಕೊಟ್ಟರೆ ತೃಪ್ತನಾಗುವವನಲ್ಲ. ಮತ್ತೇಂದರೆ, ಕೊಟ್ಟಿದನ್ನು ತೆಗೆದು ಕೊಂಬುವನು, ಮತ್ತೆ ಮತ್ತೆ ಬೇರೊಂದಕ್ಕೆ ಬಾಯಿ ಬಿಡುತ್ತಲಿ ಇರುವನು. ಆತನಿಗೆ 'ಇಷ್ಟು ಸಾಕು' - ಎಂಬ (ಅಲಂ) ಬುದ್ಧಿಯೆ - ತೃಪ್ತಿಯೆ ಇರುವದಿಲ್ಲ. (ತುಪ್ಪ ಹಾಕಿ ಅಗ್ನಿಯನ್ನು ಶಾಂತ ಗೊಳಿಸಲಾರೆವು, ತುಪ್ಪ ಹಾಕಿದಂತೆ ಅಗ್ನಿಯು ಹೆಚ್ಚುತ್ತಲಿ ಹೋಗುವದು) - ಇಡೀ ಜೀವನವೆಲ್ಲ ವೆಚ್ಚ ಮಾಡಿದರೂ, ಈ ರೀತಿಯ ಸ್ವಭಾವವುಳ್ಳ ಕಾಮನನ್ನು ತೃಪ್ತಿ ಗೊಳಿಸಲು ಶಕ್ಯವಾಗಲಾರದು - ಇನ್ನೊಂದು ಆಕ್ಷೇಪವೆಂದರೆ,- ಕಾಮನು ಹೀಗಿರಬಹುದು. ಆದರೆ ಶಾಸ್ತ್ರಗಳನ್ನು ಓದಿ ತಿಳುಕೊಂಡ ಜ್ಞಾನಿಗಳಿಗೆ ಕಾಮನು ಹೇಗೆ ಕಾಡುವನು? - ಜ್ಞಾನವಿಲ್ಲದ ಸಾಧಕರನ್ನು ಆತನು ಪೀಡಿಸಬಹುದು.

ಎಂದರೆ, ನೀವು ಹೇಳುವದು ನಿಜವಲ್ಲ. ಕಾಮನೆಂಬ ಹಗೆಯ ಹಿಡಿತದಲ್ಲಿ ಸಿಕ್ಕವರಿಗೆ ಜ್ಞಾನವೇ ಉಂಟಾಗುವದಿಲ್ಲ. ಜನ್ಮಾಂತರ ಪುಣ್ಯದಿಂದ ಅವರು ಜ್ಞಾನ ಪಡೆದಿದ್ದರೆ, ಆಗಲೂ ಅವರ (ಪುಣ್ಯದಿಂದ ಪಡೆದ) ಜ್ಞಾನಕ್ಕೇ ಅಡ್ಡಿ ಮಾಡಿ, ಅವರಿಗೆ (ಪರಮಾತ್ಮನ ಸಾಕ್ಷಾತ್ಕಾರ) ಅಪರೋಕ್ಷವಾಗದಂತೆ ಕಾಮನು ಮಾಡಿ ಬಿಡುವನು. ನಮ್ಮ ಪರೋಕ್ಷ (ತಿಳಿಯದ್ದೆಯೆ ಹಿಂದೆ ಪಡೆದ) ಜ್ಞಾನವು

ಸಾವಿರಾರು ವಿರುದ್ಧ ಪ್ರಮಾಣಗಳನ್ನು ಎದುರಿಸಿಯೂ ಕದಡದೆ ಅಚಲವಾಗಿ ಉಳಿಯುವದೇ, ಅದರ ಉತ್ಕೃಷ್ಟತೆಯ ತುಟ್ಟತುದಿಯಾಗಿದೆ. ಇಂಥ ಉತ್ಕೃಷ್ಟ ಜ್ಞಾನವುಳ್ಳವನನ್ನೇ ತೊಳಲಿಸುವಷ್ಟು ಕಾಮನು ಬಲಿಷ್ಟನಾಗಿರುವಾಗ್ಗೆ, ಅಲ್ಪ ಜ್ಞಾನಿಗಳು ಇಲ್ಲವೆ ಅಜ್ಞಾನಿಗಳು ಕಾಮನ ಎದುರು ಯಾವ ಗಿಡದ ತೊಪ್ಪಲು ? ಹೀಗೆ ಹೇಳಿರುವರು ;- ಸಾಧಕನಿಗೆ ಆರು ವೈರಿಗಳಲ್ಲಿ ಅತಿ ಪ್ರಬಲನಾದ ಕಾಮನು ಹೇಗೆ ಹಂಚಿಕೆಯಿಂದ ಹಾನಿ ಮಾಡುವನೆಂಬುದನ್ನು ಲೌಕಿಕ ಉದಾಹರಣೆಯಿಂದ ತೋರಿಸುತ್ತಾರೆ. ಕಳ್ಳರ ಮುಖಂಡನೊಬ್ಬನು ವೇಷ ಬದಲಿಸಿಕೊಂಡು, ಸದ್ಗೃಹಸ್ಥನ ಮನೆಯಲ್ಲಿ (ಕೆಲಕಾಲ) ನೆಲಿಸಿ ಆತನ ಪ್ರೀತಿಯನ್ನು (ಮೊದಲು) ಪಡೆಯುವನು. ಮುಂದೆ ಅನುಕೂಲ ಸಮಯುವನ್ನು ನೋಡಿಕೊಂಡು ಅದೇ ಸದ್ಗೃಹಸ್ಥನ ಸರ್ವಸ್ವವನ್ನೂ ನಾಶ ಮಾಡುವನು. ಗೃಹಸ್ಥನು ತನ್ನ ರಕ್ಷಣೆಗೆ ರಾಜನ ಕಡೆಗೆ ಹೋಗಬಾರದೆಂದು, 'ರಾಜನಲ್ಲಿಗೆ ಹೋದರೆ, ನೀನೇ ಹಾಳಾಗುವೆ' ಎಂದು ಹೆದರಿಕೆ ಹುಟ್ಟಿಸುವನು. ಗೃಹಸ್ಥನ ಗೆಳೆಯನು ರಾಜನಿಗೆ ಆ ಬಗ್ಗೆ ದೂರು ಕೊಡದಂತೆ ಆತನನ್ನು ಪ್ರತಿಬಂಧಿಸುವನು. ಗೃಹಸ್ಥನೆ ತನ್ನ ಗೆಳೆಯನ ಇಲ್ಲವೆ ರಾಜನ ಕಡೆಗೆ (ಸ್ವತಃ) ಹೋಗಿ, ಇಲ್ಲವೆ ಹೇಳಿಕಳಿಸಿ, ತನಗೆ (ಕಳ್ಳರ ಮುಖಂಡನಿಂದ) ಒದಗಿದ ಆಪತ್ತಿನಿಂದ ಪಾರಾಗಲು ಯತ್ನಿಸದಂತೆ, ಆ ಗೃಹಸ್ಥ ನನ್ನು ತಲೆ ಕೆಳಗೆ ಮಾಡಿ ಬಗೆಬಗೆಯ ಹಗ್ಗಗಳಿಂದ ಹೆಡಮುರಿಕೆ ಬಿಗಿಯುವನು. ಆ ನಂತರ ಉಳಿದ ತನ್ನ ಪ್ರೀತಿಯ ಕಳ್ಳರನ್ನು ಕರೆದುಕೊಂಡು ಆ ಗೃಹಸ್ಥನ ಸರ್ವಸ್ವವನ್ನೂ ಹಾಳುಮಾಡಿ ಬಿಡುವನು.

(ಕಳ್ಳರ ಮುಖಂಡನು ಅನುಸರಿಸುವ) ಇದೇ ರೀತಿಯಲ್ಲಿಯೇ, (ಅಧ್ಯಾತ್ಮಕ್ಕೆ ಮುಖ್ಯ ವೈರಿಯಾಗಿರುವ) ಈ ಕಾಮನೆಂಬ ವೈರಿಯ ಕಾರ್ಯವಿದು. ಸಕಲ ಸಜ್ಜನರ ಹೃದಯವನ್ನೇ ತನ್ನ ಮನೆಯ (ನೆಲೆ) ನ್ನಾಗಿ ಮಾಡಿಕೊಂಡು ವಾಸಿಸುವವನು. ಕರುಣಾಮಯಿಯಾದ ಭಗವಂತನು ತನ್ನ ಭಕ್ತರನ್ನು ಸಂಸಾರ ಬಂಧನದಿಂದ ಮುಕ್ತರನ್ನಾಗಿ ಮಾಡಲು ಅನೇಕ ಕಾರ್ಯಗಳನ್ನು ಸರ್ವದಾ ಅವರಿಂದ ಮಾಡಿಸುತ್ತಿರುವನು. ಆತನೇ ಜ್ಞಾನಕ್ಕೆ ವಿಷಯನಾದವನು. (ಸಜ್ಜನರ) ಹೃದಯದಲ್ಲಿ - ಈ ವಿಧವಾಗಿ ನೆಲೆಸಿರುವ ಭಗವಂತನನ್ನು, ಹೊಗೆಯು ಅಗ್ನಿಯನ್ನು ಮುಸುಕುವಂತೆ, 'ಕಣ್ಣೆದುರು ಸಕಲವನ್ನು ಚನ್ನಾಗಿ ಕಾಣಬರುವಂತೆ ತೋರಿಸುವವನಾದ್ದರಿಂದ 'ಆದರ್ಶ' (ಮುಖಕನ್ನಡಿ) ಯೆಂಬ ಹೆಸರಿನಿಂದ ಕರೆಯಲ್ಪಡುತ್ತಿರುವ ಭಗವಂತನನ್ನು,

ಧೂಳು ಕನ್ನಡಿಯನ್ನು ಮಲಿನ ಗೊಳಿಸುವಂತೆ, ತನ್ನಿಚ್ಛೆಯಿಂದಲೆ ( ಸಜ್ಜನರ ಹೃದಯದಲ್ಲಿ) (ಬಿಂಬರೂಪವಾಗಿ) ನೆಲಿಸಿದ ( ನಿರ್ಲೇಪನಾದ ) ಭಗವಂತನನ್ನು, ಆತನಿಗೆ ಪ್ರತಿಬಿಂಬ ಸ್ಥಾನದಲ್ಲಿ ಇರುವ ಜೀವನನ್ನು, (ಇವರಿಬ್ಬರೂ) ಕಣ್ಮರೆಯಾಗುವಂತೆ ಕಾಮನು ಆವರಿಸಿ - ಮುಚ್ಚಿಬಿಡುವನು, ಭಗವಂತನು ಜೀವನಿಗೆ ಜ್ಞಾನವನ್ನು ಉಂಟುಮಾಡುವನು, ಹುಟ್ಟುಸಾವುಗಳ ರೂಪವಾದ ಸಂಸಾರದ ಭೀತಿಯನ್ನು ತೊಲಗಿಸುವನು. ಅಂತೆಯೆ ಜೀವಿಯ ಅತ್ಯಂತ ಪ್ರೀತಿಗೆ ಪಾತ್ರನಾದವನು. ( ಮೋಕ್ಷಕ್ಕೆ ) ಅಧಿಕಾರಿ (ಪಾತ್ರ) ಯಾದ ಇಂಥ ಜೀವನನ್ನು, ಗರ್ಭಕೋಶದಲ್ಲಿ ಶಿಶುವನ್ನು ಕಟ್ಟಿಹಾಕಿದಂತೆ, ಬಗೆಬಗೆಯ ವಿಷಯಗಳ ಬಗೆಗಿರುವ ಆಸಕ್ತಿ ( ಲೋಲುಪತೆ ) ಯೆಂಬ ಪಾಶಗಳಿಂದ ಕಾಮನು ಬಿಗಿಯಾಗಿ ಬಂಧಿಸಿ, ಆತನ ಸರ್ವಸ್ವ ( ಪುರುಷಾರ್ಥ ) ವನ್ನೇ ಹಾಳುಮಾಡಿ ಬಿಡುವನು. ಇದರಲ್ಲಿಯೂ ಒಂದು ವಿಶೇಷ ಸಂಗತಿ ಇರುವದು. ಅದೆಂದರೆ, ರಾಜನ ಪ್ರೀತಿಯನ್ನು ವಿಶೇಷವಾಗಿ ಪಡೆದಿರುವ ವ್ಯಕ್ತಿಯ ಸಂಪತ್ತನ್ನು ( ಜಾಣರಾದ ) ಕಳ್ಳರು ಒಮ್ಮೆಗೆ ಸೂರಿಗೊಳ್ಳುವದಿಲ್ಲ. ಪ್ರಾರಂಭಕ್ಕೆ ಚಿಕ್ಕ ಪುಟ್ಟ ಹಾನಿಯನ್ನಷ್ಟೇ ಅವರು ಮಾಡುವರು; ಅದು ಕೂಡ ಕೆಲಕಾಲ ಮಾತ್ರ, ದೂರದಲ್ಲಿ ನಿಂತುಕೊಂಡೇ. ಅದಕ್ಕೆ ರಾಜನ ಶಿಕ್ಷೆಯ ಭಯವೇ ಕಾರಣ. - ವ್ಯಕ್ತಿಯಿಂದಲೇ ಆಗಲಿ, ಇಲ್ಲವೆ ಆತನ ಗೆಳೆಯನ ಮುಖಾಂತರವಾಗಲಿ ರಾಜನಿಗೆ ತಿಳಿಯುವವರೆಗೆ ಮಾತ್ರ ದೂರದಿಂದಲೆ (ತಿಳಿಯದಂತೆಯೆ ಅವರ ಕಳ್ಳತನ ಆನಂತರ ಕಳ್ಳರ ಆಟ ನಡೆಯದು. - ಯಾರಿಂದಲಾದರೂ ರಾಜನಿಗೆ ತಿಳಿದರೆ ತಾವು ಸಮೂಲ (ಬೇರೊರಿಸಿ) ನಾಶವಾಗುವೆವೆಂದು ಅವರಿಗೆ ಹೆದರಿಕೆ. - ಎರಡನೆಯದಾಗಿ ರಾಜನ ಕೃಪೆಯನ್ನು ಹೆಚ್ಚಾಗಿ ಪಡೆಯದ ವ್ಯಕ್ತಿಯ (ಪುರುಷನ) ಸಂಪತ್ತನ್ನು ಕಳ್ಳರು ಸಂಪೂರ್ಣವಾಗಿ ನಾಶಮಾಡುವದಿಲ್ಲ. - ಇದರಲ್ಲಿಯೂ ಒಂದು ವಿಶೇಷ ವಿಚಾರವಿದೆ. ಮೊದಲಿನ ಉದಾಹರಣೆಯಲ್ಲಿ ಮನೆಯ ಒಡೆಯನಿಗಾಗಲಿ, ಹಾಗೂ ಅವನ ಗೆಳೆಯನಿಗಾಗಲಿ, ತಾವು ಮಾಡುವ ಹಾನಿಯು ಗೊತ್ತಾಗದವರೆಗೆ ಮಾತ್ರ; ಆನಂತರ ತಮ್ಮ ಕಾಯಕವನ್ನು ಅವರು ಬಿಟ್ಟುಕೊಡುವರು ಆದರೆ ಈ ಉದಾಹರಣೆಯಲ್ಲಿ ಒಡೆಯನಿಗಾಗಲಿ, ಆತನ ಗೆಳೆಯನಿಗಾಗಲಿ, ತಮ್ಮ ಕಳ್ಳತನವು ಗೊತ್ತಾದನಂತರವೂ ಅವರು ಅದನ್ನು ಬಿಟ್ಟುಕೊಡುವದಿಲ್ಲ. - ಏಕೆಂದರೆ, ಮೊದಲಿನ ಉದಾಹರಣೆಯಂತೆ ಅವರಿಗೆ ರಾಜನು ದಂಡಿಸುವ ಭಯವಿಲ್ಲ. ಬಹಳವಾದರೆ ರಾಜನು ಕಳ್ಳತನವನ್ನು ನಿಲ್ಲಿಸಬಹುದಷ್ಟೆ ಏಕೆಂದರೆ ಆ ವ್ಯಕ್ತಿಯು ರಾಜನ ವಿಶೇಷ ಪ್ರೇಮವನ್ನು ಪಡೆದವನಲ್ಲ. ಪ್ರೀತಿ ವಿಶೇಷವನ್ನು ಪಡೆದವನಲ್ಲ. (ರಾಜನಿಗೆ ತಮ್ಮ ಕಳ್ಳತನವು ತಿಳಿದ ಮೇಲೆ) ಇನ

ಮುಂದೆ ಆ ವ್ಯಕ್ತಿಗೆ ಹೆಚ್ಚಿನ ಹಾನಿಯಾಗಬಾರದೆಂದು ರಾಜನು ತಮ್ಮನ್ನು ನಾಶ ಗೊಳಿಸಿಯೆಬಿಡುವದು ಎಂದು ಅವರಿಗೆ ಹೆದರಿಕೆ. ಮತ್ತು ಮೊದಲಿನ ವ್ಯಕ್ತಿಯ ವಿಷಯದಲ್ಲಿ ದೂರದಲ್ಲಿ ನಿಂತುಕೊಂಡು (ಅಜ್ಞಾತವಾಗಿ) ತಮ್ಮ ಕಾಯಕ ವನ್ನು ಸಾಗಿಸುವಂತೆ, (ರಾಜನ ಪ್ರೀತಿಗೆ ಅಷ್ಟೊಂದು ಪಾತ್ರನಾಗದವನ ವಿಷ ಯದಲ್ಲಿ) ಕಳ್ಳರು ಮಾಡದೆ ಆತನ ಬಳಿಯಲ್ಲಿಯೆ ಇದ್ದುಕೊಂಡು ತಮ್ಮ ಆಟ ನಡೆಸುವರು. ಏಕೆಂದರೆ, ರಾಜನು ಶಿಕ್ಷಿಸಬಹುದೆಂಬ ಭಯವು ಇಲ್ಲಿ ಇರುವ ದಿಲ್ಲ. ಇನ್ನು ರಾಜನ ಪ್ರೀತಿಯನ್ನು ಕಿಂಚಿತ್ತೂ ಪಡೆಯದ (ಮೂರನೆಯ ಬಗೆಯ) ವ್ಯಕ್ತಿಯಾಗಲಿ, ಅವನ ಗೆಳೆಯನಾಗಲಿ (ತಮ್ಮ ಬಗ್ಗೆ) ದೂರು ಕೊಡುವ ಭೀತಿಯು ಕಳ್ಳರಿಗಿರುವದಿಲ್ಲ. ಆದುದರಿಂದ ಕಳ್ಳರು ತಮ್ಮ ಸ್ವಹಿತ ಸಾಧಿಸುವ ದಕ್ಕಾಗಿ ಮನೆಯ ಒಡೆಯನನ್ನು, ಅವನ ಗೆಳೆಯನನ್ನು ಬಗೆಬಗೆಯ ಹಗ್ಗಗ ಳಿಂದ ಬಿಗಿಯಾಗಿ ಕಟ್ಟಿ) ಅವನ ಮನೆಯಲ್ಲಿಯೇ ನಿಂತುಕೊಂಡು, ತಮ್ಮ ಪ್ರೀತಿಯ ಉಳಿದ ಜೊತೆಗಾರರೊಂದಿಗೆ ಕೂಡಿಕೊಂಡು, ಮನೆಯ ಒಡೆಯನ ಸಮಗ್ರ ಸಂಪತ್ತನ್ನೆಲ್ಲ ಮನ ಬಂದಂತೆ ಹಾಳು ಮಾಡಿಯೆ ಬಿಡುವರು. ಪ್ರಬಲ ವೈರಿಯಾದ ಕಾಮನ ಕಾರ್ಯವೂ ಇದೇ ರೀತಿಯಾಗಿ ನಡೆಯುವದು. ಭಗವಂತನ ವಿಶೇಷ ಪ್ರೀತಿಯನ್ನು ಪಡೆದಿರುವ (ಮುಕ್ತಿಯೋಗ್ಯ) ಜನರನ್ನು ಕಾಮನು ದೂರ ದಲ್ಲಿಯೆ ನಿಂತುಕೊಂಡು, ಹೊಗೆಯು ಅಗ್ನಿಯನ್ನು ಕೇವಲ ಹೊರಗಿನಿಂದ ಮುಸುಕುವಂತೆ, ಆವರಿಸುವನು. ಮುಕ್ತಿಯೋಗ್ಯ ವ್ಯಕ್ತಿಯ ಅಂತಃ ಸ್ವರೂಪಕ್ಕೆ ಕಾಮನ ಆವರಣವಿಲ್ಲ. ಕಾಮನ ಹಾನಿಯು ಅದಕ್ಕೆ ತಟ್ಟದೆಂಬುದೆ ಈ ಮಾತಿನ ಒಳ ಅರ್ಥ. - ಅರ್ಧಮರ್ಧ ಅಲ್ಪ ಅನುಗ್ರಹವನ್ನು (ಪ್ರೀತಿಯನ್ನು) ಪಡೆದ (ಎರ ಡನೆ ಪ್ರಕಾರದ)) ಮಧ್ಯಮ ತರಗತಿಯ ವ್ಯಕ್ತಿಯನ್ನು ಕಾಮನು ಧೂಳಿನಿಂದ ಮೆತ್ತಿದ ಕನ್ನಡಿಯಂತೆ ಮಲಿನಗೊಳಿಸುವನು. ಈ ಮಾಲಿನ್ಯವು ಕೇವಲ ಹೊರಗಿ ನದು ಆಗಿಲ್ಲ. ವ್ಯಕ್ತಿಯ ಅಂತಃ ಸ್ವರೂಪಕ್ಕೂ ಅದರ ಬಾಧೆ ತುಸು ತಟ್ಟುವದು. ಲೇಪಿಸುವದು. ಎಂಬುದು ಈ ಮಾತಿನ ಗುಟ್ಟು. - ಪರಮಾತ್ಮನ ಪ್ರೀತಿಯನ್ನು ಎಳ್ಳಷ್ಟೂ ಪಡೆಯದ ಕನಿಷ್ಟ (ಅಧಮ) ಜನರ ಅಂತಃ ಸ್ವರೂಪವೇ ದುಷ್ಟ ಕಾಮಾದಿ ವಿಕಾರಗಳಿಂದ ತುಂಬಿಕೊಂಡಿರುವದು ಎಂಬುದು ಈ ಮಾತಿನ ಮರ್ಮ. ಈ ಮೂರು ಬಗೆಯ ಜನರಲ್ಲಿ, ಪರಮಾತ್ಮನ ವಿಶೇಷ ಪ್ರೀತಿಯನ್ನು ಪಡೆದವ ನನ್ನು, ಹೊಗೆಯು (ಹೊರಗಿನಿಂದ ಮಾತ್ರ) ಬೆಂಕಿಯನ್ನು ಸುತ್ತುವಂತೆ, ಕಾಮನು ಆವರಿಸುವನು. ಕಾಮನ ಈ ಹೊದಿಕೆ ಅಂಥವರಿಗೆ ಕೇವಲ ಹೊರ ಗಿನದು ಮಾತ್ರ. ಆದುದರಿಂದ, ಕಾಮಾದಿಗಳಿಗೆ ಮನಸೋತರೆಂದು, ಅವರು ಹೊರಹೊರಗೆ ತೋರುತ್ತಿದ್ದರೂ, ಅವರ ಅಂತಃಸ್ವರೂಪವು ಕಾಮಾದಿಗಳ ಉಪ ಟಳಕ್ಕೆ ಒಳಗಾಗಿರುವದಿಲ್ಲ. - 'ಬಿಂಬೋಪದೇಶದ ಗುರುಪ್ರಾಪ್ತಿ' ಯೆಂಬ ಪ್ರಕ

ರಣದ 'ನ ವೈ ಜನೋ . ಸಂಸೃತಿ' – ಎಂಬ ೨೧೬ ನೇ ಶ್ಲೋಕದಲ್ಲಿ (ಮೋಕ್ಷ ದಾಯಕ ಮುಕುಂದನ ಆರಾಧನೆಯನ್ನು ಮಾಡುವವನು ಅನ್ಯರಂತೆ ಸಂಸಾರ ಬಂಧನಕ್ಕೆ ಎಂದಿಗೂ ಒಳಗಾಗುವದಿಲ್ಲ) – ಎಂದು ಹೇಳಿದೆ. ಭಗವಂತನ ಅಲ್ಪ ಪ್ರೀತಿಯನ್ನು ಪಡೆದ ಮಧ್ಯಮಮಟ್ಟದ ಅಧಿಕಾರಿಯನ್ನು, – ಧೂಳು ಕನ್ನಡಿಗೆ ಮೆತ್ತುವಂತೆ, ಕಾಮನು ಮುತ್ತುವನು, ಆದುದರಿಂದ, ಅಂಥ ವ್ಯಕ್ತಿಯು ಕಾಮನ ಪ್ರಭಾವಕ್ಕೆ ಕಿಂಚಿತ್ ಮಾತ್ರ ಒಳಗಾಗಿದ್ದರೂ, ಆತನ ಅಂತಃಸ್ವರೂ ಪವು ಬಹುಮಟ್ಟಿಗೆ ಕಾಮನಿಂದ ಬಾಧಿತವಾಗಿರುವದಿಲ್ಲ. ಮಲಿನಗೊಂಡಿರುವ ದಿಲ್ಲ. – ಈ ಬಗ್ಗೆ 'ದೇಶ ಪ್ರಶಂಸಾ' ಎಂಬ ಪ್ರಕರಣದ- 'ಶಿಲೋಂಛವೃತ್ತ್ಯಾ... ಸಮುಪೈತಿ ಶಾಂತಿಂ' ಇತ್ಯಾದಿ ಶ್ಲೋಕಗಳಲ್ಲಿ ಹೀಗೆ ಹೇಳಿರುವರು.— ಸುಗ್ಗಿಯ ನಂತರ ರಾಶಿಯ ಕಣದಲ್ಲಿ ಉಳಿದಿರುವ ಧಾನ್ಯದ ಕಾಳುಗಳಿಂದ ಉಪಜೀವಿಸುವದರಿಂದಲೆ, ಸಂತುಷ್ಟ ಮನಸ್ಸುಳ್ಳವರಾಗಿ, ದೋಷರಹಿತವಾದ ನಿವೃತ್ತಿ ಧರ್ಮವನ್ನು ಆಚರಿಸುತ್ತ, ತಮ್ಮ ಹೃದಯವನ್ನು ಪೂರ್ಣವಾಗಿ ನನಗೆ (ಭಗವಂತನಿಗೆ) ಅರ್ಪಿಸುವ, ಆಸಕ್ತಿಯನ್ನು ತೊರೆದ ಜನರು ಗೃಹಸ್ಥರಾಗಿದ್ದರೂ ಅವರು ಶಾಂತಿರೂಪವಾದ ಮುಕ್ತಿಯನ್ನು ಹೊಂದುವರು ಎಂದು ಹೇಳಿದೆ. ಇನ್ನು [ಪರಮಾತ್ಮನ ಪ್ರೀತಿಯೆ ಇಲ್ಲದ] ಕನಿಷ್ಠ ಮಾನವನು ಕಾಮಾದಿಗಳಿಗೆ ( ಬಿಡಿಸಿಕೊಳ್ಳಲು ಬಾರದಷ್ಟು ) ಅಧೀನನಾಗಿ, ತನ್ನ ಸತ್ವವ ನ್ನೆಲ್ಲ ಕಳೆದುಕೊಂಡು, ಸಂಸಾರವೆಂಬ ಕಾಡಿನಲ್ಲಿ ವ್ಯಾಪಾರಿಯಂತೆ ಅಲೆದಾಡು ವನು. ವೈರಾಗ್ಯ ಪ್ರಕರಣದ ೬೩ ನೇ ಶ್ಲೋಕದಲ್ಲಿ 'ಕಥಂಪ್ರಿಯಾಯಾ.. ಮಡದಿ ಮಕ್ಕಳ ಮೋಹಕ್ಕೆ ಒಳಗಾಗಿ ಕಾಮ್ಯ ಕರ್ಮದಲ್ಲಿ ತೊಡಗುವವನು ಕೋಶದಲ್ಲಿ ಕೈಸೆರೆಯಾದ ಕೀಟಕದಂತೆ, ಎಂದಿಗೂ ಮುಕ್ತನಾಗುವದಿಲ್ಲ. ಆದು ದರಿಂದ, ಅಪೇಕ್ಷಿತವಾದ ಪುರುಷಾರ್ಥವನ್ನು ನಾಶಗೊಳಿಸುವ (ಅದು ದೋಚಿಯು ದಂತೆ ಮಾಡುವ), ಕಾಮನು ಸಾಧಕನಿಗೆ ಪ್ರಬಲ ಶತ್ರುಗಳಲ್ಲಿ ಆತನೇ ಅತಿ ಬಲಿಷ್ಠನು. ಕಾಮನಿಗೆ ಅಧಿಷ್ಠಾನ (ನೆಲೆ) ವಾಗಿರುವ ಖ್ಯಾತ ಇಂದ್ರಿಯಗಳಲ್ಲಿ ಮನವೆಂಬ ಇಂದ್ರಿಯವೆ ಶ್ರೇಷ್ಠವಾದುದು. ಪತಿನಿಷ್ಠೆಯಿಲ್ಲದ ಕುಲಟೆಗೆ ಪರ ಪುರುಷನು ಆಶ್ರಯವಾಗಿರುವಂತೆ, ಮನವು ಕಾಮಕ್ಕೆ ಆಶ್ರಯ–ಆಸರವಾಗಿರು ವದು. ಆದುದರಿಂದ ಕಾಮನಿಗೆ ಸರ್ವಥಾ ಆಧೀನವಾಗಬಾರದು; ಅದನ್ನು ಬಿಟ್ಟುಕೊಡಲೇಬೇಕು. 'ತಪಃ ಶಿಕ್ಷೇತ್' ಎಂಬಲ್ಲಿ, ಕಾಮದ ತ್ಯಾಗವನ್ನೇ ಬೋಧಿ ಸಿದೆ. ಆನಂತರ ಸಿಟ್ಟನ್ನೂ ಬಿಟ್ಟುಕೊಡಬೇಕೆಂಬ ಅಭಿಪ್ರಾಯದಿಂದ, 'ಅಂಹಿಸಾಂ ಶಿಕ್ಷೇತ್' ಎಂಬುವಲ್ಲಿ, ಎರಡನೆಯ ವೈರಿಯಾದ ಕ್ರೋಧವನ್ನೂ ಬಿಡಲೇಬೇಕೆಂದೂ ಕೇವಲ ಕಾಮತ್ಯಾಗ ಮಾತ್ರವಲ್ಲದೆ, ಕ್ರೋಧದತ್ಯಾಗವೂ ಶ್ರೇಷ್ಠವಾದ ತಪಸ್ಸೆಂದು

ಹೇಳಿದೆ. ಕ್ರೋಧವೇ ಹೆಚ್ಚಿನ ಹಿಂಸೆ. ಪರಪೀಡೆಯು ಕ್ರೋಧದಿಂದಲೆ ಸಂಭವಿಸುವದರಿಂದ, ಅದು ಕ್ರೋಧದ ಕಾರ್ಯವೇ ಆಗಿರುವದರಿಂದ, ಕ್ರೋಧಕ್ಕೇ ಹಿಂಸೆಯೆಂದು ಹೆಸರು.

(೧೧) **ಸಮತ್ವಂ ಶಿಕ್ಷೇತ್ :**-ಸುಖದುಃಖ, ಮಾನಾಪಮಾನ ಮುಂತಾದ ದ್ವಂದ್ವ ಭಾವನೆಗಳನ್ನು ಅವುಗಳಿಗೆ ಅಳುಕದೆ, ಶ್ರೀ ಹರಿಯ ಇಚ್ಛೆಯೆಂದು, ಸಮನಾಗಿ ಭಾವಿಸುವದು. (ಸಮತ್ವವು ಹನ್ನೊಂದನೆಯ ಭಾಗವತ ಧರ್ಮವು ಇಲ್ಲಿ ಒಂದು ಆಕ್ಷೇಪವಿದೆ. ಬೇರೆ ಯಾವ ಗ್ರಂಥಗಳಲ್ಲಿಯೂ ತುಷ್ಟಿ (ಮನಸ್ಸಿನ ಸಮತ್ವವನ್ನು) ಯನ್ನು ಯಮ ಹಾಗೂ ನಿಯಮಗಳ ಗುಂಪಿನಲ್ಲಿ ತೆಗೆದುಕೊಂಡಿರುವದಿಲ್ಲ. ಭಾಗವತ ಧರ್ಮಗಳಲ್ಲಿ ಅದರ ಸೇರ್ಪಡೆ ಏಕೆ ? ಎಂಬ ಪ್ರಶ್ನೆಗೆ ಉತ್ತರ ಹೇಳುವರು. 'ಸರಿ, ನೀವು ಹೇಳುವದು ನಿಜ. ಆದರೆ, ಯಮ-ನಿಯಮಗಳ ವಿವೇಚನೆಯಲ್ಲಿ, ಲಾಕ್ಷಣಿಕವಾಗಿ, ಉದಾಹರಣೆಯ ರೂಪದಿಂದ ತುಷ್ಟಿಯನ್ನು ಇಲ್ಲಿಯೂ ತೆಗೆದುಕೊಂಡಿದೆ, ಪ್ರತ್ಯಕ್ಷ (ಸ್ಪಷ್ಟ) ವಾಗಿ ಹೇಳದಿದ್ದರೂ, (ಯಮನಿಯಮಗಳ ಅಂಗವೆಂದು) ಸೂಚ್ಯವಾಗಿ ಹೇಳಿದೆ. ವಿಷಯವನ್ನು ಸ್ಪಷ್ಟಗೊಳಿಸಲು, ಯಾವದು ಅಗತ್ಯವಾಗಿರುವದೊ, ಅದನ್ನು ತೆಗೆದುಕೊಳ್ಳಲೇಬೇಕಲ್ಲವೆ ? 'ಇಷ್ಟು ಸಾಕು, ಹೆಚ್ಚಿಗೆ ಬೇಡ' ಎಂಬ ಅಲಂಬುದ್ಧಿಯೆ ತುಷ್ಟಿಯಾಗಿದೆ. ಭಕ್ತಿಯ ಬಗ್ಗೆ ಆಸಕ್ತಿಯನ್ನು ಹುಟ್ಟಿಸಲು, ಭಕ್ತಿಯ ಸಾಧನೆಗಳಲ್ಲಿ ಅಲಂಬುದ್ಧಿಯು ಉಪಯುಕ್ತವಾಗಿಲ್ಲ. ಭಕ್ತಿಯು ಎಷ್ಟಿದ್ದರೂ ಕಡಿಮೆಯೆ, ಎಂದಿಗೂ ಹೆಚ್ಚೆನಿಸದು. ಅಲಂಬುದ್ಧಿಯು ಭಕ್ತಿಗೆ ಸಂಬಂಧಿಸಿರುವದಿಲ್ಲ, ಅದು ಬೇರೆ ವಿಷಯವಾಗಿದೆ. ಎಂದು ಆಕ್ಷೇಪಿಸಿದರೆ, 'ಗ್ರಾಮ್ಯ ವಿಷಯಗಳ (ಮಡದಿ ಮನೆ, ಮನೆವಾರ್ತೆಗಳ) ಬಗ್ಗೆ ಆಸಕ್ತಿಯನ್ನು ಕ್ರಮಶಃ ಕಡಿದುಕೊಳ್ಳುವದೇ ಅಲಂಬುದ್ಧಿಯಾಗಿರುವದು. ಭಾಗವತ ಧರ್ಮಗಳಲ್ಲಿ 'ತುಷ್ಟಿ'ಯನ್ನು ಸೇರಿಸಲು ಇದೇ ಕಾರಣ, ಗ್ರಾಮ್ಯ ವಸ್ತುವಿನ ಬಗ್ಗೆ ಆಸಕ್ತಿ-ಬಯಕೆಯನ್ನು ತೆಗೆದುಹಾಕುವದರಿಂದಲೆ ಅಲಂಬುದ್ಧಿ ಅಥವಾ ತುಷ್ಟಿಯು ಉಂಟಾಗುವದೆನ್ನುವಿರಿ, ಅಂಥ 'ಗ್ರಾಮ್ಯ'-ವಸ್ತು ಯಾವುದು ? ಈ ಮಾತನ್ನು ಸ್ಪಷ್ಟಗೊಳಿಸುವರು. 'ಸಮತ್ವಂ ದ್ವಂದ್ವ ಸಂಜ್ಞಯೋಃ, ದ್ವಂದ್ವವೆಂದರೆ-ಸಜಾತೀಯ ಜೋಡು ವಿರುದ್ಧ ವಸ್ತುಗಳು. ಇವುಗಳಲ್ಲಿ ಸುಖದುಃಖಗಳ ಜೋಡು ಪ್ರಧಾನವಾದುದು. ಸುಖದುಃಖಗಳ ಜೋಡಿಗೆ ಸಹಕಾರಿಯಾಗಿರುವ ('ಲಾಭಾಲಾಭ') ಮುಂತಾದ ಜೋಡುವಸ್ತುಗಳಿಗೂ 'ದ್ವಂದ್ವ' ಗಳೆಂದು ಹೇಳುವರು. ದ್ವಂದ್ವಪದದಿಂದ ಸುಖದುಃಖಗಳೆಂದು ಹೇಳಲು ಬರುತ್ತಿದ್ದರೂ, 'ದ್ವಂದ್ವಗಳ ಬಗ್ಗೆ', ಎಂದು ಮಾತ್ರ ಹೇಳದೆ, 'ದ್ವಂದ್ವ ಸಂಜ್ಞಯೋಃ' (ದ್ವಂದ್ವಗಳೆಂದು ಹೇಳಲ್ಪಡುವ ವಸ್ತುಗಳಲ್ಲಿ) ಎಂದು ಹೇಳುವದು

(ಸುಖದುಃಖ ಮಾತ್ರವಲ್ಲದೆ) (ಸುಖದುಃಖಗಳಿಗೆ ಸಹಕಾರಿಯಾಗಿರುವ) ಅನ
ಜೋಡು ವಸ್ತುಗಳನ್ನೂ ಅವುಗಳಲ್ಲಿ ಸಮಾವೇಶ ಮಾಡುವದೇ ಉದ್ದೇಶವಾಗಿದೆ
ಇದರಿಂದ ಸುಖ ಹಾಗೂ ದುಃಖಗಳ ಜೋಡು, (ಪ್ರಾಮುಖ್ಯವಾಗಿ) ಈ ದ್ವಂದ್ವ
'ಗ್ರಾಮ್ಯ' ಶಬ್ದಕ್ಕೆ ಅಪೇಕ್ಷಿತವಾದ ಅರ್ಥವೆಂದು ಹೇಳಿದಂತಾಯಿತು. ಈ ಒ
ಹೀಗೆ ಕೇಳಬಹುದು :- ಸುಖದುಃಖಗಳೆರಡರಲ್ಲಿಯೂ ಆಸಕ್ತಿಯನ್ನು ಸಮನಾ
ಬಿಟ್ಟುಕೊಡಬೇಕು, ಅವುಗಳೆರಡನ್ನೂ ಸಮನಾಗಿ ಕಾಣಬೇಕು, ಎಂದು ನೀ
ಹೇಳುವ ಮಾತು (ಆಚರಿಸಲು) ಅಶಕ್ಯವಾಗಿಯೆ ತೋರುತ್ತದೆ. ಏಕೆಂದರೆ, ಸುಖ
ಯಾವಾಗಲೂ ಎಲ್ಲರೂ ಬಯಸುವ ವಸ್ತು; ದುಃಖವು ಎಲ್ಲರಿಗೂ ಬೇಡವಾದುದು
ತ್ಯಾಜ್ಯವಾದುದು. ಇವೆರಡನ್ನು ಸಮಾನ ದೃಷ್ಟಿಯಿಂದ ಕಾಣುವದೆಂದರೆ, ಸು
ವನ್ನು ಬಯಸಬಾರದು, ದುಃಖವು ಬೇಡವೆನ್ನಬಾರದು, ಸುಖದುಃಖಗಳ ಸಮತ್ವ
ಇದೇ ಅರ್ಥವಾದರೆ, ಎಲ್ಲ ಬುದ್ಧಿವಂತರು ಈ ಮಾತನ್ನು ಒಪ್ಪಲಾರರು.
ಸಮತ್ವವನ್ನು ಹೇಗೆ ತಿಳಿದುಕೊಳ್ಳಬೇಕು ? ಎಂದರೆ, ಸಮತ್ವಕ್ಕೆ ನೀವು ಆರೋ
ಪಿಸುವ ಅರ್ಥವೇ ಸತ್ಯವಾಗಿದೆ, ಸಮರ್ಪಕವಾಗಿದೆ. ಅದೇ ಸಮತ್ವವಾಗಿ
'ಸುಖವನ್ನು ಹೇಯವೆಂದು ಭಾವಿಸಬೇಕಾದೀತು' ಎಂಬ ನಿಮ್ಮ ಆಕ್ಷೇಪವನ್ನೇ ಸಮ
ತ್ವವು ಒಳಗೊಂಡಿರುವದು. ಪರಮ ಪುರುಷಾರ್ಥವಾದ ಮೋಕ್ಷವನ್ನು ಬಯಸ
ವವನು ಸುಖದುಃಖಗಳ ಸಮತ್ವವನ್ನು ಈ ರೀತಿಯಲ್ಲಿಯೆ ಅರ್ಥವಿಸಿಕೊಳ್ಳಬೇಕು
ಯಾರೂ ದುಃಖವನ್ನು ಹೇಗೆ ಬಯಸುವದಿಲ್ಲವೊ, ಅದೇ ರೀತಿಯಲ್ಲಿ (ಹೊನ್ನು
ಹೆಣ್ಣು ಮುಂತಾದ) ಭೌತಿಕ ವಸ್ತುಗಳಿಂದ ಜನಿಸುವ ವೈಷಯಿಕ ಸುಖವನ್ನು
ಹೇಯವೆಂದು ತಿಳಿದು ಯಾರೂ ಬಯಸಕೂಡದು. ಸುಖವು ದುಃಖಕ್ಕೆ ಸಮಾನ
ವೆಂದು ಭಾವಿಸುವದು ಇದೇ ದೃಷ್ಟಿಯಿಂದಲೆ. ಅಂಧತಮಸ್ಸಿನಂಥ ನರಕ
ಲ್ಲಿಯ ಮೂರ್ಛಾದಿ ಯಾತನೆಗಳ ಬಗ್ಗೆ ಕೇಳಿದಾಗ್ಗೆ, ಇಲ್ಲವೆ ಅವುಗಳ ಬಗ್ಗೆ
ಮಾತನಾಡಿದಾಗ್ಗೆ, ಸದ್ಯದ ದುಃಖವು ಇಮ್ಮಡಿಯಾಗುವಂತೆ, ವಿಷಯ ಸುಖ
ವನ್ನು ಬಯಸುವದರಿಂದ ದುಃಖ ಉಂಟಾಗುವದೆಂದು ಹೇಳಿರುವರು. ವಿಷಯ
ಸುಖಗಳ ಅನಿಷ್ಟದ ಬಗ್ಗೆ ಇದಕ್ಕಿಂತಲೂ ಏನು ಹೆಚ್ಚಿಗೆ ಹೇಳುವದಿದೆ ? 'ದುಃಖ
ಕಾಮ ಸುಖಾಪೇಕ್ಷಾ' (ಕಾಮ ಮುಂತಾದ) ವಿಷಯ ಸುಖಗಳ ಅಪೇಕ್ಷೆಯೆ
ದುಃಖವಾಗಿದೆ, (ಎಂದು ಭಾಗವತದಲ್ಲಿ ಹೇಳಿದೆ). ವೈಷಯಿಕ ಸುಖಗಳು ಹೇಯ
ವೆಂಬ ತಿಳುವಳಿಕೆ ಉಂಟಾದರೆ, ಅದರಿಂದ ಏನು ಪ್ರಯೋಜನ ? ಎಂದು ಕೇಳಿದ
ಈ ಬಗೆಯ ತಿಳುವಳಿಕೆಯಿಂದ ವಿಷಯಸುಖಗಳನ್ನು ಬಯಸುವದನ್ನೇ ಬಿಟ್ಟು
ಕೊಡಬೇಕು. ಇದುವೇ ಅವುಗಳಿಗೆ ಉಪರಮ-ಕೊನೆ, ಮುಕ್ತಾಯ. ಹೀಗೆ
ಮಾಡುವದರಿಂದ ಏನು ಸಾಧಿಸುವದು ? ಎಂದರೆ, ಕಾಮಾದಿ ವಿಷಯ ಸುಖಗಳ

ರಾಗ [ಅನುರಾಗ-ಆಸಕ್ತಿ] ಆಕಾಂಕ್ಷೆಯನ್ನು ಬಿಟ್ಟುಕೊಡುವ ವೈರಾಗ್ಯವೆಂಬ ಮಹಾಭಾಗ್ಯವನ್ನು ಆದರಿಂದ ಪಡೆಯುವೆವು. ಇನ್ನೊಂದು ಆಕ್ಷೇಪ:- ಹೆಣ್ಣು, ಹೊನ್ನು ಮುಂತಾದ ಐಹಿಕ ವಿಷಯಗಳಲ್ಲಿ, ಯಾವದಾದರೂ ಒಂದು ವಸ್ತುವಿನ ಸುಖದ ಆಸೆಯನ್ನು ಸಾಧಕನು ಹೇಗಾದರೂ (ಶ್ರಮವಹಿಸಿ) ಬಿಟ್ಟುಕೊಡಬಹುದು ಆದರೆ, ಒಂದನ್ನೂ ಬಿಡದೆ, ಸಕಲ ಲೌಕಿಕ ಸುಖಗಳಲ್ಲಿ ಆಸಕ್ತಿಯನ್ನು ಬಿಟ್ಟು ಕೊಡುವದು ಹೇಗೆ ಸಾಧ್ಯವಾದೀತು? ಅದು ಅಶಕ್ಯವೇ. ಎಂದರೆ, ನೀವು ಹೇಳುವದು ಸರಿಯಾದುದಲ್ಲ. ನಿಷ್ಠೆಯಿಂದ ರೂಢಿಮಾಡಿಕೊಂಡರೆ, ಇದೇನು ಅಶಕ್ಯವಾದ ಸಂಗತಿಯಲ್ಲ. ಹೇಗೆಂದರೆ, ಒಂದೊಂದಾಗಿ ಇಂದ್ರಿಯ ಸುಖಗಳಲ್ಲಿ ಮೋಹವನ್ನು ಬಿಟ್ಟುಕೊಡಬೇಕು. ಉದಾಹರಣೆಗೆ, (ಹಿತಮಿತವಿಲ್ಲದೆ) ತಿನ್ನಬೇಕೆನ್ನುವ ನಾಲಿಗೆಯ ಚಾಪಲ್ಯವನ್ನು (ದಾಸ್ಯವನ್ನು) ಮೊದಲನೆಯದಾಗಿ, ಆ ಮೇಲೆ ಶರೀರಕ್ಕೆ ಗಂಧಾದಿ ಸುಗಂಧ ಲೇಪಗಳ ಲೋಲುಪತೆಯನ್ನು, ಹೀಗೆ ಒಂದೊಂದಾಗಿ ಇಂದ್ರಿಯದ ಆಕರ್ಷಣವನ್ನು ಅಂಕಿತದಲ್ಲಿ ಇಟ್ಟುಕೊಳ್ಳುವ ರೂಢಿಯನ್ನು ಮಾಡಿದರೆ, ತಿಂಗಳು ಇಲ್ಲವೆ ವರುಷ ಕಳೆದಂತೆ, ಅಭ್ಯಾಸದ (ರೂಢಿಯ) ಬಲದಿಂದ, ಒಂದು ಇಂದ್ರಿಯದ ಮೋಹವು ಉಡುಗಿದ ಮೇಲೆ, ಮುಂದೆ, 'ಶ್ರೀಹರಿ ಪ್ರೀತ್ಯರ್ಥಕ್ಕಾಗಿ ಈ ಭೋಗ ಸುಖವನ್ನು ಬಿಟ್ಟುಕೊಡುವೆ' ಎಂದು ಸಂಕಲ್ಪ (ದೃಢನಿರ್ಧಾರ) ಮಾಡಿ, ಅವುಗಳನ್ನು ಬಿಟ್ಟುಕೊಡುವ ರೂಢಿಯನ್ನು ಮಾಡಿಕೊಂಡರೆ, ಸಕಲ ಇಂದ್ರಿಯಗಳ ಸುಖದ ಸೆಳೆತವನ್ನೂ ಮೀರಿ ನಿಲ್ಲುವದು ತುಂಬಾ ಶಕ್ಯವಾಗಿದೆ. ಈ ಬಗ್ಗೆ 'ಮದರ್ಥೇಚ ಪರಿತ್ಯಾಗಃ ಭೋಗಸ್ಯ ಚ ಸುಖಸ್ಯ ಚ' ನನ್ನ (ಭಗವಂತನ) ಪ್ರೀತಿಗಾಗಿಯೆ (ವಿಷಯಗಳ) ಭೋಗ ಸುಖಗಳನ್ನು ಬಿಟ್ಟುಕೊಡಬೇಕಾದುದು, ಎಂದು ಭಾಗವತದಲ್ಲಿ ಹೇಳಿದೆ.

ಹೀಗಿದ್ದರೂ ಈ ಬಗ್ಗೆ ಇನ್ನೊಂದು ಸಂದೇಹವನ್ನು ಕಲ್ಪಿಸುವರು :- ಅದೆಂದರೆ, ವಿಷಯ ಸುಖಗಳ ಬಗ್ಗೆ (ಈಹಾ) ಆಸಕ್ತಿಯನ್ನು ಪೂರ್ಣವಾಗಿ ತೊರೆಯುವದು ಅಶಕ್ಯವೆಂದೇ ತೋರುತ್ತದೆ, ಏಕೆಂದರೆ, ಈ ಲೋಕದಲ್ಲಿ ನಮಗೆ ಕಾಣಬರುವ, ಅಲ್ಪ ಹಾಗೂ ಕ್ಷಣಿಕವಾಗಿ ಬಾಳುವ ವಿಷಯಗಳ ಮೋಹವನ್ನು ಹೇಗಾದರೂ ತಡೆಯಬಹುದು. ಆದರೆ ನಮಗೆ ಕಾಣದಿರುವ (ಸ್ವರ್ಗಲೋಕದ ಅಪ್ಸರೆಯರು, ಮುಂತಾದ) ವಿಪುಲವಾದ ಹಾಗೂ ಬಹುಕಾಲ ಭೋಗಿಸಬಹುದಾದ ಸುಖದ ಅಪೇಕ್ಷೆಯನ್ನು ಹೇಗೆ ಬಿಟ್ಟುಕೊಡಲಾದೀತು? -ಎಂದು ಕೇಳಿದರೆ -ದೃಷ್ಟವಾದ (ಇಹಲೋಕದ) ಸುಖ ಭೋಗಗಳನ್ನು ಕ್ರಮಶಃ ಬಿಡುವದು, ಮೇಲೆ ಕೊಟ್ಟ ಉದಾಹರಣೆಯಿಂದ) ಶಕ್ಯವಿರುವಂತೆ, ಪರಲೋಕದ ಅದೃಷ್ಟವಾದ ಸುಖಭೋಗಗಳೂ ಕೂಡ ಅಷ್ಟೇ ಅನಿತ್ಯ ಹಾಗೂ ಅಸಾರ (ನಿರರ್ಥಕ)

ನಾಗಿವೆಯೆಂಬ ಭಾವನೆಯನ್ನು ದೃಢಗೊಳಿಸಿದರೆ, ಅವುಗಳ ಬಗ್ಗೆ ಆಕಾಂಕ್ಷೆಯೂ ನಷ್ಟವಾಗುವದು. – ಈ ಬಗ್ಗೆ ಹೀಗೆ ಹೇಳಿರುವರು. 'ಕರ್ಮಣಾಂ ... ದೃಷ್ಟವತ್' (ಭಾಗವತ) –ಎಂದರೆ, ಬ್ರಹ್ಮಲೋಕದವರೆಗಿನ ಎಲ್ಲ ವೈಷಯಿಕ ಸುಖಗಳು ಅವರವರ ಕರ್ಮಕ್ಕೆ ದೊರೆತ ಪ್ರತಿಫಲಗಳಾಗಿರುವವು. ಅಂತೆಯೆ ಅವು ಅಮಂಗಳವಾದುವು (ಅಪೇಕ್ಷಿಸಲು ಯೋಗ್ಯವಾದವುಗಳಲ್ಲ.) ದೃಷ್ಟ (ಇಹಲೋಕದ) ಭೋಗಗಳಂತೆ, ಅದೃಷ್ಟ (ಪರಲೋಕದ) ಭೋಗಗಳೂ ಅಷ್ಟೇ ನಶ್ವರ (ನಾಶವಾಗತಕ್ಕವು)ವೆಂಬುದನ್ನು ಜ್ಞಾನಿಯಾದವನು ತಿಳಿದುಕೊಳ್ಳಬೇಕು. ಈ ಮಾತನ್ನೂ ಹೇಳಿರುವರು, 'ಶನೈಃಇತಿ' :– ಮಹಾತ್ಮರ (ಭಗವದ್ಭಕ್ತರ) ನಿಂದೆ ಮಾಡಲು, ನಿಂದೆ ಮಾಡಲು ಹೆಚ್ಚುವ ಕೋಪವನ್ನು ಸರ್ವಥಾ ಬಿಟ್ಟುಕೊಡಬೇಕು. ಅದರಂತೆ (ಆಧ್ಯಾತ್ಮದ) ಆರು ವೈರಿಗಳಲ್ಲಿ ಒಂದಾದ ಕ್ರೋಧವನ್ನೂ ದೂರೀಕರಿಸಬೇಕು. ಮಹಾತ್ಮರ ಬಗ್ಗೆ ಕೋಪವನ್ನು ಮಾಡುವದು, ಅವರ ಕೊಲೆಗಿಂತಲೂ ಅಧಿಕವಾಗಿ ಪಾಪಕರವಾಗಿರುವದು. ಕ್ರೋಧಕ್ಕೆ ಎಂದಿಗೂ ವಶವಾಗಬಾರದು. ಅದೇ ಮೇರೆಗೆ, ಮೋಹವು (ವಿಷಯಗಳ ಸೆಳೆತವು) ಮುಕ್ತಿಗೆ ಪ್ರತಿಬಂಧಕವಾಗಿರುವದರಿಂದ, ಮೋಹವನ್ನು ಸರ್ವತೋಮುಖಿಯಾಗಿ ತ್ಯಜಿಸಬೇಕು. (ವಿಷಯಗಳ ಸೆಳೆತಕ್ಕೆ ಒಳಗಾಗಬಾರದು). –'ಸಮತ್ವಂ ದ್ವಂದ್ವ ಸಂಜ್ಞಯೋಃ'– ಎಂಬ ಉಕ್ತಿಯು ಇದೇ ಅಭಿಪ್ರಾಯವನ್ನು ಹೇಳುತ್ತದೆ. – ಒಟ್ಟಾರೆ ಹೇಳುವದೆಂದರೆ, ಸುಖದುಃಖಗಳಾಗಲಿ, ಮಾನಾಪಮಾನಗಳಾಗಲಿ, ಲಾಭ ಹಾನಿಗಳಾಗಲಿ, 'ದ್ವಂದ್ವ' (ಜೋಡು)ಗಳೆಂದು ಕರೆಯಲ್ಪಡುವ ಈ ಸಂಗತಿಗಳ ಬಗ್ಗೆ ಎಲ್ಲ ಜನರಲ್ಲಿಯೂ (ಒಂದು ಬಗೆಯ) ಆಕರ್ಷಣೆಯು ಇದ್ದೇ ಇರುವದು. ಸುಖ ದುಃಖ ಮಾನಾಪಮಾನ, ಲಾಭ-ಹಾನಿ, ಸೋಲು-ಗೆಲುವು ಇವೇ ಮುಂತಾದವುಗಳನ್ನು ಗುಣ ಕರ್ಮ ಕಾಲಗಳಿಗೆ ನಿಯಾಮಕನಾಗಿ, ಆಯಾ ಹೆಸರುಗಳಿಂದಲೆ ಕರೆಯಲ್ಪಡುತ್ತಿರುವ ಶ್ರೀಹರಿಯು, ಗುಣ ಕರ್ಮ ಕಾಲಗಳಿಗೆ ಅನುರೂಪವಾದ) ಪ್ರತಿಫಲವೆಂದೇ ಕೊಡುವನು. (ಬಂದದ್ದೆಲ್ಲ ಬರಲಿ, ಶ್ರೀಹರಿಯ ದಯೆ ಒಂದಿರಲಿ, ಎಂಬ ನಂಬಿಗೆಯಿಂದ) ಕಾಲಕಾಲಕ್ಕೆ ಒದಗುವದೆಲ್ಲವನ್ನೂ ನಮ್ಮ ಒಳಿತಿಗಾಗಿಯೆ ಶ್ರೀಹರಿಯು ಕೊಡುವನೆಂದು ಆತನಿಗೆ ವಂದಿಸಿ (ಹಿಗ್ಗದೆ, ಕುಗ್ಗದೆ) ಸ್ವೀಕರಿಸಬೇಕು. –ಇದುವೆ ಮಹಾತ್ಮರ ಅಭಿಪ್ರಾಯವಾಗಿದೆ. ಹೀಗೆ ಮಾಡದೆ ಈ ಜೋಡು ವಸ್ತುಗಳಲ್ಲಿ ಸುಖ, ಲಾಭ, ಗೆಲುವು ಇಂಥ (ಅಪೇಕ್ಷಿತ) ಸಂಗತಿಗಳು ಮಾತ್ರ ಬೇಕೆನ್ನುವದು, ಇದುವೇ ಮಿಥ್ಯಾಜ್ಞಾನ, ತಪ್ಪು ತಿಳುವಳಿಕೆ. ಈ ಬಗೆಯ ಮಿಥ್ಯಾಜ್ಞಾನಕ್ಕೇನೆ 'ಮೋಹ' ವೆಂದು ಹೇಳುವರು. (ಸುಖದುಃಖಾದಿ) ದ್ವಂದ್ವಗಳ ಬಗ್ಗೆ ಇರುವದು, ಇದೇ ದ್ವಂದ್ವಮೋಹ. ಕಾಮಾದಿಗಳಂತೆ ಮೋಹವೆಂ

ಬುದು ಜ್ಞಾನದ ಪ್ರಾಪ್ತಿಗೆ ಪ್ರತಿಬಂಧಕವಾಗಿದೆ. ಆಧ್ಯಾತ್ಮದ ದಾರಿಯಲ್ಲಿ ಆತಂಕವಾಗಿದೆ. ಆದುದರಿಂದ ಮೋಹವನ್ನು ತ್ಯಜಿಸುವವೂ ಅಗತ್ಯವಾಗಿದೆ. ಸುಖಾದಿಗಳು ಹಾಗೂ ದುಃಖಾದಿಗಳು, ಇವೆರಡೂ ಭಗವದಿಚ್ಛೆಯಿಂದಲೇ (ಯದೃಚ್ಛೆಯಾ) ಬರುವದರಿಂದ ಅವೆರಡೂ ಸದೃಶವಾಗಿವೆ. ಅವುಗಳಲ್ಲಿ ಸಾಮ್ಯತೆ ಉಂಟು. ಸುಖ-ದುಃಖಾದಿಗಳ ದ್ವಂದ್ವದಲ್ಲಿರುವ ಈ ಸಾಮ್ಯತೆಯನ್ನು ಅರಿತುಕೊಳ್ಳುವದೇ ಸಮ್ಯಗ್ ಜ್ಞಾನ, ಯಥಾರ್ಥಜ್ಞಾನ. ಹೀಗೆ ಹೇಳಿರುವರು :-'ಯಥಾ ದಾರುಮಯೀನಾರಿ....... ಮೃತ್ಯುಜೀವಿತಯೋಸ್ತಥಾ (೬/೧೨-೧೦-೧೪).

ಅರ್ಥ :- ಕಟ್ಟಿಗೆಯ ಹೆಣ್ಣುಗೊಂಬೆ, ಯಂತ್ರದ (ಜೋಡಣೆಯುಳ್ಳ)ಮೃಗ (ಗೊಂಬೆಯಾಡಿಸುವವನ ಇಚ್ಛೆಯಂತೆ, ಚಲಿಸುವಂತೆ, (ಎಲವೊ ಇಂದ್ರನೆ!) ಜೀವಿಗಳೆಲ್ಲವೂ ಭಗವದಿಚ್ಛೆಯಂತೆ ವರ್ತಿಸುವವು) ಭಗವದಾಧೀನರಾಗಿರುವರು. -ಪುರುಷ ವಾಚ್ಯನಾದ ಬ್ರಹ್ಮ, ಪ್ರಕೃತಿಗೆ ಅಭಿಮಾನಿಯಾದ ಶ್ರೀದೇವಿ, ಸರಸ್ವತೀ ಭಾರತೀ ದೇವಿಯರು, ಅಹಂಕಾರ ತತ್ವಕ್ಕೆ ಅಭಿಮಾನಿಯಾದ ಶೇಷದೇವ ಪ್ರಾಣಾಭಿಮಾನಿಯಾದ ವಾಯುದೇವರು, ಮನೋನಿಯಾಮಕನಾದ ರುದ್ರದೇವರು, ಇಂದ್ರಿಯಗಳಿಗೆ ಪ್ರೇರಕರಾಗಿರುವ ಇಂದ್ರ, ಅಗ್ನಿ ಮುಂತಾದ ತತ್ವಾಭಿಮಾನಿ ದೇವತೆಗಳು. ಇವರೆಲ್ಲರೂ ತಮ ತಮಗೆ ಒಪ್ಪಿಸಿದ ವಿವಿಧ ಕಾರ್ಯಗಳನ್ನು ಶ್ರೀಹರಿಯ ಅನುಗ್ರಹವನ್ನು ಪಡೆದುಕೊಂಡೇ ಮಾಡುವರು. ಆತನ ಆಜ್ಞೆ-ಅನುಗ್ರಹವಿಲ್ಲದೆ ಅವರೆಲ್ಲರೂ ಏನನ್ನೂ ಮಾಡಲಾರರು, ತನ್ನ ಕಿರು ಬೆರಳನ್ನು ಅಲಗಿಸಲು ಅಸಮರ್ಥನಾಗಿದ್ದರೂ, (ಶ್ರೀಹರಿಯೆ ಸರ್ವಕರ್ತೃವೆಂಬ) ಜ್ಞಾನವಿಲ್ಲದ, ಅಜ್ಞಾನಿಯಾದ ಮಾನವನು ತಾನೇ ಕರ್ತೃವೆಂದು ಭ್ರಮಿಸುವನು. ಆಯುಷ್ಯ ಲಭ್ಯುದಯ, ಕೀರ್ತಿ, ಸಂಪತ್ತು. ಅಪೇಕ್ಷಿತ ವಸ್ತುಗಳು, ಹಾಗೂ ಇವುಗಳಿಗೆ ವಿರುದ್ಧವಾಗಿರುವ ಮರಣ, ಅಪಕೀರ್ತಿ, ಬಡತನಗಳು, (ಆತನು ಅವುಗಳನ್ನು ಬಯಸದಿದ್ದರೂ ) ಶ್ರೀ ಹರಿಯ ಇಚ್ಛೆಯಿಂದ ಅನಿವಾರ್ಯವಾಗಿ ಬಂದು ಬಿಡುವವು. ಆದುದರಿಂದ ಕೀರ್ತಿ ಅಪಕೀರ್ತಿ, ಬದುಕು-ಸಾವು, ಸುಖ-ದುಃಖ, ಸೋಲು-ಗೆಲವು, ಈ ಜೋಡು ಅನುಭವಗಳಲ್ಲಿ ಸಮತ್ವ ಭಾವನೆಯನ್ನು ತಾಳಬೇಕು. ಇಂದ್ರನೊಡನೆ ಯುದ್ಧದಲ್ಲಿ [ದೇವತ್ವದ ಆವೇಶದಿಂದ] ವೃತ್ರಾಸುರನು ಆಡಿದ ಮಾತುಗಳಿವು.

(೧೨) **'ಸರ್ವತ್ರ ಆತ್ಮೇಶ್ವರಾನ್ವೀಕ್ಷಾಂ ಶಿಕ್ಷೇತ್'** :- [ ಇದು ೧೨ ನೆಯ ಭಾಗವತ ಧರ್ಮವು]-[ಇನ್ನೂ ಭಗವಂತನ ಸಾಕ್ಷಾತ್ಕಾರ ಆಗದಿರುವಾಗ್ಗೆ] ಕೇವಲ ಒಂದು ಸಲ ಭಗವಂತನ ಬಗ್ಗೆ [ಸಾಕ್ಷಾತ್ಕಾರವಿಲ್ಲದ] ಜ್ಞಾನ ಮಾಡಿ

ಕೊಂಡರೆ ಸಾಕೆನಿಸದು. ಹಾಗೆ ಮಾತ್ರ ಮಾಡದೆ ಭಗವಂತನಲ್ಲಿ ಮನಸ್ಸನ್ನು ಮತ್ತೆ ಮತ್ತೆ ನಿಲ್ಲಿಸುವಂತೆ ಮಾಡಬೇಕು. ಭಗವಂತನ ಒಂದು ರೂಪದಲ್ಲಿ ಮನಸ್ಸನ್ನು ಲೀನ ಗೊಳಿಸಿದಾಗ್ಗ್ಯ, ನಿದ್ರೆ ಜಾಡ್ಯಗಳ ಆತಂಕವಾದರೆ, ಆತನ ಬೇರೊಂದು ರೂಪದಲ್ಲಿ ಮನಸ್ಸನ್ನು ನೆಡಬೇಕು. ಹೀಗೆ ಮಾಡಿದಲ್ಲಿ ಭಗವಂತನ ಅಪರೋಕ್ಷವು [ಸಾಕ್ಷಾತ್ಕಾರವು] ಶೀಘ್ರವಾಗಿ ಸಂಭವಿಸುವದು, ಮೊದಲನೆಯದಾಗಿ ವಸ್ತು ಇದ್ದಂತೆಯೆ ಅದರ ಯಥಾರ್ಥ ಜ್ಞಾನವಾಗುವದು, ಎರಡನೆಯದಾಗಿ (ಬೇರೊಂದು ವಸ್ತುವಿನ ಧ್ಯಾನ ಮಾಡದೆ) ಯಥಾರ್ಥ [ಸತ್ಯ] ವಸ್ತುವಿನ ಧ್ಯಾನ ನಡೆಯುವದು. ಮೂರನೆಯದಾಗಿ ಯಥಾರ್ಥವಾದುದಕ್ಕೆ ಸರ್ವಸಮರ್ಪಣ ನಡೆಯುವದು. ಅವುಗಳಲ್ಲಿ 'ಸರ್ವತ್ರ....' ಎಂದು ಮೊದಲನೆಯ [ ಯಥಾರ್ಥ ವಸ್ತುವಿನ ] ಬಗ್ಗೆ ಹೇಳುವರು:- ಭಗವಂತನ ರೂಪದಲ್ಲಿ ಎರಡು ಪ್ರಕಾರಗಳಿವೆ. 'ಆತ್ಮ' ನೆಂಬ ಹೆಸರಿನಿಂದ ಅಂತರಂಗದಲ್ಲಿ ನೆಲೆಸಿರುವ ಒಂದು ಬಗೆಯ ರೂಪ. ಈ ಹೃದಯಸ್ಥ ಸ್ವರೂಪಕ್ಕೇನೆ, - ಪುರುಷ, ಜೀವ, ಪ್ರತ್ಯಕ್, ವಾಸುದೇವ,ಹರಿ, ಎಂಬ ಐದು ಹೆಸರುಗಳಿಂದ ಕರೆಯುವರು. - ಎರಡನೆಯ ರೂಪವು ದೇಹದ ಹೊರಗೆ ಇರುವದು. ಅದಕ್ಕೆ ಕಾಲ ಹಾಗೂ ಈಶ್ವರ ಎಂತಲೂ ಕರೆಯುವರು. ದೇಹಾಂತರ್ಯಾಮಿಯಾದ ಆತ್ಮರೂಪವನ್ನು ಹಾಗೂ ಪುರುಷನೆಂಬ ರೂಪವನ್ನು ಮತ್ತೆ ಮತ್ತೆ ನೋಡುವದು - ಮನಸ್ಸಿನಲ್ಲಿ ಚಿಂತಿಸುವದು, ಆದರಿಂದ ಮೊದಲನೆಯ ಪ್ರಕಾರದ ಸಮಾಧಾನವನ್ನು ಪಡೆಯಬೇಕು. ಇಲ್ಲಿ ಒಂದು ಆಕ್ಷೇಪ: ಭಗವಂತನಲ್ಲಿ ಮನಸ್ಸನ್ನು ಪದೇ ಪದೇ ನಿಲ್ಲಿಸಬೇಕಿದ್ದರೆ ಒಂದು ರೂಪದಲ್ಲಿ ಮನಸ್ಸು ಸ್ಥಿರವಾಗಿ ನಿಲ್ಲದಿದ್ದರೆ, ಹೊಸ ಹೊಸ ರೂಪಗಳಲ್ಲಿ ಸ್ಥಿರಗೊಳಿಸಬೇಕು. ಹೀಗೆ ರೂಪಗಳನ್ನು ಬದಲಿಸುವದರಿಂದಾಗಲೂ ಮನಸ್ಸು ಧ್ಯಾನದಲ್ಲಿ ಸ್ಥಿರವಾಗಿ ನಿಲ್ಲುವದೂ ಒಂದು ಪ್ರಯೋಜನ. - ಈ ರೀತಿಯಾಗಿ, ಹೊಸ ಹೊಸ ಅನೇಕ ರೂಪಗಳಲ್ಲಿ ಮನಸ್ಸನ್ನು ನಿಲ್ಲಿಸಬೇಕೆಂದು ನಿರ್ದೇಶಿಸಿ, -ಭಗವಂತನ ಕೇವಲ ಎರಡೇ ರೂಪಗಳನ್ನು ಹೇಳಿಕೊಟ್ಟಿರುವದು ಸರಿಯಾದುದಲ್ಲ. ಎಂಬ ಆಕ್ಷೇಪಕ್ಕೆ ಉತ್ತರ ಹೇಳುವರು. -ಬಿಂಬೋಪಾಸನೆಯ ವಿಧಾನವನ್ನು (ಕ್ರಮವನ್ನು) ಚನ್ನಾಗಿ ಅರಿತವರಿಗೆ, ಒಂದೇ ರೂಪವು ಅನೇಕ ರೂಪವಾಗಿ, ತೋರುವದು - ಭಗವಂತನಿಗೆ ಒಂದೇ ರೂಪವೇ, ಅನೇಕ ರೂಪಗಳಿರುವವೆ ? ಎಂಬ ಯೋಚನೆ ಈ ಸಂದರ್ಭದಲ್ಲಿ ಅನಗತ್ಯವಾದುದು. ಏಕೆಂದರೆ, ಭೂಮಿಯ (ಧೂಳಿಯ) ಕಣಗಳನ್ನು ಕೂಡ ಎಣಿಸಲು ಸಮರ್ಥವಾದ ಮನಸ್ಸು ದೇವತೆಗಳ ಆಯುಷ್ಯದ ಅವಧಿಯಷ್ಟು ಕಾಲದವರೆಗೆ ಭಗವಂತನ ರೂಪಗಳನ್ನು ಎಣಿಸುತ್ತ ಹೋದರೂ, (ದಿನದಿನದಿ ಬಗೆಬಗೆಯ ನೂತನವ ಕಾಣುವ) ಮತ್ತೆ ಮತ್ತೆ ಹೊಸ

ರೂಪಗಳನ್ನೇ ಕಾಣುವದು. ಭಗವಂತನ ರೂಪಗಳಿಗೆ 'ಇಂತಿಷ್ಟು' ಎಂಬ ಕೊರತೆಯುಂಟೆ? ಆತನ ರೂಪಗಳಿಗೆ ಬಡತನವೆ ? (ಆತನ ರೂಪಗಳನ್ನು ಸಾವಿರ ನಾಲಿಗೆಗಳಿಂದ ಗಾನ ಮಾಡುವ ಆದಿಶೇಷನೂ ಅವುಗಳ ಕೊನೆ ಕಂಡಿಲ್ಲ.) ಇನ್ನು ಎರಡನೆಯ ಸಮಾಧಾನವನ್ನು ವಿವರಿಸುವರು. :- 'ತೇಷು ಇತಿ' -ಎಂದು. ಪಶು ಮೊದಲಾದ ಜೀವಿಗಳಲ್ಲಿ ಭಗವಂತನು ಆತ್ಮಸ್ವರೂಪನಾಗಿ ನಿಯಾಮಕನಾಗಿದ್ದಾನೆ. ಅದರಂತೆಯೆ (ತತ್ವಾಭಿಮಾನಿ) ದೇವತೆಗಳು ಇರುವರು. ಎಂಬ ತಿಳುವಳಿಕೆ ಉಂಟಾದರೆ (ಉನ್ನತ ಜೀವಿಗಳಾದ) ಮಾನವರಲ್ಲಿ ಪರಮಾತ್ಮನು, ದೇವತೆಗಳು (ತಾರತಮ್ಯದಿಂದ) ಇನ್ನೂ ಊರ್ಜಿತವಾಗಿ ಇರುವರೆಂಬುದೇ ಅಭಿಪ್ರಾಯವಾಗಿದೆ. ಆದರೆ ಪಶುಗಳಲ್ಲಿ, ಮಾನವರಲ್ಲಿ ಭಗವಂತನ ಸನ್ನಿಧಾನವು ಒಂದೇ ವಿಧವಾಗಿ ಪ್ರಕಟಗೊಳ್ಳುವದಿಲ್ಲ. ಭಗವಂತನ ರೂಪಗಳು ಅನೇಕವಾಗಿದ್ದರೂ, ಅವುಗಳಲ್ಲಿ ಹೆಚ್ಚು ಕಡಿಮೆಯೆಂಬ ತಾರತಮ್ಯವಿಲ್ಲ. ಹೀಗಿದ್ದರೂ ರೂಪಗಳ ಅಭಿವ್ಯಕ್ತಿಯಲ್ಲಿ, ಪ್ರಕಟವಾಗುವ ಸ್ವರೂಪದಲ್ಲಿ ಮಾತ್ರ ತಾರತಮ್ಯವಿರುವದೆಂಬುದನ್ನು ಭಾವಿಕರಾದವರು ಮನಸ್ಸಿನಲ್ಲಿ ಬಿಂಬಿಸಿಕೊಳ್ಳಬೇಕೆಂದು ತಿಳಿಸುವದಕ್ಕಾಗಿಯೇ -'ಯಥಾರ್ಹತಃ-' -ಯೋಗ್ಯತೆಗೆ (ಅನುಗುಣವಾದ ತಾರತಮ್ಯಕ್ಕೆ) ತಕ್ಕಂತೆ' -ಎಂದು ಹೇಳಿರುವರು.

೧೩:- (೧) ಶ್ರೀಹರಿಯ ಸರ್ವೋತ್ತಮತ್ವದ ಜ್ಞಾನ (೨) ಆತನ ಲೀಲೆ - ಗುಣಗಳ ಚಿಂತನೆ (೩) ಆತನಿಗೆ ಸರ್ವಸಮರ್ಪಣೆ ಅವೇ ಮೂರು ಸುಸಂಧರ್ಭಗಳು.

(೨೩) **ಕೈವಲ್ಯಂ ಶಿಕ್ಷೇತ್ :-** (ಇದು ೧೫ನೆಯ ಭಾಗವತಧರ್ಮವಾಗಿದೆ) - ಇಲ್ಲಿ ಒಂದು ಆಕ್ಷೇಪವಿದೆ, -'ಕೇವಲ' - ಶಬ್ದಕ್ಕೆ ಏಕಾಕಿ, ಜೊತೆಗಾರ ಸಹಾಯಕ, ಇಲ್ಲದಿರುವನು. -ಹೀಗಿರುವ ಸ್ಥಿತಿಗೆ 'ಕೈವಲ್ಯ' ವೆನ್ನಬೇಕು. ಕೈವಲ್ಯ ಎಂದರೆ ಏಕಾಕಿತ್ವ, ಅಸಹಾಯಕತ್ವ - ಎಂಬ ಒಂದೇ ಒಂದಾದ ಅರ್ಥ. ಅದನ್ನು ಬಿಟ್ಟು ಬೇರೆ ಅರ್ಥವನ್ನು ಮಾಡಲು ಅವಸರವೇ ಇಲ್ಲ. -ಈ ಅರ್ಥವುಳ್ಳ ಕೈವಲ್ಯವು ಭಾಗವತ ಧರ್ಮಗಳ ಗುಂಪಿನಲ್ಲಿ ಇಲ್ಲಿ ಸೇರ್ಪಡೆಯಾಗಿರುವದು ಏಕೆ ? ಎಂದು ಕೇಳಿದರೆ, -ಕೈವಲ್ಯ ಶಬ್ದಕ್ಕೆ ಏಕಾಕಿತ್ವಯೆಂಬ ಅರ್ಥವು ಅತ್ಯುತ್ಕೃಷ್ಟವಾಗಿಲ್ಲ. ಯಥಾರ್ಥ ಬೋಧಕವಾದುದಲ್ಲ. ಕೈವಲ್ಯವೆಂದರೆ ತ್ಯಾಗವೆಂಬ ಸರಿಯಾದ ಅರ್ಥವನ್ನು ಈ ಮೊದಲೇ ಸ್ಪಷ್ಟಗೊಳಿಸಿದೆ. -ಕೈವಲ್ಯವೆಂದರೆ ತ್ಯಾಗಃ- ಕೈವಲ್ಯಕ್ಕೆ ಅಸಹಾಯಕತೆ, ಏಕಾಕಿತೆ, ಎಂಬುದು ಸರಿಯಾದ ಅರ್ಥವಾಗದಿದ್ದರೆ, ತ್ಯಾಗ ಎಂಬ ಅರ್ಥವೂ ಅದರಂತೆಯೆ ಸರಿಯಾದುದಲ್ಲ. ಏಕೆಂದರೆ ತ್ಯಾಗವೆಂದರೆ, ದಾತೃತ್ವ, ತನ್ನದೆಂಬುವದೆಂಬುವದನ್ನು ಇನ್ನೊಬ್ಬರಿಗೆ ಸದಿಚ್ಛೆಯಿಂದ

ಕೊಡುವದು. ತ್ಯಾಗ ಶಬ್ದಕ್ಕೆ ಇದಕ್ಕಿಂತಲೂ ಬೇರೆ ಅರ್ಥವೇ ಉಂಟಾಗದು. ಎಂದು ಆಕ್ಷೇಪಿಸಿದರೆ, -ನೀವು ಹೇಳುವದು ಸರಿಯಾಗಿಲ್ಲ. ಏಕೆಂದರೆ ತ್ಯಾಗ ಶಬ್ದಕ್ಕೆ ಬೇರೆ ಅರ್ಥವು ಇದ್ದೇ ಇದೆ. ಸನ್ಯಾಸವೆಂತಲೆ ತ್ಯಾಗ ಶಬ್ದದ ಮುಖ್ಯಾರ್ಥವಾಗಿದೆ. ತ್ಯಾಗವೆಂದು ಕರೆಯಲ್ಪಡುವ ಎಲ್ಲ ಬಗೆಯ ತ್ಯಾಗಗಳೂ ಸನ್ಯಾಸ ಸಲುವಾಗಿಯೆ ಮಾಡಲ್ಪಡುವವು. ಈ ದೃಷ್ಟಿಯಿಂದಲಿ ತ್ಯಾಗಕ್ಕೆ 'ಸನ್ಯಾಸ'ವೆಂಬ ಅರ್ಥವು ಸರಿಯಾಗಿದೆ, ಸನ್ಯಾಸವೆಂದರೆ ನಿಷ್ಕ್ರಿಯತೆ; ಸಕಲ ಕರ್ಮಗಳನ್ನು ಬಿಟ್ಟುಕೊಡುವದು, ಎಂಬ ಅರ್ಥವಾಗಿಲ್ಲ ಏಕೆಂದರೆ ನಿಷ್ಕ್ರಿಯತೆಯು (ಜಡ ಕಲ್ಲು ಮಣ್ಣುಗಳಲ್ಲಿಯೂ ಕಂಡುಬರುವದು. ಪೂರ್ಣವಾಗಿ ಕರ್ಮವನ್ನೇ ಬಿಟ್ಟು ಕೊಡುವವರಿಗೂ (ಜಡ) ಕಲ್ಲು ಮಣ್ಣಗಳಿಗೂ ಅದರಿಂದ ಯಾವ ವ್ಯತ್ಯಾಸ (ಭೇದ)ವೂ ಇಲ್ಲದಂತಾದೀತು ಕಲ್ಲು ಮಣ್ಣುಗಳನ್ನೂ (ಸನ್ಯಾಸಿಗಳಂತೆ) ಆದರಿಸ ಬೇಕಾದೀತು! ಈ ಅಭಿಪ್ರಾಯವನ್ನು ಊಹಿಸಿಯೆ- 'ತ್ಯಾಗಃ ಸನ್ಯಾಸಃ ಉಚ್ಯತೆ' ಎಂದು :- ಇಲ್ಲಿಯೂ ಒಂದು ಆಕ್ಷೇಪವನ್ನು ಮಾಡುವರು:- ಕೈವಲ್ಯಕ್ಕೆ 'ತ್ಯಾಗ'ವೆಂತಲೂ 'ತ್ಯಾಗ'ಕ್ಕೆ 'ಸನ್ಯಾಸ'ವೆಂತಲೂ ಅರ್ಥ ಮಾಡಿರುವಿರಿ. ತ್ಯಾಗ ಶಬ್ದಕ್ಕೆ (ನೀವು ಹೇಳುವಂತೆ) - 'ಸನ್ಯಾಸ'ವೆಂಬ ಅರ್ಥವನ್ನು ಇಟ್ಟುಕೊಳ್ಳುವದರಿಂದ, ಬಹು ದೊಡ್ಡ ಆಪತ್ತು ಒದಗುವದು. ಏಕೆಂದರೆ, ಭಾಗವತ ಧರ್ಮಾಚರಣೆಯ ಅನುಷ್ಠಾನವು ಸನ್ಯಾಸಿಗಳಿಗಾಗಿ ಮಾತ್ರವಲ್ಲ. ಗೃಹಸ್ವಾಮಿಗಳಿಗೂ (ಸಂಸಾರಿಗಳಿಗೂ ಅಲ್ಲಿ ಮುಕ್ತದ್ವಾರವಿದೆ. ಜನಕ ರಾಜನಂಥ ಅನೇಕ ಸಂಸಾರಿಗಳು ಭಾಗವತ ಧರ್ಮದ ಆಚರಣೆಯಲ್ಲಿ ಖ್ಯಾತಿವಂತರಾಗಿರುವರು. ತ್ಯಾಗವೆಂದರೆ 'ಸನ್ಯಾಸ'ವೆಂತಲೇ ಅರ್ಥವನ್ನಿಟ್ಟುಕೊಂಡರೆ, ಸಂಸಾರಿಗಳಿಗೆ ಭಾಗವತ ಧರ್ಮದಲ್ಲಿ ಪ್ರವೇಶ ಪ್ರವೃತ್ತಿಗಳೇ ಇಲ್ಲದಂತಾದೀತು. -ಈ ಆಕ್ಷೇಪಕ್ಕೆ ಉತ್ತರವನ್ನು ಹೇಳುವರು. ನಿಮ್ಮ ಆಕ್ಷೇಪವು ಸರಿಯಾದುದಲ್ಲ. ನಾವು ಹೇಳಿರುವ 'ಸನ್ಯಾಸ'ವೆಂಬುದಕ್ಕೆ ಇಲ್ಲಿ ಒಂದು ವಿಶೇಷ ಅರ್ಥವಿದೆ. ಉದ್ದೇಶವಿದೆ. ಸನ್ಯಾಸವೆಂದರೆ 'ಯಮ'ಗಳ ಗುಂಪಿನಲ್ಲಿ ಒಂದಾಗಿರುವ 'ಅಸ್ತೇಯ'ವೆಂಬುದೇ ನಾವು ಉದ್ದೇಶಿಸಿರುವ ಅರ್ಥವಾಗಿದೆ (ಅಸ್ತೇಯ-ವೆಂದರೆ, ಕಳವು ಮಾಡದಿರುವದು. ಇನ್ನೊಬ್ಬರ ವಸ್ತುವನ್ನು ಅಪಹರಿಸದಿರುವದು). ಮತ್ತೆ ಆಕ್ಷೇಪ - ಅಸ್ತೇಯವೆಂಬ ಅರ್ಥವೂ ಸನ್ಯಾಸ ಶಬ್ದಕ್ಕೆ ಅಷ್ಟೊಂದು ಸಮರ್ಪಕವೆನಿಸುವದಿಲ್ಲ. ಏಕೆಂದರೆ, - 'ಕರ್ಮಣಾ ಮನಸಾ, ವಾಚಾ ಪರದ್ರವ್ಯೇಷು ನಿಸ್ಪೃಹಾ ಅಸ್ತೇಯಮ್ -(ತನ್ನದಲ್ಲದ) ಎರಡನೆಯವರ ವಸ್ತುವಿನ ಬಗ್ಗೆ ಕೃತಿಯಲ್ಲಿ. ಮನಸ್ಸಿನಲ್ಲಿ, ಹಾಗೂ ಮಾತಿನಲ್ಲಿ (ಸ್ಪೃಹಾ) ಅಪೇಕ್ಷೆ ಮಾಡದಿರುವದೇ ಅಸ್ತೇಯವೆಂದು ಹೇಳಿದೆ. ಅಸ್ತೇಯವನ್ನು ಈ ರೀತಿಯಲ್ಲಿ ವಿವರಿಸುವದರಿಂದ, . 'ಪರದ್ರವ್ಯಾಪಹರಣ' - ಅನ್ಯರ ವಸ್ತುವನ್ನು ಎತ್ತಿ ಹಾಕದಿರುವದೇ,

ಅಸ್ತೇಯವೆಂಬುದು ತಿಳಿಯುವಂತಿದೆ. ಪರದ್ರವ್ಯಾಪಹಾರವು (ನೈತಿಕ) ಪಾಪಗಳಲ್ಲಿ ಒಂದಾಗಿ ಗಣನೆಯಾಗಿದೆ. ಅದನ್ನು ಬಿಡಬೇಕೆಂದು ಹೇಳುವದು ಎಲ್ಲರ ಬಾಯಲ್ಲಿಯ ಮಾತಾಗಿರುವವರಿಂದ, ಆ ಬಗ್ಗೆ ಇಲ್ಲಿ ಪ್ರತ್ಯೇಕವಾಗಿ ಹೇಳುವ ಯಾವ ಅಗತ್ಯವೇ ಇಲ್ಲ – ಈ ಆಕ್ಷೇಪಕ್ಕೆ ಹೀಗೆ ಉತ್ತರ ಹೇಳುವರು:- ನಿಮ್ಮ ಆಕ್ಷೇಪವು ಸರಿಯಾದುದಲ್ಲ. 'ಅಸ್ತೇಯ' ಶಬ್ದಕ್ಕೆ ನಾವು ಉದ್ದೇಶಿಸುವ ಅರ್ಥವನ್ನು ತೆಗೆದುಕೊಂಡರೆ, ಯಾವ ಆಕ್ಷೇಪವೂ ಉಳಿಯದು. ಎಲ್ಲವೂ ಸಮಂಜಸವಾಗುವದು. ವಿಶೇಷ ಅರ್ಥವು ಹೀಗಿದೆ. :- ಸ್ವರೂಪ ಭೂತವಾದ ತನ್ನ ಶಕ್ತಿಯಿಂದ ಭಗವಂತನೆ ಪುರುಷ (ಮಾನವ) ಶರೀರವನ್ನು ನಿರ್ಮಿಸಿ, ಅಂತರ್ಯಾಮಿಯಾಗಿ (ನಿಯಾಮಕನಾಗಿ) ಅಲ್ಲಿ ನಿಂತುಕೊಳ್ಳುವನು. ತಾನು ನಿರ್ಮಿಸಿರುವ ಇಂದ್ರಿಯಗಳಿಂದ ವಿಷಯಗಳಲ್ಲಿ (ಸಾರಭೂತವಾದುದನ್ನು) ಆತನೇ ಉಪಭೋಗಿಸುವನು, - (ಎಂದು ೨೩೬ನೇ ಶ್ಲೋಕ - ಸವಾ ಇದಮ್ – ಎಂಬಲ್ಲಿ ಈ ಮಾತನ್ನು ವಿಶದವಾಗಿ ಹೇಳಿದೆ. (ಹೀಗಿದ್ದರೂ ಈ ಸತ್ಯ-ಸಿದ್ಧಾಂತವನ್ನು ಕಡೆಗಣಿಸಿ) ' ಇದು ನನ್ನ ದೇಹ, ಇವೆಲ್ಲ ಇಂದ್ರಿಯಗಳು ನನ್ನವೆ (ಈ ದೇಹಕ್ಕೆ, ಎಲ್ಲ ಇಂದ್ರಿಯಗಳಿಗೆ ನಾನೇ ಸ್ವಾಮಿ ) ಅವುಗಳಿಂದ ಯಾಗಯಜನಗಳನ್ನು ಮಾಡುವವನು,(ವಿವಿಧ ಇಂದ್ರಿಯ-ವಿಷಯಗಳನ್ನು)ಉಪಭೋಗಿಸುವವನು ನಾನು. –ಹೀಗೆ (ಭಾವನೆ) ಕಲ್ಪನೆಯನ್ನು (ಅಜ್ಞ) ಜನರು ಮಾಡಿಕೊಳ್ಳುವರು. ಭಗವಂತನಲ್ಲಿ ಶ್ರದ್ಧೆಯುಳ್ಳ ಆಸ್ತಿಕರು ಈ ಬಗೆಯ ಭಾವನೆ–ಕಲ್ಪನೆಯನ್ನು ತೊರೆದುಬಿಡಬೇಕು; (ಮನಸ್ಸಿನಲ್ಲಿ ಸರ್ವಥಾ ತಂದುಕೊಳ್ಳಬಾರದು.) ಏಕೆಂದರೆ ಹೀಗೆ ಭಾವಿಸುವುದರಿಂದ, (ಸರ್ವ) ಕರ್ತೃತ್ವ, ಸ್ವಾಮಿತ್ವ, ಭೋಕ್ತೃತ್ವ ಭಗವಂತನಿಗೆ ಮಾತ್ರ ಸ್ವತಂತ್ರವಾಗಿ ಹೊಂದಿರುವ ಆತನ ಒಡೆತನದ ಈ ಶಕ್ತಿಗಳನ್ನು ಆ ಭಗವಂತನಿಂದ ಅಪಹಾರ ಮಾಡಿದಂತೆ, (ಕಳವು,ಸ್ತೇಯ) ಮಾಡಿದಂತಾಗುವದು. ಇದಕ್ಕೇನೆ 'ಸ್ತೇಯ'ಎಂಬ ಮುಖ್ಯವಾದ ಅರ್ಥ. ಇದು ಬಹು ದೊಡ್ಡದಾದ (ಅಕ್ಷಮ್ಯ) ಕಳವು. ಲೌಕಿಕ ವಸ್ತುಗಳ ಕಳವನ್ನುಬಿಡುವದಕ್ಕೇನೆ 'ಅಸ್ತೇಯ'ವೆಂದು ಹೇಳಿದರೆ, ಅಸ್ತೇಯ ಶಬ್ದದ (ಇಲ್ಲಿ ಹೇಳಿರುವ) ಮುಖ್ಯಾರ್ಥವನ್ನೇ ಬಿಟ್ಟು ಕೊಟ್ಟಂತಾಗುವದು. ಪರಮೇಶ್ವರನ ಸ್ವಾಮಿತ್ವಾದಿಗಳನ್ನು ದೃಢವಾಗಿ ನಂಬಿ, ಜೀವಿಯು ತಾನು ಕರ್ತೃ, ತಾನು ಸ್ವಾಮಿ-ಇತ್ಯಾದಿಗಳನ್ನು ಮನಸ್ಸಿನಿಂದ ತೆಗೆದು ಹಾಕುವದೇ ನಿಜವಾದ 'ಅಸ್ತೇಯ'ವಾಗಿದೆ. ಈ ಬಗ್ಗೆ ಒಂದು ಪ್ರಶ್ನೆ ಕೇಳಬಹುದು– ಸರ್ವಕರ್ಮಗಳನ್ನುಮಾಡಿ ಮಾಡಿಸುವದು, ಆ ಕರ್ಮಗಳ ಸಾರರೂಪವಾದ ಫಲವನ್ನು ಉಪಭೋಗಿಸುವದು, ದೇಹ ಹಾಗೂ ಇಂದ್ರಿಯಗಳಿಗೆ ಸ್ವಾಮಿಯಾಗಿರ

ವವು. ಇವೆಲ್ಲ ಶಕ್ತಿಗಳು ಭಗವಂತನಲ್ಲಿ ಅನಾದಿ ಕಾಲದಿಂದಲೂ ಆತನದೇ
ಇರುತ್ತಿರಲು, ಮಧ್ಯಂತರದಲ್ಲಿ ಕರ್ಮಗಳನ್ನು ತಾನೇ ಮಾಡುವವನು, ಅವು
ಫಲವನ್ನು ಉಪಭೋಗಿಸುವವನು ತನ್ನ ದೇಹೇಂದ್ರಿಯಗಳಿಗೆ ತಾನೇ ಪ್ರಭು
ಎಂದು ಜೀವನು ಹೇಳುವಂತಾಗಲು ಮೂಲ ( ಬೀಜ ) ಕಾರಣವೇನು ? ಎಂ
ಪ್ರಶ್ನೆಗೆ ಉತ್ತರವನ್ನು ಹೇಳುವರು :-

ದೇಹ ಹಾಗೂ ಇಂದ್ರಿಯಗಳ ಗುಂಪಿನಲ್ಲಿ ಒಳಗೆ ಸೇರಿಕೊಂಡು ನಿಲ್ಲು
ಜೀವನಿಗೆ ಸಂಸಾರವಾಗಿದೆ. ಈ ಬಗೆಯ ಸಂಸಾರವು ( ದೇಹದೊ
ಕೂಡಿಕೊಂಡು ಸಾಗುವದು) ಜೀವನಿಗೆ ಅನಾದಿ ಕಾಲದಿಂದಲೂ ನಡೆದು ಬಂದಿ
ಅನಾದಿ ಕಾಲದಿಂದಲೂ ಶ್ರೀ ಹರಿಯ ಇಚ್ಛೆಯಿಂದ ಪ್ರಾಪ್ತವಾಗುವ ಶರೀರ
ಅನಾದಿ ಕಾಲದಿಂದಲೂ ಜೀವನು ನೆಲೆಸಿರುವನು' ಅಂದ ಮೇಲೆ ತಾನೇ ಕರ್ತ
ಇತ್ಯಾದಿ ಅನುಸಂಧಾನವು ( ಮನಸ್ಸಿನ ಭಾವನೆಯು ), ಜೀವನಲ್ಲಿ ಏಕೆ ಬ
ವದು ? ಎಂಬುದೇ ನಿಮ್ಮ ಪ್ರಶ್ನೆಯಲ್ಲವೆ ? ಈ ಪ್ರಶ್ನೆಗೆ ಉತ್ತರವೆಂದರೆ, ನೀ
ಕೇಳಿದ ಪ್ರಶ್ನೆ ಸತ್ಯವಾಗುದು. ಆದರೆ, ಜೀವನು ಅನಾದಿ ಕಾಲದಿಂದ
ದೇಹೇಂದ್ರಿಯಗಳ ಸಂಘ (ಗುಂಪು) ವೆಂಬ ಸಂಸಾರದಲ್ಲಿ ನೆಲೆಸಿರುವನೆಂಬು
ನಿರ್ವಿವಾದವಾದುದು ಈ ಸಂಸಾರವು ಅನಾದಿಯಾಗಿರಲು ಕಾರಣವೇನು
ದೇಹದೊಡನೆ ಜೀವನ ಸಂಯೋಗರೂಪವಾದ ಈ ಸಂಸಾರವು ಅನಾದಿಯಾ
ದ್ದರೂ, ಜೀವ ಹಾಗೂ ದೇಹಗಳ ಸಂಯೋಗಕ್ಕೆ ಕಾರಣವೇನು ? ಯಾ
ಕಾರಣವೂ ಇಲ್ಲದೆ, ಜೀವ-ದೇಹಗಳ ಸಂಯೋಗ ರೂಪವಾದ ಸಂಸಾರ
ಉಂಟಾಗದು. ಕಾರಣವೆ ಇಲ್ಲವೆಂದರೆ, ಸಂಸಾರದಲ್ಲಿ ಸಿಲುಕಿದ ಜೀವಿಗಳ
ಕಂಡುಬರುವ ಉಚ್ಚ-ನೀಚ, ಬಡವ-ಬಲ್ಲಿದ ಇತ್ಯಾದಿ ವೈಷಮ್ಯಗಳಿಗೆ ಭ
ವಂತನೆ ಹೊಣೆಯಾಗಿರುನೆಂಬ ಪಕ್ಷಪಾತದ (ವೈಷಮ್ಯದ) ದೋಷವು ಆತ
ತಟ್ಟೀತು ! ಅನಾದಿಯಾಗಿರುವ ಈ ಸಂಸಾರಕ್ಕೆ ಅನಾದಿಯೇ ಆಗಿರುವ ಕಾರ
ವನ್ನು ನಾವು ತೆಗೆದುಕೊಳ್ಳಬೇಕಾಗುವದು. ಜೀವ ದೇಹಗಳ ಈ ಅನಾದಿ ಸಂ
ರಕ್ಕೆ ಕಾರಣವೇನೆಂಬುದನ್ನು ತಿಳಿದುಕೊಳ್ಳುವದೇ ನಿಮ್ಮ ಅಭಿಪ್ರಾಯವಾಗಿದ್ದ
ಉತ್ತರವು ಇದು :- ಭಗವಂತನ ಸೊತ್ತಾಗಿರುವ ಕರ್ತೃತ್ವ, ಭೋಕ್ತೃತ
ಜ್ಞಾತೃತ್ವ ಇವುಗಳ ಗುಂಪಿಗೆ 'ತ್ರಿತಯ' ( ಮೂರು ಶಕ್ತಿಗಳ ಸಮುಚ್ಚಯ
ವೆಂದು ಹೇಳುವರು. ಭಗವಂತನ ಈ ಮೂರು ವಿಶಿಷ್ಟ ಶಕ್ತಿಗಳ ಬಗ್ಗೆ ಪರಿಜ್ಞಾ
ವಿಲ್ಲದಿರುವದು, ದೃಢವಾದ ನಂಬಿಕೆಯಿಲ್ಲದಿರುವದು ಹಾಗೂ ಜೀವ ದೇಹಗ
ಅನಾದಿ ಕಾಲದಿಂದಲೂ ಅನ್ಯೋನ್ಯವಾಗಿ (ಅಗಲದೆ) ಜೊತೆಯಾಗಿರುವದ
ಇವೆರಡೂ ಸಂಗತಿಗಳು ಜೀವ ಹಾಗೂ ದೇಹಗಳ ಸಂಯೋಗರೂಪವಾದ ಅನಾ

ಸಂಸಾರಕ್ಕೆ ಕಾರಣವಾಗಿವೆ. ದೀರ್ಘ ಕಾಲದಿಂದಲೂ ನಿಕಟ [ಸಮೀಪ] ವರ್ತಿ ಯಾಗಿ ನಮ್ಮ ಜೊತೆಯಲ್ಲಿ ಇರುವ ವಸ್ತುವಿನ ಬಗ್ಗೆ 'ನನ್ನದು' ಎಂಬ ಮಮತ್ವ ಉಂಟಾಗುವಂತೆಯೆ, ಅನಾದಿ ಕಾಲದಿಂದಲೂ ತನ್ನ ಜೊತೆಯಲ್ಲಿಯೇ ಇರುವ [ಒಂದಿಲ್ಲೊಂದು] ದೇಹದ ವಿಷಯ,ದಲ್ಲಿ – 'ಇದು ನನ್ನ ದೇಹ, ನಾನೇ ಅದಕ್ಕೆ ಸ್ವಾಮಿ'– ಯೆಬ ಮಮತ್ವವು ಸ್ವಾಭಾವಿಕವಾಗಿಯೆ ಜೀವನದಲ್ಲಿ ಉಂಟಾಗುತ್ತದೆ ಹೀಗೆ ಹೇಳಿರುವರು :– "ಯತೋ .. ಶೋಕಮೋಹಭಯಾಪಹಃ" [೧೧-೨೧-೧೮] ಅರ್ಥ :– ಬಹುಕಾಲ ಕಣ್ಮರೆಯಾದ ವಸ್ತುವಿನ ಬಗ್ಗೆ, ಮನಸ್ಸಿನಿಂದಲೂ ಅದನ್ನು ನಾವು ತೆಗೆದುಹಾಕುವೆವು. ಹೀಗೆ ಮಾಡುವದೇ ಮಂಗಳಕರವಾದ ಧರ್ಮವಾ ವಾಗಿದೆ, ಈ ಧರ್ಮವೆ ಶೋಕ-ಮೋಹ- ಭಯಗಳನ್ನೆಲ್ಲ ದೂರಮಾಡುವದು. (೧೩) ["Out of sight, out of mind"] ಎಂದು ಇಂಗ್ಲೀಷಿನಲ್ಲಿ ಹೇಳಿಕೆ.

ಯಮ ವ್ರತಗಳಲ್ಲಿ ಒಂದಾದ ಅಸ್ತೇಯ (ಅನ್ಯರ ವಸ್ತುವನ್ನು ಅಪಹರಿಸ ದಿರುವದು) ವ್ರತವನ್ನು ಆಚರಿಸುತ್ತ, ಮನೆ ಮಡದಿ ಮನೆ ವಾರ್ತೆಗಳನ್ನೆಲ್ಲ ಬಿಟ್ಟುಕೊಟ್ಟು, ಒಂಟಿಗನಾಗಿ ತೀರ್ಥಯಾತ್ರೆ ಮಾಡುವ ನಿಯಮ ವ್ರತವನ್ನೂ ನಡೆಸಿಕೊಂಡು ಬರಬೇಕು, ಎಂದು ಯೋಗ ಶಾಸ್ತ್ರದಲ್ಲಿ ಹೇಳಿದ್ದಾಗಿದೆ. ನಿಯಮ ವ್ರತಗಳಲ್ಲಿ ಒಂದಾಗಿರುವ ತೀರ್ಥ ಸಂಚಾರವನ್ನು 'ಅನಿಕೇತನ'ವೆಂಬ ಭಾಗವತ ಧರ್ಮವಾಗಿ ಇಲ್ಲಿ ಎತ್ತಿಕೊಂಡಿದೆ. ಅದನ್ನೇ ಇಲ್ಲಿ ವಿವರಿಸಿರುವರು :–

(೧೪) **ಅನಿಕೇತನಮ್ ಶಿಕ್ಷೇತ್** :– ನಿಕೇತನವೆಂದರೆ, ಗೊತ್ತುಪಡಿಸಿ ಕೊಂಡಿರುವ ( ನಿರ್ದಿಷ್ಟ) ಸ್ಥಾನವು. ನಿರ್ದಿಷ್ಟ ಸ್ಥಾನವು ಇಲ್ಲದಿರುವದೇ 'ಅನಿಕೇತನ' ವೆಂಬ ಧರ್ಮ, ಆ ಸ್ಥಾನದಿಂದ ಬೇರೆ ಕಡೆಗೆ ಹೋಗಬಾರದೆಂಬ ಮನೋಭಾವವನ್ನು ಬಿಟ್ಟುಕೊಡುವದು. ಈ ಬಗ್ಗೆ ಒಟ್ಟು ಅಭಿಪ್ರಾಯವೆಂದರೆ, ತೀರ್ಥ ಶಬ್ದಕ್ಕೆ, ಪುಣ್ಯಕರ, ಪಾವನಕರವಾದುದು, ಎಂಬುದೊಂದೇ ಅರ್ಥವಾ ಗಿದೆ. ಹೀಗಿರದ ವಸ್ತುಗಳು ತೀರ್ಥವೆನಿಸವು. ಅಂಥ (ಪಾವನಕರವಾಗದ) ವಸ್ತುಗಳಿಗೆ ತೀರ್ಥವೆಂದು ಕರೆಯುವದು ತತ್ವಜ್ಞಾನಿಗಳಿಗೆ ಸಮ್ಮತವೆನಿಸದು. ( ನಿಜವಾಗಿ ಅತ್ಯಂತ ಪಾವನಕರರಾದವರು ) ಭಗವಂತನ ಬಗ್ಗೆ ಯಥಾರ್ಥ ಜ್ಞಾನಮಾಡಿಕೊಂಡಿರುವ ಭಾಗವತರು ಮಾತ್ರ. ಅವರೇ ಅತ್ಯಂತ ಪಾವನಕರರು. ಆದುದರಿಂದ, ಅಂಥ ಭಾಗವತರಿಂದ (ಮಾರ್ಗದರ್ಶನ) ಉಪದೇಶವನ್ನು ಪಡೆ ಯಲು, ಭಾಗವತರು ಎಲ್ಲಿದ್ದರೂ. ಅವರನ್ನು ಹುಡುಕುತ್ತ ಸಂಚಾರ ಮಾಡು ವದೇ ನಿಜವಾದ ತೀರ್ಥಾಟನವು, ಆದುವೇ ತೀರ್ಥಕ್ಷೇತ್ರಗಳಿಗೆ ನಿಜವಾದ ಸಂದರ್ಶನವು. ತನ್ನ ಶ್ರೇಯಸ್ಸಿನ ಬಗ್ಗೆ ದಕ್ಷನಾಗಿರುವ ಮಾನವನು ಈ ಬಗೆಯ

ತೀರ್ಥಾಟನೆಯನ್ನೇ ಮಾತ್ರ ಮಾಡಬೇಕಲ್ಲದೆ, (ಈ ತತ್ತ್ವವನ್ನು ತಿಳಿಯಲಾರದ) ಮೂಢ ಜನರು ಮಾಡುವ ತೀರ್ಥಾಟನೆಯನ್ನು, (ನದೀ-ತಟಾಕ-ಇತ್ಯಾದಿಗಳಿಗೆ ಮಾತ್ರ) ಹೋಗುವದನ್ನು ಬಿಟ್ಟುಕೊಡಬೇಕು. ಈ ಬಗ್ಗೆ ಹೀಗೆ ಹೇಳಿರುವರು:- 'ಯತ್ತೀರ್ಥ ಬುದ್ಧಿಃ ಸಲಿಲೆ.... ಸ ಏವ ಗೋಖರಃ' - ನೀರೇ ತೀರ್ಥ - ಪ್ರತಿಮೆಗಳೆ ದೇವತಾ,- ಎಂದು ತಪ್ಪು) ತಿಳಿಯುವವರು ಕತ್ತೆಗಿಂತಲೂ ಹೀನರಾದವರು.

ಇಲ್ಲಿ ಇನ್ನೊಂದು ಆಕ್ಷೇಪ :- 'ಭಗವದ್ಭಕ್ತರ ದರ್ಶನಕ್ಕಾಗಿ ಹೋಗುವದೇ ತೀರ್ಥಾಟನ', ತೀರ್ಥಾಟನ, ಎಂಬುದಕ್ಕೆ ನೀವು ಹೇಳಿರುವ ಈ ಅರ್ಥವನ್ನು ಒಪ್ಪಿಕೊಳ್ಳೋಣ. ಆದರೆ ತೀರ್ಥಾಟನೆಯು ಏನೆಂಬುವದನ್ನು ತಿಳಿಸುತ್ತಿರುವಾಗ ಅದರಲ್ಲಿ 'ಅನಿಕೇತನ' ಎಂಬ ಅರ್ಥವು ಹೇಗೆ ಹೊಂದುವದು ? ಈ ಪ್ರಶ್ನೆಗೆ ಉತ್ತರವೆಂದರೆ, ಇಲ್ಲಿ ಪ್ರತಿ ಶಬ್ದಕ್ಕೆ ಶಬ್ದಾರ್ಥವನ್ನು ಹೇಳುವ ರೀತಿಯನ್ನು ನಾವು ಅನುಸರಿಸುತ್ತಿಲ್ಲ. ಒಂದು ಕ್ಷೇತ್ರದಿಂದ ಇನ್ನೊಂದು ಕ್ಷೇತ್ರಕ್ಕೆ ಅಲೆದಾಡುವದು, ಎಂಬುದು (ಅನಿಕೇತನ ಶಬ್ದಕ್ಕೆ) ಅರ್ಥವಲ್ಲ. ಉಪದೇಶವನ್ನು ಪಡೆಯಬೇಕೆಂಬ ಕಳಕಳಿಯ ಉದ್ದೇಶದಿಂದಲೆ ಭಾಗವತರು ಇರುವ ಸ್ಥಾನಗಳನ್ನು ಕಂಡು ಹಿಡಿಯಲು ಅಲೆದಾಡುವದೇ ತೀರ್ಥಾಟನವು. ಭಾಗವತರಿಂದ ಪಡೆಯುವ ಜ್ಞಾನವು ಎಂಥಹದು ? ಎಂದು ಕೇಳಿದರೆ, ಅವರ ಮಾರ್ಗದರ್ಶನದಿಂದ, ಅವರು ಹಾಕಿಕೊಡುವ ಮಾರ್ಗದಲ್ಲಿ ಮುನ್ನಡೆಯುವ ಪ್ರವೃತ್ತಿಯು (ಒಲವು) ನಮಗೆ ಕೂಡಲೆ ಉಂಟಾಗುವದು, ಎಂಬ ಅಭಿಪ್ರಾಯದಿಂದ 'ಅನಿಕೇತನ' ಶಬ್ದದ ಸರಿಯಾದ ಅರ್ಥವನ್ನು ಹೇಳಿಕೊಡುವರು :- 'ಅನಿಕೇತನವಾ ಇತಿಃ-ಒಂದೇ ಮನೆಯಲ್ಲಿ ಸ್ಥಿರವಾಗಿ ನಿಲ್ಲದೆ, ಸಂಚರಿಸಬೇಕು, - ಎಂದು ನೀವು ಹೇಳುವದು (ಅನಿಕೇತನ) ಶಬ್ದಕ್ಕೆ ಒಳ್ಳೇ ಶ್ರೇಷ್ಠವಾದ (ಉದಾತ್ತವಾದ) ಅರ್ಥವೆಂದು ನಮಗೆ ತೋರುವದಿಲ್ಲ. ಅದರಿಂದ (ಸಾಧಕನಿಗೆ) ಏನು ಪ್ರಯೋಜನವಾದೀತು ? ಈ ಬಗೆಯ 'ಅನಿಕೇತನ'ಕ್ಕೆ ಭಾಗವತ ಧರ್ಮಗಳಲ್ಲಿ ಸ್ಥಾನವು ಹೇಗೆ ದೊರೆಯುವದು ? ಎಂಬ ಪ್ರಶ್ನೆಗೆ ಉತ್ತರವನ್ನು ಹೇಳುವರು :- 'ನಿಮ್ಮ ಸಂದೇಹ ಸರಿಯಾದುದಲ್ಲ. ಏಕೆಂದರೆ, 'ಅ' ಎಂದರೆ ಅಕಾರವರ್ಣವಾಚಕನಾದ ವಿಷ್ಣುವೇ ಆಗಿರುವನು. ವಿಷ್ಣುವೆ ನನಗೆ ಆಸರ, - ಕಲ್ಲು ಕಟ್ಟಿಗೆಗಳಿಂದ ಕಟ್ಟಿದ ಮನ ಜಡವಸ್ತು ಜಡವಸ್ತುವಿಗೆ ಇನ್ನೊಬ್ಬರಿಗೆ ಆಸರವನ್ನು ನೀಡುವ ಶಕ್ತಿ-ಸಾಮರ್ಥ್ಯಗಳಿಲ್ಲ. (ಒಮ್ಮೊಮ್ಮೆ ಅಕಲ್ಪಿತವಾಗಿ ಕುಸಿದು ಬೀಳುವ ) ಮನೆಯೆ ನಮಗೆ (ಸ್ಥಿರ-ಶಾಶ್ವತ) ಆಶ್ರಯವೆಂಬ ತಿಳುವಳಿಕೆ ಶುದ್ಧವಾದ ಭ್ರಮೆಯಾಗಿದೆ. ಅನಿಕೇತನ ಶಬ್ದಕ್ಕೆ (ನೈಜವಾಗಿರುವ-ತಾತ್ವಿಕವಾದ ) ಈ ಅರ್ಥವನ್ನು ಮಾಡಿದರೆ, ( ಆಕ್ಷೇಪಗಳ ನಿವಾರಣೆ

ಯಾಗಿ ) ಉಳಿದೆಲ್ಲವೂ ಸಮಂಜಸವಾಗುವದು. ಮುಂದೆ ಬರಬಹುದಾದ ಶಂಕೆಗೂ ಈ ಅರ್ಥದಿಂದ ಸಮಾಧಾನ ದೊರೆಯುವದು.

ಕರ್ತಾ, ಕರ್ಮ ಮುಂತಾದವು ಮೂರು ಬಗೆಯಾಗಿರುವಂತೆ, ಸ್ಥಾನವೂ (ನೆಲೆ,ಆಸರ)ಮೂರು ಬಗೆಯಾಗಿದೆ. ಎಂದು ಎಲ್ಲೆಡೆಯಲ್ಲಿಯೂ ಹೇಳಿರುವದುಂಟು. ಆದರೆ ಇಲ್ಲಿ (ಈ ಗ್ರಂಥದಲ್ಲಿ) ನಾಲ್ಕು ಬಗೆಯ ಸ್ಥಾನಗಳನ್ನು ಹೇಳಿದೆ. ( ಭಾಗವತ ೧೧ ನೇ ಸ್ಕಂಧ ) ಇದು ಸರಿಯಾದುದಲ್ಲವೆಂದು ತೋರುತ್ತದೆ. ಸ್ಥಾನಗಳ ವರ್ಗೀಕರಣದಲ್ಲಿ, ವನವು ಸಾತ್ವಿಕ, ಗ್ರಾಮವು ರಾಜಸ, ಜೂಜಿನ ಮನೆಯು ತಾಮಸ. ಈ ಮೂರು ಬಗೆಯ ಸ್ಥಾನಗಳನ್ನು ಹೇಳಿ,– 'ಮನ್ನಿಕೇತನಂ ತು ನಿರ್ಗುಣಂ ' –ಎಂಬ ನಾಲ್ಕನೆಯ ಬಗೆಯ ಸ್ಥಾನವನ್ನು ಭಗವಂತನು ತೋರಿಸಿರುವರು. ಸತ್ವಾದಿ ಗುಣಗಳು ತಮ್ಮ ಕಾರ್ಯವನ್ನು ವನಾದಿಗಳಲ್ಲಿ ಮಾಡುವಂತೆ, ದೇವಾಲಯಾದಿಗಳಲ್ಲಿಯೂ ಅದೇ ರೀತಿಯಾಗಿ ಮಾಡುವವು. ಅವುಗಳ ಕಾರ್ಯದಲ್ಲಿ ಯಾವ ಹೆಚ್ಚುಕಡಿಮೆ ವ್ಯತ್ಯಾಸ ಕಂಡುಬರುವದಿಲ್ಲ. ಅದರಿಂದ ಸ್ಥಾನಗಳಲ್ಲಿ, ನಿರ್ಗುಣ ವೆಂಬ ನಾಲ್ಕನೆಯ ಪ್ರಕಾರಕ್ಕೆ ಎಡೆಯೆ ಇರುವದಿಲ್ಲ, ವ್ಯತ್ಯಾಸವು ತೋರುತ್ತಿದ್ದರೆ, ನಾಲ್ಕನೆಯ ಬಗೆಯದಾದ ಅದನ್ನು ನಾವು ಒಪ್ಪಬಹುದಿತ್ತು. ಜ್ಞಾನಾದಿಗಳಿಗೆ ಸಾಧನವಾಗಿರುವ ಸತ್ವಾದಿ ಗುಣಗಳು ಈ ಮೂರು ವರ್ಗಗಳಲ್ಲಿ ಗೌಣ (ಅಪ್ರಧಾನ) ವಾಗಿ ಇರುವವೆಂತಲೇ ಹೇಳಿರುವರು. ದೇವಾಲಯ, ತುಲಸೀ ವನಗಳಲ್ಲಿ ಸತ್ವಗುಣವು ಪ್ರಧಾನವಾಗಿರುವದರಿಂದ, ಅವುಗಳಾದರೂ ಸತ್ವಗುಣ ಯುಕ್ತವಾದವು. ಈ ಮೂರು ಪ್ರಕಾರಗಳು ಗುಣಯುಕ್ತವಾದವುಗಳೆ, ಅವುಗಳಲ್ಲಿ ಯಾವುದೂ ನಿರ್ಗುಣ ( ಸತ್ವಾದಿ ಗುಣಗಳಿಂದ ರಹಿತ ) ವಾದುದಲ್ಲ. (ಅಕಾರವಾಚಕ) ವಾಸುದೇವನೇ 'ನಿಕೇತನ' ವೆಂಬ ಅರ್ಥವನ್ನಿಟ್ಟುಕೊಂಡರೆ ಆತನೇ ಆಸರ, ಆಧಾರ ಎಂದು ತಿಳಿದರೆ, ಕಲ್ಲು ಕಟ್ಟಗೆಯ ಮನೆಯೆ ಆಶ್ರಯ ( ನಿಕೇತನ ) ವೆಂಬ ಭ್ರಾಂತಿಯೂ ತೊಲಗುವದು. –'ಮನ್ನಿಕೇತನಂ '– ನನ್ನ ( ಭಗವಂತನ ) ಮನೆಯೆಂಬಲ್ಲಿ, ನಿಕೇತನಕ್ಕೆ (ಭಗವಂತನ) ರೂಪ ಸ್ವರೂಪ, ಎಂಬುದೇ ಅತ್ಯಂತ ಸಮಂಜಸವಾದ ಅರ್ಥವಾಗಿದೆ. ಮತ್ತೊಂದರೆ ಈ ವಿಶೇಷ ಅರ್ಥದಿಂದ ಭಗವಂತನು ನಿರ್ಗುಣನು, ತ್ರಿಗುಣಾತೀತನು, ಸತ್ವಾದಿ ಗುಣಗಳ ಪ್ರಭಾವಕ್ಕೆ ಕಿಂಚಿತ್ತೂ ಒಳಗಾಗದವನು,– ಎಂಬ ಭಾವವೂ ಈ ಶ್ಲೇಷಾರ್ಥದಿಂದ ಸೂಚಿತವಾಗುತ್ತಿದೆ. – ಮನೆಯಾಗಲಿ, ವನವಾಗಲಿ ಅಲ್ಲಿದ್ದುಕೊಂಡೇ ಸತ್ವಾದಿಗುಣಗಳ ಅಂಕೆಗೆ ಒಳಗಾಗದೆ, ಭಗವಂತನು ತ್ರಿಗುಣಾತೀತನು, ಎಂಬ ದೃಢವಾದ ಅನುಸಂಧಾನವನ್ನು ಮಾಡಿಕೊಂಡರೆ, ಆ ಸ್ಥಳವೂ 'ನಿರ್ಗುಣ'ವೆ ಆಗುವದು. ಈ ಬಗೆಯ ಅನುಸಂಧಾನ ಇಲ್ಲದಿ

ದ್ಧಾಗ್ಗೆ ಮಾತ್ರ, ವನವು ಸಾತ್ವಿಕ, ಗ್ರಾಮ ರಾಜಸ, ಇತ್ಯಾದಿ ಗುಣ ವಿಶೇಷಗಳನ್ನು ಅವುಗಳಿಗೆ ಕೊಟ್ಟಿರುವದು. -ಇದಲ್ಲದೆ, ವನಾದಿಗಳು ವನಾದಿಗಳೆಂತಲೆ ಅವು ಸಾತ್ವಿಕ ಮುಂತಾದ ಗುಣ ವಿಶಿಷ್ಟವಾಗಿರುವದಿಲ್ಲ. ವನವೆಂದೇ ವನವು ಸಾತ್ವಿಕವಾಗುತ್ತಿದ್ದರೆ, ಸತ್ವಾದಿ ಗುಣಗಳಿಂದ ಪಡೆಯಬಹುದಾದ ಜ್ಞಾನಾದಿಗಳು ಅವುಗಳಿಂದ ನಿಶ್ಚಿತವಾಗಿ ಪಡೆಯಬೇಕಿತ್ತು. ಹೀಗಿದ್ದರೆ, 'ಭಯಂ ಪ್ರಮತ್ತಸ್ಯವನೇಷ್ವಪಿ ಸ್ಯಾತ್ '- ವಿಷಯಾಸಕ್ತನಾಗಿ ತಪ್ಪು ದಾರಿಯಿಂದ ಜೀವನ ನಡೆಸುವವನಿಗೆ ವನದಲ್ಲಿ ನೆಲೆಸಿದರೂ, ಸಂಸಾರದ ಭಯವು ತಪ್ಪುವದಿಲ್ಲ' -ಎಂಬ (ಭಾಗವತದ) ಈ ಉಕ್ತಿಯು ಅರ್ಥಹೀನ (ಅನುಚಿತ) ವಾಗಿ ಬಿಟ್ಟೀತು.

-ಇದೇ ರೀತಿಯಲ್ಲಿ 'ರಸ್ಯಾ-ಸ್ನಿಗ್ಧಾಃ ..' ಇತ್ಯಾದಿ ಆಹಾರಗಳನ್ನು ಸತ್ವಾದಿ ಗುಣಗಳಿಗನುಗುಣವಾಗಿ ಸಾತ್ವಿಕ-ರಾಜಸ-ತಾಮಸವೆಂಬ ವಿಭಾಗಗಳಾಗಿ ಮಾಡಿರುವಲ್ಲಿಯೂ ಇದೇ ಅಭಿಪ್ರಾಯವನ್ನು ಇಟ್ಟುಕೊಳ್ಳಬೇಕು. -ರಸಭರಿತವಾಗಿವೆ, 'ಸ್ವಾದು' ರುಚಿಕರವಾಗಿವೆ, ಎಂಬುದರಿಂದ ಆಹಾರವು ಸಾತ್ವಿಕವಾಗುವದಿಲ್ಲ ಹೀಗೆ ಬಗೆಯುವದರಿಂದ ಬಹುದೊಡ್ಡ ಅನರ್ಥವಾದೀತು. ನಿರ್ದಿಷ್ಟ, ಸತ್ಯವಾದ ಜ್ಞಾನವನ್ನು ಪಡೆಯಲು ಅನುಕೂಲವಾಗಿರುವದೇ ಸಾತ್ವಿಕ ಪದಾರ್ಥ (ಆಹಾರ ಮುಂತಾದವು) - ಪದಾರ್ಥಗಳ ಸಾತ್ವಿಕ್ತಾದಿ ವರ್ಗೀಕರಣದಲ್ಲಿ ಇದೇ ವ್ಯವಸ್ಥೆಯನ್ನೇ ಅನುಸರಿಸಬೇಕು; ಈ ವ್ಯವಸ್ಥೆಯಾದರೂ ಪುರುಷ, ದೇಶ ಇತ್ಯಾದಿಗಳ ಯೋಜನೆಗೆ ಸುಸಂಗತವಾಗಿರಬೇಕು. -ಕಾಡಾಗಿರಲಿ, ನಾಡಾಗಿರಲಿ, - ಶರೀರ ಹಾಗೂ ಇಂದ್ರಿಯಗಳಲ್ಲಿಯ ಸತ್ವಗುಣವನ್ನು ಊರ್ಜಿತಗೊಳಿಸಿ, ಶುದ್ಧ ಜ್ಞಾನದ ಪ್ರಾಪ್ತಿಗೆ, ಯಾರಿಗೆ ಆಗಲಿ, ಎಲ್ಲಿಯೇ ಆಗಲಿ, ಎಂದೇ ಆಗಲಿ-ಯಾವುದು ಉಪಯುಕ್ತ ಸಾಧನವಾಗುವದೋ ಅದು ಮಾತ್ರ ಅಲ್ಲಿ ಆಗ್ಗೆ ಆತನಿಗೆ ಸಾತ್ವಿಕವಾಗಿ ಪರಿಣಮಿಸುವದು. ಅಹಿಂಸೆಯ ವಿಷಯದಲ್ಲಿ ಹೇಳಿದಂತೆ, -ಅಂಥ ವಸ್ತುಗಳು ಇವೇ, ಎಂಬುದನ್ನು ತೋರಿಸುವದಕ್ಕಾಗಿಯೆ ಉದಾಹರಣೆಗಳನ್ನು(ರಸ್ಯಾ,ಸ್ನಿಗ್ಧಾಃ-ಎಂದು) ಕೊಟ್ಟಿರುವರು. ಉದಾಹರಣೆಯಲ್ಲಿ -ರಸ್ಯಾ; ಸ್ನಿಗ್ಧಾಃ- ಎಂದು ಹೇಳಿರುವ ವಸ್ತುಗಳು ಸಾಮಾನ್ಯವಾಗಿ ಈ ಸತ್ವ ಗುಣದಿಂದ ಯುಕ್ತವಾದವುಗಳು. ಇದೇ ರೀತಿಯಲ್ಲಿಯೇ, ಈ ಪದಾರ್ಥಗಳು ಸುಜ್ಞಾನಕ್ಕೆ ಹೇಗೆ ಸಾಧನವಾಗಿರಬೇಕೆಂಬ ಯೋಜನೆ (ವ್ಯವಸ್ಥೆ)ಯನ್ನೂ ಹೇಳಿಕೊಡಲೇಬೇಕು ಅದರಂತೆಯೆ ಸಾಧಕನಿಗೆ ಸತ್ವಾದಿ ಮೂರು ಗುಣಗಳು ಯಾವ ಮನೋವಿಕಾರವನ್ನೂ ವನಾದಿಗಳು ಎ[illegible] ಎಂದು ಮಾಡುವದಿಲ್ಲವೊ; ಆಗ್ಗೆಯೆ ಅವುಗಳನ್ನು 'ನಿರ್ಗುಣ' ವೆಂದು ಹೇ[illegible] ಬೇಕು. - ಸತ್ವ ಸಂಗತಿಯೆಂದರೆ, ತಮ್ಮ ತಮ್ಮ ಕಾರ್ಯವನ್ನು ಸಾಗಿಸು[illegible] ಸತ್ವಾದಿ ಗುಣಗಳಿಂದ ವನಾದಿಗಳು ಯುಕ್ತವಾದುದರಿಂದ,- (ನಿರ್ಗುಣತ್ವದ[illegible]

ದೀರ್ಘಕಾಲದ ಅನುಸಂಧಾನದಿಂದ ನಿರ್ಗುಣತ್ವವನ್ನು ಅವು ಪಡೆಯುವವೆಂದು, ಅದನ್ನು ಪಡೆಯುವದರಲ್ಲಿ ಭಾಗವತರಾದವರು ಆದರ - ಆಸಕ್ತಿಗಳನ್ನು ವಹಿಸಬೇಕು. -ಎಂತಲೆ, 'ಮನ್ನಿಕೇತನಂ ನಿರ್ಗುಣಂ' ಎಂಬ ಭಗವಂತನ ಉಕ್ತಿಯು ತುಂಬಾ ಸಾಧುವಾಗಿದೆ. ಇನ್ನುಳಿದ ಸಂಗತಿಗಳನ್ನು -'ಗುಣ ನಿವೃತ್ತಿ ಪ್ರಕರಣ'ದ 'ಅವಿದ್ಯಮಾನೋಪ್ಯವಭಾತಿ' ಎಂಬ ೩೫ನೇ ಶ್ಲೋಕದಲ್ಲಿ ಹೇಳುವೆವು. (೧೪)-

ಈ ಮೊದಲು 'ಕೈವಲ್ಯ'ವೆಂಬ ಭಾಗವತ ಧರ್ಮವನ್ನು ತಿಳಿಸಿ ಹೇಳುವ ಕಾಲಕ್ಕೆ, ಸ್ವಂತದ ತನ್ನ ಕರ್ತೃತ್ವ, ಭೋಕ್ತೃತ್ವ, ದೇಹೇಂದ್ರಿಯಗಳ ಸ್ವಾಮಿತ್ವ- ನಾನೇ (ಸಕಲ ಕಾರ್ಯಗಳನ್ನು) ಮಾಡುವವನು, ನಾನೇ (ಅವುಗಳ) ಫಲವನ್ನು ಉಪಭೋಗಿಸುವವನು, ದೇಹ-ಇಂದ್ರಿಯಗಳಿಗೆ ನಾನೇ ಸ್ವಾಮಿಯು) ಈ ಬಗೆಯ ಮೂರು ಅಹಂಕಾರ - ಮಮಕಾರಗಳನ್ನು ಬಿಟ್ಟುಕೊಡಲೇಬೇಕು ಇವುಗಳನ್ನು ಬಿಟ್ಟುಕೊಡುವದೇ ಕೈವಲ್ಯ. ಇದುವೇ ಅಸ್ತೇಯ. ಅಸ್ತೇಯದಿಂದ ಅಪರೋಕ್ಷ ಜ್ಞಾನವು ಬೇಗನೆ ಆಗುವದು. ಅಪರೋಕ್ಷ ಜ್ಞಾನದಿಂದ (ಪರಮಾತ್ಮನ ಪ್ರತ್ಯಕ್ಷ ದರ್ಶನದಿಂದ) ಸಂಸಾರದಲ್ಲಿ ಒದಗುವ ಸಕಲ ದುಃಖಗಳ ನಿವಾರಣೆಯ ಸ್ವರೂಪವಾದ ಮೋಕ್ಷವೂ ಕೂಡ ದೊರೆಯುವದು- ಎಂದು ಹೇಳಿದೆ ಮೋಕ್ಷ ಪ್ರಾಪ್ತಿಗೆ ಕೈವಲ್ಯವು ಆಂತರಿಕ ಸಾಧನವಾಗಿರುವಂತೆ, 'ವಿವಿಕ್ತ'ವೆಂಬ ಭಾಗವತಧರ್ಮವೂ ಅಂತರಂಗದ ಸಾಧನವಾಗಿದೆ. ಈ ಅಭಿಪ್ರಾಯದಿಂದಲೆ ಹೇಳಿರುವರು ;-

(೧೫) 'ವಿವಿಕ್ತ' ವೆಂಬ ಭಾಗವತ ಧರ್ಮವನ್ನು ಆತ್ಮಸಾತ್ ಮಾಡಿಕೊಳ್ಳಬೇಕು. ಇದು ೧೫ನೆಯ ಭಾಗವತ ಧರ್ಮವಾಗಿದೆ -ಇಲ್ಲಿ ಒಂದು ಆಕ್ಷೇಪವು:- 'ವಿವಿಕ್ತ' ಎಂದು ನೀವು ಹೇಳುವ ಈ ಧರ್ಮವು ಯಾವುದು? -ವಿವೇಕ ಎಂಬುವದೇ ವಿವಿಕ್ತವಾಗಿದ್ದರೆ, ವಿವೇಕ ಎಂತಲೇ ಹೇಳಬೇಕಿತ್ತು. ವಿವೇಕದ ವಿಷಯವೇನೆಂಬುದನ್ನು ತಿಳಿಯಲೂ ಶಕ್ಯವಾಗದು. ವಸ್ತುವಿನ ಯೋಗ್ಯತೆಗೆ ಅನುಗುಣವಾಗಿ ಯಾವುದು ನಿತ್ಯ, ಯಾವುದು ಅನಿತ್ಯ ಎಂಬುದನ್ನು ವಿಂಗಡಿಸಿ ಹೇಳುವದೇ ವಿವೇಕ; ಎಂದು ಹೇಳುವದಾದರೆ, -'ಸಮತ್ವಂ ಶಿಕ್ಷೇತ್' ಎಂಬ ಭಾಗವತಧರ್ಮದ ನಿರೂಪಣೆಯಲ್ಲಿ ಅಂಥ ವಿವೇಕವನ್ನು ಈ ಮೊದಲೇ ಹೇಳಿಬಿಟ್ಟಿದ್ದಾಗಿದೆ. ಇಲ್ಲಿ ಅದನ್ನು (ಬಿಡಿಯಾಗಿ) ಹೇಳುವ ಅಗತ್ಯವಿಲ್ಲ. -ವಿವಿಕ್ತ ಎಂದರೆ ಜ್ಞಾನ ಸಾಧನವಾದ 'ವಿವಿಕ್ತ ದೇಶಸೇವಿತ್ವ' -ಏಕಾಂತ ಸ್ಥಳವನ್ನು ಆಶ್ರಯಿಸುವದು. -ಎಂಬುದು ಅಭಿಪ್ರಾಯವಾಗಿದ್ದರೆ, ಆಗ್ಗೆಯೂ ಕೂಡ ಅದನ್ನು ಇಲ್ಲಿ ಹೇಳಬಾರದು. ಏಕೆಂದರೆ, ವಿವಿಕ್ತ ಶಬ್ದಕ್ಕೆ 'ಏಕಾಂತ ಸ್ಥಳವಾಸ' ಎಂಬುದು ಅಷ್ಟೊಂದು ಉತ್ತಮವಾದ ಅರ್ಥವೆನಿಸದು. - ಈ ಆಕ್ಷೇಪಕ್ಕೆ ಉತ್ತರವನ್ನು

ಹೇಳುವರು:- 'ಮಾ ಏವಂ' -ನೀವು ಹೇಳುವದು ಸರಿಯಾಗಿಲ್ಲ. ವಿವಿಕ್ತಕ್ಕೆ ಸಮ್ಯ ಚಿತವಾದ ಬೇರೊಂದು ಅರ್ಥವನ್ನು ನಾವು ಇಲ್ಲಿ ಹೇಳುವೆವು. ತನ್ನಿಂದ ನಿಜವಾಗಿಯೂ ಭಿನ್ನನಾಗಿರುವವನೇ, ದೇಶ, ಮನೆ ಹಾಗೂ ಮಾನವ ಶರೀರದಲ್ಲಿ ನೆಲೆಸಿರುವನು -ಎಂಬುದೇ ಅರ್ಥ. -ಈ ಮಾತು ಮಾನವರೆಂಬವರಿಗೆಲ್ಲರಿಗೂ ಅನ್ವಯಿಸುವದು. ಈ ತಿಳುವಳಿಕೆಯಿಂದಲಾದರೂ ಏನು ಹೆಚ್ಚಿಗೆ ಉಪಯೋಗವಿದೆ?- ಎಂದರೆ, ತನ್ನಿಂದ ತೀರ ಭಿನ್ನವಾಗಿ, ತನಗೆ ನಿಯಾಮಕನಾಗಿ, ಬೇರೊಬ್ಬನು (ಭಗವಂತನು) ತನ್ನಲ್ಲಿ ಅಂತರಾತ್ಮನಾಗಿ ನೆಲೆಸಿರುವನು, ಎಂಬ ಪ್ರಜ್ಞೆಯುಳ್ಳವನೂ ಕೂಡ, -ಎಲ್ಲವೂ ನನ್ನದು. ಎಲ್ಲವನ್ನು ನಾನೇ ಮಾಡುವವನು. ಎಂಬ ಮಮಕಾರ, ಅಹಂಕಾರಗಳನ್ನು ತಾಳುವನು. -ಅವನು ಮೂರ್ಖನೇ ಸರಿ, ಭ್ರಾಂತನೇ ಸರಿ. ಹೀಗಿದ್ದರೆ, ನಿಜವಾಗಿಯೂ ಮಾಡಬೇಕಾದುದು ಯಾವುದು? ಎಂದರೆ ಇದನ್ನೇ ಮಾಡಬೇಕೆಂದು ಹೇಳುವರು.:- ಆತ್ಮಕ್ಕೆ ಆಸರ(ಮನೆ)ವಾಗಿರುವ ಈ ಬೌತಿಕ ಶರೀರವನ್ನೇ ಆತ್ಮನೆಂದು(ದೇಹವೇ ನಾನು)ಎಂದು ಭ್ರಮಿಸದೇ, ಅನಿತ ದೇಹ ಬೇರೆ, ನಿತ್ಯ ಆತ್ಮನು ಬೇರೆ, ಎಂಬ (ನಿತ್ಯ ಅನಿತ್ಯ ಭೇದ ರೂಪವಾದ) ವಿವೇಕವನ್ನು ಚನ್ನಾಗಿ ಅರಿತುಕೊಳ್ಳಬೇಕು, ಆತ್ಮಸಾತ್ ಮಾಡಿಕೊಳ್ಳಬೇಕು. ದೇಹ ಬೇರೆ, ಆತ್ಮ ಬೇರೆ, ಎಂಬ ವಿವೇಕವು ಶೀಘ್ರವಾದ ಅಪರೋಕ್ಷ ಜ್ಞಾನಕ್ಕೆ ಸಾಧನವಾಗಿದೆ. 'ದುರ್ಲಭಂ ಮಾನುಷಂ ಜನ್ಮ' - ಯೋನಿ ಯೋನಿಗಳಲ್ಲಿ ಸುತ್ತಾಡಿ, ಪುಣ್ಯ ಬಲದಿಂದ ದೊರೆತ ಈ ದುರ್ಮಿಳವಾದ ಮಾನವ ಶರೀರವನ್ನು ಹಾನಿ ಮಾಡಿಕೊಳ್ಳುವವನು ಕಡು ಮೂರ್ಖನೆ ಸರಿ. ದೇಹವೇ ಆತ್ಮವೆಂಬ ಆತನ ಈ ಭ್ರಮೆಯ ನಿವಾರಣೆಯು ಎಂದಿಗೂ ಆಗುವದಿಲ್ಲ. ಅಂಥವನನ್ನು ಸರಿಯಾದ ದಾರಿಗೆ ಹಚ್ಚುವದೇ ಸಾಧ್ಯವಿಲ್ಲ- ಇಂಥವರ ಸಹವಾಸವಿರುವ ಸ್ವರ್ಗವು ಕೂಡ ಸಜ್ಜನರಿಗೆ ಬೇಡವೆನಿಸುವದು.- ಪೂರ್ಣವಾಗಿ ವಿಚಾರಮಾಡಿಯೆ ಈ ಮಾತನ್ನು ಹೇಳಿದೆ. ನಿಜವಾಗಿ ಇದ್ದುದನ್ನೇ ಹೇಳಬೇಕೆಂದರೆ, ಅಂಥ ಪಾಪಿಯು ತೋರಿಕೆಯಲ್ಲಿ ಮಾನವ ಶರೀರದಲ್ಲಿ ಇದ್ದರೂ, ಆತನು ಪಶುವೇ ಸರಿ; -ಹೀಗೆ ಹೇಳಿರುವರು:- (ವಾತ, ಪಿತ್ತ, ಕಫಗಳೆಂಬ) ಮೂರು ಧಾತುಗಳಿಂದ ಕೂಡಿದ ಈ ಶರೀರವನ್ನೆ ಆತ್ಮನೆಂದು ತಿಳಿಯುವವನು ಕಾಡು ಪಶುಗಳಲ್ಲಿ ಅತೀ ನೀಚ ಪಶುವಾಗಿರುವನು. -ಇದೇ ಅಭಿಪ್ರಾಯದಿಂದಲೆ, -ಮೂರ್ಖೋ ದೇಹಾದ್ಯಹಂ ಬುದ್ಧಿಃ -ದೇಹಾದಿ ಪಾರ್ಥಿವ ವಸ್ತುಗಳಲ್ಲಿ ನಾನು-ನನ್ನದು ಎಂಬ ಬುದ್ಧಿಯುಳ್ಳವನು ಮಹಾಮೂರ್ಖನಾಗಿರುವನು. "ತದೇತದಧಿಗಚ್ಛಂತಿ.... ದೇಹಗೇಹಜಂ" (೧೨-೫೩) ಮನೆ ಮಾರುಗಳ ಬಗ್ಗೆ ನಾನು-ನನ್ನದೆಂಬ ದುಷ್ಟ ಭಾವನೆ (ದೌರ್ಜನ್ಯ)

ವುಳ್ಳವರು, ಶ್ರೀ ವಿಷ್ಣುವಿನ ಪರಮೋಚ್ಚಸ್ಥಾನ -ವನ್ನು ಎಂದಿಗೂ ಪಡೆಯಲಾರರು. -ಈ ದುಷ್ಟ ಭಾವನೆಯಿಲ್ಲದವರೇ ಅಂಥ ಸ್ಥಾನವನ್ನು ಪಡೆಯಬಲ್ಲರು.

ಪರಮಾತ್ಮ ಪ್ರಾಪ್ತಿಗೆ ಸಾಧನಗಳೆಂದು ಹೇಳಿರುವ ಈ ಧರ್ಮಗಳನ್ನು ಪಡೆದ ಇಂಥ ಅಧಿಕಾರಿಗೆ ದೊರೆಯುವ ಫಲವು ಎಂತಹದು? -ಎಂದರೆ ಹೇಳುವರು.

(೧೬) '**ಚೀರವಸನಂ ಶಿಕ್ಷೇತ್**'- ಇದು ೧೬ನೆಯ ಭಾಗವತ ಧರ್ಮವಾಗಿದೆ.- ಚೀರವಸನ-ಎಂದರೆ, ಮತ್ತೆ ಮತ್ತೆ (ಬಹುಕಾಲ)ಉಪಯೋಗಿಸಿ ಬೀದಿಗೆ ಎಸೆಯಲ್ಪಡುವ ತುಂಬಾ ಜೀರ್ಣವಾದ ಬಟ್ಟೆಯೆ ಚೀರವಸನ, ಹೀಗೆ ಹೇಳಿರುವರು.- 'ಚೀರಾಣಿ ಕಿಂ ಪಥಿ ನ ಸಂತಿ' - ಬೀದಿಯಲ್ಲಿ ಎಸೆದ ಹರಕು ಬಟ್ಟೆಗಳಿಲ್ಲವೆ ?- ಎಂದು. ಹೀಗಿದ್ದರೆ, ಈ ಹರಕು ಬಟ್ಟೆಗಳನ್ನು (ಸಾಧನೆಯಿಂದ) ಸಂಪಾದಿಸಬೇಕೆಂದು ಹೇಗೆ ಹೇಳುವಿರಿ ? -ಬಿದ್ದಿರುವ ಚಿಂದೆಯನ್ನು ತೆಗೆದುಕೊಳ್ಳಲು ಗುರುಗಳ ಅನುಮತಿ ಬೇಕಿಲ್ಲ. ಪರಕೀಯರ ಮನೆಗೆ ಊಟಕ್ಕಾಗಿ ಹೋದ ಶಿಷ್ಯನಿಗೆ ಊಟದ ಮೊದಲು ಗುರುವಿನ ಆಜ್ಞೆ ಏಕೆ ಬೇಕು ? ಎಂದರೆ ನಿಮ್ಮ ಪ್ರಶ್ನೆ ನಿಜವಾದುದು. ಅಂಥ ಮನೆಯಲ್ಲಿ ಗುರುವಿನ ಆಜ್ಞೆ ಅಗತ್ಯವಾಗಿಲ್ಲ. ಹೀಗಿದ್ದರೂ ತನಗೆ ಗುರುವಾದವನನ್ನು ಬಿಟ್ಟುಕೊಟ್ಟು ಆತನಿಗೆ ಸರಿಸಮಾನನಾಗಿರುವ ಗುರುವಿನಲ್ಲಿ ಶಿಷ್ಯತ್ವವನ್ನು ಪಡೆಯಲು, (ಮೊದಲಿನ) ತನ್ನ ಗುರುವಿನ ಅಪ್ಪಣೆ ಬೇಕೆಂಬುದು ಎಲ್ಲರೂ ಒಪ್ಪುವ ಮಾತು. (ಊಟ ಕಾಲದಲ್ಲಿಯಂತೆಯೆ) ಉಳಿದ ಬೇರೆ ಕಾರ್ಯಗಳನ್ನು ಮಾಡುವಾಗಲೂ ಗುರುವಿನ ಅಪ್ಪಣೆಯನ್ನು ಪಡೆದುಕೊಳ್ಳುವ ಕ್ರಮವನ್ನು ಅನುಸರಿಸಿದರೆ, ಅಧಿಕ ಫಲ ದೊರೆಯುವದೆಂಬ ನಿಮ್ಮ ಅಭಿಪ್ರಾಯವನ್ನು ನಾವೂ ಮನ್ನಿಸುತ್ತೇವೆ. ಗುರುವಿನ ಅಪ್ಪಣೆ ಪಡೆದುಕೊಂಡ ಮಾತ್ರಕ್ಕೆ, ಊಟದ ರುಚಿಯೂ ಹೆಚ್ಚುವದಿಲ್ಲ. ಅಥವಾ ಅದರಿಂದ ಊಟದಲ್ಲಿ ಯಾವ ಉಪಯೋಗವೂ ಉಂಟಾಗುವದಿಲ್ಲ. ಅಪ್ಪಣೆ ಪಡೆದು ಊಟ ಮಾಡಿದರೆ, ಅಂಥ ಊಟದಿಂದ ಮಹಾ ಫಲವು ಪ್ರಾಪ್ತವಾಗುದದೆಂಬುದೇ ಅಪ್ಪಣೆಯ ಪ್ರಯೋಜನ. ಅಂತೆಯೆ ಊಟಕ್ಕೆ ಪ್ರಾರಂಭಿಸುವ ಮೊದಲು, ಗುರುಗಳ ಅನುಮತಿಯನ್ನು ಬೇಡಿಕೊಳ್ಳಲು -'ಶ್ರೀಹರೇಃಪ್ರಸಾದೋಽಸ್ತು'- ಎಂದು ಅದಕ್ಕಾಗಿಯೆ ಹೇಳುವರು, -ಎಂಬ ನಿಮ್ಮ ಮಾತಿಗೂ ನಮ್ಮದೂ ಒಪ್ಪಿಗೆ. ಊಟದ ಅನುಮತಿಗೆ 'ಶ್ರೀಹರಿ ಪ್ರಸಾದವಾಗಲಿ' ಎಂಬುದನ್ನು ಅನುಸಂಧಾದ ಮಾಡಿಕೊಂಡರೆ (ಭಾವನೆಯನ್ನು ತಾಳಿದರೆ) (ಚೀರವಸನ) ಚಿಂದೆ ಬಟ್ಟೆ ಉಡುವಾಗಲೂ 'ಶ್ರೀ ಹರಿಪ್ರಸಾದ' ವೆಂದು ಅನುಸಂಧಾನ ಮಾಡಿದರೆ, ಒದಗುವ ಫಲವು ಇಂತಿಷ್ಟೆಂದು ನೂರಿಂದಲೂ ಹೇಳಲಾಗದು. -ನಿಮ್ಮ ಈ ಮಾತನ್ನು ನಾವು

ಒಪ್ಪುವೆವು. ಊಟದ ವಿಷಯದಲ್ಲಿ ಶ್ರೀಹರಿಪ್ರಸಾದವೆಂಬ ಅನುಸಂಧಾನದಿಂದ (ಶ್ರೀ ಶುಕಾದಿ ಮಹಾಮುನಿಗಳ ಚರಿತ್ರೆಯಲ್ಲಿ) ಮಹಾ ಫಲವು ದೊರೆತಿರುವದು ಕಂಡುಬರುವದು ಶ್ರೀ ಹರಿಪ್ರಸಾದದ ಅನುಸಂದಾನದಿಂದ ದ್ರೌಪದೀ ದೇವಿಗೆ ಅಕ್ಷಯ ವಸ್ತ್ರ ದೊರೆತಿತೆಂಬುದನ್ನೂ ಕಣ್ಮುಂದೆ ತಂದುಕೊಳ್ಳಿರಿ, ಎಂದರೆ-ಆಗಲಿ, ಈ ವಾದವು ಇಲ್ಲಿಗೆ ಮುಗಿಯಲಿ. – ಇನ್ನು –'ಚೀರವಸನಂ ಶಿಕ್ಷೇತ್'– ಎಂಬ ಭಾಗವತ ಧರ್ಮದ ಮುಖ್ಯಾರ್ಥವನ್ನು (ಒಳಗುಟ್ಟನ್ನು) ಹೇಳಿಬಿಡಬೇಕು' –ಎಂದರೆ, ಈಗ್ಗೆ ಅದೇ ಅರ್ಥವನ್ನು ಹೇಳುವೆವು :– ಚೀರವಸನವೆಂದರೆ, ಗೃಹಸ್ಥನು ಹಳೆಯ ಬಟ್ಟೆಯನ್ನು ಬಿಸುಡಿ ಹೊಸ ಬಟ್ಟೆಯನ್ನು ತೊಡುವಂತೆಯೆ, ಚೀರವಸನವೆಂಬ ಧರ್ಮವಾಗಿರುವದೆ? –ಎಂಥರೆ,– ನಿಮ್ಮ ವಿಚಾರವು ಸರ್ವಥಾ ತಪ್ಪು. ಭಾಗವತ ಧರ್ಮವನ್ನು ಆಚರಿಸುವವನು, (ನಿಮ್ಮ ಉದಾಹರಣೆಯಂತೆ) ಜೀರ್ಣ ಬಟ್ಟೆ ತೆಗೆದೊಗೆದು ಹೊಸ ಬಟ್ಟೆ ತೊಡುವವನಲ್ಲ, ಆ ಭಗವದ್ಭಕ್ತನು ತನ್ನ ಕರ್ಮಫಲದ ಭೋಗಕ್ಕಾಗಿ ಯಾವ ಶರೀರವು ಪ್ರಾಪ್ತವಾಗಿರುವದೋ ಅದನ್ನೇ ಆತನು ಸ್ವೀಕರಿಸುತ್ತಾನೆ. ಅದನ್ನು ಬಿಟ್ಟು ಬೇರೊಂದನ್ನಲ್ಲ. ಈ ಮಾತಿನ ಮಥಿತಾರ್ಥವೇನೆಂದು ಕೇಳಿದರೆ ಹೇಳುವರು :– ನಿಷ್ಕಪಟವಾದ ಭಗವದ್ಭಕ್ತಿಯುಳ್ಳವನು, ಭಗವದ್ಭಕ್ತರಲ್ಲಿಯೂ ಅವರವರ ಪಾತ್ರತೆಗೆ ಉಚಿತವಾದ ಭಕ್ತಿಯನ್ನು ಮಾಡುವವನು, ನಿರಪೇಕ್ಷನು, ಮಹಾತ್ಮರ ನಿಂದೆಯನ್ನೂ ತನ್ನ ಪ್ರಶಂಸೆಯನ್ನೂ ಮಾಡದವನು, ಆಗಾಗ್ಗೆ ಉಕ್ಕಿ ಬರುವ ಕಾಮದ ಉದ್ರೇಕವನ್ನು, ಆವೇಶವನ್ನು ತಡೆದುಕೊಳ್ಳಬಲ್ಲವನು, ಎಲ್ಲ ಹೆಸರುಗಳೂ ಭಗವಂತನ ಹೆಸರುಗಳೆಂದು ದೃಢವಾದ ಭಾವನೆಯುಳ್ಳವನು, ಅಂತೆಯೆ ಆ ಹೆಸರುಗಳನ್ನು (ಶಬ್ದಗಳನ್ನು) ಬೇರೆ ಕಡೆಗೆ ಉಪಯೋಗಿಸದವನು, ಕಾಯಾ, ವಚಸಾ, ಮನಸಾ (ಮೈ–ಮನ–ಮಾತುಗಳಲ್ಲಿ)ಏಕರೂಪ–ಒಂದೇ ರೀತಿಯಾಗಿ ನಡೆಯುವವನು, ದೇಹ ಹಾಗೂ ಇಂದ್ರಿಯಗಳಿಂದ ಮಾಡುವ ಕಾರ್ಯಗಳನ್ನೆಲ್ಲ ಭಗವಂತನ ಕಾರ್ಯ, (ಸೇವೆ) ಎಂತಲೇ ಭಾವಿಸುವವನು, ಕೋಪವನ್ನು ಬಿಟ್ಟುಕೊಟ್ಟವನು, ಈ ಲೋಕದ ಹಾಗೂ ಪರಲೋಕದ ವಿಷಯ ಸುಖಗಳನ್ನೆಲ್ಲ ದು:ಖಕ್ಕೆ ಸರಿಸಮಾನವಾಗಿ ಹೇಯ (ನಿಂದ್ಯ)ವೆಂದು ತಿಳಿದವನು, ಶ್ರೀಹರಿಯ ಇಚ್ಛೆಯಿಂದ ಒದಗುವ ದು:ಖವನ್ನು ಕೂಡ ಸುಖದಂತೆಯೆ ಆದರದಿಂದ ಭೋಗಿಸುವವನು,– ತನ್ನಅಂತರಂಗದಲ್ಲಿ,ನೆಲೆಸಿಕೊಂಡು ಕೂಡ ತೆಗೆದುಕೊಳ್ಳುವ ಸಕಲ ಕಾರ್ಯಗಳನು ಮಾಡಿ ಮಾಡಿಸುವನಾದ, (ಜ್ಞಾನ ವಿಜ್ಞಾನಗಳೆಂಬ) ಎರಡು ಬಗೆಯ ಜ್ಞಾನಗಳನ್ನು ಕೊಡುವವನಾದ, ಜೀವಿಗಳ ಅಂತರಂಗದಲ್ಲಿದ್ದು ಪುರುಷನೆಂದು ಕರೆಯಲ್ಪಡುವ, ಜೀವಿಗಳ ಹೊರಗೆ ನಿಂತುಕೊಂಡು ಜೀವಿಗಳ ಜ್ಞಾನ ಹಾಗೂ ಕರ್ಮ

ಗಳಿಗೆ (ಅನುರೂಪವಾದ) ಫಲವನ್ನು ಕೊಡುವವನಾದ, ಆದುದರಿಂದಲೆ ಎಲ್ಲರಿಗೂ ರಕ್ಷಕನಾಗಿದ್ದುಕೊಂಡು 'ಕಾಲ' ನೆಂದು ಕರೆಯಲ್ಪಡುವ ಪರಮಾತ್ಮನನ್ನು ಸರ್ವದಾ ಧ್ಯಾನ ಮಾಡುತ್ತ, ಧ್ಯಾನದಲ್ಲಿ ಆಲಸ್ಯ (ದಣಿವು-ಬೇಜಾರ) ಉಂಟಾದಾಗ್ಗೆ, ಪ್ರಾಣಧಾರಿಗಳಾದ ಎಲ್ಲ ಜೀವಿಗಳಲ್ಲಿಯೂ ಒಳಗಿನ ಪುರುಷರೂಪವನ್ನು ಹೊರಗಿನ 'ಕಾಲ'ರೂಪವನ್ನು, ಈ ಎರಡೂ ರೂಪಗಳಲ್ಲಿ ಕಂಗೊಳಿಸುವ ಶ್ರೀಹರಿಯನ್ನು ಚಿಂತಿಸುತ್ತ, ಕರ್ತೃತ್ವ, ಭೋಕ್ತೃತ್ವ, ದೇಹ ಹಾಗೂ ಇಂದ್ರಿಯಗಳ ಸ್ವಾಮಿತ್ವವನ್ನು ಶ್ರೀ ಹರಿಗೇನೆ ಬಿಟ್ಟುಕೊಟ್ಟು, ಮಲಗುವಾಗಲೂ, ಕೂಡುವಾಗಲೂ ಶ್ರೀ ಹರಿಯ ಧ್ಯಾನವನ್ನೇ ಮಾಡುವವನಾಗಿ, ಪ್ರಾರಬ್ಧಕರ್ಮದ ಅವಧಿಗೆ ಮಾತ್ರ ಶರೀರವನ್ನು ಬಳಸಿಕೊಳ್ಳುವನಾಗಿ, ಕರ್ಮಗಳನ್ನು ಮಾಡುತ್ತಿದ್ದರೂ, ಮತ್ತೆ ಶರೀರಧಾರಣೆಗೆ ಕಾರಣವಾಗುವ ಕರ್ಮಗಳನ್ನು ಇಂಥ ಭಗವದ್ಭಕ್ತನು ಎಂದಿಗೂ ಮಾಡುವದಿಲ್ಲ.

ಕರ್ಮಫಲದಿಂದ ಒದಗಿದ ಶರೀರವೇ 'ಚೀರವಸನ' ಅದನ್ನು ತ್ಯಜಿಸದೆ, ಪ್ರಾರಬ್ಧದ ಭೋಗಕ್ಕಾಗಿ ಆ ದೇಹದ ಉಪಯೋಗವೇ, ಹೊಸ ಶರೀರವನ್ನು ತಾಳದಂತೆ ಮಾಡುವದೇ, ಚೀರವಸನದ ವ್ರತ.

(೧೭) **ಸಂತೋಷಂ ಶಿಕ್ಷೇತ್** :- ಇದು ಹದಿನೇಳನೆಯ ಭಾಗವತ ಧರ್ಮವು. ಇಲ್ಲಿ ಒಂದು ಆಕ್ಷೇಪ :- 'ವಾರ್ತಾ, ಅಸಂಚಯ, ಶಾಲೀನ, ಶಿಲೋಂಛ'- ಚರಿತಾರ್ಥಕ್ಕೆ ಇವು ನಾಲ್ಕು ಸಾಧನಗಳು. ಅವುಗಳಲ್ಲಿ ಅಸಂಚಯವೆಂಬುದು ನಿಯಮಗಳ ಗುಂಪಿನಲ್ಲಿ ಒಂದೆನಿಸಿದೆ. ಉಳಿದ ಮೂರು ವೃತ್ತಿಗಳನ್ನು ಬಿಟ್ಟುಕೊಡಬೇಕಾಗುವದು. ಜೀವನಕ್ಕಾಗಿ ವಿಧಿಸಿದ ನಾಲ್ಕು ವೃತ್ತಿಗಳಲ್ಲಿ ಒಂದನ್ನು ಮಾತ್ರ ಬಿಟ್ಟುಕೊಟ್ಟರೆ, ಅವುಗಳಲ್ಲಿ ( ಉತ್ತಮ ಕನಿಷ್ಟ ) ವೆಂಬ ಪಕ್ಷಪಾತವನ್ನು ಒಂದರಬಗ್ಗೆ ಮಾಡಿದಂತಾಗುವದು. ಉಳಿದವುಗಳನ್ನು ಅಸಂಚಯದೊಡನೆ ಸೇರಿಸಿಕೊಂಡರೆ, 'ಸಂತೋಷ'ವೆಂಬ ಹೆಸರಿನಿಂದ ಅಸಂತೋಷವೆಂಬುದೊಂದನ್ನೇ ತೆಗೆದುಕೊಳ್ಳುವದು ಯೋಗ್ಯವಾಗಿಲ್ಲ. ಈ ಆಕ್ಷೇಪದ ನಿವಾರಣೆಗೆ ತಮ್ಮ ಮನಸ್ಸಿನಲ್ಲಿರುವ ಅಭಿಪ್ರಾಯವನ್ನು ಪ್ರಕಟಗೊಳಿಸುವರು :- 'ಸಂತೋಷಂ ಶಿಕ್ಷೇತ್' ಎಂದು. ನಮ್ಮ ಅಭಿಪ್ರಾಯವು ಇದು :- ಜೀವಿಕೆಯ ಸಾಧನವಾದ ಈ ನಾಲ್ಕು ವೃತ್ತಿಗಳು ಅನುಸರಿಸಲು ತಕ್ಕವೇ- ಹೀಗಿದ್ದರೂ ಸಂತೋಷವೊಂದನ್ನೇ ಕೇವಲ ನಮ್ಮ ಆಗ್ರಹವೆಂದು ತೆಗೆದುಕೊಂಡಿಲ್ಲ. ಈಶ್ವರೋಪಾಸನೆಗೆ ಆತಂಕ ಉಂಟಾಗ ಬಾರದೆಂತಲೇ ಹಾಗೆ ಹೇಳಿರುವೆವು. ಉಪಾಸನೆಗೆ ಅಡೆತಡೆಯಾಗದಿರುವ ಯಾವುದೇ ವೃತ್ತಿಯನ್ನಾದರೂ ಅನುಸರಿಸಬಹುದು. ಮನಸ್ಸಿ

ನಲ್ಲಿರುವ ನಿಮ್ಮ ಅಭಿಪ್ರಾಯವನ್ನು ಮಾತಿನಿಂದ ಹೊರಗೆಡಹಿದರೆ ಮಾತ್ರ ಅದು ಎಲ್ಲರಿಗೂ ಹೊಳೆಯುವದು, ಎಂದರೆ (ವಾರ್ತಾ, ಅಸಂಚಯ) ಈ ನಾಲ್ಕು ವೃತ್ತಿಗಳನ್ನು ಇನ್ನೊಮ್ಮೆ ತಿಳಿಸಿ ಹೇಳಿ, ಅರ್ಥವನ್ನು ಸ್ಪಷ್ಟಗೊಳಿಸುವೆವು. ನಾಲ್ಕರಲ್ಲಿ ಒಂದರ ಬಗ್ಗೆ ವಿಶದಗೊಳಿಸಿದರೆ, ಅದೇ ಗುಂಪಿನ ಉಳಿದ ಮೂರರ ಬಗ್ಗೆಯೂ ವಿವರಿಸಿದಂತಾಗುವದು. ಈ ಕಾರಣದಿಂದಲೆ, 'ಸಂತೋಷ'ವೆಂಬುದನ್ನು ಮಾತ್ರ ಇಲ್ಲಿ ತೆಗೆದುಕೊಂಡಿರುವೆವು. ಸಂತೋಷವೊಂದರ ಬಗ್ಗೆ ಹೇಳುವದರಿಂದ ಉಳಿದವುಗಳ ಬಗ್ಗೆ ಹೇಗೆ ಹೇಳಿದಂತಾಗುವದು ? ಎಂದರೆ, 'ಯೇನಕೇನ ಸಂತೋಷಂ ಶಿಕ್ಷೇತ್' ಎಂದು ವಾಕ್ಯವನ್ನು ಪೂರ್ತಿಗೊಳಿಸುವದರಿಂದ, ನಮ್ಮ ಅಭಿಪ್ರಾಯವು ಸ್ಪಷ್ಟವಾಗುವದು. ಜೀವಿಕೆಗಾಗಿ ನಾಲ್ಕು ವೃತ್ತಿಗಳನ್ನು ಹೇಳಿರುವದರಲ್ಲಿ, ಇಂಥದೇ ವೃತ್ತಿಯನ್ನು ಅನುಸರಿಸಬೇಕೆಂಬುದು ನಮ್ಮ ಅಭಿಪ್ರಾಯವಾಗಿಲ್ಲ. ಮುಖ್ಯ ಮಾತೆಂದರೆ, ವಾರ್ತಾದಿ ಯಾವುದೇ ವೃತ್ತಿಯಿಂದಾಗಲಿ, ಶ್ರೀಹರಿಯ ಇಚ್ಛೆ (ಯದೃಚ್ಛಯಾ) ಯಿಂದಾಗಲಿ ಪ್ರಾಪ್ತವಾದುದರಲ್ಲಿಯೆ ಉಪಾಸಕನು ಸಂತುಷ್ಟನಾಗಬೇಕು. ಸಂತೃಪ್ತಿಯನ್ನು ಪಡೆಯಬೇಕು. ಹೀಗಾದರೆ ಮಾತ್ರ ಈಶ್ವರೋಪಾಸನೆಗೆ ಆತಂಕ ಉಂಟಾಗದು. ಈ ಬಗ್ಗೆ ಹೇಳಬೇಕಾದುದನ್ನು ಈ ಮೊದಲು ಹೇಳಿದೆ. ಇನ್ನು ಮುಂದೆಯೂ ಹೇಳುವೆವು. – ಮೇಲಿನ ವಿವರಣೆಯಿಂದ 'ಸಂತೋಷ' ವೆಂಬ ಧರ್ಮದ ಬಗ್ಗೆ ವಿವರಣೆ ಕೊಟ್ಟಂತಾಯಿತು.

(೧೮) **ಪರಾರ್ಥೇಹಾ ಶಿಕ್ಷಣೀಯಾ**:– ಇದು ಹದಿನೆಂಟನೆಯ ಭಾಗವತ ಧರ್ಮ. – ಇಲ್ಲಿ ಒಂದು ಆಕ್ಷೇಪಃ– ಕೃತಿಯಿಂದ, ಮಾತಿನಿಂದ, ಮನಸ್ಸಿನಿಂದ ಹೆರವರ ವಸ್ತುವಿನ ಬಗ್ಗೆ ಆಶೆ ಮಾಡದಿರುವದೇ 'ಅಸ್ತೇಯ'ವೆಂಬುದು–'ಆಶೆಪಡದಿರುವದೇ' ಅಸ್ತೇಯವೆಂಬ ಬೇರೊಂದು ಅರ್ಥದಲ್ಲಿ ಇಲ್ಲಿ ತೆಗೆದುಕೊಂಡಿದ್ದರೂ ಅದರ ಮೂಲಾರ್ಥವಾದ –ಪರದ್ರವ್ಯದ ಬಗ್ಗೆ ಆಶೆ ಮಾಡದಿರುವದು –ಎಂಬ ಅಂಶವನ್ನು ಇಲ್ಲಿಯೂ ಒಪ್ಪಲೇಬೇಕು. ಪರದ್ರವ್ಯವನ್ನು ಬಯಸುವದು ಪಾತಕಗಳಲ್ಲಿ ಒಂದಾಗಿದೆ. ಪಾತಕವಾಗಿರುವ ಪರದ್ರವ್ಯದ ಆಶೆಯನ್ನು ಬಿಟ್ಟು ಕೊಡುವದು ಅಗತ್ಯವಾದುದು. ಹೀಗಿರಲು, ಪರದ್ರವ್ಯದ ಬಗ್ಗೆ (ಈಹಾ) ಅಪೇಕ್ಷೆ ತಾಳಬೇಕು. ಆದಕ್ಕಾಗಿ ಶ್ರಮಿಸಬೇಕು. –ಎಂದು ನೀವು ಹೇಗೆ ಹೇಳುವಿರಿ? ಎಂದರೆ ನಿಮ್ಮ ಪ್ರಶ್ನೆ ಸರಿಯಾದುದು. ಪರದ್ರವ್ಯವನ್ನು ಬಯಸಕೂಡದೆಂಬ ಅಂಶವನ್ನು ಸ್ವೀಕರಿಸಲೇಬೇಕು. ಹೀಗಿದ್ದರೂ ' ಪರದ್ರವ್ಯ ' ವೆಂಬುದಕ್ಕೆ ನಾವು ಇಲ್ಲಿ ಹೇಳಲಿರುವ ಅರ್ಥವು ಬೇರೆಯಾಗಿದೆ. ಬೇರೊಂದು ಅರ್ಥವು ಯಾವುದೆ

ದರೆ,- 'ಪರಃ' -ಎಂದರೆ ಮುಕ್ತಿಗೆ ಸಾಧನವಾಗದಿರುವ ಬೇರೊಂದು ವಸ್ತು; ಅಥವಾ ಮೋಕ್ಷಪ್ರಾಪ್ತಿಗೆ ವಿರುದ್ಧವಾಗಿರುವ,ಆತಂಕವಾಗಿರುವ ಸಾಧನಸಮೂಹ ಅವುಗಳ ಬಗ್ಗೆ ಜನರು ತಾಳುವ ಬಯಕೆ (ಆಸ್ಥೆ)ಯನ್ನು ಕಂಡುಕೊಳ್ಳುವದು. (ಈಕ್ಷಣ).

ಹೀಗೆ ಈ ಶಬ್ದಕ್ಕೆ ಬೇರೊಂದು ಅರ್ಥವನ್ನು ಗ್ರಹಿಸುವದರಿಂದ, ಆದೇ ಅರ್ಥವನ್ನು ಸ್ಪಷ್ಟಗೊಳಿಸುವರು. ಪರಾರ್ಥೇಹಾ-ಎಂದರೇನೆ-ನೃಣಾಃ ವಿಪರ್ಯಯಃ ಜನರು 'ಪರಾರ್ಥೇಹಾ' ಎಂಬುದಕ್ಕೆ ಮೇಲೆ ಹೇಳಿದ ಸರಿಯಾದ ಅರ್ಥವನ್ನು ಬಿಟ್ಟುಕೊಟ್ಟು ಬೇರೊಂದು -ತದ್ವಿರುದ್ಧವಾದ ಅರ್ಥ ಮಾಡಿಕೊಳ್ಳುವದು. ಈ ಮಾತನ್ನು ತಿಳಿಯುಕೊಳ್ಳಬೇಕು. ಇಲ್ಲಿ ಒಂದು ಆಕ್ಷೇಪ -ನೀವು ಹೇಳುವ ಈ ಮಾತಿನ ಅರಿವಾಯಿತು. ಹೆರವರ ವಸ್ತುವನ್ನು ಅಪೇಕ್ಷಿಸಬಾರದು, ಎಂಬ ಅರ್ಥವನ್ನಂತೂ ಒಪ್ಪಿಕೊಳ್ಳಲೇಬೇಕಲ್ಲವೆ ? 'ಪರಾರ್ಥೇಹಾ' ಶಬ್ದಕ್ಕೆ ಪರದ್ರವ್ಯದ ಅಪೇಕ್ಷೆಯೆಂಬ ಅರ್ಥವನ್ನಿಟ್ಟುಕೊಂಡರೆ, ನೀವು ಹೇಳುತ್ತಿರುವ ಅರ್ಥಕ್ಕೆ ಅದೂ ವಿರುದ್ಧವಾಗುವದು. ನೀವು ಹೇಳುವದು ಸರಿಯಾದುದಲ್ಲ. ಮೋಕ್ಷಪ್ರಾಪ್ತಿಗೆ ಸಾಧನವಾಗದಿರುವ ಮೋಕ್ಷಕ್ಕೆ ವಿರುದ್ಧವಾಗಿರುವ ವಸ್ತುವಿನ ಬಗ್ಗೆ ಜನರ ಅಪೇಕ್ಷೆಯು, ಅವನ್ನು ಕಂಡುಕೊಳ್ಳುವದೇ – 'ಪರಾರ್ಥೇಹಾ' ಶಬ್ದಕ್ಕೆ ಉದ್ದಿಷ್ಟವಾದ ಅರ್ಥವಾಗಿದೆ.– ಬೇರೆ ಜನರು ಮೋಕ್ಷ ಪ್ರಾಪ್ತಿಗೆ ಸಾಧನವಾಗದಿರುವ ವಸ್ತುವಿನ ಬಗ್ಗೆ ಅಪೇಕ್ಷಿಸುವದು, ಇಲ್ಲವೆ ಆದಕ್ಕಾಗಿ ಧಡಪಡಿಸುತ್ತಿರುವದನ್ನು ಕಂಡುಕೊಳ್ಳುವದರಿಂದ ನಮಗೇನು ಪ್ರಯೋಜನವಿದೆ ? ಎಂದರೆ, ಅವರು ಅನುಸರಿಸುತ್ತಿರುವ ತಪ್ಪು ದಾರಿಯನ್ನು ನಾವು ಬಿಟ್ಟುಕೊಡಬೇಕು, ಮೋಕ್ಷಪ್ರಾಪ್ತಿಗೆ ಸಹಾಯಕವಾಗಿರುವ ಶ್ರವಣಾದಿ ಭಾಗವತ ಧರ್ಮಗಳನ್ನೆ ಆಚರಿಸಬೇಕೆಂದು ಅರಿತುಕೊಳ್ಳಬೇಕು. ಹೀಗೆ ನಡೆದುಕೊಂಡರಾಯಿತು. ಅದೇ ನಮಗೆ ಸಾಕಷ್ಟು ಉಪಯುಕ್ತವಾಗುವದಿಲ್ಲವೆ ? ಎಂದು ಕೇಳಿದರೆ - ನೀವು ಹೇಳುವದು ಸರಿ. ಉಳಿದವರ ಜೀವನಕ್ರಮವನ್ನು ನಿರೀಕ್ಷಿಸಬೇಕು. ಮೋಕ್ಷಕ್ಕೆ ಪ್ರತಿಕೂಲವಾದ ವಸ್ತುಗಳಲ್ಲಿ ಅವರು ಆಸಕ್ತರಾಗಿದ್ದರೆ, ಮೋಕ್ಷಪ್ರಾಪ್ತಿಗೆ ವಿರುದ್ಧವಾದ ದಾರಿಯಲ್ಲಿ ನಡೆಯುತ್ತಿದ್ದರೆ, ಅವರ ಆಸಕ್ತಿಯು ತಪ್ಪು ಎಂಬುದನ್ನು ಅವರಿಗೆ ತಿಳಿಸಿ ಹೇಳಬೇಕು, ಉಪದೇಶದ ನಾಲ್ಕು ಮಾತುಗಳಿಂದ, ಬೇರೆ ಬೇರೆ ಉಪಾಯಗಳಿಂದ ಅವರನ್ನು ತಪ್ಪು ಮಾರ್ಗದಿಂದ ಬಿಡಿಸಬೇಕು. ಸ್ವತಃ ಭಾಗವತ ಧರ್ಮಗಳನ್ನು ಆಚರಿಸುವದಕ್ಕಿಂತಲೂ, ಅವುಗಳಿಗೆ ವಿರುದ್ಧವಾಗಿ ನಡೆಯುವವರನ್ನು ಸನ್ಮಾರ್ಗಕ್ಕೆ, ಮೋಕ್ಷಪ್ರಾಪ್ತಿಯ ಮಾರ್ಗಕ್ಕೆ ಹಚ್ಚುವದು ಶ್ರೇಷ್ಠ ಕರ್ತವ್ಯವಾಗಿದೆ,

ಹೆಚ್ಚು ಪುಣ್ಯಕರವಾಗಿದೆ, ಅದರಿಂದ ಶ್ರೀ ಹರಿಯ ಅನುಗ್ರಹವು ಇನ್ನೂ ಅಧಿಕವಾಗಿ ದೊರೆಯುತ್ತಿದೆ. ಇದುವೇ ಮಹಾಪ್ರಯೋಜನ. ಈ ಅರ್ಥವನ್ನು ಮನಸ್ಸಿನಲ್ಲಿ ಇಟ್ಟುಕೊಂಡೇ 'ಪರಾರ್ಥೇಹಂ' ಶಬ್ದದ ಅರ್ಥವನ್ನು ವಿವರಿಸಿದೆ. 'ಪರಾರ್ಥೇಹಾ' ಎಂಬ ಶಬ್ದಕ್ಕೆ, ಹೆರವರ ವಸ್ತುಗಳನ್ನು ಅಪೇಕ್ಷಿಸುವದು, ಎಂಬ (ಸಾಮಾನ್ಯ) ಅರ್ಥವನ್ನಿಟ್ಟುಕೊಂಡರೂ ತಪ್ಪೆನಿಸದು.

ಒಂದು ಆಕ್ಷೇಪ :- ಸರ್ವಸಂಗ ಪರಿತ್ಯಾಗ ಮಾಡಿ, ( ಮೂರು ಬಿದಿರುಗಳನ್ನು ಒಂದುಗೂಡಿಸಿದ) ದಂಡಕಾಷ್ಟವನ್ನು ಕೈಯಲ್ಲಿ ಧರಿಸಿ, (ತ್ರಿದಂಡಿಯಾಗಿ) ಯೋಗಾಭ್ಯಾಸವನ್ನು ಮಾಡಬೇಕು - ಎಂದು ಬೇರೆ ಗ್ರಂಥಗಳಲ್ಲಿ ಹೇಳಿದೆ. ಎಂದರೆ, ತ್ರಿದಂಡಿ ಎಂಬುದೇನೆಂದು ನೀವು ತಿಳಿದುಕೊಳ್ಳಬೇಕು 'ತ್ರಿದಂಡಿ' ಎಂದರೆ, ಮೂರು ಬಿದಿರುಗಳ ದಂಡಕಾಷ್ಟವೆಂಬ ಅರ್ಥವಾಗಿಲ್ಲ, 'ತ್ರಿದಂಡಿ' ಎಂದರೆ, ಮಾತು, ಮನಸ್ಸು, ಶರೀರ, ಈ ತ್ರಿಕರಣಗಳ ಸರಿಯಾದ ನಿಯಂತ್ರಣ ಸಂಸ್ಕಾರವೆ ತ್ರಿದಂಡಿತ್ವ. ಭಗವದ್ವಿಷಯವನ್ನು ಬಿಟ್ಟು, ಲೌಕಿಕ ಹರಟೆಯನ್ನಾಡದಿರುವ ಮೌನವೇ ವಾಗಿಂದ್ರಿಯಕ್ಕೆ ಸಂಸ್ಕಾರರೂಪವಾದ 'ಶಿಕ್ಷೆ' ಯಾಗಿದೆ. ಮೋಕ್ಷವೊಂದನ್ನುಬಿಟ್ಟು ಬೇರೆ ಯಾವ ಐಹಿಕ ವಿಷಯದಬಗ್ಗೆ ಅಪೇಕ್ಷೆ ತಾಳದಿರುವದೇ 'ಅನೀಹಾ', ಮನವೆಂಬ ಅಂತರಿಂದ್ರಿಯಕ್ಕೆಶಿಕ್ಷೆ, ಸಂಸ್ಕಾರ. ಶ್ವಾಸೋಚ್ಛ್ವಾಸದ ನಿಗ್ರಹ- ನಿಯಂತ್ರಣವೇ ಶರೀರಕ್ಕೆ ಶಿಕ್ಷೆ-ಸಂಸ್ಕಾರಗಳಾಗಿವೆ. ಈ ಬಗೆಯ ಮೂರು ಮುಖ್ಯ 'ದಂಡ' (ನಿಗ್ರಹ) ಗಳೇ ಶಾಸ್ತ್ರಗಳಿಂದ ಪ್ರಮಾಣಿತವಾದ ತ್ರಿದಂಡಿತ್ವ. ಮೂರು ಬಿದಿರುಗಳ ದಂಡಕ್ಕೆ ( ಕೋಲಿಗೆ ) ತ್ರಿದಂಡಿತ್ವವೆಂಬುದು ಗೌಣ- ಅಮುಖ್ಯಅರ್ಥವು. ಈ ಮೂರು ಬಿದಿರು ( ಕೋಲು ) ಗಳಿಂದಲೆ ಯಾರಿಗೂ 'ಯತಿ' ಯೆನ್ನುವಂತಿಲ್ಲ ಮಾತು, ಮನಸ್ಸು ಹಾಗೂ ದೇಹ, ಈ ಮೂರನ್ನು ತನ್ನ ಅಂಕೆಯಲ್ಲಿ ಇಟ್ಟುಕೊಂಡವನೇ ನಿಜವಾದ ಯತಿಯು. ಹೀಗೆ ಹೇಳಿರುವರು :- 'ಮೌನಾನೀಹಾ .. .. ವೇಣುಭಿರ್ನಭವೇದ್ಯತಿಃ' ವಾಗಿಂದ್ರಿಯ, ಮನಸ್ಸು ಹಾಗೂ ದೇಹ - ಇವುಗಳಿಗೆ ಅನುಕ್ರಮವಾಗಿ ಮೌನ, ಅನೀಹಾ (ನಿರಪೇಕ್ಷತೆ) ಹಾಗೂ (ಪ್ರಾಣಾಯಾಮದಿಂದ) ಶ್ವಾಸನಿಗ್ರಹ. ಈ ಮೂರು ಬಗೆಯ ದಂಡಗಳು -ನಿಗ್ರಹಗಳಿಲ್ಲದವನು ಕೇವಲ ಮೂರು ಬಿದಿರುಗಳ ದಂಡವನ್ನು -ದಂಡ ಕಾಷ್ಟವನ್ನು ಹಿಡಿದ ಮಾತ್ರಕ್ಕೆ 'ಯತಿ' -ಎನಿಸಲಾರನು. (೧೧-೧೮-೧೭) -ಎಲ್ಲ ಇಂದ್ರಿಯ ವಿಷಯಗಳಲ್ಲಿಯೂ ಆಸಕ್ತಿಯಿಲ್ಲದಿರಬೇಕೆಂಬುದು ಇದರಿಂದ ಗೊತ್ತಾಗುವುದು. ಹೀಗೆ ಮಾಡದಿದ್ದರೆ, ಮನೋನಿಗ್ರಹವೇ ಇಲ್ಲದಂತಾಗಿ ಯತಿತ್ವ ಕೇವಲ ಔಪಚಾರಿಕವಾಗಿದೆ. -ಎಂಬ ಅಸಲಾ

ಪಕ್ಕೆ ಗುರಿಯಾಗಬೇಕಾದೀತು. -ನೀವು ಹೇಳುವದೇ ಯಥಾರ್ಥವಾಗಿದ್ದರೆ, ಹೆರವರ ವಸ್ತುಗಳನ್ನು ಅಪೇಕ್ಷಿಸುವದೂ ಪರಾರ್ಥವಾಗಿದೆ. -ಎಂಬ ಅರ್ಥವೂ ಹೇಗೆ ಹೊಂದಿಕೊಳ್ಳುವದು ? ನೀವು ಹೇಳುವ ಅರ್ಥಕ್ಕೆ ಅದರಿಂದ ವಿರೋಧವಾಗುವದಿಲ್ಲವೆಂದು ಹೇಗೆ ಹೇಳುವಿರಿ ? -ಎಂದು ಕೇಳಿದರೆ, ನಿಮ್ಮ ಪ್ರಶ್ನೆಯು ಸರಿಯಾಗಿದೆ. ಆದರೆ, ಹೆರವರ ವಸ್ತುಗಳನ್ನು ಬಯಸುವದು ಸ್ವಸುಖಕ್ಕಾಗಿ, ಸ್ವಹಿತಕ್ಕಾಗಿ ಅಲ್ಲ. ಪರೋಪಕಾರಕ್ಕಾಗಿ ಮಾತ್ರ -ಎಂತಲೇ ನಾವು ಹೇಳಿರುವದು, ಸ್ವಾರ್ಥಕ್ಕಾಗಿ ಪರದ್ರವ್ಯವನ್ನು ಬಯಸದಿರುವುದೇ 'ಅನೀಹಾ' ಎಂಬುದಕ್ಕೆ ಅರ್ಥವಾಗಿದೆ. -ಅರ್ಥವು ಸರಿಯಾದುದೇ ಆಗಿದೆ. ಅನೀಹೆಯು (ನಿರಪೇಕ್ಷತ್ವವು) ಸ್ವಂತದ ವಿಷಯದಲ್ಲಿ ಮಾತ್ರ. ಪರಾರ್ಥವನ್ನು ಬಿಟ್ಟುಕೊಟ್ಟರೆ, ಸ್ವಂತದ ಜೀವನಕ್ಕೆ ಯಾವ ಪ್ರಯೋಜನವೂ ಇಲ್ಲದಂತಾಗುವದು. ಅನೀಹಾ ಮುಂತಾದವುಗಳಿಂದಲೇ ಮಾತ್ರ, ಮನಸ್ಸು, ವಾಗಿಂದ್ರಿಯಾದಿಗಳನ್ನು ನಿಗ್ರಹಿಸಬೇಕೆಂಬುವದೇನೂ ಕುಲಧರ್ಮವಾಗಿಲ್ಲ. ಏಕೆಂದರೆ ಪರಹಿತದ ಕಾರ್ಯಕ್ಕಾಗಿ ಉಳಿದವರ ದ್ರವ್ಯವನ್ನು ಅಪೇಕ್ಷಿಸುವದರಿಂದ ಮಹಾ ಪುರುಷಾರ್ಥದ ಪ್ರಾಪ್ತಿಯಾಗುವದೆಂದು ಹೇಳಿರುವರು. ಮನೋನಿಗ್ರಹವನ್ನು ಮಾಡಲೇಬೇಕೆಂಬ ದುರಾಗ್ರಹವಿಲ್ಲ. ಪುರುಷಾರ್ಥದ ಪ್ರಾಪ್ತಿಗೆ ಮನೋನಿಗ್ರಹವು ಒಂದು ಅಗತ್ಯವಾದ ಸಾಧನವೆಂತಲೆ ಮಾತ್ರ, ಅದನ್ನು ಅಂಗೀಕರಿಸಲೇಬೇಕು. (ಲೋಕಕಲ್ಯಾಣದ) ಈಹಾ (ಅಪೇಕ್ಷೆ) ಯಿಂದಲೆ ಮನೋನಿಗ್ರಹವು ಸಾಧಿಸುವಂತಿದ್ದರೆ, ಅನೀಹೆ (ನಿರಪೇಕ್ಷತೆ)ಯ ಬಗ್ಗೆ ಯೋಚಿಸುವ ಅಗತ್ಯವೇ ಇಲ್ಲ. ಮೌನದಿಂದ ವಾಗಿಂದ್ರಿಯವನ್ನು ನಿಗ್ರಹಿಸಬೇಕೆಂಬುವದರಲ್ಲಿಯೂ ಇದೇ ಮಾತನ್ನು ಹೊಂದಿಸಿಕೊಳ್ಳಬೇಕು. ಪುರುಷಾರ್ಥದ ಪ್ರಾಪ್ತಿಯನ್ನೇ ಕಣ್ಣೆದುರು ಮುಖ್ಯವಾಗಿ ಇಟ್ಟುಕೊಂಡಿರಬೇಕು. ಎಲ್ಲಿಯೂ ಯಾವ ಮಾತನ್ನೇ ಆಡಬಾರದೆಂದರೆ, ಸ್ವಂತಕ್ಕೆ ಮಾತಿನ ಪ್ರಯೋಜನವೇ ಇಲ್ಲದಂತಾದೀತು. ಅದಲ್ಲದೆ ಶಬ್ದಗಳ ಬಳಕೆಯಿಂದ ಪುರುಷಾರ್ಥದ ಪ್ರಾಪ್ತಿಯಾಗುತ್ತಿರಲು, ಮೌನದ ಅವಶ್ಯಕತೆಯೆ ಇಲ್ಲ. ಇದೇ ರೀತಿಯಲ್ಲಿಯೆ, ಶ್ವಾಸ ನಿಗ್ರಹದ ಪ್ರಯಾಸವಿಲ್ಲದೆಯೆ ಮಹಾಪುರುಷಾರ್ಥವು ಲಭಿಸುವಂತಿರಲು, ಆ ಪ್ರಯಾಸದ ಅಗತ್ಯವೂ ಇಲ್ಲ ಶ್ವಾಸ ನಿಗ್ರಹದಿಂಕ ದೇಹದ ನಿಗ್ರಹ ಮಾಡಬೇಕೆನ್ನುವದರಲ್ಲಿಯೂ ಇದೇ ವಿಚಾರವನ್ನು ಇಟ್ಟುಕೊಳ್ಳಬೇಕು. ಈ ಮಾತು ಸತ್ಯವಾದುದು. ಮನಸ್ಸು, ವಾಗಿಂದ್ರಿಯ ಹಾಗೂ ಶರೀರ ಈ ಮೂರು ಇಂದ್ರಿಯಗಳ ನಿಗ್ರಹವಿಲ್ಲದಿರುವದರಿಂದ ಯತಿತ್ವಕ್ಕೆ ಮುಖ್ಯಾರ್ಥವು ಕೂಡಲಾರದು. -ತ್ರಿದಂಡವಿಲ್ಲದವನು ಯಥಾರ್ಥಯತಿಯಾಗಲಾರನು, -ಎಂದರೆ ಯತಿಯಾಗದಿದ್ದರೆ ಬಿಡಲಿ. ಆಡಿನ ಮೊಲೆಯಂತೆ ವ್ಯರ್ಥವಾಗಿರುವ ಮೂರು

ಕೋಲುಗಳ ದಂಡಕಾಷ್ಠದಿಂದಲಾದರೂ ಏನು ಉಪಯೋಗ ? –ಇಂಥ ತ್ರಿದಂಡಿತ್ವವು ನಿರುಪಯೋಗಿಯೆಂದು ಹೇಳಲು ಬರುವಂತಿದ್ದರೂ, ತ್ರಿದಂಡಿಯೆ ಮತಿಯೆಂಬ ರೂಢಿಯನ್ನು ಒಪ್ಪಿಕೊಳ್ಳಲಾಗಿದೆ. ತ್ರಿದಂಡಿತ್ವವನ್ನು ವಿವರಿಸಲಾಗಿದೆ. ಮನೋವಾಕ್ಕಾಯಗಳ ನಿಗ್ರಹದಲ್ಲದವನು 'ತ್ರಿಡಂಡಿ' –ಸನ್ಯಾಸಿಯಾಗಲಾರನು.

ಒಟ್ಟು ಅಭಿಪ್ರಾಯವೆಂದರೆ, –( ಪರಮಾತ್ಮನ ) ಉಪಾಸನಾಧಿಕಾರಿಗಳು ಎರಡು ವಿಧ: (೧) ಸಿದ್ಧ ಹಾಗೂ (೨) ಸಾಧಕ. ಸಿದ್ಧ ಅಧಿಕಾರಿಗಳಿಗೆ ಪರೋಪಕಾರದ ಕಾರ್ಯಗಳಲ್ಲಿ ತೊಡಗುವದೇ ಮುಖ್ಯಕರ್ತವ್ಯ. ಪರೋಪಕಾರ ಮಾಡುವದರಿಂದಲೆ ಪರಮಾತ್ಮನ ವಿಶೇಷವಾದ ಅನುಗ್ರಹವು ದೊರೆಯುವದು. ಆದುದರಿಂದ ಸಾಧಕನಾದವನು ತನಗೆ ಸ್ವಯೋಗ್ಯವಾದ ವಿಹಿತ ಕರ್ಮಗಳನ್ನು ಮಾಡಬೇಕು. ನಿಷಿದ್ಧ ಕರ್ಮಗಳಲ್ಲಿ ತೊಡಗಿದ್ದ ಜನರನ್ನು ಕಂಡು, ಅತರನ್ನು ಸನ್ಮಾರ್ಗಕ್ಕೆ ಹಚ್ಚುವ ಪರಹಿತದ ಕಾರ್ಯವನ್ನು ಮಾಡಬೇಕು. ಇದುವೇ ಆತನ ಕರ್ತವ್ಯ. ಪರೋಪಕಾರದ ಕಡೆಗೆ ಮನಸ್ಸಿನ ಸ್ವಾಭಾವಿಕ ಒಲವು ಇಲ್ಲವೆಂಬುದು ಎಲ್ಲರಿಗೂ ಅನುಭವದ ಸಂಗತಿ. ಅಂಥ ಮನಸ್ಸನ್ನು ಪರೋಪಕಾರದ ಕೃತಿಗಳಲ್ಲಿ ತೊಡಗಿಸುವದೆ ಅದಕ್ಕೆ ಶಿಕ್ಷೆಯಾಗಿದೆ. ವಾಗಿಂದ್ರಿಯವೂ ಕೂಡ ಪರೋಪಕಾರದ ಕಡೆಗೆ (ಒಳ್ಳೆಯ ಮೃದುನುಡಿಗಳಿಂದ ಜನರನ್ನು ಸನ್ಮಾರ್ಗಕ್ಕೆ ಹಚ್ಚುವದರ ಕಡೆಗೆ) ಕಬ್ಬಿಣದ ಸಂಕೋಲೆಗಳನ್ನು ತೊಡಿಸಿ ಬಂಧಿಸಿದಂತೆ, ಪ್ರವರ್ತಿಸುವದಿಲ್ಲ. ಅಂಥ ವಾಕ್ ಶಕ್ತಿಯನ್ನು ಹಿತಕರವಾದ ಈ ಕೆಲಸದಲ್ಲಿ ವಿನಿಯೋಗಿಸಬೇಕು. ಬಾರುಕೋಲಿನ ಸಾವಿರ ಏಟುಗಳಿಂದ ಎಚ್ಚರ ತಪ್ಪಿ ಬಿದ್ದರೂ ಸರಿ, ದೇಹವು ಲೋಕಹಿತದ ಕಾರ್ಯದಲ್ಲಿ ಒಂದು ಹೆಜ್ಜೆಯನ್ನಾದರೂ ಮುಂದಿಡುವದಿಲ್ಲ. ಪರೋಪಕಾರದ ಕಾರ್ಯಕ್ಕಾಗಿ ದೇಹವನ್ನು ಅಲೆದಾಡಿಸಬೇಕು. ಇದುವೆ ದೇಹಕ್ಕೆ ದಂಡನೆ. ಮನಸ್ಸು, ವಾಕ್ಕು ಹಾಗೂ ದೇಹಗಳನ್ನು ಈ ಬಗೆಯ ಮೂರು ವಿಧ 'ದಂಡನೆ'ಗಳಿಗೆ, ಒಳಪಡಿಸುವದೇ ತ್ರಿದಂಡಿತ್ವ, ಮೋಕ್ಷಪ್ರಾಪ್ತಿಗಾಗಿ ಯತ್ನಿಸುವವನಿಗೆ, ಈ ತ್ರಿವಿಧ ದಂಡನೆಗಳನ್ನು ಅಳವಡಿಸಿಕೊಂಡಾಗಲೆ ಸಾರ್ಥಕವಾದ ಯತಿತ್ವವು ದೊರೆಯುವದು.

ಅಥವಾ ತಪಸ್ಸಿನ ಬಗ್ಗೆ ವಿವೇಚಿಸುವಾಗ್ಗೆ, 'ಕಾಮತ್ಯಾಗಃ ಪರಂ ತಪಃ' ಎಂದು ಹೇಳಿರುವದು ಸರಿಯಾದುದಲ್ಲ, ಏಕೆಂದರೆ, ಇಚ್ಛೆಯೆಂಬುದನ್ನೆ ಸವಾಥಾ ಬಿಟ್ಟುಕೊಟ್ಟರೆ, ಬಹುದೊಡ್ಡ ಅನರ್ಥವೇ ಆದೀತು. ಮುಕ್ತಿಯ ಅಪೇಕ್ಷೆಯೆ ಇಲ್ಲದಿದ್ದರೆ, ಮುಕ್ತಿಯ ಸಾಧನಗಳ ಬಗ್ಗೆಯೂ ಅಪೇಕ್ಷೆ ಇಲ್ಲಂದಂತಾಗುವದು,

ಅವುಗಳ ಬಗ್ಗೆ ಪ್ರವೃತ್ತಿಯೆ ಉಂಟಾಗದು. ಈ ಆಕ್ಷೇಪಕ್ಕೆ ಉತ್ತರ ಹೇಳುವರು- (ಕಾಮ ತ್ಯಾಗವೆ ತಪಸ್ಸು) ಎಂದು ಹೇಳುವಲ್ಲಿ ತ್ಯಜಿಸಬೇಕಾದ ಕಾಮವು ಎಂತಹ ದೆಂಬುದನ್ನು ತಿಳಿದುಕೊಂಡರೆ ಈ ಆಕ್ಷೇಪದ ಯುಕ್ತಿವಾದವು ಅಳಿದು ಹೋಗು ವದು. ಅದೆಂಪರೆ 'ಪರಾರ್ಥೇಹ್ಯೆವೇತಿ' :- ಪರೇಷು, ಎಂದರೆ, ಮೋಕ್ಷ ಹಾಗೂ ಮೋಕ್ಷದ ಸಾಧನೆಗಳಿಗೆ ವ್ಯತಿರಿಕ್ತವಾದ, ಹಾಗೂ ವಿರುದ್ಧವಾಗಿರುವ ವಸ್ತುಗಳ ಬಗ್ಗೆ ಕಾಮನೆಯನ್ನು ತಾಳದಿರುವದೆ ( ಅವುಗಳನ್ನು ಬಯಸದಿರುವದೇ ) ವಿಹಿತ ವಾದ ಕಾಮತ್ಯಾಗವಾಗಿದೆ. ಮೋಕ್ಷ ಹಾಗೂ ಅದರ ಸಾಧನೆಗಳ ಬಯಕೆಯನ್ನು ಬಿಡಬೇಕೆಂಬುದು ಕಾಮ ತ್ಯಾಗಕ್ಕೆ ಅರ್ಥವಾಗಿಲ್ಲ. ಮೋಕ್ಷಸಾಧನವು ಯಾವುದು ? ಎಂದರೆ, ಸಿದ್ಧ ಹಾಗೂ ಸಾಧಕರೆಂಬ ಎರಡು ಬಗೆಯ ಉಪಾಸನೆಯ ಅಧಿಕಾರಿ ಗಳಲ್ಲಿ ಸಿದ್ಧರಿಗೆ ಪರಮಾತ್ಮನ ಧ್ಯಾನಾದಿಗಳನ್ನು ಮಾಡುವದ ಸಾಧನ. ಎರಡ ನೆಯವರಾದ ಸಾಧಕರಿಗೆ ಪರೋಪಕಾರದ ಕೃತಿಗಳಲ್ಲಿ ತೊಡಗುವದೇ ಮುಕ್ತಿಗೆ ಸಾಧನ.

ಈ ಅಭಿಪ್ರಾಯವನ್ನು ಮುಂದಿಟ್ಟುಕೊಂಡು ಹೇಳುವರು :- ಪರಾರ್ಥೇ ಹ್ಯೆವೇತಿ :- ಇಲ್ಲಿ ' ಈಹಾ ' ಎಂದರೆ, ಆಪೇಕ್ಷೆಯೆಂಬುದಷ್ಟೇ , ಮುಂತಾದುವನ್ನು ಬಯಸುವಂತೆ, ಅದಕ್ಕೆ ಸಾಧನವಾಗಿರುವ ಶ್ರೀ ಹರಿಯ ಧ್ಯಾನಾದಿ ಕರ್ಮಗಳಲ್ಲಿ ಪ್ರವೃತ್ತರಾಗಬೇಕೆಂಬುವ ಅರ್ಥವೂ ಇದೆ. ಅಲ್ಲಿ ಒಂದು ಆಕ್ಷೇಪ- ಧ್ಯಾನಕ್ಕೆ ಹಲವಾರು ವಿಷಯಗಳಿರಲ, ಶ್ರೀ ಹರಿಯ ಧ್ಯಾನವನ್ನೇ ಏಕೆ ಮಾಡ ಬೇಕು ? ಇದಕ್ಕೆ ಉತ್ತರವೆಂದರೆ, ಧ್ಯಾನ ಮಾಡಬೇಕಾದ ಅನೇಕ ವಿಷಯಗಳಿರ ಬಹುದು. ಆದರೆ ಮುಕ್ತಿಯ ಸಾಧನಗಳನ್ನು ನಾವು ಈಗ್ಗೆ ವಿಚಾರಿಸುತ್ತಿರುವೆವು. ಆದುದರಿಂದ ಮುಕ್ತಿದಾಯಕನಾಗಿರುವ ಏಕಮೇವ ಮುಕುಂದನ ಧ್ಯಾನವನ್ನೇ ಮಾಡತಕ್ಕದ್ದು. ಶ್ರೀ ಹರಿಯ ಧ್ಯಾನವೆ ಮುಕ್ತಿಗೆ ಸಾಧನವಾಗಿದೆ.

ಪಡೆಯಬೇಕೆಂಬ ವಸ್ತುಗಳೆಂಬವು ಒಟ್ಟು ಮೂರು ವಿಧವಾಗಿವೆ. ಉತ್ತಮ, ಮಧ್ಯಮ, ಕನಿಷ್ಠಗಳೆಂದು ಅವುಗಳಲ್ಲಿ ನಾಲ್ಕನೆಯ ಪ್ರಕಾರವೆಂಬುದೇ ಇಲ್ಲ. ಇವುಗಳಲ್ಲಿ ಮೋಕ್ಷವನ್ನು ಕೊಡುವ ಪಾತ್ರತೆಯ 'ಉತ್ತಮ' ವಸ್ತುವಾದವನಿಗೆ ಮಾತ್ರ. ಏಕೆಂದರೆ, ಉಳಿದ ಎರಡು ಬಗೆಯ ವಸ್ತುವಾದವರಿಗೆ (ಮೋಕ್ಷದನ್ನು ಕೊಡುವ) ಸ್ವಾತಂತ್ರ್ಯವೇ ಇರುವದಿಲ್ಲ. ಶ್ರೀ ಹರಿಯೊಬ್ಬನೇ ಉತ್ತಮ ವಸ್ತು, ಆತನನ್ನು ಬಿಟ್ಟರೆ, ಕೆಲವರು ಮಧ್ಯಮರು, ಇನ್ನುಳಿದವರು ಅಧಮರು. ಕೊನೆಯ ಎರಡಾದ ಮಧ್ಯಮ, ಕನಿಷ್ಟರಾದವರನ್ನು ಬಿಟ್ಟುಕೊಟ್ಟು, ಮೊದಲನೆಯವನಾದ ಶ್ರೀ ಹರಿಯ ಧ್ಯಾನ, ಅರ್ಚನೆ, ಉಪಾಸನೆ - ಮುಂತಾದವುಗಳನ್ನು ಮಾಡಬೇಕು

ಶ್ರೀ ಹರಿಯ ಧ್ಯಾನ ಮಾಡಬೇಕೆಂದು ಹೇಳಿದ್ದರಲ್ಲ, ಮೋಕ್ಷಕ್ಕೆ ಸಾಧನವಾಗಿ
ಧ್ಯಾನವು ಯಾವುದು ? ಅದನ್ನು ಹೇಗೆ ನಾವು ಸಾಧಿಸಬೇಕು ? ಎಂದರೆ, ಧ್ಯಾ
ಯಾವುದೆಂಬುದು ನಿಮಗೆ ಗೊತ್ತಿಲ್ಲದ ವಸ್ತುವಾಗಿಲ್ಲ; ಧ್ಯಾನವನ್ನು ನಿತ್ಯ
ಮಾಡುತ್ತಿರುವಿರಿ. ಅದು ಹೊಸ ವಸ್ತು ಆಗಿಲ್ಲ. ಒಳ್ಳೆಯವೇ ಆಗಿರಲಿ, ಕೆಟ್ಟ
ಆಗಿರಲಿ, (ಜನ್ಮಾಂತರದಲ್ಲಿ ಕೂಡ) ನಾವು ಮಾಡಿದ ಕರ್ಮಗಳು ನಮ್ಮ ಮನ
ಮೇಲೆ ನಮಗೆ ತಿಳಿಯದೆಯೆ ಸೂಕ್ಷ್ಮವಾದ ತಮ್ಮ ಅಚ್ಚನ್ನು (ಪರಿಣಾಮವ
ಮೂಡಿಸಿರುವವು. ಅವುಗಳೇ ವಾಸನೆಗಳು. ಈ ವಾಸನೆಗಳಿಂದ ನಿರ್ಮಿತ
ಕನಸುಗಳಲ್ಲಿ ಆನೆ, ಕುದುರೆ, ಮಡದಿ ಮಕ್ಕಳನ್ನು ಕನಸ್ಸಿನಲ್ಲಿ ಕಂಡು
ನಿತ್ಯವೂ ಅನುಭವಿಸುವೆವು; ಅದರಂತೆಯೆ; ನಾವು ಮನಸ್ಸಿನಲ್ಲಿ ಕಟ್ಟುವ
ಗೋಪುರಗಳು. ಇವೆರಡರಲ್ಲಿ ಒಂದು ವಿಶೇಷ ಸಂಗತಿ ಇದೆ. ಅದೇ
ಮನೋರಥ ಹಾಗೂ ಕನಸುಗಳಿಗೆ ವಾಸನೆಗಳು (ಉಪಾದಾನ) ವ
ದ್ರವ್ಯವಾದರೂ, ಸರ್ವ ಕರ್ತೃವಾದ ಶ್ರೀ ಹರಿಯು ನಿಮಿತ್ತಕ
ನಾಗಿರುವನು. ಧ್ಯಾನದಲ್ಲಿ ಮಾನವನ ಇಚ್ಛೆಯೂ ಕೂಡ ಕಾರಣ
ರುವದು. ಅದೇ ರೀತಿಯಲ್ಲಿ ಶ್ರೀಹರಿಯ ಇಚ್ಛೆಗೆ ಅಂಕಿತವಾಗಿರುವ
ಇಚ್ಛೆಯಿಂದ, ವಾಸನೆಗಳು ರೂಪಿಸುವ ಧ್ಯಾನ ಮಾಡಬೇಕಾದ ವಸ್ತು
ಕಣ್ಮುಂದೆ ತಂದುಕೊಳ್ಳುವದೇ ಧ್ಯಾನವಾಗಿದೆ. –

ಎರಡನೆಯ ಪ್ರಕಾರದ (ಸಾಧಕ) ಅಧಿಕಾರಿಗೂ ಇದೇ ಮಾತನ್ನು
ವರು:– ಅದೆಂದರೆ, 'ಪರಾರ್ಥೇಹೈವೇತಿ':- ಪರೋಪಕಾರದ ಕಾರ್ಯದಲ್ಲಿ ಉ
ಸಬೇಕೆಂದು ನೀವು ಹೇಳುವ ಪರೋಪಕಾರವು ಎಂತಹದು ? ಯಾವುದನ್ನು ಪ
ವದೇ ಪರೋಪಕಾರವೆಂದು ತಿಳಿಯಬಹುದು? –ಎಂದರೆ, ಪ್ರೀತಿಕರವಾದ ಕ
ಪರೋಪಕಾರವು. ಪರೋಪಕಾರದಲ್ಲಿ ಎರಡು ಅಂಗಗಳಿವೆ. ಅನಿಷ್ಟ (ಹಾ
ವಾದುದನ್ನು ತೆಗೆದು ಹಾಕುವದು – ಇಷ್ಟ–(ಹಿತಕರ) ಮಾಡುವದನ್ನು
ಕೊಡುವದು. ಇವುಗಳಲ್ಲಿ ಅನಿಷ್ಟ ಪರಿಹಾರವನ್ನು ತೋರಿಸಿಕೊಡುವರು– '
ವಿಪರ್ಯಯೇಕ್ಷಾ ಇತಿ':–ಮೋಕ್ಷಕ್ಕೆ ಪ್ರತಿಬಂಧಕವಾದುದರಲ್ಲಿ ಪ್ರವರ್ತಿಸ
(ಇಂದ್ರಿಯ ವಿಷಯಗಳ ಬೆನ್ನು ಹತ್ತುವದೇ) ಅತಿ ಹೆಚ್ಚಿನ ಅನಿಷ್ಟ – ಹ
ಸಂಗತಿಯಾಗಿದೆ. ಅದನ್ನು ತಪ್ಪಿಸುವಂತೆ ಮಾಡುವದೇ – ನಿವೃತ್ತ ಮಾ
ತೊಡಗುವಂತೆ ಮಾಡುವದೇ–ಈ ಮಹಾನ್ (ದೊಡ್ಡ) ಅನಿಷ್ಟವನ್ನು ನಿವ
ಕೃತಿಯಾಗಿದೆ. (ಮುಕ್ತಿಗೆ) ವಿಪರೀತ (ವಿರುದ್ಧವಾಗಿರುವ) ವಸ್ತುಗಳಲ್ಲಿ
ಯನ್ನು ತೆಗೆದು ಹಾಕುವುದೇ ಅನಿಷ್ಟ ಪರಿಹಾರವೆಂದು ಇಲ್ಲಿ ಹೇಳಬಹುದಿತ್ತು
ಹಾಗೆ ಮಾಡದೆ, ವಿಪರ್ಯಯ–ವಿರುದ್ಧ ವಸ್ತುವಿನಲ್ಲಿ ಈಹಾ-ಈಕ್ಷಾ ಎಂಬ

ಈ ಅರ್ಥವನ್ನು ಸೂಚಿಸುವವು. -ಮುಕ್ತಿಗೆ ಅನು-ಕೂಲವಾದ ಸಂಗತಿಗಳಲ್ಲಿ ಮನಸ್ಸಿನ ಒಲವು ಉಂಟಾದರೂ, ಆ ದಾರಿಯಲ್ಲಿ ನಿಶ್ಚಿತವಾಗಿ ನಾವು ತೊಡಗುವೆವೆಂಬ ನಿಯಮವಿಲ್ಲ. ನಿರ್ಧಾರವಿಲ್ಲ: ಆದರೆ ಮುಕ್ತಿಗೆ ಪ್ರತಿಬಂಧಕವಾದ ಸಂಗತಿಗಳಲ್ಲಿ (ವಿಷಯೋಪಭೋಗಗಳಲ್ಲಿ) ಮನಸ್ಸು ಹರಿದರೆ ಸಾಕು, ಅವುಗಳ ಬೆನ್ನು ಹತ್ತುವದು ನಿಶ್ಚಿತವಾದ ಸಂಗತಿಯಾಗಿದೆ. ಏಕೆಂದರೆ, ಆಧ್ಯಾತ್ಮದ ವೈರಿಯಾದ ಕಾಮದ ಸ್ವರೂಪವೇ ಆ ರೀತಿಯದಾಗಿದೆ. -ಇಂದ್ರಿಯಜಯ ಪ್ರಕರಣ' ದಲ್ಲಿ ಹೀಗೆಯೇ ಹೇಳಿರುವರು. -'ನೈತನ್ಮನಸ್ತವಕಥಾಸು' -ಇತ್ಯಾದಿ. ವಿಷಯಗಳತ್ತ ಮನಸ್ಸು ತಾನಾಗಿ ಧಾವಿಸುವಂತೆ, ಭಗವಂತಾ! ಈ (ದುರಿತ ದುಷ್ಟವಾದ) ಮನಸ್ಸು ನಿನ್ನ ಕಥೆಗಳನ್ನು ಕೇಳುವದರ ಕಡೆಗೆ ತಾನಾಗಿಯೆ ಪ್ರವರ್ತಿಸುವದಿಲ್ಲ '

ಇನ್ನೊಬ್ಬರಿಗೆ ಕೇಡು-ಹಾನಿಯಾಗುತ್ತಿದೆ-ಎಂಬುದು ತಿಳಿದರೂ ಕೂಡ ಮಧ್ಯಮ (ಸಾಮಾನ್ಯ)ರಾದ ಜನರು ಅದನ್ನು ನಿವಾರಿಸಲು ತೊಡಗುವರೆಂಬ ನಿಯಮವಿಲ್ಲ -ಅದು ಹೆಚ್ಚಾಗಿ ಕಂಡು ಬರುವದಿಲ್ಲ. ಆದರೆ ಉತ್ತಮರಾದ ಜನರ ರೀತಿಯು ಈ ತೆರನಾಗಿಲ್ಲ. ಅವರ ರೀತಿಯೆಂದರೆ, -ಅನ್ಯರಿಗೆ ಕೆಡಕು ಆಗುವದೆಂಬುದು ತಿಳಿದಾಕ್ಷಣ ಆದರ ನಿವಾರಣೆಗಾಗಿ ಅವರು ಕಾರ್ಯದಲ್ಲಿ ತೊಡಗುವರು ನಿಶ್ಚಿತವಾಗಿದೆ. ಅಬ್ಬಾ! ಸಜ್ಜನರು ಎಷ್ಟು ಕರುಣಾಶಾಲಿಗಳು! ಅನ್ಯರಿಗಾಗಿ ಮಾಡುವ ಉಪಕೃತಿಯನ್ನೂ, ತಮ್ಮ ಸ್ವಹಿತದ ಕೃತಿಯೆಂದೇ ಅವರು ಭಾವಿಸುವರು. ಏಕೆಂದರೆ, ಪರ ಹಿತದ ಕಾರ್ಯದಲ್ಲಿ ಅವರು ತಮ್ಮ ಮನಸ್ಸು, ವಾಕ್ಕು ಹಾಗೂ ದೇಹಶಕ್ತಿ, ಈ ಮೂರನ್ನು ನಿಯೋಜಿಸುವರು. ಈ ಮೂರರಲ್ಲಿ ಮನಸ್ಸೊಂದನ್ನು ಪರೋಪಕಾರದಲ್ಲಿ ತೊಡಗಿಸಿದರೂ ಮಾನವರಿಗೆ ಮುಕ್ತಿಯು ದೊರೆಯುವದು. 'ಇವರಿಗೆ ಈ ಕಾರ್ಯದಿಂದ ಹಿತವಾಗಲಿ, ಅದರಿಂದ ಅವರು ಸುಪ್ರೀತರಾಗಲಿ', ಎಂಬ ಇಚ್ಛೆಯನ್ನು ಮಾಡುವದರಿಂದಲೆ, ದೊರೆಯಲಾರದ ವಸ್ತು ಯಾವದೂ ಇಲ್ಲದಾಗುವದೆಂದು ಹೇಳಿ, (ಪರೋಪಕಾರದ 'ಅನಿಷ್ಟ ಪರಿಹಾರ' ವೆಂಬ ಅಂಗವನ್ನು ನಿರೂಪಿಸಿ) ಇನ್ನು ಎರಡನೆಯ ಅಂಗವಾದ 'ಇಷ್ಟ ಕರಣ' (ಸಂತೋಷ ಉಂಟಾಗುವ ಕಾರ್ಯವನ್ನು ಮಾಡುವದು) ವೇನೆಂಬುವದನ್ನು ಗಿಡದ ಉದಾಹರಣೆ ಕೊಟ್ಟು ಎತ್ತಿ ತೋರಿಸುವರು :-'ಮನೋವಾಕ್ಕಾಯದಂಡಂ ಚ ತರುದೃಷ್ಟಾಂತೇನ ಶಿಕ್ಷೇತ್':- ಹೀಗೆ ಹೇಳಿರುವರು :- 'ಪತ್ರಪುಷ್ಪ ಫಲ........ಕಾಮಾನ್ ವಿತನ್ವತೆ' (೧೦-೨೦-೩೭) ಶ್ರೀ ಕೃಷ್ಣನು ಬಲರಾಮನಿಗೆ ಹೇಳಿದ ಮಾತು., ಎಲೆ, ಹೂ, ಹಣ್ಣು, ನೆರಳು, ಬೇರು, ನಾರು, ಚಕ್ಕೆ, ತೊಗಟೆ

ಗಂಧ, ಗೊಂದು, ಬೂದಿ, ಕಟ್ಟಿಗೆ, ಅಂಕುರ, ತಮ್ಮ ಸರ್ವಾಂಗಗಳನ್ನೆಲ್ಲ ಗಿಡಗಳು ಪರೋಪಕಾರಕ್ಕಾಗಿ ಉಪಯೋಗಿಸುತ್ತಿವೆ. ಗಿಡಗಳಂತೆಯೆ ಮನಸ್ಸು, ವಾಕ್ಕು ಹಾಗೂ ಶರೀರ ಶಕ್ತಿಗಳನ್ನು ಪರೋಪಕಾರಕ್ಕಾಗಿ ಉಪಯೋಗಿಸಬೇಕು. ಎಂದರೆ ಗಿಡಗಳಂತೆ ಸರ್ವಸ್ವವನ್ನು ಪರೋಪಕಾರಕ್ಕಾಗಿ ಸಮರ್ಪಿಸುವ ಧೈರ್ಯವು ನಮಗೆ ಹೇಗೆ ಬಂದೀತು ? -ಗಿಡಗಳಿಗೆ ಕೊಡ ತೆಗೆದುಕೊಳ್ಳುವ ಶಕ್ತಿಯು ಸ್ವಂತಂತ್ರ ವಾಗಿ ಇರುವದಿಲ್ಲ. ತಿಳಿದೂ ತಿಳಿದೂ ಅನ್ಯರಿಗೆ ನಮ್ಮ ಸರ್ವಸ್ವನ್ನೂ (ಗಿಡಗ ಳಂತೆ) ಹೇಗೆ ಸಮರ್ಪಿಸಬೇಕು. ? -ಎಂದರೆ, ಗಿಡಗಳು ಎಲೆ, ಹೂ ಮುಂತಾದ ತಮ್ಮ ಸರ್ವಾಂಗೋಪಾಂಗಗಳನ್ನು ಸಮರ್ಪಿಸಿ ಪರರಿಗೆ ಉಪಕಾರ ಮಾಡುವವು. ಈ ಗಿಡಗಳಂತೆಯೆ, ಕಾರ್ಯಶಕ್ತಿ ಮುಂತಾದ ಅನೇಕ ಶಕ್ತಿಗಳುಳ್ಳವರಾಗಿ, ಬುದ್ಧಿ ಪೂರ್ವಕವಾಗಿ ತಮ್ಮ ಸಕಲ ಶಕ್ತಿಗಳನ್ನು ಪರೋಪಕಾರಕ್ಕಾಗಿ ಸಮರ್ಪಿಸಿರುವ ಮಹಾತ್ಮರೂ ಇರುವರು, ಆ ಬಗ್ಗೆ ನೀವೇನು (ಎಲ್ಲವನ್ನೂ ಹೇಗೆ ಬಿಟ್ಟುಕೊಡ ಬೇಕೆಂದು) ಹೆದರಬೇಕಿಲ್ಲ. ನೀವಾದರೂ ಅವರಂತೆಯೆ ಸರ್ವಸ್ವತ್ಯಾಗದಿಂದ ಪರೋಪಕಾರವನ್ನು ಮಾಡುವದು ಕರ್ತವ್ಯವಾಗಿದೆ.' - ಇದನ್ನೇ ಮನಸ್ಸಿನಲ್ಲಿ ಇಟ್ಟುಕೊಂಡು ಹೇಳಿರುವರು 'ಮನೋ ವಾಕ್ಕಾಯದಂಡಂ ಚ ತಾದೃಶ ಸಾಧುದರ್ಶ ನೇನ ಶಿಕ್ಷೇತ್ ' - ಮನಸ್ಸು, ವಾಕ್ ಶಕ್ತಿ ಹಾಗೂ ಶರೀರ, ಇವುಗಳ ದಂಡನೆ- (ಸಂಸ್ಕಾರ)ಯನ್ನು ಆ ರೀತಿಯಾಗಿ ನಡೆದುಕೊಂಡಿರುವ ಸಜ್ಜನರನ್ನು ಕಂಡು ಕಲಿತುಕೊಳ್ಳಬೇಕು. -ಹೀಗೆ ಹೇಳಿದೆ;- 'ಶ್ರೇಯಃಕುರ್ವಂತಿ..... ಧರಾದಿಷ್ಟಿತಿ' ಪ್ರಾಣವನ್ನೇ ತ್ಯಾಗ ಮಾಡುವದು ಅತೀವ ಕಠಿಣ. ಆದರೆ ದಧೀಚಿ, ಶಿಬಿ, ಮುಂತಾದ ಮಹಾ ಸಾಧುಗಳು ಸಕಲ ಪ್ರಾಣಿಗಳ ಶ್ರೇಯಸ್ಸಿಗಾಗಿ (ಕಲ್ಯಾಣ ಕ್ಕಾಗಿ) ತಮ್ಮ ಪ್ರಾಣವನ್ನೇ ಅರ್ಪಿಸಿರುವರು. ಭೂಮಿ, ಸಂಪತ್ತು ಮುಂತಾದ ವುಗಳ ತ್ಯಾಗ ಮಾಡಲು ಮನಸ್ಸಿನ ಹೊಯ್ದಾಟವೇಕೆ ? (೧೮)

(೧೯) **ಸತ್ಯಂ ಶಿಕ್ಷೇತ್**:- ಇದು ಹತ್ತೊಂಬತ್ತನೆಯ ಭಾಗವತಧರ್ಮವು (ಮನಸ್ಸನ್ನು ಸಂತುಷ್ಟಗೊಳಿಸುವ) 'ಸಮಾಧಾನ' ನೆಂಬುದು ಮೂರು ಬಗೆಯಾ ಗಿದೆ:- (೧) ವಸ್ತು ( ನಿಜವಾಗಿಯೆ ಇರುವಂತೆ ) ವಿನ ಯಥಾರ್ಥ ಜ್ಞಾನ (೨) ನಿಜವಾಗಿ ಇದ್ದಂತೆಯೆ ಅದರ ಧ್ಯಾನ ಮಾಡುವುದು. (೩) ಯಥಾರ್ಥ ವಾದ ವಸ್ತುವಿಗೆ ಸಮರ್ಪಣ ಮಾಡುವದು. ಇವುಗಳಲ್ಲಿ-ಸಕಲ ಜೀವಿಗಳ ಅಂತ ರಂಗದಲ್ಲಿ ಪರಮಾತ್ಮನ ಸಾನಿಧ್ಯವನ್ನು ಕಂಡುಕೊಳ್ಳುವದೇ ಮೊದಲನೆಯ ಯಥಾರ್ಥ ಜ್ಞಾನವಾಗಿದೆ. ಎಂದು ಈ ಮೊದಲು ಹೇಳಿದೆ. ಇನ್ನು ಎರಡನೆಯ ಪ್ರಕಾರವಾದ ಯಥಾರ್ಥಜ್ಞಾನ - ಸತ್ಯಂ ಶಿಕ್ಷೇತ್-. ಇಲ್ಲಿ ಒಂದು ಆಕ್ಷೇಪವಿದೆ.

'ಸತ್ಯಂ ಭೂತಹಿತಂ ಪ್ರೋಕ್ತಂ, ನ ಯಥಾರ್ಥಾಭಿಭಾಷಣಂ – ಸತ್ಯವೆಂದರೆ, ಇದ್ದು ದನ್ನು ನುಡಿಯುವದಲ್ಲ. ಸಕಲ ಜೀವಿಗಳಿಗೆ ಲೇಸನ್ನು ಬಯಸುವದೆ ಸತ್ಯವಾಗಿದೆ, ಎಂಬ ವಿಹಿತವಾದ ಹಿತೋಕ್ತಿಯು ಪ್ರಾಣಿಗಳ ಹಿತವೇ ಸತ್ಯವೆಂದು ಸಾರುವಾಗ್ಗೆ, ಸತ್ಯಕ್ಕಿರುವ ಈ ಅರ್ಥವನ್ನು ಬಿಟ್ಟು, ಯಥಾರ್ಥಜ್ಞಾನವೇ ಸತ್ಯ-ಎಂದು ಏಕೆ ಹೇಳುವಿರಿ ? –ಈ ಪ್ರಶ್ನೆಗೆ ಉತ್ತರ ಹೇಳುವರು:– ಸಕಲ ಜೀವಿಗಳ ಕಲ್ಯಾಣವೇ ಸತ್ಯವೆಂಬದು ಅತ್ಯುತ್ತಮ ಅರ್ಥವನ್ನು ಕೊಡುವದಿಲ್ಲ. ಇದಲ್ಲದೆ, ಯಥಾರ್ಥಜ್ಞಾನವೇ ಸತ್ಯವೆಂಬದು ದೊಡ್ಡ ಅನರ್ಥ (ಕೆಡಕು) ದಿಂದ ಪಾರು ಮಾಡುವದು. ಹಾಗೂ ಅಪೇಕ್ಷಿತವಾದ ಶ್ರೇಷ್ಠ ಪುರುಷಾರ್ಥವು ಅದರಿಂದ ಸಾಧಿಸುವದು. ಆದುದರಿಂದ ಯಥಾರ್ಥ ಜ್ಞಾನವೆಂಬುದೇ ಸತ್ಯ ಶಬ್ದಕ್ಕೆ ಅತ್ಯುತ್ತಮವಾದ ಅರ್ಥವಾಗಿದೆ. ಈ ಮಾತನ್ನು ಮುಂದೆ ವಿವರಿಸುವೆವು. (೧೯)

(೨೦) **ಅಭಯಂ ಶಿಕ್ಷೇತ್ :–** ಇದು ಇಪ್ಪತ್ತನೆಯ ಭಾಗವತಧರ್ಮ. ಇಲ್ಲಿ ಒಂದು ಆಕ್ಷೇಪಃ– ನಿಯಮಗಳ ಗುಂಪಿನಲ್ಲಿ ಹಾಗೂ ಯೋಗ ಶಾಸ್ತ್ರದಲ್ಲಿ 'ದಾನ' ವೆಂಬುದನ್ನು ಸೇರಿಸಲಾಗಿದೆ. ಯಮ ಅಥವಾ ನಿಯಮಗಳಲ್ಲಿ ಒಂದೆನಿಸಿದ 'ದಾನ'ವೆಂಬ ಧರ್ಮವನ್ನು ಭಾಗವತ ಧರ್ಮಗಳಲ್ಲಿ ಏಕೆ ತೆಗೆದುಕೊಂಡಿಲ್ಲ? ಎಂದರೆ ಬೇಡುವವನಿಗೆ ಬೇಕಾಗಿರುವ ವಸ್ತುವನ್ನು ಕೊಡುವದೇ ದಾನ. ಬೆಲ್ಲ ಬೇಡುವವನಿಗೆ ಹುಣಸೇಹಣ್ಣು ಕೊಟ್ಟರೆ, ಆತನಿಗೆ ಅಗತ್ಯವಿರುವದನ್ನು ಬಿಟ್ಟು ಬೇರೊಂದನ್ನು ಕೊಟ್ಟಂತಾಗುವದು. ಬಯಸಿದ್ದನ್ನು ಕೊಡುವದೆಂಬುದೇ ದಾನ ಶಬ್ದಕ್ಕೆ ಉತ್ತಮವಾದ ಅರ್ಥವಾಗಿದೆ. ಪ್ರಾಣಿಗಳಿಗೆ ಒಳಿತನ್ನು ಮಾಡುವದರಿಂದ ದೊರೆಯುವ ಭಗವಂತನ ಅನುಗ್ರಹದಿಂದ ಶ್ರೇಷ್ಠ ಪುರುಷಾರ್ಥವಾದ ಮೋಕ್ಷವು ದೊರೆಯುವದೆಂದು ಈ ಮೊದಲು ಹೇಳಿ, ಈಗ್ಗೆ ಅಪೇಕ್ಷಿತ ವಸ್ತುವಿನ ದಾನದಿಂದ ಮುಕ್ತಿಯು ದೊರೆಯುವದೆಂದು ಹೇಳುವಿರಿ. ಇದು ಹೇಗೆ ಸಮಂಜಸವಾಗುವದು ? –ಎಂದರೆ, ಅಪೇಕ್ಷಿತ ದ್ರವ್ಯ ದಾನದಿಂದ ಮಹಾ ಪುರುಷಾರ್ಥ (ಮೋಕ್ಷ) ದೊರೆಯುವದು ಸತ್ಯವೆ. ಅದನ್ನು ಅಗತ್ಯವಾಗಿ ಮಾಡಲೇಬೇಕು. ಹೀಗಿದ್ದರೂ, ಪ್ರಸ್ತುತ ಸಂದರ್ಭದಲ್ಲಿ, ದ್ರವ್ಯದಾನವೆ ದಾನವೆಂಬುದು ಉದ್ದಿಷ್ಟ ಅರ್ಥವಾಗಿಲ್ಲ. ಪ್ರತಿಯಾಗಿ ಆಪತ್ತಿನಲ್ಲಿ ಸಿಲುಕಿದವರಿಗೆ ಅಭಯ (ಪಾರುಮಾಡುವ ಭರವಸೆ)ವನ್ನು ಕೊಡುವದೇ ದಾನ ಶಬ್ದಕ್ಕೆ ಇಲ್ಲಿ ವಿಶೇಷವಾದ ಅರ್ಥವಿದೆ. ಹೀಗೆ ಹೇಳಿರುವರು:–'ಸರ್ವವೇದಾಶ್ಚ ಕಲಾಮಪಿ' –ಪಾಪನಾಶಕ ವೇದಗಳಾಗಲಿ(ವೇದಾಭ್ಯಾಸವಾಗಲಿ) ಯಜ್ಞಯಾಗಾದಿಗಳಾಗಲಿ, ತಪಸ್ಸು,(ದ್ರವ್ಯ) ದಾನ ಮುಂತಾದವುಗಳು ಪ್ರಾಣದ ಭರವಸೆಯನ್ನುಕೊಡುವ ಅಭಯದಾನಕ್ಕೆ ಎಳ್ಳಷ್ಟೂ(ಅಂಶತಃ)

ಕೂಡ ಸಾಟಿಯಾಗಲಾರವು. ಒಂದು ಶಬ್ದಕ್ಕೆ ಮುಖ್ಯ ಹಾಗೂ ಅಮುಖ್ಯ ವಾದ ಎರಡು ಅರ್ಥಗಳಿದ್ದರೆ, ಮುಖ್ಯಾರ್ಥಕ್ಕೆ ಯಾವ ಬಾಧೆಯೂ ಇರದಿದ್ದರೆ, ಅದನ್ನೇ ತೆಗೆದುಕೊಳ್ಳಬೇಕು – ಈ ಅಭಿಪ್ರಾಯದಿಂದ ಹೇಳಿರುವರು :– 'ದಂಡನ್ಯಾಸಃ ವರಂದಾನಮ್' ಎಂದು. ಸನ್ಯಾಸವನ್ನು ಸ್ವೀಕರಿಸುವಕಾಲಕ್ಕೆ 'ಜೀವಿಗಳಿಗೆ ಪ್ರಾಣರಕ್ಷಣೆಯ ಭರವಸೆಯನ್ನೀಯುವ 'ಅಭಯದಾನ'ವನ್ನುಯೋಗ ಶಾಸ್ತ್ರದ ನಿಯಮಗಳಲ್ಲಿ ಹೇಳಿರುವರೆಂಬುದು ಇದರಿಂದ ಸೂಚಿತವಾಗುತ್ತದೆ. ಅಪೇಕ್ಷಿತ ವಸ್ತುವನ್ನು ಕೊಡುವ 'ಇಷ್ಟದಾನ'ವೆಂಬುದನ್ನು ಏಕೆ ಕೂಡಿಸಿಕೊಂಡಿಲ್ಲ ವೆಂಬುದಕ್ಕೆ, 'ಸಚಿಂತಯನ್ ದ್ವ್ಯಕ್ಷರಮ್...', ಎಂಬ ೨೭೩ ನೇ ಶ್ಲೋಕದಲ್ಲಿ ಉತ್ತರವನ್ನು (ಮುಂದೆ) ಹೇಳುವರು. ಇನ್ನೊಂದು ಆಕ್ಷೇಪ :– ನಿಯಮಗಳ ಗುಂಪಿನಲ್ಲಿ ಈ ವಿಧದ ಅಭಯ ಪದವನ್ನು ಹೇಳಿರುವರು. ಅಲ್ಲಿರುವ ಆಭಯ ಶಬ್ದಕ್ಕೆ ಏನು ಅರ್ಥ ? ಇಲ್ಲಿ ಹೇಳಿರುವದೆ ಅಲ್ಲಿಯೂ ಅದೇ ಅರ್ಥವಿದ್ದರೆ, ಹೇಳಿದ್ದನ್ನೇ ಹೇಳುವ ಪುನರುಕ್ತಿಯಾಗುವದು, ಇದನ್ನು ಬಿಟ್ಟು ಬೇರೆ ಅರ್ಥವಿಲ್ಲ ದಿರುವಾಗ್ಗೆ, ಮತ್ತೊಂದು ಅರ್ಥವನ್ನು ಹೇಳಲು ಬರುವದಿಲ್ಲ. ಬೇರೊಂದು ಅರ್ಥವೆ ಇದ್ದರೆ,–'ಮನಸಃಅಸಂಗಂ'ಕ್ಕೆ ವಿಷಯಗಳ ಕಡೆಗೆ ಮನಸ್ಸನ್ನು ಬಿಗಿಹಿಡಿಯುವದು ಎಂಬ ಅರ್ಥವನ್ನು ಹೇಳುವದರಿಂದ, ವೈರಾಗ್ಯ ಹಾಗೂ ಆತ್ಮವಿಮರ್ಶೆ ಎಂಬ ಅರ್ಥ ಗಳು ತಾವಾಗಿಯೆ ಹೊರಡುವವು. ಈ ಮೊದಲು ಸೇವಾ ಹಾಗೂ ಇಜ್ಯಾ ಶಬ್ದಗಳನ್ನು, ಎರಡು ಸಲ ಹೇಳಿದ್ದರೂ ಬೇರೆ ಬೇರೆ ವಿಶಿಷ್ಟ ಅರ್ಥಗಳಲ್ಲಿ ಅವು ಗಳನ್ನು ತೆಗೆದುಕೊಂಡಂತೆ, ಅಭಯ ಪದವನ್ನು ಬೇರೆ ಬೇರೆ ಅರ್ಥಗಳಲ್ಲಿ ಏಕೆ ತೆಗೆದುಕೊಳ್ಳಬಾರದು ? ಎಂದರೆ,–ಅಭಯ ಶಬ್ದಕ್ಕೂ ಸೇವಾ ಇಜ್ಯಾಪದಗಳಿಗೂ ಯಾವ ಹೋಲಿಕೆಯೆ ಇಲ್ಲ. 'ಸಮದೃಕ್ ಸೇವಾ'–ಹೀಗೆ ಒಂದೊಂದ ವಿಶಿಷ್ಟ ಗುಣದಿಂದ – ವಿಶೇಷ ಗುಣಗಳಿಂದ ಸೇವಾ ಹಾಗೂ ಇಜ್ಯಾ ಶಬ್ದಗಳು ಸಂಯೋ ಜಿತವಾಗಿವೆ. – 'ವಿಷ್ಣೋಃ ( ವಿಷ್ಣುವಿನ ) ಸೇವಾ, ವಿಷ್ಣೋಃ ಇಜ್ಯಾ, ವಿಷ್ಣುವಿನ ಪೂಜೆ – ಎಂಬ ವಿಶಿಷ್ಟ ಸಂಗತಿಗಳಿಂದ, ಕೂಡಿಕೊಂಡಿವೆ. ಅದರಿಂದ ನಿಮ ಶಂಕೆಗೆ ಎಡೆಯೇ ಇಲ್ಲ. ಇನ್ನೊಂದು ಸಲ, ಇಜ್ಯಾ ಶಬ್ದಕ್ಕೆ ಯಾವ ವಿಶೇಷಣ ವನ್ನು ಜೋಡಿಸದಿದ್ದರೂ, ' ವಿಷ್ಣುವಿನ ಸೇವೆ ' ಎಂಬ ಉದಾಹರಣೆಯಿಂದ, 'ವಿಷ್ಣೋಃ ಇಜ್ಯಾ' ಎಂದು ಸ್ವೀಕರಿಸಲು ಬರುವದು. ಭಕ್ತಸೇವೆಯೆಂಬಂತೆ 'ಭಕ್ತರ ಪೂಜೆ', ಎಂಬ ಬೇರೆ ಒಂದು ಅರ್ಥದಲ್ಲಿ ತೆಗೆದುಕೊಳ್ಳಲು ಬರುವದು, ಈ ಬಗೆಯ ಬೇರೆ ಅರ್ಥವಿರದಿದ್ದರೂ, ಅಭಯ ಪದವನ್ನು ಎರಡು ಸಲ ಏಕೆ ಉಪಯೋಗಿಸಿರುವರೆಂಬುದು ತಿಳಿಯದಂತಿದೆ – ಈ ಶಂಕೆಗೆ ಸಮಾಧಾನವನು ಹೇಳುವರು :– 'ನಿಮ್ಮ ಶಂಕೆ ಸರಿಯಾದುದಲ್ಲ. ಏಕೆಂದರೆ, ಇಲ್ಲಿಯೂ ಭಿನ್ನ

ಅರ್ಥಗಳಲ್ಲಿಯೇ ಅಭಯ ಪದವನ್ನು ಉಪಯೋಗಿಸಿದೆ. ಅದಲ್ಲದೆ ನಿರರ್ಥಕವಾದ ಪುನರುಕ್ತಿಯೂ ಆಗುವದಿಲ್ಲ. ಹಿಂದೆ 'ಅಸಂಗ' ಪದದ ವಿವೇಚನೆಯಲ್ಲಿ, ಸಕಲ (ಐಹಿಕ) ವಿಷಯಗಳ ಕಡೆಗೆ ಹರಿಯದಂತೆ ಮನಸ್ಸನ್ನು ತಡೆಯುವದೇ ಅಸಂಗಃ ಈ ಬಗೆಯ ಅಸಂಗರೂಪದ ವೈರಾಗ್ಯವು ಇಲ್ಲದಿದ್ದರೆ, ಆತ್ಮ ವಿಮರ್ಶೆಯೂ ಉಂಟಾಗದು – ಈ ಕಾರಣದಿಂದ ಅಸಂಗವೆಂಬುದರಲ್ಲಿ ವೈರಾಗ್ಯ ಹಾಗೂ ಆತ್ಮ ವಿಮರ್ಶೆ ಎಂಬ ಎರಡೂ ಅರ್ಥಗಳಿಂದ ಕೂಡಿದ ಅಸಂಗವು ನಿಯಮಗಳ ಗುಂಪಿನಲ್ಲಿ ಸಮಾವಿಷ್ಟವಾಗಿದೆ, ಎಂಬುದನ್ನು ಸೂಚಿಸುವದೇ ಉದ್ದೇಶವಾಗಿದೆ. ಈ ವಿಶೇಷ ಭೇದವನ್ನು ತಿಳಿದರೆ, ಅಸಂಗಕ್ಕೂ ಅಭಯಕ್ಕೂ ಸಾದೃಶ್ಯ - ಹೋಲಿಕೆ ಯಿಲ್ಲವೆಂಬುದು ಗೊತ್ತಾಗುವದು. ಹೇಗೆಂದರೆ, 'ದಾನ'ವು ನಿಯಮಗಳಲ್ಲಿ ಒಂದೆನಿಸಿದೆ; ಈ ನಿಯಮತ್ವವು ಇವೆರಡರಲ್ಲಿಯೂ ಇರುವದಿಲ್ಲ. ಒಂದರಲ್ಲಿ ಇದೆ. ಆದುದರಿಂದ ದಾನ ಪದದಿಂದ, ದಾನ ಹಾಗೂ ಅಭಯ, ಇವೆರಡನ್ನೂ ತೆಗೆದ ಕೊಳ್ಳಲು ಬರುವದಿಲ್ಲ, ಏಕೆಂದರೆ ಯಮಗಳ ವರ್ಗದಲ್ಲಿ 'ಅಭಯ' ಸೇರಿದೆ, ನಿಯಮಗಳ ವರ್ಗದಲ್ಲಿ ದಾನವು ಸೇರಿದೆ. ಆದರೆ ಇಲ್ಲಿಯೂ ಒಂದು ವಿಶೇಷ ಸಂಗತಿ ಇದೆ :- ಅದೆಂದರೆ, ಮೊದಲಿನ ಅಭಯಕ್ಕೆ ಅಭಯ (ಭಯವಿಲ್ಲದಿರುವಿಕೆ) ಎಂಬುದಿಷ್ಟೇ ಅರ್ಥ; ಅಭಯಧಾನವೆಂದು ಅದನ್ನು ಅಲ್ಲಿ ಸೇರಿಸಿಲ್ಲ. ಎರಡನೆಯ ಅಭಯ ಪದಕ್ಕೆ, ಅಭಯದಾನ ( ಪ್ರಾಣರಕ್ಷಣೆಯ ಭರವಸೆ ) ಎಂಬುವ ದಾನ ಕರ್ಮದಿಂದ ಅದು ಕೂಡಿಕೊಂಡಿದೆ. ಆದುದರಿಂದ, 'ಯಮ'ವೆಂದಾಗಲಿ, 'ನಿಯಮ'ವೆಂದಾಗಲಿ, '(ಅಭಯ) ದಾನಮಾಡುವದು', ಎಂಬ ಒಂದೇ ಅರ್ಥ ದಿಂದ ಎರಡನ್ನೂ ಕೂಡಿಸಿ ತೆಗೆದುಕೊಳ್ಳುವದು ಅಸಂಭವವಾದುದು. ಅದಕ್ಕಾಗಿ 'ಅಭಯ' ಶಬ್ದವನ್ನು ಭಿನ್ನಾರ್ಥಗಳಿಂದ ಎರಡು ಸಲ ಹೇಳಬೇಕಾಯಿತು. ಈ ಪುನರುಕ್ತಿ ಉಚಿತವೇ ಆಗಿದೆ. (೨೦)-ಇಲ್ಲಿ ಒಂದು ಆಕ್ಷೇಪವು :- ದಾನವೆಂದರೆ ಅಭಯದಾನವೆ-ಅಭಯವನ್ನು ಯೋಗಾನುಶಾಸನದಲ್ಲಿ ಹೇಳಿರುವ 'ಅಭಯದಾನ' ವೆಂದೇ ಅರ್ಥವಿಸಬೇಕು. ಅಲ್ಲಿ ಬರುವ ಅಭಯವು ನಿಯಮಗಳಲ್ಲಿ ಒಂದಾಗಿದೆ. ಆದುದರಿಂದ ಅಭಯದಾನವನ್ನು ನಿಯಮಗಳ ಗುಂಪಿನಲ್ಲಿ ಯೋಗಶಾಸ್ತ್ರದಲ್ಲಿ ಸೇರಿಸಿದ್ದಾರೆ. ಅದರಂತೆಯೇ ಭಾಗವತ ಧರ್ಮಗಳ ನಿರೂಪಣೆಯಲ್ಲಿಯೂ, ನಿಯಮಗಳ ಪಂಕ್ತಿಯಲ್ಲಿ ಸೇರಿಸಿಲ್ಲವೇಕೆ ? ಎರಡನೆಯ ಅಭಯ ಪದವನ್ನು ಯೋಗಶಾಸ್ತ್ರಗಳಲ್ಲಿ ಯಮವೆಂದು ಪರಿಗಣಿಸಿಲ್ಲ. ಅದನ್ನು ಯಮಗಳ ಗುಂಪಿ ನಲ್ಲಿ ಸೇರಿಸಲು ಕಾರಣವೇನು ? ಎಂದರೆ, ಓಡಬೇಡಿ, ಸಾವಧಾನವಾಗಿ ತಿಳಿದು ಕೊಳ್ಳಿರಿ – ಯಮನಿಯಮರೂಪವಾದ ಅಭಯವನ್ನು ಎರಡು ಬಗೆಯಲ್ಲಿಯೂ,

ಭಾಗವತ ಧರ್ಮಗಳಲ್ಲಿ ನಾವು ಪರಿಗಣಿಸಿಲ್ಲ. ಆದುದರಿಂದ ಅಭಯ – ಅಭಯ ದಾನಗಳ ಈ ವಿವೇಚನೆಯು ವ್ಯರ್ಥವಾದುದಲ್ಲವೆ ? –ಎಂದು ಕೇಳಿದರೆ, ಶಮ– ದಮಗಳೆಂಬ (ಭಾಗವತ) ಧರ್ಮಗಳನ್ನು ಪಡೆಯಲು ನೆರವಾಗಲೆಂದೇ ಅವನು ಇಲ್ಲಿ ವಿವೇಚಿಸಲಾಗಿದೆ. –ವಿವೇಚನೆಯು ವ್ಯರ್ಥವಾದುದೆಂಬ ದೋಷವಿಲ್ಲ.

(೨೧) **ಶಮಂದಮಮಾವಪಿ ಶಿಕ್ಷೇತ್**:– ಶಮ–ಭಗವಂತನಲ್ಲಿ ನಿಷ್ಠೆ, ದಮ ಇಂದ್ರಿಯನಿಗ್ರಹ. ಇಪ್ಪತ್ತೊಂದನೆಯ ಭಾಗವತ ಧರ್ಮವಿದು, ಇಲ್ಲಿ ಒಂದು ಆಕ್ಷೇಪ:– ಅಭಯ ಹಾಗೂ ಅಭಯ ದಾನಗಳು ಯಮನಿಯಮಗಳ ಗುಂಪಿನಲ್ಲಿ ಸೇರಿಕೊಂಡು, ಶಮ ಹಾಗೂ ದಮಗಳಿಗೆ ಸಮಾನವಾದ ಅರ್ಥವನ್ನು ಹೇಗೆ ಕೊಡುವವು? –ಎಂಬ ಪ್ರಶ್ನೆಗೆ ಉತ್ತರವಿದು.:– ಶಾಂತಿ ಹಾಗೂ ಸಂಯಮಗ ಳೆಂಬ ಎರಡು ವಸ್ತುಗಳು. ಏತರ ಶಾಂತಿ? ಯಾವುದರ ಸಂಯಮ ? ಇವ ತಿಳಿಯುವದಿಲ್ಲ. ಆದುದರಿಂದ, ಇವೆರಡೂ ಧರ್ಮಗಳನ್ನು ಯಥಾವತ್ತಾಗಿ ವಿವೇ ಚಿಸಿದೆ. 'ಶಮೋ ಮನ್ನಿಷ್ಠತಾ ಬುದ್ಧೇಃ, ದಮ ಇಂದ್ರಿಯ ಸಂಯಮಃ'(ನನ್ನಲ್ಲಿ) ಭಗವಂತನಲ್ಲಿ ನಿಷ್ಠೆ ಇಡುವದೇ ಶಮ; ಇಂದ್ರಿಯಗಳ ನಿಗ್ರಹವೇ ದಮ. ಇಲ್ಲಿ 'ಶಮ' ಶಬ್ದಕ್ಕೆ 'ನಿಷ್ಠಾ' ಎಂಬುದೇ ಅರ್ಥ. (ನಿಷ್ಠೆಗೆ) ಪಾತ್ರತೆಯಿಂದ. 'ಮಯಿ' ಅಂದರೆ ಶ್ರೀಹರಿಯಲ್ಲಿ ನಿಷ್ಠೆ ಎಂಬರ್ಥ. ನಿಷ್ಠೆ ಬುದ್ಧಿಯದು. ಸಂಯಮವ ಇಂದ್ರಿಯಗಳದು. ಹಿಂದೆ ಕೇಳಿದ ಏತರ ನಿಷ್ಠೆ? ಏತರ ಧಮ? ಎಂಬ ಪ್ರಶ್ನೆಗೆ ಇದುವೇ ಉತ್ತರ. ಶಮ ದಮಗಳೇನೆಂಬುದು ತಿಳಿಯಿತು. ಆದರೆ, ಅಭಯ ಅಭಯ ದಾನಗಳೆಂಬ ಈ ಎರಡು ಶಬ್ದಗಳಿಂದ ಶಮದಮಗಳ ಅರ್ಥವು ಹೇಗೆ ವ್ಯಕ್ತವಾಗುವದು? ಎಂದರೆ ಹೇಳುವರು:- ಕೇವಲ ಶಬ್ದಾರ್ಥ ಹೇಳಿ, ಶಮ- ದಮಗಳ ವಿವರಣೆಯನ್ನು ಇಲ್ಲಿ ಮಾಡಿಲ್ಲ. ಎರಡೂ 'ಅಭಯ' ಪದಗಳು ಒಂದೆ ರೀತಿಯಾಗಿ ಒಂದೇ ಅರ್ಥದವೆಂದು ತೋರಿದರೂ, ಶೋಧಿಸಿ ನೋಡಿದರೆ, ಎ ರಡೂ ಅಭಯ ಪದಗಳಿಂದ ಶಮ–ದಮ ಎಂಬ ಭಿನ್ನಾರ್ಥವು ಹೊರಡುವದು ಎಂಬುದನ್ನು ತೋರಿಸಲು ಹೇಳಿದೆ. ಆದರೆ ಎರಡೂ ಅಭಯ ಪದಗಳು ಶಮ ದಮಗಳಂತೆಯೆ ಆದರೆ ಹೇಗೆ ? ಎಂದರೆ, ಹಾಗಲ್ಲ–ಇಲ್ಲಿ ಒಂದು ವಿಶೇಷ ಸಂಗ ಯಿದೆ. ಅದೆಂದರೆ, ಹಿಂದೆ ಬಂದಿರುವ ಎರಡೂ 'ಅಭಯ' ಶಬ್ದಗಳಿಗೂ –ಭಯ ವಿಲ್ಲದಿರುವದು,– ಎಂಬ ಏಕರೂಪವಾದ ಒಂದೇ ಅರ್ಥವು, ಇಬ್ಬರಿಗೂ. ಇ ಎರಡೂ ಅಭಯ ಪದಗಳಿಗೆ, ಶಾಂತಿ ಹಾಗೂ ಸಂಯಮವೆಂಬ ಎರಡುಬಗೆಯ ಅರ್ಥಗಳಿಂದ ಎರಡು ಭಿನ್ನ ವ್ಯಕ್ತಿಗಳಿರುವರೆಂದು ತಿಳಿದುಕೊಳ್ಳಬೇಕು. ಅಭಯ ಪದಗಳಿಗೆ ಶಮ ದಮಗಳೆಂಬ ಅರ್ಥವು ಹೇಗೆ ಕೂಡುವದೆಂಬುದನ

ಈ ಮೊದಲು ವಿವರಿಸಿದೆ. ಶಮದಮುಗಳಿಗೂ ಎರಡೂ ಅಭಯ ಪದಗಳಿಗೂ 'ಅಭೇದ' ಎಂದರೆ, ಅದು ಬಾಧಿತವೆಂಬುದು ಸ್ಪಷ್ಟವಾಗಿದೆ. ಭಗವನ್ನಿಷ್ಟವಾದ ಬುದ್ಧಿ ಇರುವದಾಗಲೀ, ಇಂದ್ರಿಯ ನಿಗ್ರಹವಿರುವದಾಗಲಿ, 'ಅಭಯ'– (ನಿರ್ಭಯತ್ವ) ಯೆಂಬ ಒಂದೇ ಅರ್ಥವನ್ನು ಕೊಡುವದಿಲ್ಲವೆಂಬುದು ತಿಳಿಯುತ್ತದೆ. ಅಬೇಧವಿಲ್ಲದೆ ಇದ್ದರೂ, ವ್ಯಾಖ್ಯಾನದ ಭಾವವು ಸರಿಯಾಗಿ ಹೊರಡುವದಿಲ್ಲ. ಸರಿಯಾಗಿರಬೇಕಾದರೆ, ಅವೆರಡಕ್ಕೂ ಸರಿಯಾದ ಸಂಬಂಧವನ್ನು ಕಂಡುಕೊಳ್ಳಬೇಕು. ಈ ಸಂಬಂಧವು ಕಾರ್ಯಕಾರಣ ಸಂಬಂಧವೆ ? ಇಲ್ಲವೆ ಗಮ್ಯ–ಗಮಕ (ಉದ್ದೇಶಿತ ಅರ್ಥವನ್ನು ಸೂಚಿಸುವ) ಸಂಬಂಧವೆ? ಅದನ್ನು ವಿಚಾರಿಸಿ ಗೊತ್ತು ಮಾಡಬೇಕು. ಹೀಗೆ ನಿರ್ಣಯಿಸುವಲ್ಲಿ, ' ಭಯಂ ಪ್ರಮತ್ತಸ್ಯ ವನೇಷ್ವಪಿಸ್ಯಾತ್ '– ಎಂದು ಹೇಳಿರುವಲ್ಲಿ, 'ಪ್ರಮತ್ತನಾದವನಿಗೆ' (ತಪ್ಪು ದಾರಿಯನ್ನು ಹಿಡಿದವನಿಗೆ) ಕಾಡಿಗೆ ಹೋದರೂ ಭಯವು ತಪ್ಪಿಲ್ಲ' ಇಲ್ಲಿ ಅಜಿತೇಂದ್ರಿಯತ್ವವೇ ಭಯವೆಂದು ಲಾಕ್ಷಣಿಕವಾಗಿ ಹೇಳಿದೆ. ಮುಂದೆ ಈ ಮಾತನ್ನು ಮುಕ್ತಾಯಗೊಳಿಸುವಾಗ್ಗೆ 'ಅಜಿತೇಂದ್ರಿಯಸ್ಯ' ಎಂತಲೂ ಹೇಳಿರುವರು. ಅಲ್ಲಿಯೆ 'ಪ್ರಮಾದ, ವೆಂದರೆ. 'ನಾನು – ನನ್ನದು', ( ಆತ್ಮರತಿ: ) ಎಂಬುದರಲ್ಲಿಯೇ ಆಸಕ್ತನಾಗಿರುವದು, ಎಂದು ಅದನ್ನು ತಿಳಿಸಿರುವರು. ಸಂಸಾರಿ (ಗೃಹಸ್ಥ) ಯಾದವನಿಗೆ ಈ ಆತ್ಮರತಿಯೆ ಆತನ ಭಯಕ್ಕೆ ನಿಮಿತ್ತವಾದುದು. ಈ ಭಯದಿಂದ ಪಾರಾಗಲು ವನಕ್ಕೆ ಹೋಗಲು ಉದ್ಯುಕ್ತನಾದ ಪ್ರಿಯವ್ರತನಿಗೆ ತಂದೆಯಾದ ಬ್ರಹ್ಮದೇವರು ಹೇಳಿದ ಮಾತಿದು. ಗೃಹಸ್ಥಾಶ್ರಮಿಯಾಗಿರುವುದೇ ಭಯಕ್ಕೆ ನಿಮಿತ್ತವಲ್ಲ. ಹೀಗಿದ್ದರೆ, ಮನೆಮಾರು ತೊರೆದು!'ಪರಿವ್ರಾಜಕ' (ಸನ್ಯಾಸಿ) ನಾಗಿ ಕಾಡಿಗೆ ಹೋಗುವದರಿಂದ ಈ ಭಯವನ್ನು ತಪ್ಪಿಸಬಹುದಿತ್ತು. ಹೀಗಾಗುವದಿಲ್ಲ. ಆದರೆ ಇಂದ್ರಿಯ ನಿಗ್ರಹವಿಲ್ಲದಿರುವದು, ಭಗವಂತನಿಗೆ ವಿಮುಖನಾಗಿರುವನು. (ಭಗವದ್ವಿಷಯದಲ್ಲಿ ನಿಷ್ಠೆ–ಆಸಕ್ತಿಗಳು ಇಲ್ಲದಿರುವದು) ಇವೆರಡೂ ಸಂಗತಿಗಳು ಭಯಕ್ಕೆ ನಿಮಿತ್ತವಾದವುಗಳು), ಇವೆರಡನ್ನೂ ಹೇಗೆ ಕಳೆದುಕೊಳ್ಳಬೇಕೆಂಬುವದನ್ನೇ ಕಂಡು ಹಿಡಿಯಬೇಕು. – ಅದಕ್ಕೆ, ಭಗವಂತನಲ್ಲಿ ಬುದ್ಧಿಯು ಸ್ಥಿರವಾಗಿ ನೆಲೆಸುವಂತೆ ಮಾಡುವದು, ಇಂದ್ರಿಯಗಳನ್ನು ಅಂಕೆಯಲ್ಲಿ ಇಟ್ಟುಕೊಳ್ಳುವದು, ಇವೆರಡೇ ಭಯನಿವಾರಣೆಗೆ ಉಪಾಯಗಳಾಗಿವೆ. ಭಯಕ್ಕೆ ಕಾರಣಗಳಾಗಿರುವ ಎರಡೂ ಸಂಗತಿಗಳನ್ನು ಬಿಟ್ಟುಕೊಟ್ಟರೆ, ಅವುಗಳ ಪರಿಣಾಮವಾಗಿರುವ ಭಯವು ತಾನಾಗಿಯೆ ತೊಲಗುತ್ತದೆ. ಹೀಗೆ ಮಾಡದಿದ್ದರೆ, ಕೇವಲ ಪರಿವ್ರಾಜಕನಾಗಿ ಕಾಡಿಗೆ ಹೋಗುವದರಿಂದ ಏನು ಪ್ರಯೋಜನ? ಈ ಮಾತನ್ನು ಮನದಂದರೆ, ಭಗವನ್ನಿಷ್ಠ ಬುದ್ಧಿ ಇರುವದು, ಇಂದ್ರಿಯಗಳು ಅಧೀನ

ವಾಗಿರುವದು, ಇವುಗಳಿಗೆ ಮಾತ್ರ 'ಅಭಯ'ಕ್ಕೆ ನಿಮಿತ್ತವಾದವುಗಳೆಂಬುದ್ದು ತಿಳಿದು ಬರುತ್ತಿದೆ. ಅದರಲ್ಲಿಯೂ ವಿಚಾರಮಾಡಿದರೆ, 'ದೇಯ' ಹಾಗೂ ಆಸ್ಥೇಯ ( ಕೊಡಬೇಕಾದುದು, ತಾಳಬೇಕಾದುದು ) ಎಂದು ಅಭಯವು ಎರಡು ಬಗೆಯಾಗಿದೆ ಯೆಂಬುದನ್ನು ಈ ಮೊದಲೇ ಹೇಳಿದೆ. ಎರಡನೆಯದಾದ-ಆಸ್ಥೇಯ- (ತಾಳಬೇಕಾದುದು) ಎಂಬ ಅಭಯವೆಂಬುದು ( ಭಗವನ್ನಿಷ್ಠ ಬುದ್ಧಿರೂಪವಾದ ) ಶಮದಿಂದ ದೊರೆಯುವದು. ಅದು ಯಮಗಳ ಗುಂಪಿನಲ್ಲಿ ಸೇರಿದೆ. ಮೊದಲನೆಯ 'ದೇಯ'ವೆಂಬ ಅಭಯವು ದಮ (ಇಂದ್ರಿಯ ನಿಗ್ರಹ) ದಿಂದಲೆ ದೊರೆಯುವದೆಂಬುದು ವಿಶೇಷವಾಗಿ ತಿಳಿದು ಬರುವದು. ಅಲ್ಲಿಯೂ ವಿಚಾರಿಸಿ ನೋಡಿದರೆ ಎಲ್ಲಿ (ಹುಟ್ಟು-ಸಾವುಗಳ ರೂಪವಾದ) ಸಂಸಾರದ ಭಯವು ಇರುವದಿಲ್ಲವೊ, ಅಲ್ಲಿ ಶಮವು ಸ್ವಾಭಾವಿಕವಾಗಿಯೆ ಇರುವದು, ಅದರಂತೆಯೆ ಶಮವಿರುವಲ್ಲಿ ಸಂಸಾರದ ಭೀತಿಯೂ ಇರುವದಿಲ್ಲ. ಯಾರಿಂದ ಜಗತ್ತಿಗೆ ( ಜೀವಿಗಳಿಗೆ ) ಭಯವಿರುವದಿಲ್ಲವೊ ಅವನೇ ಜಿತೇಂದ್ರಿಯನು. ಅದರಂತೆಯೇ, ಜಿತೇಂದ್ರಿಯನಾದವನಿಗೆ ಜಗತ್ತಿನಿಂದ ( ಯಾವ ಜೀವಿಗಳಿಂದಲೂ ) ಭಯವಿರುವದಿಲ್ಲ. ಒಂದು ಇರುವಲ್ಲಿ ಇನ್ನೊಂದು, ಅದು ಇಲ್ಲದಲ್ಲಿ ಇನ್ನೊಂದು ಇರದು-ಎಂಬ ಅನ್ವಯ - ವ್ಯತಿರೇಕದ ಸಂಬಂಧದಿಂದ, ಶಮ-ದಮಗಳು ಉಭಯ-ಅಭಯಗಳಿಂದ ಯುಕ್ತವಾಗಿರುವದರಿಂದ, ಅವುಗಳಲ್ಲಿ ಗಮ್ಯ-ಗಮಕ ಭಾವವೂ ಇರುವದು.

**॥೨೪೦॥ ಜಿತಮಜಿತ ತದಾ ಭವತಾ ಯದಾ ಭವಾನ್**
**ಭಾಗವತಂ ಧರ್ಮಮನವದ್ಯಂ ।**
**ನಿಷ್ಕಿಂಚನಾ ಯೇ ಮುನಯ ಆತ್ಮಾರಾಮಾ ಯಮುಪಾ-**
**ಸತೇಽಪವರ್ಗಾಯ ॥** ೬-೧೬-೭

(೨೪೦-೨೪೨) ಈ ಮೂರು ಶ್ಲೋಕಗಳಲ್ಲಿ ಶೇಷದೇವರ ದರ್ಶನದಿಂದ ಪುನೀತನಾದ ಚಿತ್ರಕೇತು ರಾಜನು ಭಗವಂತನನ್ನು ಸ್ತುತಿಸಿರುವನು.

**ಅರ್ಥ** :- ಹೇ ಅಜಿತನಾಮಕ ಪರಮಾತ್ಮನೆ ! ಜಿತಂ, ನೀನು ಗೆದ್ದಂತಾಯಿತು. ನಿನ್ನ ಅವತಾರ ಕಾರ್ಯವು ಕೊನೆಗಂಡಿತು. ದೋಷರಹಿತವಾದ (ಪವಿತ್ರವಾದ, ನಿಷ್ಕಪಟವಾದ) ಭಾಗವತ ಧರ್ಮಗಳನ್ನು, (ಭವಿ) ಸಂಸಾರಿಗಳಿಗೆ ಸಂಸಾರದಿಂದ ಮುಕ್ತರಾಗಲು ನೀನು ಉಪದೇಶಿಸಿದಾಗಲೆ ನಿಮಗೆ ಗೆಲುವಾಯಿತು (ಶ್ರೀ ವೇದವ್ಯಾಸರೆ, ನಿಮ್ಮ ಅವತಾರದ ಉದ್ದೇಶವು ಪೂರ್ತಿಗೊಂಡಿತು. ಅವತಾರದ ಪ್ರಯೋಜನವು ಯಾವುದು, ಭಾಗವತ ಧರ್ಮಗಳನ್ನು ನಿರೂಪಿಸಿದ

ಮಾತ್ರದಿಂದಲೆ ಆ ಪ್ರಯೋಜನವು ಹೇಗೆ ಸಿದ್ಧಿಸಿತು ? ಎಂದರೆ, ಲೌಕಿಕವಾದ ಯಾವ ವಸ್ತುವನ್ನೂ ಅಪೇಕ್ಷಿಸಿಸದ ಸಾಧಕರೆ, ಭಗವಂತನಲ್ಲಿ ತಮ್ಮ ಬುದ್ಧಿಯನ್ನು ದೃಢವಾಗಿ ನೆಲಿಸಿದವರು. ಈ ಬಗೆಯ ಭಗವನಿಷ್ಠರಾದ ಮುನಿಗಳೇ, ಮುಖ್ಯವಾಗಿ ತಿಳಿಯಬೇಕಾಗಿದ್ದ ಭಗವತ್ತತ್ತ್ವವನ್ನು ತಮ್ಮ ಶಕ್ತಿಗನುಗುಣವಾಗಿ ತಿಳಿದುಕೊಳ್ಳ ಬಲ್ಲರು. (ಚಿಂತನಶೀಲರಾದ) ಮುನಿಗಳೆ ಭಾಗವತ ಧರ್ಮಗಳನ್ನು ಆಚರಿಸು ವವರು. ಭವಬಂಧನದಿಂದ ಬಿಡುಗಡೆಹೊಂದಲು ಭಾಗವತ ಧರ್ಮಗಳನ್ನೇ ಅವರು ಆಚರಿಸುವರು. ಈ ಬಗೆಯ ಭಾಗವತ ಧರ್ಮಗಳನ್ನು ನಿರೂಪಿಸಿದಾಗಲೆ, ನಿಮ್ಮ (ಶ್ರೀ ವೇದವ್ಯಾಸರ) ಅವತಾರದ ಉದ್ದೇಶವು ಈಡೇರಿದಂತಾಯಿತು.

ಒಂದು ಆಕ್ಷೇಪ :- ನಾರದರ ಪ್ರಾರ್ಥನೆಯಿಂದಲೆ ಭಾಗವತ ಧರ್ಮಗಳ ನಿರೂಪಣೆಯಾಗಿರಲಿ. ಅವುಗಳ ವಿಸ್ತೃತವಾದ ನಿರೂಪಣೆಯೆ ಭಾಗವತ ಗ್ರಂಥದ (ಮುಖ್ಯ) ವಿಷಯವಾಗಿರಲಿ. ಹೀಗಿದ್ದರೂ, ಭಾರತಾದಿ ಗ್ರಂಥಗಳಲ್ಲಿ ಬೇರೆ ಅನ್ಯ ಧರ್ಮಗಳನ್ನೂ ವಿವೇಚಿಸಿರುವಿರಿ, ಭಾಗವತದಲ್ಲಿ ಮಾತ್ರ, ಭಾಗವತ ಧರ್ಮ ಗಳನ್ನೇ ವಿಶಿಷ್ಟವಾಗಿ ವಿವರಿಸಲು ಕಾರಣವೇನು ? ಎಂದರೆ ಉತ್ತರ ಹೇಳುವರು. ಹಿಂದೆ ಹೇಳಿರುವದನ್ನು ಮರೆಯಬೇಡಿರಿ. ನಿಮ್ಮ ಪ್ರಶ್ನೆಗೆ ಸರಿಯಾದ ಉತ್ತರವನ್ನು ಈ ಮೊದಲೆ ಹೇಳಿದೆ. (ವೇದವಿಭಾಗ, ಹದಿನೆಂಟು ಪುರಾಣಗಳು ಇತ್ಯಾದಿ) ಸಕಲ-ಕಾರ್ಯವನ್ನು ಮಾಡಿ ಮುಗಿಸಿದ್ದರೂ, ತೃಪ್ತಿ ಭಾವನೆ ಉಂಟಾಗದ್ದರಿಂದ ಭಗವದವತಾರರಾದ ಶ್ರೀವೇದವ್ಯಾಸರು ಶ್ರೀ ಮದ್ಭಾಗವತವನ್ನು ರಚಿಸಿದರು. ಈ ಗ್ರಂಥದಿಂದ ಭಗವಂತನ ವಿಶೇಷಾನುಗ್ರಹ ಉಂಟಾಗುವದು. ಅದರಿಂದ ಸಂಸಾರಿಗಳಿಗೆ ಸಂಸಾರ ಬಂಧನದಿಂದ ಬಿಡುಗಡೆಯಾಗುವದು. ಅದರಿಂದ (ತಮ್ಮ) ಅವತಾರದ ಪ್ರಯೋಜನವು ಪೂರ್ತಿಗೊಳ್ಳುವದು. ಅದರಿಂದ ಮನಸ್ಸಿಗೆ ಸಂತೃಪ್ತಿಯಾಗುವದು. –ಈ ಅಭಿಪ್ರಾಯದಿಂದಲೆ, ಹಿಂದೆ ಹೇಳಿದುದನ್ನು ಬುದ್ಧಿಗೆ ಹಿಡಿಸುವಂತೆ ವಿವರಿಸಿ ಹೇಳಿರುವರು.

ಒಟ್ಟಾರೆ ಹೇಳುವದೆಂದರೆ, ಸಾಕ್ಷಾತ್ ಭಗವಂತನಾದ ಶ್ರೀ ನಾರಾಯಣನೆ ದೇವತೆಗಳ ಪ್ರಾರ್ಥನೆಯಿಂದ ಸಂಸಾರಿಗಳನ್ನು ಮುಕ್ತಿಯ ದಾರಿಯಲ್ಲಿ ತಂದು ನಿಲ್ಲಿಸಲು, ಶ್ರೀ ವೇದವ್ಯಾಸರಾಗಿ ಅವತರಿಸಿದನೆಂಬುದು ಡಂಗುರ ಸಾರಿದಂತೆ ಸ್ಪಷ್ಟವಾಗಿದೆ. ಅದ್ವಿತೀಯನಾದ ವೈದ್ಯನಂತೆ ಭಗವಂತನೆ ಭವರೋಗಕ್ಕೆ ಭಾಗವತವೆಂಬ ಔಷಧವನ್ನು ನಿದಾನಿಸಿ ಹೇಳಿರುವನು. ಭವರೋಗದಿಂದ ಬಳಲುವವನು ಭಾಗವತವೆಂಬ ದಿವ್ಯವಾದ ಔಷಧವನ್ನು (ಸರಿಯಾಗಿ) ಸೇವಿಸಿದರೆ ಭವರೋಗದ ನಿವಾರಣೆಗೆ ಇನ್ನು ಬೇರೆ ಯಾವ ಉಪಾಯವೂ ಉಳಿಯದು.

ಏಕೆಂದರೆ, (ಲೋಕದಲ್ಲಿ ಯಾವುದೇ) ರೋಗದ ನಿವಾರಣೆಗೆ ಬಯಸುವ ಸಂಗತಿಗಳು ಎರಡೇ ಆಗಿರುವವು. ಅವುಗಳಲ್ಲಿ, ರೋಗದ ಚಿಕಿತ್ಸೆಯಲ್ಲಿ ಒಳ್ಳೇ ತಜ್ಞನಾದ ವೈದ್ಯನು ಸಮುಚಿತ ಔಷಧವನ್ನು ಸೂಚಿಸುವದು ಒಂದಾದರೆ, ಆತನ ಸೂಚಿಸಿದ ಔಷಧವನ್ನು ಭಕ್ತಿ ವಿಶ್ವಾಸಗಳಿಂದ ರೋಗಿಯು ಸೇವಿಸುವದು ಎರಡನೆಯದಾಗಿದೆ. ಭವರೋಗದ ನಿವಾರಣೆಗೆ ಔಷಧವನ್ನು ಹೇಳಿಕೊಟ್ಟವನು ಸರ್ವಜ್ಞ ಶಿರೋಮಣಿಯಾದ ಸಾಕ್ಷಾತ್ ಭಗವಂತನೆ. ಭಾಗವತ ಧರ್ಮಗಳ ಅನುಷ್ಠಾನವೆ ಆತನು ಹೇಳಿರುವ ಉಪಾಯ. ಭಗವದ್ಭಕ್ತರಾದ ಸಂಸಾರಿಗಳು ಈ ಭಾಗವತ ಧರ್ಮಗಳನ್ನು ಭಕ್ತಿ ಪೂರ್ವಕವಾಗಿ ಸೇವಿಸಬೇಕು. ಭವರೋಗದ ನಿವಾರಣೆಗೆ ಇವೆರಡೂ ಸಂಗತಿಗಳೂ ಇಲ್ಲಿ ಸಿದ್ಧವಾಗಿವೆ.

**॥೩೪೧॥ ವಿಷಮತಿರ್ನ ಯತ್ರ ನೃಣಾಂ ತ್ವಮಹಮಿತಿ**
**ಮಮ ತವೇತಿ ಚ ।**
**ಯೋಽನ್ಯತ್ರ ವಿಷಮಧಿಯಾ ರಚಿತಃ ಸಹ್ಯವಿಶುದ್ಧಃ**
**ಕ್ಷಯಿಷ್ಣುರಧರ್ಮಬಹುಲಃ ॥ ೬**

ಮುಕ್ತಿಯನ್ನು ತಂದುಕೊಡುವ ಈ ಬಗೆಯ ಭಾಗವತ ಧರ್ಮವು ಯಾವುದು? ಎಂದರೆ, ಆ ಧರ್ಮದ ಲಕ್ಷಣವನ್ನು ಹೇಳುವರು.

**ಅರ್ಥ:**- ಅಹಂಕರ್ತಾ - ನಾನೇ ಮಾಡುವವನು. ಅದರಂತೆಯೆ ಈ ಉಪಾಯವು ನನ್ನದು. ಅವುಗಳಿಂದ ಒದಗುವ ಫಲಕ್ಕೆ ನಾನೇ ಒಡೆಯನು,- ಇದು ನನ್ನದು ಅದು ನಿನ್ನದು. ಎಂಬ ಇಬ್ಬಗೆಯ ಅಭಿಮಾನವು ಯಾವ ಧರ್ಮದ ಅನುಷ್ಠಾನದಿಂದ ಮಾನವರಿಗೆ ಉಂಟಾಗುವದಿಲ್ಲವೊ ಅದುವೆ ಭಾಗವತ ಧರ್ಮವಾಗಿದೆ. 'ನನ್ನದು, ನಾನು ಮಾಡುವವನು, ಎಂಬ ಅಹಂಕಾರ ಮಮಕಾರಗಳ ಅಭಿಮಾನವನ್ನು ಬಿಟ್ಟುಕೊಟ್ಟು ಮಾಡುವ ಧರ್ಮ, ಎಂಬುದು ಭಾಗವತ ಧರ್ಮದ ಲಕ್ಷಣವೆಂದು ಹೇಳಿದಂತಾಯಿತು. ಅಂತೆಯೆ ಭಾಗವತ ಧರ್ಮಾಚರಣೆಯಿಂದ ದೊರೆಯುವ ಫಲವು ಅಕ್ಷಯ (ನಾಶರಹಿತ) ಹಾಗೂ ಪಾಪ ಕೃತ್ಯವನ್ನು ದೂರವಿಡುವಂತಹದಾಗಿದೆ. ಬೇರೆ ಯಾವ ಧರ್ಮಕ್ಕೂ ಈ ಲಕ್ಷಣವು ಹೊಂದಿಕೊಳ್ಳುವದಿಲ್ಲವೆಂಬುದನ್ನು ತೋರಿಸುವರು. - ನಾನು ನನ್ನದೆಂಬ ಅಹಂಕಾರ ಮಮಕಾರಗಳಿಂದ ಕೂಡಿದ ಬೇರೆ ಯಾವುದೇ ಧರ್ಮವು - ಅನಧಿಕಾರಿಯಾದವನು ಆಚರಿಸುವ ಜಪ ತಪಾದಿಗಳಂತೆ, ಅಶುದ್ಧ-ದೋಷಯುಕ್ತವಾದುದು. ಅಂತೆಯೆ ಅಂಥ ಧರ್ಮವು ನಶ್ವರ (ನಾಶವಾಗುವ) ಫಲವನ್ನು ಕೊಡುವದು. ಅಂಥ ಧರ್ಮವು ಪಾಪಸಂಚಯಕೂ ಕಾರಣವಾಗುವದು. 'ಹ'

ಎಂಬುದು ಇಲ್ಲಿ ಹೇಳಿರುವ ಮಾತುಗಳು ಪ್ರಮಾಣಪ್ರಮಿತವೆಂದು ಸೂಚಿಸು ವದು.

||೨೪೨|| ನ ವ್ಯಭಿಚರತಿ ತವೇಕ್ಷಾ ಯಯಾ ಹ್ಯಭಿಹಿತೋ
ಭಾಗವತೋ ಧರ್ಮಃ |
ಸ್ಥಿರಚರಸತ್ವಕದಂಬೇಷ್ವಪೃಥಗ್ಧಿಯೋ ಯಮುಪಾಸತೇ
ತ್ವಾರ್ಯಾಃ || ೬-೧೬-(೪೧, ೪೧, ೪೩)

ಬೇರೆ ಯಾವುದೇ ಧರ್ಮದಲ್ಲಿ ಭಾಗವತ ಧರ್ಮದ ಲಕ್ಷಣವು ಕಾಣಬರ ದಿದ್ದರೆ ಇರಲಿ. ಆದರೆ ಭಾಗವತ ಧರ್ಮಾನುಷ್ಠಾನದಿಂದ ಅಕ್ಷಯ ಫಲ ದೊರೆ ಯುವದೆಂಬ ಮಾತು ಅಷ್ಟೊಂದು ಶಕ್ಯವೆಂದು ಅನಿಸುವದಿಲ್ಲ. ಬೇರೊಂದು ಧರ್ಮವನ್ನು ಆಚರಿಸುವವನಂತೆಯೆ, ಭಾಗವತ ಧರ್ಮವನ್ನಾಚರಿಸುವ ಯಾರೊ ಬ್ಬನಿಗಾದರೂ ಮುಕ್ತಿಯು ದೊರೆಯದೆ, ಮತ್ತೆ ಬೇರೊಂದು ಫಲ ದೊರೆಯು ತ್ತಿದ್ದರೆ, ಅಕ್ಷಯ ಫಲವು ದೊರೆಯುವದೆಂದು ಹೇಳುವದು ಅಶಕ್ಯವಾಗುವದು. ಹೀಗಿರಲು, ಭಾಗವತ ಧರ್ಮಗಳ ನಿರೂಪಣೆಯಿಂದ ಮಾತ್ರವೆ, ಭಗವಾನ್ ವ್ಯಾಸರಿಗೆ ಅವತಾರದ ಸಾರ್ಥಕವಾಯಿತೆಂದು ಹೇಳಲೂ ಬಾರದು. ಅದಕ್ಕಾಗಿ ಹೇಳುವರು.

**ಅರ್ಥ:**- ಭಗವಂತಾ! ನಿನ್ನದು ಸತ್ಯ ಸಂಕಲ್ಪ. ನಿನ್ನ ಸಂಕಲ್ಪವು ಎಂದಿಗೂ ಅನ್ಯಥಾ ಆಗದು. ವಿಫಲವಾಗದು. (ಸತ್ಯ ಸಂಕಲ್ಪದ) ಪ್ರಜ್ಞೆಯಿಂದ ಈ ಭಾಗವತ ಧರ್ಮಗಳನ್ನು ನೀನು ನಿರೂಪಿಸಿರುವೆ. ಬುದ್ಧಿವಂತನಾದ ಸಾಮಾನ್ಯ ಪ್ರಾಜ್ಞನು ಹೇಳಿದ ಮಾತೇ ನಿರರ್ಥಕವಾಗುವದಿಲ್ಲ. ನೀನಂತೂ ಸರ್ವಜ್ಞ ಶಿರೋ ಮಣಿ. ಯಾವ ಪ್ರೇಕ್ಷಾ (ಬುದ್ಧಿ) ವಂತನೂ ನಿನಗೆ ಸರಿಗಟ್ಟನು. ಭಾಗವತ ಧರ್ಮಾನುಷ್ಠಾನದಿಂದ ಮೋಕ್ಷವು ದೊರೆಯುವದೆಂದು ಹೇಳಿದ ನಿನ್ನ ಪ್ರೇಕ್ಷೆ, ನಿನ್ನ ಸಂಕಲ್ಪ, ಎಂದಿಗೂ ಸಟೆಯಾಗಲಾರದು. ಇದು ಸ್ವಂತದ ಅಭಿಪ್ರಾಯವಲ್ಲ, ಪ್ರಮಾಣಸಿದ್ಧ (ಹಿ) ವಾದುದು. ಈ ಭಾಗವತ ಧರ್ಮವನ್ನು ಆಚರಿಸುವ ಸಜ್ಜ ನರು ಚರಾಚರ (ಜೀವಜಡ) ವಸ್ತುಗಳ ಸಮೂಹದಲ್ಲಿ ಭೇದಭಾವದ ಅನ್ಯಥಾ ಬುದ್ಧಿಯಿಲ್ಲದವರು, ಅವುಗಳನ್ನು ಯಥಾಸ್ಥಿತವಾಗಿ ( ಅವುಗಳ ನಿಜ ಸ್ವರೂಪ ದಲ್ಲಿಯೆ ) ಕಾಣುವವರು.

ಒಟ್ಟಾರೆ ಅರ್ಥವೆಂದರೆ,- ಪ್ರಾಜ್ಞನಾದ ಭಗವಂತನಿಂದ ನಿರೂಪಿಸಲ್ಪಟ್ಟ ಭಾಗವತ ಧರ್ಮಾಚರಣೆಯಿಂದ ಮುಕ್ತಿಯು ನಿಶ್ಚಿತ ದೊರೆಯುದೆಂಬ ದೋಷವು

ತಟ್ಟಬಹುದಿತ್ತು. ಆದರೆ ಅದು ಯಾವಾಗ? ನಿರೂಪಕನಾದ ಭಗವಂತನ ಪ್ರೇಕ್ಷೆಗೆ (ಪ್ರಜ್ಞೆಗೆ) ಎಂದಾದರೂ ಅದು ನಿರರ್ಥಕವಾದೀತೆಂಬ ನ್ಯೂನತೆ ಅಂಥ ಪ್ರೇಕ್ಷೆಯಲ್ಲಿ ಇದ್ದರೆ ಮಾತ್ರ. ಆದರೆ ಭಗವಂತನ ಪ್ರೇಕ್ಷೆಗೆ ಅದು ಅಸತ್ಯವಾದೀತೆಂಬ ಇಂಥ ನ್ಯೂನತೆ ಎಂದಿಗೂ ಸಂಭವಿಸಲಾರದು. ಇದಲ್ಲದೆ ಪ್ರೇಕ್ಷೆ (ಪ್ರಜ್ಞೆ-ದಿವ್ಯ ದರ್ಶನ) ಎಂಬುದಕ್ಕೇನೆ ವಿಫಲತೆಯೆಂಬ ದೋಷವು ಎಂದಿಗೂ ತಟ್ಟಲ್ಲಾರದು. ಪ್ರೇಕ್ಷೆ ಹಾಗೂ ಅರ್ಥವ್ಯಭಿಚಾರ (ವಿಫಲತೆಯ ದೋಷ), ಇವೆರಡೂ ಪರಸ್ಪರ ವಿರುದ್ಧವಾದ ಸಂಗತಿಗಳು. ನಿಜವಾದ ಪ್ರೇಕ್ಷೆಗೆ ವಿಫಲತೆಯೆಂಬುದು ಎಂದಿಗೂ ಇಲ್ಲ. (ಹಿಂದು - ಇಂದು - ಮುಂದು) (ಭೂತ-ವರ್ತಮಾನ-ಭವಿಷ್ಯ) ಈ ಮೂರು ಕಾಲಗಳಲ್ಲಿಯೂ ತಾನು ಸ್ವೀಕರಿಸಿದ (ನಿರೂಪಿಸಿದ) ಸಂಗತಿಗೆ ಬಾಧೆ ತಟ್ಟದೆಂದು ನಿರ್ಣೀತವಾದುದೇ ಪ್ರೇಕ್ಷಾ ಎಂಬುದಾಗಿದೆ. ಇದನ್ನು ಸೂಚಿಸುವದಕ್ಕಾಗಿಯೆ, ಮೂರುಬಾರಿ ವೇದಗಳನ್ನು ವಿಮರ್ಶಿ ಭಾಗವತ ಧರ್ಮಗಳನ್ನು ನಿರೂಪಿಸುವ ಶ್ರೀಮದ್ ಭಾಗವತವನ್ನು ಶ್ರೀ ವ್ಯಾಸರು ರಚಿಸಿರುವರು - ಎಂದು ಹೇಳಿದೆ. ಹೀಗೆ ಹೇಳಿದೆ :- "ನಾಹ್ಯತೋನ್ಯಃ...... ಯತೋ ಭವೇತ್" (೩-೨-೩೬) ಮತ್ತು -'ಭಗವಾನ್ ಬ್ರಹ್ಮ ... ಅನ್ಯತೋ ಭವೇತ್' (೨-೨-೩೭) ಎಂದರೆ, 'ಭಗವಂತನಾದ ವಾಸುದೇವನಲ್ಲಿ ಭಕ್ತಿಯೋಗವನ್ನುಂಟು ಮಾಡುವ (ಅಚಲ ಭಕ್ತಿಯನ್ನು ಹುಟ್ಟಿಸುವ (ಭಾಗವದ ಧರ್ಮವನ್ನು ಬಿಟ್ಟರೆ) ಬೇರೊಂದು ಮಂಗಳಕರ (ಶ್ರೇಯಸ್ಕರ), ಪ್ರಸಿದ್ಧ ಸಾಧನವು ಈ ಪ್ರಪಂಚದಲ್ಲಿ ಕೇಳಬರುವದಿಲ್ಲ,-ಮತ್ತು ತಮ್ಮ ಪ್ರತಿಭೆಯಿಂದ, ಜೀವಿಗಳ ಮೇಲೆ ದಯೆ ಮಾಡಲು ಮೂರು ಸಲ ವೇದಗಳ ಆಲೋಚನೆ (ವಿಮರ್ಶೆ) ಮಾಡಿ ಈ ಭಾಗವತ ಧರ್ಮವನ್ನು ಶ್ರೀ ವ್ಯಾಸರು ಕಂಡು ಹಿಡಿದರು; ಏಕೆಂದರೆ, ನಿರ್ವಿಕಾರ, ನಿರ್ಲೇಪ ನಾದ ಭಗವಂತನಲ್ಲಿ ಈ ಭಾಗವತ ಧರ್ಮಾಚರಣೆಯಿಂದಲೆ ಪ್ರೀತಿಯು-ಭಕ್ತಿಯು ಜನಿಸುವದು. ಇನ್ನೂ ಒಂದು ಕಾರಣವೆಂದರೆ, ಸಕಲ ಜೀವಿಗಳಲ್ಲಿ ಭೇದಭಾವ ವಿಲ್ಲದ, ಯಥಾರ್ಥ ದೃಷ್ಟಾರರಾದ ಸಜ್ಜನರು ಈ ಭಾಗವತ ಧರ್ಮಗಳನ್ನು ಆಚರಿಸುವದುಂಟು. ಒಟ್ಟಾರೆ ಅರ್ಥವೆಂದರೆ, (ಭಗವಂತನ ಉಕ್ತಿಗೆ) ಅಸತ್ಯತೆ, ವಿಫಲತೆಯ ದೋಷ ತಟ್ಟುವಂತಿದ್ದರೆ ಮಾತ್ರ, (ಅರ್ಥವ್ಯತಿರೇಕದ) ನಿಮ್ಮ ಸಂದೇಹವು ಉಳಿಯಬಹುದಿತ್ತು. ಆದರೆ, ಎಂದಿಗೂ ಹೀಗೆ ಆಗುವದಿಲ್ಲ. ಏಕೆಂದರೆ, ಭಾಗವತ ಧರ್ಮಗಳನ್ನು ಆಚರಿಸುವ ಮಹಾತ್ಮರು ಜೀವ-ಭಾವಗಳಲ್ಲಿ (ಅಂತರ್ಯಾಮಿಯಾಗಿ) ನೆಲೆಸಿದ ಶ್ರೀ ಹರಿಯನ್ನು ಮನಸ್ಸಿನಲ್ಲಿ (ಸದಾ) ಸ್ಮರಿಸುವರು. ತಾವು ಮಾಡುವ ಸಕಲ ಕರ್ಮಗಳಿಗೆ ಶ್ರೀ ಹರಿಯೆ ಕರ್ತೃವೆಂತಲೂ, ಸಕಲ ಕರ್ಮಗಳು ಶ್ರೀ ಹರಿ ಪೂಜೆಯೆಂತಲೆ ಭಾವಿಸುವರು. ಭಗವಂತನ

ಪೂಜೆಯು ಎಂದಿಗೂ ವಿಫಲವಾಗದು, ಹಾಗೂ ಅದಕ್ಕೆ ದೊರೆಯುವ ಫಲವು ಅಲ್ಪವೂ (ಕ್ಷುದ್ರವೂ) ಆಗದು. ಶ್ರೀ ಹರಿಪೂಜೆಯೆಂದು ಮಾಡುವ ಕರ್ಮಕ್ಕೆ ಅಲ್ಪ ಫಲವೂ ಇಲ್ಲ, ವಿಫಲತೆಯೂ ಎಂದಿಗೂ ಶಕ್ಯವಿಲ್ಲವಾದುವರಿಂದ, ಭಾಗವತ ಧರ್ಮಾನುಷ್ಠಾನವು ಮುಕ್ತಿಗೆ ಸಾಧನವೆಂಬ ಭಗವದುಕ್ತಿಯು ಸಾರ್ಥಕವೆ, ಸತ್ಯ ಸಿದ್ಧಾಂತವೇ ಆಗಿದೆ. ಸಕಲ ಕರ್ಮಗಳನ್ನು ಶ್ರೀ ಹರಿಯ ಪೂಜೆಯೆಂದು ಮಾಡು ವದು, ಭಾಗವತ ಧರ್ಮಗಳ ಇನ್ನೊಂದು ಲಕ್ಷಣವಾಗಿದೆ.

**೨೪೩|| ಯತ್ಪಾದಪಂಕಜರಜಃ ಶಿರಸಾ ಬಿಭರ್ತಿ**
**ಶ್ರೀರಬ್ಜಜಶ್ಚ ಗಿರಿಶಃ ಸಹಲೋಕಪಾಲೈಃ ||**
**ಲೀಲಾತನೂಃ ಸ್ವಕೃತಸೇತುಪರೀಪ್ಸಯಾ ಯಃ**
**ಕಾಲೇ ದಧತ್ಸಭಗವಾನ್ ಸ್ವಕೃತೇನ ತುಷ್ಯೇತ್ || ೧೦-೬೨-೪೨**

58-37

ಪ್ರಥಮ ದರ್ಶನದಲ್ಲಿ ಕಾಳಿಂದಿಯು ಮಾಡಿದ ಶ್ರೀ ಕೃಷ್ಣನ ಸ್ತುತಿ ಇದು.

**ಅರ್ಥ** :-ಪರಮಾತ್ಮನ ಪಾದಕಮಲದ ಧೂಳಿಯನ್ನು ಶ್ರೀ ಲಕ್ಷ್ಮೀದೇವಿಯು ತಲೆಯ ಮೇಲೆ ಧರಿಸುವಳು. (ಅದರಿಂದಲೆ ಶ್ರೀ ಲಕ್ಷ್ಮೀ ದೇವಿಯು ನಿತ್ಯ ಮುಕ್ತ ಳಾಗಿರುವಳು.) ನಾಭಿ ಕಮಲದಿಂದ ಜನಿಸಿದ ಬ್ರಹ್ಮ ದೇವರೂ ಶ್ರೀಹರಿಯ ಪಾದಧೂಳಿಯನ್ನು ತಲೆಯಮೇಲೆ ಇಟ್ಟುಕೊಳ್ಳುವರು. (ಅದರಿಂದ ಬ್ರಹ್ಮನು ಜೀವನ್ಮುಕ್ತನೆಂಬ ಅಭಿಪ್ರಾಯವು). ಪಾರ್ವತೀಪತಿಯಾದ ರುದ್ರ ದೇವರು ಕೂಡ ಉಳಿದ ಇಂದ್ರಾದಿ ದಿಕ್ಪಾಲಕರ ಜೊತೆಗೆ ಅದೇ ಪಾದಧೂಳಿಯನ್ನು ಶಿರಸಾ ಧರಿಸುವರು. (ಅದರಿಂದ ತಾರತಮ್ಯಕ್ಕೆ ಅನುಗುಣವಾಗಿ ಯಥಾಯೋಗ್ಯವಾದ ಮೋಕ್ಷವನ್ನು ನಿಶ್ಚಿತವಾಗಿ ಪಡೆಯುವರು. ಎಂಬ ಅರ್ಥವು). ಈ ಬಗೆಯ ಮಹಿ ಮೋಪೇತನಾದ ಶ್ರೀಹರಿಗೆ (ಮಾನವರಂತೆ) ಪ್ರಾರಬ್ಧ ಕರ್ಮಫಲದಿಂದ ಒದಗುವ ಪ್ರಾಕೃತ ದೇಹದ ಸಂಬಂಧವಿಲ್ಲ. ಆದರೂ ಶ್ರೀಹರಿಯು ತನ್ನ ಸ್ವರೂಪಭೂತ ವಾದ ಆನಂದೋದ್ರೇಕದಲ್ಲಿ ಕ್ರೀಡೆಯಂತೆ ದೇಹಗಳನ್ನು ಧರಿಸುವನು. (ಬೇರೆ ಬೇರೆ ಅವತಾರಗಳನ್ನು ತಾಳುವನು.) ಪ್ರಾರಬ್ಧ ಕರ್ಮದ ಒತ್ತಾಯವಿಲ್ಲದಿದ್ದರೂ, ಹೀಗೆ ಬೇರೆಬೇರೆ ದೇಹಗಳನ್ನು ಬುದ್ಧಿಪೂರ್ವಕವಾಗಿಯೆ ಯಾವ ಉದ್ದೇಶ ಕ್ಕಾಗಿ ಧರಿಸುವನು ? -ಎಂದರೆ, (ಶ್ರೀಹರಿಯು) ತಾನೇ ವಿಧಿಸಿದ ಧರ್ಮ ಮಾರ್ಗದ (ಸೇತು) ಕಟ್ಟಳೆಗಳನ್ನು ರಕ್ಷಿಸುವದಕ್ಕಾಗಿಯೆ ಹೀಗೆ ಮಾಡುವನು. -ಧರ್ಮಕ್ಕೆ ಒದಗುವ ವಿಪ್ಲವ-ಗ್ಲಾನಿಯು ಯಾವುದೆಂದರೆ, ಕಾಲಕಾಲಕ್ಕೆ ಕಳ್ಳ ರಂತಿರುವ ದುಷ್ಕರ್ಮಿಗಳಾದ ರಾಜರಿಂದ ಧರ್ಮಕ್ಕೆ ಗ್ಲಾನಿಯು (ಅಳಿಗಾಲವು) ಒದಗುವದು. ಹಾಗೂ ಕೆಲವೊಂದು ಕಾಲದಲ್ಲಿ ಅಧರ್ಮಕ್ಕೆ ಊರ್ಜಿತ ಸ್ಥಿತಿಯ

ಒದಗುವದು. ಅಂಥ ಕಾಲಗಳಲ್ಲಿ ಅಧರ್ಮದ ನಾಶಕ್ಕಾಗಿ, ಧರ್ಮದ ರಕ್ಷಣೆಗಾಗಿ ಶ್ರೀಹರಿಯು ಅವತಾರವನ್ನು ಮಾಡುವನು. –ಮುಕ್ತಿ ಪ್ರದನಾದ ಅಂಥ ಶ್ರೀಹರಿಯು (ತಾನೇ ನಮ್ಮಲ್ಲಿ ನಿಂತು ಮಾಡಿ ಮಾಡಿಸುವ) (ಶ್ರೀಹರಿಯೆ ಕರ್ತೃ. ಆತನಿಗೇ ಸರ್ವ ಸಮರ್ಪಣ ಎಂಬ ಭಾವನೆಯಿಂದ)ನಾವು ಮಾಡುವ ಕರ್ಮಗಳಿಂದ ಸಂತುಷ್ಟನಾಗಲಿ. –ಇದರಿಂದ, ಶ್ರೀಹರಿಯೆ ಕರ್ತೃ, ಎಂಬ ಭಾವನೆಯಿಂದ ಸಕಲ ಕರ್ಮಗಳನ್ನು ಮಾಡುವದೇ ಭಾಗವತ ಧರ್ಮದ ನಾಲ್ಕನೆಯ ಲಕ್ಷಣವೆಂದು ಸೂಚಿಸಲಾಯಿತು.

ತ್ರಿವಿಧ ಜೀವಿಗಳನ್ನು ಸಂಸಾರ ಪಾಶದಿಂದ ಮುಕ್ತರನ್ನಾಗಿ ಮಾಡುವ ಉದ್ದೇಶದಿಂದಲೆ ಭಗವಂತನು ಭಾಗವತ ಧರ್ಮವನ್ನು ರಚಿಸಿದನೆಂಬುವು ಭಾಗವತ ಧರ್ಮದ ಪ್ರಧಾನ (ಮುಖ್ಯ) ಲಕ್ಷಣವಾಗಿರುವದೆಂದು ಹೇಳಿದ ನಂತರ ಒಂದು ಆಕ್ಷೇಪ:- ಸ್ವಾಭಾವಿಕವಾಗಿಯೇ ಬಂಧಕವಾಗಿರುವ ಕರ್ಮವು (ಬಿಡುಗಡೆಯ ರೂಪವಾದ ಮೋಕ್ಷಕ್ಕೆ ಹೇಗೆ ಸಾಧನವಾಗುವದು ? –ಇದಕ್ಕೆ ಉತ್ತರ ಪಿದು:- ಶುದ್ಧೀಕರಣದ ಸಂಸ್ಕಾರವಿಲ್ಲದೆ ಸೇವಿಸುವ ಒಂದು ಭೌತಿಕ ವಸ್ತು ರೋಗವನ್ನು ತಂದುಕೊಡುವದು. ಅದೇ ವಸ್ತುವನ್ನು ಔಷಧ ರೂಪವಾಗಿ ಶುದ್ಧೀಕರಿಸಿ, ಸಂಸ್ಕಾರ ಮಾಡಿ, ತೆಗೆದುಕೊಳಡರೆ, ಅದೇ ವಸ್ತುವಿನಿಂದಲೆ ರೋಗದ ನಿವಾರಣೆಯಾಗಬಲ್ಲುದು. ಇದೇ ರೀತಿಯಲ್ಲಿಯೇ, ಬಂಧಕ ಸ್ವಭಾವದ ಕರ್ಮವು ಕೂಡ ಒಂದು ಬಗೆಯ ಸಂಸ್ಕಾರ ಪಡೆದು ಮುಕ್ತಿಯನ್ನು ತಂದು ಕೊಡಬಲ್ಲದು. ಅಪವರ್ಗ–ಇಲ್ಲವೆ-'ಮುಕ್ತಿ' ಎಂದರೇನು ? –ನನಗೆ ಕೇವಲ ಸುಖವೇ ಆಗಲಿ, ಎಳ್ಳಷ್ಟೂ ದುಃಖವಾಗದಿರಲಿ, ಎಂಬುದೆ ಮುಕ್ತಿ. ಹೀಗಾಗಬೇಕೆಂದು ಎಲ್ಲರೂ ಬಯಸುವರು. ಆದರೆ ಕ್ರಿಯಾಶೀಲರಾದ ಮಾನವರು ಕರ್ಮವನ್ನು ಮಾಡುತ್ತಲೇ ಇರುವರು. ಏಕೆಂದರೆ ಏನೂ ಕರ್ಮ ಮಾಡದ ಮಾನವನು ಬಂದರಗಳಿಗೆ ಕೂಡ ಬದುಕನು, ಉಳಿಯಲಾರನು. ಸರ್ವಜ್ಞನಾದ ಭಗವಂತನು ಮಾನವರು ಈ ಸಂಕಟದಿಂದ ಬಳಲುವದನ್ನು ಕಂಡು, ಕನಿಕರಪಟ್ಟು, ಅದೇ (ಬಂಧಕ) ಕರ್ಮಕ್ಕೆ (ಬಂಧನ ನಾಶಕವಾದ) ಸಮುಚಿತ ಸಂಸ್ಕಾರವನ್ನು ಕೊಟ್ಟಿರುವನು. ಭಗವಂತನಿಂದ ಸಂಸ್ಕಾರವನ್ನು ಪಡೆದು (ಬಂಧಕವಾಗಿರುವ) ಶುದ್ಧಗೊಳಿಸಿದ ಕರ್ಮವೆ ಭಾಗವತ ಧರ್ಮವೆಂದು ಹೇಳಲ್ಪಡುತ್ತಿದೆ. –ಎಲ್ಲರೂ ಬಯಸುವ ಮೋಕ್ಷಕ್ಕೆ ಎರಡು ದಳಗಳು, ಎರಡು ಎಸಳುಗಳು: ಯಾವಾಗಲೂ ಸುಖವೇ ಆಗಲಿ, ಕಿಂಚಿತ್ತೂ ದುಃಖವಾಗದಿರಲಿ. ಕರ್ಮಕ್ಕೆ ಭಗವಂತನು ಕೊಡುವ ಸಂಸ್ಕಾರದಿಂದ, (ಉಪಚಾರದಿಂದ) (ಮೋಕ್ಷದ) ಎರಡನೆ ದಳದ (ಎನಿತೂ ದುಃಖವಾಗದಿರಲಿ) ಎಂಬುದರ ಪ್ರಾಪ್ತಿಯುಂಟಾಗುವದು. (ಬಂಧನ ರಹಿತವಾದ ಕರ್ಮವು

ದುಃಖವನ್ನೇ ಉಂಟು ಮಾಡಲಾರದು). ಈ ಅಭಿಪ್ರಾಯದಿಂದ, (ದುಃಖವು ಹೇಗೆ ಆಗುವದಿಲ್ಲ?) ಎಂಬ ಶಂಕೆಗೆ ಸಮಾಧಾನ ಹೇಳುವರು. (ನಾನು ಮಾಡುವವನು) ಎಂಬ ಅಹಂಕಾರ ಹಾಗೂ ಮಮಕಾರಗಳನ್ನು ಬಿಟ್ಟು ಕರ್ಮ ಮಾಡುವದೇ ಭಾಗವತ ಧರ್ಮದ ಎರಡನೆಯ ಲಕ್ಷಣವಾಗಿದೆ. -ಅದೇ ಲಕ್ಷಣವಾಗಿರಲಿ - ಈ ವಿಚಾರವನ್ನೇ ಲೌಕಿಕ ಉದಾಹರಣೆಯಿಂದ ತಿಳಿಸಿ ಹೇಳುವರು :- ತನ್ನ ದ್ರವ್ಯವನ್ನು ಕದ್ದ ಕಳ್ಳನಿಗೆ, ಆತನು ಕದ್ದ ದ್ರವ್ಯವನ್ನು ತನಗೆ ತಿರುಗಿ ಬಿಟ್ಟು ಕೊಡುವವರೆಗೆ, ರಾಜನು ಬೆತ್ತ ಬಾರುಕೋಲುಗಳಿಂದ ಚನ್ನಾಗಿ ಥಳಿಸುವನು. ಅಹಂಕರ್ತೃತ್ವದ ಕಳ್ಳನು (ಭಗವಂತನಿಗೆ ಮೀಸಲಾಗಿರುವ ಸರ್ವ ಕರ್ತೃತ್ವವೆಂಬ) ದ್ರವ್ಯವನ್ನು ಕಳವು ಮಾಡಿದರೆ, (ನಾನೇ ಕರ್ತೃ-ಎಂದು ಭಾವಿಸಿದರೆ, ರಾಜನಾದ ಭಗವಂತನು ಅಂಥ ಕಳ್ಳನನ್ನು ಸಂಸಾರವೆಂಬ ಕಾರಾಗ್ರಹದಲ್ಲಿ ಬಂಧಿಸಿ, ಅಹಂಕರ್ತೃತ್ವವೆಂಬ ಕದ್ದ ದ್ರವ್ಯವನ್ನು ತಿರುಗಿ ಬಿಟ್ಟುಕೊಡುವವರೆಗೆ ಆ ಕಳ್ಳನಿಗೆ ದುಃಖವಾಗುವಂತೆ ಮಾಡುವನು. 'ನಾನೇ ಕರ್ತಾ'-ಎಂಬ ಕದ್ದ ದ್ರವ್ಯವನ್ನು ಸಂಸಾರಿಯಾದ ಕಳ್ಳನು ಬಿಟ್ಟುಕೊಟ್ಟ ನಂತರ, ಆತನಿಗೆಲ್ಲಿಯ ದುಃಖ? -ದುಃಖದ ಕಾರಣವೇ ಕಳಚಿ ಹೋಗುವದು. -ನಾನು ಮಾಡುವೆನೆಂಬ ಅಭಿಮಾನವನ್ನು ಚೆಲ್ಲಿ ಕೊಟ್ಟು ಮಾಡುವ ಕರ್ಮದಿಂದ ದುಃಖವೆಂಬುದೇ ಇಲ್ಲದಂತಾಗುವದು. -ಇದುವೇ ದುಃಖ ನಿವೃತ್ತಿಯೆಂಬ ಮುಕ್ತಿಯ ಎರಡನೆಯ ದಳಕ್ಕೆ, ಅಂಗಕ್ಕೆ ಕಾರಣವಾಗಿ ಬಿಡುವದು. -ನನಗೆ ಯಾವಾಗಲೂ ಸುಖವಾಗಲಿ' ಎಂಬ ಮುಕ್ತಿಯ ಎರಡನೆಯ ದಳವು (ಫಲವು) ಹೇಗೆ ಸಿದ್ಧಿಸುವದು? ಎಂಬುದನ್ನು ಹೇಳುವರು. ಕದ್ದ ತನ್ನ ದ್ರವ್ಯವನ್ನು ಬಿಟ್ಟುಕೊಟ್ಟ ಕಳ್ಳನಿಗೆ ರಾಜನು ಯಾವ ಕಲ್ಯಾಣವನ್ನೂ ಮಾಡುವದಿಲ್ಲ. 'ಎಲ್ಲಿಯಾದರೂ ಬದುಕಿರು' ಎಂದು ಹೇಳಿ ಕನಿಕರದಿಂದ ಅವನನ್ನು ತಳ್ಳಿಬಿಡುವನು ಮಾತ್ರ. ಹೀಗಿರಲು, ಅಹಂ ಕರ್ತೃತ್ವ ಬಿಟ್ಟ ಕಳ್ಳ ಸಂಸ್ಸಾರಿಗೆ ರಾಜನಾದ ಪರಮಾತ್ಮನು ( ಮುಕ್ತಿಯ ) ಮೊದಲನೆಯ ದಳವಾದ ಶಾಶ್ವತ ಸಂಖವನ್ನು ಹೇಗೆ ಕೊಡುವನು ? ಎಂಬ ಸಂಶಯದ ನಿವಾರಣೆ ಮಾಡುವರು :-

ತಾನು ಮಾಡಿದ ಕಳವಿಗಾಗಿ ನಿಜವಾಗಿಯೂ ಪಶ್ಚಾತ್ತಾಪ ಪಟ್ಟು, ಅದೇ ಕಳ್ಳನು ರಾಜನ ಸೇವೆಯನ್ನು ಕಳಕಳಿಯಿಂದ ಮಾಡಿದರೆ, ಆ ರಾಜನೇ ಆತನ ಸೇವೆಗೆ ತುಂಬಾ ಮೆಚ್ಚಿ, ಆತನು ಬಯಸಿದುದೆಲ್ಲವನ್ನು ಕೊಟ್ಟು ಬಿಡುವನು. ಅದರಂತೆಯೆ ಸಂಸಾರಿಯು ತನ್ನ ಅಹಂಕಾರಕ್ಕೆ ಪರಿತಪಿಸಿ ಪ್ರಭುವಾದ ಪರಮೇಶ್ವರನು ಎಲ್ಲವನ್ನು ಮಾಡಿ ಮಾಡಿಸುವನೆಂಬ ಶ್ರದ್ಧೆಯಿಂದ ಸಕಲ ಕರ್ಮಗಳನ್ನೂ ಆತನಿಗೆ ಸಮರ್ಪಿಸಿದರೆ, ಭಗವಂತನು ಶಾಶ್ವತ ಸುಖರೂಪವಾದ ಮುಕ್ತಿಯನ್ನು ಆತನಿಗೆ ಅನುಗ್ರಹಿಸುವನು. ಇದರಿಂದ ಶ್ರೀ ಹರಿಪೂಜೆಯೆಂಬ ಅನುಸಂಧಾನ

ದಿಂದ ಕರ್ಮಮಾಡುವದೇ ಭಾಗವತ ಧರ್ಮದ ಮೂರನೆಯ ಲಕ್ಷಣವು. ಇದೇ ಭಾವನೆಯಿಂದಲೇ ಶ್ರೀ ಹರಿಯೆ ಕರ್ತೃವೆಂಬ ಭಾವನೆಯಿಂದ ಮಾಡುವುದೇ ಭಾಗವತ ಧರ್ಮದ ನಾಲ್ಕನೆಯ ಲಕ್ಷಣ -ವೆಂಬುದು ಸೂಚಿತವಾಗುವದು. ಹೀಗೆ ಹೇಳಿರುವರು. 'ಏತತ್ ಸಂಸೂಚಿತಂ .. ಬ್ರಹ್ಮಣಿ ಭಾವಿತಂ (೧-೫-೩೨) ಹಾಗೂ-'ಏವಂ ನೃಣಾಂ .... ಕಲ್ಪಿತಾಃಪರೇ (೧-೫-೩೪) :-

(ಅಹಂಕಾರ ರಹಿತವಾದ) ಸಕಲ ಸತ್ಕರ್ಮಗಳನ್ನು ಗುಣ ಪೂರ್ಣನಾದ ಶ್ರೀಹರಿಯ ಪಾದಕ್ಕೆ ಸಮರ್ಪಿಸುವದು :- ಕ್ರಿಯಾಶೀಲರಾದ ಮಾನವರು(ಸದಾ) ಮಾಡುವ ಸಕಲ ಕರ್ಮಗಳೂ ಸಂಸಾರವೆಂಬ ಬಂಧನಕ್ಕೆ ಕಾರಣವಾಗಿರುವವು ಜನರು ಬಳಲುತ್ತಿರುವ ಮೂರು ವಿಧ ತಾಪಗಳಿಗೆ ಇದುವೇ ಯೋಗ್ಯ ನಿದಾನ-ಉಪಾಯವಾಗಿದೆ. ಯಾವ ವಸ್ತುವು ಸುತ್ತುಗಟ್ಟುವದರಿಂದ ರೋಗ ಉತ್ಪನ್ನವಾಗುವದೊ, ಅದೇ ವಸ್ತುವಿಗೆ ಒಳ್ಳೇ ಚಿಕಿತ್ಸೆಯಿಂದ ಸಂಸ್ಕಾರಕೊಟ್ಟರೆ, ರೋಗವನ್ನು ನಿವಾರಿಸುವದು. (೧-೫-೩೪).

**॥೨೪॥ ಅಥಾಪಿ ಯತ್ಪಾದನಖಾವಸೃಷ್ಟಂ** ಸೂತರು

**ಜಗದ್ವಿರಿಂಚೋಪಹೃತಾರ್ಹಣಾಂಭಃ ।**

**ಸೇಶಂ ಪುನಾತ್ಯನ್ಯತಮೋ ಮುಕುಂದಾತ್**

**ಕೋ ನಾಮ ಲೋಕೇ ಭಗವತ್ಪದಾರ್ಥಃ ॥ ೧-೧೮-೨೧**

ಭಗವತ್ ಎಂಬ ಶಬ್ದವು ಶ್ರೀ ವಿಷ್ಣುವಿಗೆ ಮಾತ್ರ ಮುಖ್ಯಾರ್ಥದಲ್ಲಿ ಹೇಗೆ ಮೀಸಲಾಗಿದೆ. ಎಂಬುದನ್ನು ಸೂತರು ಶೌನಕಾದಿಗಳಿಗೆ ತಿಳಿಸಿಕೊಡುತ್ತಾರೆ-

**ಅರ್ಥ;-** ಅದೇನೆ ಇರಲಿ! ಬ್ರಹ್ಮದೇವರು ಶ್ರೀಹರಿಗೆ ಪಾದಾಭಿಷೇಕ ಮಾಡಿದರು. ಶ್ರೀಹರಿಯ ಪಾದದ ಉಗುರುಗಳಿಂದ ಹೊರಚೆಲ್ಲಿದ (ಹರಿಪಾದೋದಕದ) ಆ ನೀರನ್ನು ರುದ್ರದೇವರು ತಮ್ಮ ಶಿರಸ್ಸಿನಲ್ಲಿ ಧರಿಸಿ ಪಾವನರಾದರು. ಅದೇ ಶ್ರೀಹರಿ ಪಾದೋದಕವು (ಸುರನದಿಯಾದ ಗಂಗೆಯೆಂಬ ಹೆಸರಿನಿಂದ) ರುದ್ರದೇವರೊಡನೆ ಜಗತ್ತನ್ನು ಕೂಡ ಪವಿತ್ರವನ್ನಾಗಿ ಮಾಡುತ್ತಿದೆ. ಅಂಥ (ಮಹಿಮೆಯಿಂದ ಕೂಡಿದ) ಶ್ರೀ ಮುಕುಂದನನ್ನು ಬಿಟ್ಟು ಬೇರೆ ಯಾವ ಪುರಷನು 'ಭಗವತ್' ಎಂಬ ಶಬ್ದಕ್ಕೆ ಪಾತ್ರನಾಗುವನು? -ಮೋಕ್ಷದಾಯಕನಾದ ಶ್ರೀ ಮುಕುಂದನೇ ಭಗವತ್ ಶಬ್ದಕ್ಕೆ ಮುಖ್ಯವಾಗಿ ಅರ್ಹತೆಯುಳ್ಳವನು, ಬೇರೆ ಯಾರೂ ಅಗರು, ಎಂಬುದೇ ಅರ್ಥ-

'ಧರ್ಮಂತು ಸಾಕ್ಷಾತ್' (೬-೩-೧೯), 'ಯೇ ವೈ ಭಗವತಾ ಪ್ರೋಕ್ತಾ:' (೧೧-೨-೩೪); 'ಧರ್ಮಾನ್ ಭಾಗವತಾನ್' (೧೧-೨-೩೨); 'ಅಥ ಭಾಗವತಂ ಬ್ರೂತ' (೧೧-೨-೪೪); 'ಏಷ ಭಾಗವತೋತ್ತಮಃ' (೧೧-೨.೪೫) -ಇದೇ ಮುಂತಾದ ಭಾಗವತ ಶ್ಲೋಕಗಳಲ್ಲಿ - ಭಗವಂತನಿಗೆ, ಭಾಗವತ ಧರ್ಮಕ್ಕೆ, ಭಗವಂತನ ಬಗ್ಗೆ ಬಂದಿರುವ ಸಂದರ್ಭಗಳಲ್ಲಿ 'ಶ್ರೇಷ್ಠ-ಅತ್ಯುತ್ತಮ' ಎಂಬ ಅರ್ಥದಲ್ಲಿ 'ಭಗವತ್' ಶಬ್ದವನ್ನು ಅಲ್ಲಲ್ಲಿ ಬಳಸಲಾಗಿದೆ. ಈ ಭಗವತ್ ಶಬ್ದವು ನೀವು ಹೇಳುವಂತೆ -ಶ್ರೀ ವಿಷ್ಣುವಿಗೇನೇ ಮೀಸಲುವಾದುದು ಎಂಬುದು ಏಕೆ? ಇನ್ನೊಬ್ಬರ ವಿಷಯಗಳಲ್ಲಿಯೂ ಆ ಶಬ್ದವನ್ನು ಏಕೆ ಉಪಯೋಗಿಸಬಾರದು ? -ನಾಸ್ತಿಕ ಮತದಿಂದ ದೂಷಿತ ಮನಸ್ಸಿನ ಯಾರೋ ಒಬ್ಬರು ಹೀಗೆ ಸಂದೇಹವನ್ನು ಹೇಳಬಹುದು. ಈ ಸಂದೇಹವನ್ನು ನಿವಾರಿಸಲು ಹೀಗೆ ಹೇಳುವರು. -(ಅಥಾಪಿ ಇತಿ) ಮುಕುಂದನನ್ನು ಬಿಟ್ಟು ಮತ್ತೊಬ್ಬರಿಗೆ ಭಗವತ್ ಶಬ್ದವು ಅನ್ವಯಿಸದು. ಏಕೆಂದರೆ, ಪರಂಪರೆಯಿಂದ ಪ್ರಸಿದ್ಧವಾಗಿ ಬಂದಿರುವ ಅರ್ಥವೇ ಯಾವುದಾದರೂ ಶಬ್ದಕ್ಕೆ ಹೊಂದಿಕೊಳ್ಳುತ್ತದೆ. ಉದಾಹರಣೆಗೆ, 'ಪಂಕಜ' ವೆಂದರೆ ಕೆಸರಿನಲ್ಲಿ ಹುಟ್ಟಿದ್ದು. ಕೆಸರಿನಲ್ಲಿ ಕ್ರಿಮಿ, ಕಪ್ಪೆ, ಕಸ-ಮುಂತಾದವೂ ಹುಟ್ಟುತ್ತವೆ. ಆದರೆ ಪಂಕಜಕ್ಕೆ ಕಮಲವೆಂಬುದೇ ಪ್ರಸಿದ್ಧವಾದ, ಗ್ರಾಹ್ಯವಾದ ಅರ್ಥ. ಕಪ್ಪೆಗೆ ಪಂಕಜವೆಂದು ಯಾರೂ ಕರೆಯುವದಿಲ್ಲ. ಭಗವಂತನೆಂದರೆ ಮುಕುಂದನೆ, ಬೇರೊಬ್ಬನಲ್ಲ. ಮುಕ್ತಿದಾಯಕನಾದ ಮುಕುಂದನೇ ಶ್ರೀ ವಿಷ್ಣುವೆಂಬುದು, ಇನ್ನೂ ಹೆಚ್ಚಿಗೆ ವಿಖ್ಯಾತವಾಗಿದೆ. ಶ್ರೀ ಭಗವದ್ಗೀತೆ ಮುಂತಾದ ಸದ್ಗ್ರಂಥಗಳಲ್ಲಿ 'ಭಗವಾನ್ ಉವಾಚ' -ಎಂದು ಹೇಳಿದಾಗ್ಗೆ ಭಗವಾನ್ ಶಬ್ದಕ್ಕೆ ವಿಷ್ಣುವೆಂಬುದೇ ಪ್ರತೀತವಾಗುತ್ತಿದೆ. ಇಲ್ಲವಾದರೆ ಪರಂಪರೆಯಿಂದ ಪ್ರಸಿದ್ಧವಾಗಿರುವ ಅರ್ಥಕ್ಕೆ ಬಾಧೆ ತಟ್ಟುವದು. ಅಂತೆಯೆ 'ಲೋಕೇ', ಎಂದರೆ ಲೋಕದಲ್ಲಿ ಪ್ರಸಿದ್ಧಾರ್ಥವನ್ನೇ ಎಲ್ಲೆಡೆಗೆ ಗ್ರಹಿಸುವರು. ಪ್ರಸಿದ್ಧಿ-ಅಥವಾ ಲೋಕ ರೂಢಿಯ ಬಲದಿಂದ ಮುಕುಂದನೇ ಭಗವತ್ ಪದಕ್ಕೆ ಅರ್ಥವಾಗಿರಲಿ. ಆದರೆ ವ್ಯುತ್ಪತ್ತಿಯಿಂದ ಶಬ್ದಾರ್ಥ (ಯೌಗಿಕ ಅರ್ಥ)ವನ್ನೇ ಇಟ್ಟುಕೊಂಡರೆ, ಭಗವಾನ್ ಶಬ್ದಕ್ಕೆ ಐಶ್ವರ್ಯಾದಿ ಗುಣವುಳ್ಳವನು -ಎಂಬ ಅರ್ಥವೇ ಹೊರಡುವದಿಲ್ಲವೆ! ಐಶ್ವರ್ಯಾದಿ ಗುಣವುಳ್ಳವನೆಂದರೆ ಮುಕುಂದನೊಬ್ಬನೆ ಏಕೆ? (ಮುಕುಂದನೆಂಬ) ರೂಢಾರ್ಥವನ್ನು ಬಿಟ್ಟುಕೊಟ್ಟರೆ ಬಾಧಕವೇನೂ ಇಲ್ಲ. ಬಾಧಕವೆಂದು ಹೇಳುವುದು ಸರ್ವತ್ರ ಸುಲಭವಾದದ್ದು. ಎಂಬ ಮಾತನ್ನು ಒಪ್ಪಿಕೊಂಡರೂ, ಆ ಬಾಧಕಕ್ಕೆ ಯೋಗ್ಯವಾದ ಸಮಾಧಾನ ಹೇಳುವರು. 'ಮುಕುಂದಾತ್' ಎಂಬುದರಿಂದ -ಐಶ್ವರ್ಯಾದಿ ಗುಣಗಳಿಂದ ಯುಕ್ತನಾದವನೆ

ಭಗವಂತನೆಂಬ ಮಾತು ನಿಮಗೂ ಒಪ್ಪಿಗೆಯಾಗಿದೆ. ಈ ಗುಣಗಳು ಪ್ರಾಮು ಖ್ಯವಾಗಿ ಇರುವವನೆಂದರೆ ಮುಕುಂದನೇ. ಆದುದರಿಂದ ಉಳಿದವರನ್ನೆಲ್ಲ ಬದಿ ಗಿಟ್ಟು ಆತನನ್ನೇ ತಗೆದುಕೊಳ್ಳಬೇಕಾಗುವದು. ಮುಕ್ತಿಯನ್ನು ಕೊಡಲು ಸಮ ರ್ಥರಾಗದಿರುವವರಿಗೆ, ಸಮಗ್ರ ಐಶ್ವರ್ಯಾದಿ ಗುಣವುಳ್ಳವರೆಂದು ಹೇಗೆ ಹೇಳಲು ಬಂದೀತು ? ಮುಕುಂದನೊಬ್ಬನೇ 'ಭವಪಾಶಾತ್ ಮೋಚಕಃ' ಮುಕ್ತಿಯನ್ನು ಕೊಡಲು ಶಕ್ತನಾದವನು. ಸಮಗ್ರ ಐಶ್ವರ್ಯಾದಿ ಗುಣಗಳು ಆತನಲ್ಲಿ ಇಲ್ಲ ವೆಂದು ಹೇಳಲುಬಾರದು. ಶಬ್ದಾರ್ಥವನ್ನೇ ಇಟ್ಟುಕೊಂಡರೂ, ಭಗವತ್ ಶಬ್ದಕ್ಕೆ ಮುಕುಂದನೇದೇ ಅರ್ಥೈಸಬೇಕು. ಈ ಅಭಿಪ್ರಾಯದಿಂದಲೆ, 'ಮುಕುಂ ದಾತ್' ಎಂದು ಹೇಳಿರುವರು.-ಇನ್ನೊಂದು ರೀತಿಯಿಂದಲೂ, ಭಗವಂತನೆಂದರೆ ಮುಕುಂದನೇ ಎಂಬುದನ್ನು ತಿಳಿಸುವರು. ಮುಕ್ತಿಯನ್ನು ಕೊಡಬಲ್ಲ ಮುಕುಂ ದನಿಂದ ಭಗವತ್ ಪದಕ್ಕೆ ಯೋಗ್ಯರಾದವರು ಬೇರೆ ಯಾರಿರುವರು ? ಆದರೂ ಯಾರಾದರೂ ಇರಬಹುದಲ್ಲವೆ? ಏಕೆಂದರೆ, ಭಗವತ್ ಶಬ್ದಕ್ಕೆ ಅನೇಕ ಅರ್ಥ ಗಳಿರುವವು. ಅವುಗಳಲ್ಲಿ, 'ಭಗವತ್' ಎಂಬ ಶಬ್ದಕ್ಕೆ 'ಪೂಜ್ಯ'- ಪೂಜಿಸಲು ಆರಾಧಿಸಲು ಯೋಗ್ಯ'-ವೆಂಬ ಅರ್ಥವನ್ನು ವಿಚಾರಿಸೋಣ. ಪೂಜ್ಯ ಎಂಬ ಅರ್ಥದಲ್ಲಿ ಆ ಶಬ್ದವನ್ನು ಅನೇಕಶಃ ಬಳಸುವದು ಕಂಡುಬರುವದು. ಕೋಶಕಾ ರನಾದ ಹಲಧರನು ಕೂಡ 'ಭಗವತ್' ಎಂದರೆ 'ಪೂಜ್ಯ'ವೆಂಬ ಅರ್ಥವನ್ನು ಹೇಳಿ ರುವನು. ಅದಿರಲಿ! ಮುಕುಂದನೇ ಪೂಜ್ಯನೆಂಬುದು ಹೇಗೆ, ಮತ್ತೊಬ್ಬರೂ ಪೂಜ್ಯ ರಿರಬಹುದಲ್ಲವೆ ? ಎಂಬ ಸಂದೇಹವುಳ್ಳವರಿಗೆ ಈ ಪ್ರಶ್ನೆ ಕೇಳಬೇಕು ? (ಮುಕುಂದನನ್ನು ಬಿಟ್ಟು) ಇನ್ನೊಬ್ಬರು ಪೂಜ್ಯರು ಯಾರು ? ಹರಿ, ಹರ, ಬ್ರಹ್ಮರು ಪೂಜ್ಯರೆಂಬುವದು ಲೋಕದಲ್ಲಿ ಪ್ರಸಿದ್ಧವಾಗಿದೆ. ಭಗವತ್ ಶಬ್ದವನ್ನು 'ಪೂಜ್ಯ' ಎಂಬ ಅರ್ಥದಲ್ಲಿ ಈ ಮೂವರಿಗೂ ಬಳಸಬಹುದಲ್ಲವೆ ? ಶ್ರೀ ಹರಿ ಯೊಬ್ಬನೇ ಪೂಜ್ಯನೆಂಬ ಈ ಹಟವೇಕೆ ? ಹೀಗೆ ಪ್ರಶ್ನಿಸುವರಿಗೆ ಉತ್ತರ ಕೊಡು ವರು :- 'ಅಥಾಪಿ ಇತಿ' ;- ಪೂಜ್ಯವೆಂಬ ಅರ್ಥವೂ ಶ್ರೀ ಹರಿಯನ್ನು ಬಿಟ್ಟು ಈ ಲೋಕದಲ್ಲಿ ಇನ್ನೊಬ್ಬರಿಗೆ ಯಾರಿಗೂ ಹೊಂದಿಕೆಯಾಗದು. ಏಕೆಂದರೆ, ಶ್ರೀ ಹರಿಯ ಪಾದಾಂಗುಷ್ಠದಿಂದ ಹೊರಚೆಲ್ಲಿದ ಪವಿತ್ರ ಉದಕದಿಂದ ಬ್ರಹ್ಮ ದೇವರು ಪಾದಾಭಿಷೇಕವನ್ನು ಮಾಡಿದರು. ಆ ಪಾದೋದಕವನ್ನೇ ರುದ್ರದೇವರು ಶಿರಸ್ಸಿನಲ್ಲಿ ಧರಿಸಿದರು. ಅದೇ ಪಾದೋದಕವು ರುದ್ರದೇವರೊಡನೆ ಜಗತ್ತನ್ನೂ (ಸುರನದಿಯಾಗಿ) ಪಾವನಗೊಳಿಸಿದೆ. ಆದುದರಿಂದ, ಪೂಜ್ಯವೆಂಬ ಅರ್ಥದ ಲ್ಲಿಯೂ, ಪೂಜ್ಯತಮನಾದ ಶ್ರೀ ಮುಕುಂದನಿಗೇನೆ ಪ್ರಾಮುಖ್ಯವಾಗಿ ಸಲ್ಲುವದು ಒಟ್ಟಾರೆ ಹೇಳುವದೆಂದರೆ, ಹರಿಹರಬ್ರಹ್ಮರು ವಿಷ್ಣುವಿಗೆ ಸರಿಸಮರಾಗಿರದ್ದ, ಪೂಜ್ಯ

ವೆಂಬ ಅರ್ಥದಲ್ಲಿ ಭಗವತ್ ಶಬ್ದವನ್ನು ಅವರಿಗೂ ಹೊಂದಿಸಬಹುದಿತ್ತು. ಆದರೆ ಹಾಗಿರುವದಿಲ್ಲ. ಇವರಲ್ಲಿ ಬ್ರಹ್ಮನು ಪೂಜಕ- ಶ್ರೀ ಹರಿಯನ್ನು ಪೂಜಿಸುವವನು. ರುದ್ರದೇವರು ಸಾಮಾನ್ಯ ಜನರ ರೀತಿಯಲ್ಲಿ ಶ್ರೀ ಹರಿ ಪಾದೋದಕವನ್ನು ಶಿರಸಾ ಗ್ರಹಿಸಿ ಪವಿತ್ರರಾದವರು. 'ಶ್ರೀಹರಿ ಪಾದಾಭಿಷೇಕದಿಂದ ಅತಿ ಪವಿತ್ರವಾದ ಜಲ ವನ್ನೇ ಶಿರಸಾಧರಿಸಿ ಶಿವನು ಶಿವನಾದನು- ಮಂಗಳದಾಯಕನಾದನು' – (ಯತ್ ಶೌಚನಿಃಸೃತ ಶಿವಃ ಅಭೂತ್) (೩-೨೮-೨೨)

॥೨೪೫॥ ತಮೇವ ಯೂಯಂ ಭಜತಾತ್ಮವೃತ್ತಿಭಿ- ಪೃಥು ರಾಜ
ರ್ಮನೋವಚಃ ಕಾಯಗುಣೈಃ ಸ್ವಕರ್ಮಭಿಃ । ಪ್ರಜೆಗೆ
ಅಮಾಯಿನಃ ಕಾಮದುಘಾಂಘ್ರಿಪಂಕಜಂ
ಯಥಾಧಿಕಾರಾವಸಿತಾರ್ಥ ಸಿದ್ಧಯೇ ॥ ೪-೨೦-೩೨
33

ಪೃಥು ಚಕ್ರವರ್ತಿಯು ತನ್ನ ಪ್ರಜೆಗಳಿಗೆ ಮಾಡಿದ ಹಿತೋಪದೇಶವಿದು.

ಅರ್ಥ :- ('ಋಜು'-ವಾಗಿರುವದೇ ಆರ್ಜವವು- ಎಂದರೆ ಮನಸ್ಸಿನಲ್ಲಿ ಒಂದು, ಮಾತಿನಲ್ಲಿ ಮತ್ತೊಂದು, ಕೃತಿಯಲ್ಲಿ ಮಗದೊಂದಾಗಿರದೆ, 'ಕಾಯಾ ವಾಚಾ, ಮನಸಾ' ಈ ತ್ರಿಕರಣಗಳಲ್ಲಿ ಏಕ ಪ್ರಕಾರವಾಗಿರುವದು, ಒಂದೇ ವಿಧ ವಾಗಿರುವದು – ಈ ಬಗೆಯ ಆರ್ಜವ (ಏಕೋಭಾವನೆಯಿಂದ) ಮಾಡುವ ಧರ್ಮವೆ ಅನಂತ – ಶಾಶ್ವತವಾದ – ಫಲವನ್ನು ತಂದುಕೊಡುವದು, ಎಂಬುದನ್ನು ತೋರಿಸುವರು.) ನಿಮ್ಮ ಮನಸ್ಸು, ವಾಣಿ, ದೇಹಗಳ ಪ್ರವೃತ್ತಿಯನ್ನು ಶ್ರೀ ಹರಿ ಯಲ್ಲಿಯೇ ಲೀನಗೊಳಿಸಿ, (ಪೂರ್ಣವಾಗಿ ತೊಡಗಿಸಿ) ಮಾಡುವ ಶಾಸ್ತ್ರವಿಹಿತ ಕರ್ಮಗಳಿಂದ, ದೋಷವಿಲ್ಲದವರಾಗಿ, (ನಿಮ್ಮ ನಿಮ್ಮ ಯೋಗ್ಯತೆಗೆ ಮಿಕ್ಕದಿರುವ) ಯಥಾಯೋಗ್ಯವಾದ ಪುರುಷಾರ್ಥವನ್ನು ಪಡೆಯಲು) (ಬಯಸಿದ್ದನ್ನು ಕೊಡುವ) ಕಾಮಧೇನುವಾಗಿರುವ ಆತನ (ಶ್ರೀ ಹರಿಯ) ಪಾದಕಮಲವನ್ನೇ (ನಿಷ್ಠೆಯಿಂದ) ಆಶ್ರಯಿಸಿರಿ – ಮಾಯೆ ಎಂದರೆ ಕಪಟತನ, ಡಾಂಭಿಕತನ. ಅದಿಲ್ಲದ ಕರ್ಮ ಗಳನ್ನು ಮಾಡುವದೇ ಆರ್ಜವವು. ಆರ್ಜವದಿಂದ ಮಾಡುವ ಶ್ರೀಹರಿ ಸೇವೆಯೆ ನಿತ್ಯಪುರುಷಾರ್ಥ ತಂದು ಕೊಡುವದು. ಈ ಬಗೆಯ ನಿರ್ವಂಚನೆಯನ್ನು (ಆರ್ಜವವನ್ನು) ಅಗತ್ಯವಾಗಿ ಪಡೆಯಲೇಬೇಕೆಂಬುವದನ್ನು ಸೂಚಿಸುವರು.

॥೨೪೬॥ ಸ ವೇದ ಧಾತುಃ ಪದವೀಂ ಪರಸ್ಯ ಸೂತನು
ದುರಂತವೀರ್ಯಸ್ಯ ರಥಾಂಗಪಾಣೇಃ ।

**ಯೋಽವಮಾಯಯಾ ಸಂತತಯಾನುವೃತ್ತ್ಯಾ**
**ಭಜೇತ ತತ್ಪಾದಸರೋಜಗಂಧಂ ॥** ೧-೩-೩೮

ಭಾಗವತ ಧರ್ಮಾಚರಣೆಯು, ಪುರುಷಾರ್ಥ ಪ್ರದವಾದ ಜ್ಞಾನವನ್ನು ಪಡೆಯಲು ಸಾಧಕವಾಗಿರುವದೆಂದು ಸೂತರು ಇಲ್ಲಿ ಹೇಳುವರು :-

**ಅರ್ಥ :-** ಚಕ್ರಧಾರಿಯೂ, ಅನಂತ ( ಅಪಾರ ) ಶಕ್ತಿಯುಳ್ಳವನೂ ಆಗಿರುವ ಶ್ರೀ ಹರಿಯ ಪಾದಕಮಲವನ್ನು ನಿರಂತರವಾಗಿ, ನಿಷ್ಕಪಟವಾಗಿ (ನಿಷ್ಠೆಯಿಂದ) ಸೇವಿಸುವವನು (ಭಾಗವತ ಧರ್ಮಗಳನ್ನು ಆಚರಿಸುವವನು),-(ಆತನ ಪಾದಕಮಲದ ಗಂಧವನ್ನು ಸೇವಿಸುವವನು, ಭಗವಂತನ ಅಗಮ್ಯ ಮಹಿಮೆಯನ್ನು ತಿಳಿದುಕೊಂಡು ಸಂತೋಷಪಡುವನು). ಜಗದ್ಧಾತೃವಾದ, ಭಕ್ತರಕ್ಷಕನಾದ ಪರಮಾತ್ಮನ ( ಪದವಿಯನ್ನು ) ನೈಜ-ತಾತ್ವಿಕ-ಸ್ವರೂಪವನ್ನು ತಿಳಿದುಕೊಳ್ಳುವನು.

॥೨೪೭॥ **ಇತ್ಥಂ ಹರಸ್ಯ ನಿಜಧರ್ಮರಿರಕ್ಷಯಾತ್ತ-**
**ಲೀಲಾತನೋಸ್ತದನುರೂಪವಿಡಂಬನಾನಿ ।**
**ಕರ್ಮಾಣಿ ಕರ್ಮಕಷಣಾನಿ ಯದೂತ್ತಮಸ್ಯ**
**ಗಾಯೇದಮುಷ್ಯ ಪದಯೋರನುವೃತ್ತಿಮಿಚ್ಛನ್ ॥** ೧೦-೧೦

ಭಾಗವತ ಧರ್ಮಗಳ ಅನುಷ್ಠಾನದಿಂದ, ಭಗವಂತನ ಬಗ್ಗೆ ನಿಶ್ಚಿತ ಜ್ಞಾನವಾಗಲು, ಭಗವದ್ಗುಣಗಾನವನ್ನು ನಿರಂತರವಾಗಿ ಮಾಡಬೇಕೆಂದು ಸೂತರು ಹೇಳಿರುವರು :-

**ಅರ್ಥ :-** ತಾನೇ ಹಾಕಿಕೊಟ್ಟ (ಭಾಗವತ) ಧರ್ಮದ ರಕ್ಷಣೆಗಾಗಿ ಭಗವಂತನು ಅನೇಕ (ಅನಂತ) ಅವತಾರಗಳನ್ನು ಧರಿಸುವನು. ತನ್ನ ಅವತಾರಗಳಲ್ಲಿ ಲೌಕಿಕ ಮಾನವರಂತೆ (ವಿಡಂಬನ) ಅದ್ಭುತ ಕೃತಿಗಳನ್ನು ಮಾಡುವನು. (ಇದುವರೆಗೆ ಹೇಳಿದ) ಪಾಪಪರಿಹಾರಕವಾದ ಭಗವಂತನ (ಯದುಶ್ರೇಷ್ಠನಾದ ಶ್ರೀ ಕೃಷ್ಣನ) ವಿಚಿತ್ರ ಲೀಲಾ ಕಾರ್ಯಗಳನ್ನು, ಭಗವಂತನ ಆರಾಧನೆ (ಸೇವೆ) ಮಾಡಲು ಬಯಸುವವರು ಸಂತತವಾಗಿ ಸಂಕೀರ್ತನ-ಧ್ಯಾನ ಮಾಡಬೇಕು.

ಭಾಗವತ ಧರ್ಮಗಳ ನಿಷ್ಠಾಪೂರ್ವಕ ಆಚರಣೆಗೇನೆ ಭಗವಂತನ ಸೇವೆ ಎಂಬುದು ಇನ್ನೊಂದು ಹೆಸರು. ಭಗವದ್ವಿಷಯಕ್ಕೆ ಜ್ಞಾನ ಮಾಡಿ ಕೊಡಲೂ

ಇದು ಸಾಧನವಾಗಿವೆ ಎಂದು ಹೇಳಿದೆ. ಅದನ್ನು ಅವಿರತವಾಗಿ ಹೆಚ್ಚಿಸಿಕೊಳ್ಳ ಬೇಕು ಹೇಗೆ ಹೆಚ್ಚಿಸಿಕೊಳ್ಳಬೇಕೆಂಬುವದನ್ನು ಇಲ್ಲಿ ಹೇಳಿರುವರು. ಶ್ರೀಹರಿಯ ಲೀಲಾಕೃತಿಗಳನ್ನು ಹೇಳುವದು, ಕೇಳುವದು, ಹೀಗೆ ಮಾಡುವದೇ ಶ್ರೀಹರಿಯ ಸೇವೆಗೆ ಸಾಧನವಾಗಿದೆ. ಇದರಿಂದ ಮೊದಲದೆಯ ಸಂದೇಹಕ್ಕೆ ಸಮಾಧಾನ ಹೇಳಿದಂತಾಯಿತು. ಮುಂದಿನ ಶ್ಲೋಕದಲ್ಲಿ ಎರಡನೆಯ ಶಂಕೆಗೆ ಸಮಾಧಾನ ವಿದೆ.

॥೨೪೪॥ **ಮರ್ತ್ಯಸ್ತಯಾನುಸವಮೇಧಿತಯಾನುವೃತ್ತ್ಯಾ**
**ಶ್ರೀಮತ್ಕಥಾಶ್ರವಣಕೀರ್ತನಚಿಂತಯೈತಿ ।**
**ತದ್ಧಾಮ ದುಸ್ತರಕೃತಂ ಜನತಾಪವರ್ಗಂ**
**ಗ್ರಾಮಾದ್ವನಂ ಕ್ಷಿತಿಭುಜೋಽಪಿ ಯಯುರ್ಯದರ್ಥೇ ॥**

೧೦-೧೦೩-(೪೦, ೫೧)

10-90-50

ಸ್ತೋತ್ರ
ಭಾ. ಉಪಸಂಹಾರ

**ಅರ್ಥ** :- (ಮರಣಾಧೀನನಾದ) ಮಾನವನು ಪ್ರತಿದಿನವೂ (ಯಾಮ ಗಳಲ್ಲಿ) (ದಿನದ ಮೂರು ಭಾಗಗಳಲ್ಲಿ) ಶ್ರೀರಮಣನ ಸಂಪತ್‌ಪ್ರದ (ಶ್ರೇಯಃ ಪ್ರದ) ವಾದ ಕಥೆಗಳ ಶ್ರವಣ-ಸಂಕೀರ್ತನಗಳಿಂದ) (ಕೇಳಿ ಹಾಗೂ ಗಾನ ಮಾಡುವದರಿಂದ ಆತನು ಮಾಡುವ ಶ್ರೀಹರಿಯ ಸೇವೆಯು ದಿನದಿನಕ್ಕೆ ಊರ್ಜಿ ತವಾಗುವದು ಅಂಥ ಊರ್ಜಿತವಾದ ಸೇವೆಯಿಂದ, ಯಾವುದರ ಪ್ರಾಪ್ತಿಗಾಗಿ ರಾಜ ಮಹಾರಾಜರು ನಗರವನ್ನು ಬಿಟ್ಟುಕೊಟ್ಟು ಅಡವಿಯನ್ನು ಆಶ್ರಯಿಸಿ ದರೊ, ಅಂಥಸುದು ಡುಲ. ಭವಾದ ಹಾಗೂ ಸತ್ಪಾತ್ರ ಜನರಿಗೆ ಮೋಕ್ಷದ ಆನಂದ ವನ್ನು ತಂದುಕೊಡುವಂಥ ದಿವ್ಯ (ಧಾಮ) ಸ್ಥಾನವನ್ನು (ಶ್ರೀಹರಿಯ ಲೀಲಾ ಕೃತಿ ಗಳ ಶ್ರವಣ ಸಂಕೀರ್ತನ, ಚಿಂತನ) ಮಾಡುವ ಮಾನವನು ಪಡೆಯುವನು.

॥೨೪೫॥ **ಶೃಣ್ವಂತಿ ಗಾಯಂತಿ ಗೃಣಂತ್ಯಭೀಕ್ಷ್ಣಶಃ**
**ಸ್ಮರಂತಿ ನಂದಂತಿ ತವೇಹಿತಂ ಜನಾಃ ।**
**ತ ಏವ ಪಶ್ಯಂತ್ಯಚಿರೇಣ ತಾವಕಂ**
**ಭವಪ್ರವಾಹೋಪರಮಂ ಪದಾಂಬುಜಂ ॥** ೧-೮-೩೬

ಕುಂತೀ
ಕೃಷ್ಣನಲ್ಲಿ

ಅಶ್ವತ್ಥಾಮನ ಬ್ರಹ್ಮಾಸ್ತ್ರಕ್ಕೆ ಗುರಿಯಾಗಿದ್ದ ಪರೀಕ್ಷಿತನನ್ನು ರಕ್ಷಿಸಿದ ಶ್ರೀ ಕೃಷ್ಣನನ್ನು ಕುಂತೀದೇವಿಯು ಸ್ತುತಿಸುವಳು.

ಪ್ರತಿದಿನವೂ (ಶ್ರೀಹರಿ ಚರಿತ್ರೆಯ) ಶ್ರವಣಾದಿಗಳನ್ನು ಹೆಚ್ಚಿಸುವದರಿಂದ ದಿನದಿನಕ್ಕೆ ಊರ್ಜಿತವಾಗುವ ಪೂಜಾರೂಪದ ಶ್ರೀಹರಿ ಸೇವೆಯಿಂದ ಜ್ಞಾನಾ ಗಳು ಉಂಟಾಗಲೂ ಎಷ್ಟು ಸಮಯ ಹಿಡಿಯುವದು ? ಎಂಬ ಪ್ರಶ್ನೆಗೆ ಉತ್ತ ಹೇಯುವರು.

**ಅರ್ಥ** :- ನಿನ್ನ (ಭಗವಂತನ) ಈಹಿತಗಳನ್ನು (ಲೀಲಾ ಕೃತಿಗಳನ ಮತ್ತೆ ಮತ್ತೆ (ಬೇಜರಿಯದೆ ಅನೇಕ ಸಲ) ಕೇಳುವವರು, ಗಾನ-ಪಠಣ ಮಾಡ ವವರು, ಆವುಗಳನ್ನು ಸ್ಮರಿಸುವವರು -ಅಂಥ ಜನರೇ ಸಂಸಾರವೆಂಬ (ಅಖಂಡ ಪವಾಡವನ್ನು ಕೊನೆಗೊಳಿಸುವದಾದ ನಿನ್ನ ಶ್ರೀಪಾದ ಕಮಲವನ್ನು (ನಿನ್ನ ದರ ಶನವನ್ನು) ಶ್ರೀಘ್ರದಲ್ಲಿಯೇ (ಯಾವ ವಿಳಂಬವಿಲ್ಲದೆಯೆ) ಕಾಣುವರು (ಪ ಯುವರು.)

॥೨೫೦। ಸರ್ವಾಣಿ ಮದ್ಧಿಷ್ಣ್ಯತಯಾ ಭವದ್ಭಿ-
ಶ್ಚರಾಣಿ ಭೂತಾನಿ ಸುತಾಧ್ರುವಾಣಿ ।
ಸಂಭಾವಿತವ್ಯಾನಿ ಪದೇ ಪದೇ ವೋ
ವಿವಿಕ್ತದೃಷ್ಟಿಸ್ತದು ಹಾರ್ಹಣಂ ಮೇ ॥

ತಿಂಸ್ಥೆಗೆ ಊರು ಮಕ್ಕಳಿಗೆ 5-5-26

ಕಾಯಾ, ವಾಚಾ, ಮನಸಾ, ಒಂದೇ ವಿಧವಾಗಿರುವದೇ ಆರ್ಜವ, ಅದೆ ತ್ರಿಕರಣ ಶುದ್ಧಿ, ನಿರ್ವಂಚನೆ - ಋಷಭನಾಯಕ ಪರಮಾತ್ಮನು ಈ ಬಗೆಯ 'ಆರ್ಜವ' ದ ಹಿರಿಮೆಯನ್ನು ತನ್ನ ಮಕ್ಕಳಿಗೆ ಉಪದೇಶಿಸುತ್ತಾನೆ.

' ಹೇ, ಮಕ್ಕಳಿರಾ! ನಾನು ನೆಲಿಸಿರುವ (ನನ್ನ ಅಧಿಷ್ಠಾನಗಳಾಗಿರುವ ಚರಾಚರ ವಸ್ತುಗಳೆಲ್ಲವೂ ನನ್ನ (ಬಾಹ್ಯ) ಪ್ರತಿಮೆಗಳೆಂದು ನೀವು ಭಾವಿಸಬೇಕ ಈ ಭಾವನೆಯನ್ನು ಮತ್ತೆ ಮತ್ತೆ ಮನಸ್ಸಿನಿಂದ ಮನ್ನಿಸಿ ದೃಢ ಪಡಿಸಿಕೊಳ್ಳ ಬೇಕು. ಚರಾಚರ ವಸ್ತುಗಳಲ್ಲಿ ಪರಮಾತ್ಮನು ಪ್ರತಿಮಾರೂಪವಾಗಿ ನೆಲೆಸಿ ದ್ದರೂ, ಅವೆಲ್ಲವುಗಳಿಂದ ಆತನು ತುಂಬಾ ಭಿನ್ನನಾದವನು - ಪರಮಾತ್ಮನು 'ಸರ್ವಾತ್ಯಂತ ಭಿನ್ನನು' ಎಂದು ಬಗೆಯುವದೇ 'ವಿವಿಕ್ತದೃಷ್ಟಿ'ಯು. ಚರಾ ಚರ ಸಕಲ ವಸ್ತುಗಳಿಂದ ಪರಮಾತ್ಮನು ಅತ್ಯಂತ ಸರ್ವತೋಪರಿ ಭಿನ್ನನೆಂದು ತಾನೊಬ್ಬನೆ ಭಾವಿಸಿದರೆ ಸಾಲದು; ಪರಮಾತ್ಮನ ಈ ಭಿನ್ನತೆಯನ್ನು (ಅಜ್ಞ ರಾದ) ಸಕಲ ಜೀವಿಗಳಿಗಳಿಗೂ ಮನಗಾಣಿಸಿಕೊಡಬೇಕು- ಅದನ್ನು ಸರ್ವತ್ರ ಪ್ರತಿಪಾದಿಸಬೇಕು. ಹೀಗೆ ಮಾಡುವದೇ ಪರಮಾತ್ಮನಿಗೆ ಅತ್ಯಂತ ಪ್ರೀತಿಕರ

ವಾದ ಪೂಜೆಯಾಗಿದೆ- ಅದನ್ನು ಮಾಡುವವನೆ ಸರಿಸಮಾನರಿಲ್ಲದ ಶ್ರೇಷ್ಠ ಭಕ್ತನು. ಈ ಬಗೆಯ ನನ್ನ ಪೂಜೆಯಿಂದ ಅಪೇಕ್ಷಿತವಾದ ಪುರುಷಾರ್ಥವು (ಮೋಕ್ಷವು ದೊರಕುವದು-'

ಹೀಗೆ ಹೇಳುವದುಂಟು:- 'ಅಂತರ್ದೇಹೇಷು ... ... ಹ್ಯಸೌ'-(೬-೪-೧೩) ಚರಾಚರ ಸಕಲ ಜೀವಿಗಳ ಅಂತರಂಗದಲ್ಲಿ (ಅಂತರ್ಯಾಮಿಯಾಗಿ) ನಾಶರಹಿತನಾದ ಶ್ರೀಹರಿಯು ನೆಲೆಸಿರುವನು. ಇವೆಲ್ಲ ವಸ್ತುಗಳು ಆತನಿಗೆ ಅಧಿಷ್ಠಾನಗಳು. ಪ್ರತಿಮೆಗಳೆಂಬುದನ್ನು ಕಂಡುಕೊಳ್ಳಬೇಕು. ಹೀಗೆ ಭಾವಿಸುವುದರಿಂದಲೆ ಶ್ರೀಹರಿಯು ನಿಮಗೆ ಸುಪ್ರೀತನಾಗುವನು.

||೨೫೧|| ಮನೋವಚೋದೃಕ್ಕರಣೈರ್ಹಿ ತಸ್ಯ          ಋಷಭ ರಾಜನು
ಸಾಕ್ಷಾತ್ಕೃತಂ ಮೇ ಪರಿಬರ್ಹಣಂ ತತ್ ।
ವಿನಾ ಪುಮಾನ್ಯೇನ ಮಹಾವಿಮೋಹ-
ಕೃತಾಂತಪಾಶಾನ್ನ ವಿಮೋಕ್ತುಮೀಶಃ || ೫-೫(೨೬,೨೭)

ಸಾಧಕನಾದ ಭಕ್ತನಿಗೆ ಆತನು ಅನುಸರಿಸಬೇಕಾದ ಸಾಧನದ ರೀತಿಯನ್ನು ಹೇಳಿ, ಆನಂತರ ಸಿದ್ಧಪಟ್ಟಿದ ಭಕ್ತನು ಮಾಡುವ ಪೂಜೆಯ ವಿಧಾನವನ್ನೂ, ಅದರ ಆಗತ್ಯವನ್ನೂ ವ್ಯತಿರೇಕ ಸಂಬಂಧದಿಂದ ತೋರಿಸುವರು.

ಅರ್ಥ :- (ಸಕಲ ಚರಾಚರ ವಸ್ತುಗಳಲ್ಲಿ ಪರಮಾತ್ಮನು ನೆಲೆಸಿರುವನೆಂದು, ಅವುಗಳೆಲ್ಲ ಆತನ ಪ್ರತಿಮೆಗಳೆಂಬ ಶ್ರದ್ಧೆಯಿಂದ) ಒಮ್ಮೆ ಮಾನಸಿಕವಾಗಿ, ಇನ್ನೊಮ್ಮೆ ಶಬ್ದಗಳಲ್ಲಿ, ಮತ್ತೊಮ್ಮೆ ಕಣ್ಣು ಮುಂತಾದ ಇಂದ್ರಿಯಗಳಿಂದ ಪರಮಾತ್ಮನನ್ನು ಯಥಾಯೋಗ್ಯವಾಗಿ ಆರಾಧಿಸುವದೇ ಆತನಿಗೆ ಉತ್ತಮವಾದ ಪೂಜೆ. ಈ ಬಗೆಯಲ್ಲಿ ಪರಮಾತ್ಮನನ್ನು ಆರಾಧನೆ ಮಾಡದಿದ್ದರೆ, ಮಹಾದುಃಖಕ್ಕೆ ಒಳಪಡಿಸುವ ಯಮಪಾಶದಿಂದ ಮಾನವನು ಬಿಡುಗಡೆಯನ್ನು ಹೊಂದಲಾರನು.

||೨೫೨|| ಖಂ ವಾಯುಮಗ್ನಿಂ ಸಲಿಲಂ ಮಹೀಂ ಚ          ಕವಿ
ಜ್ಯೋತೀಂಷಿ ಸತ್ವಾನಿ ದಿಶೋ ದ್ರುಮಾದೀನ್ ।          ನಿಮಿರಾಜಗೆ
ಸರಿತ್ಸಮುದ್ರಾಂಶ್ಚ ಹರೇಃ ಶರೀರಂ
ಯತ್ಕಿಂಚ ಭೂತಂ ಪ್ರಣಮೇದನನ್ಯಃ || ೧೧-೨-೪೧

‘(ಪರಮಾತ್ಮನ ಅಧಿಷ್ಠಾನ-ಪ್ರತಿಮೆಗಳೆಂಬ ಭಾವನೆಯಿಂದ) ಸಕಲ ಚರಾಚರ ವಸ್ತುಗಳನ್ನು ಗೌರವಿಸಬೇಕು’ ಎಂದು ಹೇಳಿದಾಗ್ಗೆ ಒಂದು ಸಂದೇಹವು ಉಂಟಾಗುವದು. ಅದೆಂದರೆ, ಚರ (ಸಜೀವಿಗಳಾದ) ವಸ್ತುಗಳಲ್ಲಿ ಎರಡು ಪ್ರಕಾರಗಳಿರುವವು – ಎರಡು ಕಾಲು ಹಾಗೂ ನಾಲ್ಕು ಕಾಲುಗಳುಳ್ಳವುಗಳು. ದ್ವಿಪದರಾದ ಬ್ರಾಹ್ಮಣರು ಎಲ್ಲರ ಗೌರವಕ್ಕೆ ಪಾತ್ರರಾಗಿಯೆ ಇರುವರು. ನಾಲ್ಕು ಕಾಲುಗಳ ಪ್ರಾಣಿಗಳಲ್ಲಿ ಆಕಳು ಎಲ್ಲರಿಗೂ ಪೂಜನೀಯವಾಗಿರುವದು. ಇನ್ನು ಅಚರ (ಜಡ) ವಸ್ತುಗಳಲ್ಲಿ ತುಲಸಿ, ಬಿಲ್ವ, ಅಶ್ವತ್ಥ ಮುಂತಾದವು ವಂದನೀಯವೆ ಆಗಿವೆ. ಪೂಜಾರ್ಹವಾಗಿರದ ಚರಾಚರ ವಸ್ತುಗಳನ್ನು ಯಾರೂ ಗೌರವಿಸುದಿಲ್ಲ ಹೀಗಿರಲು, ಪೂಜೆಯ ಬಗ್ಗೆ ವಿಶೇಷ ನಿಯಮವನ್ನೇಕೆ ಹೇಳಿದುವಿರಿ ? ಈ ಸಂದೇಹಕ್ಕೆ ಸಮಾಧಾನವನ್ನು ಹೀಗೆ ಹೇಳುವರು :- (‘ಪೂಜ್ಯಾನ್ ಪೂಜಯ’) ಪೂಜಾರ್ಹರಾದವರನ್ನು ಮಾತ್ರ ಗೌರವಿಸಿರಿ, ಎಂಬುದು ನಮ್ಮ ಮಾತಿನ ತಾತ್ಪರ್ಯವಲ್ಲ ಹಾಗಿದ್ದರೆ, ಇದ್ದುದನ್ನೇ ಹೇಳಿದಂತಾದೀತು. ಆದರೆ ಇಲ್ಲಿ ಹೇಳಿರುವದು ಬೇರೆಯಾಗಿದೆ. ಇಲ್ಲಿ ನಾವು ಹೇಳುವದೆಂದರೆ, ದ್ವಿಪಾದಗಳಲ್ಲಿ ಬ್ರಾಹ್ಮಣರನ್ನು ಮೊದಲು ಮಾಡಿಕೊಂಡು ನಾಯಿಯ ಮಾಂಸವನ್ನು ತಿನ್ನುವ ಅತಿ ಹೀನರಾದ ಚಾಂಡಾಲರವರೆಗೂ, ಎಲ್ಲ ಜನರಿಗೂ ವಂದಿಸಬೇಕು. ಚತುಷ್ಪಾದಿಗಳಲ್ಲಿ ಆಕಳಿನಿಂದ ಹಿಡಿದು, ಎಲುಬು ತಿಂದು ಜೀವಿಸುವ – ಪಶುಗಳಲ್ಲಿ ಚಂಡಾಲರಂತಿರುವ ಅತ್ಯಂತ ನೀಚ ಪ್ರಾಣಿಯವರೆಗೂ ಎಲ್ಲ ಪ್ರಾಣಿಗಳಿಗೆ ವಂದಿಸಬೇಕು. ಅಚರ ( ಸ್ಥಿರ ) ವಸ್ತುಗಳಲ್ಲಿ ತುಳಸೀಗಿಡವೆ ಆದಿಯಾಗಿ, ಅತ್ಯಂತ ಕನಿಷ್ಟವಾದ ತೃಣ-ತರುಲತೆಗಳಿಗೂ ವಂದಿಸಬೇಕು. ಹೀಗೆ ಎಲ್ಲರಿಗೂ ವಂದಿಸಲು ನಾಚಿಕೆ ಬರುವದರಿಂದ ಮಾಡಲಾರೆವು. ಎಂದರೆ, ಹೀಗೆ ಅನ್ನುವವರನ್ನೇ ವಿಚಾರಿಸಬೇಕು. ವಂದನೆಯನ್ನೇ ಮಾಡಬಾರದೊ ಅಥವಾ ವಿಶಿಷ್ಟ ಪ್ರಕಾರದ ವಂದನೆಯನ್ನು ಮಾಡಬಾರದೊ, ಇವೆರಡರಲ್ಲಿ ನಿಮ್ಮ ಅಭಿಪ್ರಾಯವೇನು ? ವಂದನೆಯನ್ನೇ ಮಾಡಬಾರದೆಂಬುದು ನಿಮ್ಮ ಮತವಾಗಿದ್ದರೆ, ‘ಪ್ರಣಮೇತ್-ವಂದಿಸು’ ಎಂದು ಶಾಸ್ತ್ರದಲ್ಲಿ ಹೇಳಿದುದು ವ್ಯರ್ಥವೆಂದು ಅನ್ನಬೇಕಾದೀತು. ಒಂದು ರೀತಿಯ ವಂದನೆಯನ್ನು ಮಾಡಲಾರೆವು, ಎಂದರೆ ಆ ವಂದನೆಯ ರೀತಿಯು ಯಾವುದು ? ವಾಣಿಯಿಂದ ಹಾಗೂ ದೇಹದಿಂದ (ಸಕಲ ಚರಾಚರರಿಗೆ) ವಂದಿಸಲು ನಾಚಿಕೆ ಎನಿಸುತ್ತದೆ, ಎಂದರೆ, ಮಾನಸಿಕ (ಮನಸ್ಸಿನಲ್ಲಿಯೆ ಮಾಡುವ) ವಂದನೆಗೂ ನಿಮ್ಮ ನಾಚಿಕೆ ಅಡ್ಡವಾಗಿ ಬರುವದಿಲ್ಲವೇನು ? ಈ ಬಗ್ಗೆ ನಿಮಗೆ ಹೇಳಬೇಕಾದ ಮಾತೆಂದರೆ, ನಾಚಿಕೆಯೆಂಬುದು ನಿಮ್ಮ ಮನಸ್ಸಿನಲ್ಲಿ ಉಂಟಾಗಿ, ಮನಸ್ಸಿನಲ್ಲಿಯೆ ನೆಲೆಸುವ ವಸ್ತು. ಈ ನಾಚಿಕೆ (ವ್ರೀಡಾ) ಮನಸ್ಸಿಗೆ ಅಂಟಿಕೊಂಡರೆ

ಮಾನಸಿಕ. ವಾಣಿಗೆ ಜೊತೆಯಾದರೆ ವಾಚನಿಕ, ದೇಹದ ಕೃತಿಗೆ ಸಂಬಂಧಿ
ಸಿದರೆ ದೈಹಿಕ.-ನಾಚಿಗೆ ಹೀಗೆ ಮೂರು ತೆರನಾಗಿರುವದು ಅವುಗಳಲ್ಲಿ ಮಾನ
ಸಿಕ ನಾಚಿಕೆಯು ಮಾನಸಕ ವಂದನೆಗೆ ಆತಂಕವನ್ನು ಮಾಡಿಯೆ ಮಾಡುವದು.
ಹೀಗಿದ್ದರೂ ನಮ್ಮ ಬುದ್ಧಿಯ ಶಕ್ತಿಯಿಂದ ಮಾನಸಿಕ ಲಜ್ಜೆಯನ್ನು ನಿಗ್ರಹಿಸಿ
(ಹತ್ತಿಕ್ಕಿ) ಮಾನಸಿಕ ವಂದನೆಯನ್ನು ನಾವು ಮಾಡುವೆವು ಅದೇ ರೀತಿಯಲ್ಲಿ
ಸ್ವಂತದ ಬುದ್ಧಿ (ವಿವೇಕ) ಶಕ್ತಿಯಿಂದ ಲಜ್ಜೆ (ನಾಚಿಕೆ) ಯನ್ನು (ಆತಂಕವಾಗ
ದಂತೆ) ಹತ್ತಿಕ್ಕಿ ವಾಚನಿಕ (ಉಚ್ಚಾರದಿಂದ) ಹಾಗೂ **ದೈಹಿಕ (ದಂಡ) ಪ್ರಣಾಮ
ಗಳನ್ನು** ಯಾವ ಅಂತರವಿಲ್ಲದೆಯೆ ಮಾಡಬೇಕು.

ನೀವು ಹೇಳುವದೇನೊ ಸರಿ. ಆದರೆ ಸಕಲ ಜೀವ ಜಡವಸ್ತುಗಳಿಗೆ-
'ನಮಸ್ಕಾರ' ಎಂದು ಬಾಯಿಂದ ಹೇಳುವದು, ಕೈ ಜೋಡಿಸಿ ಇಲ್ಲವೆ ದಂಡ
ಪ್ರಣಾಮ ಮಾಡುವದು ಮನಸ್ಸಿಗೆ ಹೇಯ, ಅಸಹ್ಯವೆನಿಸುತ್ತಿದೆ-ಎಂದರೆ, ಮಾನ
ಸಿಕ ವಂದನೆಯೂ ಅದೇ ರೀತಿಯಲ್ಲಿಯೆ ಅಸಹ್ಯವೆನಿಸಬಹುದು ಕೂಡ. ಶಾಸ್ತ್ರದಲ್ಲಿ
ವಿಧಿಸಿರುವದರಿಂದ ಮಾಡಲೇ ಬೇಕಾಗುವದು ಎಂದರೆ, ಉಳಿದೆರಡು ಪ್ರಕಾರಗಳ
ಬಗ್ಗೆಯೂ ಶಾಸ್ತ್ರದಲ್ಲಿ ಹೇಳಿರುವದರಕಡೆಗೆ ನಿಮ್ಮ ದೃಷ್ಟಿ ಹರಿಯಿಸಿರಿ ಮಾನಸಿಕ,
ವಾಚನಿಕ ಹಾಗೂ ದೈಹಿಕ ವಂದನೆ, ನಮಸ್ಕಾರವನ್ನು ಒಂದು ವಿಶಿಷ್ಟ ಸಮಯದ
ವರೆಗೆ ಮಾತ್ರ ಮಾಡಬೇಕಾಗುವದು. ಅದೆಂದರೆ, (ಚರಾಚರ) ಸಕಲ ವಸ್ತುಗ
ಳಲ್ಲಿ ಶ್ರೀಹರಿಯು ನೆಲೆಸಿ ಸಕಲ ಕಾರ್ಯಗಳನ್ನು ಆತನೇ (ಪ್ರೇರಕನಾಗಿ)
ಮಾಡಿಸುವನು. ಎಂದು ದೃಢವಾಗಿ ಮನವರಿಕೆ ಮಾಡಿಕೊಂಡು, ಆತನ ಪ್ರತೀ
ಕವಾದ (ಪ್ರತಿಮಾ ರೂಪವಾದ) ಯಾವುದೇ ಚರಾಚರ ವಸ್ತುವನ್ನು ನೋಡಿ
ದಾಕ್ಷಣ ಶ್ರೀಹರಿಯ ಸ್ಮರಣೆ (ನೆನಪು) ಉಂಟಾಗುವವರೆಗೆ ಮಾತ್ರ! ಮೂರೂ
ಬಗೆಯ ವಂದನೆಗಳನ್ನು ಎಲ್ಲರಿಗೂ ಮಾಡಲೇಬೇಕು. ಅನಂತರ ಶ್ರೀಹರಿಯ
ನೆನಪು ಕೂಡಲೆ ಆಗ ತೊಡಗಿದನಂತರ, ಮೂರು ಬಗೆಯ ವಂದನೆಗಳಾಗಲಿ,
ಅಥವಾ ಆವುಗಳಲ್ಲಿ ನಿಮ್ಮ ಮನಸ್ಸಿಗೆ ಒಪ್ಪುವ ಯಾವುದೇ ಬಗೆಯ ವಂದನೆ
ಯನ್ನಾದರೂ ಮಾಡಬಹುದು. ಸಕಲ ಜಡ ಜೀವಗಳು ಪರಮಾತ್ಮನಿಗೆ ಅಧಿಷ್ಠಾ
ನಗಳಾಗಿವೆ. ಎಂಬುವ ದೃಢ ನಂಬಿಕೆಯಿಂದ ಅವುಗಳ ದರ್ಶನದಿಂದ ಪರಮಾ
ತ್ಮನ ಸ್ಮರಣೆಯನ್ನು ತಂದುಕೊಂಡರೆ, ಅದರಿಂದ ಏನು ಪ್ರಯೋಜನ? -ಎಂದರೆ
ಹೀಗೆ ಮಾಡುವದರ ಮಹಾ ಫಲವಾದ ಮೋಕ್ಷವನ್ನು ಪಡೆಯಲು ಒಂದು ಸಾಧ
ನವಾಗಿದೆ. ಆದುದರಿಂದ ಈ ಬಗೆಯ ಮನೋಭೂಮಿಕೆಯನ್ನು ಅಗತ್ಯವಾಗಿ
ಸಂಪಾದಿಸಲೇಬೇಕಾಗುವದು. 'ನಮಸ್ಕರಿಸಬೇಕು' (ಪ್ರಣಮೇತ್)-ಎಂದು ಶಾಸ್ತ್ರ
ದಲ್ಲಿ ಹೇಳಿರುವದು, ಇದರಿಂದ ನಿರರ್ಥಕವೆನಿಸದು. ಏಕೆಂದರೆ ಇಲ್ಲಿ ಹೇಳಿಕೊ

ಟ್ಟಿರುವ ವಂದನೆಯು ಈ ಪೊದಲು ಸಿದ್ಧವಾದ ಸಂಗತಿಯಾಗಿಲ್ಲ. ಅಂತೆಯೆ- 'ಖಂ' ಆಕಾಶ ಮುಂತಾದವು ಪರಮಾತ್ಮನ ಪ್ರತಿಮೆ--ಪ್ರತೀಕಗಳೆಂದು ಹೇಳಿರುವರು. -ಹೀಗೆ ಹೇಳಿದೆ:- 'ವಿಸೃಜ್ಯ ಸ್ವಯಂ . ಗೋಖರಂ' (೧೧-೨೯-೧೬) (ಎಲ್ಲರಿಗೂ ನಮಸ್ಕಾರವು) ಜನರ ಕಣ್ಣಿಗೆ ಬೀಳುವದೆಂಬ (ಯಾರಾದರೂ ನೋಡಬಹುದೆಂಬ ಮನಸ್ಸಿನಲ್ಲಿಯ ನಾಚಿಕೆಯನ್ನು ತಾವೇ ಬಿಸುಟಿ, ನಾಯಿ-ಚಂಡಾಲ ಗೋಖರ ಮುಂತಾದ (ಅತಿಹೀನ) ಪ್ರಾಣಿಗಳೆಲ್ಲರಿಗೂ ನೆಲದಮೇಲೆ ಶಾರೀರಿಕ ದಂಡ ಪ್ರಣಾಮವನ್ನು ಮಾಡಬೇಕು' – ಮತ್ತೂ- 'ಯಾವತ್ ಸರ್ವೇಷು.... ವೃತ್ತಿಭಿಃ (೧೧-೨೯-೧೭) 'ಸಕಲಚರಾಚರವಸ್ತುಗಳಲ್ಲಿ ನನ್ನ ಇರುವಿಕೆಯ ಅರಿವು ಉಂಟಾಗದವರೆಗೆ ಮಾತ್ತ, ಮನ, ವಾಕ್ಕು-ದೇಹ, ಈ ಮೂರು ಬಗೆಯ ಪ್ರಣಾಮಗಳಿಂದ ನನ್ನನ್ನು ಅವುಗಳಲ್ಲಿ ಆರಾಧಿಸಬೇಕು. -ಮತ್ತೂ 'ಅಯಂ ಹಿ ಸರ್ವ ಕಲ್ಪಾನಾಂ . ವೃತ್ತಿಭಿಃ' (೧೧-೨೯-೧೯) ಈ ನನ್ನ ಅಭಿಪ್ರಾಯವು ಸಕಲ ಕಲ್ಪಗಳಿಗೂ ಅನ್ವಯಿಸುತ್ತದೆ. -'ಪ್ರಣಮೇತ್' ಎಂದರೆ ಸಾಷ್ಟಾಂಗ ನಮಸ್ಕಾರ ಮಾಡಬೇಕು. ಈ ಅರ್ಥವನ್ನು ಸೂಚಿಸಲೆಂದೇ 'ದಂಡವತ್ಭೂವೇತ್' -ಕಟ್ಟಿಗೆಯು ನೆಲದ ಮೇಲೆ ಬೀಳುವಂತೆ, ಎಂಬ ಶಬ್ದಗಳನ್ನು ಬಳಸಿರುವರು. -ಇಲ್ಲವಾದರೆ, ಕೇವಲ ಮಾನಸಿಕ ವಂದನೆಗೆ ಈ ವರ್ಣನೆಯು ಹೊಂದಲಾರದು. ವಂದನೆಯ ಬಗ್ಗೆ ಇಲ್ಲಿ ಮಾಡಿರುವ ವಿಷಯ ವಿವೇಚನೆ ಪ್ರಮಾಣಸಿದ್ಧವಾಗಿದೆ. ಈ ರೀತಿಯಾಗಿ ನಾಯಿಯ ಮಾಂಸ ತಿನ್ನುವ ಚಂಡಾಲರ ವರೆಗಿನ ಸಕಲ ಮನುಷ್ಯರಿಗೆ, ಎಲುಬು ತಿನ್ನುವ ಗೋಖರದ ವರೆಗಿನ ಸಕಲ ಪಶುಗಳಿಗೆ, -ಎಲ್ಲರಿಗೂ ನೆಲದ ಮೇಲಿನ ದಂಡ ಪ್ರಣಾಮವನ್ನು ಎಷ್ಟು ಕಾಲದವರೆಗೆ ಮಾಡಬೇಕು? ಎಂದರೆ (ಯಾವದಿತಿ) ಅವರೆಲ್ಲರನ್ನೂ ನೋಡಿದಾಕ್ಷಣ, ಶ್ರೀಹರಿಯು ಅವರೆಲ್ಲರಲ್ಲಿ ನೆಲಿಸಿ, (ಪ್ರೇರಕನಾಗಿ ನಿಂತು) ಅವರು ಮಾಡುವ ಕಾರ್ಯಗಳನ್ನೆಲ್ಲ ಆತನೇ ಮಾಡಿ ಮಾಡಿಸುವನೆಂಬ ನಿಶ್ಚಿತವಾದ ತಿಳಿವೇ ಪರಮಾತ್ಮನ ವಿಷಯಕ್ಕೆ ಜ್ಞಾನ. ಈ ಜ್ಞಾನ ಉಂಟಾಗುವವರೆಗೆ ತಪ್ಪದೇ ಅವರಿಗೆಲ್ಲ ತ್ರಿವಿಧ ವಂದನೆ ಮಾಡಬೇಕು. -'ಪ್ರಣಮೇತ್' ಎಂದರೆ ಕೇವಲ ಮಾನಸಿಕ ವಂದನೆಯಾಗಿಲ್ಲ. ವಾಕ್ಕು-ದೇಹ-ಮನಸ್ಸು, ಈ ತ್ರಿಕರಣಗಳಿದದಲೂ ವಂದಿಸಬೇಕು. ಎಂದು ಆ ಶಬ್ದವು ಸ್ಪಷ್ಟೀಕರಿಸುತ್ತದೆ. -ಸಕಲ ಪ್ರಾಣಿಗಳಲ್ಲಿಯ ಪರಮಾತ್ಮನ ಅಧಿಷ್ಠಾನ ಹಾಗೂ ಕರ್ತೃತ್ವಗಳ ತಿಳುವಳಿಕೆಯಿಂದ ಏನು ಪ್ರಯೋಜನ? ಎಂದರೆ, ಹೀಗೆ ಮಾಡುವದು ಭಗವಂತನ ಅನುಗ್ರಹಕ್ಕೆ ಹಾಗೂ ಅದರಿಂದ ಮೋಕ್ಷವನ್ನು ಪಡೆಯಲು ಅತ್ಯುತ್ತಮವಾದ ಸಾಧನವಾಗಿದೆ.

||೨೫೩|| ಶೃಣ್ವನ್ಸುಭದ್ರಾಣಿ ರಥಾಂಗಪಾಣೇ-
ರ್ಜನ್ಮಾನಿ ಕರ್ಮಾಣಿ ಚ ಯಾನಿ ಲೋಕೇ |
ಗೀತಾನಿ ನಾಮಾನಿ ತದರ್ಥಕಾನಿ
ಗಾಯನ್ವಿಲಜ್ಜೋ ವಿಚರೇದಸಂಗಃ|| ೧೧-೨-೩೯

ಜನಕರಾಜನಿಗೆ ಕವಿಯೆಂಬ ಋಷಿಯು ಮಾಡಿದ ಉಪದೇಶವಿದು.

ಲಜ್ಜೆಯ ಸಂಕೋಚವಿಲ್ಲದೆ (ಶ್ರೀಹರಿಯ ಅಧಿಷ್ಠಾನಗಳೆಂದು) ಸಕಲ ಜಡ ಜೀವಿಗಳಿಗೆ ತ್ರಿಕರಣ ವಂದಿಸುವದಷ್ಟೇ ಇಲ್ಲಿ ಹೇಳಿಲ್ಲ. ಸಕಲೇಂದ್ರಿಯಗಳಿಂದಲೂ ಭಗವಂತನ ಸೇವೆ ಮಾಡಬೇಕೆಂಬುವದೂ ಅಭಿಪ್ರಾಯವಾಗಿದೆ.

**ಅರ್ಥಃ**– ಪ್ರಪಂಚದಲ್ಲಿ ಗೆಳೆಯರಿರಲಿ, ತನ್ನ ಬಗ್ಗೆ ಆದರವಿಲ್ಲದ ಉದಾಸೀನ ಜನರಿರಲಿ. ಹಗೆಗಳಾಗಿರಲಿ. ತನಗಿಂತಲೂ ಹೀನರಾದ ಜನರಿರಲಿ. ಇವರಲ್ಲಿ ಯಾರೇ ಆಗಿರಲಿ. (ಅವರ ಸ್ಥಾನ ಮಾನಗಳತ್ತ ಲಕ್ಷಕೊಡದೆ) ಅವರ ಮನೆಗಳ ಸ್ಥಾನ ಹಾಗೂ ಪರಿಸರಗಳೂ ಹೇಗೋ ಇರಲಿ. ಇವನ್ನು ಗಮನಿಸದೆ, ಅವರ ಮನೆಗಳಲ್ಲಿ ನಡೆಯುತ್ತಿರುವ ಚಕ್ರ ಪಾಣಿಯಾದ ಶ್ರೀಹರಿಯ ಮಂಗಳಕರವಾದ ನಾಮಗಳ ನಿರೂಪಣೆಯನ್ನು, ಅಂಥವರ ಮನೆಗಳಲ್ಲಿ ನಡೆಯುವ ಶ್ರೀಹರಿಯ ವಿಷಯಕ್ಕೆ ಪ್ರವಚನಗಳನ್ನು, ಶ್ರೀಹರಿಯ ಅವತಾರಗಳ ಕಥಾನಿರೂಪಣವನ್ನೂ ಅವತಾರಗಳಲ್ಲಿ ಭಗವಂತನು ತೋರಿಸಿದ ಅದ್ಭುತ ಲೀಲೆಗಳನ್ನೂ, ಕೃತಿಗಳನ್ನೂ, ಆತನ ಅನಂತ ಗುಣರೂಪಗಳ ವರ್ಣನೆಯನ್ನಾಗಲಿ, ಪರಮಾತ್ಮನ ಅವತಾರ ಲೀಲೆಗಳಿಗೆ ಸಂಬಂಧಿಸಿದ ವಿವಿಧ ಉತ್ಸವಗಳನ್ನಾಗಲಿ, ಇಲ್ಲವೆ ಶ್ರೀಹರಿ ಮಂದಿರದ ಸ್ವಚ್ಛತೆ, ಅಲಂಕಾರ, ಹಾಗೂ ಅಲ್ಲಿ ನೃತ್ಯ ಸೇವೆಯನ್ನಾಗಲಿ, ಇವೆಲ್ಲ ಕಾರ್ಯಗಳಲ್ಲಿ ನಾಚಿಕೆಯ ಸಂಕೋಚವನ್ನು ತೊರೆದು ಆಸ್ಥೆ-ಆದರಗಳಿಂದ ಅವುಗಳಲ್ಲಿ ಭಾಗವಹಿಸಬೇಕು. ತನ್ಮಯನಾಗಬೇಕು. ಹೀಗೆ ಮಾಡುವದರಿಂದ, ವಿಷಯ ಭೋಗದಲ್ಲಿ ಆಸಕ್ತಿಯು ಅಳಿಯುವದು –ದುರಭಿಮಾನವನ್ನು ಬಿಟ್ಟು ಭಗವಂತನನ್ನು ಸೇವಿಸುವದರಿಂದ, ಇನ್ನೂ ಒಂದು ಬೇರೆ ಸತ್ಫಲವಿದೆ. –'ಅಸಂಗ' ಶಬ್ದಕ್ಕೆ ಬೇರೊಂದು ಅರ್ಥವನ್ನು ಹೇಳುವರು– 'ಅಸಂಗ' ವೆಂದರೆ 'ಅ' ಯೆಂಬ ಅಕ್ಷರವಾಚಕನಾದ ಶ್ರೀಹರಿಯ ಸಂಗವೆಂದರೆ ಶ್ರೀಹರಿಯನ್ನು ಕುರಿತು ಮಾಡುವ ಚಿಂತನೆ. ಅಥವಾ–ಧ್ಯಾನವೆಂಬ ಸಂಬಂಧವು. 'ಅಸಂಗ'ವೆಂದರೆ ಸರ್ವತ್ರ ಶ್ರೀಹರಿಯ ಧ್ಯಾನ, ಸ್ಮರಣ. ಇದು ಎರಡನೆಯ ಫಲವಾಗಿದೆ. ಅದರಿಂದ ಸರ್ವ ವಸ್ತುಗಳಲ್ಲಿಯೂ ಭಗವಂತನ ರೂಪ ಗುಣ ಕ್ರಿಯೆಗಳ ಚಿಂತನೆಯನ್ನೇ, ಸ್ಮರಣೆಯನ್ನೇ ಮಾಡಬೇಕು. ಈ ವಿಧಾನವನ್ನು ಚನ್ನಾಗಿ

ರೂಢಿಸಿಕೊಂಡು ಅವರಲ್ಲಿ ಪ್ರವೀಣರಾದರಾಯಿತು. ಅಂಥವರಿಗೆ ಭಗವಂತನ ಪ್ರತೀಕಗಳಾಗಿರುವ ಸಕಲ ಚರಾಚರ ವಸ್ತುವಿನ ದರ್ಶನದಿಂದ, ತತ್‌ಕ್ಷಣವೆ ಅವುಗಳಲ್ಲಿಯ ಭಗವಂತನ ವಿಶಿಷ್ಟರೂಪವು ಅವರಿಗೆ ಗೋಚರವಾಗುವದು. ಕಣ್ಮುಂದೆ ಬರುವದು. ಒಂದು ಬಗೆಯ ಅಲೌಕಿಕ ಆನಂದವೂ ಉಂಟಾಗುವದು ಈ ರೀತಿಯಿಂದ ಭಗವಂತನ ಧ್ಯಾನ-ಉಪಾಸನೆ ಮಾಡುವವರಿಗೆ, ಬಂಧಕವಾದ ಮಾಯೆಯು ತಾನಾಗಿಯೆ ಬಿಟ್ಟುಹೋಗುವದು. –ಎಂಬುದನ್ನು ಇಲ್ಲಿ ಸೂಚಿಸುವರು. –ಹೀಗೆ ಹೇಳಿದೆ:– 'ಯೇತಾವಾನೇವ....ತದೀಕ್ಷಣಂ' (೭-೭-೫೭) ಎಲ್ಲೆಡೆಯಲ್ಲಿ (ಸರ್ವತ್ರ) ಭಗವಂತನನ್ನು (ಆತನ ರೂಪ ಗುಣ ಕ್ರಿಯೆಗಳನ್ನು) ನಿರೀಕ್ಷಿಸುವದು ಹಾಗೂ ಗೋವಿಂದನಲ್ಲಿ ಏಕಾಂತ (ಅನನ್ಯ) ಭಕ್ತಿಯನ್ನು ಮಾಡುವದು, –ಲೋಕದಲ್ಲಿ ಜನರಿಗೆ ಇದುವೇ ಸ್ವಕೀಯವಾದ ಪರಮ ಪುರುಷಾರ್ಥವಾಗಿದೆ. ಅವುಗಳಲ್ಲಿ 'ಸರ್ವತ್ರ ಭಗವತ್‌ ದರ್ಶನಂ' –ಇದು ಒಂದನೆಯದು; 'ಸರ್ವತ್ರ ಭಗವತ್‌ ಚಿಂತನಂ' –ಎಂಬುದು ಎರಡನೆಯದಾಗಿದೆ.

||೨೫೪|| ಜಹ್ಯಾಸುರಂ ಭಾವಮಿಮಂ ತ್ವಮಾತ್ಮನಃ
ಸಮಂ ಮನೋ ಧತ್ಸ್ವ ನ ಸಂತಿ ವಿದ್ವಿಷಃ |
ಋತೇಽಜಿತಾದಾತ್ಮನ ಉತ್ಪಥಸ್ಥಿತಾತ್
ತದ್ಧಿ ಹ್ಯನಂತಸ್ಯ ಮಹತ್ಸಮರ್ಹಣಂ || ೭-೮-೧೦

'ಅಕ್ರೋಧ' (ಸಿಟ್ಟು ಬಿಡುವದು) ವೆಂಬುದಕ್ಕೆ 'ಅಹಿಂಸೆ' ಯೆಂಬುದು ಇನ್ನೊಂದು ಹೆಸರು. ಭಾಗವತ ಧರ್ಮವಾದ ಈ ಅಹಿಂಸೆಯ ಬಗ್ಗೆ ಇಲ್ಲಿ ಹೇಳುವರು.

ತಂದೆಯಾದ ಹಿರಣ್ಯಕಶಪುವಿಗೆ ಪ್ರಲ್ಹಾದನು ಹೇಳಿದ ಮಾತು.–

ಅರ್ಥ:– ನಿನ್ನದಾಗಿರುವ ದೈತ್ಯರ ಈ (ತಾಮಸ) ಸ್ವಭಾವವನ್ನು ಬಿಟ್ಟುಕೊಡು. ಅದನ್ನು ಬಿಟ್ಟುಕೊಟ್ಟು, (ಸುಖವು ಬೇಕು, ದುಃಖವು ಬೇಡ' – ಎಂಬುದನ್ನು ನಿನ್ನಂತಯೇ ಎಲ್ಲರೂ ಅಪೇಕ್ಷಿಸುವರೆಂಬ) ಸಮ ಭಾವನೆಯನ್ನು ಎಲ್ಲರ ವಿಷಯದಲ್ಲಿಯೂ ನಿನ್ನಲ್ಲಿ ತಂದುಕೊ. ಈ ಬಗೆಯ ಸಮದೃಷ್ಟಿಯು ಸಕಲ ಜೀವಿಗಳ ಬಗ್ಗೆ ಇರಲಿ. ಎಂದರೆ ಪ್ರೀತಿಸುವ ಗೆಳೆಯನನ್ನೂ ಮತ್ತು ಉದಾಸೀನನಾಗಿರುವ (ಅಸ್ಥೆ-ಆಸಕ್ತಿಯಿಲ್ಲದ) ವ್ಯಕ್ತಿಗಳನ್ನು, ದ್ವೇಷಿಸುವ ಹಗೆಯನ್ನು, ಇವರೆಲ್ಲರನ್ನೂ ಒಂದೇ ಸಮನಾಗಿ, ಸಮ ಭಾವನೆಯಿಂದ ಕಾಣುವದು ಹೇಗೆ ಶಕ್ಯವಾದೀತು ? ಎಂದರೆ,– ಗೆಳೆತನ, ಉದಾಸೀನತೆ, ದ್ವೇಷಗಳೆಂಬ ಭಾವನೆಗಳಿಗೆ

ಮನಸ್ಸೇ ಮೂಲ ಕಾರಣ. ನಿಜವಾಗಿ ನೋಡಿದರೆ, ಗೆಳೆಯರು, ಉದಾಸೀನರು, ಹಗೆಗಳು ಎಂಬ ಭಿನ್ನ ಭಿನ್ನ ವ್ಯಕ್ತಿಗಳೇ ಇಲ್ಲ. ತನ್ನ ಅಂಕಿತದಲ್ಲಿ ಇರದ ಮನಸ್ಸು ಅಸಾಧು (ವಿಹಿತವಲ್ಲದ ತಪ್ಪು) ಮಾರ್ಗದಲ್ಲಿ ನಡೆಯುವದು-ಮನೋದೋಷಗಳಿಂದಲೆ ಇವೆಲ್ಲ ಭಾವನೆಗಳು ಉಂಟಾಗುವವು. ಈ ಬಗೆಯ ಭಾವನೆಗಳು ಸನ್ಮಾರ್ಗಕ್ಕೆ (ಭಾಗವತ ಜನರು ಅನುಸರಿಸುವ ಮಾರ್ಗಕ್ಕೆ) ತೀರ ವಿರುದ್ಧವಾಗಿವೆ. ಇಂದ್ರಿಯಗಳಿಗೆ ದಾಸರಾಗಿರುವವರಲ್ಲಿಯೆ ಈ ಭಾವನೆಗಳು ತಲೆದೋರುವವು. ಆದುದರಿಂದ ದೂಷಿತ ಇಂದ್ರಿಯಗಳಿಂದ ಜನಿಸುವ ಈ ದುಷ್ಟ ಭಾವನೆಗಳನ್ನು ಬಿಟ್ಟುಬಿಡಬೇಕು. ಎಲ್ಲರ ಬಗ್ಗೆಯೂ ಒಂದೇ ವಿಧವಾದ ಮನಸ್ಸನ್ನು (ಭಾವನೆಯನ್ನು) ತಾಳಬೇಕು. ಹೀಗೆ ಸಮಭಾವನೆಯನ್ನು ತಾಳುವದರಿಂದ ಹೆಚ್ಚಿನ ಪ್ರಯೋಜನ (ಲಾಭ) ಇದ್ದರೆ, ಅದು ಯಾವುದು ? ಎಂದರೆ, ಎಲ್ಲರಲ್ಲಿಯೂ (ದ್ವೇಷಾದಿಗಳನ್ನು ತ್ಯಜಿಸಿ) ಸಮಭಾವನೆಯನ್ನು ತಾಳುವದೇ (ಅನಂತ ಶಕ್ತಿಯುಳ್ಳ) ಅನಂತ ನಾಮಕ ಶ್ರೀ ಹರಿಗೆ ಅತ್ಯಂತ ಶ್ರೇಷ್ಠವಾದ ಪೂಜೆಯಾಗಿರುವದೆಂದು ತಿಳಿಯಬೇಕು. 'ಪ್ರಸನ್ನೇ ಶ್ರೀ ನಿಕೇತನೇ, ಕಿಮಲಭ್ಯಂ' ಎನ್ನುವಂತೆ, ಈ ಬಗೆಯ ಪೂಜೆಯಿಂದ ಶ್ರೀ ಹರಿಯನ್ನು ಪ್ರಸನ್ನಗೊಳಿಸಿದರೆ, ದೊರೆಯದ ವಸ್ತುಯಾವುದು ? ಸಕಲ ಪುರುಷಾರ್ಥಗಳೂ ಸಿದ್ಧಿಸುವವು.

॥೨೫೫॥ **ತಂ ದುರ್ಜಯಂ ಶತ್ರುಮಸಹ್ಯವೇಗ-**
**ಮರುಂತುದಂ ತನ್ನವಿಜಿತ್ಯ ಕೇಚಿತ್ ।**
**ಕುರ್ವಂತ್ಯಸದ್ವಿಗ್ರಹಮತ್ರ ಮರ್ತ್ಯೈ-**
**ರ್ಮಿತ್ರೋದಾಸೀನರಿಪುಂ ವಿಮೂಢಾಃ ॥** ೧೧-೨೩-೪೯

ಶ್ರೀ ಕೃಷ್ಣ
ಉದ್ಧವನಿಗೆ

ಶ್ರೀ ಕೃಷ್ಣನು ಉದ್ಧವನಿಗೆ ಭಿಕ್ಷುಗೀತೆಯಲ್ಲಿ ಹೇಳಿದ ಮಾತು :-

ಭಾಗವತರಾಗದ ಕೆಟ್ಟಜನರು ಅನುಸರಿಸುವ ಆ ದುಷ್ಟದಾರಿಯು ಯಾವುದು, ಮನಸ್ಸಿನ ಕ್ಷೋಭೆಯೆ, ವಿಕ್ಷೇಪವೇ ? ಮನಸ್ಸು ಉದ್ವೇಗಗೊಳ್ಳುವದೇ ಆ ದುಷ್ಟದಾರಿಯಾಗಿದೆ-ಎಂಬುದನ್ನು ತಿಳಿಸಿ ಹೇಳುವರು :-

**ಅರ್ಥ :-** ವಿಷ್ಣುಭಕ್ತಿಯ ಬಗ್ಗೆ ಆಸಕ್ತಿ ಆಸ್ಥೆಗಳಿಲ್ಲದ ಜನರನ್ನು ಮನಸ್ಸು ಶತ್ರುವಿನಂತೆ ನಷ್ಟಗೊಳಿಸುವದು. 'ತಂ' (ಅಂತಹ) ದುಷ್ಟವಾದ ಮನಸ್ಸೆಂಬ ವೈರಿಯನ್ನು, ಗೆಲ್ಲಲು, (ಅಧೀನದಲ್ಲಿ ಇಡಲು) ಅತಿ ಕಷ್ಟತರವಾದುದನ್ನು, ತಡೆಯಲಾಗದ ವೇಗ (ರಭಸ) ವುಳ್ಳದ್ದನ್ನು, (ಅರುಂ=ಮರ್ಮ, ತುದಂ-ಭೇದಿಸುವದು) ಮರ್ಮಭೇದಕವಾದುದನ್ನು - (ಶರೀರದ ಸೂಕ್ಷ್ಮ ಭಾಗವನ್ನು ಕತ್ತರಿಸು

ವಂತೆ ಅತಿ ನೋವನ್ನು ಮಾಡುವದನ್ನು ), – ಇಂಥ ಪ್ರಬಲ ವೈರಿಯಾಗಿರುವ ಮನಸ್ಸನ್ನು ಗೆಲ್ಲಲಾರದ ಅಂತೆಯೆ ಅತೀವ ಮೂಢರಾದ ಕೆಲವು ಅಜ್ಞಾನಿಗಳು ನಿಜವಾಗಿಯೂ ಶತ್ರುಗಳಾಗದವರೊಡನೆ ಜಗಳಹೂಡಿ, ( ತಮಗೆ ಹಿತಕರ್ತೃಗಳಾದ) ಗೆಳೆಯರ ಬಗ್ಗೆ ಉದಾಸೀನತೆಯನ್ನು ಬೆಳಸಿ, ತಮ್ಮ ಅಜ್ಞಾನವನ್ನು ಪ್ರಕಟಿಸುವರು.

ರುದ್ರದೇವರೆ ಅಭಿಮಾನಿಗಳಾಗಿರುವ ವೈಕಾರಿಕ ಮನವು ಎರಡು ವಿಧವಾಗಿದೆ. ಶ್ರೀ ವಿಷ್ಣು ಮುಂತಾದ ದೇವತೆಗಳ ಅನುಗ್ರಹದಿಂದ ಗೆಲ್ಲಲು ಸಾಧ್ಯವಾದುದು, ಮೊದಲನಯ ಪ್ರಕಾರದ ಮನಸ್ಸು. ಶ್ರೀ ವಿಷ್ಣುವಿನ ಪ್ರಸಾದ ಮಾತ್ರವಿಲ್ಲದೆ ಗೆಲ್ಲಲು ಅಶಕ್ಯವಾದುದು ಎರಡನೆಯ ಪ್ರಕಾರದ ಮನಸ್ಸು. ಏಕೆಂದರೆ ಎರಡನೆಯ ಪ್ರಕಾರದ ಮನಸ್ಸಿಗೆ ವಿಷ್ಣುಶತ್ರುವಾದ ಕಾಲನೇಮಿಯೆಂಬ ದೈತ್ಯನೇ ಅಭಿಮಾನಿಯು. ಶ್ರೀ ವಿಷ್ಣುವಿನಿಂದಲೆ ಆತನ ಸಂಹಾರವಾಗಬೇಕು. ಆದುದರಿಂದಲೆ ಈ ಎರಡನೆಯ ಪ್ರಕಾರದ ಮನಸ್ಸುಳ್ಳ ದುರ್ಜನರು ತಮಗೆ ಹಿತಕರ್ತೃಗಳಾದ (ಗೆಳೆಯ) ಜನರ ಕೂಡ . ಹಗೆತನವನ್ನು ಬೆಳಿಸುವರು. (ವಿಜಯಧ್ವಜೀಯ)

ಹಗೆಗಳಕೂಡ ಕಲಹ ಮಾಡುವದು ಯೋಗ್ಯವೆನಿಸಬಹುದು. ಆದರೆ ಉದಾಸೀನರಾದವರಲ್ಲಿ, ಗೆಳೆಯರಾದವರಲ್ಲಿ ದ್ವೇಷಮಾಡುವದು – ಎಂಬ ಅರ್ಥದಲ್ಲಿ 'ಉದಾಸೀನರಿಪು' ಎಂದು ಹೇಳಿ, ರಿಪು (ವೈರಿ) ವಿಗೆ ಉದಾಸೀನವೆಂಬ ವಿಶೇಷಣವನ್ನು ಜೋಡಿಸಿರುವರು. ಹಗೆಗಳಲ್ಲಿ ಗೆಳೆತನ, ಗೆಳೆಯರಲ್ಲಿ ಹಗೆತನ ಇಲ್ಲವೆ ಔದಾಸೀನ್ಯ – ಇವೆರಡನ್ನೂ ತಪ್ಪು ಮಾರ್ಗದಿಂದ ನಡೆಯುತ್ತಿರುವ ಮೂಢ-ಅಜ್ಞಾನಿ ಜನರೆ ಕೈಕೊಳ್ಳುವರು. ಈ ಮಾತನ್ನೆ ಇಲ್ಲಿ ಸ್ಪಷ್ಟಗೊಳಿಸಿರುವರು. ಹೀಗೆ ಹೇಳಿದೆ :- 'ಉತ್ಪಥಃಚಿತ್ತವಿಕ್ಷೇಪಃ' (೧೧-೧೯- ೩) ಚಿತ್ತದ ಕ್ಷೋಭೆಯೆ ಉದ್ವೇಗವೇ ತಪ್ಪು ದಾರಿಯಾಗಿದೆ.

||೨೫೬|| ದಸ್ಯೂನ್ಪುರಂ ಷಣ್ಣವಿಜಿತ್ಯ ಲುಂಪತೋ
ಮನ್ಯಂತ ಏಕೇ ಸ್ವಜಿತಾ ದಿಶೋ ದಶ |
ಜಿತಾತ್ಮನೋಜ್ಞಸ್ಯ ಸಮಸ್ಯ ದೇಹಿನಾಂ
ಸಾಧೋಃ ಸ್ವಮೋಹಪ್ರಭವಾಃ ಕುತಃ ಪರೇ || ೭-೮.೧೧

ಪ್ರಲ್ಹಾದನು ಹಿರಣ್ಯಕಶಿಪುವಿಗೆ ಹೇಳಿದ ಮಾತು:-

ಅಜ್ಞಾನಿಗಳು ಅನುಸರಿಸುವ ಕುಮಾರ್ಗವು- ತಪ್ಪು ದಾರಿಯು ಇದೇ ಆಗಿರಲಿ. ಆದರೆ, ತಿಳಿದವರಾದ ಜ್ಞಾನಿಗಳು ಅನುಸರಿಸುವ ಸನ್ಮಾರ್ಗವು-ಸರಿಯಾದ ಯಾವುವೆಂಬುದನ್ನು (ಮೊದಲು ತಪ್ಪು ದಾರಿ ಯಾವುದೆಂಬುದನ್ನು ಹೇಳಿ) ಇಲ್ಲಿ ದಾರಿಯು ತೋರಿಸಿಕೊಡುವರು.

ಅರ್ಥ:- (ತಮ್ಮ ಆತ್ಮಕ್ಕೆ ನೆಲೆಯಾಗಿರುವ) ತಮ್ಮ ಶರೀರವನ್ನೇ ಸುಲಿಗೆ ಮಾಡುತ್ತಿರುವವರು ಕಾಮಕ್ರೋಧಾದಿ ಅರು ವೈರಿಗಳು. (ಇವರು ಎದುರಿಗೆ ನಿಂತು ಯುದ್ಧ ಮಾಡುವವರಲ್ಲ, ಬೆನ್ನ ಹಿಂದೆ ಇರಿಯುವವರು. ಅಂತೆಯೇ ಅವರು ಕಳ್ಳರಾವ (ದಸ್ಯುಗಳಾದ) ವೈರಿಗಳು. ಈ ಆರು ಕಳ್ಳ ವೈರಿಗಳನ್ನು ಗೆದ್ದು ವಶಪಡಿಸಿಕೊಳ್ಳದಿದ್ದರೂ. ಆರೂ ದಿಕ್ಕುಗಳನ್ನು ಗೆದ್ದ ದಿಗ್ವಿಜಯಿಗಳು ತಾವೆಂದು ಕೆಲವು ರಾಜರು ಜಂಭಕೊಚ್ಚುವರು. ಅದು ಹೇಗೆಂದರೆ, -ರಾಜನೆಂದು ಹೇಳಿಕೊಳ್ಳುವ ರಾಜನೊಬ್ಬನು ತಾನು ವಾಸಿಸುತ್ತಿರುವ ತನ್ನ ರಾಜಧಾನಿಯನ್ನೇ ದಾಳಿ-ಸುಲಿಗೆಗಳಿಂದ ಐದಾರು ಜನ ಕಳ್ಳರು ನಾಶಮಾಡುತ್ತಿದ್ದರೂ, ಅವರನ್ನು ನಿಗ್ರಹಿಸಲಾರದೆ, 'ಇಂದು ಈ ರಾಜ್ಯ, ನಾಳೆ ಮತ್ತೊಂದು, ನಾಡದು ಮಗದೊಂದು ರಾಜ್ಯವನ್ನು ತೆಗೆದುಕೊಂಡೆ' ಎಂದು ಹೇಳಿದಾಗ್ಗೆ ಜ್ಞಾನಿಗಳ ಅಪಹಾಸಕ್ಕೆ ಆತನು ಗುರಿಯಾಗ್ಯುವನು. -(ತನ್ನ ಶರೀರದಲ್ಲಿಯೆ ನೆಲೆಸಿ ಅದನ್ನೇ ನಾಶ ಮಾಡುತ್ತಿರುವ ಕಾಮಕ್ರೋಧಾದಿ ಅರು ವೈರಿಗಳನ್ನು ಗೆಲ್ಲದೆ ತಾನು ದಿಗ್ವಿಜಯಿಯೆಂದು ಜಂಭಕೊಚ್ಚುವವನೂ ಹೀಗೆಯೇ ಜ್ಞಾನಿಗಳ ಅಪಹಾಸ್ಯಕ್ಕೆ (ನಿಂದೆಗೆ ಗುರಿಯಾಗುವನು ಇಂದ್ರಿಯಗಳನ್ನು ಗೆಲ್ಲಲಾಗದೆ ಸಲ್ಲದ ಗೆಳೆತನ-ಹಗೆತನಗಳ ತಪ್ಪು ದಾರಿಯನ್ನು (ಉತ್ಪಥ) ಹಿಡಿಯುವ ಅಜ್ಞಾನಿಗಳೂ ಇದೇ ರೀತಿಯಾಗಿ ಅಪಹಾಸಕ್ಕೆ ಯಾಗುವರು. ಎಂಬುದನ್ನು ಇಲ್ಲಿ ಸೂಚಿಸಲಾಗಿದೆ. -ಇನ್ನು ಸಜ್ಜನರು ಹಿಡಿಯುವ ಸರಿಯಾದ ದಾರಿ ಸನ್ಮಾರ್ಗವು ಯಾವುದೆಂಬುದನ್ನು ತೋರಿಸುವರು, ಜಿತೇಂದ್ರಿಯನೂ (ಮನಸ್ಸನ್ನು ಅಂಕಿತದಲ್ಲಿ ಇಟ್ಟುಕೊಂಡವನು) ಅಂತೆಯೆ ಎಲ್ಲ ಜೀವಿಗಳ ಬಗ್ಗೆ ಮತ್ಸರರಹಿತವಾದ ಸಮ ಭಾವನೆ ಉಳ್ಳವನು ಹಾಗ ಜ್ಞಾನಿ (ವಿವೇಕಿ) ಯಾದವನು. - ವಿವೇಕಿಗಳಾದ ಇಂಥ ಸಜ್ಜನರಿಗೆ ಇವರು ಹಗೆಗಳು, ಇವರು ಉದಾಸೀನರು' - ಅಜ್ಞಾನದಿಂದಲೆ ಹುಟ್ಟುವ ಈ ಬಗೆಯ ಭೇದಭಾವನೆಗಳು ಏಕೆ ಉಂಟಾಗುವವು? ಎಂದಿಗೂ ಉಂಟಾಗುವದಿಲ್ಲವೆಂಬುದೇ ಅಭಿಪ್ರಾಯ. -ಒಟ್ಟಾರೆ ಹೀಗೆ ಹೇಳಿದೆ. ಮನಸ್ಸು, ಕಾಮಕ್ರೋಧಾದಿಗಳೆಂಬ ಆರು ವೈರಿಗಳ್ಳರು ಶ್ರೇಷ್ಠವಾದ ತನ್ನ ಪುರುಷಾರ್ಥವನ್ನೇ ನಾಶ ಮಾಡುವರು. ಜ್ಞಾನವೆಂಬ ಖಡ್ಗವನ್ನು ಹಿಡಿದು, ಈ ಆರು ವೈರಿಗಳ

ಕೂಡ ನಿರಂತರವೂ ಹೋರಾಡಬೇಕು. ಭಕ್ತಿ-ಜ್ಞಾನಾದಿ ತನ್ನ ಸ್ವಕೀಯ ಪುರುಷಾರ್ಥವನ್ನು ಕೆಡಿಸುವವರ ಕೂಡ ಕಲಹ ಇಲ್ಲವೆ ಔದಾಸೀನ್ಯ, ಸಖ್ಯ - ಈ ಮೂರು ವಿಧ ಭಾವನೆಗಳನ್ನು ಇಲ್ಲಿ ಹೇಳಿದ ರೀತಿಯಲ್ಲಿ ಸಕಲ ಜೀವಿಗಳೊಡನೆ ವಿವೇಕದಿಂದ ತಾಳಬೇಕು. ಇದುವೆ ಸಜ್ಜನರು ಅನುಸರಿಸುವ ಮಾರ್ಗ. –

ಹೀಗೆ ಹೇಳಿದೆ :– 'ಪರ:....... ಭಗವತೆ ನಮ:' (೭-೫-೧೧) –ತನ್ನವನು, ಬೇರೆಯವನು ಯೆಂಬ ಸ್ವಪರಭೇದ ಭಾವವು ಪರಮಾತ್ಮನ ಮಾಯೆ (ಇಚ್ಛಾಶಕ್ತಿ)ಯ ಪ್ರಭಾವದಿಂದ ಅಜ್ಞಾನಿಗಳಾದ ಜನರಲ್ಲಿ ಕಂಡುಬರುವದು. ಅಂಥ ಪರಮಾತ್ಮನಿಗೆ ನಮಸ್ಕಾರವಿರಲಿ.–

||೨೫೭|| **ಮನಸ್ವಿನೋ ನಿರ್ಜಿತದಿಗ್ಗಜೇಂದ್ರಾ** ಜಡಭರತನು
**ಮಮೇತಿ ಸರ್ವೇ ಭುವಿ ಬದ್ಧವೈರಾಃ |** ರಹೂಗಣ ರಾಜ
**ಮೃಧೇ ಶಯೀರನ್ನತು ತದ್ವ್ರಜಂತಿ**
**ಯನ್ನ್ಯಸ್ತದಂಡೋ ಗತವೈರೋಽಭಿಯಾತಿ ||** ೫-೧೩-೧೫

ಅಕ್ರೋಧ (ಸಿಟ್ಟಾಗದಿರುವದು) ಎಂದು ಕರೆಯಲ್ಪಡುವ 'ಅಹಿಂಸೆ'ಯೆಂಬ ಭಾಗವತ ಧರ್ಮವು ಪರಮಾತ್ಮನ ಅನುಗ್ರಹವನ್ನು ತಂದುಕೊಟ್ಟು ಮಹಾಪುರುಷಾರ್ಥ ಪಡೆಯಲು ಸಾಧನವಾಗಿರುವದು. ಆದುದರಿಂದ ಅಹಿಂಸೆಯೆಂಬ ಭಾಗವತ ಧರ್ಮವನ್ನು ಅಗತ್ಯವಾಗಿ ಆತ್ಮಸಾತ್ ಮಾಡಿಕೊಳ್ಳಬೇಕು. ಹೀಗೆ ಮಾಡದಿದ್ದರೆ ಒದಗುವ ಅನರ್ಥವನ್ನು ಇಲ್ಲಿ ವಿವರಿಸುವರು.

ಕಾಮ ಕ್ರೋಧಾದಿ ಆರು ಪ್ರಬಲ ವೈರಿಗಳನ್ನು ಗೆಲ್ಲುವವರಿಗೇನೆ ಮೋಕ್ಷವು ದೊರಕುವದೆಂದು ಜಡಭರತನು ರಹೂಗಣ ರಾಜನಿಗೆ ಹೇಳುವನು–

**ಅರ್ಥ** :– ಮನಸ್ಸನ್ನೇ ಸ್ವಾಧೀನ ಪಡಿಸಿಕೊಂಡು, ಹಗೆತನದ ಭಾವನೆಯನ್ನೇ ತೊರೆದವರು. ಅಂತೆಯ (ದಂಡ) ಹಿಂಸೆಯೆಂಬುದನ್ನೇ ಸರ್ವಥಾ ತ್ಯಜಿಸಿದವರು. ಅಂದರೆ, ಕ್ರೋಧದ್ವೇಷಾದಿಗಳಿಂದ ದೂರವಾಗಿರುವ 'ಅಹಿಂಸೆ'ಯೆಂಬ ಭಾಗವತ ಧರ್ಮದಂತೆ ನಡೆಯುವವರು ಅಂತೆಯೆ ಯಾರಿಗೂ ಯಾವ ನೋವನ್ನೂ ಮಾಡದವರು. ಇಂಥವರು ಪಡೆಯುವ ಪರಮ ಸದ್ಗತಿಯನ್ನು ನಾಲ್ಕು ದಿಕ್ಕುಗಳಿಂದ ಕೂಡಿದ ಅಖಂಡ ಭೂಮಿಯನ್ನು ಸ್ವಾಧೀನ ಪಡಿಸಿಕೊಂಡಿರುವ ರಾಜಶ್ರೇಷ್ಠರೂ ಕೂಡ ಪಡೆಯಲಾರರು. ಏಕೆಂದರೆ ಈ ರಾಜರು 'ಅಜಿತಮನಸ್ಕರು'

ತಮ್ಮ ಮನಸ್ಸನ್ನೇ ಗೆಲ್ಲಲಾಗದವರು, ಆದುದರಿಂದ ತಮ್ಮ ಮನಸ್ಸಿಗೆ ಬಂದ ಹಾಗೆ ವರ್ತಿಸುವವರು. ಇಂಥವರು ಭೂಮಿಯ ಮೇಲಿನ ಎಲ್ಲ ಜನರೊಡನೆ ಹಗೆತನ ಮಾಡುವರು. – 'ಇದು ನನ್ನದೇ ರಾಜ್ಯ' ವೆಂಬ ವ್ಯಾಜ್ಯದಿಂದ ತೊಡಗಿದ ಯಾವುದೇ ಯುದ್ಧದಲ್ಲಿ ಮಡಿದು ರಣಭೂಮಿಯಲ್ಲಿಯೇ ಅವರು ಬೀಳುವರು. ಸ್ವಾರ್ಥದ ಯುದ್ಧದಲ್ಲಿ ಮರಣ ಹೊಂದಿದ ಈ ರಾಜರು ನರಕಾದಿ ಅನರ್ಥಗಳನ್ನೇ ಪಡೆಯುವರು. (ಅಹಿಂಸೆ-೩)

||೨೫೪|| ತತ್ತ್ವೇ ಮನೋ ದರ್ಶನೇ ದೃಗಪಿ ಸ್ತುತೌ ಚ ಪ್ರಹ್ಲಾದ

ವಾಕ್ಕರ್ಮಣಿ ಹ್ಯಪಿ ಕರೌ ಶ್ರವಣಂ ಕಥಾಯಾಂ |

ಸಂಸೇವಯಾ ತ್ವಯಿ ವಿನೇತಿ ಷಡಂಗಯಾ ಕಿಂ

ಭಕ್ತಿಂ ಜನಃ ಪರಮಹಂಸಗತೌ ಲಭೇತ || ೭-೯-೫೦

ಗುಣಪೂರ್ಣ (ಬ್ರಹ್ಮ)ನಾದ ಶ್ರೀಹರಿಯ ವಿಷಯದಲ್ಲಿಯೆ ಸಕಲ ಇಂದ್ರಿಯಗಳನ್ನು ತೊಡಗಿಸುವದು (ಚರಣ); 'ಬ್ರಹ್ಮಣಿ ಚರಣ'ವೇ ಬ್ರಹ್ಮಚರ್ಯೆಯಾಗಿದೆ. ಇದೆಂದರೆ ಪರಮಾತ್ಮನ ಬಗ್ಗೆ ಧ್ಯಾನ-ಚಿಂತನೆಗಳನ್ನು ಮಾಡುವದು ಆಯಾ ಇಂದ್ರಿಯದಿಂದ ಮಾಡಲನುಕೂಲವಾದ ಪರಮಾತ್ಮನ ಸೇವಾದಿಗಳನ್ನು ಮಾಡುವದೆ ಬ್ರಹ್ಮಚರ್ಯೆ. ಮನಸ್ಸನ್ನೊಳಗೊಂಡು ಕಣ್ಣು, ಕಿವಿ ಮುಂತಾದ ಆರು ಜ್ಞಾನೇಂದ್ರಿಯಗಳೇ ಪರಮಾತ್ಮನ ಸೇವಾರೂಪವಾದ ಬ್ರಹ್ಮಚರ್ಯಕ್ಕೆ ಉಪಕರಣಗಳು, ಸಾಧನಗಳು. ಭಕ್ತಿಗೆ ಜನಕವಾದ 'ಷಡಂಗಸೇವೆ' ಯೆಂತಲೂ ಇದಕ್ಕೆ ಹೇಳುವರು

**ಅರ್ಥ:**- ಮನಸ್ಸು ಭಗವಂತನ ಬಗ್ಗೆ, ಭಗವತ್ ತತ್ತ್ವಗಳ ಬಗ್ಗೆ (ಸದಾ) ಆಲೋಚಿಸಬೇಕು. ಭಗವಂತನ ವಿವಿಧ ರೂಪಗಳನ್ನೇ ಕಣ್ಣು ಸರ್ವತ್ರ ಕಾಣಬೇಕು. ನುಡಿಯುವ (ವಾಕ್) ಶಕ್ತಿಯನ್ನು ಭಗವಂತನ ಸ್ತೋತ್ರ ಮಾಡುವದರಲ್ಲಿಯೇ ತೊಡಗಿಸಬೇಕು. ಶ್ರೀಹರಿಯ ಮಂದಿರದ ಸ್ವಚ್ಛತೆ (ಅಲಂಕರಣ) ಮುಂತಾದ ದೇವ ಕಾರ್ಯಗಳಲ್ಲಿಯೆ ಕೈಗಳೆರಡನ್ನೂ ತೊಡಗಿಸಬೇಕು. ಭಗವಂತನ ಲೀಲಾ ಕಥೆಗಳನ್ನು ಕೇಳುವದೆ ಕಿವಿಗಳ ಕಾರ್ಯವಾಗಿರಬೇಕು. ಮನ ಮೊದಲಾದ ಆರು ಜ್ಞಾನೇಂದ್ರಿಯಗಳನ್ನು ಭಗವಂತನ ಸೇವೆಯಲ್ಲಿಯೇ ವಿನಿಯೋಗಿಸದಿದ್ದ ಜನರಿಗೆ, ಪರಮ ಹಂಸರಿಗೆ (ಭಾಗವತ ಶಿರೋಮಣಿಗಳಿಗೆ) ಆಶ್ರ

ಯದಾತನಾದ ಶ್ರೀಹರಿಯಲ್ಲಿ ಭಕ್ತಿಯು ಹೇಗೆ ಉಂಟಾಗುವದು ? (ಎಂದಿಗೂ ಉಂಟಾಗದು-ಎಂಬರ್ಥ). -ಇಲ್ಲಿ 'ಕರೌ' (ಕೈಗಳೆಂಬುದು) ಕೇವಲ ಸಾಂಕೇತಿಕ ಇಡೀ ದೇಹವೇ ಪರಮಾತ್ಮನ ಸೇವೆ ಅರ್ಚನೆಗಳಿಗೆ ಮೀಸಲಾಗಿರಬೇಕು.. ಎಂಬುದೇ ಅಭಿಪ್ರಾಯ. - 'ದೇಹ' ವೆಂಬ ಅರ್ಥದಲ್ಲಿ 'ಕರ' ಶಬ್ದವನ್ನು ಬಳಸುವದು ಜ್ಞಾನಿಗಳಿಂದ ಸಾಂಪ್ರದಾಯಿಕವಾಗಿದೆ. ರೂಢಿಯೂ ಆಗಿದೆ. ಅವಂಗಳ ಒಟ್ಟು ಸಮೂಹವಾದ ದೇಹಕ್ಕೆ 'ಕರ' ವೆಂದು ಹೇಳುವದುಂಟು. ಅದಲ್ಲ ಹೋಮ, ಹವನ, ಜಪ ಹಾಗೂ ದಾನ ಮುಂತಾದ ಭಗವತ್ ಸೇವೆಯ ಸಾಧನಗಳಲ್ಲಿ ಕೈಗಳೇ ಪ್ರಧಾನ ಅವಯವಗಳು, ಆದರಿಂದಲೂ ಕರಗಳೆಂದರೆ ದೇಹವೆಂಬರ್ಥ. ಆದುದರಿಂದಲೆ, -'ಮನ ಉಕ್ತಿ ಪಾಣಿಭಿಃ' ಎಂಬಲ್ಲಿ ಪಾಣಿ ಕೈಗಳು ಎಂದರೆ, ಒಟ್ಟು ಶರೀರವೆಂತಲೆ ಅರ್ಥ. ಇನ್ನೂ ಒಂದು ಸಂಗತಿಯೆಂದರೆ, ಇಲ್ಲಿ 'ಕರೌ' ಎಂಬ ಎರಡು ಕೈಗಳು ಎಂಬ ದ್ವಿವಚನಕ್ಕೂ ಸಾರ್ಥಕತೆ 'ಕರೌ' ಎಂಬ ದ್ವಿವಚನವು ಕೈಗಳೂ. ಅವುಗಳೊಡನೆ ಒಟ್ಟು ದೇಹವೂ, ಎರಡನ್ನೂ ಸೂಚಿಸುವದಕ್ಕಾಗಿಯೆ. ಎರಡು ಕೈಗಳಿರುವದರಿಂದ ದ್ವಿವಚನದ ಪ್ರಯೋಗವಿರಬಹುದಲ್ಲವೆ? ಎಂದರೆ, ಕಿವಿಕಣ್ಣುಗಳೂ ಎರಡು ಆಗಿವೆ. ಅವುಗಳಿಗೂ ದ್ವಿವಚನವನ್ನು -('ನೇತ್ರೆ, ಕರ್ಣೆ') ಎಂದು ಹೇಳುತ್ತಿದ್ದರು. ಹಾಗೆ ಮಾಡಿಲ್ಲ. ಕರಗಳಿಗೆ ಮಾತ್ರ ದ್ವಿವಚನವಿದೆ. ಕಣ್ಣು ಕಿವಿಗಳು ಎರಡೆಂಬುದು ಎಲ್ಲರಿಗೂ ಗೊತ್ತು. ಅದನ್ನೇಕೆ ಲಕ್ಷ್ಯಕ್ಕೆ ತಂದುಕೊಡಬೇಕು? ಎಂದರೆ, ನಮ್ಮೆಬ್ಬರ ಮತವು ಸಮಾನವಾದವು. ನೆನಪು ಮಾಡಿಕೊಡುವದು ಅಗತ್ಯವಿಲ್ಲದಿರುವಾಗ್ಗೆ, ಏಕ ಇಲ್ಲವೆ ದ್ವಿವಚನವನ್ನು ಸ್ವೇಚ್ಛೆ (ಬೇಕಾದುದೊಂದನ್ನು)ಯಿಂದ ಉಪಯೋಗಿಸಲು ಬರುವಂತಿರಲು, ಸಜಾತೀಯ ಉಳಿದ ಅವಯವಗಳನ್ನು ಏಕ ವಚನದಲ್ಲಿ ಹೇಳಿ, 'ಕೈಗಳೆರಡು' ಎಂದು ಕೈಬಗ್ಗೆ ಮಾತ್ರ ದ್ವಿವಚನವನ್ನು ಇಲ್ಲಿ ಬಳಸಿದುದಕ್ಕೆ ಇದೇ ಕಾರಣವಾಗಿದೆ. ಆದುದರಿಂದ, 'ಕರೌ' (ಕೈಗಳೆರಡು) ಎಂದು ಹೇಳಿದುದಕ್ಕೆ, ಕೈಗಳೂ ಕೈಗಳಿಂದ ಕೂಡಿದ ಒಟ್ಟು ದೇಹವು, ಇವೆರಡನ್ನೂ ತೆಗೆದುಕೊಳ್ಳಬೇಕೆಂಬುವದು ತಿಳಿದುಬರುತ್ತಿದೆ.

ಆದುದರಿಂದ, ಮನವನ್ನೊಳಗೊಂಡು ಆರೂ ಜ್ಞಾನೇಂದ್ರಿಯಗಳಿಂದ (ನಿನ್ನ) ಭಗವಂತನ ಚಿಂತನೆ ಮುಂತಾದ ಬಹುಮುಖವಾದ ಉಪಾಸನೆಯನ್ನು ಚನ್ನಾಗಿ (ನಿಷ್ಠೆಯಿಂದ) ಮಾಡದ 'ಮುಮುಕ್ಷು' ಗಳಿಗೆ (ಮುಕ್ತಿಯನ್ನು ಬಯಸುವವರಿಗೆ) ಶ್ರೀ ಹರಿಯ ಬಗ್ಗೆ ಪರಿಪೂರ್ಣವಾದ (ವಿಶುದ್ಧವಾದ) ಭಕ್ತಿಯು ಹೇಗೆ ಉಂಟಾದೀತು ? ಎಂದಿಗೂ ಆಗದು. ಆದುದರಿಂದ, ಅಂಥ ಭಕ್ತಿಗೆ ಈ ಬಗೆಯ

ಷಡಂಗ ಸೇವೆಯು ಅಂತರಂಗ ಸಾಧನವೆಂಬುದು ಅಭಿಪ್ರಾಯ. 'ಪರಮಹಂಸರು' ಎಂದರೆ ಸಂಪೂರ್ಣ ಚಿತ್ತಶುದ್ಧಿಯುಳ್ಳವರು. ಚಿತ್ತಶುದ್ಧಿಯುಳ್ಳ ಪರಮಹಂಸರಿಗೆ ಪರಮಾತ್ಮನೇ ಆಶ್ರಯ; ಅವರು ಪರಮಾತ್ಮನನ್ನೇ ಪೂರ್ಣವಾಗಿ ನಂಬಿರುವರು. 'ಷಡಂಗಸೇವೆ'ಯಲ್ಲಿ ಕರ್ಮೇಂದ್ರಿಯಗಳೊಡನೆ ಜ್ಞಾನೇಂದ್ರಿಯಗಳೂ ಸಮಾವೇಶವಾಗಿವೆ.

||೨೫೯|| ವಾಣೀ ಗುಣಾನುಕಥನೇ ಶ್ರವಣೌ ಕಥಾಯಾಂ
ಹಸ್ತೌ ಚ ಕರ್ಮಸು ಮನಸ್ತವ ಪಾದಯೋರ್ನಃ ।
ಸ್ಮೃತ್ಯಾಂ ಶಿರಸ್ತವ ನಿವಾಸಜಗತ್ಪ್ರಣಾಮೇ
ದೃಷ್ಟಿಃ ಸತಾಂ ದರ್ಶನೇಽಸ್ತು ಭವತ್ತನೂನಾಂ ॥

೧೦-೧೧-೩೮
/೧೦

ಕುಬೇರನ ಮಕ್ಕಳಾದ ನಳಕೂಬರರು ಶ್ರೀ ಕೃಷ್ಣನಿಗೆ ಮಾಡಿಕೊಂಡ ಪ್ರಾರ್ಥನೆ ಇದು.

ಷಡಂಗ ಸೇವೆ (ಬ್ರಹ್ಮಚರ್ಯ) ಯೆಂಬ ಈ ಭಾಗವತ ಧರ್ಮವು ಭಕ್ತಿ ಹುಟ್ಟಿಸಲು ಅಂತರಂಗದ ಸಾಧನವಾಗಿದೆ, ಆದಕಾರಣ ಅದು ಅಗತ್ಯವಾಗಿದೆ ಯೆಂಬುದು ಮಾತ್ರವಲ್ಲ. ಭಗವದ್ಭಕ್ತರಾದ ಭಾಗವತರಿಂದಲೂ ತನಗೆ ಅದು ಬೇಕೆಂದು ಪ್ರಾರ್ಥಿಸಲ್ಪಡುತ್ತಿದೆ.

ಅರ್ಥ :- ನಮ್ಮಿಬ್ಬರ (ನಳಕೂಬರರ) ವಾಕ್ ಶಕ್ತಿ (ನುಡಿಯುವದೆಲ್ಲವೂ ಹೇ ದೇವದೇವೋತ್ತಮಾ, ಕೃಷ್ಣಾ ! ನಿನ್ನ ಗುಣಕೃತಿಗಳನ್ನು ಸ್ತುತಿಸುವದೇ ಆಗಿರಲಿ. ಕಿವಿಗಳೆರಡೂ ನಿನ್ನ ಲೀಲಾ ಚರಿತ್ರೆಗಳನ್ನು ಕೇಳುವದರಲ್ಲಿಯೆ, ಕೈಗಳೆರಡೂ ನಿನ್ನ ಪೂಜಾದಿ ಕಾರ್ಯಗಳಲ್ಲಿಯೆ, ಮನಸ್ಸು ನಿನ್ನ ಪಾದಗಳ ಧ್ಯಾನ ಚಿಂತನೆಗಳಲ್ಲಿಯೆ, ಶಿರಸ್ಸು ನಿನ್ನಡಿಗಳಿಗೆ ಬಾಗುವದರಲ್ಲಿಯೆ, ನಿನ್ನ ಸಾಕ್ಷಾತ್ (ಮುಖ್ಯತಃ) ಪ್ರತಿಮೆ (ಪ್ರತೀಕ) ಗಳಾಗಿರುವ ಸಜ್ಜನರನ್ನೂ, ಚರಾಚರ ವಸ್ತುಗಳಲ್ಲಿ ಪರ್ಯಾಯದಿಂದ ( ಅಮುಖ್ಯವಾಗಿ ) ಇರುವ ನಿನ್ನ ಪ್ರತಿಮೆ ( ರೂಪ) ಗಳನ್ನು ಕಾಣುವದರಲ್ಲಿಯೆ ಕಣ್ಣುಗಳು-ಇವೆಲ್ಲ ಇಂದ್ರಿಯಗಳು ಆಸಕ್ತವಾಗಿರಲಿ.

ಈ ಶ್ಲೋಕದಲ್ಲಿ (ತವ-ಭವತ್) ನಿನ್ನ ನಿನ್ನ ಎಂದು ಹೇಳವದರಲ್ಲಿ, ನಿನ್ನ ಹೊರತು ಇನ್ನೊಬ್ಬರಲ್ಲಿ ಸರ್ವಥಾ ಬೇಡ, ಎಂಬ ಅರ್ಥವನ್ನೇ ಸೂಚಿಸುತ್ತಿದೆ ಯೆಂದ ಶ್ರೀ ಸತ್ಯ ಧರ್ಮತೀರ್ಥರ ವಿವರಣೆಯಾಗಿದೆ.

ಪರೀಕ್ಷಿತ ರಾಜ ಶುಕಾಚಾರ್ಯರಲ್ಲಿ

॥೨೬೦॥ ಸಾ ವಾಗನ್ತಸ್ಯ ಗುಣಾನ್ ಗೃಣೀತೆ
ಕರೌ ಚ ತತ್ಕರ್ಮಕರೌ ಮನಶ್ಚ ।
ಸ್ಮರೇದ್ವಸಂತಂ ಸ್ಥಿರಜಂಗಮೇಷು
ಶೃಣೋತಿ ತತ್ಪುಣ್ಯಕಥಾಃ ಸ ಕರ್ಣಃ ॥

10-98-19

ಭಗವಂತ ಹಾಗೂ ಭಗವಂತನ ವಿಷಯಗಳಲ್ಲಿ ಸಂಪೂರ್ಣವಾಗಿ ತಲ್ಲೀನವಾದ ವಾಗಾದಿ ಇಂದ್ರಿಯಗಳನ್ನು ಭಗವಂತನ ಭಕ್ತರು ತುಂಬಾ ಹೊಗಳಿರುವದರಿಂದಲೂ ಈ ಷಡಂಗ ಸೇವೆಯು ಅಗತ್ಯವಾಗಿದೆ.

**ಅರ್ಥ :–** ಅನಂತ ಗುಣ ಪರಿಪೂರ್ಣನಾದ ಅನಂತನಾಮಕ ಶ್ರೀ ಹರಿಯ ಗುಣಗಳನ್ನು ಹೊಗಳುವದೇ ವಾಣಿಗೆ ( ವಾಕ್‌ಶಕ್ತಿಗೆ ನಾಲಿಗೆಗೆ ) ಸಾರ್ಥಕತೆ, ಯೆಂದು ಕರೆಯಲು ಅಂಥ ವಾಣಿಯೆ ಯೋಗ್ಯವಾದುದು. ಭಗವಂತನ ಅರ್ಚನಾದಿ ಬಹುಮುಖ ಸೇವೆಯನ್ನು ಸಲ್ಲಿಸುವ ಕೈಗಳೇ ಕೈಗಳು. ಚರಾಚರ ವಸ್ತುಗಳಲ್ಲಿ ಅಂತರ್ನಿಯಾಮಕನಾಗಿ ನೆಲಿಸಿರುವ ಪರಮಾತ್ಮನನ್ನು ಸ್ಮರಿಸುವ ನೆನೆಯುವ ಮನಸ್ಸೆ ಮನಸ್ಸು. ಭಗವಂತನ ಮಂಗಳಕರವಾದ ಲೀಲಾಕಥೆಗಳನ್ನು ಭಕ್ತಿಯಿಂದ ಕೇಳುವ ಕಿವಿಗಳೇ ನಿಜವಾಗಿ ಕಿವಿಗಳು. ಹೀಗೆ ಭಗವದ್ವಿಷಯಗಳಲ್ಲಿ ತೊಡಗುವದೆ ಇವೆಲ್ಲ ಇಂದ್ರಿಯಗಳಿಗೆ ಸಾರ್ಥಕತೆ.

'ರಂಗಯ್ಯನS ......ಕಾಣುವದೇ ಕಣ್ಣು ..' ಎಂಬ ಕೀರ್ತನೆಯಲ್ಲಿ ದಾಸವರ್ಯರು ಇದೇ ಭಾವವನ್ನು ವ್ಯಕ್ತಗೊಳಿಸಿರುವರು.

ಪರೀಕ್ಷಿತ

॥೨೬೧॥ ಶಿರಸ್ತು ತಸ್ಯೋಭಯಲಿಂಗಮಾನಮೇ-
ತ್ತದೇವ ಯತ್ಪಶ್ಯತಿ ತದ್ಧಿ ಚಕ್ಷುಃ ।
ಅಂಗಾನಿ ವಿಷ್ಣೋರಥ ತಜ್ಜನಾನಾಂ
ಪಾದೋದಕಂ ಯಾನಿ ಭಜಂತಿ ನಿತ್ಯಂ ॥ ೧೦-೯೮-(೧೯, ೨೦)

(ಉಭಯಲಿಂಗ) ಚರಾಚರವಸ್ತುಗಳಲ್ಲಿ ಅಂತರ್ನಿಯಾಮಕವಾಗಿರುವ ಪರಮಾತ್ಮನ ಪ್ರತೀಕಗಳಿಗೆ ತಲೆಯುಬಾಗಿ ನಮಿಸಬೇಕು. ಆತನ ಪ್ರತೀಕ (ಪ್ರತಿಮೆ) ಗಳನ್ನು ಕಾಣುವ ಕಣ್ಣೇ ಕಣ್ಣು. ಪರಮಾತ್ಮನ (ಸಾಲಿಗ್ರಾಮ ಇತ್ಯಾದಿಗಳಲ್ಲಿ) ಹಾಗೂ ಆತನ ಭಕ್ತರ ಪಾದೋದಕವನ್ನು ನಿತ್ಯವೂ ಭಕ್ತಿಯಿಂದ ಧರಿಸಿ (ಪವಿತ್ರವಾಗುವ) ಅವಯದಗಳೇ ಅವಯವಗಳು. ಪರೀಕ್ಷಿತನು ಶ್ರೀ ಶುಕರಿಗೆ ಮಾಡಿದ ಬಿನ್ನಹ.

||೨೬೨|| ಸ ವೈ ಮನಃ ಕೃಷ್ಣಪದಾರವಿಂದಯೋಃ
ವಚಾಂಸಿ ವೈಕುಂಠಗುಣಾನುವರ್ಣನೇ ।
ಕರೌ ಹರೇರ್ಮಂದಿರಮಾರ್ಜನಾದಿಷು
ಶ್ರುತಿಂ ಚಕಾರಾಚ್ಯುತಸತ್ಕಥೋದಯೇ ॥ 9-4-18

ಶುಕರು
ಅಂಬರೀಷನ ಭಕ್ತಿ

ಭಾಗವತ ಶಿರೋಮಣಿಯಾದ ಅಂಬರೀಷನು ಮಾಡುತ್ತಿದ್ದ ಶ್ರೀ ಹರಿ ಪೂಜೆಯ ರೀತಿ ಇದು :- ಎಲ್ಲ ಇಂದ್ರಿಯಗಳನ್ನೂ ಭಗವಂತನ ಸೇವೆಯಲ್ಲಿ ತೊಡಗಿಸಬೇಕೆಂಬುವದನ್ನು ಹಿಂದಿನ ಹಿರಿಯ ಭಗವದ್ಭಕ್ತರೂ ಮಾಡಿ ತೋರಿಸಿದ್ದಾರೆ.

ಅರ್ಥ:- ಅವನು (ಅಂಬರೀಷರಾಜನು) ಶ್ರೀಕೃಷ್ಣನ ಪಾದ ಕಮಲಗಳಲ್ಲಿಯೆ ತನ್ನ ಮನಸ್ಸನ್ನು ನಿಲ್ಲಿಸಿದನು; ವೈಕುಂಠದೊಡೆಯನಾದ ಶ್ರೀಹರಿಯ ಗುಣಗಾನ ಮಾಡುವದರಲ್ಲಿಯೆ ಆತನ ಮಾತುಗಳ ವಿನಿಯೋಗ; ಶ್ರೀಹರಿಯ ಮಂದಿರದ (ದೇಗುಲದ) ಸ್ವಚ್ಛತೆ, ಸಾರಣೆ ಇತ್ಯಾದಿ ಸೇವೆಯಲ್ಲಿ ಆತನ ಕೈಗಳು ಉದ್ಯುಕ್ತವಾಗಿದ್ದವು. ಅಚ್ಯುತನ ಉತ್ತಮವಾದ ಲೀಲಾ ಕಥೆಗಳನ್ನು ಕೇಳುವದೇ ಆತನ ಕಿವಿಗಳ ಕಾರ್ಯ.

||೨೬೩|| ಮುಕುಂದಲಿಂಗಾಲಯದರ್ಶನೇ ದೃಶೌ
ತದ್ಭೃತ್ಯಗಾತ್ರಸ್ಪರ್ಶೇಽಂಗಸಂಗಮಂ ।
ಘ್ರಾಣಂ ಚ ತತ್ಪಾದಸರೋಜಸೌರಭೇ
ಶ್ರೀಮತ್ತುಲಸ್ಯಾಂ ರಸನಾಂ ತದರ್ಪಿತೇ ॥ 9-4-19

ಶುಕರು

ಅರ್ಥ:- ಆತನ (ಅಂಬರೀಷರಾಜನು) ಮುಕ್ತಿಪ್ರದನಾದ ಮುಕುಂದನ ದೇಗುಲಗಳಲ್ಲಿರುವ ಮೂರ್ತಿಗಳ ದರುಶನಕ್ಕಾಗೆಯೆ ಕಣ್ಣುಗಳನ್ನು, ಹರಿಭಕ್ತರ (ಪಾದ) ಸ್ಪರ್ಶನ, ಅವರ ಆಲಿಂಗನಗಳಿಗಾಗಿಯೆ ತನ್ನ ದೇಹದ ಆಸಕ್ತಿಯನ್ನು, ಶ್ರೀಹರಿಪಾದಗಳಿಗೆ ಸಮರ್ಪಿತವಾದ ಕಮಲ ಮುಂತಾದ ಹೂಗಳ ಸುಗಂಧವನ್ನು ಸೇವಿಸುವದಕ್ಕಾಗಿಯೆ ತನ್ನ (ವಾಸನೇಂದ್ರಿಯ) ಮೂಗನ್ನು, ಶ್ರೀಹರಿ ಪಾದಕ್ಕೆ ಅರ್ಪಿಸಿದ ಪವಿತ್ರ ತುಲಸೀದಳ ಅಂಥ ತುಳಸೀದಳವನ್ನು ಹಾಕಿದ ಆಹಾರವನ್ನು ತೆಗೆದುಕೊಳ್ಳುವದರಲ್ಲಿಯೆ ತನ್ನ ನಾಲಿಗೆಯನ್ನು ಉಪಯೋಗಿಸಿದನು.

||೨೬೪|| ಪಾದೌ ಹರೇಃ ಕ್ಷೇತ್ರಪದಾನುಸರ್ಪಣೇ
ಶಿರೋ ಹೃಷೀಕೇಶಪದಾಭಿವಂದನೇ ।
ಕಾಮಂ ತು ದಾಸ್ಯೇ ನ ತು ಕಾಮಕಾಮ್ಯಯಾ
ಯದುತ್ತಮಶ್ಲೋಕಜನಾಶ್ರಯಾಂ ರತಿಂ ॥ 9-4-20

ಶುಕರು

ಮನಸ್ಸನ್ನು ಭಗವಂತನ ಪಾದದಲ್ಲಿ ನಿಲ್ಲಿಸುವಂತೆಯೇ, ಮನಸ್ಸಿನ ಕಾರ್ಯಗಳಾದ ಕಾಮ(ಅಪೇಕ್ಷೆ-ಬಯಕೆ) ಮುಂತಾದ ಮನೋವೃತ್ತಿಗಳನ್ನೂ ಭಗವಂತನ ಸೇವೆಯಲ್ಲಿಯೆ ತೊಡಗಿಸಬೇಕು.

**ಅರ್ಥ :-** ( ಮಂಗಳಕರವಾದ ) ಶ್ರೀ ವಿಷ್ಣುಕ್ಷೇತ್ರಗಳ ಸಂದರ್ಶನಕ್ಕಾಗಿ (ಅವುಗಳಿಗೆ ಹೋಗಿ ಬರುವದಕ್ಕಾಗಿ) ತನ್ನ ಕಾಲುಗಳನ್ನು, ಶ್ರೀ ಹೃಷೀಕೇಶನ ಪಾದಕ್ಕೆ ಬಾಗಿ ನಮಿಸುವದಕ್ಕಾಗಿಯೆ ತನ್ನ ತಲೆಯನ್ನು, ಶ್ರೀ ಹರಿಯ ಸೇವೆ ಮಾಡುವದರಲ್ಲಿಯೆ ತನ್ನ ಬಯಕೆ-ಇಚ್ಛೆಯನ್ನು ರಾಜನು ವಿನಿಯೋಗಿಸಿದನು. ವಿಷಯ ಸುಖಗಳನ್ನೆಷ್ಟೂ ಆತನು ಅಪೇಕ್ಷಿಸಲಿಲ್ಲ. ಮಂಗಳಾತ್ಮನಾದ ಶ್ರೀಹರಿಯ ಭಕ್ತರಲ್ಲಿಯೆ ಆತನ (ರತಿ-ಪ್ರೀತಿ) ಆಸಕ್ತಿಯು ತೊಡಗಿತ್ತು.

**||೨೬೫|| ಏವಂ ಸದಾ ಕರ್ಮಕಲಾಪಮಾತ್ಮನಃ**
**ಪರೇಽಧಿಯಜ್ಞೇ ಭಗವತ್ಯಧೋಕ್ಷಜೇ ।**
**ಸರ್ವಾತ್ಮಭಾವಂ ವಿದಧನ್ಮಹೀಮಿಮಾಂ**
**ತನ್ನಿಷ್ಠವಿಪ್ರಾಭಿಹಿತಃ ಶಶಾಸ ಹ ॥** ೯-೬-(೬,೭,೮,೯)

ಹೆಚ್ಚಿಗೇನು ಹೇಳುವದಿದೆ ? ಚಿತ್ತಶುದ್ಧಿಯು ಹೆಚ್ಚುತ್ತ ಹೋಗುವಂತೆಯೆ, ಅದನ್ನು ಅನುಸರಿಸಿ ಹದಿನಾರು ಕಲೆ (ಅಂಶ) ಗಳಿಂದ ಯುಕ್ತವಾದ, ಶರೀರದ ಸಕಲ ಅವಯವಗಳಿಂದ ಮಾಡುವ ಸಕಲ ಕಾರ್ಯ (ವ್ಯವಹಾರ) ಗಳನ್ನೆಲ್ಲ ಭಗವಂತನಿಗೆ, ಭಗವತ್ ಸೇವೆಗೆ ಹೊಂದಿಕೊಳ್ಳುವಂತೆ ನೋಡಿಕೊಳ್ಳಬೇಕು. ಮುಂದೆ ಇದೇ ಅಭಿಪ್ರಾಯವನ್ನೇ ಹೇಳಿರುವರು.

**ಅರ್ಥ :-** ಅಂಬರೀಷನು (ಅವನು) ಈ ರೀತಿಯಾಗಿ ನಡೆದುಕೊಂಡನು. ತಾನು ಶರೀರದಿಂದ ಮಾಡುವ ಸಕಲ ಕರ್ಮ ( ಯಜ್ಞ ) ಗಳಿಗೆ ಪ್ರೇರಕನೂ, ಪ್ರಭುವೂ, ಇಂದ್ರಿಯಗಳಿಗೆ ಅಗೋಚರನೂ ಆದ ( ತಿಳಿಯಲು ಅಸಾಧ್ಯನಾದ ) ಪುರುಷೋತ್ತಮನಾದ ಭಗವಂತನಲ್ಲಿ ಪರಿಪೂರ್ಣ ಭಕ್ತಿಯುಳ್ಳವನಾಗಿ, ಭಗವದ್ಭಕ್ತರಿಂದ ಜ್ಞಾನಿಗಳ ಉಪದೇಶದಿಂದ ಸಕಲಕರ್ಮಗಳನ್ನು ಶ್ರೀಹರಿಗೆ ಸಮರ್ಪಿಸುತ್ತ, ರಾಜ್ಯವನ್ನು ಆಳಿದನು. ಅಂಬರೀಷನು ತನ್ನ ಸ್ವಂತ ಬುದ್ಧಿಯಿಂದ ಹೀಗೆ ವರ್ತಿಸಲಿಲ್ಲ, ಜ್ಞಾನಿಗಳ ಉಪದೇಶದಂತೆಯೆ ನಡೆದುಕೊಂಡನು. ದೇಹದಿಂದ ನಡೆಯುವ ಸಕಲ ಕರ್ಮಗಳನ್ನು ಭಗವಂತನಿಗೆ ಸಮರ್ಪಿಸುವದಕ್ಕೆ, ಸರ್ವಂಕಷ ಸಮರ್ಪಣಕ್ಕೆ, ಪೂರ್ವದ ಹಿರಿಯರು ನಡೆದು ತೋರಿಸಿದ ಸಂಪ್ರದಾಯವೂ ಉಂಟು, ಎಂಬುದನ್ನು ಸೂಚಿಸಿರುವರು.

'ಹ' ಎಂಬುದರಿಂದ ಇದು ಪುರಾಣಪ್ರಸಿದ್ಧಸಂಗತಿ ಎಂಬ ಅಭಿಪ್ರಾಯವು.

||೨೬೬|| ಬಿಲೇ ಬತೋರುಕ್ರಮವಿಕ್ರಮಾನ್ಯೇ
ನ ಶೃಣ್ವತಃ ಕರ್ಣಪುಟೇ ನರಸ್ಯ ।
ಜಿಹ್ವಾಽಸತೀ ದಾರ್ದುರಿಕೇವ ಸೂತ
ನ ಚೋಪಗಾಯತ್ಯುರುಗಾಯಗಾಥಾಃ ॥

ಶೌನಕರು
ಸೂತರಲ್ಲಿ
2-3-20

ಸಕಲ ಇಂದ್ರಿಯಗಳಿಂದಲೂ ಮಾಡುವ ಎಲ್ಲ ಕಾರ್ಯಗಳೂ ಭಗವಂತನಿಗೆ (ಆತನ ಧ್ಯಾನ, ಅರ್ಚನೆ-ಇತ್ಯಾದಿಗಳಿಗೆ) ಸಂಬಂಧಿಸಿ (ಅದನ್ನೇ ಮುಖ್ಯವಾಗಿ ಇಟ್ಟುಕೊಂಡು) ಸಾಗಬೇಕು, ಎಂಬುವದೇ ಬ್ರಹ್ಮಚರ್ಯೆ. ಈ ಸ್ವರೂಪದ ಬ್ರಹ್ಮಚರ್ಯೆಯನ್ನೇ ಶ್ರೇಷ್ಠರಾದ ಭಗವದ್ಭಕ್ತರು ಒಯಸುವದರಿಂಧ, ಅಂಥದನ್ನೆ ಅವರು ಹೊಗಳುವದರಿಂದ, ಅದರಂತೆ ಆಚರಿಸಿ ತೋರಿಸಿದುದರಿಂದ, ಅಂಥ ಬ್ರಹ್ಮಚರ್ಯೆಯನ್ನು ಆತ್ಮಸಾತ್ ಮಾಡಿಕೊಳ್ಳುವದು ಅಗತ್ಯವಾಗಿದೆ. ಹೀಗೆ ಮಾಡದೆ, ಅದಕ್ಕೆ ವಿಪರೀತವಾಗಿ ನಡೆದುಕೊಂಡವರ ಸ್ಥಿತಿಗತಿಯೇನೆಂಬುದನ್ನು ಅಂಥವರೇ ತಮ್ಮ ಶಬ್ದಗಳಲ್ಲಿಯೆ ಹೇಳಿರುವರು.

ಅರ್ಥ :- ಹೇ ಸೂತನೆ ! ಬ್ರಹ್ಮಾದಿ ಶ್ರೇಷ್ಠ ದೇವತೆಗಳೂ ಕೂಡ ಹಾಡಿ ಹೊಗಳುವ ಭಗವಂತನ ಅದ್ಭುತವಾದ ಲೀಲಾಕೃತಿಗಳನ್ನು ಕೇಳದ ಮಾನವನ ಕಿವಿಗಳು, (ಎಷ್ಟೇ ಅಲಂಕಾರಗಳನ್ನು ಧರಿಸಿದರೂ) ದೇಹದಲ್ಲಿಯ ತೂತು (ರಂಧ್ರ) ಗಳು ಮಾತ್ರ ಅಂಥ ಕಿವಿಗಳು ವ್ಯರ್ಥವಾದವುಗಳು, ಅವುಗಳನ್ನು (ಲೀಲಾಕೃತಿಗಳನ್ನು) ಪಾಡಿಪೊಗಳದ ದುಷ್ಟನಾಲಿಗೆಯು ರಟರಟಿಸುವ ಕಪ್ಪೆಯ ನಾಲಿಗೆಯಂತೆ. ತಮ್ಮ ವಾಕ್ ಚಾತುರ್ಯದಿಂದ ಬಲಿಷ್ಠರಾದ ವಾಗ್ಮಿಗಳನ್ನು ತೃಪ್ತಿಗೊಳಿಸುವ, ಚತುರ ಮಾತಗಾರಿಕೆಯಿಂದ ಆತನು ಜಗತ್ತಿನಲ್ಲಿ ಮನ್ನಣೆಯನ್ನು ಪಡೆಯುತ್ತಿದ್ದರೂ,ಅಂಥವನ ನಾಲಿಗೆ ಒಟಗಟ್ಟುವ ಕಪ್ಪೆಯ ನಾಲಿಗೆಯಂತೆಯೆ ! ಇದ್ದೂ ಇಲ್ಲದಂತೆಯೆ. ಆದುದರಿಂದ ಅಂಥವನ ಮಾತಿಗೆ (ನಾಲಿಗೆಗೆ) ಸಜ್ಜನರು ಎಷ್ಟೂ ಬೆಲೆ ಕೊಡುವದಿಲ್ಲ 'ಬತ !' 'ಇದು ದುಃಖದ ಸಂಗತಿಯಾಗಿದೆ' - ಎಂದು ಸೂಚಿಸುವದು.

||೨೬೭|| ಭಾರಃ ಪರಂ ಪಟ್ಟಕಿರೀಟಜುಷ್ಟ-
ಮಪ್ಯುತ್ತಮಾಂಗಂ ನ ನಮೇನ್ಮುಕುಂದಮ್ ।
ಶಾವೌ ಕರೌ ನೋ ಕುರುತಃ ಸಪರ್ಯಾಂ
ಹರೇರ್ಲಸತ್ಕಾಂಚನಕಂಕಣೌ ವಾ ॥

ಶೌನಕರು
2-3-21

ಅರ್ಥ:-ರಾಜಕಿರೀಟವನ್ನುಧರಿಸಿದಾಗ್ಯೂ, ಮುಕ್ತಿಪ್ರದನಾದ ಶ್ರೀಮುಕುಂದನಿಗೆ ಬಾಗಿ ನಮಿಸದವನ ಶಿರಸ್ಸು, (ಕಲ್ಲುಹೊರಿಸಿದಂತೆ) ಆತನಿಗೆ ಕೇವಲ ಭಾರ

ಭೂತವಾದುದು. ಥಳಥಳಿಸುವ ಕಂಕಣಗಳನ್ನೂ ಹಾಕಿಕೊಂಡಾಗ್ಯೂ, ಭಗವಂತನ ಸೇವೆ (ಆರಾಧನೆ) ಯನ್ನು ಮಾಡದ ಕೈಗಳು ಶವದ ( ನಿರ್ಜೀವ ) ಕೈಗಳಂತೆ ನಿರರ್ಥಕವಾದವುಗಳು.

||೨೬೮|| ಬರ್ಹಾಯಿತೇ ತೇ ನಯನೇ ನರಾಣಾಂ ಶೌನಕರು
ಲಿಂಗಾನಿ ವಿಷ್ಣೋರ್ನ ನಿರೀಕ್ಷತೋ ಯೇ |
ಪಾದೌ ನೃಣಾಂ ತೌ ದ್ರುಮಜನ್ಮಭಾಜೌ
ಕ್ಷೇತ್ರಾಣಿ ನಾನುವ್ರಜತೋ ಹರೇರ್ಯೌ || 2 - 3 - 2

ಅರ್ಥ :– ಕಮಲದಳ-ಇತ್ಯಾದಿ [ಶ್ರೇಷ್ಠವಸ್ತು] ಗಳಿಗೆ ಉದರಂಭರಿಗಳಾದ [ಹೊಟ್ಟೆಗೆ ಹಿಟ್ಟನ್ನೇ ಹುಡುಕುತ್ತಿರುವ] ಕವಿಗಳು ಕಣ್ಣುಗಳನ್ನು ಹೋಲಿಸಿದ್ದರೂ ಶ್ರೀ ವಿಷ್ಣುವಿನ ಚರಚರಾತ್ಮಕ ಎರಡು ಬಗೆಯ ಪ್ರತೀಕ [ ಮೂರ್ತಿ ] ಗಳನ್ನು ನೋಡದಿದ್ದರೆ [ನೋಡಿ ನಲಿಯದಿದ್ದರೆ] ಅಂಥ ಕಣ್ಣುಗಳು ನವಿಲುಗರಿಯ ಕಣ್ಣುಗಳಂತೆ ನಿರರ್ಥಕವಾದವುಗಳು. ನೂರಾರು ರಾಜಧಾನಿಗಳಿಗೆ, ರಾಜ್ಯಸಭೆಗಳಿಗೆ ಅಲೆದಾಡುವದರಲ್ಲಿ ಒಳ್ಳೇ ಕುಶಲವಾಗಿದ್ದರೂ, ವಿಷ್ಣುಕ್ಷೇತ್ರಗಳಿಗೆ ಸಂಚರಿಸದ ಕಾಲುಗಳು ಗಿಡದ ಬೊಡ್ಡೆಗಳಂತೆಯೆ ಸರಿ. ಅಂಥವರು ವಿಷ್ಣುಕ್ಷೇತ್ರಗಳಿಗೆ ತಾವು ಹೋಗದಿದ್ದರೂ ಹೋಗುವವರ [ ಅನುವ್ರಜ ] ಜೊತೆಗಾದರೂ ಕೂಡ ಹೋಗುವದಿಲ್ಲ. ಅದನ್ನೂ ಕೂಡ ಅವರು ಮಾಡುವದಿಲ್ಲ.

||೨೬೯|| ಜೀವಂಛ್ಛವೋ ಭಾಗವತಾಂಘ್ರಿರೇಣುಂ ಶೌನಕರು
ನ ಜಾತು ಮರ್ತ್ಯೋಽಭಿಲಷೇತ ಯಸ್ತು |
ಶ್ರೀವಿಷ್ಣುಪದ್ಯಾ ಮನುಜಸ್ತುಲಸ್ಯಾಃ
ಶ್ವಸಂಛ್ಛವೋ ಯಸ್ತು ನ ವೇದ ಗಂಧಂ ||
೨-೩-(೨೦, ೨೧, ೨೨, ೨೩)

ಅರ್ಥ:- ಪಾದಧೂಳಿಯಿಂದ ಕೂಡಿದ ಭಗವದ್ಭಕ್ತರ ಪಾದೋದಕವನ್ನು ತಲೆಯಮೇಲೆ ಧರಿಸಬೇಕೆಂದು, ತನ್ನ ಜೀವನಾವಧಿಯಲ್ಲಿ ಒಮ್ಮೆಯಾದರೂ ಬಯಸದ ಮಾನವನು ಜೀವಂತ ಹೆಣವಿದ್ದಂತೆ. ಹೆಣ (ಶವ) ಉಸಿರಾಡಿಸದು. ಈತನು ಉಸಿರಾಡಿಸುವ, ಇಬ್ಬರಲ್ಲಿ ಇಷ್ಟೇ ಭೇದ. ಭಾಗವತರ ಪಾದೋದಕದಂತೆಯೆ, ಶ್ರೀಹರಿ ಪಾದೋದಕ (ಸಾಲಗ್ರಾಮದ ಅಭಿಷೇಕದ ತೀರ್ಥ) ವನ್ನು ಶಿರಸಾ ಧರಿಸದವನ ಜೀವನವೂ ವ್ಯರ್ಥವೆಂಬುದು ತಾನೇ ತಿಳಿದು ಬರುವದು. ಅದರಂತೆಯೆ ಭಗವಂತನ ಪಾದಗಳಿಗೆ ಏರಿಸಿದ (ಅರ್ಪಿಸಿದ) ತುಳಸೀ ಪತ್ರದ ಗಂಧ

ವನ್ನು (ವಾಸನೆಯನ್ನು) ಆಘ್ರಾಣಿಸದ (ತೆಗೆದುಕೊಳ್ಳದ) ಮಾನವನೂ ಕೂಡ ಉಸಿರಾಡಿಸುವ ಶವದಂತೆಯೆ ಸರಿ. ಬದುಕಿದ್ದರೂ ಆತನ ಅವಯವಗಳು ಶವದ ಅವಯವಗಳಂತೆಯೆ. 'ಅಂಗಾನಿ ವಿಷ್ಣೋರಥ ತಜ್ಜನಾನಾಂ ಪಾದೋದಕಂ ಯಾನಿ ಭಜಂತಿ' – ಶ್ರೀ ವಿಷ್ಣುವಿನ ಹಾಗೂ ಆತನ ಭಕ್ತರ ಪಾದೋದಕವನ್ನು ನಿತ್ಯವೂ ಸೇವಿಸುವ ಅವಯವಗಳು–, ಎಂಬ ಶ್ಲೋಕದಲ್ಲಿ ಹೇಳಿದಂತೆ, ಶಿರಸಾ ಧರಿಸಬೇಕಾದವುಗಳು ಎರಡು ವಸ್ತುಗಳು. ವಿಷ್ಣು ಪಾದೋದಕವಾದ ಸಾಲಿಗ್ರಾಮಾದಿಗಳ ತೀರ್ಥವು ಅವುಗಳಲ್ಲಿ ಒಂದು; ವಿಷ್ಣು ಪಾದದಿಂದ ಜನಿಸಿದ ಭಾಗೀರಥೀ ನದಿಯ ಪವಿತ್ರ ಜಲವು ಎರಡನೆಯದು. –ಎಂಬುದು ಇದರಿಂದ ಸೂಚಿತವಾಗುವದು. ಅದಕ್ಕಾಗಿಯೆ 'ಶ್ರೀವಿಷ್ಣುಪದ್ಯಾ' –ಎಂಬ ಶಬ್ದವನ್ನು ಉಪಯೋಗಿಸಿರುವರು. (ಪಾದೋದಕ್ಕೇನೆ) 'ಉದಕ' ಎಂದು ಹೇಳದೆ, ರೇಣು (ಧೂಳಿ) ಎಂಬುದಾಗಿ ಕೂಡಿದ ಪಾದೋದಕವು ಹೆಚ್ಚು ಫಲದಾಯಕವೆಂಬುದನ್ನು ಸೂಚಿಸುವದಕ್ಕಾಗಿ – 'ಯಾ ವೈ ಲಸತ್ ಶ್ರೀ ತುಲಸೀವಿಮಿಶ್ರಕೃಷ್ಣಾಂಘ್ರಿರೇಣ್ವಭ್ಯಧಿಕಾಂಬುನೇತ್ರೀ' (ಶ್ಲೋಕ ೨೪)ರದಲ್ಲಿ –ಪವಿತ್ರ ಶ್ರೀತುಲಸೀವಿಮಿಶ್ರಕೃಷ್ಣನ ಪಾದಧೂಳಿಯಿಂದ ಅಧಿಕ ಪಾವನಳಾಗಿ –ಎಂಬುದನ್ನು ಈ ಮೊದಲು ಇದೇ ಅರ್ಥದಲ್ಲಿಯೇ ಹೇಳಿರುವದು. ಇಂಥ ಪವಿತ್ರ ಪಾದೋದಕವನ್ನು ನಿರಂತರವೂ ಸೇವಿಸಬೇಕೆಂದು ಹೇಳಿದ್ದಾಯಿತು. ನಿರಂತರವಾಗದಿದ್ದರೂ, ಜನ್ಮದಲ್ಲಿ ಒಂದು ಸಲವಾದರೂ ಸೇವಿಸಿದರೂ ಸಾಕು ಅಂಥ ಅವಯವಗಳನ್ನಾದರೂ ನಾವು ಗೌರವಿಸಬಹುದು. ಅಷ್ಟನ್ನು ಕೂಡ ಮಾಡದ ಮಾನವರು ಜೀವಂತ ಹೆಣಗಳಿಂದ ಬೇರೆಯಾಗಲಾರರು. ಅಂಥ ಮಾನವನ ಮೂಗು ಅತ್ಯಂತ ಸುವಾಸನೆಯ ಅನೇಕ ಸುವಾಸಿಕ ದ್ರವ್ಯಗಳ ವಾಸನೆಯನ್ನು ತೆಗೆದುಕೊಳ್ಳುತ್ತಿರಬಹುದು; ಆದರೆ ಶ್ರೀಹರಿ ಪಾದಾರ್ಪಿತ ತುಳಸೀ ಗಂಧವನ್ನು ಅದು ಸೇವಿಸದಿದ್ದರೆ, ಆ ಮೂಗು ಶವದ ಮೂಗೇ ಸರಿ. ಭಕ್ತಿಯನ್ನು ಅಭಿವೃದ್ಧಿಗೊಳಿಸಲು ಭಗವಂತನ ಸೇವೆಯನ್ನು ದೇಹದ ಸಕಲ ಅವಯವಗಳಿಂದಲೂ (ಸರ್ವತೋಪರಿಯಾಗಿ) ಮಾಡುವುದು ಕರ್ತವ್ಯ. ಅದರಂತೆಯೆ ಅದೇ ಉದ್ದೇಶಕ್ಕಾಗಿ ಜ್ಞಾನವನ್ನು ಕೊಡುವ ಗುರುವಿನ ಸೇವೆಯನ್ನೂ ಸರ್ವತೋಪರಿಯಾಗಿ ಮಾಡುವುದೂ ಕರ್ತವ್ಯವಾಗಿದೆ. ಅದನ್ನು ಮಾಡದವರನ್ನು ಜೀವಂತ ಶವವೆಂದು ಹಳಿದಿರುವರು. ಭಗವದ್ಭಕ್ತರ ಪಾದಧೂಳಿಯನ್ನು ಬೆಲೆಕೊಟ್ಟು ಕೊಂಡುಕೊಳ್ಳಬೇಕಾಗಿಲ್ಲ. ಹೀಗಿದ್ದರೂ ಅದನ್ನು ಶಿರಸಾ ಧರಿಸದವನು ಜೀವಂತ ಹೆಣದಂತೆಯೆ ಸರಿ. (ಬ್ರಹ್ಮಚರ್ಯ ೪)

**॥೨೭೦॥ ನಿಷ್ಕಿಂಚನಾ ಮಯ್ಯನುರಕ್ತಚೇತಸಃ**
**ಶಾಂತಾ ಮಹಾಂತೋಽಖಿಲಜೀವವತ್ಸಲಾಃ ।**

ಶ್ರೀಕೃಷ್ಣ ಉದ್ಧವಗೆ

**ಕಾಮೈರಸಾಲಬ್ಧಧಿಯೋ ಜುಷೋ ಯೇ**
**ತೇ ನೈರಪೇಕ್ಷ್ಯಂ ಹಿ ವಿದುಃ ಸುಖಂ ಮಮ ॥ ೧೧-೧೪-೧೭**

ಭಗವತ್ಕಥೆಗಳ ಸಾದರ ಶ್ರವಣಕ್ಕೆ ಭಾಗವತ ಧರ್ಮಗಳನ್ನು ನಿಷ್ಠೆಯಿಂದ ಆಚರಿಸುವವರಷ್ಟೇ ಪಾತ್ರರು, ಅಧಿಕಾರಿಗಳು. ಶ್ರವಣದಿಂದ ಸಂತೋಷ ಉಂಟಾಗಿ ಅದರಲ್ಲಿ ಆಸಕ್ತಿ ಉಂಟಾಗುವದು. ಭಾಗವತ ಧರ್ಮಗಳಂತೆ ನಡೆಯದವರಿಗೆ ಈ ಆಸಕ್ತಿಯು ಉಂಟಾಗದು. ಈ ಪಾತ್ರತೆಯನ್ನು ಅಗತ್ಯವಾಗಿ ಪಡೆಯಬೇಕು. ಈ ಅಭಿಪ್ರಾಯದಿಂದ, 'ಯೇನಕೇನ ಸಂತುಷ್ಟತ್ವ ( ಯದ್ರೃಚ್ಛಯಾ ಏನೇ ದೊರೆಯಲಿ, ಆದರಿಂದಲೆ ಸಂತುಷ್ಟರಾಗುವದು). ಎಂಬ ಭಾಗವತ ಧರ್ಮವನ್ನು ತೋರಿಸಿಕೆಡಡುವರು.–

ಬಿದುಕಿರುವವರೆಗೆ, ಚರಿತಾರ್ಥಕ್ಕೆ ಯಾವದಾದರೂ ಉದ್ಯೋಗವು ಆಗತ್ಯವಾಗಿದೆ. ಏಕೆಂದರೆ, ಜೀವವನ್ನು ಉಳಿಸಿಕೊಳ್ಳುವದು ಶ್ರೇಷ್ಠ ಧರ್ಮವಾಗಿದೆ. ಜೀವನ ವೃತ್ತಿಯು ಎರಡು ಬಗೆಯದಾಗಿದೆ. ಯಾಚನೆ (ಪರರಿಗೆ) ಮಾಡುವದು ಒಂದು ವಿಧ; ಮಾಡದಿರುವದು ಇನ್ನೊಂದು ವಿಧ. -ಯಾಚನೆ ಮಾಡದಿರುವದೂ ಎರಡು ಪ್ರಕಾರ– ಯದೃಚ್ಛಾ (ಬಂದುದರಲ್ಲಿ ಸಂತೃಪ್ತಿ) ವೃತ್ತಿ; ಹಾಗೂ ಶಿಲೋಂಛವೃತ್ತಿ (ರಾಶಿಯ ನಂತರ ಕಣದಲ್ಲಿ ಉಳಿದಿರುವ ಕಾಳು ಕಡಿಗಳನ್ನು ಹೆಕ್ಕಿ ತರುವದು) –'ಸಯಾಚನಾ' ಅಂದರೆ, ಬೇಡಿಕೊಂಡು. ತರುವ ಎರಡನೇ ವೃತ್ತಿಯಲ್ಲಿಯೂ ಮೂರು ಪ್ರಕಾರಗಳು –ಅಸಂಚಯ (ನಾಳಿಗೆಂದು ಸಂಗ್ರಹಿಸದಿರುವದು, ಅಂದು ದೊರಕಿದುದನ್ನು ಉಳಿಸದೆ, ಅಂದಿನ ಜೀವನಕ್ಕಾಗಿ ಉಪಯೋಗಿಸುವದು.

– ಎರಡನೆಯದು ವಾರ್ತಾ, –ಎಂದರೆ ಹದಿನೈದು ದಿನ (ಪಕ್ಷ) ಅಥವಾ ಒಂದು ತಿಂಗಳವರೆಗೆ ಆಗತ್ಯವಾದುದಷ್ಟನ್ನೇ ಸ್ವೀಕರಿಸುವದು. 'ಯಾಯಾವರ ವೃತ್ತಿ ' ಯೆಂತಲೂ ಇದಕ್ಕೇನೇ ಹೇಳುವರು. ಮೂರನೆಯದಾದ ' ಶಾಲೀನ ವೃತ್ತಿ ' ಯೆಂಬುದು ತೀರ ಕನಿಷ್ಟವಾದುದು. ಆದೆಂದರೆ, ಒಂದು ವರುಷದವರೆಗೆ ಸಾಕಾಗುವಷ್ಟು ಪದಾರ್ಥಗಳ ಸಂಗ್ರಹ, -ಒಂದನೇಯದರಲ್ಲಿಯ ಎರಡು ಹಾಗೂ ಎರಡನೇಯದರಲ್ಲಿಯ ಮೂರು ಪ್ರಕಾರಗಳ ಒಟ್ಟು ಐದು ವೃತ್ತಿಗಳಿಂದ (ಅವರವರು ಅನುಸರಿಸುವ ವೃತ್ತಿಯಿಂದ ( ಬ್ರಹ್ಮನಿರ್ಮಿತ) ಈ ಜಗತ್ತಿನಲ್ಲಿ ಸಂತುಷ್ಟರಾಗಿ ಬಾಳುವೆ ಮಾಡುವದಕ್ಕೇನೆ – 'ಏನಕೇನಾಪಿ ಸಂತುಷ್ಟರು' ಏನು ಸಿಕ್ಕರೂ ಅದರಲ್ಲಿಯೇ ಸಂತೋಷಪಡುವವರು ಎಂದು ಹೇಳುವದುಂಟು. ಹೀಗೆ

ಜೀವಿಸುವ ಯೋಗಿಗಳಲ್ಲಿ ಅವರವರ ಸ್ಥಿತಿಗತಿಯ (ಅವಸ್ಥಾ ಭೇದ) ಹೆಚ್ಚು ಕಡಿಮೆಯಿಂದ ಮೂರು ಪ್ರಕಾರದ ಯೋಗಿಗಳು– ಪಕ್ವರು, ಪಕ್ವಕಲ್ಪರು, ಪಕ್ವ ಪ್ರತಿನಿಧಿಗಳು, ಎಂದು. ಇವರಲ್ಲಿ ಪಕ್ವಯೋಗಿಗಳು 'ಅಯಾಚನಾ' ವೃತ್ತಿಯನ್ನೆ ಅನುಸರಿಸುವರು. ಪಕ್ವಕಲ್ಪ (ಪಕ್ವರಂತಿರುವ) ಯೋಗಿಗಳು 'ಸಯಾಚನಾ' ವೃತ್ತಿಯನ್ನು ಕೈಕೊಳ್ಳುವರು. ತಮ್ಮ ತಮ್ಮ ದೆಸೆಗೆ (ಸ್ಥಿತಿಗತಿಗೆ) ಅನುಗುಣವಾಗಿ, ಐದರಲ್ಲಿ ಇನ್ನುಳಿದ ಮೂರು ವೃತ್ತಿಗಳನ್ನು ಅಪಕ್ವಯೋಗಿಗಳು ಎತ್ತಿಕೊಳ್ಳುವರು. ಈ ವೃತ್ತಿಗಳಲ್ಲಿ ಮೊದಲನೆಯದು ಎರಡನೆಯದರಕ್ಕಿಂತಲೂ, –ಹೀಗೆ ಕ್ರಮಶಃ ಹೆಚ್ಚು ಹೆಚ್ಚು ಉತ್ತಮವಾಗಿರುವದು ಇವರಲ್ಲಿ 'ಅಯಾಚನ' ವೃತಿಯಿಂದ ಇರುವವರ ಬಗ್ಗೆ ಇಲ್ಲಿ ಹೇಳುವರು. (ನಿಷ್ಕಿಂಚನ) ಎಂದು –ಉಳ್ಳವರು (ಸಕಿಂಚನ 'Haves')ಉಳ್ಳದವರು (ಅಕಿಂಚನ–Have-nots) ಎಂಬ ಎರಡು ಬಗೆಯ ಮಾನವ ವರ್ಗಗಳು. ಜೀವನೋಪಾಯಕ್ಕೆ ಅಗತ್ಯವಾದುದಕ್ಕಿಂತಲೂ ಅಧಿಕವಾಗಿ ಕವಡಿಯಂಥ ಕನಿಷ್ಟ ವಸ್ತುವನ್ನೂ ಬಿಡದೆ ಪದಾರ್ಥಗಳನ್ನು ಪಡೆದವರು 'ಸಕಿಂಚನರು'. ಅಂತೆಯೆ, ಅಂಥವರು ಭಗವಂತನ ವಿಶೇಷ ಅನುಗ್ರಹಕ್ಕೆ ಪಾತ್ರರಾಗುವದಿಲ್ಲ, –ಹೀಗೆ ಹೇಳಿದೆ. 'ಯಾವತ್ ಭ್ರಿಯೆತ್.... ದಂಡಮರ್ಹತಿ (೭–೧೪–೮) (ಬದುಕಲು) ಹೊಟ್ಟಿಗೆ ಸಾಕಾಗುವಷ್ಟು ಪದಾರ್ಥಕ್ಕೆ ಮಾತ್ರ ಮಾನವನು ತನ್ನದೆಂದು ಹೇಳಬಹುದು. ಅದಕ್ಕಿಂತಲೂ ಹೆಚ್ಚಿನದನ್ನು ಸ್ವಂತದ್ದೆಂದು ಹೇಳುವ ಮಾನವನು ಕಳ್ಳನೆನಿಸುವನು, ಅವನು ಶಿಕ್ಷೆಗೆ ಅರ್ಹನು ತಾತ್ಪರ್ಯವೆಂದರೆ, ಮನೆ ಮಡದಿಗಳ ಜಂಜಾಟವಿಲ್ಲದೆ, ಸರ್ವಸಂಗ ಪರಿತ್ಯಾಗ ಮಾಡಿದ ಸನ್ಯಾಸಿಗಳು ಪಕ್ವ ಯೋಗಿಗಳು. ಸಂಸಾರದಲ್ಲಿಯೆ ಇದ್ದುಕೊಂಡು, ಅನವಶ್ಯಕವಾಗಿ ಸಂಗ್ರಹಮಾಡದೆ, ಪರಮಾರ್ಥ ಸಾಧನೆಗೆ ಅನುಕೂಲರಾದ ಸಹಕಾರಿಗಳಾಗಿರುವ ಮಡದಿ ಮಕ್ಕಳೊಡನೆ ಬಾಳುವೆ ಮಾಡುವವರು, ಅವರಿಗಿಂತಲೂ ಕಡಿಮೆಯೋಗ್ಯತೆಯುವರು. ಸಕಿಂಚನವಾಗಿರಲಿ, ನಿಷ್ಕಿಂಚನವಾಗಿರಲಿ ಭಾಗವತ ಧರ್ಮಾನುಷ್ಠಾನದಲ್ಲಿ ಚಿತ್ತವಿಕ್ಷೇಪವಾಗದಂತೆ, ಮನಸ್ಸು ಕದಡದಂತೆ ನೋಡಿಕೊಳ್ಳುವದೇ ಲಕ್ಷ್ಯದಲ್ಲಿಡಬೇಕಾದ ಸಂಗತಿಯಾಗಿದೆ.

ಪ್ರಾಣಧಾರಣೆಗೆ ಅಗತ್ಯವಾದುದಕ್ಕಿಂತಲೂ ಅಧಿಕವಾದುದನ್ನು ಯಾರು ಪೂರ್ಣವಾಗಿ ನಿರಾಕರಿಸುವರೋ, ಅವರೇ ನಿಷ್ಕಿಂಚನರು, ನಿಷ್ಕಿಂಚನಯೋಗಿಗಳು. ಅಂಥವರು ಹೆಚ್ಚಿನದನ್ನು ಏಕೆ ತೆಗೆದುಕೊಳ್ಳುವದಿಲ್ಲ ? ಎಂಬುದಕ್ಕೆ ಕಾರಣವಿದೆ. ಅವರು 'ಮಯ್ಯನುರಕ್ತಚೇತಸಃ' ಅವರು ತಮ್ಮ ಮನಸ್ಸನ್ನೆಲ್ಲ ಪರಿಪೂರ್ಣವಾಗಿ ನನ್ನಲ್ಲಿ ಇಟ್ಟಿರುವರು. -ಶ್ರೀ ಮಂತ್ರಾಲಯ ಪ್ರಭುಗಳು ಹೇಳುವಂತೆ,–'ಭಗವತಃ ಅನ್ಯತ್ರ ಸರ್ವವಸ್ತುಷು ಮನಃಸಂಗರಹಿತಾನಾಂ' –ಭಗವತ್

ಚಿಂತನೆಯನ್ನು ಬಿಟ್ಟು ಉಳಿದ ಯಾವ ವಿಷಯಗಳಲ್ಲಿಯೂ ಮನಸ್ಸನ್ನು ತೊಡಗಿಸದವರು- ಅಂಥವರು ಹೇಗಿರುವರು ? ಅವರ ಲಕ್ಷಣವೇನೆಂಬುವದನ್ನು ಹೇಳುವರು- 'ಅಖಿಲ ಜೀವ ವತ್ಸಲಾಃ' ಸಕಲ ಪ್ರಾಣಿಗಳಲ್ಲಿಯೂ ಅವರು ತುಂಬಾ ಕರುಣಾಶಾಲಿಗಳು, -ಹಾಗೂ 'ಕಾಮ್ಯೈಃ ಅನಾಲಬ್ಧಧಿಯಃ' -ಅಪೇಕ್ಷಿತ (ಆಕರ್ಷಕ) ವಸ್ತುಗಳನ್ನು ಕಂಡರೂ, ಚಿತ್ತವಿಕ್ಷೇಪವಾಗದಿರುವವರು, ತಮ್ಮ ಬುದ್ಧಿಯನ್ನು (ಅವುಗಳಿಂದ) ಕದಡದಂತೆ ಸ್ಥಿರವಾಗಿ ಉಳಿಸಿಕೊಂಡು (ಅಗತ್ಯವಾದ) ವಸ್ತುಗಳನ್ನಷ್ಟೇ ಸ್ವೀಕರಿಸುವವರು. ಅಥವಾ ಅಂಥ ವಸ್ತುಗಳನ್ನು ಎಂದಿಗೂ ಸ್ವೀಕರಿಸದಿರುವವರು -ತಾವಾಗಿಯೆ ಯಾವುದನ್ನೂ ಬಯಸದೆ, (ವರಡನೆಯವರಿಗೆ) ಬೇಡದೆ, ದೈವೇಚ್ಛೆ (ಶ್ರೀಹರಿಯ ಇಚ್ಛೆ) ಯಿಂದ ದೊರೆಯುವದರಿಂದಲೆ ತಮ್ಮ ಚರಿತಾರ್ಥವನ್ನು ಸಾಗಿಸುವವರು, - ಅಂಥ ಯೋಗಿಗಳ ಜೀವನ ಕ್ರಮವು ಈ ತೆರನಾಗಿದೆ. ಎಂಬುದನ್ನು ಇಲ್ಲಿ ಸೂಚಿಸಲಾಗಿದೆ. ಅಂಥ ಯೋಗಿಗಳು ದೈವೇಚ್ಛೆಯಿಂದ ದೊರಕಿದುದರಲ್ಲಿಯೇ ತಮ್ಮ ಚರಿತಾರ್ಥವನ್ನು ಸಾಗಿಸುವುದರಿಂದ, ಪ್ರಪಂಚದಲ್ಲಿದ್ದರೂ, ಅವರ ಮನಸ್ಸು 'ಶಾಂತ'ವಾಗಿರುವುದು, ಸರ್ವ ಕಾಲದಲ್ಲಿಯೂ ಶಾಂತಿ - ಸಂತೃಪ್ತಿಗಳಿಂದ ಕೂಡಿಕೊಂಡಿರುವದು.- ಏಕೆಂದರೆ, ನನ್ನ ಮಂಗಳಕರವಾದ ಲೀಲಾ ಕೃತಿಗಳನ್ನು ಕೇಳುವದರಲ್ಲಿಯೇ ಈ ಬಗೆಯ ಯೋಗಿಗಳಿಗೆ (ಆಂತರಿಕ) ಅಲೌಕಿಕ ಸುಖವು ದೊರೆಯುವದು. ಅವರೇ ಆ ಸುಖವನ್ನು ತಿಳಿಯಬಲ್ಲರು. -'ನೈರಪೇಕ್ಷ್ಯಃ- ಇದ್ದುದರಲ್ಲಿಯೆ ತೃಪ್ತರಾಗುವ ಮನೋವೃತ್ತಿಯೇ ಈ ಬಗೆಯ ಆಂತರಿಕ ಸುಖವಾಗಿದೆ. ಜ್ಞಾನಿಗಳೂ ಇದೇ ಮಾತನ್ನೇ ಹೇಳುವರು - ನೈರಪೇಕ್ಷ್ಯದಿಂದ ಒದಗುವ ಸುಖವನ್ನು ಸ್ವಂತ ಅನುಭವಿಸಿ ಹೇಳಿರುವದರಿಂದಲೆ, ಈ ಮಾತು ಪ್ರಮಾಣ (ಶಾಸ್ತ್ರಾಧಾರ) ಯುಕ್ತವಾಗಿದೆ-

ಈ ಬಗ್ಗೆ ಒಂದು ಆಕ್ಷೇಪ :- 'ಏನೇ ದೊರಕಲಿ, ಇದ್ದುದರಲ್ಲಿಯೆ ಸಂತೃಪ್ತಿಯನ್ನು ಪಡೆಯಬೇಕೆಂಬ ಭಾಗವತ ಧರ್ಮವನ್ನು ಆಚರಿಸಿದರೆ. ಆದರಿಂದ ಸಂತೃಪ್ತಿಯು ಹೇಗೆ ಉಂಟಾಗುವದು ? ಏಕೆಂದರೆ, ಬಯಸುವ ಪದಾರ್ಥಗಳನ್ನು ಯಥೇಚ್ಛವಾಗಿ ಉಪಭೋಗಿಸುವದರಲ್ಲಿಯೆ, ಸಂತೃಪ್ತಿಯೆಂಬ ಸುಖವು ಉಂಟಾಗುವದಿಲ್ಲವೆ ? ಎಂಬ ಪ್ರಶ್ನೆಗೆ ಉತ್ತರವನ್ನು ಹೇಳುವರು :- 'ಜೀವನಕ್ಕೆ ತೀರ ಅಗತ್ಯವಾದುದನ್ನು ಮಾತ್ರ ಸ್ವೀಕರಿಸಿ, ಬೇರೆ ಅಪೇಕ್ಷಿತ ವಸ್ತುಗಳಿಗಾಗಿ ಹಂಬಲಿಸದಿರವವರೆ ನಿರಪೇಕ್ಷಿಗಳು. ಈ ಬಗೆಯೆ ನಿರಪೇಕ್ಷೆಯಿಂದಲೆ, ಪರಮಾತ್ಮನ ಕಥಾ ಶ್ರವಣದಿಂದ ಆಂತರಿಕ ಸುಖವು ಉಂಟಾಗುವದು. ಅಂಥ ಯೋಗಿಗಳೆ

ಈ ಬಗೆಯ ಸುಖವನ್ನು ಅರಿತುಕೊಳ್ಳುವರು, ಅನುಭವಿಸುವರು. ಕಂಡುದನ್ನು ಬಯಸಿ ಚಿತ್ತವಿಕ್ಷೇಪ ಮಾಡಿಕೊಳ್ಳುವವರಿಗೆ, ಅದರ ಕಡೆಗೆ ಮನಸ್ಸನ್ನು ಹರಿಯ ಗೊಡುವವರಿಗೆ ಇಂಥ ಅಲೌಕಿಕ ( ಆಂತರಿಕ ) ಸುಖವು ಹೇಗೆ ಲಭಿಸುವದು ? (ಎಂದಿಗೂ ಲಭಿಸದು).

||೨೭೦|| ಅಕಿಂಚನಾನಾಂ ಹಿ ಧನಂ ಶಿಲೋಂಛನಂ
ಸ ತೇನ ನಿರ್ವರ್ತಿತಸಾಧುಸತ್ಕ್ರಿಯಃ |
ಕಥಂ ವಿಗರ್ಹ್ಯಂ ನು ಕರೋಮ್ಯಧೀಶ್ವರಾಃ
ಪೌರೋಧಸಂ ಹೃಷ್ಯತಿ ಯೇನ ದುರ್ಮತಿಃ || ೬-೭-೩೭

ವಿಶ್ವರೂಪಾಚಾರ್ಯರು ದೇವತೆಗಳಿಗೆ

೩೬

'ಪಕ್ವಕಲ್ಪ'ರೆಂಬ ಎರಡನೆ ತರಗತಿಯ ಯೋಗಿಗಳ ಜೀವನಕ್ರಮವನ್ನು ಇಲ್ಲಿ ಹೇಳಿರುವರು. ತಮ್ಮ ಪುರೋಹಿತರಾಗಬೇಕೆಂಬ ದೇವತೆಗಳ ಪ್ರಾರ್ಥನೆಗೆ ವಿಶ್ವರೂಪಾಚಾರ್ಯರು ಕೊಟ್ಟ ಉತ್ತರದಿಂದಲೆ ಅದನ್ನು ವಿವರಿಸುವರು.

**ಅರ್ಥ** ;– ಹೇ ದೇವತೆಗಳಿರಾ ! ಯಾವ ಅಪೇಕ್ಷೆಯೂ ಇಲ್ಲದೆ, (ತಾವಾಗಿಯೆ) ಯಾವ ವಸ್ತುವನ್ನೂ ( ಪರರಿಗೆ ) ಬೇಡದ ಅಕಿಂಚನರಾದ ಯೋಗಿಗಳಿಗೆ ಶಿಲೋಂಛನ ವೃತ್ತಿಯೆ ಜೀವನ ಸಾಧನವಾಗಿದೆ. (ರಾಶಿಯಾದ ನಂತರ ಕಣದಲ್ಲಿ ಉಳಿದ ಧಾನ್ಯದ ಕಾಳುಗಳನ್ನು ಇಲ್ಲದೆ ಬೀಸುವ ಕಲ್ಲಿನಲ್ಲಿದ್ದ ಅಳಿದುಳಿದ ನುಚ್ಚು ಕಾಳನ್ನು ಮಾತ್ರ ಬಳಸುವ ಜೀವನ ಕ್ರಮವೇ ಶಿಲೋಂಛನ ವೃತ್ತಿಯು). ನಾನು ( ವಿಶ್ವರೂಪಾಚಾರ್ಯರು ) ಇದು ವರೆಗೆ ಇದೇ ಜೀವನ ವೃತ್ತಿಯಿಂದ ನಡೆದು, ಸಜ್ಜನರು ಆಚರಿಸುವ (ವರ್ಣಾಶ್ರಮವಿಹಿತ) ಅಗ್ನಿಹೋತ್ರ ಮುಂತಾದ ಸತ್ಕರ್ಮಗಳನ್ನು ಮಾಡುತ್ತ ಬಂದಿರುವೆ. ವಿಪ್ರೋತ್ತಮರಿಗೆ ಉಚಿತವಾಗಿರದ, ತುಂಬಾ ನಿಂದಾರ್ಹ (ತಿರಸ್ಕರಣೀಯ) ಪೌರೋಹಿತ್ಯ ವೃತ್ತಿಯನ್ನು ಹೇಗೆ ಕೈಕೊಳ್ಳಲಿ | (ಅದನ್ನು ಸ್ವೀಕರಿಸಲಾರೆನು). (ಸ್ವಾರ್ಥದ) ದುರ್ಬುದ್ಧಿಯುಳ್ಳವನು ಮಾತ್ರ ಆ ನಿಂದ್ಯವೃತ್ತಿಯಿಂದ ಸಂತೋಷಪಡುವನು. (ಧನಗಳಿಸುವ ಈ ವೃತ್ತಿಯನ್ನು ಅನೇಕರು ತಾವಾಗಿಯೆ ಬಯಸುತ್ತಿರುವಾಗ್ಗೆ, ನೀವೇಕೆ ಅದನ್ನು ಬೇಡವೆಂದು ನಿರಾಕರಿಸುವಿರಿ ? – ಎಂದು ಕೇಳಿದರೆ, ಆ ಕೀಳು ವೃತ್ತಿಯನ್ನು ಬಯಸುವವರು ಬುದ್ಧಿಹೀನರು, ಸ್ವಾರ್ಥದ ದುಷ್ಟ ಭಾವನೆಯಿಂದ ಪ್ರೇರಿತರಾದವರು; ಎಂದು ಉತ್ತರ).

||೨೭೧|| ಮಾಗಾರದಾರಾತ್ಮಜದೇಹಬಂಧುಷು
ಸಂಗೋ ಯದಿ ಸ್ಯಾದ್ಭಗವತ್ಪ್ರಿಯೇಷು ನಃ |

ಪ್ರಹ್ಲಾದರು

**ಯಃ ಪ್ರಾಣವೃತ್ತ್ಯಾ ಪರಿತುಷ್ಟ ಆತ್ಮವಾನ್**
**ಸಿಧ್ಯತ್ಯದೂರಾನ್ನ ತಥೇಂದ್ರಿಯಪ್ರಿಯಃ ॥** ೫-೧೮-೧೦

ಅವರವರ ಸ್ಥಿತಿಗತಿಗನುಗುಣವಾಗಿ ಮೂರು ಪ್ರಕಾರದ ಪಕ್ಷತುಲ್ಯ (ಪಕ್ಷ ಪ್ರತಿನಿಧಿಗಳಾದ) ರಾದ ಯೋಗಿಗಳ ಜೀವನಕ್ರಮವನ್ನು ಇಲ್ಲಿ ತೋರಿಸುವರು.

ಹರಿವರ್ಷದಲ್ಲಿ ಶ್ರೀ ನರಹರಿರೂಪನಾದ ಭಗವಂತನ ಸ್ತೋತ್ರಮಾಡುವಾಗ್ಗೆ ಭಕ್ತಶ್ರೇಷ್ಠನಾದ ಪ್ರಲ್ಹಾದನು ಪಕ್ಷಕಲ್ಪರಾದ ಯೋಗಿಗಳ ಮನಃ ಪ್ರವೃತ್ತಿಯನ್ನು ಎತ್ತಿತೋರಿಸುವನು.

**ಅರ್ಥ :–** ಮನೆ ಮಾರು, ಮಡದಿ ಮಕ್ಕಳು, ಬಂಧು ಬಳಗದವರ ಸಹವಾಸದಿಂದ ಕೂಡಿದ ಈ ಸಾಂಸಾರಿಕ ಜೀವನದಲ್ಲಿ ನಮಗೆ ಆಸಕ್ತಿಯುಂಟಾಗದಿರಲಿ. ದೈವಯೋಗದಿಂದ, ಅಜ್ಞಾನದಿಂದ, ನಾವು ಅದಕ್ಕಾಗಿ ಯತ್ನ ಮಾಡದಿದ್ದರೂ, ಮಡದಿ ಮಕ್ಕಳ ಈ ಪ್ರಾಪಂಚಿಕ ಸಂಸಾರದಲ್ಲಿ ನಾವು ಬೀಳಬಹುದು. ಅಂಥ ಸಂದರ್ಭದಲ್ಲಿ ಕುಟುಂಬದ ಜನರೆಲ್ಲರೂ ಭಗವದ್ಭಕ್ತರಾಗಿರಲಿ. ಹೀಗಿದ್ದರೆ ಮಾತ್ರ ಸಂಸಾರಿ (ಕುಟುಂಬಿ) ಯಾದವನಿಗೆ ತನ್ನ ಪರಮ ಪುರುಷಾರ್ಥವನ್ನು ಸಾಧಿಸಲು ಸದವಕಾಶವು ದೊರೆಯುವದು; ಕುಟುಂಬದ ಜನರು ಭಗವದ್ಭಕ್ತರಾಗಿರಬೇಕೆಂದು ಏಕೆ (ಭಗವಂತನಿಗೆ) ಬೇಡಿಕೊಳ್ಳಬೇಕು ? ಎಂದರೆ, ಸಾಧಕನಾದ ಅಧಿಕಾರಿಯು ಪ್ರಾಣಧಾರಣೆಗೆ ( ಜೀವ ಉಳಿಸಿಕೊಳ್ಳುವದಕ್ಕೆ ) ಸಾಕಾಗುವಷ್ಟು ಮಾತ್ರ ದೊರಕಿಸಿ, ಅದರಿಂದಲೇ ಆತನು ತೃಪ್ತಿ–ಸಂತೋಷವನ್ನು ಪಡೆಯುವನು. ಹೀಗೆ ಬಾಳುವವನೇ ಜಿತೇಂದ್ರಿಯನು (ಇಂದ್ರಿಯಗಳನ್ನು ಅಂಕಿತದಲ್ಲಿ ಇಟ್ಟುಕೊಳ್ಳಲು ಸಮರ್ಥನಿರುವನು). ದುಷ್ಟ ಭಾವನೆ–ವಾಸನಾದಿಗಳನ್ನು ದೂರೀಕರಿಸಿ ತನ್ನ ಹೃದಯ (ಅಂತರಂಗ) ವನ್ನು ನಿರ್ಮಲ (ನಿರ್ದೋಷ) ವಾಗಿ ಮಾಡಿಕೊಳ್ಳುವನು. ಭಗವತ್ಕಥಾಶ್ರವಣಾದಿಗಳಿಗೆ ಆತನೇ ಅರ್ಹನಾದವನು. ಆದುದರಿಂದ, ಅಲ್ಪಾವಧಿಯಲ್ಲಿಯೆ ಆತನು ಅಪರೋಕ್ಷವನ್ನು, ಆತ್ಮಸಾಕ್ಷಾತ್ಕಾರವನ್ನು ಪಡೆಯುವನು. ಆತನಿಗಿರುವ ಈ [ಯೋಗ] ಸದವಕಾಶವು, ಇಂದ್ರಿಯಗಳನ್ನು ತೃಪ್ತಿಗೊಳಿಸುವ ಬಿಸಿಲುಗುದುರೆಯ ಬೆನ್ನುಹತ್ತುವವರಿಗೆ, ಪ್ರಾಣಧಾರಣೆಯ ಅಗತ್ಯಕ್ಕಿಂತಲೂ ಅಧಿಕವಾಗಿ ಸಂಪಾದಿಸುವ ಹಂಬಲ ಉಳ್ಳವರಿಗೆ ಅಪರೋಕ್ಷಜ್ಞಾನವು ಎಂದಿಗೂ ಆಗಲಾರದು. ಅದಕ್ಕೆ ಪ್ರತಿಯಾಗಿ, ಮತ್ತೆ ಮತ್ತೆ ಜನನ–ಮರಣಗಳ ಚಕ್ರದಲ್ಲಿಯೆ ಆತನು ಸುತ್ತಾಡಬೇಕಾಗುವದು. ಒಟ್ಟು ಅಭಿಪ್ರಾಯವೆಂದರೆ,–ಮಡದಿ ಮಕ್ಕಳ ಜಂಜಾಟಕ್ಕೊಳಗಾಗದೆ ಸರ್ವಸಂಗ ಪರಿತ್ಯಾಗಮಾಡಿದ ಸನ್ಯಾಸಿಯ (ಪರಿವ್ರಾಜಕರ) ಜೀವನಕ್ರಮವು ಎಲ್ಲಕ್ಕಿಂತಲೂ

ಶ್ರೇಷ್ಠವಾದುದು. ಅದರಂತೆಯೆ, ಶ್ರೀ ಹರಿಯ ಇಚ್ಛೆ (ಯದೃಚ್ಛೆ) ಯಿಂದ ದೊರೆಯುವವರಿಂದಲೆ ಸಂತುಷ್ಟರಾಗಿ, ಭಗವದ್ಭಕ್ತಿಯುಳ್ಳ ಮಡದಿ ಮಕ್ಕಳಿಂದ ಕೂಡಿಕೊಂಡು ಸಂಸಾರ ಮಾಡುವದು ಉತ್ತಮ, ಹೀಗೆ ಶಿಲೋಂಛವೃತ್ತಿಯಿಂದ ಚರಿತಾರ್ಥವನ್ನು ಸಾಗಿಸುವದು ಅದಕ್ಕಿಂತಲೂ ಕಡಿಮೆ ಮಟ್ಟದ್ದು. ಇವೆರಡೂ ಅಯಾಚನಾವೃತ್ತಿಯ (ಪರರಿಗೆ ಕೈಯೊಡ್ಡದಿರುವ) ಪ್ರಕಾರಗಳು. ಇನ್ನು ಭಿಕ್ಷೆ (ಯಾಚನೆ) ಮಾಡಿ ತಂದು ಬದುಕುವದು ಅದಕ್ಕಿಂತಲೂ (ಅಯಾಚನೆಗಿಂತಲೂ ಕೆಳಮಟ್ಟದ್ದು) ದಿನದಿನಕ್ಕೆ ಬೇಕಾಗುವಷ್ಟನ್ನೇ ದೊರಕಿಸಿ (ನಾಳೆಗೆಂದು ಸಂಗ್ರಹ ಮಾಡದೆ) ಜೀವಿಸುವದು ಅದಕ್ಕಿಂತಲೂ ಉತ್ತಮ ಮಟ್ಟದ್ದು - ಹೀಗೆ ನಡೆಸುವ ವೃತ್ತಿಗೆ 'ಅಸಂಚಯ' ವೆಂಬ ಹೆಸರು. ಒಂದು ಪಕ್ಷ (ಹದಿನೈದುದಿವಸ) ಇಲ್ಲವೇ ಒಂದು ತಿಂಗಳವರೆಗೆ ಬೇಕಾಗುವಷ್ಟು ಧಾನ್ಯದವಸಗಳನ್ನು ಕಲೆ ಹಾಕುವ ಜೀವನಕ್ರಮವು ಮಧ್ಯಮ ಮಟ್ಟದ್ದು. ಈ ಬಗೆಯ ವೃತ್ತಿಗೆ 'ವಾರ್ತಾ' ಎಂದು ಕರೆಯುವರು. ಒಂದು ವರುಷದ ವರೆಗೆ ಜೀವನೋಪಯೋಗಿಯಾದ ಪದಾರ್ಥಗಳನ್ನು ಸಂಗ್ರಹಿಸುವದು ಅಧಮ (ಹೀನ) ವಾದ ಚರಿತಾರ್ಥದ ರೀತಿಯು ಅದಕ್ಕೆ 'ಶಾಲೀನ' ವೆನ್ನುವರು. ಮನೋವಿಕ್ಷೇಪ (ಮನಸ್ಸಿನ ಚಲವಿಚಲ)ವನ್ನು ಹೆಚ್ಚುಕಡಿಮೆಯಾಗಿ ಮಾಡುವವೃತ್ತಿಗಳೆ ಅಧಮವಾದವು, ಕೀಳು ಮಟ್ಟದವು, ಮನೋವಿಕ್ಷೇಪವನ್ನು ಪೂರ್ಣವಾಗಿ ಮಾಡದಿರುವ ವೃತ್ತಿಯೆ ಅತ್ಯುತ್ತಮ, ಹೆಚ್ಚು ಕಡಿಮೆಯಾಗಿ ವಿಕ್ಷೇಪವನ್ನು ಮಾಡುವವು ಹೆಚ್ಚುಕಡಿಮೆ ಹೀನವಾದವುಗಳು. ಮಡದಿ ಮಕ್ಕಳು ಇರಲಿ, ಯಾಚನೆ ಮಾಡಲಿ, ಮಾಡದಿರಲಿ. (ಜೀವನಕ್ಕೆ ಅಗತ್ಯವಿರುವ ವಸ್ತುಗಳ) ಸಂಗ್ರಹ ಮಾಡಲಿ, ಮಾಡದಿರಲಿ. ಇದು ಮುಖ್ಯವಾದುದಲ್ಲ. ಮನೋವಿಕ್ಷೇಪವೇ ಮುಖ್ಯವಾದ ಒರೆಗಲ್ಲು. ಆದುದರಿಂದ ಮನೋವಿಕ್ಷೇಪವಾಗದಂತೆ, ( ಭಾಗವತ ಧರ್ಮಗಳ ಆಚರಣೆಯಲ್ಲಿ ) ಮನಸ್ಸು ಕದಡದೆ ಸ್ಥಿರವಾಗಿ ಉಳಿಯುವಂತೆ ಅಂಥ ಜೀವನವೃತ್ತಿಯನ್ನು ನಡೆಸಬೇಕೆಂಬುದೇ ತಾತ್ಪರ್ಯವಾಗಿದೆ.

॥೨೭೩॥ **ಸ ಚಿಂತಯನ್ ದ್ವ್ಯಕ್ಷರಮೇಕದಾಂಭ-**
**ಸ್ಯುಪಾಶೃಣೋದ್ದ್ವಿರ್ಗದಿತಂ ವಚೋ ವಿಭುಃ ।**
**ಸ್ಪರ್ಶೇಷು ಯತ್ ಷೋಡಶಮೇಕವಿಂಶಂ**
**ನಿಷ್ಕಿಂಚನಾನಾಂ ನೃಪ ಯದ್ಧನಂ ವಿದುಃ ॥ ೨-೯-೬**

ಕುಂತೀ ಶ್ರೀಕೃಷ್ಣಗೆ ಡ

ಪರಮಾತ್ಮನ ಆಜ್ಞೆಯಂತೆ ಜಗತ್ತಿನ ಸೃಷ್ಟಿಗೆ ಅಗತ್ಯವಾದ ಜ್ಞಾನವನ್ನು ಪಡೆಯಬೇಕೆಂಬ ಯೋಚನೆಯಲ್ಲಿ ಬ್ರಹ್ಮನು ಇರುವಾಗ್ಗೆ, ಪ್ರಳಯೋದಕದಿಂದ 'ತಪ' ಎಂಬ ಅಕ್ಷರಗಳು ಆತನಿಗೆ ಕೇಳಬಂದವು. ತಪೋಧನರೆ ಯೋಗಿಗಳು.

ಇದು ವರೆಗೆ ಹೇಳಿರುವ ಜೀವನಕ್ರಮದಿಂದ, ಕೇವಲ ಪ್ರಾಣಧಾರಣವನ್ನೇ ಉದ್ದೇಶವಾಗಿಟ್ಟುಕೊಂಡು ಜೀವನ ಸಾಗಿಸುತ್ತಿದ್ದರೂ,[ಬರಗಾಲ ಮುಂತಾದ]ಆಪತ್ತು ಕಠಿಣ ಪರಿಸ್ಥಿತಿ] ಒದಗಿದ ಕಾಲದಲ್ಲಿ ಹೇಗೆ ಜೀವಿಸಬೇಕು, – ಎಂದು ಕೇಳಿದರೆ. ಅದಕ್ಕೆ ಉತ್ತರ :– ವಾಸುದೇವನನ್ನು ನಂಬಿದ ಭಕ್ತರಿಗೆ, ಆಪತ್ತುಗಳ ಅಂಜಿಕೆಯೆ ಇಲ್ಲ. ದೈವಯೋಗದಿಂದ ಅವರಿಗೆ ಒದಗುವ ವಿಪತ್ತು. ಉಳಿದವರಿಗೆ ದೊರಕುವ ಸಂಪತ್ತಿಗಿಂತಲೂ ಮಿಗಿಲಾದದು. ವಿಪತ್ತಿನ ಕಾಲದಲ್ಲಿಯೆ ಭಕ್ತಿ ಹಾಗೂ ಜ್ಞಾನದ ಪ್ರಾಪ್ತಿಗೆ ಹೆಚ್ಚು ಸದಾವಕಾಶವು ದೊರೆಯುವದರಿಂದ, [ ದೈವಿಕ ] ಆಪತ್ತು ಅವರಿಗೆ ಅಳುಕನ್ನು ಉಂಟು ಮಾಡುವದಿನ. ಹೀಗೆ **ಹೇಳಿದೆ** :–'ವಿಪದಃ ಸಂತು.... ಪುನರ್ಭವದ್ದರ್ಶನಂ' [೧–೮–೨೮] ಕುಂತೀದೇವಿಯು ಪರಮಾತ್ಮನಿಗೆ ಹೇಳಿದ ಮಾತುಗಳಿವು :– ಕೃಷ್ಣಾ, ಆಪತ್ತುಗಳು ನಮಗೆ ನಿರಂತರವಾಗಿ ಬರಲಿ, ಏಕಂದರೆ. ಜಗದೊಡೆಯನೆ ! ಆಪತ್ತುಗಳಲ್ಲಿಯೆ ನಿನ್ನ ದರುಶನವು ಮತ್ತೆ ಮತ್ತೆ ಆಗುವದು. – 'ಕುಂತೀದೇವಿ ನುಡಿದ ಈ ಮಾತು ಸತ್ಯಸಂಗತಿಯೆ ಆಗಿದೆ. ಹೀಗಿದ್ದರೂ ಹೊಟ್ಟೆಗೆ ಗತಿಯೇನು ? ಎಂಬುದು ನನ್ನ ಪ್ರಶ್ನೆಯ ಅಭಿಪ್ರಾಯ.' –ಇದಕ್ಕೆ ಉತ್ತರ, –'ಉಳಿದವರ ಹೊಟ್ಟೆ ಹೇಗೆ ತುಂಬುವದು ? ಕೂಡಿಟ್ಟ ಧನ ಸಂಗ್ರಹದಿಂದಲೆಂದೇ ನೀವು ಹೇಳಿದರೆ, ನಮ್ಮ ಉತ್ತರವೂ ನಿಮ್ಮಂತೆಯೆ ಆಗಿದೆ. ನಿಮ್ಮ ಧನ, ಯಾವುದೆಂದು ಕೇಳಿದ್ದಕ್ಕೆ ಇಲ್ಲಿ ಉತ್ತರವನ್ನು ಹೇಳುವರು.–

**ಅರ್ಥಃ**–ಸೃಷ್ಟಿಕಾರ್ಯಕ್ಕೆ ಉಪಯುಕ್ತವಾದ ಜ್ಞಾನವು ಹೇಗೆ ದೊರೆತೀತು? ಎಂಬ ಚಿಂತೆಯಲ್ಲಿ ಬ್ರಹ್ಮನು ಮಗ್ನನಾಗಿದ್ದನು. ಹೀಗೆ ಯೋಚಿಸುತ್ತಿರುವಾಗ್ಗೆ,ಒಮ್ಮೆ ಆತನಿಗೆ ಎರಡು ಅಕ್ಷರಗಳಿಂದ ಕೂಡಿದ ಶಬ್ದವನ್ನು ಎರಡು ಸಲ ಗಟ್ಟಿಯಾಗಿ ಹೇಳಿದ್ದು ಕೇಳಿ ಬಂದಿತು. ಅವೆರಡು ಅಕ್ಷರಗಳು ಯಾವೆಂಬುದು ಪರೀಕ್ಷಿತನ ಮನಸ್ಸಿನಲ್ಲಿಯ ಶಂಕೆ. ಅದನ್ನು ತಿಳಿದ (ಸರ್ವಜ್ಞ) ಶುಕರು ರಾಜನಿಗೆ ತಿಳಿಸಿ ಹೇಳುವರು. ರಾಜನೆ! ಕವರ್ಗದಿಂದ ಮವರ್ಗದ ವರೆಗಿನ ೨೫ ವರ್ಣ (ಅಕ್ಷರ)ಗಳಿಗೆ 'ಸ್ಪರ್ಶ' ಗಳೆಂಬ ಹೆಸರು ಇಪ್ಪತ್ತೈದರಲ್ಲಿ ಹದಿನಾರನೆಯ ಕ್ರಮಾಂಕದ ಅಕ್ಷರವು (ಬ್ರಹ್ಮನಿಗೆ ಕೇಳಬಂದ) ಎರಡು ವರ್ಣಗಳಲ್ಲಿ ಮೊದಲನೆಯದು; ಇಪ್ಪತ್ತೊಂದನೆಯ ಅಕ್ಷರವು ಎರಡನೆಯದು. ಹದಿನಾರನೆಯದು 'ತ'ಕಾರವಾಗಿದೆ. ಇಪ್ಪತ್ತೊಂದನೆಯದು – 'ಪ'ಕಾರೂಾಗಿದೆ. ಏನೆಂಬುದು ಈಗ ಗೊತ್ತಾಯಿತು.– 'ತಪ'ವೆಂಬುವದೇ ಆ ಶಬ್ದ, – ಎರಡಕ್ಷರಗಳ (ಈ ಶಬ್ದದ ಅರ್ಥವೇನು?)ಎಂದರೆ ಹೇಳುವರು. ಐಹಿಕ ಯಾವ ವಸ್ತುವನ್ನು ಅಪೇಕ್ಷಿಸದ ಯೋಗಿಗಳು 'ತಪ'ವೆಂದರೇನೆಂಬುದನ್ನು ಚನ್ನಾಗಿ ಬಲ್ಲರು.–ಅವರೇ ನಿಷ್ಕಿಂಚನರು. ಅವರಿಗೆ ತಪ(ತಪಸ್ಸೇ)

ಧನವು. ಅಂತೆಯೆ ಅವರು ತಪೋಧನರೆಂದು ಪ್ರಸಿದ್ಧರಾಗಿರುವರು. ಸಾಮಾನ್ಯರಿಗೆ ಕೂಡಿಟ್ಟ ಧನವು ಆಪತ್ಕಾಲದಲ್ಲಿ ಚರಿತಾರ್ಥಕ್ಕೆ ಉಪಯುಕ್ತವಾಗುವಂತೆ ತಪೋಧನರಾದ ಈ ಯೋಗಿಗಳಿಗೆ ಬಹುಕಾಲ ಗೈದ ತಪಸ್ಸೆಂಬ ಧನಸಂಗ್ರಹವೆ ಅನ್ನಾದಿಗಳನ್ನು ಪಡೆಯಲು ಸಹಾಯಕವಾಗುವದು. – ಆದುದರಿಂದ ಆಪತ್ಕಾಲದಲ್ಲಿ ಅವರಿಗೆ ಹೇಗೆ ಹೊಟ್ಟೆ ತುಂಬುವದೆಂಬಚಿಂತೆಗೆ ಇಂಬಿಲ್ಲ. (ಯೇನ ಕೇನಾಪಿ ಸಂತೋಷಃ (೫)

**||೨೭೪|| ವಿಷಯತೃಷೋ ನರಪಶವೋ ಯ ಉಪಾಸತೇ**

**ವಿಭೂತೀರ್ನ ಪರಂ ತ್ವಾಂ |**

**ತೇಷಾಮಾಶಿಷ ಈಶ ತದನು ವಿನಶ್ಯಂತಿ ಯಥಾ**

**ರಾಜಕುಲಂ || ೬-೧೬-೩೮**

ಚಿತ್ರಕೇತು ರಾಜ

ವಿಷಯ ಸುಖಗಳ ಬೆನ್ನು ಹತ್ತಿದವರನ್ನು ಚಿತ್ರಕೇತು ರಾಜನು ನಿಂದಿಸುತ್ತಾನೆ.-

**ಅರ್ಥ:**- ಪ್ರಭುವೆ! ವಿಷಯ ಸುಖಕ್ಕಾಗಿ ಹಾತೊರೆಯುವವರು ಮನುಷ್ಯರೂಪಿಗಳಾದ ಪಶುಗಳಿದ್ದಂತೆ. ತಮ್ಮ ಮನದ ಬಯಕೆಗಳನ್ನು ಪೂರೈಸುವರೆಂಬ ಭ್ರಮೆಯಿಂದ (ಶ್ರೀಮನ್ ನಾರಾಯಣನನ್ನು ಬಿಟ್ಟು) ಬೇರೆ ದೇವದೇವತೆಗಳ ಉಪಾಸನೆಯನ್ನು ಅವರು ಮಾಡುವರು. ಆ ಎಲ್ಲ ದೇವತೆಗಳಿಗಿಂತಲೂ ಅನಂತ ಪಟ್ಟು ಶ್ರೇಷ್ಠನಾಗಿರುವ, ಅಷ್ಟೇ ಶ್ರೇಷ್ಠವಾದ ಪರಮ ಪುರುಷಾರ್ಥವನ್ನು ಕೊಡಲು ಶಕ್ತನಾದ ನಿನ್ನನ್ನು ಆರಾಧಿಸುವದಿಲ್ಲ. ಅವರು ಅಪೇಕ್ಷಿಸುವ ವಿಷಯ ಸುಖಗಳು ಒಂದು ದೊರೆಯುವಷ್ಟರಲ್ಲಿಯೆ ಇನ್ನೊಂದು ಅಳಿದುಹೋಗುವದು, (ಅವರ ಬಯಕೆಗಳು ಒಟ್ಟಿಗೆ ಕೂಡಿ ಎಂದೂ ಈಡೇರುವದಿಲ್ಲ. ಅವರ ಬಯಕೆಗಳ ಸ್ವರೂಪವು ರಾಜ ಮನೆತನಗಳ ಸ್ಥಿತಿಯಂತೆ –ಈ ಅರಸುಗಳಿಗೆ ಒಮ್ಮೆ ರಾಜ್ಯ ದೊರೆಯುವದಿಲ್ಲ. ಕದಾಚಿತ್ ಸಂಪಾದಿಸಿದ ರಾಜ್ಯವೂ ಅಳಿದು ಹೋಗುವುದು. (ಅನ್ಯಾಯದಿಂದ ಗಳಿಸಿದ) ರಾಜ್ಯವು ಒಂದು ವೇಳೆ ಜೀವಾವಧಿಯವರೆಗೆ ಉಳಿದರೂ ಅಂಥ ರಾಜರಿಗೆ ಮರಣದನಂತರವು ತಪ್ಪಿದ್ದಲ್ಲ. –ತಾತ್ಪರ್ಯವೆಂದರೆ, ನರಕವು ವಿಷಯಲೋಲುಪರು ಅನೇಕ ವಿಷಯಗಳಿಗಾಗಿ ಹಂಬಲವನ್ನು ತಾಳುವರು. ಬೇರೆ ದೇವತೆಗಳು ತಮ್ಮ ಬಯಕೆಗಳನ್ನೆಲ್ಲ ಈಡೇರಿಸುವರೆಂದು ಭಾವಿಸಿ (ಭ್ರಮಿಸಿ) ನಿನ್ನನ್ನು (ನಾರಾಯಣನನ್ನು) ಕಡೆಗಣಿಸಿ ಅನ್ಯ ದೇವತೆಗಳ ಉಪಾಸನೆಯಲ್ಲಿ ತೊಡಗುವರು. ಸಂತಾನ-ಸಂಪತ್ತು ಮುಂತಾದ ಅವರ ಹಂಬಲುಗಳಲ್ಲಿ ಮೊದಲು

ಮಗ ಹುಟ್ಟಬಹುದು. ಇನ್ನು ಸಂಪತ್ತು ಪಡೆಯುವ ಹವಣಿಕೆ. ಸಂಪತ್ತು ಕೈಗೆ ಬರುವಷ್ಟರಲ್ಲಿ ಹುಟ್ಟಿದ ಮಗನು ತೀರಿಕೊಳ್ಳಬಹುದು. ಈ ರೀತಿಯಲ್ಲಿ ಒಂದು ವಸ್ತು ಕೈಗೆ ಎಟಕುವದರಲ್ಲಿ ಇನ್ನೊಂದು ಕೈಬಿಟ್ಟು ಹೋಗುವದು. ಬಯಸುವ ಎಲ್ಲ ವಸ್ತುಗಳು ಏಕ ಕಾಲಕ್ಕೆ ದೊರಕುವದಂತೂ ಅಶಕ್ಯವೇ; ಒಂದೇ ವೇಳೆಗೆ ದೊರೆತರೂ, ದೊರೆತ ವಸ್ತುಗಳೆಲ್ಲವೂ ಏಕ ಕಾಲಕ್ಕೇನೆ ನಾಶವಾಗಿ ಬಿಡುವವು. ಯಾರೋ ಒಬ್ಬರಿಗೆ ದೈವಕೃಪೆಯಿಂದ ಬಯಸಿದ ವಸ್ತುಗಳು ಆತನು ಬದುಕಿ ಇರುವವರೆಗೂ ಉಳಿಯ ಬಹುದೆಂದರೂ, ಆತನು ಕಾಲವಶವಾದ ಕೂಡಲೆ ಅವುಗಳೆಲ್ಲ ಸಮೂಲವಾಗಿ ನಾಶ ಹೊಂದುವವು. ಹೀಗೆ ಹೇಳಿರುವರು :– 'ಏವಂ ಲೋಕಂ...... ಮಂಡಲ ವರ್ತಿನಾಂ' (೧೧–೩–೨೧)

ಇದೇ ರೀತಿಯಾಗಿ ಕರ್ಮಫಲದಿಂದ ಪ್ರಾಪ್ತವಾಗುವ ಸ್ವರ್ಗಾದಿ ಪರಲೋಕಗಳೂ ಕೂಡ ನಾಶ ಹೊಂದತಕ್ಕವುಗಳೆ. (ಕ್ಷೀಣೇ ಪುಣ್ಯೇ ಮರ್ತ್ಯಲೋಕಂ ವಿಶಂತಿ) ಗಳಿಸಿದ ಪುಣ್ಯವು ತೀರಿದೊಡನೆ ಜನನ ಮರಣಗಳ ನೆಲೆವೀಡಾದ ಈ ಭೂಲೊಕಕ್ಕೆ ಅವರು ತಿರುಗಿ ಬರಲೇಬೇಕಾಗುವದು. ( ರಾಜ್ಯಕ್ಕಾಗಿ ಬಡದಾಡುವ ರಾಜ[illegible] ಅಪಾರ, ಅತಿಶಯವಾದ ನಷ್ಟಕ್ಕೆ ಗುರಿಯಾಗುವಂತೆ, ಕರ್ಮ ನಿರ್ಮಿತವಾದ ಈ ಪರಲೋಕಗಳೂ ನಾಶಹೊಂದುವವು. 'ರಾಜಕುಲ'ಕ್ಕೆ ಬದಲಾಗಿ 'ಅರಾಜಕುಲಂ' ಎಂದಿಟ್ಟುಕೊಂಡರೆ, ರಕ್ಷಕನಾದ ರಾಜನಿರದಿದ್ದರೆ ಪ್ರಜೆಗಳೆಲ್ಲ ನಾಶಹೊಂದುವಂತೆ ಇನ್ನೊಂದು ಅರ್ಥವೆಂದರೆ, ಅಧರ್ಮಿಗಳಾದ ರಾಜರು ನಾಶ ಹೊಂದುವಂತೆ.

॥೨೭೫॥ **ವರಾನ್ವಿಭೋ ತ್ವದ್ವರದೇಶ್ವರಾದ್ಬುಧಃ**
**ಕಥಂ ವೃಣೀತೇ ಗುಣವಿಕ್ರಿಯಾತ್ಮನಾಂ ।**
**ಯೇ ನಾರಕಾಣಾಮಪಿ ಸಂತಿ ದೇಹಿನಾಂ**
**ತಾನೀಶ ಕೈವಲ್ಯಪತೇ ವೃಣೀತ ಕಃ ॥** ೪-೨೦-೨೪

ಪೃಥು ಶ್ರೀಹರಿಯ[illegible]

ಪೃಥುರಾಜನು ಶ್ರೀ ಹರಿಯ ಸ್ತೋತ್ರ ಮಾಡುವನು.

ಪರಾತ್ಪರನಾದ ಭಗವಂತನನ್ನು ಬಿಟ್ಟು ಅನ್ಯದೇವತೆಗಳನ್ನು ಆರಾಧಿಸುವ ಜನರಿಗೆ ಮುಂಬರುವ ಕಾಲದಲ್ಲಿ (ತಮ್ಮ ಈ ತಪ್ಪು ನಡತೆಯಿಂದ ) ಒದಗು[illegible] ಅನರ್ಥಗಳ ಪರಿವೆಯಿಲ್ಲದೆ, ಕ್ಷಣಿಕವಾದ ಅಲ್ಪಸುಖಕ್ಕೆ ಮನ ಸೋಲುವರು. ದೂರ ದೃಷ್ಟಿಯಿಲ್ಲದ ಈ ಅಜ್ಞಾನಿಗಳ ವರ್ತನೆಯು ಮುಳ್ಳಿನಿಂದ ಮುಚ್ಚಿ[illegible] ಹುಲ್ಲನ್ನು ತಿನ್ನುವ ಆಶೆ ಮಾಡುವ ಪಶುಗಳ ಕೃತಿಯಷ್ಟೇ ಮೂರ್ಖತನದ್ದಾಗಿರು[illegible] ವದು ಹೀಗೆ ಹೇಳಿರುವದು ಯುಕ್ತವೆ ಆಗಿದೆ. ಆದುದರಿಂದ, ಮುನ್ನೋ[illegible]

ವಿಲ್ಲದ ಪಶುಗಳಂತೆ ಮಾಡದೆ, ( ಪುರುಷಾರ್ಥಪ್ರದನಾದ ) ಭಗವಂತನನ್ನೆ ಆರಾಧಿಸಿ ಆತನಿಂದಲೆ ಸಾತ್ವ ( ಅಪೇಕ್ಷಿತ ) ವರಗಳನ್ನು ಪಡೆಯೋಣ ಎಂದು ಹೇಳಿರುವರು.

**ಅರ್ಥ** ;- ಹೇ ಪ್ರಭುವೆ ! (ಶ್ರೇಷ್ಠ ಪುರುಷಾರ್ಥವನ್ನು ಕೊಡಲು ಸಮರ್ಥನಾದವನೇ) ವರ ಕೊಡುವವರಲ್ಲಿ ನೀನು ಶ್ರೇಷ್ಠನು, ಅಸಮಾನನು. ಈ ಬಗೆಯ ನಿನ್ನಿಂದ ಕ್ಷುದ್ರ ( ಕೀಳು ) ಮಾನವರು ( ದೂರದೃಷ್ಟಿಯಿಲ್ಲದವರು ) ಬಯಸುವ ( ವಿಷಯ ಸುಖವೆಂಬ ) ಹೀನವಸ್ತು ಬೇಡುವ ವರವನ್ನು ( ವಿವೇಕಿಯಾದ ) ಬುದ್ಧಿವಂತನಾದ ಯಾವ ಮಾನವನು ಕೇಳಿಕೊಳ್ಳುವನು, (ಅಂಥವರು ಎಂದಿಗೂ ಹೀಗೆ ಬೇಡುವದಿಲ್ಲ). ನೀನು ವರದೇಶ್ವರನಾದುದರಿಂದ, ಔದಾರ್ಯದಿಂದ ಜನರು ಕೇಳಿದ್ದಕ್ಕಿಂತಲೂ ಹೆಚ್ಚಿಗೆ ಕೊಟ್ಟರೆ, ವರದೇಶ್ವರನೆಂಬ ನಿನ್ನ ಬಿರುದಿಗೆ ಅದೇನು ದೋಷವೆನಿಸದು, ಪ್ರತಿಯಾಗಿ ನಿನ್ನ ಬಿರುದಿಗೆ ಹೆಚ್ಚಿಗೆ ಕೊಡುವದು ಸಮಂಜಸವೇ ಆಗಿರುವದು. ವರವನ್ನು ಕೇಳುವಲ್ಲಿ ಅಯೋಗ್ಯವಾದುದು (ದೋಷವು) ಯಾವುದು ? ಎಂಬುದನ್ನು ಹೇಳುತ್ತಾರೆ. (ಒಲಿದು ಬಂದ ಕಾಮಧೇನುವಿಗೆ ಹುಳಿಮಜ್ಜಿಗೆ ಕೇಳಿದಂತೆ); ಸಂಪತ್ತಿನ ಒಡೆಯನಾದ ಕುಬೇರನು ಒಲಿದು ಬಂದಾಗ್ಗೆ ಹುಲ್ಲು-ಹೊಟ್ಟು ಕೇಳುವಂತೆ, ಭಕ್ತಿಯುತ ಆರಾಧನೆಯಿಂದ ಭಗವಂತನನ್ನು ಆರಾಧಿಸಿಕೊಂಡು ನರಕವಾಸಿಗಳಾದ ದುರ್ಭಾಗ್ಯರಿಗೂ (ಅಥವಾ ನರಕವಾಸಿಗಳಂತೆ ವಿಷಯ ಸುಖವನ್ನಷ್ಟೇಬಲ್ಲ ಕೀಳು ಯೋನಿಗಳ ಪ್ರಾಣಿಗಳಿಗೂ) ತಾನಾಗಿಯೇ ದೊರೆಯುವ ಕ್ಷಣಿಕವಾದ ಇಂದ್ರಿಯಜನ್ಯ ವಿಷಯಗಳನ್ನು ಭಗವಂತನಿಂದ ಅಪೇಕ್ಷಿಸುವವರು ವಿಷಯಲೋಲುಪತೆಯಿಂದ ದೂಷಿತ ಮನಸ್ಸುಳ್ಳವರು. ತಿಳಿದವರಾದ (ವಿವೇಕಿಗಳಾದ) ಬುಧಜನರು ಎಂದಿಗೂ ಅಂಥ ವಿಷಯ ಸುಖಗಳನ್ನು ನಿನ್ನಿಂದ ಅಪೇಕ್ಷಿಸುವದಿಲ್ಲ.

ಒಟ್ಟಿಗೆ ಹೇಳಿದ ಮಾತು :- ಅನ್ಯದೇವತೋಪಾಸಕರಂತೆ, ನಿಮ್ಮಲ್ಲಿ ಮುನ್ನೋಟವಿಲ್ಲವೆಂಬ ಸಂಗತಿಯಂತೂ ಸತ್ಯವಾದುದೇ ಸರಿ. ಭಗವಂತನಿಂದ ಶ್ರೇಷ್ಠಪುರುಷಾರ್ಥವನ್ನು ಪಡೆಯುವ ಸುಯೋಗವು ಆಯತ್ತವಾಗಿ ನಿಮಗೆ ದೊರಿತಾಗ್ಗೆ ಅದನ್ನು ಪಡೆದುಕೊಳ್ಳದಿದ್ದರೆ, ನಿಮ್ಮ ಮುನ್ನೋಟವು ಇನ್ನಷ್ಟು ಕಡಿಮೆಯೆಂತಲೆ ಹೇಳಬೇಕಾಗುವದು,

**॥೨೬॥ ಮಾಂ ಪ್ರಾಪ್ಯ ಮಾನಿನ್ಯ ಪವರ್ಗಸಂಪದಂ**
**ವಾಂಛಂತಿ ಯೇ ಸಂಪದ ಏವ ತತ್ಪತಿಂ ।**

ಶ್ರೀಕೃಷ್ಣ
ರುಕ್ಮಿಣಿಗೆ

ತೇ ಮಂದಭಾಗ್ಯಾ ನಿರಯೇಽಪಿ ಯೇ ಸ್ಯು-
ರ್ಮಾತ್ರಾತ್ಮಕತ್ವಾನ್ನಿರಯೇಽಪಿ ಸುಸಂಗಮಃ ॥ ೧೦-೬೫-೫೨
60-53

ಶ್ರೀ ಕೃಷ್ಣನು ರುಕ್ಮಿಣಿಗೆ ಹೇಳಿದ ಮಾತಿದು :-

ಯಾವದೋ ಒಬ್ಬ ಅತಿ ವಿರಕ್ತನಾದ ಭಗವದ್ಭಕ್ತನು ಆಡುವ ಮಾತು ನೀವು ಹೇಳುವದು. ಅನ್ಯದೇವತೆಗಳ ಉಪಾಸಕರಿಗಿಂತಲೂ, (ಭಗವಂತನಿಂದ ವಿಷಯ ಸುಖಗಳನ್ನು ಬೇಡಿಕೊಳ್ಳುವ) ನೀವು ಹೆಚ್ಚಿಗೆ ಮಂದ ದೃಷ್ಟಿಯುಳ್ಳವರು, ಮಂದ ಬುದ್ಧಿಯುಳ್ಳವರು, ಎಂದು ಹೇಳುವದು-ಸಾಹಸದ (ಅತಿರೇಕದ) ನುಡಿಯಂತಿದೆ ಎಂದರೆ, ಅವರ ತಪ್ಪನ್ನು ತೋರಿಸಲು (ವಿಷಯ ಸುಖವನ್ನು ಬೇಡಿಕೊಳ್ಳುವವರು) ಅತಿ ಮೂರ್ಖರೆಂದು ಮನಗಾಣಿಸಿಕೊಡಲು ಭಗವಂತನ ಮಾತುಗಳನ್ನೇ ಇಲ್ಲಿ ಉದಹರಿಸುತ್ತಾರೆ.

ಅರ್ಥ :- (ಪೂಜಾರ್ಹಳಾದ) ರುಕ್ಮಿಣಿಯೇ ! ಸಜ್ಜನರ ರಕ್ಷಕನೂ, (ಬೇರೆ ಯಾರಿಂದಲೂ ದೊರೆಯಲಾರದ) ಮೋಕ್ಷವನ್ನೇ ಕೊಡುವವನೂ ಆದ ನನ್ನನ್ನು ತಮ್ಮ ಆರಾಧನೆಯಿಂದ ಒಲಿಸಿಕೊಂಡು, ಐಹಿಕ (ನಶ್ವರ) ಸಂಪತ್ತನ್ನೇ (ವಿಷಯ ಸುಖವನ್ನೇ) ಬಯಸುವವರು (ನಿಜವಾಗಿಯೂ) ಮಂದಭಾಗ್ಯರು (ದೈವಹೀನರು) ಬೇರೆ ಯಾವ ದೇವತೆಗಳ ಉಪಾಸನೆಯಿಂದ, ದೊರೆಯಲಾರದ ಮೋಕ್ಷವು ಕೈಗೆ ಬಂದಿರಲು, ಅದನ್ನು ಬಿಟ್ಟು ಬೇರೆ (ಅಲ್ಪ ಹಾಗೂ ಕ್ಷಣಿಕ) ವಿಷಯಗಳನ್ನು ಬಯಸುವವರು ದುರ್ದೈವಿಗಳೇ ಅಲ್ಲವೆ ? ಯಾವದೋ ದೇಶದ (ಅಪರಿಚಿತ) ರಾಜ ಅವನನ್ನು ಎಂದಿಗೂ ಕಂಡಿಲ್ಲ, ಹಾಗೂ ಅವನಿಂದ ಇದುವರೆಗೆ (ಒಮ್ಮೆಯೂ) ಯಾವ ಫಲ (ಪುರಸ್ಕಾರ)ವನ್ನು ಪಡೆದಿಲ್ಲ. ಅಂಥ ರಾಜನನ್ನು ಸೇವಿಸುವಂತೆಯೇ ಅನ್ಯದೇವತೆಗಳ ಉಪಾಸನೆ. ಅದನ್ನು ಮಾಡುವವರು ಮಂದಭಾಗ್ಯರೆಂಬುದಂತು ನಿಜವೆ ! ಆದರೆ, ಮುಕ್ತಿಪ್ರದನಾದ ಶ್ರೀ ಹರಿಯನ್ನು ಒಲಿಸಿಕೊಂಡು, ಆತನಿಂದ ವಿಷಯ ಸುಖಗಳನ್ನು ಬೇಡಿಕೊಳ್ಳುವವರು ಅವರಿಗಿಂತಲೂ ಅಧಿಕ ಅತಿದುಭಾ ಗ್ಯವಂತರು. ಏಕೆಂದರೆ, (ರೂಪ, ರಸ, ಶಬ್ದಗಳಿಂದ ಮನಸ್ಸನ್ನು ಸೆಳೆಯುವ ಇಂದ್ರಿಯಗಳನ್ನು ತೃಪ್ತಿಗೊಳಿಸುವ ವಿಷಯ ಸುಖಗಳು (ಊಟ, ನಿದ್ರೆ, ಮುಂತಾದವು) ನರಕದಲ್ಲಿಯೂ ದೊರಕುವವು. - ಇಂದ್ರಿಯ ಸುಖಗಳನ್ನು ಪಶುಪಕ್ಷಿಗಳು (ಕೀಳು ಯೋನಿಯ ಜೀವಿಗಳು) ಅನುಭವಿಸುವವು. ನರಕದಲ್ಲಿ ವಿಷಯಗಳ (ಭೋಗ್ಯ ವಸ್ತುಗಳೇ ಇಲ್ಲದಿರುವಾಗ್ಗೆ, ವಿಷಯ ಭೋಗವು ಹೇಗೆ ಸಾಧಿಸುವದು ಎಂದು ಕೇಳುವವರಿಗೆ ಉತ್ತರ ಹೇಳುವರು:- 'ನಿರಯೆ' ಎಂದರೆ 'ನರಕ'ವ

ಬುದೊಂದೇ ಅರ್ಥವಲ್ಲ. ನರಕ ಜೀವನವನ್ನು ಹೋಲುವ ಕೀಳು ಮಟ್ಟದ ಜೀವನವನ್ನು ನಡೆಸುವ ಹಂದಿ ಮುಂತಾದ ಕೀಳು ಪ್ರಾಣಿಗಳು, ಅವುಗಳಿಗೂ ಆಹಾರಾದಿಗಳು ದೊರೆಯುವವು. ಹುಲ್ಲು ನೀರು ಮುಂತಾದವು. ಅವುಗಳಿಗೆ (ಸುಗಮವಾಗಿ) ಅನಾಯಾಸವಾಗಿ ದೊರೆಯುವವು. ವಿಷಯಾಕಾಂಕ್ಷೆಯನ್ನು ಸ್ವತಃ ಭಗವಂತನೇ ನಿಷೇಧಿಸಿರುವನು. (ಮಾಡಬೇಡಿರೆಂದು ಸಾರಿರುವನು). ಆದುದರಿಂದ ವಿಷಯಾಕಾಂಕ್ಷೆಯನ್ನು ಮಾಡುವವರು (ಅನ್ಯದೇವೋಪಾಸಕರಿಗಿಂತಲೂ)ಹೆಚ್ಚಿಗೆ ಮುನ್ನೋಟವಿಲ್ಲದವರು, ಹೆಚ್ಚು ಮಂದ ಭಾಗ್ಯರೆಂತಲೇ ಹೇಳಬೇಕು. 'ನ ಖಾದಂತಿ ಗ್ರಾಮಪಶವಃ ( ೩-೩-೧೮ ) ಬಿಡಾರಿ ಪ್ರಾಣಿಗಳು- ತಿನ್ನುವ ವಿಸರ್ಜನೆ ಮಾಡುವ ಕಾರ್ಯವನ್ನು ಮಾಡುವದಿಲ್ಲವೆ ? ಇಂದ್ರಿಯ ಸುಖವನ್ನು ಅವು ಕೂಡ ಅನುಭವಿಸುವವು ಎಂಬರ್ಥ.

**॥೨೭೭॥ ನೂನಂ ವಿಮುಷ್ಟಮತಯಸ್ತವ ಮಾಯಯಾ ತೇ**
**ಯೇ ತ್ವಾಂ ಭವಾಪ್ಯಯವಿಮೋಕ್ಷಣಮನ್ಯಹೇತೋಃ ।**
**ಅರ್ಚಂತಿ ಕಲ್ಪಕತರುಂ ಕುಣಪೋಪಭೋಗ್ಯ-**
**ಮಿಚ್ಛಂತಿ ಯತ್ಸ್ಪರ್ಶಜಂ ನಿರಯೇಽಪಿ ನೃಣಾಂ ॥ ೪-೧೦-೯**

ತಪಸ್ಸಿಗೆ ಒಲಿದು ಬಂದ ಶ್ರೀಮನ್ನಾರಾಯಣನಿಗೆ ಧ್ರುವರಾಜನು ಮಾಡಿಕೊಂಡ ಪ್ರಾರ್ಥನೆ-

(ಭಗವಂತನನ್ನುಳಿದು) ಬೇರೆದೇವತೆಗಳು ಬಯಸಿದ್ದನ್ನು (ಮುಕ್ತಿಯನ್ನು) ಕೊಡಲು ಸಮರ್ಥರಿಲ್ಲ. ಭಗವಂತನೇ (ಶ್ರೀ ವಿಷ್ಣುವೆ) ಮಾತ್ರ ತಾವು ಬಯಸುವದನ್ನು ಹಾಗೂ (ಸಂಸಾರ ಬಂಧನದಿಂದ ಬಿಡುಗಡೆಯಾಗುವ) ಮುಕ್ತಿಯನ್ನು ಕೊಡಲು ಶಕ್ತನು- ಎಂಬ ಜ್ಞಾನವುಳ್ಳವರಾಗಿದ್ದುಕೊಂಡೆ, ಅನ್ಯ ದೇವತೆಗಳನ್ನು ತ್ಯಜಿಸಿ ಭಗವಂತನಿಂದಲೆ (ವಿಷಯ ಭೋಗಗಳನ್ನು) ಏಕೆ ಬೇಡಿಕೊಳ್ಳುವರು ? ಈ ತಪ್ಪನ್ನು ಅವರು ಏಕೆ ಮಾಡುವರು? 'ಕಲ್ಪತರುವನ್ನು ಒಲಿಸಿಕೊಂಡು, ಹಿಡಿ ಹಿಟ್ಟನ್ನು ಕೇಳಿಕೊಳ್ಳುವ ಮೂರ್ಖ ಕೃತಿಯನ್ನು ಅವರಿಗೆ ಮಾಡಲು ಹಚ್ಚುವದು, ಭಗವಂತನ ಮಾಯಾಶಕ್ತಿ (ಬಂಧಕ ಶಕ್ತಿಯೆ) ಆಗಿದೆ-

**ಅರ್ಥ :-** (ಭವ-ಹುಟ್ಟು, ಅಪ್ಯಯ-ಮರಣ) ಹುಟ್ಟು ಸಾವುಗಳ ಚಕ್ರದಂತಿರುವ ಈ ಸಂಸಾರದಿಂದ ಬಿಡುಗಡೆ ಮಾಡುವವನು ( ಅನ್ಯದೇವತೆಗಳು ಕೊಡಲಾರದ ಈ ಮಹಾ ಪುರುಷಾರ್ಥವನ್ನು ಕೊಡುವವನು) ನೀನು (ಭಗವಂ

ತನು), ಎಂಬುದನ್ನು ತಿಳಿದೂ ತಿಳಿದೂ ಹೇಯವಾದ ವಿಷಯಸುಖಗಳನ್ನು ನಿನಗೆ ಬೇಡಿಕೊಳ್ಳುವವರು ನಿಜವಾಗಿಯೂ ನಿನ್ನ ಮಾಯೆಯಿಂದ ತಮ್ಮ ಬುದ್ಧಿ (ವಿವೇಕಶಕ್ತಿ)ಯನ್ನು ಕಳೆದುಕೊಂಡವರು. ಕಲ್ಪವೃಕ್ಷವನ್ನು ಹಿಡಿಹಿಟ್ಟಿಗಾಗಿ ಆರಾಧಿಸುವ ಮೂರ್ಖರಂತೆ, ಅಂಥವರೂ ಬುದ್ಧಿಗೇಡಿಗಳು. ಅಲ್ಪ ಹಾಗೂ ನಶ್ವರವಾದ ವಿಷಯ ಸುಖಗಳು (ಅವರು ಬೇಡಿಕೊಳ್ಳುವ ಹಿಡಿಹಿಟ್ಟಿನಂತೆ) ನರಕದಲ್ಲಿಯೂ - ಅಥವಾ ನರಕದ ಜೀವನ ಕ್ರಮವನ್ನು ಅನುಸರಿಸುವ ಕೀಳ ಪಶುವರ್ಗಗಳಲ್ಲಿಯೂ ಕಂಡುಬರುವವು. ತಿಳಿದವರೂ ಕೂಡ ಹೇಯವಾದ ವಿಷಯಗಳನ್ನು ಭಗವಂತನಿಂದ ಬೇಡಿಕೊಳ್ಳುವಂತೆ ಮಾಡಲು (ಅಜ್ಞಾನಿಗಳಂತೆ ಆಚರಿಸಲು) ಹಚ್ಚುವದಕ್ಕೆ ಭಗವಂತನ ಮಾಯಾಶಕ್ತಿಯೆ ಕಾರಣವಾಗಿದೆ. ಭಗ ವಂತನ ಮಾಯಾ (ಮೋಹಕ) ಶಕ್ತಿಯಿಂದ ತಿಳಿದವರೂ ಕೂಡ ತಮ್ಮ ವಿಚಾರ ಶಕ್ತಿಯನ್ನು ಕಳೆದುಕೊಂಡು, ತಪ್ಪು ದಾರಿಯನ್ನು ಹಿಡಿಯುವರು.

॥೨೭॥ ನ ನಾಕಪೃಷ್ಠಂ ನ ಚ ಪಾರಮೇಷ್ಠ್ಯಂ
ನ ಸಾರ್ವಭೌಮಂ ನ ರಸಾಧಿಪತ್ಯಂ ।
ನ ಯೋಗಸಿದ್ಧೀರಪುನರ್ಭವಂ ವಾ
ವಾಂಛಂತಿ ತ್ವತ್ಪಾದರಜಃ ಪ್ರಪನ್ನಾಃ ॥ ೧೦-೧೬-೩೭

ಕಾಲಿಯಾ ಮರ್ದನ ಕಾಲಕ್ಕೆ ಆತನ ಮಡದಿಯರಾದ ನಾಗವಧೂಗಳು ಶ್ರೀಕೃಷ್ಣನನ್ನು ಸ್ತುತಿಸಿರುವದು.

ವಿಷಯ ಸುಖಗಳು ಅಲ್ಪ (ಕ್ಷುದ್ರ)ವಾದವು. ಬೇಗನೆ ನಶಿಸಿ ಹೋಗುವವು ಹಾಗೂ (ಕೊನೆಗೆ) ಕಡುತರವಾದ ಕಷ್ಟದುಃಖಗಳಿಗೆ ಗುರಿ ಮಾಡುವವು. ಆದ ದರಿಂದ ಅವುಗಳ ಬಯಕೆಯನ್ನೇ ಬಿಟ್ಟುಕೊಡಬೇಕು -ಎಂದು ಹೇಳುವಿರಿ. ಆದ ಈ ಬಗ್ಗೆ ಒಂದು ಸಂದೇಹವು ಮನಸ್ಸಿನಲ್ಲಿ ಬರುವದು. ಅದೆಂದರೆ -ನೀವು ಹೇಳ ವಂತೆ ವಿಷಯ ಸುಖಗಳು ಕ್ಷುದ್ರ ಕ್ಷಣಿಕ ಹಾಗೂ ಕಷ್ಟದಾಯಕವೆಂಬುದೇನೊ ನಿಜವಾಗಿದೆ. ಹೀಗಿದ್ದರೂ ಅವುಗಳ ಹಂಬಲವನ್ನೇ ಪೂರ್ಣವಾಗಿ ಬಿಟ್ಟುಕೊ ಡುವದು ತೀರ ಅಶಕ್ಯವೆನಿಸುವದು. ಈ ಸಂದೇಹಕ್ಕೆ ಉತ್ತರವನ್ನು ಹೇಳುವರು. ಈ ಹಂಬಲವನ್ನು ಕಳೆದುಕೊಳ್ಳುವ ಹಂಚಿಕೆಯನ್ನು ಹಿಂದೆ ಹೇಳಿದೆ. ಅದೆಂ ದರೆ. ಒಂದೊಂದೇ ವಿಷಯದ ಹಂಬಲ (ಆಕಾಂಕ್ಷೆ)ವನ್ನು ಕ್ರಮಶಃ ಕಳೆದುಕೊ ಳ್ಳುವ ರೂಢಿಯನ್ನು ಅಳವಡಿಸಿಕೊಳ್ಳಬೇಕು. ಈ ಉಪಾಯಕ್ಕೂ ಒಂದು ಆಕ್ಷೇಪ ಸಕಲ ವಿಷಯ ಭೋಗವನ್ನು ಧಿಃಕ್ಕರಿಸಿ ಭಗವಂತನ ಸೇವೆಯಲ್ಲಿಯೆ ಆಸಕ್ತರಾ

ಗುವ ಭಗವದ್ಭಕ್ತರು ಜಗತ್ತಿನಲ್ಲಿ ಯಾರಾದರೂ ಕಂಡು ಬರುತ್ತಿದ್ದರೆ-ಅವರಂತೆ ನಾವೂ ಮಾಡಬಹುದು. -ಎಂದರೆ, ಅದಕ್ಕೆ ಸಮಾಧಾನವನ್ನು ಹೇಳುವರು- ಅಂಥವರಿಲ್ಲವೇಕೆ ? ಅನೇಕರಿರುವರು. ನಿಮ್ಮ ಈ ಲೋಕದ ಅಲ್ಪ ವಿಷಯಗಳ ಹಂಬಲವನ್ನು ಬಿಡುವದೇನೂ ದೊಡ್ಡ ಮಾತಲ್ಲ, ಸ್ವರ್ಗಲೋಕದ ಅತ್ಯಂತ ಆಕರ್ಷಕ, ಆನಂದದಾಯಕ ಸುಖಗಳನ್ನೂ ಬಿಟ್ಟುಕೊಟ್ಟು ಭಗವದಾರಾಧನೆಗಾಗಿ ಧಾವಿಸಿದ ಅನೇಕ ಮಹನೀಯರಿರುವರು. ಸ್ವರ್ಗ ಸುಖಗಳ ಹಂಬಲವನ್ನೇ ಬಿಡುವ ಸಮರ್ಥರಿರುವಾಗ್ಗೆ, ಅಲ್ಪ ಹಾಗೂ ಅಸಾರವಾದ ಈ ಲೌಕಿಕ ವಿಷಯಗಳ ಹಂಬಲವನ್ನು ತೊರೆಯುವದು ಯಾವ ದೊಡ್ಡ ಮಾತು! ಅಧು ಸಾಧ್ಯವಾದುದೆಂಬುದನ್ನು ಮನಗಾಣಿಸಲು, ಭಗವದಾರಾಧನೆಗಾಗಿ ಸ್ವರ್ಗ ಸುಖಗಳನ್ನು ಅದಕ್ಕೂ ಹೆಚ್ಚಿನ ಭೋಗಗಳನ್ನೂ ತ್ಯಜಿಸಿದ ಸಂಗತಿಯನ್ನು ಅಂಥ ಮಹಾಪುರುಷರ ಶಬ್ದಗಳಲ್ಲಿಯೇ ಹೇಳುವರು-

ಅರ್ಥ:- ಭಗವಂತಾ! ನಿನ್ನ ಪಾದ ಧೂಳಿಯನ್ನೇ (ನಿನ್ನನ್ನೇ) ಪೂರ್ಣವಾಗಿ ಆಶ್ರಯಿಸಿದ ನಿನ್ನ ಭಕ್ತರು ಸ್ವರ್ಗಲೋಕವನ್ನಾಗಲೀ, ಸತ್ಯಲೋಕವನ್ನಾಗಲಿ, ಏಕಛತ್ರದ ಸಾಮ್ರಾಜ್ಯವನ್ನಾಗಲಿ, ಪಾತಾಳ ಲೋಕಗಳ ಪ್ರಭುತ್ವವನ್ನಾಗಲಿ; ಯೋಗಾಭ್ಯಾಸದಿಂದ ಪ್ರಾಪ್ತವಾಗುವ (ಅಣಿಮಾ ಮುಂತಾದ) ಅನೇಕ ಸಿದ್ಧಿಗಳನ್ನಾಗಲಿ, ಇಷ್ಟೇ ಏಕೆ? ಸಂಸಾರ ಬಂಧನದಿಂದ ಬಿಡುಗಡೆ ಹೊಂದುವ ಮೋಕ್ಷವನ್ನು ಕೂಡ ಅಪೇಕ್ಷಿಸುವದಿಲ್ಲ.

ಜನನ ಮರಣಗಳಿಂದ ಬಿಡುಗಡೆಯೆ ಮೋಕ್ಷ. (ಭಗವಂತನ ಸನ್ನಿಧಿಯಲ್ಲಿರುವ) ಸಾಮೀಪ್ಯವು ಮೋಕ್ಷಕ್ಕಿಂತಲೂ ಉತ್ತಮವಾದುದು. ಭಗವಂತನ ಸ್ಪರ್ಶ -(ಆಲಿಂಗನ) ಮುಂತಾದವುಗಳಿಗೆ ಅವಕಾಶವಿರುವ ಮುಕ್ತಲೋಕವೆಂಬ ಸ್ಥಾನವು ಇವುಗಳಿಗಿಂತಲೂ ಶ್ರೇಷ್ಠವಾದುದು. ಮೋಕ್ಷದ ಹಂಬಲವನ್ನು ಬಿಡುವದೆಂದರೆ, ಮೋಕ್ಷಕ್ಕಿಂತಲೂ ಶ್ರೇಷ್ಠವಾದ ಸದ್ಗತಿಯನ್ನು ಅಪೇಕ್ಷಿಸುವದು, ಎಂಬ ಅರ್ಥವಾಗಿದೆ.-

**||೨೬|| ನಾತ್ಯಂತಿಕಂ ವಿಗಣಯಂತ್ಯಪಿ ತೇ ಪ್ರಸಾದಂ** ಸನಕಾದಿಗಳ

**ಕಿಂ ತ್ವನ್ಯದರ್ಪಿತಭಯಂ ಭ್ರುವ ಉನ್ನಯೈಸ್ತೇ ।** ಶ್ರೀಹರಿಂ

**ಯೇಽಂಗ ತ್ವದಂಘ್ರಿ ಶರಣಾ ಭವತಃ ಕಥಾಯಾಃ**

**ಕೀರ್ತನ್ಯತೀರ್ಥಯಶಸಃ ಕುಶಲಾ ರಸಜ್ಞಾಃ ॥** ೩-೧೫-೪೮

ಒಳಗೆ ಪ್ರವೇಶಿಸಲು ಪ್ರತಿಬಂಧ ಮಾಡಿದ ಜಯ ವಿಜಯರಿಗೆ ಸನಕಾದಿಗಳು ಶಾಪ ಕೊಟ್ಟನಂತರ, ಅವರು ಮಾಡಿರುವ ಶ್ರೀಹರಿಯ ಸ್ತೋತ್ರವಿದು.-

ಇಲ್ಲಿ ಒಂದು ಆಕ್ಷೇಪವನ್ನು ಮಾಡುವರು. ಸತ್ಯಲೋಕ ಮುಂತಾದ ಸ್ವರ್ಗಲೋಕಗಳು ಅಸಾರ-ಅನಿತ್ಯವಾದುದರಿಂದ, ಭಗವದ್ಭಕ್ತರು ಅವುಗಳನ್ನು ಕಡೆಗಣಿಸುವರೆಂಬುದನ್ನು ಒಪ್ಪಬಹುದು. ಆದರೆ, ಅಂತಿಮ, ಅಪ್ರತಿಮ ಪುರುಷಾರ್ಥವಾದ ಮೋಕ್ಷವನ್ನೂ ಕೂಡ ಅವರು ಏಕೆ ಅಪೇಕ್ಷಿಸುವದಿಲ್ಲ? ಈ ಆಕ್ಷೇಪಕ್ಕೆ ಉತ್ತರವನ್ನು ಹೇಳುವರು- ಭಗವದ್ಭಕ್ತರು ಅಪೇಕ್ಷಿಸುವ ಸುಖದ ಪರಮಾವಧಿಯು ಎಷ್ಟೆಂಬುದರ ಕಲ್ಪನೆಯೆ ನಿಮಗಿಲ್ಲ. ಜನನಮರಣಗಳ ಬಂಧನದಿಂದ ಬಿಡುಗಡೆ ಮಾಡುವ ಮುಕ್ತಿಯು ಆನಂದಕ್ಕಿಂತಲೂ ಅನಂತಪಟ್ಟು ಆನಂದವು ಭಗವಂತನ ಲೀಲಾಕೃತಿಗಳ ಶ್ರವಣ ಕೀರ್ತನೆಗಳಿಂದ ಅವರಿಗೆ ದೊರೆಯುವದು. ಮುಕ್ತಿಯಿಂದ ದೊರೆಯುವ ಅಂಥ ಆನಂದದ ಒಂದು ಅಂಶವೂ ಆಗಲಾರದು. ವೈರಾಗ್ಯದ ಪ್ರಕರಣದ – 'ಯಾ ನಿರ್ವೃತಿಸ್ತನು ಭೃತಾಂ-' ಎಂಬ ೧೦೧ ನೆಯ ಶ್ಲೋಕದಲ್ಲಿ ಈ ಮಾತನ್ನು ಸ್ಪಷ್ಟವಾಗಿ ಹೇಳಿರುವರು.

**ಅರ್ಥ:**– ಹೇ ಅಂಗ! (ಆತ್ಮೀಯನಾದ ಪ್ರಭುವೆ!) ಪ್ರಶಂಸನೀಯ ಹಾಗೂ ಪವಿತ್ರವಾಗಿರುವ ನಿನ್ನ ಪಾದಗಳನ್ನು ನಂಬಿದವರು ಜೀವನದಲ್ಲಿ ಸಾರಭೂತವಾದುದನ್ನೇ, ಶ್ರೇಷ್ಠ, ಶಾಶ್ವತವಾದುದನ್ನೇ) ಸ್ವೀಕರಿಸುವದರಿಂದ, ಅವರು ತುಂಬಾ ಜಾಣರು. (ಏನಂ ಅಹಂ ಮೋಕ್ಷಯಿ ಷ್ಯಾಮಿ- ಈ ಭಕ್ತನನ್ನು ನಾನು ಜನನ ಮರಣದಿಂದ ಬಿಡುಗಡೆ ಮಾಡುವೆನು' -ಎಂಬ ಭಗವಂತನ ಪರಮಾನುಗ್ರಹದಿಂದಲೆ ದೊರೆಯುವ) ಅಂಥ ಮುಕ್ತಿಯನ್ನು ಕೂಡ ಪರಮ (ಶ್ರೇಷ್ಠ) ಪುರುಷಾರ್ಥವೆಂದು ಅವರು ಭಾವಿಸುವದಿಲ್ಲ. ಈ ಬಗೆಯ ಮುಕ್ತಿಯನ್ನೇ ಗಣನೆಗೆ ತಾರದಿರುವವರಿಗೆ, (ನಿಗ್ರಹ-ಅನುಗ್ರಹ ರೂಪಗಳಾದ) ನಿನ್ನ ಹುಬ್ಬಿನ ಏರಿಕೆ ಇಳಿತಗಳಿಂದಲೆ, ಉದಯ ಹೊಂದುವ ಇಲ್ಲವೆ ಪತನವಾಗುವ ಸ್ವರ್ಗಾದಿ ಲೋಕಗಳ ಸುಖ ಭೋಗಕ್ಕೆ ಯಾವ ಬೆಲೆ ಇದೆ? (ಅವು ಕ:ಪದಾರ್ಥವಿದ್ದಂತೆ). ನಿನ್ನ ಭಕ್ತರು ಅವುಗಳಿಗಾಗಿ ನಿನಗೆ ಎಂದಿಗೂ ಪ್ರಾರ್ಥಿಸರು.

ಭಗವಂತನ ಪರಮಾನುಗ್ರಹದಿಂದ ಲಭ್ಯವಾಗುವ, ಮುಕ್ತಿಯು ನೀಡುವ ಆನಂದದ ಪರಿಮಿತಿಯನ್ನು ಹೇಳುವರು. ಭಕ್ತಿ ಜ್ಞಾನಗಳು ಇನ್ನೂ ಪರಿಪೂರ್ಣವಾಗಿ ಪರಿಪಕ್ವವಾಗಿರುವಾಗ್ಗೆ ಪಡೆದ ಮುಕ್ತಿಯಲ್ಲಿ ಭಗವಂತನ ದರ್ಶನ ಮಾತ್ರದಿಂದ ಅಲೌಕಿಕ ಆನಂದವುಂಟಾಗುವದು ನಿಜ. ಆದರೆ ಈ ಆನಂದವು ಪರಿಪೂರ್ಣವಾದುದಲ್ಲ. ನೂರಕ್ಕೆ ನೂರರಷ್ಟಲ್ಲ, 'ಕೇವಲ' ಎಂದರೆ (ಯಾವದನ್ನೂ ಅಪೇಕ್ಷಿಸದ) ನಿರಪೇಕ್ಷನಾದ ಭಕ್ತನು ಮುಕ್ತಿಯನ್ನು ಅಪೇಕ್ಷಿಸುವ ಸಾಧಕನಿಗಿಂತಲೂ ಹೆಚ್ಚು ಸುಖಿಯಾಗಿರುವನು. ಅದೇ ರೀತಿಯಲ್ಲಿ, ನಿನ್ನ ಲೀಲಾ ಕಥೆ

ಗಳ ಅಮೃತ ಸಾರವನ್ನು ತೆಗೆದುಕೊಳ್ಳಬಲ್ಲವರಾಗಿ, ಬ್ರಹ್ಮ ಸಾಕ್ಷಾತ್ಕಾರದಿಂದ ದೊರೆಯುವ ಸ್ವರೂಪಾನಂದ (ನೈಜ ಸುಖಾನುಭೂತಿ)ವನ್ನು ಅನುಭವಿಸುವ ಉತ್ತಮಾಧಿಕಾರಿಗಳು ಮುಕ್ತಿಯ ಆನಂದವನ್ನು ಗಣನೆಗೆ ತರುವದಿಲ್ಲ (ಹೆಚ್ಚಿನ ದೆಂದು ಭಾವಿಸುವದಿಲ್ಲ. ಏಕೆಂದರೆ ನಿರಪೇಕ್ಷರಾಗಿ ಭಗವತ್ಕಥಾಸಾರವನ್ನು ಗ್ರಹಿಸುವದರಿಂದ ಅವರಿಗೆ ಉಂಟಾಗುವ ಆನಂದವು ಮುಕ್ತಿಯಿಂದ ದೊರಕುವ ಆನಂದಕ್ಕಿಂತಲೂ ಅನೇಕಪಟ್ಟು ಅಧಿಕವಾಗಿದೆ.

||೨೮೦|| **ಕಾಮಂ ಭವೇಮ ವೃಜಿನೈರ್ನಿರಯೇಷು ನಷ್ಟಾ** ಸನಕಾದಿಗ
**ಶ್ಚೇತೋಽಲಿವದ್ಯದಿ ನು ತೇ ಪದಯೋ ರಮೇತ ।**
**ವಾಚಶ್ಚ ನಸ್ತುಲಸಿವದ್ಯದಿ ತೇಂಘ್ರಿಶೋಭಾ**
**ಪೂರ್ಯೇತ ತೇ ಗುಣಗಣೈರ್ಯದಿ ಕರ್ಣರಂಧ್ರಃ ॥** ೩-೧೫-೪೯

ಭಗವತ್ಕಥಾಶ್ರವಣಕೀರ್ತನೆಗಳಲ್ಲಿ ತಲ್ಲೀನರಾದ ಪರಮ ಭಾಗವತರು ಮುಕ್ತಿಯನ್ನು ಕೂಡ ಬಯಸುವದಿಲ್ಲವೆಂಬ ಸಂಗತಿಯು ಎಷ್ಟೊ ಸೋಜಿಗವಾದುದಲ್ಲ. ಭಗವಂತನ ಆರಾಧನೆಗಾಗಿ ಆತುರರಾಗಿ (ಪ್ರಸಂಗವು ಒದಗಿದರೆ) ನರಕದ ದುಃಖವನ್ನೂ ಕೂಡ ಅನುಭವಿಸಲು ಸಿದ್ಧರಿರುವ ಅನೇಕ ಸಜ್ಜನರು ಕಂಡು ಬರುವಾಗ್ಗೆ, ಇಂದ್ರಿಯಗಳಿಂದ ದೊರೆಯುವ ಕಾಮಜನ್ಯ (ವೈಷಯಿಕ) ಸುಖಗಳನ್ನು ಅವರು ದೂರೀಕರಿಸುವದು ಯಾವ ದೊಡ್ಡ ಮಾತು ? ಈ ಅಭಿಪ್ರಾಯವನ್ನೇ ಸನಕಾದಿಗಳ ಈ ಮಾತಿನಲ್ಲಿ ನಾವು ಕಾಣುವೆವು.

**ಅರ್ಥ** :- ಭ್ರಮರಗಳು ಕಮಲದಲ್ಲಿ ನಲಿಯುವಂತೆ, ನಮ್ಮ ಮನಸ್ಸು ನಿನ್ನ ಪಾದ ಕಮಲದಲ್ಲಿ ಮೈಮರೆತು ನಲಿಯುವಂತಾದರೆ, ನಿನ್ನ ಪಾದಕ್ಕೆ ಅರ್ಪಿಸಿ, ಅದನ್ನು ಅಲಂಕರಿಸಿದ ತುಲಸೀ ದಲಗಳು ಅಪೂರ್ವ ಶೋಭೆಯನ್ನು ಪಡೆಯುವಂತೆ, ನಿನ್ನ ಅನಂತ ಕಲ್ಯಾಣ ಗುಣಗಳ ಗಾನವು (ಉಚ್ಚಾರವು) ನಮ್ಮ ಕಿವಿಯನ್ನು ತುಂಬಿ ತುಳುಕುವಂತಾದರೆ, ನರಕದಲ್ಲಿಯೂ ಕೂಡ, ಪಾಪ ಕರ್ಮಗಳಿಂದ ಉಂಟಾಗುವ ಕ್ಲೇಶ ಕಷ್ಟಗಳನ್ನು ಸಹಿಸಲು ನಾವು ಸಿದ್ಧರಿರುವೆವು.

ತುಳಸೀ ಶಬ್ದದ ಈ ಕಾರವನ್ನು ಹ್ರಸ್ವವಾಗಿ, ನಪುಂಸಕಲಿಂಗದ 'ರಂಧ್ರ' ಶಬ್ದವನ್ನು ಪುಲ್ಲಿಂಗವಾಗಿ ಮಾಡಿದುದು, ಆರ್ಷ- ವೈದಿಕ ಪ್ರಯೋಗವಾಗಿದೆ.

ಪಾಪ ಕರ್ಮಗಳ ಫಲವಾದ ಕ್ಲೇಶ ಕಷ್ಟಗಳನ್ನು ಎಲ್ಲರೂ ದ್ವೇಷಿಸುತ್ತಿರಲು, ಅಂಥ ದುಃಖವನ್ನು ಬೇಡಿಕೊಳ್ಳುವದು ಹೇಗೆ ಸಮಂಜಸವಾಗುವದು ?

ಮನಸ್ಸು, ಕಿವಿ, ಮುಂತಾದ ಇಂದ್ರಿಯಗಳು ಭಗವಂತನಲ್ಲಿಯೇ ಪೂರ್ಣವಾಗಿ ಆಸಕ್ತರಾಗಬೇಕೆಂದು ಬೇಡಿಕೊಳ್ಳುವದೇಕೆ ? ಎಂಬ ಪ್ರಶ್ನೆಗೆ ಉತ್ತರವಿದು- ಭಗವಂತನ ಪರಮ (ಶ್ರೇಷ್ಠ-ನಿರಕ್ಷೇಪ) ಭಕ್ತರು ಸಂಸಾರದಲ್ಲಿ ಎಷ್ಟು ಎಷ್ಟು ಹೆಚ್ಚಾಗಿ ದುಃಖಗಳನ್ನು ಸೋಸುವರೋ; ಅಷ್ಟು ಅಷ್ಟು ಹೆಚ್ಚಾಗಿ ಮುಕ್ತಿಯ ಸ್ಥಿತಿಯಲ್ಲಿ ಸಂತೋಷವನ್ನು ಭೋಗಿಸುವರು. ಸುಖ-ಸಂತೋಷನ ಮುಕ್ತಿದೆಸೆಯಲ್ಲಿಯೆ ಭಕ್ತಿಯು ಹೆಚ್ಚಳವು. ಹುಭಕ್ತಿಯನ್ನು ಕಿಂಚಿತ್ತೂ ಬಿಟ್ಟುಕೊಡದೆ ಇಲ್ಲಿ ದುಃಖವನ್ನು ಅನುಭವಿಸಿದರೆ, (ಮುಕ್ತಿಯಲ್ಲಿ) ಆನಂದದ (ಉದ್ರೇಕ-ಉಸ್ಸಾಹ) ಆಧಿಕ್ಯವು ಉಂಟಾಗುವದು.

ಮುಚಕುಂ
ಶ್ರೀಕೃಷ್ಣ

॥೨೬೧॥ **ನ ಕಾಮಯೇಽನ್ಯಂ ತವ ಪಾದಸೇವನಾ-**
**ದಕಿಂಚನ ಪ್ರಾರ್ಥ್ಯತಮಾದ್ವರಂ ವಿಭೋ ।**
**ಆರಾಧ್ಯ ಕಸ್ತ್ವಾಮಪವರ್ಗದಂ ಹರೇ**
**ವೃಣೀತ ಆರ್ಯೋ ವರಮಾತ್ಮಬಂಧನಂ ॥** ೧೦-೫೧-೫೬
52-56

ಕಾಲಯವನನ ಸಂಹಾರದ ನಂತರ ದೀರ್ಘ ನಿದ್ರೆಯಿಂದ ಎಚ್ಚತ್ತ ಮುಚಕುಂದ ಮಹಾರಾಜನು ಶ್ರೀಕೃಷ್ಣನಿಗೆ ಮಾಡಿಕೊಂಡ ಪ್ರಾರ್ಥನೆ.

ನಿಷ್ಕಾಮ ನಿರಪೇಕ್ಷ ಭಾವನೆಯಿಂದ ಸಕಲ ಕರ್ಮಗಳನ್ನೂ ಭಗವಂತನ ಸೇವೆ ಪೂಜೆಯೆಂತಲೆ ಮಾಡಿ, ಈ ರೀತಿಯಿಂದ ಆತನಿಗೆ ಸಮರ್ಪಿಸಬೇಕು. ಎಂಬುದನ್ನು ಸಂಗ್ರಹ ರೂಪವಾಗಿ ಹೇಳಿ,-ಇದನ್ನೇ ನನ್ನಿಂದ ಮಾಡಿಸೆಂದು ಶ್ರೀಹರಿಗೆ ಯಾವಾಗಲೂ ಪ್ರಾರ್ಥಿಸಿಕೊಳ್ಳಬೇಕು, ಎಂಬುದನ್ನು ವಿಶೇಷ ರೀತಿಯಿಂದ ಇಲ್ಲಿ ಹೇಳುವರು-

ಅರ್ಥ :- ಮೋಕ್ಷವನ್ನೂ ಹಿಂದಕ್ಕಿಟ್ಟು, ಶ್ರೀಹರಿ ಸೇವೆಯನ್ನೇ ಏಕೆ ಬೇಡಿಕೊಳ್ಳುವಿರಿ? ಎಂದರೆ, ಅಕಿಂಚನ (ನಿಷ್ಕಾಮ-ನಿರಕ್ಷೇಪ)ರಾದ ಭಾಗವತರು ಮಾಡಿಕೊಳ್ಳಬೇಕಾದ ಅತಿ ಶ್ರೇಷ್ಠ ಪ್ರಾರ್ಥನೆ ಇದೊಂದೆ, ಬೇರೆ ಯಾವುದೂ ಇಲ್ಲವೇ ಇಲ್ಲ. ಭಾಗವತ ಜನರಿಗೆ. ( ಶ್ರೀಹರಿಸೇವೆಯ ) ಈ ಬೇಡಿಕೆಯು ಪರಮ ಪುರುಷಾರ್ಥವಾಗಿದೆ ಪ್ರಭುವೆ! (ಅಕಿಂಚನರು) ನಿನ್ನ ನಿಷ್ಕಾಮ ಭಕ್ತರು ಕೇಳಿಕೊಳ್ಳುವ ಅತಿ ಹೆಚ್ಚಿನ ವರವೆಂದರೆ ನಿನ್ನ ಸೇವೆಯೆ ಆಗಿದೆ. ಅದನ್ನೊಂದಲ್ಲದೆ ಬೇರೆ ಯಾವ ವರವನ್ನೂ ನಾನು ಅಪೇಕ್ಷಿಸುವದಿಲ್ಲ. ಮೋಕ್ಷದಾಯಕ

ನಾದ ನಿನ್ನನ್ನು ಆರಾಧಿಸಿ, ಯಾವ ಬುದ್ಧಿವಂತನು ಜನನ ಮರಣಗಳ ಚಕ್ರದಲ್ಲಿ ತನ್ನನ್ನು ತೊಡಗಿಸುವ ವೈಷಯಿಕ (ಇಂದ್ರಿಯ ಸುಖಗಳ) ಸುಖವನ್ನು ಅಪೇಕ್ಷಿಸುವನು ?

||೨೮೨|| ಸತ್ಯಂ ದಿಶತ್ಯರ್ಥಿತಮರ್ಥಿತೋ ನೃಣಾಂ
ನೈವಾರ್ಥಿತೋ ಯತ್ಪುನರರ್ಥಿನೋ ಮದಃ |
ಸ್ವಯಂ ವಿಧತ್ತೇ ಭಜತಾಮನಿಚ್ಛತಾ-
ಮಿಚ್ಛಾಪಿಧಾನಂ ನಿಜಪಾದಪಲ್ಲವಂ || ೫-೧೯-೨೭

ಇಲ್ಲಿ ಒಂದು ಪ್ರಶ್ನೆ:- ವಿಷಯ ಸುಖಗಳ ಬಯಕೆಯಿಂದ, ಭಗವಂತನನ್ನು ಬಿಟ್ಟು ಅನ್ಯ ದೇವತೆಗಳನ್ನು ಆರಾಧಿಸುವವರು, ಪಶು (ಮೂರ್ಖ)ಗಳಂತಿರಲಿ- ಅನ್ಯರು ಯಾರೂ ಕೊಡಲಾರದ ಮುಕ್ತಿಯನ್ನು ಕೊಡಬಲ್ಲ ಭಗವಂತನಿಗೆ, ಕಲ್ಪತರುವನ್ನು ಕ್ಷುದ್ರ ವಸ್ತುಗಳಿಗಾಗಿ ಬೇಡಿಕೊಳ್ಳುವವರಂತೆ, ವಿಷಯ ಸುಖಗಳಿಗಾಗಿ ಕೇಳಿಕೊಳ್ಳುವವರು ದುರ್ದೈವಿಗಳೇ ಆಗಿರಲಿ- ಹಾಗೂ ಭಗವಂತನ ಮಾಯಾ (ಬಂಧಕ) ಶಕ್ತಿಯಿಂದ ಮೂಢರಂತೆ ನಡೆದುಕೊಳ್ಳಲಿ. ಆದರಿಂದ ಯಾವ ಹಾನಿಯೂ ನಮಗೆ ತಟ್ಟುವದಿಲ್ಲ. ಈ ವಿಷಯದಲ್ಲಿ ವ್ಯವಹಾರದಲ್ಲಿ ಪ್ರತ್ಯಕ್ಷ ನಡೆಸುವ ಸ್ಥಿತಿಯನ್ನೇ ನಿಮಗೆ ನಾವು ಕೇಳುವೆವು. ಅದೆಂದರೆ, ವಿಷಯ ಸುಖಗಳ ಬಯಕೆಯಿಂದ ತನ್ನನ್ನು ಆರಾಧಿಸುವ ಜನರಿಗೆ, ಸ್ವರ್ಗದಲ್ಲಿರುವ ಸುಖಗಳನ್ನು ಭಗವಂತನು ಕೊಡುವನೆ? ಅಥವಾ ಕೊಡುವದಿಲ್ಲನೆ? ಕೊಡುತ್ತಿದ್ದರೆ, ವಿಷಯ ಸುಖಗಳ ಬಯಕೆಯಿಂದ ಭಗವಂತನನ್ನು (ಮೊದಲು) ಆರಾಧಿಸಿ ವಿಷಯಗಳನ್ನು ಪಡೆದು ಅನುಭವಿಸಿ, ಕೊನೆಯಲ್ಲಿ ನಿಷ್ಕಾಮ ಬುದ್ಧಿಯಿಂದ ಆತನನ್ನು ಆರಾಧಿಸಿ ಮುಕ್ತಿಯನ್ನೂ ಪಡೆಯಬಹುದಲ್ಲವೆ ? ವಿಷಯ ಸುಖಗಳನ್ನು ಬಯಸುವದು, ಆದಕ್ಕೆ ದೊರೆಯುವ ಫಲವನ್ನು ನೋಡಿದರೆ, ನಿಂದ್ಯವೆಂದು ಹೀಯಾಳಿಸುವದನ್ನು ಸಹಿಸಬಹುವದು. ಅನಂತರ, ನಿರಪೇಕ್ಷ ನಿಷ್ಕಾಮ ಬುದ್ಧಿಯಿಂದ ಭಗವಂತನನ್ನು ಆರಾಧಿಸುವ ಕಾಲದಲ್ಲಿ ದುರ್ದೈವಿಗಳೆಂಬ ನಿಂದ್ಯವಾದ ಅಂಶವು ತಾನಾಗಿಯೆ ತೊಲಗಿ ಹೋಗುವದು. -ಇನ್ನು ಭಗವಂತನು ವಿಷಯ ಸುಖಗಳನ್ನು ಎಂದಿಗೂ ಕೊಡುವದಿಲ್ಲವೆಂಬ ಎರಡನೆಯ ಪಕ್ಷವನ್ನು ವಿಚಾರಿಸೋಣ. ವಿಷಯ ಸುಖಗಳಿಗಾಗಿ ಅನ್ಯ ದೇವತೆಗಳನ್ನು ಆರಾಧಿಸಿ ಪಡೆದುಕೊಳ್ಳುವವರು. ಪಶುಗಳು, ಅತೀವ ಮೂಢರು, ಎಂದು ಹೇಗೆ ಹೇಳುವಿರಿ? -ಭಗವಂತನು ವಿಷಯ ಸುಖಗಳನ್ನೆಂದಿಗೂ ಕೊಡುವದಿಲ್ಲವೆಂದೇ ಅವುಗಳಿಗಾಗಿ ಅನ್ಯ ದೇವತೆಗಳನ್ನು ಅವರು ಆರಾಧಿಸಿದರೆ ತಪ್ಪೇನು ? -ಹಾಗೆ ನೋಡಿದರೆ, ಭಗವಂತನ

ಆರಾಧಕರಿಗಿಂತಲೂ ಅನ್ಯದೇವತೆಗಳ ಆರಾಧಕರೇ ಹೆಚ್ಚು ಉತ್ತಮರು ಏಕೆಂದರೆ, ತಾವು ಬಯಸುವ ವಿಷಯ ಭೋಗಗಳನ್ನಾದರೂ ನಿಶ್ಚಯವಾಗಿ ಅವರು ಪಡೆಯುವರು. ಭಗವಂತನ ಆರಾಧಕರು ಮಳೆಯ ನೀರನ್ನು ಬಿಟ್ಟು ಮಂಜಿನ ನೀರಿಗೆ ಕೈ ಒಡ್ಡುವಂತೆ, ವಿಷಯ ಸುಖ ಹಾಗೂ ಮೋಕ್ಷ ಪ್ರಾಪ್ತಿ, ಇವೆರಡನ್ನೂ ಕಳೆದುಕೊಳ್ಳುವರು. ಅಂಥವರು ಉಭಯ ಭ್ರಷ್ಟರು. ಅದೂ ಇಲ್ಲ. ಇದೂ ಇಲ್ಲ ವೆಂಬ ದುರ್ದೆಶೆಗೆ ಒಳಗಾದವರು. ಏಕೆಂದರೆ, ತನ್ನನ್ನೇ ನೆಚ್ಚಿ ಆರಾಧಿಸಿದವರಿಗೆ, ಕ್ಷುದ್ರ ವಿಷಯಗಳನ್ನು ಕೊಡ ಕೊಡಲಾರದವನು, ಪರಮ ಪುರುಷಾರ್ಥ ರೂಪವಾದ ಮುಕ್ತಿಯನ್ನು; ಯಾವುದನ್ನೂ ಅಪೇಕ್ಷಿಸದ -(ನಿರಪೇಕ್ಷಿಗಳಾದ)- ತನ್ನ ಭಕ್ತರಿಗೆ ಹೇಗೆ ಕೊಡುವನು ? -ಈ ಬಗ್ಗೆ ಒಂದು ನಾಣ್ಣುಡಿ ಇದೆ;- ಮನೆತನಕ ಬಂದು ಬೇಡಿದರೆ, ಮಜ್ಜಿಗೆಯನ್ನೂ ಕೊಡದವನು, ಅಂಥವನು ತಾನಾಗಿಯೇ ಕರೆದು ಹಾಲನ್ನು ಹೇಗೆ ಕೊಡುವನು? ' - ಎಲ್ಲೆಡೆಯಲ್ಲಿಯೂ ನಡೆಯುತ್ತಿರುವ ಈ ಬಗೆಯ ವಸ್ತು ಸ್ಥಿತಿಯ ಬಗ್ಗೆ ಪ್ರಶ್ನೆ ಕೇಳುವವರಿಗೆ ಉತ್ತರವನ್ನು ಹೇಳುವರು,

**ಅರ್ಥ** :- ತನ್ನನ್ನು ಆರಾಧಿಸಿ ವಿಷಯ ಸುಖಗಳನ್ನು ಬೇಡುವವರಿಗೆ, ಭಗವಂತನು ಅವುಗಳನ್ನು ಕೊಡುವದಿಲ್ಲವೆಂಬ ಸಂಗತಿಯೂ ಆರಾಧಿಸುವವರಿಗೆ ಅವುಗಳನ್ನು ಕೊಡುವನೆಂಬ ಸಂಗತಿಯು, -ಇವೆರಡೂ ಅಷ್ಟೇ ಸತ್ಯವಾದ ಸಂಗತಿಗಳಾಗಿವೆ (ಬೇರೆಬೇರೆ ದೃಷ್ಟಿಯಿಂದ) -ಕೊಡುವದಿಲ್ಲವೆಂಬುದಕ್ಕೆ, ವಿಷಯ ಸುಖಗಳನ್ನು ಕೊಡಲು ಆತನು ಅಸಮರ್ಥನು, -ಎಂಬ ಅರ್ಥವಲ್ಲ. ಭಗವಂತನ ಬಯಸಿದ್ದನ್ನು ಕೊಡುವ 'ವರದೇಶ್ವರನು':- ಇದಲ್ಲದೆ, ವಿಷಯ ಸುಖಗಳನ್ನು ಬೇಡುವ ತನ್ನ ಆರಾಧಕರ ಬಗ್ಗೆ ಭಗವಂತನಲ್ಲಿ ತಿರಸ್ಕಾರದ ಭಾವನೆಯೂ ಇರುವದಿಲ್ಲ. ಆದಕ್ಕೆ ಪ್ರತಿಯಾಗಿ ಅಂಥವರ ಬಗ್ಗೆ ಭಗವಂತನಿಗೆ ಹೆಚ್ಚು ಕರುಣೆ. ಅವರಿಗೆ ವಿಷಯ ಸುಖಗಳನ್ನು ಕೊಡದಿರಲು ಅವರ ಮೇಲಿನ ಭಗವಂತನ ಕರುಣೆಯೆ ಮೂಲ: ಕೇಳಿದ್ದನ್ನು (ವಿಷಯ ಭೋಗಗಳನ್ನು) ಕೊಡುವದರಿಂದ ಅವರು ಮದೋನ್ಮತ್ತರಾಗಬಾರದೆಂಬುದೇ ಕೊಡದಿರಲು ಭಗವಂತನ ಉದ್ದೇಶ- ಇನ್ನು, ಯಾವುದನ್ನೂ ಬಯಸದ ನಿರಪೇಕ್ಷರಾದ ತನ್ನ ನಿಷ್ಕಾಮ ಭಕ್ತರಿಗೆ, ಅವರು ಪ್ರಾರ್ಥಿಸಿಕೊಳ್ಳದಿದ್ದರೂ, ತನ್ನ ಪಾದ ಕಮಲದಲ್ಲಿ ಸ್ಥಾನವನ್ನು, ಪರಮ ಪುರುಷಾರ್ಥ-ರೂಪವಾದ ಮೋಕ್ಷವನ್ನು ಕೊಡುತ್ತಾನೆ. ಸಕಲ ಬಯಕೆಗಳನ್ನೂ ಒದಗಿಸುವ ತನ್ನ ಪಾದಗಳಲ್ಲಿ ಅವರಿಗೆ ಆಶ್ರಯಕೊಡುತ್ತಾನೆ.

ಮಥಿತಾರ್ಥವೆಂದರೆ, ವಿಷಯ ಸುಖಗಳನ್ನು ತನ್ನ ಆರಾಧಕರಿಗೆ ಭಗವಂತನು ಕೊಡುವನೇ? ಇಲ್ಲವೆ? ಎಂಬ ಪ್ರಶ್ನೆಗೆ, ಖಂಡಿತವಾಗಿ ಕೊಡುವನು.

ಎಂದೇ ಉತ್ತರವು –ಹೀಗೆ ಹೇಳುವದು ಒಳ್ಳೇ ಸಾಹಸದ (ದಿಟ್ಟತನದ) ಮಾತೆಂಬುದು ನಿಜ. ಕೊಡುವನು, ಎಂದು ಹೇಳುವಲ್ಲಿ ಒಂದು ಹೆಚ್ಚಿನ ಅರ್ಥ ವಿದೆ. ಉದ್ದೇಶವಿದೆ. ಅದೆಂದರೆ, ಭಗವಂತನ ನಿರಪೇಕ್ಷ ಆರಾಧನೆಯಿಂದ, ಪಡೆ ಯುವ ಮೋಕ್ಷದ ಜೊತೆಯಲ್ಲಿಯೇ, ಅವರು ಅಪೇಕ್ಷಿಸಬಹುದಾದ ಐಹಿಕ ಸುಖ ಸಾಮಗ್ರಿಗಳೂ ಅಂಥ ಭಕ್ತರಿಗೆ ಕೇಳದೆಯೆ ದೊರೆಯುವವು. ನಿರಪೇಕ್ಷ ಆರಾಧನೆಯೆಂಬ ಒಂದೇ ಕ್ರಿಯೆಯಿಂದಲೆ, ಎರಡೂ ಲಾಭಗಳು ದೊರೆಯುವವು. ಆದುದರಿಂದ, ಭಗವಂತನ ಆರಾಧನೆಯೆಂಬ ಒಂದೇ ಕ್ರಿಯೆ ಭಾಗವತ ಜನರ ನಿಂದೆಗೆ ಗುರಿಯಾಗಿ, ಅದನ್ನು ಸಹಿಸಿಕೊಂಡು, ಕ್ಷುದ್ರ ವಿಷಯ ಸುಖಗಳಿಗಾಗಿ ಭಗವಂತನನ್ನು ಆರಾಧಿಸುವ ಅಗತ್ಯವೇ ಆತನ ಏಕಾಂತ ಭಕ್ತರಿಗೆ ಎಂದಿಗೂ ಉಂಟಾಗುವದಿಲ್ಲ. 'ಏಕಾಕ್ರಿಯಾ ದ್ವ್ಯರ್ಥಕರೀ', –ಒಂದೇ ಕೃತಿಯಿಂದ ಎರಡು ಪ್ರಯೋಜನಗಳನ್ನು ಪಡೆಯುವದು; –'ಧರ್ಮಾರ್ಥ ಕಾಮಮೋಕ್ಷ.... ಪಾದಸೇವನಮ್' ತನ್ನ ಶ್ರೇಯಸ್ಸನ್ನು (ನಿಜವಾದ ಕಲ್ಯಾಣವನ್ನು) ಬಯಸುವ ಸಾಧಕನು ಧರ್ಮ, ಅರ್ಥ, ಕಾಮ-ಮೋಕ್ಷಗಳ ಪ್ರಾಪ್ತಿಗಾಗಿ, ಪರಮಾತ್ಮನ ಪಾದದ ಆರಾಧನೆಯನ್ನು ಮಾಡುವದೊಂದೇ ಸಾಧನವಾಗಿದೆ. –ಈ ವಿಷಯದಲ್ಲಿ ಒಂದು ಸಂದೇಹವು ಬರಬಹುದು, ಮುಕ್ತಿಗೆ ಆತಂಕವಾದುದು, ಬಹಳ ದುಃಖಕ್ಕೆ ಕಾರಣ ವಾದುದು ಆಗಿರುವ ಐಹಿಕ ಸುಖ ಸಾಮಗ್ರಿಯನ್ನು ತನ್ನ ಆರಾಧಕರಾದ ಭಕ್ತ ರಿಗೆ ಭಗವಂತನು ಹೇಗೆ, ಏಕೆ ಕೊಡುವನು ? –ಈ ಸಂದೇಹಕ್ಕೆ ಉತ್ತರವನ್ನು ಹೇಳುವರು. –ತನ್ನ ಭಕ್ತರ ಚಿತ್ತ ಶುದ್ಧಿಯ ಮಟ್ಟವನ್ನು, ಇಂದ್ರಿಯ ನಿಗ್ರಹದ ದಾರ್ಢ್ಯವನ್ನು ಚನ್ನಾಗಿ ಅರಿತುಕೊಂಡು, ವಿಷಯ ಸುಖಗಳು ಅವರಿಗೆ ಮುಕ್ತಿಗೆ ಆತಂಕವಾಗದಂತೆ, ಬಹಳ ದುಃಖಕ್ಕೆ ಕಾರಣವಾಗದಂತೆ ನಿಶ್ಚಯ ಮಾಡಿ ಕೊಂಡೇ ಕರುಣಾಳು ಭಗವಂತನು (ಅವರ ಮೇಲಿನ ಕರುಣೆಯಿಂದಲೆ) ಅವರಿಗೆ ಐಹಿಕ ಸುಖ ಸಂಪತ್ತನ್ನು ಕೊಡುವನು. –ಭಕ್ತರಲ್ಲಿ ಅಗತ್ಯವಾದ ಮನಃ ಶುದ್ಧಿ ಇರದಿದ್ದರೆ, ಅವರಿಗೆ ಅದನ್ನು ಎಂದಿಗೂ ಕೊಡುವದಿಲ್ಲ. ಏಕೆಂದರೆ, ಸಂಪತ್ತಿನ ಮದದಿಂದ ತನ್ನ ಭಕ್ತರು ತನ್ನನ್ನು, ತನ್ನ ಭಕ್ತರನ್ನೂ ತಿರಸ್ಕರಿಸುವದರಿಂದ, ಅವರಿಗೆ ಅಪಾರ ದುಃಖವೂ, ಮುಕ್ತಿ ಪಡೆಯಲು ಆತಂಕವೂ ಉಂಟಾಗಬಾರ ದೆಂಬುದೇ ಭಗವಂತನ ಉದ್ದೇಶ. ವಿಷಯ ಸುಖವನ್ನು ಬಯಸಿ ತನ್ನನ್ನು ಆರಾಧಿಸಿದರೂ, ಬೇಡಿಕೊಂಡರೂ, ಐಹಿಕ ಸಂಪತ್ತನ್ನು ಅವರಿಗೆ ಎಂದಿಗೂ ಕೊಡುವದಿಲ್ಲ. ಐಹಿಕ ಸಂಪತ್ತನ್ನು ತಾವು ಪಡೆಯಲು ಯೋಗ್ಯ ಕಾಲವು ತಮಗೆ ಇನ್ನೂ ಒದಗಿಲ್ಲವೆಂಬುದನ್ನು ತಿಳಿಯದ್ದರಿಂದ ಅವರು ಅಜ್ಞಾನದಿಂದ ಅದನ್ನು ಬಯಸಿ ಬೇಡಿಕೊಳ್ಳುತ್ತಾರೆ. ಆ ಕಾಲಕ್ಕೆ ಅದನ್ನು ಕೊಡದಿದ್ದರೆ, ಅವರ ಮನ

ಸ್ಸಿಗೆ ಖೇದವಾಗುವದು. ಕೊಟ್ಟರೆ (ಅದರ ಮದದಿಂದ) ಅವರು ಹೆಚ್ಚಿನ ದುಃಖ ಗಳನ್ನು ಅನುಭವಿಸಬೇಕಾಗುವದು. ಅವರ ದುಃಖಕ್ಕಾಗಿ ಕನಿಕರ ಪಟ್ಟು, ಅವ ರಿಗೆ ಕೊಟ್ಟಿದ್ದ ಸಂಪತ್ತನ್ನು ತಾನೇ ತಿರುಗಿ ಕಸಿದುಕೊಳ್ಳಲೇಬೇಕಾಗುವದು. ಆದುದರಿಂದ ನಿರಪೇಕ್ಷರಾಗಿ, ನಿಷ್ಕಾಮ ಭಾವನೆಯಿಂದ ತನ್ನನ್ನು ಆರಾಧಿಸುವ ನಿಜಭಕ್ತರಿಗೆ, ಅವರು ಯಾವುವನ್ನು ಬೇಡದಿದ್ದರೂ, ಯೋಗ್ಯ ಸಮಯದಲ್ಲಿ ಐಹಿಕ ಸುಖಸಂಪತ್ತು ಹಾಗು ಅಂತಿಮ ಪುರುಷಾರ್ಥವಾದ ಮೋಕ್ಷ, ಇನೆರಡನ್ನೂ ಕೊಡುವೆನೆಂಬುದು ಭಗವಂತನ ಸಂಕಲ್ಪವಾಗಿದೆ. ತನ್ನ ಸಂಕಲ್ಪಕ್ಕೆ ಅನುಗುಣವಾಗಿ ಯೋಗ್ಯಕಾಲಕ್ಕೆ ಇವೆರಡನ್ನೂ ತಾನಾಗಿ ಕೊಡುತ್ತಿರಲು. ಐಹಿಕ ಸುಖಕ್ಕಾಗಿ ಭಗ ವಂತನನ್ನು ಆರಾಧಿಸುವವರು ಹಟಮಾರಿ ಹುಡುಗರಂತೆ -ಬೇನೆಯಿಂದ ಬಳಲುವ ತನ್ನ ಮಗುವಿನ ಯಾವ ಕಾಲಕ್ಕೆ ಯಾವುದು ಪಥ್ಯಕರ ಆಹಾರ ಎಂಬುದನ್ನು ಸರಿ ಯಾಗಿ ಯೋಚಿಸಿ ತಾಯಿಯು ತಾನಾಗಿಯೆ ಅದನ್ನು ಕೊಡುವಳು. ಹೀಗಿದ್ದರೂ ಅಜ್ಞಾನಿಗಳಾದ ಮಕ್ಕಳು 'ನನಗೆ ಅದೇ ಬೇಕು', ಎಂದು ಹಟ ಮಾಡುವಂತೆ, ವಿಷಯ ಸುಖಗಳಿಗಾಗಿ ಭಗವಂತನಿಗೆ ಕೇಳುವದು ಮಕ್ಕಳ ಹಟಮಾರಿತನದಂ ತೆಯೆ ಆಗುವದು. ಈ ರೀತಿಯಲ್ಲಿ ವಿಷಯ ಭೋಗವು ಕ್ಷುದ್ರವಾದುದು ಬಹಳೇ ದುಃಖಕ್ಕೆ ಗುರಿ ಮಾಡುವಂಥಹದು. ಭಗವದ್ಭಕ್ತರು ಅವುಗಳನ್ನು ಬಯಸುವ ದನ್ನು ಭಾಗವತೋತ್ತಮರು ನಿಂದಿಸಿರುವರು. ಆದುದರಿಂದ ವಿಷಯ ಸುಖದ ಬಯಕೆಯನ್ನು ಬಿಟ್ಟುಕೊಡಬೇಕು. ನಿಷ್ಕಾಮತ್ವಕ್ಕೇನೆ ಇನ್ನೊಂದು ಹೆಸರಾಗಿ ರುವ 'ಶೌಚ' (ವಿಶುದ್ಧಿ) ಯೆಂಬ ಭಾಗವತ ಧರ್ಮವೇ ಶಾಶ್ವತ ಪುರುಷಾರ್ಥ ರೂಪವಾದ ಮುಕ್ತಿಗೆ ಸಾಧನವೆಂದು ಪ್ರಮಾಣಗಳಿಂದ ಚನ್ನಾಗಿ ನಿಶ್ಚಿತವಾಗಿದೆ ಆದುದರಿಂದ ಮುಕ್ತಿಯನ್ನು ಅಪೇಕ್ಷಿಸುವವರು ಈ ಭಾಗವತ ಧರ್ಮವನ್ನು ಪಡೆಯಬೇಕೆಂಬುದು ಸಿದ್ಧವಾಯಿತು.

||೨೮೩|| ವಿಶ್ವಸ್ಯ ಯಃ ಸ್ಥಿತಿಲಯೋದ್ಭವಹೇತುರಾದ್ಯೋ — ಬ್ರಹ್ಮ
ಯೋಗೇಶ್ವರೈರಪಿ ದುರತ್ಯಯಯೋಗಮಾರ್ಗಃ |
ಕ್ಷೇಮಂ ವಿಧಾಸ್ಯತಿ ಸನೋ ಭಗವಾಂಸ್ತ್ರ್ಯಧೀಶ
ಸ್ತತ್ರಾಸ್ಮದೀಯ ವಿಮೃಶೇನ ಕಿಯಾನಿಹಾರ್ಥಃ || ೩-೧೬-೩೭
-16-

ಭಗವಂತನ ಅನಿಮಿತ್ತ ಬಂಧುತ್ವವನ್ನು ಅಪಾರ ಕರುಣೆಯನ್ನು ಬ್ರಹ್ಮ ದೇವರು ವರ್ಣಿಸುತ್ತಾರೆ.

ಅನ್ಯರು ಮಾಡಿದ ಉಪಕಾರವನ್ನು ಸ್ಮರಿಸುವವನು, ಲೋಕದಲ್ಲಿ ಕೃತಜ್ಞ ನೆನಿಸುವನು. ತನಗೆ ಉಪಕಾರ ಮಾಡಿದವನ ಪ್ರೀತಿಯನ್ನು ಕೃತಜ್ಞನಾದವನ

ಅಧಿಕವಾಗಿ ಪಡೆಯುವನು. ಅನ್ಯರು ಮಾಡುವ ಉಪಕಾರವನ್ನು ಸ್ಮರಿಸದವನು ಕೃತಘ್ನನು. ಅಂಥವನು ತನಗೆ ಉಪಕಾರ ಮಾಡಿದವರ ಪ್ರೀತಿಯನ್ನೂ ಪಡೆಯುಲಾರನು. ಪ್ರಪಂಚದಲ್ಲಿ ಎಲ್ಲರಿಗೂ ಇದು ಅನುಭವದ ಮಾತು. ಹೀಗಿರಲು, ಭಗವಂತನಂತೂ ಅನಿಮಿತ್ತ ಬಂಧು; ಯಾವ ಆಶೆ ಅಪೇಕ್ಷೆಗಳಿಲ್ಲದೆ, ಎಲ್ಲರಿಗೂ ಹಿತವಾದುದನ್ನು ಮಾಡುವವನು. ಆತನು ನಮಗೆ ಮಾಡುವ ಅನಂತ ಉಪಕಾರವನ್ನು ತುಂಬಾ ಆಸ್ಥೆ-ಆದರಗಳಿಂದ ಯಾವಾಗಲೂ ಮಾಡಬೇಕು. ಹೀಗೆ ಭಗವಂತನ ಉಪಕಾರವನ್ನು ಸರ್ವದಾ ಸ್ಮರಿಸಿದರೆ ಮಾತ್ರ ಆತನ ವಿಶೇಷಾನುಗ್ರಹವು ನಮಗೆ ದೊರೆಯುವದು. ಅತ್ಯಂತ ಉಪಕಾರವನ್ನು ಮಾಡುವ ಗುಣಕ್ಕೇನೆ 'ಸಖ್ಯ'ವೆಂಬುದು ಇನ್ನೊಂದು ಹೆಸರು. ಈ ಗುಣವನ್ನು ಯಾವಾಗಲೂ ಮನಸ್ಸಿನಲ್ಲಿ ನಾವು ತಂದುಕೊಳ್ಳಬೇಕು. – ಅನುಸಂಧಾನಮಾಡಿಕೊಳ್ಳಬೇಕು. ಇದೂ ಒಂದು ಭಾಗವತಧರ್ಮ. ಭಗವಂತನು ಅತ್ಯಂತ ಉಪಕಾರಕರ್ತನು ಹೇಗೆಂಬುದನ್ನು ತೋರಿಸುವದೇ ಇಲ್ಲಿ ಅಭಿಪ್ರಾಯವಾಗಿದೆ.

**ಅರ್ಥ:**– ಭಗವಂತನು (ಪುರಾಣ ಪುರುಷನು) ವಿಶ್ವದ ಉತ್ಪತ್ತಿಗಿಂತಲೂ ಆದ್ಯನು; ವಿಶ್ವದ ಉತ್ಪತ್ತಿ, ಸ್ಥಿತಿ, ಲಯಗಳ ಕರ್ತಾರನು –ಮಾಡುವವನೂ ಭಗವಂತನೇ. ತಮ್ಮ ಯೋಗ ಸಾಧನೆಯ ಪ್ರಭಾವದಿಂದ ಬಹುಕಾಲದ ಆಯುಷ್ಯ ಮುಂತಾದ ಶಕ್ತಿಗಳನ್ನು ಪಡೆದ ಮಹಾನ್ ಯೋಗಿಗಳೂ ಕೂಡ. (ಸ್ವರೂಪ ಭೂತವಾದ) ಆತನ ಯೋಗ ಶಕ್ತಿಯನ್ನು (ಅಚಿಂತ್ಯ ಮಾಯೆಯನ್ನು) ತಿಳಿಯಲಾರರು. (ಅಚಿಂತ್ಯ ಅದ್ಭುತ ಶಕ್ತಿಯುಳ್ಳ) ಭಗವಂತನು, ವಿಶ್ವದ ಉತ್ಪತ್ತಿ-ಸ್ಥಿತಿ-ಲಯ (ಹುಟ್ಟು-ರಕ್ಷಣೆ-ನಾಶ)ಗಳಿಗೆ ಒಡೆಯ (ನಿಯಾಮಕ ಕರ್ತೃ)ನಾದವನು ನಮಗೆಲ್ಲರಿಗೂ ರಕ್ಷಕನಾದವನು ನಮ್ಮ ಕಲ್ಯಾಣಕ್ಕಾಗಿಯೇ, ನಾವು ಕೇಳಿಕೊಳ್ಳದಿದ್ದರೂ ಕೂಡ, ಭಗವಂತನು ವಿಶ್ವದ ಉತ್ಪತ್ತಿ, ರಕ್ಷಣೆ, ನಾಶಗಳನ್ನು ನಿರಪೇಕ್ಷನಾಗಿ ಮಾಡುವನು. ಅದೇ ರೀತಿಯಲ್ಲಿಯೆ ಅನಿಮಿತ್ತ ಬಂಧುವಾದ ಇಂಥ ಭಗವಂತನು ನಮ್ಮ ಯೋಗ ಕ್ಷೇಮವನ್ನು ನೋಡಿಕೊಳ್ಳುವನು. ರಕ್ಷಣೆಯನ್ನು ಆದ್ಯಂತವಾಗಿ ಮಾಡುವನು.

ಯೋಗ ಬಲದಿಂದ ಚಿರಾಯುಗಳಾದವರು, ಮರಣವನ್ನು ಬಯಸುವದಿಲ್ಲ. ಅವರ ಆಯುಷ್ಯಕ್ಕೂ ಭಗವಂತನು ಅಳಿವನ್ನು ತಂದುಕೊಡುವನು. ನಿರಪೇಕ್ಷರಾಗಿ ತಾವು ಬಯಸದಿದ್ದರೂ ಭಗವಂತನ ಅನುಗ್ರಹ ಪಡೆದವರಿಗೆ ಯತ್ನವಿಲ್ಲದೆ ದೊರೆಯುವ ಐಹಿಕ ಸುಖ ಸಂಪತ್ತುಗಳಿಗಾಗಿ ಭಗವದ್ಭಕ್ತರು ಅಂಗಲಾಚುವದು ಅನುಚಿತವಾಗಿದೆ. ಭಗವಂತನೊಬ್ಬನೆ ಕಲ್ಯಾಣ ಮಾಡುವವನು, ಎಂಬುದು ಹೇಗೆ ? ಉಳಿದವರೇಕೆ ಮಾಡಲಾರರು? ಎಂದು ಕೇಳುವವನಿಗೆ, ಭಗವಂತನು

'ತ್ರ್ಯಧೀಶ' ನಾಗಿರುವದು, – ವಿಶ್ವದ ಹುಟ್ಟು, ಜೋಪಾಸನೆ, ನಾಶ, ಈ ಮೂರೂ ಕಾರ್ಯಗಳು ಭಗವಂತನ ಆಧೀನವಾಗಿವೆ, –ಎಂಬುದೇ ಉತ್ತರವಾಗಿದೆ. ಆತನೊಬ್ಬನೇ ಅವುಗಳಿಗೆ ಸ್ವತಂತ್ರಕಾರಣನು.

**||೨೪|| ನ ಯಸ್ಯ ಸಖ್ಯಂ ಪುರುಷೋಽವೈತಿ ಸಖ್ಯುಃ**
**ಸಖಾ ವಸನ್ಸಂವಸತಃ ಪುರೇಽಸ್ಮಿನ್ |**
**ಗುಣೋ ಯಥಾ ಗುಣಿನೋಽವ್ಯಕ್ತದೃಷ್ಟೇ-**
**ಸ್ತಸ್ಮೈ ಮಹೇಶಾಯ ನಮಸ್ಕರೋಮಿ || ೬-೪-೨೪**

ದಕ್ಷ ಪ್ರಜಾಪತಿಯು ಪರಮಾತ್ಮನಿಗೆ ಮಾಡಿದ ಪ್ರಾರ್ಥನೆ:–

ನಿಜವಾದ ಶ್ರೇಯಸ್ಸು – ಪರಮಪುರುಷಾರ್ಥವು · ಯಾವುದೆಂಬುದನ್ನು ಯಥಾರ್ಥವಾಗಿ ತಿಳಿದುಕೊಳ್ಳಲು ಜೀವನಿಗೆ ಜ್ಞಾನ, ವಿವೇಕ ಮುಂತಾದವುಗಳನ್ನು, ಅದರ ಪ್ರಾಪ್ತಿಗಾಗಿ ಸಾಧನೆ ಮಾಡಿಕೊಳ್ಳಲು, ದೇಹೇಂದ್ರಿಯಾದಿಗಳನ್ನು ಪರಮಾತ್ಮನು ಕೊಟ್ಟಿರುವನು. ಸಾಧನೆಯ ಮಾರ್ಗದಲ್ಲಿ ಕಾಲಕಾಲಕ್ಕೆ ಒದಗುವ ಆತಂಕಗಳನ್ನು ನಿವಾರಿಸುವನು. ತನ್ನ ಸಂಕಲ್ಪಾನುಸಾರವಾಗಿ ಆತನು ಮಾಡಿಕೊಂಡಿರುವ ಅಪೇಕ್ಷೆಯನ್ನು ಪೂರೈಸುವನು. –ಈ ರೀತಿಯಾಗಿ ಸರ್ವಪ್ರಕಾರಗಳಲ್ಲಿಯೂ ಶ್ರೀಹರಿಯು ಜೀವನಿಗೆ ಮಾಡುವ ಮಹದುಪಕಾರವನ್ನು (ಹಿತಕಾರ್ಯವನ್ನು) ಇದುವರೆಗೆ ಹೇಳಿಕೊಟ್ಟಿರುವದು. -ಈಗ್ಗೆ, ನಿರ್ನಿಮಿತ್ತವಾಗಿ ನಮಗೆ ಇಷ್ಟೊಂದು ಮಾಡಿದ ಉಪಕಾರವನ್ನು ಮಾನವನು ಯಾವಾಗಲೂ ನೆನಪಿಗೆ ತಂದುಕೊಳ್ಳಬೇಕು, ಎಂಬುದನ್ನು ಸೂಚಿಸಲು, ಹಾಗೂ ಅದನ್ನು ಮಾಡಬೇಕೆನ್ನುವದರಲ್ಲಿ ಆಸ್ಥೆ–ಆದರಗಳನ್ನು ಉಂಟು ಮಾಡುವದೇ ಉದ್ದೇಶ. ಹೀಗೆ ಮಾಡದವನು (ಪರಮಾತ್ಮನ ಅನಂತ ಉಪಕಾರವನ್ನು ಸ್ಮರಿಸದವನು)ದುರ್ದೈವಿ, ಕೃತಘ್ನ, ಆತನು ಭಗವಂತನ ಮಾಯಾ (ಬಂಧಕ) ಶಕ್ತಿಗೆ ಒಳಗಾಗಿ ತಿಳಿಗೇಡಿಯಾದವನು, –ಎಂಬುದನ್ನು ಇಲ್ಲಿ ಸ್ಪಷ್ಟಗೊಳಿಸುವರು.

**ಅರ್ಥ:–** ಈ (ಕೃತಘ್ನನೂ ಹತಭಾಗ್ಯನೂ ಆದ) ಮಾನವನು, ತನ್ನ ದೇಹದಲ್ಲಿಯೇ ಭಗವಂತನು ನೆಲೆಸಿರುವನು, ನಿರಂತರವಾಗಿ ಜೊತೆಗಾರನಾಗಿ (ನಿರ್ನಿಮಿತ್ತ ಸಹಾಯಕನಾದ ಗೆಳೆಯನಾಗಿ) ತನ್ನೊಡನೆ (ಇದೇ ದೇಹದಲ್ಲಿ) ವಾಸಿಸುವದನ್ನು ತಿಳಿಯಲಾರನು. ಏಕೆಂದರೆ, ಆವನ ದೃಷ್ಟಿಯು (ತಿಳಿದುಕೊಳ್ಳುವ ಬುದ್ಧಿಯು) ಮಲಿನ (ಅವ್ಯಕ್ತ)ವಾಗಿರುದದು. ಈ ಮಾತಿಗೆ ಉದಾಹರಣೆ ಹೇಳುವರು. 'ಗುಣಃ' ಅಂದರೆ ಅಪ್ರಧಾನ (ಆಧೀನನಾಗಿರುವ) ಸೇವಕನು, 'ಗುಣಿನಃ'

ಅಂದರೆ ತನಗೆ ಪ್ರಭುವಾದ ಸ್ವಾಮಿಯ ಸಖ್ಯವನ್ನು (ಆತನು ಮಾಡಿರುವ ಅನಂತ ಉಪಕಾರಗಳನ್ನು ಸ್ಮರಿಸದಿರುವದು. ಅದರಂತೆಯೆ ಅಧೀನನಾದ ಜೀವನು ತನ್ನ ಸ್ವಾಮಿಯ ಅಗಣಿತ ಉಪಕಾರವನ್ನು ಸ್ಮರಿಸದಿರುವದು,- ಇವೆರಡೂ ಒಂದೇ ಬಗೆಯಾಗಿವೆ. ಹೀಗೆ ಸ್ಮರಿಸದಿರಲು ಕಾರಣವೆಂದರೆ, ಆ ಹತಭಾಗ್ಯನ ಬುದ್ಧಿಯನ್ನು ಪರಮಾತ್ಮನ ಮಾಯೆಯು ಮುಸುಕಿರುವದು. ಕಲುಷಿತವಾಗಿ ಮಾಡಿರುವದು. ಹೀಗೆ ಸಕಲ ಜೀವಿಗಳಿಗೂ ಅನಿಮಿತ್ತ ಬಂಧು ಹಾಗೂ ದೇವದೇವೋತ್ತಮನೂ ಆಗಿರುವ ಭಗವಂತನಿಗೆ ನಮಸ್ಕರಿಸುವೆನು.

||೨೮೫|| **ಯಥಾ ಹೃಷೀಕೇಶ ಖಲೇನ ದೇವಕೀ**
**ಕಂಸೇನ ರುದ್ಧಾತಿಚಿರಂ ಶುಚಾಽರ್ಪಿತಾ |**
**ವಿಮೋಚಿತಾಽಹಂ ಚ ಸಹಾತ್ಮಜಾ ವಿಭೋ**
**ತ್ವಯೈವ ನಾಥೇನ ಮುಹುರ್ವಿಪದ್ಗಣಾತ್ ||**

ಕುಂತೀ ಶ್ರೀಕೃಷ್ಣನಲ್ಲಿ 1-8-23

ಕುಂತೀದೇವಿಯು ಭಗವಂತನು ಮಾಡಿರುವ ಅನಂತ ಉಪಕಾರವನ್ನು ಕೃತಜ್ಞತೆಯಿಂದ ಸ್ಮರಿಸುವಳು.

ಭಗವಂತನು ನಮಗೆ ಮಾಡಿರುವ ಅನಂತ ಉಪಕಾರಗಳನ್ನು ಸ್ಮರಿಸುವದು ಕರ್ತವ್ಯವೆಂದು ಹೇಳಿ, ಹೀಗೆ ಸ್ಮರಿಸಿದ ಮಹನೀಯರ ಪರಂಪರೆಯೂ ಇದೆ ಎಂಬುದನ್ನು ತೋರಿಸುವರು-

**ಅರ್ಥ:**- ಎಲ್ಲ ಇಂದ್ರಿಯಗಳಿಗೆ ಪ್ರೇರಕನು (ಅವುಗಳನ್ನು ಕಾರ್ಯದಲ್ಲಿ ತೊಡಗಿಸುವವನು (ಹಾಗೂ ಒಡೆಯನೂ) ಆದ ಹೇ! ಹೃಷೀಕೇಶನೆ! -ದುಷ್ಟನಾದ ಕಂಸನು ನಿನ್ನ ತಾಯಿಯಾದ ದೇವಕಿಯನ್ನು ಬಹುಕಾಲ ಕಾರಾಗೃಹದ ಬಂಧನ ( ಸೆರೆ ) ದಲ್ಲಿ ಇಟ್ಟನು, ಆದರಿಂದಲೆ ಅವಳು ದುಃಖವನ್ನು ಅನುಭವಿಸಿದಳು. ನಿನ್ನ ತಾಯಿಯಾದ ದೇವಕಿಯನ್ನು ನೀನು ಬಂಧನದಿಂದ ಬಿಡುಗಡೆ ಮಾಡಿದೆ. ಅದೇ ರೀತಿಯಲ್ಲಿಯೆ ನನ್ನ ಮಕ್ಕಳೊಡನೆ ನನಗೆ ಸಾಲುಸಾಲಾಗಿ ಬಂದ ಆಪತ್ತುಗಳಿಂದ ನೀನೆ ಪಾರು ಮಾಡಿದೆ.

ಕುಂತೀದೇವಿಗೂ, ದೇವಕಿಗೂ ಇರುವ ವ್ಯತ್ಯಾಸವೆಂದರೆ- ದೇವಕಿಯು ಒಬ್ಬಳೆ, ಅವಳಿಗೆ ಒದಗಿದ ವಿಪತ್ತೂ ಒಂದೇ, ಆದರೆ ಕುಂತೀದೇವಿಯು ತನ್ನೆಲ್ಲ ಮಕ್ಕಳಕೂಡ ವಿಪತ್ತನ್ನು ಅನುಭವಿಸಿದಳು; ಒದಗಿದ ವಿಪತ್ತುಗಳೂ ಅನೇಕ, ಭಗವಂತನು ಮಾಡಿದ ಬಿಡುಗಡೆಯೂ ಅನೇಕ ಬಾರಿ.

॥೨೮॥ ವಿಷಾನ್ಮಹಾಗ್ನೇಃ ಪುರುಷಾದದರ್ಶನಾ-
ದಸತ್ಸಭಾಯಾ ವನವಾಸಕೃಚ್ಛ್ರತಃ ।
ಮೃಧೇ ಮೃಧೇಽನೇಕಮಹಾರಥಾಸ್ತ್ರತೋ
ದ್ರೌಣ್ಯಸ್ತ್ರತಶ್ಚಾಸ್ಮ ಹರೇಽಭಿರಕ್ಷಿತಾ ॥ ೧-೮-(೨೬, ೨೭)

ಕುಂತೀ 24

ಕುಂತೀದೇವಿಯು ಹೇಳುತ್ತಾಳೆ :- ದೇವಕಿಗೆ ಮಾಡಿದಕ್ಕಿಂತಲೂ ಭಗವಂತನು ತನಗೆ ಮಾಡಿರುವ ಉಪಕಾರಗಳು ಅನೇಕವಾಗಿವೆ, ಅನೇಕ ಮುಖವಾಗಿವೆ. ಭಗವಂತನ ಈ ಮಹೋಪಕಾರವನ್ನು ಮತ್ತೆಮತ್ತೆ ತಾನು ಸ್ಮರಿಸಬೇಕೆಂಬ ಭಾವನೆಯಿಂದ ಹಿಂದೆ ಹೇಳಿದ್ದನ್ನೇ ವಿವರಿಸಿ ಹೇಳುವಳು :- ವಿಪತ್ತಿಗೆ ಗುರಿಯಾದವಳು ನಾನೊಬ್ಬಳೇ ಅಲ್ಲ. ನಾನು, ನನ್ನ ಮಕ್ಕಳು ಹಾಗೂ ನನ್ನ ಸೊಸೆಯಾದ ಅವರ ಮಡದಿ (ದ್ರೌಪದೀ), ಅವಳ ಸೊಸೆ (ಉತ್ತರಾ) ಹಾಗೂ ಅವಳ ಮಗ (ಪರೀಕ್ಷಿತ)-ಇತ್ಯಾದಿ ನಮ್ಮೆಲ್ಲರನ್ನೂ ಮೇಲಿಂದ ಮೇಲೆ ಒದಗುವ ಅನೇಕ ಸಂಕಟಗಳಿಂದ ನೀನು ಪಾರುಮಾಡಿದೆ. ಈ ರೀತಿಯಾಗಿ ಭಗವಂತನು ತನಗೆ ಮಾಡಿರುವ ಅನಂತ ಉಪಕಾರಗಳು ತನ್ನ ತಾಯಿಯಾದ ದೇವಕಿಗೆ ಮಾಡಿದ ಉಪಕಾರಕ್ಕಿಂತಲೂ ಹೆಚ್ಚಿನದು. ಎಂದು ಭಗವಂತನು ಮಾಡಿದ ಉಪಕಾರವನ್ನು ಅವಳು ಸ್ಮರಿಸುವಳು.

ಅರ್ಥ :- ಭೀಮನಿಗೆ (ದುರ್ಯೋಧನನು ಕೊಟ್ಟ) ಕಾಲಕೂಟ ವಿಷದಿಂದ ಉಳಿಸಿರುವದು, (ಪುರುಷಾದ) ರಾಕ್ಷಸರಾದ ಬಕ-ಹಿಡಂಬರಿಗೆ ಆಹಾರವಾಗುವದನ್ನು ತಪ್ಪಿಸಿದುದು, (ಅಸತ್) ದುಷ್ಟ ಸಭೆಯಿಂದ (ದ್ರೌಪದಿಯನ್ನು ಕೂದಲಿನಿಂದ ಎಳೆಯುವದು, ಉಟ್ಟ ಬಟ್ಟೆ ಸೆಳೆಯುವದು ಮುಂತಾದ ನೀಚ ಕಾರ್ಯಗಳಲ್ಲಿ ತೊಡಗಿದ ಸಭೆಯಿಂದ) ಪಾರು ಮಾಡಿದುದು, ವನವಾಸದ ಸಂಕಷ್ಟಗಳಿಂದ ಪಾರು ಮಾಡಿದುದು, ಪ್ರತಿಯೊಂದು ಕಾಳಗದಲ್ಲಿಯೂ ಸರ್ಪಾಸ್ತ್ರ ಮೊದಲಾದ ಭೀಕರ ಅಸ್ತ್ರಗಳಿಂದ ರಕ್ಷಿಸಿದುದು,(ದ್ರೌಣಿ)ದ್ರೋಣರ ಮಗನಾದ ಅಶ್ವತ್ಥಾಮನು ಪಾಂಡವ ವಂಶವನ್ನೇ ನಿರ್ಮೂಲನ ಮಾಡಬೇಕೆಂದು ಬಿಟ್ಟ ಬ್ರಹ್ಮಾಸ್ತ್ರದಿಂದ ಉತ್ತರೆಯ ಗರ್ಭದಲ್ಲಿದ್ದ ಶಿಶು ಪರೀಕ್ಷಿತನನ್ನು ಕಾಪಾಡಿದುದು, ಇವೇ ಮುಂತಾದ ಅನೇಕ ಆಪತ್ತುಗಳಿಂದ, ಭಗವಂತಾ !, ನೀನೇ ನಮ್ಮನ್ನು ಉಳಿಸಿದೆ.

ವೃತ್ರಾಸುರ ಭಗವಂತನಲ್ಲಿ ಪ್ರಾರ್ಥನೆ

॥೨೮॥ ತಸ್ಯೈವ ಮೇ ಸೌಹೃದಸಖ್ಯಮೈತ್ರೀ
ದಾಸ್ಯಂ ಪುನರ್ಜನ್ಮನಿ ಜನ್ಮನಿ ಸ್ಯಾತ್ ।
ಮಹಾನುಭಾವೇನ ಗುಣಾಲಯೇನ
ವಿಷಜ್ಜತಸ್ತತ್ಪುರುಷಪ್ರಸಂಗಃ ॥ ೧೦-೧೧-೨೭

81 – 36

ಭಕ್ತನಾದ ಕುಚೇಲನು ( ಸುದಾಮನು ) ಭಗವಂತನಿಗೆ ಮಾಡಿಕೊಂಡ ಪ್ರಾರ್ಥನೆ :–

ಭಗವಂತನು ಅನಿಮಿತ್ತವಾಗಿ ಮಾಡುವ ಉಪಕಾರ ಸ್ಮರಣೆಯನ್ನು ಭಾಗವತೋತ್ತಮರೂ ಕೂಡ ಬೇಡಿಕೊಂಡಿರುವರು. ಆದುದರಿಂದ ಆತನ ಅನಂತ ಉಪಕಾರವನ್ನು ನಾವು ನೆನೆಯಲೇಬೇಕು. ಎಂಬ ವಿಚಾರವನ್ನು ಇಲ್ಲಿ ಹೇಳುವರು. (ಸುದಾಮನ ಶಬ್ದಗಳಲ್ಲಿ)

**ಅರ್ಥ :–** (ನಾನು ಕಾಣಿಕೆಯಾಗಿ ತಂದಿದ್ದ ಒಂದು ಹಿಡಿ ಅವಲಕ್ಕಿಯನ್ನು ಭಗವಂತನು ಪ್ರೀತಿಯಿಂದ ಸ್ವೀಕರಿಸಿದನು.) ಅಂಥ ಕರುಣಾಳು ಶ್ರೀ ಕೃಷ್ಣನ (ಸೌಹೃದ) ಸ್ವಾಮಿಭೃತ್ಯಭಾವದ ಬಂಧುತ್ವವು, ಅನಂತ ಅನಿಮಿತ್ತ ಉಪಕಾರವನ್ನು ಮಾಡುವ ಆತನ ಶಾಶ್ವತ ಸಖ್ಯವು, ಜೊತೆಯಲ್ಲಿ ಅಭ್ಯಾಸ ಮಾಡುವ ನಿಮಿತ್ತದಿಂದ ನಡುವೇ ಬೆಳೆದ (ನೈಮಿತ್ತಿಕ) ಮೈತ್ರಿ–ಗೆಳೆತನದ ಭಾವವು, ಆತನ ಸೇವಕನಾಗಿ ಆತನಿಗೆ ಪ್ರೀತಿಕರವಾದ ಊರ್ಧ್ವಪುಂಡ್ರ, ಚಕ್ರಾಂಕಿತಗಳನ್ನು ಧರಿಸುವದು, ಇವೇ ಮುಂತಾದವು, ( ಕೃತಜ್ಞತಾ ದರ್ಶಕವಾದವು ) ಜನ್ಮಜನ್ಮದಲ್ಲಿ ಮತ್ತೆಮತ್ತೆ ನನಗೆ ಒದಗಲಿ. ಅನಂತ ಗುಣಪೂರ್ಣನಾದ ಮಹಾಮಹಿಮನಾದ ಶ್ರೀ ಹರಿಯಲ್ಲಿ ಅತ್ಯಧಿಕ ಸ್ನೇಹರೂಪ ಭಕ್ತಿಯನ್ನು ಬೇಡಿಕೊಳ್ಳುತ್ತಿರುವ, ಶ್ರೀ ಹರಿ ಸ್ಮರಣೆಯಲ್ಲಿಯೆ ತುಂಬಾ ಆಸಕ್ತರಾಗಿರುವ ಶ್ರೀ ಹರಿ ಭಕ್ತರ (ಪ್ರಕೃಷ್ಟವಾದ) ಬಹುಕಾಲದ ಸಮಾಗಮವು (ದೀರ್ಘಕಾಲದ ಸತ್ಸಂಗವು) ನನ್ನ (ಶ್ರೇಯಸ್ಸಿಗೆ) ಸಹಾಯಕವಾಗಿ ನನಗೆ ದೊರೆಯಲಿ.

॥೨೮೮॥ **ಭಕ್ತಾಯ ಚಿತ್ರಾ ಭಗವಾನ್ ಹಿ ಸಂಪದೋ** ಸುದಾಮ
**ರಾಜ್ಯಂ ವಿಭೂತೀರ್ನ ಸಮರ್ಥಯತ್ಯಜಃ ।**
**ಅದೀರ್ಘಬೋಧಾಯ ವಿಚಕ್ಷಣಃ ಸ್ವಯಂ**
**ಪಶ್ಯನ್ನಿಪಾತಂ ಧನಿನಾಂ ಮದೋದ್ಭವಂ ॥ ೧೦-೮೧-೩೭**
81-37

ಇಲ್ಲಿ ಒಂದು ಆಕ್ಷೇಪ :– ಶ್ರೀ ಹರಿಯ ಐಶ್ವರ್ಯವು ಅಗಣಿತವಾದುದು. ನೀನು (ಸುದಾಮನು) ಆತನ ಭಕ್ತನು, ಅಂತೆಯೆ ಆತನಿಗೆ ಬಹಳೇ ಪ್ರೀತ್ಯಾಸ್ಪದನು. ಹೀಗಿದ್ದರೂ ನಿನಗೆ ಧನ–ಕನಕಾದಿಗಳನ್ನು ಕೊಡದ ಅಂಥ ಶ್ರೀ ಹರಿಯ ಸ್ನೇಹ, ಸಖ್ಯ, ದಾಸ್ಯತ್ವಾದಿಗಳನ್ನು ಆತನಿಂದ ನೀನು ಏಕೆ ಬೇಡಿಕೊಳ್ಳುವೆ ? ಎಂಬ ಪ್ರಶ್ನೆಗೆ ಉತ್ತರ ಹೇಳುವರು.

**ಅರ್ಥ** :- ಈ ಶ್ಲೋಕದಲ್ಲಿ ಹೇಳಿರುವ ಒಟ್ಟು ಅಭಿಪ್ರಾಯವಿದು :- **ಶ್ರೀ ಹರಿಯು** ಷಡ್ಗುಣೈಶ್ವರ್ಯ ಪರಿಪೂರ್ಣನೂ (ಭಗವಂತನಾದುದರಿಂದ) **ಸರ್ವ ತಂತ್ರಸ್ವತಂತ್ರನು**, ಸರ್ವಜ್ಞನು; ತನ್ನ ಏಕಾಂತ ಭಕ್ತರಿಗೆ ತನ್ನನ್ನೇ **ಕೊಟ್ಟು ಬಿಡುವ** ಅನುಪಮ ದಾನಿಯು (ಕೊಡುವವನು); ನಾನು ಆತನ ಭಕ್ತನು. ಹೀ ದ್ದರೂ ನನಗೆ ಧನಕನಕಾದಿಗಳನ್ನು ಶ್ರೀ ಹರಿಯು ಕೊಡದಿರಲು, ನನ್ನ ಮೇಲಿ ಆತನ ಕರುಣೆಯೆ ಕಾರಣವಾಗಿದೆ. ಏಕೆಂದರೆ ಜನನ ಮರಣರಹಿತನಾದ ಭ ವಂತನು, ಭವಿಷ್ಯತ್ ಕಾಲದ (ದೃಷ್ಟಿ) ತಿಳುವಳಿಕೆಯಿಲ್ಲದ ತನ್ನ ಭಕ್ತರಿಗೆ, ತಾನ ಸರ್ವಜ್ಞನಾದುದರಿಂದ, ಸಂಪತ್ತಿನಿಂದ ಹುಟ್ಟುವ ಮದವನ್ನು ಅರಿತವನಾಗಿ ದ್ರವ್ಯ, ರಾಜ್ಯ ಮುಂತಾದ ಐಶ್ವರ್ಯಗಳನ್ನೆಂದಿಗೂ ಕೊಡುವದಿಲ್ಲ.

ತಾನು ಕೊಟ್ಟ ಧನಕನಕಾದಿಗಳಿಂದ ತನ್ನ ಭಕ್ತರು ಮದೋನ್ಮತ್ತರಾಗಿ ತನ್ನ (ಶ್ರೀ ಹರಿಯ) ಭಕ್ತರನ್ನೇ ಕೀಳುಬಗೆಯುವ ಅನರ್ಥವನ್ನು ಕಂಡು (ತಿ ತಿರುಗಿ ಸಂಸಾರದ ಬಂಧನದಲ್ಲಿ ಸಿಲುಕುವ ಕೆಡುಕನ್ನು ಕಂಡು) ಭಕ್ತನಾದ ನನ ಆ ಬಗೆಯ ಕೇಡು ಉಂಟಾಗಬಾರದೆಂಬುದೇ ಆತನ ಉದ್ದೇಶ.

||೨೮|| **ಸ್ಯಾನ್ಮಸ್ತವಾಂಘ್ರಿರಶುಭಾಶಯಧೂಮಕೇತುಃ** **ಪ್ರಾ**
**ಕ್ಷೇಮಾಯ ಯೋ ಮುನಿಭಿರಾರ್ದ್ರಹೃದೋಹ್ಯಮಾನಃ |** **ಶ್ರೀ**
**ಯಃ ಸಾತ್ವಿಕೈಃ ಸಮವಿಭೂತಿಭಿರಾತ್ಮವಿದ್ಭಿ-**
**ರ್ವ್ಯೂಹ್ಯಾರ್ಚಿತಃ ಸವನಶಃ ಸಮವಿಕ್ರಮ್ಯೈರ್ಯಃ ||** ೧೬-೧೦

ಏಳನೆಯ ಭಾಗವತ ಧರ್ಮವಾದ, ಭಗವಂತನ ಪರಮೋಪಕಾರಿತ್ವ ಲಕ್ಷ ವಾದ 'ಸಖ್ಯ'ವೆಂಬುದನ್ನು ಹೇಳಿದ್ದಾಯಿತು. ಇನ್ನು ಅರ್ಚನಾ [ಇಜ್ಯಾ ಸ್ವರೂಪದ, ಅದಕ್ಕೇನೆ 'ಪೂಜಾ' ಯೆಂಬ ಬೇರೊಂದು ಹೆಸರುಳ್ಳ ಭಾಗವ ಧರ್ಮವನ್ನೂ ಅದಕ್ಕೆ ಅಗತ್ಯವಿರುವ ಸಾಧನ ಸಾಮಗ್ರಿಗಳೊಡನೆ ಹೇಳ ಮುಂದಿನ ಏಳು ಶ್ಲೋಕಗಳು.

ಇಲ್ಲಿ ಒಂದು ಆಕ್ಷೇಪ :-ಭಗವಂತನ ಪೂಜೆಯೆ ಮಾಡಲು ಕಠಿಣವಾದುದ ಅಂದ ಮೇಲೆ ಪೂಜೆಯ ಸಾಧನಗಳನ್ನು ಹೇಳುವದರಿಂದ ಏನು ಪ್ರಯೋಜನ ಮತ್ತೆಂದರೆ, ಭಗವಂತನು ಸಚ್ಚಿದಾನಂದ ವಿಗ್ರಹ, ಕೇವಲ ಜ್ಞಾನಾನಂದಾ ಸ್ವರೂಪನು, ಪೂಜೆಯಲ್ಲಿ ಪಾದದಿಂದ ಶಿರಸ್ಸಿನಪರ್ಯಂತ ಭಗವಂತನ ಧ್ಯಾ ಮಾಡಲೇಬೇಕಾದುದು. ಆ ಕಾಲಕ್ಕೆ ಭಗವಂತನ ಪಾದಾದಿಗಳನ್ನು ಬಿಡಿಬಿ

ಯಾಗಿ ಭಾವಿಸುವದು ಶಕ್ಯವಿಲ್ಲ. ಅದರಲ್ಲಿಯೂ ಬೆರಳುಗಳನ್ನು ಹೇಗೆ ಕಲ್ಪಿಸಬೇಕು ? ಆತನ ಕೈಯಲ್ಲಿ ಯಾವ ಆಯುಧಗಳನ್ನು ಧ್ಯಾನಿಸಬೇಕು ? ಏನನ್ನು ಕಣ್ಣೆದುರಿಗೆ ತಂದುಕೊಳ್ಳಬೇಕು ?, ಅಂಗಾಂಗಗಳಲ್ಲಿ ಯಾವ ಯಾವ ಆಭರಣಗಳನ್ನು ಕಲ್ಪಿಸಿ, ತೊಡಿಸಬೇಕು ? ಇದೇ ರೀತಿಯಾಗಿ ಕಣ್ಣು-ಕಿವಿ ಮುಂತಾದವುಗಳನ್ನು ಹೇಗೆ ಬಗೆಯಬೇಕು ? ಇದಲ್ಲದೆ ಆತನ ಪಾದದಿಂದ ಹುಟ್ಟಿ, ಆತನಿಂದ ಪ್ರೇರಿತವಾದ ಭೂಮಿಯು ಆತನಿಂದ ಭಿನ್ನವಾದರೂ ಆತನ ಪಾದವೆಂತಲೆ ಕರೆಯಲ್ಪಡುತ್ತದೆ. ಭಗವಂತನಿಗೆ 'ದ್ಯು' [ಆಕಾಶ] ಲೋಕವೆ ಶಿರಸ್ಸು [ತಲೆ] ಇತ್ಯಾದಿ ಭಗವಂತನ ಅವಯವಗಳು, ಆಭರಣಗಳು ಹಾಗೂ ಆಯುಧಗಳೆಲ್ಲ ವೇದಗಳಲ್ಲಿ ವಿವರವಾಗಿ ವರ್ಣಿತವಾಗಿವೆ. ಇವುಗಳನ್ನೆಲ್ಲ ಹೊಂದಿಸಿಕೊಂಡು ಭಗವಂತನ ಪೂಜೆ-ಅರ್ಚನೆ-ಮಾಡುವದು ಅಶಕ್ಯವೆಂದೇ ತೋರುವದು. ಈ ಆಕ್ಷೇಪಕ್ಕೆ ಉತ್ತರವನ್ನು ಹೀಗೆ ಹೇಳುವರು :- ಈ ರೀತಿಯ ಪೂಜೆ ಅತಿ-ಕಠಿಣ ವೆಂಬುದು ನಿಜ ಈ ಸ್ಥೂಲರೂಪದ ಪೂಜೆಗೆ ಒಂದು ನಿಮಿತ ಕಾಲಾವಧಿ ಅದೆ, ಭಗವಂತನ [ ಶಿಲಾ-ಲೋಹಗಳ ] ಪ್ರತಿಮೆ-ಮೂರ್ತಿಗಳ ಪೂಜೆಗೆ ಇರುವಂತೆಯೆ, ಈ ಬಗೆಯ ಸ್ಥೂಲ ಪೂಜೆಯನ್ನು ಸೂಕ್ಷ್ಮ [ ಮಾನಸಿಕ ] ಪೂಜೆಯನ್ನು ಮಾಡುವ ಸ್ಥಿತಿಯು ಪ್ರಾಪ್ತವಾಗುವ ಕಾಲದವರೆಗೆ ಮಾತ್ರ ಮಾಡತಕ್ಕದ್ದು. ಏಕೆಂದರೆ, ಸೂಕ್ಷ್ಮ (ಅಂತರಂಗದ-ಮಾನಸಿಕ) ಪೂಜೆಯೇ ಮುಕ್ತಿಯ ಪ್ರಾಪ್ತಿಗೆ ಶ್ರೇಷ್ಠವಾದ-ಸಾರಭೂತವಾದ ಸಾಧನವಾಗಿದೆ. ಹೀಗೆ ಹೇಳಿದುವರು.-'ತಾಂತ್ರಿಕಾಃ ಯಾದಮರ್ತ್ಯತಾಂ' -'ತಂತ್ರಂ'-ಎಂದರೆ ಪಂಚರಾತ್ರವೆಂಬ ಗ್ರಂಥವು. ಆ ಗ್ರಂಥದಲ್ಲಿ ಹೇಳಿರುವ ಪೂಜಾ ವಿಧಾನವನ್ನು ಬಲ್ಲವರು ತಾಂತ್ರಿಕರು.ಅಂಥವರು ಅದ್ವಿತೀಯನಾದ,ಎಲ್ಲರಿಗಿಂತಲೂ ವಿಲಕ್ಷಣನಾಗಿರುವ ಲಕ್ಷ್ಮೀಪತಿಯ ಅವಯವಗಳನ್ನೂ ಅವುಗಳಲ್ಲಿ ಆತನು ಧರಿಸುವ ಬೇರೆ ಬೇರೆ ಆಯುಧ ಮತ್ತು ಆಭರಣಗಳನ್ನು (ಅಂಥ ತಾಂತ್ರಿಕರು) ಹೇಗೆ ಕಲ್ಪಿಸಿಕೊಂಡಿರುವರು, ಅದೇ ರೀತಿಯಾಗಿ, ಅವರು ರೂಪಿಸಿಕೊಂಡ ಕ್ರಿಯಾಯೋಗವನ್ನು -ಅಂದರೆ ಪೂಜಾ ವಿಧಾನದಲ್ಲಿಯ ನೈಪುಣ್ಯವನ್ನು,- ಯಾವ ಪೂಜಾ ವಿಧಾನದಿಂದ ಮರಣಾಧೀನನಾದ ಮಾನವನು ಮರಣರಹಿತವಾದ ಸ್ಥಿತಿಯನ್ನು (ಮುಕ್ತಿಯನ್ನು) ಹೊಂದುವನು, -ಅದೆಲ್ಲವನ್ನೂ ನಮಗೆ ವಿವರವಾಗಿ ನಿರೂಪಿಸಿರಿ,- ನಿನಗೆ ಕಲ್ಯಾಣವಾಗಲಿ!'-

**ಅರ್ಥ** :- ಭಗವಂತಾ! ನಿನ್ನ ಪಾದವು (ಪಾದದ ಆಶ್ರಯವು) (ಅಶುಭ. ಪಾಪದ ಆಗರಕ್ಕೆ ಅಗ್ನಿಯಂತಿರುವದು. (ಪಾಪಗಳನ್ನೆಲ್ಲ ಸುಟ್ಟು ಬಿಡುವದು))

ಮುನಿಗಳು (ನಿನ್ನನ್ನೇ ಮನನ ಧ್ಯಾನ ಮಾಡುವವರು) ಭಕ್ತಿ ರಸದಿಂದ ತೊಯ್ದ (ತುಂಬಿದ) ಹೃದಯದಲ್ಲಿ ನಿನ್ನ ಪಾದವನ್ನು ಧರಿಸುವರು. ಸತ್ವಗುಣವೇ ಪ್ರಧಾನವಾಗಿರುವ ಸಜ್ಜನರು (ಭಾಗವತರು), ನಿನ್ನ ಬಿಂಬ ಜ್ಞಾನದಲ್ಲಿ ಬಲ್ಲಿದರಾದ್ದರಿಂದ ನಿನ್ನ ಸಕಲ ರೂಪಗಳಲ್ಲಿಯೂ ನಿನ್ನ ಶಕ್ತಿ-ಗುಣಗಳಲ್ಲಿ ಕಿಂಚಿತ್ತೂ ವ್ಯತ್ಯಾಸವಿಲ್ಲದಂತೆ ನೀನು ಸಮನಾಗಿರುವಿಯೆಂದು ತಿಳಿದುಕೊಂಡವರು, ವಾಸುದೇವ-ಸಂಕರ್ಷಣ-ಪ್ರದ್ಯುಮ್ನ-ಅನಿರುದ್ಧಗಳೆಂಬ ನಿನ್ನ (ವ್ಯೂಹ) ನಾಲ್ಕು ರೂಪಗಳನ್ನು ನೀನೇ ಅವಯವೀ (ಅವಯವವುಳ್ಳವನು) ಹಾಗೂ ಅವಯವವೂ ಆಗಿರುವಿಯೆಂಬ ಭಾವನೆಯಿಂದ ಬೆಳಿಗ್ಗೆ, ಮಧ್ಯಾಹ್ನಕ್ಕೆ, ಸಂಜೆಗೆ ಇರುವ ಮೂರು (ಸವನ) ಯಜ್ಞಕಾಲಗಳಲ್ಲಿಯೂ ನಿನ್ನ ಪಾದವು ನಮಗೆ ಕ್ಷೇಮ. (ಅಂತಿಮ ಪುರುಷಾರ್ಥವನ್ನು) ದಯಪಾಲಿಸಲಿ!

ಹೀಗೆ ಹೇಳಿರುವರು:- ಭಗವಂತನು ಕೇವಲನು, ಸಕಲರಿಂದಲೂ ವಿಲಕ್ಷಣನು, 'ಸ್ವಗತ ಭೇದವಿವರ್ಜಿತನು' ಅವಯವ-ಅವಯವೀ, ಗುಣ ಗುಣೀ, ಎಂಬ ಭೇದವನ್ನು ಆತನಲ್ಲಿ ಕಲ್ಪಿಸುವಂತಿಲ್ಲ. ಹೀಗಿದ್ದರೂ, ವಾಸುದೇವ-ಸಂಕರ್ಷಣ-ಪ್ರದ್ಯುಮ್ನ ಅನಿರುದ್ಧಗಳೆಂಬ ಸ್ವರೂಪಭೂತ (ಅಭಿನ್ನ)ವಾದ ಆತನ ನಾಲ್ಕು ರೂಪಗಳು (ಚತುರ್ವ್ಯೂಹವು) ಅವಯವ-ಅವಯವಿ- ಮುಂತಾದ ಭಾವದಿಂದ ಆತನಲ್ಲಿ ನೆಲೆಸಿರುವವು. ಈ ದೃಷ್ಟಿಯಿಂದ ಭಗವಂತನು ಅವಯವಿಯೂ, ಹಾಗೂ ಅವಯವವೂ ಆಗಿರುವನು. ಇದನ್ನು ತಿಳಿದವರೆ ನಿಜವಾದ ಜ್ಞಾನವುಳ್ಳವರು. ವಿಜ್ಞಾನಿಗಳು. ಈ ನಾಲ್ಕು ಮೂರ್ತಿಗಳೇ (ವ್ಯೂಹವೇ) ಭಗವಂತನಿಗೆ ಆಯುಧಗಳು, ಆಭರಣಗಳೂ ಆಗಿವೆಯೆಂಬ ಭಾವದಿಂದ ಅವುಗಳನ್ನೇ ಭಗವಂತನಿಗೆ ತೊಡಿಸಿ. (ಗಂಧ-ತುಲಸಿ ಮುಂತಾದ) ತಮಗೆ ದೊರೆಯುವ ಪೂಜಾ ಸಾಮಗ್ರಿಗಳಿಂದ ಆತನನ್ನು ಧ್ಯಾನಿಸುವರು, ಹಾಗೂ ಪೂಜಿಸುವರು. ಭಗವಂತನ ಬಗ್ಗೆ ನಿಜವಾದ ಜ್ಞಾನವನ್ನು ಪಡೆದ ವಿಜ್ಞಾನಿಗಳ ಪಾದವನ್ನು ಆಶ್ರಯಿಸುವವರೂ (ಅವರಿಂದ ಮಾರ್ಗದರ್ಶನ ಪಡೆದವರೂ)ಕೂಡ ಈ ಬಗೆಯ ಪೂಜಾ ಪದ್ಧತಿಯನ್ನು ಸುಲಭವಾಗಿ ಕೈಕೊಳ್ಳಬಲ್ಲರು. ಸಂಸಾರಬಂಧನದಿಂದ ಬಿಡುಗಡೆ ಮಾಡಲು ಇಂಥ ಪೂಜೆಯು ನೇರವಾದ ಸಾಧನವಾಗಿದೆ. ಎಂದು ಅವರು ಹೇಳುವ ಮಾತು ಸರಿಯಾದುದು.

ಹೀಗೆ ಹೇಳಿರುವದುಂಟು:- 'ನಮಸ್ಕೃತ್ಯಗುರೂನ್...... ಭಗವಾನ್ ಹರಿರೀಶ್ವರಃ' (೧೨-೧೧-೪). ಪೂಜಾ ವಿಧಾನಗಳ ಬಗ್ಗೆ ಶೌನಕಾದಿ ಋಷಿಗಳು ಕೇಳಿದ ಪ್ರಶ್ನೆಗೆ ಸೂತರು ಹೇಳಿದ ಉತ್ತರವಿದು :- ಗುರುಗಳನ್ನು ವಂದಿಸಿ,

ಬ್ರಹ್ಮನೇ (ಪದ್ಮಜ) ಮುಂತಾದ ಹಿಂದಿನ ಶ್ರೇಷ್ಠ ಜ್ಞಾನಿಗಳು ವೇದ, ಶಾಸ್ತ್ರ ಹಾಗೂ ಪಂಚರಾತ್ರ ಮುಂತಾದ ಪ್ರಾಚೀನ ಗ್ರಂಥಗಳಲ್ಲಿ ಹೇಳಿರುವ ಶ್ರೀವಿಷ್ಣುವಿನ ವಿಭೂತಿ (ಶ್ರೇಷ್ಠ ರೂಪ)ಗಳನ್ನು, ಆತನ ಸನ್ನಿಧಾನ (ತೇಜೋಂಶ)ದಿಂದ ಯುಕ್ತವಾದ ಮತ್ತಿತರ ರೂಪಗಳನ್ನು ಹೇಳುವೆ. ಈ ಚತುಷ್ಟಯ ರೂಪಗಳನ್ನೇ ತನ್ನ ಅಂಗೋಪಾಂಗಗಳಾಗಿ ಆಯುಧ ಆಭರಣಗಳನ್ನಾಗಿ ಸರ್ವಶಕ್ತನಾದ ಚತ್ರು ಮೂರ್ತಿಯಾದ ಭಗವಂತನು ಧರಿಸಿರುವನು, ಶೌನಕಾದಿಗಳು ಕೇಳಿದ ಪ್ರಶ್ನೆಗೆ ವೇದ ಪಂಚರಾತ್ರ ಗ್ರಂಥಗಳಲ್ಲಿ ಬ್ರಹ್ಮನೇ ಮೊದಲಾದ ಹಿಂದಿನ ಸಂಪ್ರದಾಯ ಪ್ರವರ್ತಕರು ಹೇಳಿರುವ ವಿಷ್ಣುವಿನ ವಿಭೂತಿ (ಶ್ರೇಷ್ಠರೂಪ)ಗಳನ್ನು, ಅದಲ್ಲದೆ ಇನ್ನಿತರ ವಿಭೂತಿಗಳನ್ನು ಹೇಳುವೆನೆಂದು (ಸೂತರು) ಪ್ರಾರಂಭದಲ್ಲಿ ಮಾತು ಕೊಟ್ಟು,- ಸ್ಥೂಲ ಪೂಜಾ ವಿವರಣೆಯ ಸಂದರ್ಭದಲ್ಲಿ, ಇನ್ನಿತರ ವಿಭೂತಿಗಳನ್ನು ಹೇಳಿರುವದರಿಂದ, ಸದ್ಯಕ್ಕೆ ವಿಷ್ಣುವಿನ ವಿಭೂತಿಗಳನ್ನು ಅವರ ಪ್ರಶ್ನೆಗೆ ಉತ್ತರ ರೂಪವಾಗಿ ಹೇಳುವರು- –ವಾಸುದೇವ, ಸಂಕರ್ಷಣ, ಪ್ರದ್ಯುಮ್ನ ಅನಿರುದ್ಧರೆಂಬ -ಮೂರ್ತಿಗಳ ಗುಂಪೇ, ಪರಮ ಪುರುಷನಾದ ಶ್ರೀಹರಿಯೆ, ಸ್ವಯಂ ತಾನಾಗಿರುವನು, ಚತುರ್ಮೂರ್ತಿವ್ಯೂಹವೆಂದು ಕರೆಯಲ್ಪಡುವನು. –ಇಲ್ಲಿ ಹೇಳಿರುವ ನಾಲ್ಕೂ ರೂಪಗಳ ವ್ಯೂಹವನ್ನೇ ತನ್ನ ಅಂಗೋಪಾಂಗಗಳನ್ನಾಗಿ, ಆಯುಧ ಆಭರಣಗಳನ್ನಾಗಿ ಶ್ರೀಹರಿಯು ಧರಿಸುವನು. ಅವಯವಗಳನ್ನು ಧರಿಸಿದವನಾದ ಶ್ರೀಹರಿಯು ಹಾಗೂ (ಆತನದೆಂದು ಹೇಳಲ್ಪಡುವ) ಅವಯವಗಳು ಪ್ರತ್ಯೇಕವಾದವುಗಳಲ್ಲ. ಅವೆರಡರಲ್ಲಿ ಅಭೇದವಿದೆ. ಶ್ರೀಹರಿ ಹಾಗೂ ಆತನ ಅಪ್ರಾಕೃತ ದೇಹ ಭಿನ್ನವಲ್ಲ. ಶ್ರೀಹರಿಯೆ ಆತನ ದೇಹ, ದೇಹವೆ ಶ್ರೀಹರಿಯು. ಏಕೆಂದರೆ, ಭಗವಂತನೂ, ಆತನ ಅಂಗೋಪಾಂಗರೂಪವಾದ ಚತುಷ್ಟಯವು ಸಮಶಕ್ತಿಯುಳ್ಳವು. ಶ್ರೀಹರಿಯ ಅನಂತ ಸಮಗ್ರ ಶಕ್ತಿಯೆ ಆತನ ಪ್ರತಿಯೊಂದು ಅವಯವದಲ್ಲಿ ಇರುವದು. ಅಂತೆಯೆ ಆತನ ಚತುಷ್ಟಯ ರೂಪಕ್ಕೆ 'ಭಗವತ್'ಎಂತಲೂ ಸ್ವತಃ ಶ್ರೀಹರಿಗೆ 'ಭಗವಾನ್' ಎಂತಲೂ ಗುಣ ವಾಚಕ ಶಬ್ದ (ವಿಶೇಷಣ)ವನ್ನು ಜೋಡಿಸಿರುವರು. –ಇಲ್ಲಿ ಒಂದು ಆಕ್ಷೇಪ. –ಮಾನವ ಶರೀರದಲ್ಲಿ ಒಂದೊಂದು ಅವಯವವು ಸಮಗ್ರ ಶರೀರವೆನಿಸುವದಿಲ್ಲ. ಅವಯವ, ಅವುಗಳ ಸಮೂಹವಾದ ಶರೀರ, ಇವೆರಡೂ ಒಂದೇ, ಅವುಗಳಲ್ಲಿ ಪ್ರತ್ಯೇಕತೆಯಿಲ್ಲ, –ಎಂಬ ಲೋಕವಿರುದ್ಧವಾದ ಅಂಗ-ಅಂಗಿಗಳ ಈ ಅಭೇದವು ಹೇಗೆ ಸಂಭವಿಸುವದು ? -ಈ ಆಕ್ಷೇಪಕ್ಕೆ ಉತ್ತರವನ್ನು ಹೇಳುವರು. –ಶ್ರೀಹರಿಯು 'ಈಶ್ವರ' ನಾಗಿರುವದೇ ಈ ಅಭೇದಕ್ಕೆ ಕಾರಣ. ಆತನ ಈಶ್ವರೀ ಶಕ್ತಿಯು ಅತ್ಯದ್ಭುತವಾದುದು. ಅಶಕ್ಯ ಅಸಾಧ್ಯವಾದುದನ್ನು ಸಾಧ್ಯ ಮಾಡಿ ತೋರಿಸುವ ಚಾತುರ್ಯವು- (ಅಘಟಿತ ಘಟನಾ

ಪಟುತ್ವವು) ಆತನ ಶಕ್ತಿಯಲ್ಲಿ ಇರುವದು. ಅಂದ ಮೇಲೆ ಆತನ ಶಕ್ತಿಗೆ ಅಸಾಧ್ಯವೆಂಬುವದೇ ಇರುವದಿಲ್ಲ.

||೨೯೦|| ಪ್ರಕ್ರಮುವತ್ಸ್ವಸತ್ಕೃತಂ ಪುರುಷೇಷು ಧೀಷು
ತು ಬಹಿರಂತರಸಚ್ಚರಣೇ |
ತವಪುರುಷ ವದ್ಯಂತ್ಯಖಿಲಶಕ್ತಿಧೃತಃ ಸ್ವಕೃತಂ || ೧೦-೮೭-೨೧

ಶ್ರುತಿ ಗೀತೆಯಲ್ಲಿಯ ವಾಕ್ಯವಿದು. ಬೆಳಿಗ್ಗೆ ಬಂದಿಗಳು ರಾಜನನ್ನು ಸ್ತುತಿ ಗೀತಗಳಿಂದ ಎಚ್ಚರಿಸುವರು. ಅದೇ ರೀತಿಯಲ್ಲಿ ಶ್ರುತಿಗಳು -ಅಂದರೆ ಶೃತಿಗಳಿಗೆ ಅಭಿಮಾನಿಗಳಾದ ದೇವತೆಗಳು ಸೃಷ್ಟಿ ಕಾಲದ ಪ್ರಾರಂಭಕ್ಕೆ ಪರಮಾತ್ಮನನ್ನು ಪ್ರಾರ್ಥಿಸುವರು.

ಈ ಶ್ಲೋಕದಲ್ಲಿ ಮೂರು ಪಾದಗಳಿವೆ. ಶ್ರುತಿ ಗೀತೆಯು ವೇದಗಳಿಗೆ ಸರಿ ಸಮಾನವಾದುದು.

ಈ ರೀತಿಯಲ್ಲಿ ಮುಕ್ತಿಗೆ ರಾಜಮಾರ್ಗದಂತಿರುವ –ನೇರವಾದ ಸಾಧನವಾಗಿರುವ – ಮಾನಸ ಪೂಜೆಯನ್ನು ಹೇಳಿದ್ದಾಯಿತು. ಈ ಬಗೆಯ ಮಾನಸ ಪೂಜೆಯಲ್ಲಿ, ಅನಂತ ಫಲಪ್ರದವಾದ ಒಂದು ವಿಶೇಷ ಸಾಧನ. (ವಿಧಾನ-ಕ್ರಮ) ವಿದೆ. ಶ್ರೀಹರಿಯ ಪೂಜೆಯೆ ಮೊದಲಾಗಿ ನಾವು ಮಾಡುವ ಸಕಲ ಕರ್ಮಗಳಲ್ಲಿಯೂ, ಮಾನಸಿಕ ಪೂಜೆಯ ಆ ಕ್ರಮವನ್ನು ನಾವು ಮನಸ್ಸಿನಲ್ಲಿ ತಂದ್ಕೊಂಡು (ಭಾವಿಸಿಕೊಂಡು) ಆಚರಿಸಬೇಕು. ನಿರಂತರವೂ ತಾಳುವ ಈ ಭಾವನೆಯಿಂದ ಸಂಸ್ಕೃತವಾದುದೆಲ್ಲವೂ (ಅದರ ಪ್ರಭಾವಕ್ಕೆ ಪೂರ್ಣವಾಗಿ ಒಳಗಾದುದೆಲ್ಲವೂ) ಭಾಗವತ ಧರ್ಮವೆಂಬ ಹೆಸರನ್ನು ಪಡೆಯುವದು. ಈ (ಸಕಲ ಕರ್ಮಗಳೂ ಶ್ರೀಹರಿ ಪೂಜೆಯೆಂಬ) ಭಾವನೆಯಿಂದ ಸಂಸ್ಕಾರವನ್ನು ಪಡೆದ ಕರ್ಮವೆ ಭಾಗವತ ಧರ್ಮ. ಈ ಮಾತನ್ನು ಹಿಂದೆ ಹೇಳಲಾಗಿದೆ. ಕರ್ಮವು ಸ್ವಭಾವತಃ ಬಂಧಕವಾಗಿದ್ದರೂ, ಶ್ರೀಹರಿ ಪೂಜೆಯೆಂಬ, ಶ್ರೀಹರಿಗೆ ಸಮರ್ಪಿತವೆಂಬ ಭಾವನೆಯಿಂದ ಅದನ್ನು ಮಾಡಿದರೆ, ಅದು ಮೋಕ್ಷವನ್ನೇ ತಂದುಕೊಡುವದು. ಈ ಅಭಿಪ್ರಾಯವನ್ನೇ ಇಲ್ಲಿ ಹೇಳಿದೆ.

**ಅರ್ಥ** ;– ಹೇ ಪುರುಷ! (ಅನಂತ ಕಲ್ಯಾಣಗುಣಪೂರ್ಣನಾದ ಭಗವಂತನೆ!) ಮಾನವರು ಮಾಡುವ ಒಳ್ಳೆಯ ಹಾಗೂ ಕೆಟ್ಟ ಕೃತಿಗಳೆಲ್ಲದರಲ್ಲಿಯೂ ಹಾಗೂ ಅವರ ಕೃತಿಗಳಿಗೆ ಪ್ರೇರಕವಾದ (ಮಾಡಲು ಹಚ್ಚುವ) ಸದ್ಬುದ್ಧಿ– ದುರ್ಬುದ್ಧಿಗಳಲ್ಲಿಯೂ, ಅಂತರಂಗದಲ್ಲಿ (ನಿಯಾಮಕನಾದ) ಪುರುಷರೂಪದಿಂದಲೂ, ಹೊರಗೆ ಕಾಲ (ನಾಮಕ) ರೂಪದಿಂದಲೂ ನೀನು ಮಾಡಿ, ಸ್ಥಾನ

ಗುಣಾದಿಗಳಿಗೆ ತಕ್ಕಂತೆ ಅವರಿಂದ ಮಾಡಿಸುವಿ. ಆ ಕೃತಿಗಳೆಲ್ಲವೂ ನಿನ್ನ ಕೃತಿಗಳೇ -ಎಂದು ಜ್ಞಾನಿಗಳು ಸಾರಿರುವರು. ಪ್ರೇರ್ಯಪ್ರೇರಕನಾಗಿ ಸಕಲ ಕರ್ಮಗಳನ್ನೂ ಮಾಡಿಸುವದು, ನಿನ್ನಿಂದಲೇ ನಡೆಯುವದು. ಏಕೆಂದರೆ, ನೀನು 'ಅಖಿಲಶಕ್ತಿಧತನು' – ನಿನ್ನ ಅಂಶ, ಆವೇಶ. ಅವತಾರಗಳೆಲ್ಲದರಲ್ಲಿಯೂ ನೀನು ನಿನ್ನ ಸಮಸ್ತ -(ಅಖಂಡ)ಶಕ್ತಿಗಳಿಂದ ಯುಕ್ತನಾಗಿರುವೆ. ನಾವು ಮಾಡುವ ಪೂಜೆ, ನಾವು ಮಾಡಿದ್ದಲ್ಲ. ನಿನ್ನನ್ನು ನೀನೆ ಪೂಜಿಸಿಕೊಂಡಂತೆ.

ನಾವು ಪೂಜಕರಲ್ಲ. ಪೂಜಿಸುವವನೂ ನೀನೆ, ಪೂಜಿಸಿಕೊಳ್ಳುವವನೂ ನೀನೇ ಎಂದು ಭಾಗವತರು ಭಾವಿಸಿರುವರು. ಅವರೇ ನಿಜವಾದ ಜ್ಞಾನಿಗಳು. ಸತ್ಕರ್ಮವಾಗಲಿ, ದುಷ್ಕರ್ಮವಾಗಲಿ, (ಕಾಲ ಗುಣಗಳಿಗನುಗುಣವಾಗಿ) ಭಗವಂತನು ತಾನೇ ಮಾಡಿ ಮಾಡಿಸಿ, ಅವುಗಳಿಂದ ಪೂಜಿತನಾಗುವೆನೆಂದು ಅವರು ಹೇಳುವರು.

ಇಲ್ಲಿ ಒಂದು ಆಕ್ಷೇಪ:- ಸತ್ಕರ್ಮ ದುಷ್ಕರ್ಮಗಳೆರಡೂ ಭಗವಂತನ ಪೂಜೆ, ಅದು ಭಾಗವತ ಧರ್ಮವೆನಿಸುವದು ಎಂದು ಹೇಳುವದು ತಪ್ಪಾಗುವದಿಲ್ಲವೆ ? ದುರ್ಜನರು ಮಾಡುವ ಶ್ರುತಿ ಸ್ಮೃತಿ ವಿರುದ್ಧವಾಗಿರುವ ಕೆಟ್ಟ (ಪಾಪ) ಕರ್ಮವನ್ನು ಭಗವಂತನೇ ಮಾಡಿಸುವದರಿಂದ ಅಂಥ ಕರ್ಮವೂ ಭಗವಂತನ ಪೂಜೆಯೆನಿಸಬಹುದಲ್ಲವೆ? ಈ ಆಕ್ಷೇಪಕ್ಕೆ ಉತ್ತರವನ್ನು ಹೇಳುವರು. ನೀವು ಹೇಳುವಂತೆ ಎಂದಿಗೂ ಆಗದು. ಅದು ತಪ್ಪು ವಿಚಾರ. ಸಕಲ ಕರ್ಮಗಳನ್ನೂ ತನ್ನ ಪೂಜಾರೂಪದಿಂದ ಶ್ರೀಹರಿಯು ತಾನೆ ಮಾಡಿಸುವನೆಂಬುದು ನೈಜ ಸ್ಥಿತಿಯು; ಇದ್ದುದನ್ನು ಇದ್ದಂತೆ ಹೇಳುವ ವಸ್ತು ಸ್ಥಿತಿಯು. ಆದರೆ (ಶ್ರೀಹರಿಯ ಸರ್ವ ಕರ್ಮ ಕರ್ತೃತ್ವದ) ಈ ಅನುಸಂಧಾನವನ್ನು ಭಾಗವತರಲ್ಲದ ದುರ್ಜನರು ಎಂದಿಗೂ ಮಾಡುವುದೇ ಇಲ್ಲ. ಈ ಭಾವನೆಯೆ ಅವರಿಗೆ ಉಂಟಾಗುವದಿಲ್ಲ. ಈ ಅನುಸಂಧಾನವನ್ನು ದೃಢವಾಗಿ ಮಾಡಿಕೊಳ್ಳುವದೇ - ಈ ಸದ್ಭಾವನೆಯಿಂದ ಸಕಲಕರ್ಮಗಳನ್ನು ಮಾಡುವದೇ ಭಾಗವತ ಧರ್ಮದ ವೈಶಿಷ್ಟ್ಯವಾಗಿದೆ. ಈ ಮಾತನ್ನು ಹಿಂದೆ ಸ್ಪಷ್ಟಗೊಳಿಸಿದೆ. ದುರ್ಜನರು ಅಂಥ ಅನುಸಂಧಾನವನ್ನೇ ಮಾಡುವದಿಲ್ಲ ಅವರಿಗೆ ಮುಕ್ತಿಯು ಲಭಿಸದು. ಇಷ್ಟೇ ಅಲ್ಲದೆ, ಅದಕ್ಕೆ ತೀರ ವಿರುದ್ಧವಾಗಿಯೆ ಅವರು ನಡೆದುಕೊಳ್ಳುವರು. 'ನಾನೇ ಮಾಡುವವನು, ನನ್ನ ಸತ್ಕಾರಕ್ಕಾಗಿಯೆ ಇದೆಲ್ಲವೂ' -ಎಂಬ ಅನ್ಯಥಾ (ತೀರ ತಪ್ಪು) ಭಾವನೆಯಿಂದಲೆ ಅವರು ನಡೆದುಕೊಳ್ಳುವರು. ಅದರಿಂದ ಅವರಿಗೆ ದೊರೆಯುವ ಪ್ರತಿಫಲವೂ ಮುಕ್ತಿಯ ಪ್ರಾಪ್ತಿಗೆ ವಿರುದ್ಧವಾದುದು. ಸಜ್ಜನರು ಮಾಡುವ ಶ್ರುತಿ ಸ್ಮೃತಿ ವಿರುದ್ಧವಾದ ಕರ್ಮವೂ

ಭಾಗವತಧರ್ಮವೆನಿಸುವದೆ? ಎಂದರೆ, ನಿಮ್ಮದು ತಪ್ಪು ತಿಳುವಳಿಕೆ. ಅಂಥ ಅಯೋಗ್ಯ ಕರ್ಮವು ಭಾಗವತ ಧರ್ಮವಾಗಲಾರದು. ಏಕೆಂದರೆ, (ಶ್ರೀಹರಿಯ ಸರ್ವಕರ್ತೃತ್ವ, ಸರ್ವಸಮರ್ಪಣಾತ್ಮಕವೆಂಬ ಭಾಗವತಧರ್ಮದ ಮುಖ್ಯ ಲಕ್ಷಣಗಳೇ ದುಷ್ಕರ್ಮಗಳಲ್ಲಿ ಇರುವದಿಲ್ಲ. ಅದಲ್ಲದೆ, ಸಜ್ಜನರಾದವರು ಬಹುಶಃ (ಸಾಮಾನ್ಯವಾಗಿ) ಅಕಾರ್ಯಗಳನ್ನೆಂದಿಗೂ ಮಾಡುವದೇ ಇಲ್ಲ (ಕರ್ಮಫಲದಿಂದ) ಬಿಟ್ಟೆಯ ಆಳಿನಂತೆ ಪರಮೇಶ್ವರನು ಒಂದು ವೇಳೆ ಬಲತ್ಕಾರದಿಂದ ಅಕೃತ್ಯವನ್ನು ಅವರಿಂದ ಮಾಡಿಸಿದ್ದೇ ಆದರೆ, ಅವರು ಅದಕ್ಕಾಗಿ ಕೂಡಲೆ ಪಶ್ಚಾತ್ತಾಪ ಪಟ್ಟು, 'ಅಯ್ಯೋ, ನಾನು ಎಷ್ಟು ದಾರಿ ತಪ್ಪಿ ನಡೆದೆ' – ಎಂದು ಹಳಿಹಳಿಸುವರು, ಆನಂತರದಲ್ಲಿ, 'ಶ್ರುತಿ ವಿರುದ್ಧ ಅಧರ್ಮದ ಕೃತಿಗಳೂ ಪರಮಾತ್ಮನ ಪೂಜೆ' ಯೆಂಬ ಭಾವನೆ – ವಿಚಾರವನ್ನು ಮನಸ್ಸಿನಲ್ಲಿ ಎಂದಿಗೂ ಅವರು ತರುವದಿಲ್ಲ. ಈ ಭಾವನೆ ಅವರಲ್ಲಿ ಹುಟ್ಟುವದಿಲ್ಲವೆಂದು ಹೇಗೆ ತಿಳಿದು ಕೊಳ್ಳಬೇಕು ಎಂದರೆ, ಪಶ್ಚಾತ್ತಾಪವಾದ ನಂತರ ಅಂಥ ಕೃತ್ಯಗಳನ್ನೇ ಅವರು ಮಾಡುವದಿಲ್ಲವೆಂದೇ ಹೇಳುವೆವು. ಹೀಗಿದ್ದರೂ ಸಂಗದೋಷ – ವಿಕಾರವಶತೆಗಳಿಂದ ) ಕೆಲವು ಸಜ್ಜನರು ( ಹಿಂದೆ ಹೇಳಿದ )ಅಂಥ ತಪ್ಪು ಅನುಸಂಧಾನ ಮಾಡಿದರೆಂದು ಕಲ್ಪಿಸೋಣ, ಆಗ್ಗೆ ಅದೂ ಕೂಡ ಭಾಗವತಧರ್ಮವಾಗುವದೆ? –ಎಂದರೆ,–ಇಲ್ಲ. ಹಾಗಾಗುವದಿಲ್ಲ. ಏಕೆಂದರೆ, ಅಂಥ ಅನುಸಂಧಾನದಲ್ಲಿ ಭಾಗವತ ಧರ್ಮದ (ಮುಖ್ಯ) ಲಕ್ಷಣವೇ ಇರುವದಿಲ್ಲ. ಅಂಥ ಅನುಸಂಧಾನವನ್ನು ಮಾಡದಿರುವದೇ ಭಾಗವತಧರ್ಮದ ವೈಶಿಷ್ಟ್ಯವಾಗಿದೆ. ಅಕೃತ್ಯವನ್ನು ಮಾಡುತ್ತಿರುವಾಗಲೇನೇ,– ಭಗವತ್ಪೂಜೆಯೆಂಬ ಅನುಸಂಧಾನವು ಉಂಟಾಗುವದು ಹೇಗೆ ? – ಎಂದು ಕೇಳಿದರೆ, ಈ ಬಗೆಯ ಅನುಸಂಧಾನವು ಎಂದಿಗೂ ಆ ಸಮಯದಲ್ಲಿ ಆಗಲಾರದು. ಹೇಗೆಂದರೆ, 'ಅಯ್ಯೋ ನಾನು ಮಾಡುವ ಕಾರ್ಯ ಧರ್ಮವಿರುದ್ಧವಾದುದು. ನನಗೆ ಕೇಡನ್ನು ತರುವಂಥದು', –ಇಂಥ ಭಾವನೆಯು ಕುಕರ್ಮವನ್ನು ಮಾಡುವಾಗ್ಗೆ ಎಂಥ ಮಂದಮತಿಯಾದವನಿಗೂ ಬಾರದೇ ಹೋಗದು. ಇಷ್ಟೊಂದು ಸುಲಭವಾದ, ಎಲ್ಲರಿಗೂ ಉಂಟಾಗುವ ಅನುಸಂಧಾನವಿದು. ( ಸ್ವಂತದ ಕರ್ಮ ಪರಿಪಾಕದಿಂದ ) ಕೈಹಿಡಿದು ಪರಮಾತ್ಮನೇ ಬಲುಮೆಯಿಂದ ಕುಕರ್ಮವನ್ನು ಮಾಡಿಸುವ ಸಮಯದಲ್ಲಿ, (ಇದು ಅನರ್ಥಕಾರಿಯಾದ ಪಾಪಕರ್ಮವೆಂಬ) ಅತಿ ಸುಲಭವಾದ ಭಾವನೆಯನ್ನೂ ತಂದುಕೊಳ್ಳಲಾರದವನಿಗೆ, ( ಸರ್ವಕರ್ಮವೂ ಭಗವತ್ಪೂಜೆ ) ಎಂಬ ಅತಿ ಉದಾತ್ತವಾದ ಮನೋಭಾವನೆಯು ( ಅನುಸಂಧಾನವು ) ಉಂಟಾಗುವದೆಂಬುದನ್ನು ಊಹಿಸಲೂ ಶಕ್ಯವಿಲ್ಲ. ಅತಿ ಸುಲಭವಾದ ಭಾವನೆಯನ್ನೂ ತಂದು

ಕೊಳ್ಳಲಾರದವನು ಅತಿ ಉದಾತ್ತವಾದ ಭಾವನೆಯನ್ನು ತಂದುಕೊಳ್ಳುವನೆಂದು ಹೇಳುವದೆಂದರೆ, 'ನೀರಿಳಿಯದ ಬಾಯಲ್ಲಿ ಕಡುಬಂ' – ಚಕ್ಕುಲಿಯನ್ನು ತುರುಕಿದಂತೆ ಅಸಂಭವನೀಯವಾದದು. 'ನಾನೇ ಮಾಡುವವನು, ನನ್ನದೇ ಸತ್ಕಾರವೆಂಬ ತಪ್ಪು ಭಾವನೆಯನ್ನು ಬಿಟ್ಟುಕೊಟ್ಟು ಮಾಡುವ ಶ್ರುತಿ – ವಿಹಿತ ಕರ್ಮವು ಭಾಗವತ ಧರ್ಮವಾಗುವದೇ – ಎಂದು ಕೇಳಿದರೆ, ಇಲ್ಲವೆಂದು ಯಾರು ಹೇಳುವರು ? ಖಂಡಿತವಾಗಿ ಆಗುವದು, ಎಂಬುದೆ ಉತ್ತರವಾಗಿದೆ. ಅಂತೆಯೆ, ಸಕಲ ಕರ್ಮಗಳನ್ನು ಭಗವತ್ ಪೂಜೆ, ಭಗವದರ್ಪಣೆ – ಎಂಬ ಮನೋಭಾವನೆಯಿಂದ ಮಾಡಬೇಕೆಂಬುದನ್ನೇ ಹೇಳುತ್ತಿರುವೆವು; ಅದನ್ನೇ ಇಲ್ಲಿ ಸೂಚಿಸಲಾಗಿದೆ.

**||೨೯೦|| ಯೋಽಂತಃ ಪ್ರವಿಶ್ಯ ಮಮ ವಾಚಮಿಮಾಂ ಪ್ರಸುಪ್ತಾಂ**
**ಸಂಜೀವಯತ್ಯಖಿಲಶಕ್ತಿಧರಃ ಸ್ವಧಾಮ್ನಾ |**
**ಅನ್ಯಾಂಶ್ಚ ಹಸ್ತಚರಣಶ್ರವಣತ್ವಗಾದೀನ್**
**ಪ್ರಾಣಾನ್ನಮೋ ಭಗವತೇ ಪುರುಷಾಯ ತುಭ್ಯಂ || ೪-೧೦-೬**

ತಪಸ್ಸಿನ ಸಮಾಧಿಯಲ್ಲಿಯಿದ್ದ ಧ್ರುವಭಾಲಕನನ್ನು ತನ್ನ ಶಂಖ ಸ್ಪರ್ಶದಿಂದ ವಾಸುದೇವ ಮೂರ್ತಿಯು ಎಚ್ಚರಿಸುವನು. ಆಗ್ಗೆ ಧ್ರುವನು ಮಾಡಿದ ಪರಮಾತ್ಮನ ಸ್ತುತಿ ಇದು.

ಹಿಂದಿನ ಶ್ಲೋಕದಲ್ಲಿ ಪರಮಾತ್ಮನನ್ನು 'ಪುರುಷ'ನೆಂದು ಸಂಬೋಧಿಸಲಾಗಿದೆ. 'ಅಖಿಲ ಶಕ್ತಿಧೃತ' ನೆಂದು ಬಣ್ಣಿಸಿದೆ. 'ಅಂತರ' ಅಂತರಂಗದಲ್ಲಿ ನಿಂತುಕೊಂಡು, 'ಧೀಷು' ಬುದ್ಧಿ ಮುಂತಾದವುಗಳನ್ನು ಪ್ರೇರಿಸುವನೆಂದು ಹೇಳಿದೆ. 'ಧೀಷು', – ಎಂಬಲ್ಲಿ ಬುದ್ಧಿಯೊಂದನ್ನೇ ಮಾತ್ರ ತಿಗೆದುಕೊಳ್ಳಲಾಗಿದೆ. ಈ ಮೂರರ ಬಗ್ಗೆ ಇಲ್ಲಿ ವಿವರಿಸಲಾಗಿದೆ.

**ಅರ್ಥ** :– ಸರ್ವಶಕ್ತನೂ, ( ಸ್ವಗತಭೇದವಿವರ್ಜಿತನೂ ) ಆಗಿರುವ ಶ್ರೀ ಹರಿಯು (ತನ್ನ ಆವೇಶ–ಅವತಾರಗಳಲ್ಲಿ ಅಭಿನ್ನನಾಗಿ) ತಾನೊಬ್ಬನೇ ಆಗಿದ್ದರೂ ತನ್ನ ಸಕಲ (ಅಖಂಡ) ಶಕ್ತಿಗಳಿಂದ ಯುಕ್ತನಾದವನು. ಶಕ್ತಿಗಳೆಂದು ಹೇಳಲ್ಪಡುವ ತನ್ನ ಅನಂತ ರೂಪಗಳಲ್ಲಿ ಒಂದೊಂದು ವಿಶಿಷ್ಟ ರೂಪದಿಂದ ಪ್ರವೇಶಿಸಿ, ವಾಕ್ಕು, ಹಾಗೂ ಉಳಿದ ಇಂದ್ರಿಯಗಳಾದ ಕೈ, ಕಾಲು, ಕಿವಿ, ಚರ್ಮ. ಪ್ರಾಣಗಳು ಮುಂತಾದ ಇಂದ್ರಿಯ ಹಾಗೂ ಅವಯವಗಳಲ್ಲಿ (ಅಂತರ್ಯಾಮಕನಾಗಿ) ಪುರುಷರೂಪದಿಂದ ನೆಲಿಸಿರುವನು, ತಮ್ಮ ಕಾರ್ಯಗಳನ್ನು ತಾವೇ (ಆತನಿಲ್ಲದೆ) ಮಾಡಲಾರದ ಇಂದ್ರಿಯಗಳನ್ನು ದಕ್ಷತೆಯಿಂದ ಕಾರ್ಯ

ಮಾಡಹಚ್ಚುವನು. (ಶ್ರೀ ಹರಿಯ ಪ್ರೇರಣೆಯಿಲ್ಲದೆ ತನ್ನ ಕಾರ್ಯಮಾಡ (ನುಡಿಯಲು) ಅಸಮರ್ಥವಾದ ನನ್ನ ವಾಕ್ ಶಕ್ತಿಯನ್ನು (ತಾನು ಅದರೊ ಪ್ರವೇಶಿಸಿ) ನುಡಿಯಲು (ಪರಮಾತ್ಮನ ಸ್ತೋತ್ರ ಮಾಡಲು (ಉಳಿದ ಇಂದ್ರಿ ಗಳನ್ನು ಪ್ರೇರಿಸಿದಂತೆಯೆ) ಅದನ್ನು ಸಮರ್ಥವಾಗಿ ಮಾಡಿರುವನು. [ ಇಂದ್ರಿಯಗಳಲ್ಲಿ ಪ್ರವೇಶಿಸಿ ಅವುಗಳನ್ನು ಸ್ವಕಾರ್ಯಪ್ರವೃತ್ತರನ್ನಾಗಿ ಮಾಡು ಪುರುಷನಾಮಕನಾದ ಭಗವಂತನೇ, ನಿನಗೆ ಅನಂತ ಪ್ರಣಾಮಗಳು. [ಇಂದ್ರಿ ಗಳ ಕಾರ್ಯವೆಲ್ಲ ನಿನ್ನನ್ನು ಕುರಿತೇ ಆಗಲಿ]. ['ಭಗವಾನ್' ಶಬ್ದವು ನಿನ ಗಿಯೆ ಮೀಸಲಾದುದು].

ಭಗವಂತನು 'ಪುರುಷ' ರೂಪದಿಂದ ದೇಹದದಲ್ಲಿ ನೆಲೆಸಿರುವದರಿಂ ಹಿಂದಿನ ಶ್ಲೋಕದಲ್ಲಿ 'ಪುರುಷ' ನೆಂದು ಆತನನ್ನು ಸಂಬೋಧಿಸಲಾಗಿದೆ. ಶ ಗಳೆಂಬ ವಿಶಿಷ್ಟರೂಪಗಳಿಂದ ಪ್ರವೇಶಿಸುವದರಿಂದ, 'ಅಖಿಲ ಶಕ್ತಿ ಧೃತ' ವೆಂ ದನ್ನು ವಿವರಿಸಲಾಯಿತು, 'ಧೀಷು' ಎಂಬುದರಲ್ಲಿ ಸಕಲ ಇಂದ್ರಿಯಗಳ ಸಮಾವೆ ವಾಯಿತು, 'ಪ್ರವೇಶಿಸಿ' ಎಂಬುವದರಿಂದ 'ಅಂತರ' ಎಂಬ ಶಬ್ದವು ಸಾರ್ಥ ವಾಯಿತು. ಎಂಬುದನ್ನು ತಿಳಿದುಕೊಳ್ಳಬೇಕು.

**||೨೯೨|| ದೇಹೇಂದ್ರಿಯಪ್ರಾಣಮನೋಧಿಯೋಽಮೀ**
**ಯದಂಶವಿದ್ಧಾಃ ಪ್ರಚರಂತಿ ಕರ್ಮಸು |**
**ನೈವಾನ್ಯದಾ ಲೋಹಮಿವ ಪ್ರತಪ್ತಂ**
**ಸ್ಥಾನೇಷು ತದ್ದ್ರಷ್ಟೃಪದೇಶಮೇಮಿ || ೬-೧೬-೨೪**

ಜೀವ
ಚಿತ್ರಕೇ

ಮಗನ ಮರಣದಿಂದ ಅತಿ ದುಃಖಿತನಾದ ಚಿತ್ರಕೇತು ರಾಜನಿಗೆ ಮ ಜೀವನಿಂದಲೆ ನಾರದರು ಭಗವದುಪಾಸನೆಯನ್ನು ಬೋಧಿಸುವರು. ನಾ ನುಡಿಯಬೇಕು, ಕಿವಿ ಕೇಳಬೇಕು, ಹೀಗೆ ಸಕಲ ಇಂದ್ರಿಯಗಳು ತಮ್ಮ ತ ಕಾರ್ಯಗಳಲ್ಲಿ ಪ್ರವರ್ತಿಸಬೇಕು ( ತೊಡಗಬೇಕು ) ಎಂದು ಬ್ರಹ್ಮನು ಗೊ ಮಾಡಿದಂತೆ, ತಮ್ಮ ಕಾರ್ಯದಲ್ಲಿ (ಯಾರ ಪ್ರೇರಣೆಯ ಅಗತ್ಯವಿಲ್ಲದೆ) ಇಂದ್ರಿ ಗಳು ತಾವಾಗಿಯೆ ತೊಡಗುವವು. ಹೀಗಿದ್ದರೆ ಅವುಗಳನ್ನು ಕಾರ್ಯಮಾ ಹಚ್ಚಲು, ಪರಮಾತ್ಮನು ('ಪುರುಷ' ರೂಪದಲ್ಲಿ ಅಂತರ್ನಿಯಾಮಕನು), ತ ಅಂಶರೂಪವಾದ ಶಕ್ತಿಗಳಿಂದ ಇಂದ್ರಿಯಗಳಲ್ಲಿ ಪ್ರವೇಶ ಮಾಡುವ ಅಗತ್ಯವೇನ 'ಪುರುಷ' ನಿಗೆ [ದೇಹಸ್ಥ 'ಪುರುಷ' ನಾಮಕನಾದ ಪರಮಾತ್ಮನಿಗೆ] ಇಂದ್ರಿ ಗಳನ್ನು ತಮ್ಮ ಕಾರ್ಯದಲ್ಲಿ ತೊಡಗಿಸಲು [ಸ್ವಂತದ] ಸಾಮರ್ಥ್ಯವಿಲ್ಲ. ಅ

ದರಿಂದ ತನ್ನ ಅಂಶರೂಪವಾದ ಶಕ್ತಿಗಳ ಮುಖಾಂತರ ಹೀಗೆ ಮಾಡುವನು, ಎಂದು ಹೇಳಿದರೆ, ಶಕ್ತಿಯುಕ್ತನಾದ ಪರಮಾತ್ಮನಿಗೆ ಇಂದ್ರಿಯಗಳಲ್ಲಿ ಪ್ರವೇಶವೆ ಇಲ್ಲದಂತಾದೀತು. ಅಂತೆಯೆ, ಈ ವಿಷಯುವನ್ನು ಇನ್ನಷ್ಟು ಸ್ಪಷ್ಟಗೊಳಿಸುವದು.

ಅರ್ಥ :– ದೇಹ, ಇಂದ್ರಿಯಗಳು, ಪ್ರಾಣಗಳು, ಮನಸ್ಸು, ಮತ್ತು ಬುದ್ಧಿ ಇವುಗಳು ('ವಿರಿಂಚಿ'–'ರಚಿಸುವ' ಬ್ರಹ್ಮರೂಪನಾಗಿ) ತಮ್ಮನ್ನು ಸೃಜಿಸುವ ಕಾಲ ದಲ್ಲಿಯೆ ಪರಮಾತ್ಮನ ಸ್ವರೂಪಾಂಶಗಳಿಂದ ಯುಕ್ತವಾಗಿರುವವು; ಅಂದಿನಿಂದಲೇ ಆತನು ತನ್ನ ಅಂಶರೂಪಶಕ್ತಿಗಳಿಂದ ಅವುಗಳಲ್ಲಿ ಪ್ರವೇಶಿಸಿ, ಅವುಗಳಿಗೆ ನಿಯಾ ಮಕನಾದ ಸ್ವಾಮಿಯೂ, ಪ್ರೇರಕನೂ ಆಗಿ, ಇಂದ್ರಿಯಗಳಿಗೆ ತಮ್ಮತಮ್ಮ ಕಾರ್ಯ ವನ್ನು ಮಾಡುವ ಸಾಮರ್ಥ್ಯ (ಪಾತ್ರತೆ)ಯನ್ನು ತಂದುಕೊಡುವನು. ತಮ್ಮೊಳಗೆ ಅಂತಃಸ್ಥನಾದ ಪರಮಾತ್ಮನ ಪ್ರೇರಣೆಯಿಲ್ಲದೆ, ಯಾವ ಇಂದ್ರಿಯುವೂ ತನಗೆಂದು (ನಿಯತ) ಗೊತ್ತುಪಡಿಸಿದ ಕಾರ್ಯವನ್ನೂ ಮಾಡಲಾರದು. (ಉದಾಹರಣೆಯಿಂದ ಈ ಮಾತನ್ನು ತಿಳಿಸಿ ಹೇಳುವರು) ತನಗೆ ಕೊಡುವ ಬೇಕಾದ ರೂಪು ಆಕೃತಿಯನ್ನು ತಾಳುವ ಶಕ್ತಿ (ಪಾತ್ರತೆ) ಯನ್ನು ಕಬ್ಬಿಣದ ನಿರ್ಮಾಣ ಕಾಲದಲ್ಲಿಯೇ ಪರಮಾ ತ್ಮನು ಅದರ ಸ್ವಭಾವವೆಂದು ಕಬ್ಬಿಣಕ್ಕೆ ಕೊಟ್ಟಿರುವನು. ಆದರೆ, ಕಬ್ಬಿಣವು ಅಗ್ನಿಯಿಂದ (ಪ್ರತಪ್ತ) ಅಗತ್ಯವಿರುವಷ್ಟು ಕಾದು ಕೆಂಪಾಗದಿದ್ದರೆ, ಯಾವ ರೂಪವನ್ನೂ ಅದು ಧರಿಸಲಾರದು. ಸೂಜಿಯೂ ಆಗಲಾರದು, ಕೊಡಾಯಿಯೂ ಆಗಲಾರದು. ಅದರಂತೆಯೆ ಅಂತಸ್ಥ ಪರಮಾತ್ಮನು ಇಂದ್ರಿಯಗಳಿಗೆ ನಿರ್ದಿಷ್ಟ ವಾದ ಶಕ್ತಿಯನ್ನು ಕೊಟ್ಟು ಅವುಗಳಿಗೆ ಪ್ರೇರಕನಾಗದಿದ್ದರೆ, ಇಂದ್ರಿಯಗಳು ತಮ್ಮ ತಮ್ಮ ಕಾರ್ಯಗಳನ್ನು ಮಾಡಲಾರವು. ('ನೀನೆ ಆಡಿಸದಿರಲು–ಜಡ ಒನ ಕೆಯಾ ಬೊಂಬೆ, ನೀನಿಟ್ಟ ಸೂತ್ರದಿಂ ಚಲಿಸುವವು. ತ್ರೈಕಾಲು' ಸೂತ್ರಧಾರಕ ನಾದ ಪರಮಾತ್ಮನನ್ನು ದಾಸವರ್ಯರೂ ಹೀಗೆಯೇ ಹಾಡಿ ಹೊಗಳಿರುವರು. ಸಕಲ ಕಾರ್ಯಗಳನ್ನು ತಾನೇ ಮಾಡಿ ಮಾಡಿಸುತ್ತಿದ್ದರೂ, (ಫಲಾಫಲಗಳ ಯಾವ ಲೇಪವಿಲ್ಲದಿರುವ) ಕೇವಲ 'ಸಾಕ್ಷೀ' ರೂಪನಾಗಿರುವ, 'ದೃಷ್ಟಾ' ಎಂದು ಹೇಳಲ್ಪಡುವ ಪರಮಾತ್ಮನಿಗೆ ಶರಣು ಹೋಗುವೆನು.

ಸಾರಾಂಶವೆಂದರೆ, ಸೃಷ್ಟವಾದ ಇಂದ್ರಿಯಗಳು ಇನ್ನುಮುಂದೆ ತಾವು ಮಾಡಬೇಕಾದ ಕಾರ್ಯವನ್ನು ಮಾಡಬೇಕೆಂಬ ಉದ್ದೇಶದಿಂದ, ಅವುಗಳಿಗೆ ಶಕ್ತಿ–ಪ್ರೇರಣೆಗಳನ್ನು ನೀಡಲು, ತನ್ನದೇ ಅಂಶರೂಪ ಶಕ್ತಿಗಳಿಂದ, ಪರಮಾ ತ್ಮನು ಇಂದ್ರಿಯಗಳಲ್ಲಿ ಪ್ರವೇಶ ಮಾಡುವದು ಅಗತ್ಯವಾಗಿದೆ. ತಮ್ಮ ತಮ್ಮ [ನಿಯತ] ಕಾರ್ಯಗಳಿಗಾಗಿ ಬ್ರಹ್ಮನು ಇಂದ್ರಿಯಗಳನ್ನು ಸೃಷ್ಟಿಸಿದ ಮಾತ್ರದಿಂದ

ಅವು ತಮ್ಮ ತಮ್ಮ ಕಾರ್ಯವನ್ನು ಮಾಡಲಾರವು. ಇಲ್ಲಿ ಕೊಟ್ಟಿರುವ ಕಬ್ಬಿಣದ ಉದಾಹರಣೆಯೇ ಇದಕ್ಕೆ ಪ್ರಮಾಣವಾಗಿದೆ. ಅನಂತನಾಮಕ ಪರಮಾತ್ಮನಿಗೆ ಅನಂತರೂಪಗಳು. ಆತನಿಗೆ ರೂಪಗಳ ಕೊರತೆ-ಬಡತನವಿಲ್ಲ. ತನ್ನದೇ ಅಂಶಗಳಾಗಿರುವ, ತನ್ನ ಸ್ವರೂಪಭೂತವಾದ ಒಂದೊಂದು ಶಕ್ತಿರೂಪದಿಂದ ಒಂದೊಂದು ಅವಯವದಲ್ಲಿ ಪರಮಾತ್ಮನು ಪ್ರವೇಶಿಸುವನು. ಇಂದ್ರಿಯಗಳನ್ನು ಪ್ರಚೋದಿಸುವ ಶಕ್ತಿಯು ಪ್ರತಿಯೊಂದು ರೂಪಕ್ಕೂ ಇರುವದರಿಂದ, ಈ ರೂಪಗಳಿಗೆ ಶಕ್ತಿಗಳೆಂಬ ಹೆಸರು. ಒಂದೊಂದು ರೂಪವು ಸಾಕ್ಷಾತ್ ಪರಮಾತ್ಮನೇ. ಆತನಿಗೂ ಆತನ ರೂಪಗಳಿಗೂ ಯಾವ ಭೇದವಿಲ್ಲ, ಒಂದೊಂದು ರೂಪವೂ ಪರಮಾತ್ಮನ ಸಕಲ ಶಕ್ತಿ-ಗುಣಗಳಿಂದ ಯುಕ್ತವಾದುದು. ಸಕಲ ಇಂದ್ರಿಯಗಳಿಗೂ ಪರಮಾತ್ಮನೊಬ್ಬನೇ ಶಕ್ತಿಪ್ರದ ಹಾಗೂ ಪ್ರಚೋದಕನಾಗಿರುವದರಿಂದ, ಶಾಕ್ತಮತದ ಪ್ರಸ್ತಾಪವೇ ಇಲ್ಲಿ ಉಂಟಾಗದು.

**||೨೯೩|| ನಮೋ ನಮಸ್ತೇಽಸ್ತ್ವೃಷಭಾಯ ಸಾತ್ವತಾಂ**
**ವಿದೂರಕಾಷ್ಠಾಯ ಮುಹುಃ ಕುಯೋಗಿನಾಂ ।**
**ನಿರಸ್ತಸಾಮ್ಯಾತಿಶಯೇನ ರಾಧಸಾ**
**ಸ್ವಧಾಮನಿ ಬ್ರಹ್ಮಣಿ ರಂಸ್ಯತೇ ನಮಃ ॥ ೨-೪-೧೪**

ಮಂಗಳಾಚರಣದ ರೂಪದಿಂದ ಶ್ರೀ ಶುಕಮುನಿಗಳು ಪರಮಾತ್ಮನಿಗೆ ಮಾಡಿರುವ ಸ್ತೋತ್ರಗಳಿವು.

ಪರಮಾತ್ಮನು (ನಾಶವಿಲ್ಲದ) ನಿತ್ಯ ಹಾಗೂ ( ಸರಿಮಿಗಿಲಿಲ್ಲದ ) ನಿರತಿಶಯವಾದ, ಹಾಗೂ ಪರಿಪೂರ್ಣವಾದ ಆನಂದಉಳ್ಳವನಾದರೂ, ಭಕ್ತರ ಮೇಲಿನ ಕರುಣೆಯಿಂದ, ಪ್ರಪಂಚದಲ್ಲಿ ಪ್ರತಿಮಾರೂಪವಾಗಿ, ಇಲ್ಲವೇ ಅವರ ಹೃದಯದಲ್ಲಿ 'ಪುರುಷ' ರೂಪವಾಗಿ, ನೆಲಿಸುವನು. ತನ್ನ ಭಕ್ತರು ಭಕ್ತಿಯಿಂದ ಮಾಡುವ ಸೂಕ್ಷ್ಮರೂಪವಾದ ( ಮಾನಸಿಕ ) ಪೂಜೆಯಿಂದಲೆ ಸಂತುಷ್ಟನಾಗಿ, ಅವರಿಗೆ ಸುಜ್ಞಾನವನ್ನು ಕೊಡುವನು, ಜ್ಞಾನವೇ ಅವರಿಗೆ ಮುಕ್ತಿಯನ್ನು ತಂದುಕೊಡುವದು, ಸೂಕ್ಷ್ಮಪೂಜೆಯಿಲ್ಲದಿದ್ದರೆ, ಮುಕ್ತಿಯು ದೊರೆಯಲಾರದು. ಆದುದರಿಂದ ಮೋಕ್ಷಾಪೇಕ್ಷಿಗಳು ಸೂಕ್ಷ್ಮಪೂಜೆಯನ್ನು ನಿರಂತರವೂ ಶ್ರದ್ಧೆ ಆದರಗಳಿಂದ ಮಾಡತಕ್ಕದ್ದು – ಈ ಅಭಿಪ್ರಾಯದಿಂದ, ಸೂಕ್ಷ್ಮಪೂಜೆಯ ಅಂಗವಾದ 'ಅವನತಿ' (ಬಾಗಿ ನಮಿಸುವದು) ಅಥವಾ 'ನಮನ'(ವಂದನೆ) ಯೆಂಬ ಬೇರೊಂದ ಹೆಸರುಳ್ಳ ಭಾಗವತ ಧರ್ಮವನ್ನು ಇಲ್ಲಿ ಹೇಳುವರು.

ಭಗವಂತನ ಪೂಜೆಯ ಅಂಗವಾಗಿ ( ಪೂಜೆಯದೆ ಒಂದು ಭಾಗವೆಂತಲೆ) ಮಾಡುವ ನಮಸ್ಕಾರಗಳನ್ನು ತಮ್ಮ ಶಕ್ತಿಗನುಗುಣವಾಗಿ ಹೆಚ್ಚುಹೆಚ್ಚಾಗಿ ಮಾಡಬೇಕು. ಇದನ್ನು ನೆನಪಿಗೆ ತಂದುಕೊಡಲು ಈ ಶ್ಲೋಕದಲ್ಲಿ - 'ನಮಃ ನಮಃ, ನಮಃ' ಎಂದು ಮೂರು ಸಲ ಹೇಳಿರುವದು.

ಮನಸ್ಸಿನ ಒಲವನ್ನು ಭಗವಂತನತ್ತ ತಿರುಗಿಸುವದು, 'ನಾರಾಯಣಾಯ ನಮಃ' ಎಂದು ಬಾಯಿಯಿಂದ ನುಡಿಯುವದು, ಸಾಷ್ಟಾಂಗ (ದಂಡ) ಪ್ರಣಾಮ ವನ್ನು ಮಾಡುವದು, ಈ ಮೂರು ಬಗೆಯಿಂದಲೂ ಭಗವಂತನಿಗೆ ವಂದನೆ ಯನ್ನು ಅರ್ಪಿಸಬೇಕು. ಮೂರು ಸಲ 'ನಮಃ' ಎಂದು ಹೇಳಿರುವಲ್ಲಿ ಇದೂ ಒಂದು ಉದ್ದೇಶವೆನ್ನಬಹುದು.

**ಅರ್ಥ :-** ( ಪಂಚರಾತ್ರಾಗಮದಲ್ಲಿ ವಿಧಿಸಿದಂತೆ ) ತನ್ನ ಸೂಕ್ಷ್ಮಪೂಜೆ ಯನ್ನು ಮಾಡಿ ತನಗೆ ಅರ್ಪಿಸುವ ಯೋಗಿಗಳಿಗೆ ಭಗವಂತನು ಜ್ಞಾನಾದಿ ಸಕಲ ಪುರುಷಾರ್ಥಗಳನ್ನು ದಯಪಾಲಿಸುವನು. ಇಂದ್ರಿಯಜಯವಿಲ್ಲದ ಹೀನ (ಹಟ) ಯೋಗಿಗಳು ಬಹುಜನ್ಮಗಳಲ್ಲಿ ಪ್ರಯಾಸಪಟ್ಟರೂ, ಭಗವಂತನು ಅವರಿಗೆ (ವಿದೂರ ಕಾಷ್ಟನು) ತನ್ನ ನಿಜಸ್ವರೂಪವನ್ನು ತೋರಗೊಡುವದಿಲ್ಲ; (ತನ್ನ ಬಗ್ಗೆ ನಿಜವಾದ ಜ್ಞಾನವನ್ನು ಕೊಡಿಕೊಡುವದಿಲ್ಲ ) ಅಥವಾ ಮಾಡಬೇಕಾದ ಕರ್ಮಗಳನ್ನು ಮಾಡುವದರಲ್ಲಿ (ಅಕುಶಲ) ಜಾಣ್ಮೆ ಇಲ್ಲದವರಿಗೂ ಭಗವಂತನ ಸರಿಯಾದ ಜ್ಞಾನೋದಯವಾಗದು. ಇವರಿಬ್ಬರಿಗೂ ಭಗವಂತನ ನೈಜಸ್ವರೂ ಪವು ಅಜ್ಞಾತವಾಗಿಯೆ ಉಳಿಯುವದು. ಸರಿಮಿಗಿಲಿಲ್ಲದ ತನ್ನಮಹಿಮೆ (ಐಶ್ವರ್ಯ) ಯಿಂದ ಭಗವಂತನು 'ಸ್ವರಮಣ'ನಾಗಿರುವನು; ಸ್ವರೂಪಭೂತವೂ, ಸ್ವಪ್ರಕಾ ಶವೂ, ಪರಿಪೂರ್ಣವೂ ಆಗಿರುವ ತನ್ನಲ್ಲಿಯೆ ತಾನು ರಮಿಸುವನು, ವಿಹರಿಸು ವನು. ಇಂಥ ಮಹಿಮೋಪೇತನಾದ ನಾರಾಯಣನಿಗೆ ( ಮೂರು ಬಗೆಯ ) ನಮಸ್ಕಾರಗಳು. ('ನಮಃ'ದ ಬಗ್ಗೆ ಹೆಚ್ಚಿಗೆ ತಿಳಿಯಬಯಸುವವರು 'ನಮಃ' ಪ್ರಕರಣದಲ್ಲಿಯ ೧೬ ಶ್ಲೋಕಗಳನ್ನು ನೋಡಬಹುದು).

**॥೨೧॥ ಯತ್ಕೀರ್ತನಂ ಯಚ್ಛ್ರವಣಂ ಯದೀಕ್ಷಣಂ** ಶುಕ
**ಯದ್ವಂದನಂ ಯತ್ಸ್ಮರಣಂ ಯದರ್ಹಣಂ ।**
**ಲೋಕಸ್ಯ ಸದ್ಯೋ ವಿಧುನೋತಿ ಕಲ್ಮಷಂ**
**ತಸ್ಮೈ ಸುಭದ್ರಶ್ರವಸೇ ನಮೋ ನಮಃ ೨.೪-೧೫**

ಭಗವಂತನ ನಾಮ - ಗುಣಗಳನ್ನು ಪಠಿಸುವ 'ಕೀರ್ತನ' ವೆಂಬ ಹಾಗೂ ಪ್ರಣಾಮವೇ ಆಗಿರುವ ಅವನತಿ, ಅದರಂತೆಯೇ ದೇವಮಂದಿರವನ್ನು ಉಡುಗುವ, ಅಲಂಕರಿಸುವ ಭಗವತ್ಪೂಜೆಯ ಅಂಗವೇ ಆಗಿರುವ 'ಸೇವೆ'ಯೆಂಬ, ಭಾಗವತ ಧರ್ಮಗಳನ್ನು ನಿತ್ಯವೂ ತಪ್ಪದೇ ಆಚರಿಸಬೇಕು. ಭಗವಂತನ ಪೂಜಾ ಪ್ರಸಂಗ ದಲ್ಲಿ ಇವೆರಡೂ ಮಾಡಲೇಬೇಕಾದ ಕಾರ್ಯಗಳು, ಎಂಬುದನ್ನು ನೆನಪಿಗೆ ತಂದು ಕೊಡಲು, ಮಾಡುವದರಿಂದ ದೊರೆಯುವ ಫಲಗಳನ್ನು ಹೇಳುತ್ತಾರೆ.

**ಅರ್ಥ ;**- (ನಾಲಿಗೆಯಿಂದ) ಭಗವಂತನ ಆನಂದಪ್ರದವಾದ ಗುಣಕೃತಿಗ ಳನ್ನು ಉಚ್ಚರಿಸುವದು., (ಕಿವಿಯಿಂದ) ಅವುಗಳ ಶ್ರವಣ ಮಾಡುವುದು. (ಕಣ್ಣು ಗಳಿಂದ) ಭಗವಂತನ ಸುಮಂಗಳ ದಿವ್ಯ ರೂಪವನ್ನು ನೋಡುವದು, (ಸಾಷ್ಟಾಂ ಗವಾಗಿ - ಕೈಕಾಲು ಎಂಟೂ ಅವಯವಗಳಿಂದ) ಭಗವಂತನಿಗೆ ನಮಸ್ಕರಿಸುವದು, (ಮನಸ್ಸಿನಿಂದ) ಭಗವಂತನ ಧ್ಯಾನ ಮಾಡುವದು. (ಪೂಜಾ ದ್ರವ್ಯಗಳಿಂದ) ವಿಧಿ ಯುಕ್ತವಾಗಿ ಭಗವಂತನನ್ನು ಪೂಜಿಸುವದು. ಹೀಗೆ ಆಚರಿಸುವ ಜನರ ಪಾಪ ಗಳೆಲ್ಲ ಕೂಡಲೆ (ತಡವಾಗದೆ) ನಾಶಹೊಂದುವವು. -ಇಂಥ ಮಹಿಮೋಪೇತನಾದ (ಕೇಳುವವರ, ಹಾಡುವವರ ಜೀವನವನ್ನೇ) ಪಾವನ ಮಾಡುವ ಕೀರ್ತಿಯುಳ್ಳ ಭಗವಂತನಿಗೆ ನಮಸ್ಕಾರಗಳು, ನಮಸ್ಕಾರಗಳು-

ಈ ಕಾರ್ಯದಲ್ಲಿ ಆಸ್ಥೆ-ಆದರಗಳನ್ನು ಹುಟ್ಟಿಸಲು 'ನಮಃ ನಮಃ'-ಎಂದು ಎರಡು ಸಲ ಹೇಳಿರುವರು.

||೨೫|| **ನೈವಾತ್ಮನಃ ಪ್ರಭುರಯಂ ನಿಜಲಾಭಪೂರ್ಣೋ** ಪ್ರಹ್ಲಾದ
**ಮಾನಂ ಜನಾದವಿದುಷಃ ಕರುಣೋ ವೃಣೀತೇ |** ನರಸಿಂಹ
**ಯದ್ಯಜ್ಜನೋ ಭಗವತೇ ವಿದಧೀತ ಮಾನಂ**
**ತಚ್ಚಾತ್ಮನೇ ಪ್ರತಿಮುಖಸ್ಯ ಯಥಾ ಮುಖಶ್ರೀಃ** || ೭-೯-೧೧

ಪ್ರಲ್ಹಾದನು ಮಾಡಿದ ನೃಸಿಂಹಸ್ತುತಿಯು.

ಇಲ್ಲಿ ಒಂದು ಪ್ರಶ್ನೆ ಕೇಳುವರು:- ಜನರು ಮಾಡುವ ಪೂಜೆಯನ್ನು ಭಗ ವಂತನು ಸ್ವೀಕರಿಸುವನೆ? ಅಥವಾ ಇಲ್ಲವೆ? ಮೊದಲನೆಯದಾಗಿ ಸ್ವೀಕರಿಸುವನು, ಎಂದು ಹೇಳಿದಲ್ಲಿ, ಪೂಜೆಯಿಂದ ಆತನಿಗೆ ಪ್ರಯೋಜನವಿದೆ. (ತನಗೆ ಬೇಕಾದುದು ದೊರೆಯುತ್ತಿದೆ.) ಎಂದು ಹೇಳಿದಂತಾಗುವದು. ಪೂರ್ಣಕಾಮನೂ, ಸ್ವರಮಣನು (ಎಲ್ಲ ಬಗೆಯಿಂದಲೂ) ಪರಿಪೂರ್ಣನು ಆಗಿರುವ ಭಗವಂತನಿಗೆ ('ಬೇಕು'ಎಂಬು

ವದಿದ್ದರೆ,) ಪ್ರಯೋಜನವಿರುವದೆಂದು ಹೇಳಿದರೆ, ಆತನ ಪೂರ್ಣತ್ವಕ್ಕೇನೆ ಬಾಧೆ ತಲುಪುವದು, ಆತನಲ್ಲಿ ನ್ಯೂನತೆಯುಂಟೆಂದು ಹೇಳಿದಂತಾಗುವದು. ಎರಡನೆ ಯದಾಗಿ ಜನರ ಪೂಜೆಯನ್ನೇ ಸ್ವೀಕರಿಸುವದಿಲ್ಲವೆಂದು ಹೇಳಿದರೆ. ಮಾಡುವ ಪೂಜೆ, ಬಳಸುವ ಪೂಜಾ ದ್ರವ್ಯಗಳು, -ನಿರರ್ಥಕವಾಗುವವು. ಆದುದರಿಂದ ಈ ಮಾತಿನ ಬಗ್ಗೆ ಈ ಶ್ಲೋಕದಲ್ಲಿ ಹೀಗೆ ಹೇಳಿರುವರು.

**ಅರ್ಥ**:- 'ಲೋಕ' ಎಂದರೆ, ಜನರಲ್ಲಿ ಎರಡು ಪ್ರಕಾರಗಳು- ಜ್ಞಾನಿಗಳು ಹಾಗೂ ಅಜ್ಞಾನಿಗಳು. ಇವರಲ್ಲಿ ಮೊದಲು ಅಜ್ಞಾನಿಗಳ (ಸರಿಯಾದ ಶಾಸ್ತ್ರ ಜ್ಞಾನವಿಲ್ಲದವರ) ಬಗ್ಗೆ ಉತ್ತರವನ್ನು ಹೇಳುವರು. -ಅಜ್ಞಾನಿಗಳು ಮಾಡುವ ಪೂಜೆ (ಉಪಾಸನೆ) ಯನ್ನು ಭಗವಂತನು ಸ್ವೀಕರಿಸುವದೇ ಇಲ್ಲ. ವಿದ್ವಜ್ಜನರು (ಜ್ಞಾನಿಗಳು) ಮಾಡುವ ಪೂಜೆಯನ್ನು ಭಗವಂತನು ಸ್ವೀಕರಿಸುವನೆಂಬುದು ಈ ಉತ್ತರದಿಂದಲೆ ಸೂಚಿತವಾಗುವದು. ಜ್ಞಾನಿಗಳ ಪೂಜೆಯನ್ನು (ಕ್ವಚಿತ್) ಸ್ವೀಕರಿಸುವನು.(ಕ್ವಚಿತ್)ಸ್ವೀಕರಿಸುವದೂ ಇಲ್ಲ. ಎಂದರೆ, ಇವೆರಡೂ ಪರಸ್ಪರ ವಿರುದ್ಧವಾದವು. ಅವು ಭಗವಂತನಲ್ಲಿ ಹೇಗೆ ಹೊಂದಿಕೊಳ್ಳುವವು? ಇವೆರಡೂ ವಿರುದ್ಧವಾದ ಕ್ರಿಯೆಗಳು ಭಗವಂತನಲ್ಲಿ ಹೇಗೆ ಕೂಡಿಕೊಳ್ಳುವವು? ಎಂಬುದನ್ನು ತಿಳಿಸಿಹೇಳುವರು. -'ಆತ್ಮನೋರ್ಥೆ ನ ವೃಣೀತೆ' -ತನ್ನಲ್ಲಿ ಇಲ್ಲದ, ತನಗೆ ದೊರಕಿರದ ವಸ್ತು ದೊರಕುವದೆಂಬ ಸ್ವಂತದ ಹಿತಕ್ಕಾಗಿ (ಸ್ವಾರ್ಥಕ್ಕಾಗಿ) ಭಗವಂತನು ಜನರು ಮಾಡುವ ಪೂಜೆಯನ್ನು ಸ್ವೀಕರಿಸುವದಿಲ್ಲ, ಸ್ವಾರ್ಥಕ್ಕಾಗಿ ಏಕೆ ಸ್ವೀಕರಿಸುವದಿಲ್ಲ? ಎಂದು ಕೇಳಿದರೆ, ಭಗವಂತನು 'ನಿಜಲಾಭ ಪೂರ್ಣನು'- ಆತನು ತನ್ನಲ್ಲಿಯೆ ಇರುವ, ತನ್ನ ಸ್ವರೂಪ ಭೂತವಾದ ಜ್ಞಾನಾನಂದಾದಿಗಳಿಂದ ಪರಿಪೂರ್ಣನು, ಆತನು ಆಪ್ತ ಕಾಮನು, ಆತನಿಗೆ ಕೈಗೂಡದ ಯಾವ ಬಯಕೆಯೂ ಇಲ್ಲ. ಆತನಿಗೆ ಅಪೇಕ್ಷೆಯೆಂಬುದೇ ಇಲ್ಲ. ಆತನಲ್ಲಿಯೆ ಇಲ್ಲದ ಯಾವ ವಸ್ತು ಇಲ್ಲ. ಆದುದರಿಂದಲೆ ಆತನು ಪ್ರಭು (ಎಲ್ಲದಕ್ಕೂ) ಸ್ವಾಮಿಯಾಗಿರುವನು. ಸರ್ವತಂತ್ರ ಸ್ವತಂತ್ರನಾದ ಆತನಿಗೆ ಎಲ್ಲವೂ ಸ್ವಾಯತ್ತ, ಸ್ವಾಧೀನ- ಪೂಜೆಯನ್ನು ಏಕೆ ಸ್ವೀಕರಿಸುವದಿಲ್ಲ? ಎಂಬ ಪ್ರಶ್ನೆಗೆ ಉತ್ತರವನ್ನು ಹೇಳಿದಾಯಿತು -'ಪೂಜೆಯನ್ನು ಏಕೆ ಸ್ವೀಕರಿಸುವನು? ಎಂಬುದನ್ನು ಇನ್ನು ಹೇಳುವರು (ಯದ್ಯದಿತಿ):- ಜನರು ತನ್ನನ್ನು ಹೇಗೆಯೆ ಅರ್ಚಿಸಲಿ. ತನಗೆ ಯಾವ ವಸ್ತುವನ್ನೇ ಅರ್ಪಿಸಲಿ, ಕರುಣಾಳು ಭಗವಂತನನ್ನು ಆರಾಧಿಸುವವರಿಗೇನೆ ಅದರಿಂದ ಲಾಭ ಪ್ರಯೋಜನವಾಗುವದು. ಅದರಿಂದ ಅವರಿಗೆ ಅಪೇಕ್ಷಿತವಾದ ಪುರುಷಾರ್ಥವು ಲಭಿಸುವದು. ಈ ಮಾತಿಗೆ ಒಂದು ದೃಷ್ಟಾಂತವನ್ನು (ಹೋಲಿಕೆಯನ್ನು)

ಹೇಳುವರು - (ಯಥೇತಿ) - ಮುಖಕ್ಕೆ ಮಾಡಿಕೊಂಡ ಅಲಂಕಾರವು ( ಕನ್ನಡಿ ಯೊಳಗಿನ) ಪ್ರತಿಬಿಂಬದಲ್ಲಿ ತನ್ನದೇ ಮುಖಕ್ಕೆಮಾಡಿದ ಅಲಂಕಾರದಂತೆ ಕಾಣು ವಂತೆ, ಭಗವಂತನಿಗೆ ಮಾಡಿದ ಪೂಜೆ, ಅರ್ಪಿಸಿದ ವಸ್ತುಗಳು, ಆರಾಧಕ ( ಪೂಜಕ ) ನಾದ ಭಕ್ತನಿಗೇನೆ (ಪ್ರತಿಬಿಂಬದಂತೆ) ಪುರುಷಾರ್ಥ ಪ್ರಾಪ್ತಿರೂಪ ದಿಂದ ಮರಳಿ ಲಭಿಸುವವು. ತನಗೆ ಪ್ರೀಯವಾಗಿರುವ ಹೂ, ಹಣ್ಣು. ತೂಗು ಮಂಚ ಮುಂತಾದ ಪೂಜಾವಸ್ತುಗಳಿಂದ ಬಿಂಬರೂಪನಾದ ಪರಮಾತ್ಮನ ಆರಾ ಧನೆಯನ್ನೇ ಬಿಟ್ಟುಬಿಡದೆ ಮಾಡತಕ್ಕದ್ದು - ಎಂಬುದನ್ನು ಹೇಳಿರುವರು-ಜನರು ಮಾಡುವ ಪೂಜೆಯನ್ನು ತನಗೆ ಬೇಕೆಂದು (ಸ್ವಪ್ರಯೋಜನಕ್ಕಾಗಿ) ಭಗವಂತನು ಸ್ವೀಕರಿಸುವದಿಲ್ಲ; 'ಭಕ್ತರ ಕಲ್ಯಾಣವಾಗಲಿ' ಎಂಬ ( ಪರಪ್ರಯೋಜನಕ್ಕಾಗಿ ) ಆತನು ಸ್ವೀಕರಿಸುವನು, ಈ ವಿವರಣೆಯಿಂದ, 'ಸ್ವೀಕರಿಸುವನು' ಹಾಗೂ ಸ್ವೀಕರಿಸುವದಿಲ್ಲ' - ಎಂಬ ಎರಡೂ ವಿರುದ್ಧ ಕ್ರಿಯೆಗಳು ಪರಮಾತ್ಮನಲ್ಲಿ ಹೇಗೆ ಕೂಡುವವೆಂಬುದನ್ನು ಸೂಚಿಸಿದಂತಾಯಿತು.

ಇಲ್ಲಿ ಒಂದು ಆಕ್ಷೇಪ :- ಸ್ವಪ್ರಯೋಜನಕ್ಕಾಗಿ (ತನಗೆ ಬೇಕೆಂದು) ಜನರು ಮಾಡುವ ಪೂಜೆಯನ್ನು ಭಗವಂತನು ಸ್ವೀಕರಿಸುವದಿಲ್ಲ - ಎಂಬ ಮಾತು ಜ್ಞಾನಿ ಗಳಿಗೂ ಅಜ್ಞಾನಿಗಳಿಗೂ ಸಮಸಮನಾಗಿ ಅನ್ವಯಿಸುವದು. ಹೀಗಿರಲು ಅಜ್ಞಾ ನಿಗಳ ಪೂಜೆಯನ್ನು ಭಗವಂತನು ಸರ್ವಥಾ ಸ್ವೀಕರಿಸುವದಿಲ್ಲ. ಜ್ಞಾನಿಗಳ ಪೂಜೆಯನ್ನು (ಸ್ವಪ್ರಯೋಜನಕ್ಕಾಗಿ) ಸ್ವೀಕರಿಸುವದಿಲ್ಲ, (ಪೂಜೆಯ ಪ್ರತಿಫಲ ವನ್ನು ಅವರಿಗೇನೆ ಕೊಡಲು ), ಜ್ಞಾನಿಗಳ ಪೂಜೆಯನ್ನು ಸ್ವೀಕರಿಸುವನು, (ಸ್ವಪ್ರಯೋಜನಕ್ಕಾಗಿ ಸ್ವೀಕರಿಸುವದಿಲ್ಲವೆಂಬ ಮಾತು ಇಬ್ಬರಿಗೂ ಸಮಸಮಾನ ವಾಗಿರಲು ), ಜ್ಞಾನಿಗಳ ಪೂಜೆಯನ್ನು ( ಒಂದರ್ಥದಲ್ಲಿ ) ಸ್ವೀಕರಿಸುವನು, (ಬೇರೊಂದು ಅರ್ಥದಲ್ಲಿ) ಸ್ವೀಕರಿಸುವದಿಲ್ಲ. ಜ್ಞಾನಿಗಳ ಬಗ್ಗೆ ಮಾತ್ರ ಈ ವಿಶೇಷ ರೀತಿಯನ್ನು ಹೇಳುವದೇಕೆ ? ಈ ಪ್ರಶ್ನೆಗೆ ಉತ್ತರವನ್ನು ಹೇಳುವರು :-ಭೋಗ್ಯ (ಉಪಭೋಗಿಸುವ ಸೇವನೆ ಮಾಡುವ) ಪದಾರ್ಥಗಳು ಎರಡು ವಿಧವಾಗಿವೆ :- [೧] ಭಗವಂತನಿಗೆ (ಅಭಿನ್ನವಾಗಿರುವ) ಆತನ ಸ್ವರೂಪಭೂತವಾದ (ಜ್ಞಾನಾ ನಂದಾದಿ) ಪದಾರ್ಥಗಳು. [೨] ಭಗವಂತನಿಗೆ ಸ್ವರೂಪಭೂತವಾಗದಿರುವ ( ಆತನಿಗೆ ಭಿನ್ನವಾಗಿರುವ ) ಇನ್ನುಳಿದ ಪದಾರ್ಥಗಳು. ಭಗವಂತನಿಂದ ಭಿನ್ನ ವಾಗಿರುವ ವಸ್ತುಗಳಲ್ಲಿಯೂ ಕೂಡ ಮತ್ತೆ ಎರಡು ಪ್ರಕಾರಗಳು - ಅಪ್ರಾಕೃತ (ಭೌತಿಕ ವಸ್ತುಗಳಿಂದ ನಿರ್ಮಾಣವಾಗದ) ಹಾಗೂ ಪ್ರಾಕೃತ (ಭೌತಿಕ ವಸ್ತು ಗಳಿಂದ ನಿರ್ಮಾಣವಾದ) ಪ್ರಾಕೃತ ( ಲೌಕಿಕ ) ವಸ್ತುಗಳಲ್ಲಿಯೂ ಮೂರು

ಪ್ರಕಾರಗಳಿರುವವು,-ಉತ್ತಮ, ಮಧ್ಯಮ, ಅಧಮವೆಂದು, - ಅವುಗಳಲ್ಲಿ ರೂಪ ರಸ ಗಂಧಗಳಿಂದ ಯುಕ್ತವಾದ ಪದಾರ್ಥಗಳು ಉತ್ತಮ ವರ್ಗದವು. ಏಕೆಂದರೆ (ತಮ್ಮ ಸುಂದರ) ರೂಪದಿಂದ ಅವು ಕಣ್ಣಿಗೆ, ಸುವಾಸನೆಯಿಂದ ಮೂಗಿಗೆ, (ಮಾಧುರ್ಯದಿಂದ) ರಸದಿಂದ ನಾಲಿಗೆಗೆ ಆನಂದವನ್ನು ಕೊಡುವವು - ಹೀಗೆ ಮೂರು ರೀತಿಯಿಂದಲೂ ಅವುಗಳ ಸೇವನೆಯಾಗುವದರಿಂದ ಅವು ಉತ್ತಮ ವೆನಿಸುವವು. ರೂಪ ಮತ್ತು ರಸ ಮಾತ್ರ ಉಳ್ಳವುಗಳು, ಗಂಧ (ಸುವಾಸನೆ) ಮತ್ತು ರಸಮಾತ್ರ ವುಳ್ಳವು, ಅಥವಾ ರೂಪ ಮತ್ತು ಸುವಾಸನೆ ಮಾತ್ರ ವುಳ್ಳವು, - (ಅಂದರೆ, ಭೋಗ್ಯವಾದ ಮೂರೂ ಗುಣಗಳು ಒಂದುಗೂಡಿರದೆ, ಒಂದೊಂದು ಗುಣದಿಂದ ಊನವಾದವುಗಳು) - ಇಂಥ (ಲೌಕಿಕ) ವಸ್ತುಗಳು ಮಧ್ಯಮ ವರ್ಗಕ್ಕೆ ಸೇರಿದವುಗಳು.

ಏಕೆಂದರೆ ಎರಡು ರೀತಿಯಿಂದ ಮಾತ್ರ ಇವುಗಳ ಉಪಭೋಗವಾಗುವದು. (ರೂಪ-ರಸ-ಗಂಧ) ಈ ಮೂರರಲ್ಲಿ ಯಾವುದೇ ಒಂದೇ ಗುಣವುಳ್ಳವು (ಲೌಕಿಕ) ಅಧಮ ಭೋಗ್ಯವಸ್ತುಗಳು - ಈ ಮೂರು ಬಗೆಯ ಪ್ರಾಕೃತ ಭೋಗಗಳನ್ನು ತನಗಾಗಿ ಎಂದು ಜ್ಞಾನಿಗಳೇ ಅರ್ಪಿಸಲಿ, ಅಜ್ಞಾನಿಗಳೇ ಅರ್ಪಿಸಲಿ. ಭಗವಂತನು ಅವುಗಳನ್ನು ಸರ್ವಥಾ ಸ್ವೀಕರಿಸುವದೇ ಇಲ್ಲ. ಏಕೆಂದರೆ, ಅಪ್ರಾಕೃತ, ಸಚ್ಚಿದಾನಂದ ಸ್ವರೂಪನೂ, (ಎಲ್ಲ ದೃಷ್ಟಿಯಿಂದಲೂ) ಪರಿಪೂರ್ಣನಾದ ಪರಮಾತ್ಮನು ಪ್ರಾಕೃತವನ್ನು ಸ್ವೀಕರಿಸುವದರಿಂದ ಆತನ ಪೂರ್ಣತ್ವಕ್ಕೆ (ಅಪ್ರಾಕೃತ ದಿವ್ಯ ಸ್ವರೂಪಕ್ಕೆ) ಬಾಧೆ ತಟ್ಟುವದು. ಆದುದರಿಂದ ಜ್ಞಾನಿಗಳಿಂದಾಗಲಿ ಅಜ್ಞಾನಿಗಳಿಂದಾಗಲಿ, ತನಗೆ ಅರ್ಪಿಸಿದ ಪ್ರಾಕೃತ ವಸ್ತುವನ್ನು ಭಗವಂತನು ಸರ್ವಥಾ ಸ್ವೀಕರಿಸುವದಿಲ್ಲ. ಭಗವಂತನು ಕೇವಲ 'ಸರ್ವಸಾರಭೋಕ್ತೃನು'. ಈ ಅಭಿಪ್ರಾಯದಿಂದಲೆ ಅಂಥದನ್ನು ಸ್ವೀಕರಿಸುವದಿಲ್ಲವೆಂದು ಹೇಳಿದೆ.

ಇನ್ನು (ಸ್ವಂತದ ಪ್ರಯೋಜನವಿಲ್ಲದೆ) ಅನ್ಯರ ಪ್ರಯೋಜನ (ಕಲ್ಯಾಣ) ಕ್ಕಾಗಿ ಭಗವಂತನು ಪೂಜೆಯನ್ನು ಸ್ವೀಕರಿಸುವದಾದರೂ ಜ್ಞಾನಿಗಳಾದ ಆರಾಧಕರಿಂದಲೆ ಮಾತ್ರ. ರೂಪ ರಸಗಂಧಾದಿಗಳಲ್ಲಿ ಅಧಿಷ್ಠಿತವಾದ ಭಗವದ್ರೂಪಗಳನ್ನು ಚಿಂತಿಸಿ, ಅವುಗಳನ್ನು ಪರಮಾತ್ಮನಲ್ಲಿ ಐಕ್ಯರೂಪದ ಅನುಸಂಧಾನದಿಂದ ಜ್ಞಾನಿಗಳು ಆತನಿಗೆ ಅರ್ಪಿಸುವರು. ಅದರಂತೆಯೆ ಇನ್ನುಳಿದ ಅಪ್ರಾಕೃತ ಮತ್ತು ಪ್ರಾಕೃತ ವಸ್ತುಗಳನ್ನು (ಅವುಗಳಿಗೆ ಅಭಿಮಾನಿಗಳಾದ ಇತರ ದೇವತೆಗಳ ಅನುಸಂಧಾನಮಾಡಿ) ಭಗವಂತನಿಗೆ ಜ್ಞಾನಿಗಳು ಸಮರ್ಪಿಸುವರು. ಭಗವಂತನು ಅವುಗಳನ್ನೆಲ್ಲ ಸ್ವೀಕರಿಸುವನು. ಆದರೆ ಭಗವಂತನ ಈ ಸ್ವೀಕಾರವು

ಒಂದೇ ಬಗೆಯಾಗಿಲ್ಲ, ಅನೇಕ ಪ್ರಕಾರವಾಗಿದೆ. – ಭೋಗ್ಯವಸ್ತುಗಳಲ್ಲಿಯು (ರೂಪ-ರಸ-ಗಂಧಗಳಲ್ಲಿಯ) ಭಗವಂತನ ರೂಪಗಳನ್ನು ಚಿಂತಿಸಿ, ಭಗವಂತನಲ್ಲಿ ಅವುಗಳ ಐಕ್ಯಾನುಸಂಧದಿಂದ ತನಗೆ ಸಮರ್ಪಿಸಿದ ವಸ್ತುಗಳನ್ನು ಭಗವಂತನು ಸ್ವೀಕರಿಸುವದೇ ಆತನ ಅತಿ ಶ್ರೇಷ್ಠವಾದ ಸ್ವೀಕಾರ. ಇನ್ನಿತರ ಭೋಗ್ಯಗಳಲ್ಲಿ (ಪೂಜಾದ್ರವ್ಯಗಳಲ್ಲಿ) ಇರುವ ಅಪ್ರಾಕೃತ ಅಂಶಗಳಿಗೆ ಅಭಿಮಾನಿಗಳಾದ ಇತರ ದೇವತೆಗಳ ಅನುಸಂಧಾನ ಮಾಡುವದು, ಆ ದೇವತೆಗಳಿಗೆ ಅಧಿಷ್ಠಾತೃ (ಸ್ವಾಮಿ ನಿಯಾಮಕನಾದ ಭಗವಂತನ ಅನುಮೋದ ( ಒಪ್ಪಿಗೆ ) ವನ್ನು ಪಡೆಯುವದು, ಈ ವಿಧಾನದಿಂದ ಭಗವಂತನು ಭೋಗವಸ್ತುಗಳನ್ನು ಸ್ವೀಕರಿಸುವದು (ಆತನಿಗೆ) ಮಧ್ಯಮ ಸ್ವೀಕಾರನೆನಿಸುವದು.

ತನ್ನ ಸ್ವರೂಪಭೂತವಾದ ಭೋಗ್ಯವಸ್ತುವಿಗೆ, ಅಪ್ರಾಕೃತ ಅಂಶಗಳಿ ಗಿಂತಲೂ ಹೀನ ಮಟ್ಟಿದ ಅಧಿಷ್ಠಾನ (ಆಶ್ರಯ) ವಾಗಿರುವ ಪ್ರಾಕೃತ ವಸ್ತುವಿ ಸ್ವೀಕಾರಕ್ಕೂ ಭಗವಂತನ ಒಪ್ಪಿಗೆ ಇದೆ. ಆದರೆ ಇದು ( ಆತನಿಗೆ ) ಅಧಮ ( ಕನಿಷ್ಠ ) ಸ್ವೀಕಾರವೆನಿಸುವದು. ಈ ಮೂರು ಪ್ರಕಾರದ ಭೋಗ್ಯಗಳನ್ನು ಮೂರು ವಿಧದಲ್ಲಿ ಭಗವಂತನು ಜ್ಞಾನಿಗಳಿಂದ(ತನಗೆ ಅನಗತ್ಯವಾಗಿದ್ದರೂ)ಅಂ ಧಕರಾದ ಜ್ಞಾನಿಗಳ ಕಲ್ಯಾಣಕ್ಕಾಗಿಯೆ ಸ್ವೀಕರಿಸುವನು. ಪರಾರ್ಥವಾಗಿ ಪೂ ಯನ್ನು ಭಗವಂತನು ಸ್ವೀಕರಿಸುವನು ಎಂಬ ಜ್ಞಾನಿಗಳ ಬಗ್ಗೆ ವಿಶೇಷವಾ (ಪ್ರತ್ಯೇಕವಾಗಿ) ಹೇಳಿದ ಮಾತು ಯಥಾರ್ಥವಾಗಿದೆ. ಅಜ್ಞಾನಿಗಳಾದ ಜನರ ಅರ್ಪಿಸುವ ಮೂರು ವಿಧವಾದ ಭೋಗ್ಯಗಳ ಭೋಗವನ್ನು (ಸೇವನೆಯನ್ನು ಭಗವಂತನು ಎಂದಿಗೂ ಸ್ವೀಕರಿಸುವದೇ ಇಲ್ಲ. ಏಕೆಂದರೆ, ಅಜ್ಞಾನಿಗಳ (ವಿಹಿತವಾದ ವಿಧಾನದೀದ) ಭಗವಂತನಿಗೆ ಸಮರ್ಪಿಸುವದೇ ಇಲ್ಲ. (ಯೋ ವಿಧಾನದಿಂಥ) ಭಕ್ತಿಪೂರ್ವಕ ಸಮರ್ಪಿಸಿದರೆ ಮಾತ್ರ ಅದನ್ನು ಸ್ವೀಕರಿಸಿ ಸಂತುಷ್ಟನಾಗಿ ಭಗವಂತನು ಅಪೇಕ್ಷಿತ ಪುರುಷಾರ್ಥವನ್ನು ಕೊಡುವನು.

(ವಿಶೇಷಾನುಸಂಧಾನ ಮಾಡುವ ಯೋಗ್ಯತೆ ಇಲ್ಲದ) ಸಾಮಾನ್ಯ ಜನ ಅಜ್ಞಾನದಿಂದ ಭಗವತ್‌ಸ್ವರೂಪಭೂತವಾದ ಭೋಗ್ಯಗಳ ಹಾಗೂ ಅಪ್ರಾಕೃ ಭೋಗ್ಯಗಳ ಸಮರ್ಪಣದ ಅರಿವಿಲ್ಲದೆ, ನಿರ್ಮಲಚಿತ್ತರಾಗಿ ಪ್ರಾಕೃತವಾದ ಅನ್ನಾ ಗಳನ್ನು ಭಕ್ತಿಯಿಂದ ಸಮರ್ಪಿಸಿದರೆ ಭಗವಂತನು ಅವುಗಳನ್ನು ಖಂಡಿತವಾಗಿ ಸ್ವೀಕರಿಸುವನು. ಆದರೆ ಸಾರಭೋಕ್ತೃವಾದ ಭಗವಂತನು ಅಂಥ ಪ್ರಾಕೃ ಪದಾರ್ಥಗಳಲ್ಲಿ ಸಾರಭೂತ (ತನಗೆ ಗ್ರಾಹ್ಯ) ವಾದ ಅತ್ಯಲ್ಪ ಅಂಶವನ್ನೇ ಸ್ವೀ ರಿಸುವನು, ಆದುದರಿಂದ ಅತ್ಯಲ್ಪವಾದ ಸಾರವನ್ನು ಸ್ವೀಕರಿಸಿದರೂ ಸ್ವೀಕರಿ

ದಂತೆಯೆ ಸರಿ. ಅತಿ ಮಿತಾಹಾರಿಯಾದವನಿಗೆ ಊಟವನ್ನೇ ಮಾಡುವದಿಲ್ಲ ವೆಂದು ನಾವು ಹೇಳುವೆವು. ತನಗಾಗಿ ಅಥವಾ ಪರರ ಸಲುವಾಗಿ ಪರಮಾತ್ಮನು ಭೋಗ್ಯವಸ್ತುಗಳನ್ನು ಸ್ವೀಕರಿಸುವದಿಲ್ಲವೆಂದು ಹೇಳಿರುವದು, ಭೋಗ್ಯವಸ್ತುಗಳನ್ನೇ ಎಂದಿಗೂ ಸರ್ವಥಾ ಸ್ವೀಕರಿಸುವದಿಲ್ಲವೆಂದು ಹಿಂದೆ ಹೇಳಿದೆ. ಇವೆರಡೂ ಹೇಳಿಕೆ ಗಳಲ್ಲಿ ಕಾಣಬರುವ ವ್ಯತ್ಯಾಸವನ್ನು ಇದರಿಂದ ತೆಗೆದು ಹಾಕಿದಂತಾ ಯಿತು. ಭೋಗ್ಯಗಳನ್ನು ತನಗೆ ಸಮರ್ಪಿಸದಿದ್ದರೂ ಸರ್ವ ಸ್ವಾಮಿಯಾದ ಆತನಿಗೆ ಅವುಗಳ ಭೋಗವು ಆಗಿಯೆ ಆಗುವದು. ಆದರೆ ಭೋಗ ವಸ್ತುಗಳ ಯಜಮಾನನಾದ ಮಾನವನಿಗೆ, ( ಶ್ರೀ ಹರಿಯು ಅವುಗಳನ್ನು ಸ್ವೀಕರಿಸುವದರಿಂದ ) ಎಳ್ಳಷ್ಟೂ ಲಾಭವಾಗುವದಿಲ್ಲ, ಅಂತೆಯೆ ತನಗೆ ಸಮರ್ಪಣ ಮಾಡಿದರೇನೆ ಭಗವಂತನು ಅದನ್ನು ಸ್ವೀಕರಿಸಿ, ಅದಕ್ಕೆ ತಕ್ಕ ಫಲವನ್ನು ಕೊಡುವನು. ಜನರು ತನಗೆ ಅರ್ಪಿಸುವ ಕಾಣಿಕೆಗಳಿಗೆ ತಕ್ಕಂತೆ ರಾಜನ ಕೃಪೆಯು ಅವರಿಗೆ ದೊರೆಯುವಂತೆ, ಪರಮಾತ್ಮನಿಗೆ ನಾವು ನಿವೇದಿಸುವ ಪದಾರ್ಥಗಳಿಗೆ ಅನುಗುಣವಾಗಿ ಪರಮಾತ್ಮನ ಪ್ರಸಾದವು (ಅನುಗ್ರಹವು) ನಮಗೆ ಹೆಚ್ಚುಕಡಿಮೆಯಾಗಿ ಲಭಿಸುವದೆಂಬುದು ಎಲ್ಲರಿಗೂ ತಿಳಿದ ಮಾತು. ಹೀಗಿರಲು, ಜ್ಞಾನಿಗಳಿಗೂ ಅಜ್ಞಾನಿಗಳಿಗೂ ಅವರವರ ಉಪಾಸನೆಯಿಂದ ದೊರೆಯುವ ಫಲ (ಭಗವಂತನ ಅನುಗ್ರಹ)ದಲ್ಲಿ ಹೆಚ್ಚಿನ ಅಂತರವಿದೆಯೆಂದು ಹೇಳುವ ಅಗತ್ಯವಿಲ್ಲ. –ತನ್ನ ಭಕ್ತರಾದ ಜ್ಞಾನಿಗಳ ವಿಷಯದಲ್ಲಿ ಕರುಣಾಳು ಭಗವಂತನಿಗೆ ಹೆಚ್ಚಿನ ಒಲವು ಇರುವದು, ಆತನ ಸ್ವಭಾವವೇ ಆಗಿದೆ –ಎಂಬು ದನ್ನು 'ಕರುಣಃ' ಎಂಬ ಶಬ್ದದಿಂದ ಸೂಚಿಸಿರುವರು.

**॥೨೯೭॥ ಅರ್ಹಸಿ ಮುಹುರರ್ಹತ್ತಮಾರ್ಹಣಮಸ್ಮಾಕಂ ಅನು-ಪಥಾನಾಂ ನಮೋನಮ ಇತ್ಯೇತಾವತ್ಸದುಪಶಿಕ್ಷಿತಂ ಕೋಽರ್ಹತಿ ಪುಮಾನ್ ಪ್ರಕೃತಿಗುಣವ್ಯತಿರೇಕಮತಿರನೀಶ ಈಶ್ವರಸ್ಯ ಪ್ರಕೃತಿ ಪುರುಷಯೋಃ ಪರಸ್ಯಾವಾರ್ಕ್ತನಮತಿರ್ನಾಮರೂಪಾಕೃತಿಭಿರ್ನಿ ರೂಪಣಂ ॥ ೫-೩-೫ ॥ ಪರಿಜನಾನುರಾಗವಿರಚಿತಸ್ತವಲವ ಸಂಶಬ್ದಸಲಿಲಕಿಸಲಯತುಲಸೀದೂರ್ವಾಂಕುರೈರಪಿ ಸಂಭೃತಯಾ ಸಪರ್ಯಯಾ ಕಿಲ ಪರಮ ಪರಿತುಷ್ಯಸಿ ॥ ೫-೩-೭ ॥**

**ಅಥಾನಯಾಪಿ ನ ಭವತ ಇಜ್ಯಯೋರುಸಂಭಾರಭರಯಾ ಸಮುಚಿತಮರ್ಥಮಿಹೋಪಲಭಾಮಹೇ ॥ ೫-೩-೮ ॥ ಆತ್ಮನ ಏವಾನುಸವನಮಂಜಸಾ ವ್ಯತಿರೇಕೇಣಾನುಬೋಭೂಯಮಾ-**

ನ್ತ್ರಿಸ್ಥ್ರ
ಪ ಅಂಗುಲ್ಲ

**ನಾಶೇಷಪುರುಷಾರ್ಥಸ್ವರೂಪಸ್ಯ ಕಿಂತು ನಾಥಾಶಿಷ ಆಶಾಸಾನಾನಾಮೇತದಭಿಸಂರಾಧನಮಾತ್ರಂ ಭವಿತುಮರ್ಹತಿ || ೫-೩-೯ ||**

**ಅಥ ಕಥಂಚಿತ್ಸ್ಖಲನ ಕ್ಷುತ್ಪತನ ಜೃಂಭಣದುರವಸ್ಥಾನಾದಿಷು ವಿವಶಾನಾಂ ನಃ ಶ್ರೀಮಚ್ಛರಣಾರವಿಂದಸ್ಮರಣಾಯ ಜ್ವರಮರಣದಶಾಯಾಮಪಿ ಸಕಲಕಶ್ಮಲನಿರಸನಾನಿ ತವ ಗುಣಕೃತನಾಮಧೇಯಾನಿ ವಚನಗೋಚರಾಣಿ ಭವಂತು || ೫-೩-೧೨ ||**

ನಾಭಿರಾಜನು ಮಗನಾಗಬೇಕೆಂದು ಯಜ್ಞ ಹೂಡಿದನು. ಭಕ್ತರು ಬೇಡಿದುದನ್ನು ಕೊಡುವ ಶ್ರೀಹರಿಯು ದಿವ್ಯಕಾಂತಿಯಿಂದೊಡಗೂಡಿ ಪ್ರತ್ಯಕ್ಷನಾದನು. ಯಜ್ಞದಲ್ಲಿ ದೀಕ್ಷಿತರಾದ ಋತ್ವಿಜರು ಶ್ರೀಹರಿಯನ್ನು ಹೀಗೆ ಪ್ರಾರ್ಥಿಸಿದರು -ನಾಭಿರಾಜನಿಗೆ ಪ್ರಸನ್ನನಾದ ಶ್ರೀಹರಿಯು ಆತನ ರಾಣಿಯಾದ ಮೇರುದೇವಿಯಲ್ಲಿ ಋಷಭನಾಮಕನಾಗಿ ಅವತರಿಸುವನು. -ಭಗವಂತನ ಪೂಜೆಯ ಬಗ್ಗೆ ಈ ಮೊದಲು ಹೇಳಿದ ವಿಷಯವು ಮನದಟ್ಟಾಗುವಂತೆ ಮಾಡಲು, ಪೂಜೆಯದೆ ಅಂಗ (ಭಾಗ)ವಾಗಿರುವ ಸ್ತೋತ್ರ-ಪ್ರಾರ್ಥನೆಗಳು ಎಂತಿರಬೇಕೆಂಬುವದನು ಇಲ್ಲಿ ನಿದರ್ಶನ ಮಾಡಿರುವರು. (ತೋರಿಸಿರುವರು).

**ಅರ್ಥ:** (ಅರ್ಹಸಿ) ಭಗವಂತನ ಪೂಜೆಯು ಎರಡು ವಿಧವಾಗಿದೆ. ಸ್ಥೂಲ ಹಾಗೂ ಸೂಕ್ಷ್ಮ ಎಂದು. ಸೂಕ್ಷ್ಮ (ಮಾನಸಿಕ) ಪೂಜೆಯು ಸಿದ್ಧಿಸು (ಆತ್ಮಸಾತ್) ಆಗುವವರೆಗಿನ ಅವಧಿಯಲ್ಲಿ ಸ್ಥೂಲ ಪೂಜೆಯನ್ನು ಆಚರಿಸಬೇಕ -ಹೀಗೆ ಹೇಳಿದೆ.... 'ಅರ್ಚಾದೌ..... ಅವಸ್ಥಿತಮ್ (೩-೨೦-೨೫) -ಮೋಕ್ಷಾ ಪೇಕ್ಷಿಯಾದವನು ಶಾಸ್ತ್ರವಿಹಿತವಾದ ಕರ್ಮಗಳನ್ನು ತಪ್ಪದೇ ಆಚರಿಸುತ್ತ ವಿಶ್ವದೊಡೆಯನಾದ ನನ್ನನ್ನು ನನ್ನ ಬಾಹ್ಯರೂಪಗಳಿಂದ ( ಪ್ರತೀಕ-ಪ್ರತಿನಿ ಗಳಾದ ) ಮೂರ್ತಿ ಪ್ರತಿಮೆ ಮುಂತಾದವುಗಳಲ್ಲಿ, ಸಕಲ ಪ್ರಾಣಿಗಳ ಅಂತರ್ಯಾಮಿಯಾದ ಶ್ರೀ ಹರಿಯು ತನ್ನ ಹೃದಯದಲ್ಲಿ ಬಿಂಬರೂ ವಾಗಿ ನೆಲೆಸಿರುವದರ ಜ್ಞಾನವಾಗುವವರೆಗೆ ಮಾತ್ರ ( ಪ್ರತಿಮಾದಿ ರೂಪ ಳಲ್ಲಿ) ಪೂಜಿಸಬೇಕು. ಜ್ಞಾನೋದಯವಾದನಂತರ ಪ್ರತಿಮಾದಿಗಳ ರೂಪದ ಶ್ರೀಹರಿಯನ್ನು ಪೂಜಿಸಲೇಬಾರದು. ಎಂಬ ಅಭಿಪ್ರಾಯವಲ್ಲ. ಅನಂತರ ಜ್ಞಾನಿಗಳು ಪ್ರತಿಮಾದಿಗಳನ್ನು ಪೂಜಿಸುವದು ಸಾಮಾನ್ಯ ಜನರಿಗೆ ಮೇಲ್ಪಂ ಯನ್ನು ಹಾಕಿಕೊಡುವದಕ್ಕಾಗಿ, ಪೂಜೆಯಕ್ರಮವನ್ನು ತಿಳಿಸಿ-ತೋರಿಸಿಕೊಡ ದಕ್ಕಾಗಿ. ಪರಮಾತ್ಮನ ಪಾದದಲ್ಲಿ ಮನಸ್ಸು ಸ್ಥಿರವಾಗಿ, ಅಚಲವಾಗಿ, ನಿ ವಂತೆ ಮಾಡಲು ಪ್ರತಿಮಾ ಪೂಜೆಯೂ ಒಂದು ಸಾಧನವಾಗಿದೆ. -ಸ್ಥೂಲ ಪೂ

ಗಿಂತಲೂ ಸೂಕ್ಷ್ಮ ಪೂಜೆಯು ಹೆಚ್ಚು ಮಾನಾರ್ಹ. ಆದರಣೀಯವಾದುದರಿಂದ ಸೂಕ್ಷ್ಮ ಪೂಜೆಯ ಬಗ್ಗೆ ಮೊದಲು ಹೇಳಿಕೊಡುವರು, -(ನಮೋನಮಃ),

ಹೇ! ಪೂಜ್ಯರಲ್ಲಿ ಅತಿಪೂಜ್ಯ (ಪರಮಪೂಜ್ಯ)ನಾದ, ( ಋಷಭನಾಯಕ ) ಶ್ರೀಹರಿಯೆ! ನೀನು ನಿರೂಪಿಸಿದ ಭಾಗವತ ಧರ್ಮಗಳನ್ನು ಭಾಗವತ ಧರ್ಮ ಪ್ರವರ್ತಕರು, ಭಾಗವತಶಿರೋಮಣಿಗಳು ಉಪದೇಶಿಸಿದಂತೆ ಆ (ಭಾಗವತ ಧರ್ಮಗಳನ್ನು) ಆಚರಿಸುತ್ತಿರುವ ನಾವು ನಮ್ಮ (ಅಂತರ್ಯಾಮಿ ಬಿಂಬ ರೂಪ ನಾದ ನಿನಗೆ ನಮೋ ನಮಃ' ಎಂದು ಮತ್ತೆ ಮತ್ತೆ ಹೇಳುವ ನಮ್ಮ ಮಾನಸಿಕ ಪೂಜೆಯನ್ನು ಕೃಪೆಯಿಂದ ಸ್ವೀಕರಿಸುವಿ. (ಈ ಬಗೆಯ ಸೂಕ್ಷ್ಮ ಪೂಜೆಯನ್ನು ಭಾಗವತ ಶಿರೋಮಣಿಗಳೆ ಉಪದೇಶಿಸಬಲ್ಲರು) -ನಿನ್ನ ವಿಶಿಷ್ಟ (ಬಿಂಬ) ರೂಪ ದಲ್ಲಿ ಮನೋವೃತ್ತಿಗಳನ್ನೆಲ್ಲ ಒಂದುಗೂಡಿಸಿ ಸ್ಥಿರವಾಗಿ ನಿಲ್ಲಿಸುವಂತೆ ಮಾಡು ವದೇ ಮಾನಸ (ಸೂಕ್ಷ್ಮ) ಪೂಜೆ; ಪೂಜಾ ವಿಧಾನಗಳಲ್ಲಿ ಅದು ಶ್ರೇಷ್ಠವಾದುದು. ನಮ್ಮ ಈ ಮಾನಸ (ಸೂಕ್ಷ್ಮ) ಪೂಜೆಗೆ ನೀನೇ ಪ್ರಭುವಾಗಿರುವೆ.

ಈ ಬಗೆಯ ಸೂಕ್ಷ್ಮ ಪೂಜೆಯನ್ನು ಹೇಳಿಕೊಟ್ಟು ಅದಕ್ಕೆ ಸಾಧನವಾಗಿ ರುವ ಹಾಗೂ ಸೂಕ್ಷ್ಮ ಪೂಜೆಗೆ ಪಾತ್ರತೆಯನ್ನು ತಂದುಕೊಡುವ ಸ್ಥೂಲ ಪೂಜೆ ಯನ್ನು, ಸೂಕ್ಷ್ಮ ಪೂಜೆಯನ್ನು ಆಚರಿಸಲು (ಇನ್ನೂ) ಅಸಮರ್ಥರಾದವರ ಸಲು ವಾಗಿ ನಿರೂಪಿಸುವರು. -ಅಜ್ಞಾನಿಗಳು ಮಾಡಿದ ಪೂಜೆಯನ್ನು ಭಗವಂತನು ಸ್ವೀಕರಿಸುವದು, ಇದೇ ಬಗೆಯದಾಗಿದೆ, ಎಂಬ ಅಭಿಪ್ರಾಯದಿಂದ ಅದನ್ನು ಹೇಳುವರು. ಹೇ ಪರಮ (ಪುರುಷೋತ್ತಮನೆ)! ಅಜ್ಞಾನಿಗಳು ಮಾಡುವ ಸ್ಥೂಲ ಪೂಜೆಯಿಂದಲೂ ನೀನು ಸಂತುಷ್ಟನಾಗುವಿ. ಒಂದು ವಿಶೇಷ (ಹೆಚ್ಚಿನ) ಕೃಪೆ ಯಿಂದಲೇ ನೀನು ಅಂಥ ಪೂಜೆಯನ್ನು ಸ್ವೀಕರಿಸುವಿ -ಏಕೆಂದರೆ ನೀನು 'ಪರ ಮನು' ಕೃಪೆ ಮಾಡುವುದರಲ್ಲಿ ಅತಿ ಶ್ರೇಷ್ಠನು. ಸ್ಥೂಲ ಪೂಜೆಯು ಯಾವುದು? -ಎಂದರೆ, ಎಲ್ಲರಿಗೂ ಗೊತ್ತಿರುವ ಸ್ಥೂಲ (ಲೌಕಿಕ) ವಸ್ತುಗಳಿಂದ ಮಾಡುವ ಪೂಜೆಯೆ ಸ್ಥೂಲವೆನಿಸುವದು. ಸ್ಥೂಲ ಪೂಜೆಯಲ್ಲಿ ಬಳಸುವ ಸಾಮಗ್ರಿಗಳನ್ನು (ಇಲ್ಲಿ) ತೋರಿಸಿಕೊಡುವರು. ಬೆಳ್ಳಿ-ಬಂಗಾರದ ನವರತ್ನ ಖಚಿತ ಆಭರಣಗಳು. ಬಗೆಬಗೆಯ ಧಾನ್ಯಗಳ ಹಿಟ್ಟಿನಿಂದ ಪಾಕಗೊಳಿಸಿದ ಭಕ್ಷ್ಯ ಭೋಜ್ಯಗಳು; ವಿವಿಧ ರಸಭರಿತವಾದ ಹಣ್ಣು ಹಂಪಲುಗಳು, ಸುವಾಸನೆಯ ಚಂದನ ಮುಂತಾದ ಲೇಪನ ದ್ರವ್ಯಗಳು, ಚೆಂದಚೆಂದದ ಬಟ್ಟೆಗಳು, ಎಣ್ಣೆ ತುಪ್ಪದ ಸಾಲು ದೀಪಗಳು ಗಂಟೆ, ಝಾಂಗಟೆ ಮುಂತಾದ ಮೊಳಗುವ ಅನೇಕ ವಾದ್ಯಗಳು, -ಸ್ಥೂಲ ಪೂಜೆಗೆ ಇವೆಲ್ಲ ಸಮೃದ್ಧವಾದ, ಶ್ರೇಷ್ಠವಾದ ಸಾಧನಗಳು.

ಹೇ ಪರಮ ! ಭಾಗವತ ಶಿರೋಮಣಿಗಳಿಂದ ಪೂಜೆಗೊಳ್ಳುವವನೇ ! ನೀ
ಪ್ರಕೃತಿ (ಸ್ಥೂಲಪ್ರಕೃತಿ ಹಾಗೂ ಲಕ್ಷ್ಮೀದೇವಿ) ಮತ್ತು ಪುರುಷ (ಜೀವಿಗಳ
ಶ್ರೇಷ್ಠನಾದ ಬ್ರಹ್ಮಾದಿಗಳು), ಇವರೆಲ್ಲರಿಗಿಂತಲೂ ನೀನು ( ಪರ ) ಭಿನ್ನ
ಉತ್ತಮನೂ ಆಗಿರುವಿ. ತ್ರಿಗುಣಾತ್ಮಕ ಪ್ರಕೃತಿಯ ಗುಣಗಳಾದ ರೂಪ
ಗಂಧಾದಿಗಳಿಗೆ ಮನಸೋತು ಮಲಿನ(ವಿಕೃತ ಕೆಟ್ಟುಹೋದ) ಬುದ್ಧಿಯುಳ್ಳವನ
ಅಸ್ವತಂತ್ರನೂ ಆದ ಯಾವ ಮಾನವನು, ಸರ್ವೇಶ್ವರನಾದ ನಿನ್ನ ನಾಮ-ರೂ
ಗುಣ-ಲೀಲಾದಿಗಳನ್ನು (ಸಾಕಲ್ಯೇನ ಪರಿಪೂರ್ಣವಾಗಿ) ನಿರೂಪಿಸಲು ಶಕ್ತನಾ
ವನು ? ಯಾರಿಗೂ ಶಕ್ಯವಿಲ್ಲ, ಎಂಬುದೇ ಅಭಿಪ್ರಾಯ - ಹೀಗಿದ್ದರೂ ನಿನ್ನನ್ನೆ
ನಂಬಿದ ನಿನ್ನ ಭಕ್ತರು ಮಾಡುವ ಅಲ್ಪ ಸ್ತುತಿಯಿಂದ. ನಿನ್ನ ಯಾವುದೇ ಗು
ವೊಂದನ್ನು ಉಚ್ಚರಿಸುವದರಿಂದ [ ನುಡಿಯುವದರಿಂದ ] ಭಕ್ತರು ಸಮರ್ಪಿಸು
ನೀರಿನಿಂದ [ಅಭಿಷೇಕ-ಇಲ್ಲವೆ ನಿನಗೆ ಕೊಡುವ ಪಾನೀಯದಿಂದ], ತುಳಸೀದ
ಹಾಗೂ ಎಳೆಗರಿಕೆ, [ದೂರ್ವಾ] ಗಳಿಂದ, ಇವೇ ಮುಂತಾದ ಸುಲಭ ಲಭ್ಯವಾ
ಪೂಜಾ ಸಾಮಗ್ರಿಗಳನ್ನು ಸ್ವೀಕರಿಸಿ ನೀನು ತುಂಬಾ ಸಂತುಷ್ಟನಾಗಿ ಅನುಗ್ರ
ಸುವೆ. ಅಜ್ಞಾನಿಗಳಾದ ಜನರು ಮಾಡುವ ಇಂಥ ಸ್ಥೂಲಪೂಜೆಯನ್ನು ನೀನ
ಸ್ವೀಕರಿಸುವದಕ್ಕೆ ನಿನ್ನ ಅಪಾರ ಕರುಣೆಯೆ ಕಾರಣ.

[ಅಥ]- ಪರಮಪುರುಷನಾದ ಶ್ರೀ ಹರಿಯೆ ! ವಸ್ತ್ರಾಲಂಕಾರ, ಭಕ್ಷ
ಭೋಜ್ಯಗಳ ಸಡಗರದಿಂದ ಮಾಡುವ ಇಂಥ ಪೂಜೆಗಳಲ್ಲಿಯೂ ನಿನ
ಸ್ವಂತದ [ ಸ್ವಹಿತದ ] ಯಾವುದೇ ಪ್ರಯೋಜನವಿರುವದನ್ನು ನಾವು ಕಾಣೆವ
ಭಗವಂತಾ ! ನೀನು ಪೂರ್ಣಕಾಮನಾದುದರಿಂದ [ಯಾವ ಅಪೇಕ್ಷೆಯೂ ಇ
ದಿರುವದರಿಂದ] ಸ್ಥೂಲ-ಸೂಕ್ಷ್ಮಗಳೆಂಬ ಎರಡೂ ಬಗೆಯ ಪೂಜೆಗಳಿಂದಲು
ನಿನಗೆ [ಸ್ವಂತದ] ಯಾವ ಪ್ರಯೋಜನವೂ ಇಲ್ಲ.

[ಆತ್ಮನಃ] ನಿನ್ನ ಸ್ವರೂಪದಿಂದ, [ಅವ್ಯತಿರೇಕಣ] ಬೇರೆಯಾಗದ, [ಅಭಿ
ನ್ನವಾದ], ಸ್ವರೂಪಾಭಿನ್ನವಾದ ರೂಪದಿಂದ, ದಿನದ ತ್ರಿಕಾಲದಲ್ಲಿ ಮಾಡುವ
ಸ್ಥೂಲಸೂಕ್ಷ್ಮಪೂಜಾರೂಪವಾದ ಯಜ್ಞಕ್ಕೆ ನೀನೆ ಭೋಕ್ತಾರನು [ಸ್ವೀಕರಿಸುವವನು
[ ಧರ್ಮಾರ್ಥ ಕಾಮಾದಿ ] ಸಕಲ ಪುರುಷಾರ್ಥಗಳ ಸಾರಸರ್ವಸ್ವನೂ ನೀನೆ
ಆಗಿರುವಿ. ಆದರೆ, ಪ್ರಭುವೇ ! ತಮಗೆ ಅಪೇಕ್ಷಿತವಾದ ವಸ್ತುಗಳನ್ನು [ಪುರು
ಷಾರ್ಥಗಳನ್ನು] ಆನಂದಾದಿಗಳನ್ನು ನಿನ್ನಿಂದ ಪಡೆಯಲು ಬಯಸುವವರಿಗೆ ಅವರು
ಮಾಡುವ ಎರಡು ಬಗೆಯ ಪೂಜೆಯು ನಿನ್ನ ಅನುಗ್ರಹವನ್ನು ಪಡೆಯಲು ಮಾತ್ರ

ಸಾಧನವಾಗುವದು. ಏಕೆಂದರೆ ಆನಂದಾದಿಗಳನ್ನು ಕೊಡಲು ನೀನು ಆನಂದ ಸ್ವರೂಪನೇ ಆಗಿರುವಿ. ನಿನಗೆ ಯಾವ ಪ್ರಯೋಜನವೂ ಇಲ್ಲದಿದ್ದರೆ, ಎರಡೂ ಬಗೆಯ ಪೂಜೆಗಳೂ ನಿರರ್ಥಕವಾಗುವದಿಲ್ಲವೆ ? ಎಂದು ಕೇಳಿದರೆ, – ವ್ಯರ್ಥವಾಗುವದಿಲ್ಲವೆಂಬುದೇ ಉತ್ತರವಾಗಿದೆ. ಏಕೆಂದರೆ, ತನಗೆ ಸ್ವಂತದ [ಸ್ವಾರ್ಥದ] ಪ್ರಯೋಜನವಿಲ್ಲದಿದ್ದರೂ, ಭಕ್ತಿಗೆ ಮೆಚ್ಚುವ ಭಗವಂತನು ಭಕ್ತಿಯ ನಿಮಿತ್ತದಿಂದ ಪೂಜೆಯನ್ನು ಸ್ವೀಕರಿಸದಿರಲಾರನು. ಆದುದರಿಂದ ಭಗವಂತನಿಗೆ ಮಾಡುವ ಎರಡೂ ಬಗೆಯ ಪೂಜೆಗಳು ವ್ಯರ್ಥ (ಫಲರಹಿತ) ವಾಗುವದಿಲ್ಲ.

(ಅಥ) – ಹೇ ನಾಥ !, ಪೂಜೆಯನ್ನು ಸ್ವೀಕರಿಸುವಲ್ಲಿ ನಿನಗೆ ಸ್ವಂತದ ಯಾವ ಪ್ರಯೋಜನವಿಲ್ಲವೆಂಬುದು ನಿಜ, ಹೀಗಿದ್ದರೂ ಪುರುಷಾರ್ಥಗಳ ಅಪೇಕ್ಷೆಯಿಂದ ನಿನಗೆ ಸಲ್ಲಿಸುವ ಪೂಜೆಯು, ನಿನ್ನ ಅನುಗ್ರಹವನ್ನು ಮಾತ್ರ ಪಡೆಯಲು ಒಂದು ಸಾಧನವಾಗುವದಷ್ಟೆ. ನೀನು ಮಾಡುವ ಅನುಗ್ರಹದಲ್ಲಿಯೂ ಒಂದು ವಿಶೇಷ ಸಂಗತಿ ಇದೆ. ಅದೆಂದರೆ, ಅನೇಕ ಪೂಜಾಸಾಮಗ್ರಿಗಳನ್ನು ಕಲೆಹಾಕಿಕೊಂಡು ಅಜ್ಞಾನಿಗಳು ಮಾಡುವ ಆರಾಧನೆಯಿಂದ ನಿನಗೆ ಅಷ್ಟೊಂದು ಹೆಚ್ಚಿನ ಸಂತೋಷವಾಗುವದಿಲ್ಲ, ಆದರೆ ಒಂದು ಕಾಸೂ ವೆಚ್ಚಮಾಡದೆ, ಅತಿ ಸುಲಭವಾಗಿ ಲಭಿಸುವ ನೀರು, ಚಿಗುರು, ತುಳಸೀದಲ, ಎಳೆಗರಿಕೆ ಮುಂತಾದ ಅತಿ ಸಾಮಾನ್ಯವಾದ ವಸ್ತುಗಳಿಂದ ಮಾಡುವ ಪೂಜೆ ನಿನಗೆ ಅದಕ್ಕಿಂತಲೂ ಅಧಿಕವಾದ ಸಂತೋಷವನ್ನು ಉಂಟುಮಾಡುವದು, ಹೀಗೆ ಹೇಳುವದು ವಿಪರೀತ, ವಸ್ತುಸ್ಥಿತಿಗೆ ವಿರುದ್ಧವೆನಿಸಬಹುದು. ಏಕೆಂದರೆ, ಹೆಚ್ಚು ಬೆಲೆ ತೆತ್ತು, ತುಂಬಾ ಶ್ರಮಬಟ್ಟು, ಬಹು ಜನರ ಮನಸ್ಸನ್ನು ಸೆಳೆಯುವಂತಿರುವ ಪೂಜಾದ್ರವ್ಯಗಳಿಂದ ಮಾಡುವ ಸಡಗರದ ಪೂಜೆಯಿಂದ, ನಿಜವಾಗಿ ನೋಡಿದರೆ, (ಸಾದಾ–ಸುಲಭ) ಅಗ್ಗದ ದ್ರವ್ಯಗಳಿಂದ ಮಾಡುವ ಪೂಜೆಗಿಂತಲೂ ನಿನಗೆ ಹೆಚ್ಚಿಗೆ ಸಂತೋಷವಾಗಬೇಕಲ್ಲವೆ ? ಎಂದು ಕೇಳಿದರೆ, ಸಾದಾ ಸರಳ ಪೂಜೆಯಿಂದ ಭಗವಂತನಿಗೆ ಅಧಿಕ ಆನಂದ ಉಂಟಾಗಲು ಕಾರಣವನ್ನು ಹೇಳುವರು :– ಬಹಳ ಬೆಲೆಯುಳ್ಳ ಬಹುಕಷ್ಟಸಾಧ್ಯವಾದ, ಬಹು ಜನರಿಗೆ ಆಕರ್ಷಕವಾದ ಪೂಜಾದ್ರವ್ಯಗಳಿಂದ ಮಾಡುವ ಪೂಜೆಯಲ್ಲಿ, ಅವುಗಳಿಗೆ ವಿಪರೀತ (ಭಿನ್ನ) ವಾಗಿರುವ (ತೀರಸುಲಭ ಸಾದಾ) ಪೂಜಾದ್ರವ್ಯಗಳಿಂದ ಮಾಡುವ ಪೂಜೆಯಲ್ಲಿ ನಿನಗೆ ಅಭಿಮತವಾಗಿರುವ ಸಾರಭೂತ ಹಾಗೂ ನಿನ್ನ ಉಪಭೋಗಕ್ಕೆ (ಸೇವನೆಗೆ) ಸಮುಚಿತವಾದ ಭೋಗ್ಯ ಪದಾರ್ಥವು ನಿನಗೆ ಹೇಗೆ ದೊರೆಯುವದೊ, ಅಂಥ ಸಮುಚಿತ ಭೋಗ್ಯ ಪದಾರ್ಥವು ಆಡಂಬರದ ಪೂಜೆಯಿಂದ ನಿನಗೆ ಲಭಿಸುವದಿಲ್ಲ.

ಭಗವಂತನ ಪೂಜೆಯನ್ನು ಮಾಡಿದ ನಂತರ, ಪೂಜೆಯದೇ ಒಂದು ಆವಶ್ಯಕ ಭಾಗವಾಗಿರುವ ಪ್ರಾರ್ಥನೆಯನ್ನೂ ಆತನಿಗೆ ಮಾಡಿಕೊಳ್ಳುವದು ಅ ತ್ಯವಾಗಿದೆ. (ಸ್ತವಲವಶಬ್ದ) -ಲೌಕಿಕ, ವೈದಿಕ ಮುಂತಾದ ಅನಂತ ಶಬ್ದಗ ಯೆಲ್ಲವೂ ಭಗವಂತನ ಸ್ತುತಿಯೆ ಆಗಿದೆ. ಭಗವಂತನು 'ಸರ್ವಶಬ್ದವಾಚ್ಯ'. ಅನಂತ ಶಬ್ದಗಳಿಂದ ಭಗವಂತನ ಸ್ತೋತ್ರವನ್ನು ಮಾಡುವದು ಅಲ್ಪಶಕ್ತಿ ಮಂದ ಬುದ್ಧಿಯ ಮಾನವರಿಗೆ ನೀಗಲಾರದ ವಿಷಯ. ಹೀಗಿರಲು, ಪೂಜೆಯ ಕೊನೆಗೆ, ಭಗವಂತನ ಸ್ತೋತ್ರವನ್ನು ಅಗತ್ಯವಾಗಿ ಮಾಡಲೇಬೇಕೆಂದು ಏ ವಿಧಿಸಲಾಗಿದೆ ? ಎಂಬ ಪ್ರಶ್ನೆಗೆ ಉತ್ತರವನ್ನು ಹೇಳುವರು. ನೀವು ಕೇಳುವದ ಸರಿಯೆ. ಅನಂತ ಶಬ್ದಗಳಿಂದ ಸ್ತೋತ್ರ ಮಾಡಲು ಸಾಧ್ಯವಿಲ್ಲವೆಂಬುದನ್ನು ಅರಿತ ಕೊಂಡೇ, -ಎಲ್ಲರಿಗೂ ಶಕ್ಯವಾದ ಸ್ತೋತ್ರದ ವಿಧಾನವನ್ನೇ ಇಲ್ಲಿ ನಾವು ಹೇ ರುವುದು, 'ಸ್ತವಲವ' -ಎಂದು. ಭಗವಂತನ ಮಹಿಮೆಯನ್ನು ನಿರೂಪಿಸು ಶಬ್ದವೇ (ಸ್ತವ) ಸ್ತುತಿಯಾಗಿದೆ. ಇಂಥ ಸ್ತೋತ್ರಕ್ಕೆ, ಮಾನವನು ತನ್ನ ಮನ ಬಯಕೆಯನ್ನು ಜೋಡಿಸಿದರೆ, ಅದರಲ್ಲಿ ಸೇರಿಸಿದರೆ, ಸ್ತೋತ್ರವು ಪ್ರಾರ್ಥನೆಯ ನಿಸುವದು. ಯಾಚಿಸುವವರಿಗೆ ಸಂತೋಷವನ್ನುಂಟು ಮಾಡುವ ಶಬ್ದವು (ಸಂ-ಸಂತೋಷಕರ) ಸ್ತುತಿಗೆ 'ಸಂಶಬ್ದ' ವೆನ್ನುವರು. ಇವೆರಡನ್ನೂ (ಸ್ತೋತ್ರ ಮತ್ತು-ಪ್ರಾರ್ಥನೆ) ನಾವು ನಮ್ಮ ಕಲ್ಪನೆಯಿಂದ ಮಾಡಿರುವದಿಲ್ಲ. ಪ್ರತಿಯೊ ಭಾಗವತ ಜನರು ಭಕ್ತಿ ಪೂರ್ವಕವಾಗಿ ಇವೆರಡನ್ನೂ ಭಿನ್ನವಾಗಿ ರಚಿಸಿರುವರು 'ಸ್ತೋತ್ರ' ಹಾಗೂ 'ಪ್ರಾರ್ಥನೆ'ಗೆ ಉದಾಹರಣೆಗೆ ಕೊಡುವರು.

('ಪರಿಜನ') -ಇಲ್ಲಿ ಕೊಟ್ಟಿರುವ ಸ್ತೋತ್ರದಲ್ಲಿ 'ಅರ್ಹಸಿ' ಎಂಬ ಶಬ ದಿಂದ ಪ್ರಾರಂಭಿಸಿ, 'ಅರ್ಹತಿ' ಎಂಬ ಶಬ್ದದವರೆಗೆ, ಭಗವನ್ಮಹಿಮೆಯನ್ನು ಹೊ ಳುವ ಭಾಗವು ಸ್ತೋತ್ರವೆಂದು ತೋರಿಸಲಾಗಿದೆ. -ಈಗ್ಗೆ 'ಪ್ರಾರ್ಥನೆ' ಯಾ ದೆಂಬುದನ್ನು ತೋರಿಸುವರು. (ಅಥ) ಅಥ ಶಬ್ದದಿಂದ ಹೇಳುವ ವಿಷಯವನ ಬದಲಿಸುವರು.....(ಕಥಂಚಿತ್)ಯಾವುದೇ ನಿಮಿತ್ತದಿಂದ ಎಡಹುವದು ಮುಂತಾ ಕಾರಣದಿಂದ ದುಃಖ(ಕ್ಲೇಶ)ಉಂಟಾದ ಸ್ಥಿತಿಯಲ್ಲಿ ಮರಣಕ್ಕೆಮುಂಚಿನ (ಮರಣ ಇನ್ನೂ ಆತಂಕ ಮಾಡದ) ಸ್ಥಿತಿಯಲ್ಲಿಯೂ ಕೂಡ, ಬೀಳುವದು ಜಾರುವುದು ಇ ಗಳಿಂದ ಉಂಟಾಗುವ ಕಷ್ಟದ ದೆಸೆಗಿಂತಲೂ, ಜ್ವರದಿಂದ ಉಂಟಾಗುವ ದುರ್ದ ಯಲ್ಲಿ ಮರೆವಿನ ಬಾಧೆಯು ಅಧಿಕವಾದುದು. ಅದಕ್ಕಿಂತಲೂ ಮರಣ ಸಮೀಪಿ ದಾಗ್ಗೆ ಮರೆವು ಇನ್ನೂ ಹೆಚ್ಚು. -ಇಂಥ ಸಮಯಗಳಲ್ಲಿ ಭಗವಂತನ ಮಂಗ ಕರವಾದ ಪಾದಕಮಲಗಳನ್ನು ಸ್ಮರಿಸುವದು ಮರೆತೇ ಹೋಗುವದು. ಭಗವ

ತನ ಪಾದಸ್ಮರಣೆ ಹೀಗೆ ಮರೆವಿಗೆ ಬಲಿಯಾಗಬಾರದೆಂಬ ಉದ್ದೇಶದಿಂದಲೆ, (ಭಗವಂತನ) ಗುಣಕೃತಿಗಳನ್ನು ವಿವರಿಸುವ (ದ್ಯೋತಕವಾಗಿರುವ) ಆತನ ನಾಮಗಳು (ವಿಸ್ಮರಣವನ್ನುಂಟುಮಾಡುವ) ಕ್ಲೇಶದ ಎಲ್ಲ ಸನ್ನಿವೇಶಗಳಲ್ಲಿ ನನ್ನ ನಾಲಿಗೆಯ ಮೇಲೆ ನಲಿದಾಡಲಿ. - ಇಂಥ ಅವಸ್ಥೆಗಳಲ್ಲಿ ಭಗವಂತನ ನಾಮ ಸ್ಮರಣೆ ಮಾಡುವವರಿಗೆ ಏನು ಲಾಭವಿದೆ ? ಎಂಬ ಪ್ರಶ್ನೆಗೆ ಉತ್ತರವನ್ನು ಹೇಳು ವರು.- ಎಡಹುವದು, ಮುಂತಾದ ನಿಮಿತ್ತಗಳಿಂದ ಉದ್ಭವಿಸುವ (ಒದಗುವ) ಎಲ್ಲ ದೋಷಗಳು, ಹಾಗೂ ಕಷ್ಟನಷ್ಟಗಳು, ಭಗವಂತನ ನಾಮ ಸ್ಮರಣೆಯಿಂದ ನಾಶವಾಗುವವು. ಇಷ್ಟು ಮಾತ್ರವಲ್ಲದೆ, ಈ ಸಂಸಾರದ ಜಂಜಾಟದಲ್ಲಿ ಒದಗುವ ಎಲ್ಲ ಕಷ್ಟ ಕ್ಲೇಶಗಳ ನಿವಾರಣೆಯೂ ನಾಮ ಸ್ಮರಣದಿಂದ ಆಗುವದು. ಹೀಗಾಗಲಿ, ಎಂದು ಬೇಡಿಕೊಳ್ಳುವದೇ ಪ್ರಾರ್ಥನೆ.- (ಈ ವಿಷಯದ ಬಗ್ಗೆ ಇದಕ್ಕೂ ಹೆಚ್ಚಿಗೆ ತಿಳಿಯಲಪೇಕ್ಷಿಸುವ ಸಜ್ಜನರು ಶ್ರೀ ವಿಷ್ಣುತೀರ್ಥರಿಂದಲೆ ಭಾಗವತದಲ್ಲಿ ಹೇಳಿದ್ದನ್ನು ಸಂಗ್ರಹಿಸಿ ರಚಿಸಿದ, ಸ್ತೋತ್ರ ಹಾಗೂ ಪ್ರಾರ್ಥನಾ ಪ್ರಕರಣಗಳನ್ನು ನೋಡಬೇಕು.

||೨೯೭|| **ನ ಭಜತಿ ಕುಮನೀಷಿಣಾಂ ಸ ಇಜ್ಯಾಂ**
**ಹರಿರಧನಾತ್ಮಧನಪ್ರಿಯೋ ರಸಜ್ಞಃ |**
**ಶ್ರುತಧನಕುಲಕರ್ಮಣಾಂ ಮದೈರ್ಯೇ**
**ವಿದಧತಿ ಪಾಪಮಕಿಂಚನೇಷು ಸತ್ಸು** || ೪-೩೧-೨೧

ನಾರದರು ಪ್ರಚೇತಸರಿಗೆ

ನಾರದರು ಪ್ರಚೇತಸರಿಗೆ ಮಾಡಿದ ಉಪದೇಶ :-

ಜ್ಞಾನಿಗಳು ಮಾಡುವ ಪೂಜೆಯನ್ನು ಸ್ವೀಕರಿಸುವಂತೆ, ಅಜ್ಞಾನಿಗಳು (ಭಾಗವತ ಧರ್ಮಗಳನ್ನು ಸರಿಯಾಗಿ ತಿಳಿಯದವರು) ಮಾಡುವ ಪೂಜೆಯನ್ನು ಭಗವಂತನು ಪೂರ್ಣವಾಗಿ ಸ್ವೀಕರಿಸುವದಿಲ್ಲ. (ಅಜ್ಞಾನಿಗಳು ಮಾಡುವ) ಪೂಜೆಯಿಂದ ಅತ್ಯಲ್ಪ (ಸಾರಭೂತ) ಭಾಗವನ್ನು ಮಾತ್ರ ಶ್ರೀಹರಿಯು ಹೇಗೋ ಕರುಣೆಯಿಂದ ಸ್ವೀಕರಿಸುವನು. ತಾನು ಸ್ವೀಕರಿಸುವ ಭಾಗಕ್ಕೆ ತಕ್ಕಂತೆ (ಅದಕ್ಕೆ ಅನುಗುಣವಾಗಿ) ಭಗವಂತನು ಅನುಗ್ರಹ ಮಾಡಿ ಹೇಗಾದರೂ ಪ್ರತಿ-ಫಲವನ್ನು ಕೊಡುವನು, ಎಂದು ಹೇಳಲಾಗಿದೆ. ಭಗವಂತನ ಕಿಂಚಿತ್ತಾದರೂ ಅನುಗ್ರಹ ಪಡೆದು ಅದರಿಂದ ಕಿಂಚಿತ್ತಾದರೂ ಅಭಿಷ್ಟವನ್ನು ದೊರಕಿಸಲು, ಮಾಡುವ ಪೂಜೆಯನ್ನು ಕೂಡ, ಮಾಡಲೇಬೇಕಾದ ರೀತಿಯನ್ನು (ಇತಿಕರ್ತವ್ಯತಾ) ಅನುಸರಿಸಿಯೆ ಮಾಡಬೇಕಾಗುವದು. ಅಂದರೇನೆ ಭಗವಂತನಿಂದ ಕಿಂಚಿತ್ ಅನುಗ್ರಹ ಹಾಗೂ ಅದರಿಂದ ಕಿಂಚಿತ್ ಅಭೀಷ್ಟಸಿದ್ಧಿಯಾದರೂ ಲಭಿಸುವದು. ಅಗತ್ಯ

ವಾದ ರೀತಿಯನ್ನು ಬಿಟ್ಟುಕೊಟ್ಟು ಮಾಡುವ ಪೂಜೆಯಿಂದ ಭಗವಂತನ ಕಿಂಚಿ ತ್ತಾದರೂ ಅನುಗ್ರಹ, ಕಿಂಚಿತ್ತಾದರೂ ಫಲಪ್ರಾಪ್ತಿಯಾಗುವದಿಲ್ಲ. ಅಷ್ಟೇ ಏಕೆ ಅಗತ್ಯವಾದ ಕ್ರಮವನ್ನು ಬಿಟ್ಟು ಮಾಡುವ ಅಂಥ ಪೂಜೆಯಿಂದ, ಅನರ್ಥಕಾ ಯಾದ ವಿಪರೀತ ಫಲವೇ ಸಂಭವಿಸುವದು. ಈ ಅಭಿಪ್ರಾಯದಿಂದ (ಇತಿಕತ ವ್ಯತಾ) ಅಗತ್ಯವಾಗಿ ಅನುಸರಿಸಲೇಬೇಕಾದ ಕ್ರಮ (ರೀತಿ)ವನ್ನು ಇಲ್ಲಿ ತೋರಿ ಕೊಡುವರು. (ನಭಜತಿ-ಎಂಬುದರಿಂದ).

**ಅರ್ಥ**:- ಲೌಕಿಕ ಧನಕನಕಾದಿ ಸಂಪತ್ತಿನಿಂದ ರಹಿತರಾದ (ಅಕಿಂಚ ರಾದ) ಸಜ್ಜನರಾದ (ಸಾತ್ವಿಕಸ್ವಭಾವವುಳ್ಳ) ಹಾಗೂ ಭಾಗವತ ಧರ್ಮಗಳನ ನಿಷ್ಠೆಯಿಂದ ಪಾಲಿಸುವ ಭಾಗವತರ ವಿಷಯದಲ್ಲಿ, -ತಮ್ಮ ಪಾಂಡಿತ್ಯ,ಸಂಪತ್ತು ಶ್ರೇಷ್ಠ ಕುಲದಲ್ಲಿ ಜನ್ಮ ಹಾಗೂ (ತೋರಿಕೆಯ) ಒಳ್ಳೇ ಕೃತಿಗಳು. ಇವೆಲ್ಲವು ಳಿಂದ ಉನ್ಮತ್ತರಾಗಿ, ಯಾರು [ ಭಾಗವತರ ವಿಷಯದಲ್ಲಿ ] ಅವಹೇಳ [ನಿಂದೆ, ಅಪಮಾನ] ಮುಂತಾದ ಪಾಪಕೃತಿಗಳನ್ನು ಮಾಡುವರೊ, ದುರ್ಬು ಯುಳ್ಳ ಅಂಥ ದುಷ್ಟ ಜನರು ಮಾಡುವ ಪೂಜೆಯನ್ನು ಶ್ರೀ ಹರಿಯು ಎಂದಿಗ ಸ್ವೀಕರಿಸುವದೇ ಇಲ್ಲ. ಅಂಥವರು ಮಾಡುವ ಪೂಜೆಯಯನ್ನೇ ಸ್ವೀಕರಿಸದಿದ್ದ ಶ್ರೀ ಹರಿಯು ಅವರಿಗೆ ಅನುಗ್ರಹ ಮಾಡುವ ಪ್ರಶ್ನೆಯೆ ಇಲ್ಲ. ಶ್ರೀ ಹರಿಯ ಅನುಗ್ರಹಿಸದಿದ್ದರೆ, ಜ್ಞಾನಭಕ್ತಿಗಳು ಹೇಗೆ ಲಭಿಸುವವು ? ಅವರಿಗೆ ಮು ದೊರೆಯುದಂತೂ ದೂರೋಪಾಸ್ತ ! [ ಅಶಕ್ಯವಾದುದು ] ಭಾಗವತ ಜನರನ ಅವಹೇಳನ ಮಾಡುವ ಉನ್ಮತ್ತ ಜನರು ಮಾಡುವ ಪೂಜೆಯನ್ನು ಶ್ರೀ ಹರಿಯ ಸ್ವೀಕರಿಸದಿರಲು ಕಾರಣವೇನು ? ಎಂಬ ಕೇಳಿದರೆ, ಅದಕ್ಕೆ ಕಾರಣವನ ಹೇಳುವರು :- ಲೌಕಿಕ ಧನಕನಕಗಳೆಂಬ ಬಾಹ್ಯಸಂಪತ್ತು ಇಲ್ಲದವರು [ಅ ರಿಂದ ರಹಿತರಾದವರು ] ಹಾಗೆಯೆ ಪರಮಾತ್ಮನನ್ನೇ ತಮ್ಮ ಸಂಪತ್ತೆಂ [ಸರ್ವಸ್ವವೆಂದು] ನಂಬಿದ [ ಅಕಿಂಚನರಾದ ], ಹಾಗೂ ಸಾಧು ಸ್ವಭಾ ಭಾಗವತ ಜನರು ಪರಮಾತ್ಮನಿಗೆ ಪ್ರೀತಿಪಾತ್ರರು. ತನ್ನ ಪ್ರೀತಿಪಾತ್ರರಾ ಭಕ್ತರಿಗೆ ಕೇಡನ್ನು [ ಅವಮಾನವನ್ನು ] ಮಾಡುವದು ತನಗೇನೆ ಅವಮಾ ದ್ವೇಷ ಮಾಡಿದಂತೆಂದು ಭಗವಂತನು ಭಾವಿಸುವನು. ಅಂತೆಯೆ ಭಾಗವತ ನಿಂದಕರಾದವರ ಪೂಜೆಯನ್ನು ಭಗವಂತನು ಸ್ವೀಕರಿಸುವದಿಲ್ಲ. ಇನ್ನೊಂ

ಪ್ರಶ್ನೆ :- ಸಿರಿವಂತರು ಬೆಲೆಯುಳ್ಳ ಪೂಜಾದ್ರವ್ಯಗಳಿಂದ ಮಾಡುವ ವೈಭವ ಪೂಜೆಯನ್ನು ಭಗವಂತನು ಏಕೆ ನಿರಾಕರಿಸುವನು ?-ಏಕೆ ತೆಗೆದುಕೊಳ್ಳುವದಿಲ್ಲ ಎಂದು ಕೇಳಿದರೆ, ಭಗವಂತನು 'ರಸಜ್ಞನು', ಎಂಬುದೆ ಉತ್ತರ. ತನಗೆ ಉ ಭೋಗ್ಯವಾದ ಸಾರವಾದುದನ್ನೇ [ಅಪ್ರಾಕೃತವಾದುದನ್ನೇ] ಭಗವಂತನು ಸ್ವೀ

ರಿಸುವವನು. ಕೇವಲ ಸಾರಭೋಕ್ತನಾದ ಭಗವಂತನಿಗೆ ಬೆಲೆಯುಳ್ಳ ಬಹಳ ಪೂಜಾ ಸಾಮಗ್ರಿಯಿಂದ ಏನು ಪ್ರಯೋಜನವಿದೆ ? ಆಡಂಬರದ ಅಂಥ ವಸ್ತುಗಳಲ್ಲಿ ಭಗವಂತನ ಉಪಭೋಗಕ್ಕೆ ಪಾತ್ರತೆಯುಳ್ಳದ್ದು ಯಾವದೂ ಇರುವ ದಿಲ್ಲ. ಹಾಗಾದರೆ, ಭಗವಂತನಿಗೆ ಗ್ರಾಹ್ಯವಾಗಿರುವ, ಪೂಜಾದ್ರವ್ಯಗಳಲ್ಲಿ ಸಾರಭೂತವಾದ ಅಂಥ ವಸ್ತು ಯಾವುದು ? ಎಂದರೆ, 'ಆತ್ಮಧನ' ವೆಂದು ಹೇಳುವರು.

ಪರಮಾತ್ಮನೆ ಭಾಗವತರಿಗೆ ಸಕಲ ಐಶ್ವರ್ಯ – ಸಾರಸರ್ವಸ್ವ - ಒಟ್ಟು ಅಭಿಪ್ರಾಯವೆಂದರೆ, – ಸೃಷ್ಟಿಯ ಪ್ರಾರಂಭದಲ್ಲಿ ಶ್ರೀ ಹರಿಯು [ ಪಶುಪಕ್ಷಿ ಕ್ರಿಮಿಕೀಟಕ] ಮುಂತಾದ ವಿವಿಧ ಶರೀರಗಳನ್ನು ನಿರ್ಮಿಸಿದರೂ, ಅವುಗಳಲ್ಲಿ ಯಾವ ಶರೀರದಿಂದಲೂ ಭಗವಂತನಿಗೆ ಸಂತೃಪ್ತಿಯಾಗಲಿಲ್ಲ; [ಕೊನೆಗೆ] ಆತನು ಮಾನವ ಶರೀರವನ್ನು ನಿರ್ಮಿಸಿದನು; ಮಾನವ ಶರೀರದಲ್ಲಿಯೂ [ಅವರವರ ಜೀವದ ಸ್ವರೂಪಕ್ಕೆ, ಪಾತ್ರತೆಗೆ ಅನುಗುಣವಾಗಿ, [ಸಾನ್ನಿಧ್ಯದ] ತಾರತಮ್ಯದಿಂದ ನೆಲೆಸಿದನು. ಪೂಜೆಯನ್ನು ಪಡೆಯಲು ಈ ಮಾನವ ಶರೀರವೇ ತನಗೆ ಸಮು ಚಿತವಾದ ಸ್ಥಾನ-ನೆಲೆ, ಅನ್ಯ ಪ್ರಕಾರದ ಶರೀರಗಳಿಗಿಂತಲೂ ಇದುವೆ ಶ್ರೇಷ್ಠ ವಾದುದು ಎಂದು ಸಂತುಷ್ಟನಾಗಿ, ಬ್ರಾಹ್ಮಣರೂಪ ಶರೀರಗಳಲ್ಲಿಯೆ ನೆಲಿಸಿ ಭಗವಂತನು ಪೂಜೆಯನ್ನು ಸ್ವೀಕರಿಸಿದನು. ಕೃತ ಯುಗದಲ್ಲಿ ಪರಮಾತ್ಮನು ಈ ರೀತಿಯಲ್ಲಿಯೆ ಪೂಜೆಯನ್ನು (ಬ್ರಾಹ್ಮಣರ ಶರೀರದಲ್ಲಿ ನೆಲೆಸಿ). ಸ್ವೀಕರಿಸಿದನು, ಆ ನಂತರದ ತ್ರೇತಾದಿ ಮುಂದಿನ ಯುಗಗಳಲ್ಲಿ ಮಾನವರೊಳಗೆ ಪರಸ್ಪರ (ಒಬ್ಬೊಬ್ಬರಲ್ಲಿ) ಮತ್ಸರ ಬುದ್ಧಿಯು ಉಂಟಾಯಿತು ಒಬ್ಬರನ್ನೊಬ್ಬರು ತಿರ ಸ್ಕರಿಸತೊಡಗಿದರು. ಬ್ರಾಹ್ಮಣರನ್ನೇ ಅಧಿಷ್ಠಾನ (ನೆಲೆಯಾಗಿ) ಮಾಡಿಕೊಂಡಿದ್ದ ಶ್ರೀಹರಿ ಪೂಜೆಯು ಲೋಪವಾಗಹತ್ತಿದ್ದನ್ನು ಜ್ಞಾನಿಗಳು ಕಂಡುಹಿಡಿದು, ಚರ ಮೂರ್ತಿಗಳಾದ ಬ್ರಾಹ್ಮಣರೆ ತನ್ನ ಪೂಜೆಗೆ ಅಧಿಷ್ಠಾನ (ನೆಲೆ)ಯೆಂದು ಶ್ರೀಹರಿಯು (ಈ ಮೊದಲು) ಗೊತ್ತು ಮಾಡಿದ್ದನ್ನು ಜನರಿಂದ ಬಿಡಿಸಿಬಿಟ್ಟು ಶಿಲಾ–ಲೋಹಾ ದಿಗಳಿಂದ ನಿರ್ಮಿತ ಪ್ರತಿಮೆ (ಮೂರ್ತಿ)ಗಳು ಶ್ರೀಹರಿಯ ಪೂಜೆಗೆ ಅಧಿಷ್ಠಾನ ವೆಂದು ಗೊತ್ತುಮಾಡಿದರು. ಅಸೂಯಾ-ಈರ್ಷೆ, ಇತ್ಯಾದಿ ದೋಷಗಳಿಂದ ಯುಕ್ತರಾದ ಜನರು ಆನಂತರದಲ್ಲಿ ಶ್ರೀಹರಿಗೆ ಅಧಿಷ್ಠಾನಗಳೆಂದು ಆತನ ಪ್ರತಿ ಮೆಗಳನ್ನೇ ಶ್ರದ್ಧಾ ಭಕ್ತಿಗಳಿಂದ ಪೂಜಿಸತೊಡಗಿದರು. ಮತ್ಸರಾದಿ ಪಿಶಾಚಿಗ ಗಳನ್ನು (ಮನೋವಿಕಾರಗಳನ್ನು) ಹೊಡೆದೋಡಿಸಬಲ್ಲ ಮಂತ್ರಗಳನ್ನು ಬಲ್ಲ ವರು, ಜಿತೇಂದ್ರಿಯರಾದ ಸುಜ್ಞಾನಿಗಳು ಭಗವಂತನೇ ತೋರಿಸಿಕೊಟ್ಟಿದ್ದ ಬ್ರಾಹ್ಮಣರೆಂಬ ಅಧಿಷ್ಠಾನಗಳಲ್ಲಿಯೇ (ಸದ್ವಿಪ್ರರೂಪದಲ್ಲಿಯೆ) ಶ್ರೀಹರಿಯನ್ನು

ಪೂಜಿಸುತ್ತ ಜನರಿಂದ ಆದರಣೀಯರಾಗಿರುವರು. ಶ್ರೀ ಹರಿಗೆ ಅಧಿಷ್ಠಾನಗಳೆನಿ
ಸಿದ ಬ್ರಾಹ್ಮಣರಲ್ಲಿ ಕೂಡ, ಭಾಗವತ ಧರ್ಮಗಳನ್ನು ನಿಷ್ಠೆಯಿಂದ ಆಚರಿಸುವ
ಬ್ರಾಹ್ಮಣರೇ ಶ್ರೇಷ್ಠರು. ಇಂದಿನ ಕಲಿಯುಗದಲ್ಲಿಯಂತೂ ಬ್ರಾಹ್ಮಣರೆಂದು
ಹೇಳಿಕೊಳ್ಳುವವರು ತೀರ ಅಧೋಗತಿಗೆ ಇಳಿದಿದ್ದಾರೆ. ಕಲಿಯುಗದ (ಬಹು
ಸಂಖ್ಯಾಕ) ಬ್ರಾಹ್ಮಣರು ತಾವು ಶ್ರೇಷ್ಠ ಕುಲದಲ್ಲಿ ಹುಟ್ಟಿದವರೆಂಬ ದುರಭಿಮಾ
ನದ ಪಿಶಾಚಿಯ ಕೈಯಲ್ಲಿ ಸಿಕ್ಕಿದ್ದಾರೆ. ಸಂಪತ್ತಿಯ ಸೊಕ್ಕು ಅವರ ತಲೆಗೇರಿದೆ
ತಾವು ಸದಾಚಾರಿಗಳೆಂಬ ಅಭಿಮಾನದ ಮದ್ಯವು ಅವರನ್ನು ಉನ್ಮತ್ತರನ್ನಾ
ಮಾಡಿದೆ. (ಶುಷ್ಕ) ಪಾಂಡಿತ್ಯ ಪ್ರದರ್ಶನ ಹಾಗೂ ವಾಚಾಳಿತನ (ಮಿತಿಯಿಲ್ಲ
ಅನವಶ್ಯಕ ಮಾತು) ಗಳಿಂದ ( ತಮ್ಮ ನೈಜ ಕರ್ತವ್ಯದ ) ನೆನಪೇ (ಪ್ರಜ್ಞೆಯೆ
ಅವರಲ್ಲಿ ಮಾಯವಾಗಿದೆ. (ಪರಲೋಕದಲ್ಲಿ) ಮುಂದೆ ತಮ್ಮ ಗತಿ ಯೇನಾ
ಬಹುದೆಂಬ ಪರಿವೆಯೇ ಅವರಿಗೆ ಇಲ್ಲದಂತಾಗಿದೆ. ತಾವು ಇಷ್ಟೊಂದು ಸ
ಹೀನರೂ, ದೋಷಯುಕ್ತರೂ ಆಗಿದ್ದರೂ ಕೂಡ, ಭಾಗವತ ಧರ್ಮಗಳಂ
(ಯಥಾಶಕ್ತಿ) ನಡೆಯುವ ( ಅಕಿಂಚನರಾದ ) ಹಾಗೂ ಅದರಿಂದ ಭಗವಂತ
ಅನುಗ್ರಹಕ್ಕೆ ಪಾತ್ರರಾಗಿರುವ ಸದ್ವಿಪ್ರರನ್ನು ಅವರು ತಿರಸ್ಕರಿಸುವರು. (ದಾ
ವರ್ಯರು ' ಉದರ ವೈರಾಗ್ಯವಿದು ' - ಎಂಬ ಕೀರ್ತನೆಯಲ್ಲಿ ವರ್ಣಿಸುವಂ
( ಬೆಳ್ಳಿ ಬಂಗಾರ ಪಾತ್ರೆ, ಧೂಪ ದೀಪ ಮುಂತಾದ ) ಪೂಜಾಸಾಮಗ್ರಿಗಳ ಪ್ರ
ರ್ಶನವನ್ನೇ ಅವರು ತಮ್ಮ ಪೂಜಾಕಾಲಕ್ಕೆ ಮಾಡುವರು. ಹೇಗಾದರೂ ಹೊ
ತುಂಬಿದರೆ ಸಾಕೆಂಬ ಮನೋವೃತ್ತಿಯುಳ್ಳ ಜನರ ಮನಸ್ಸನ್ನು ಸೂರೆಗೊ
ವರು. ಪ್ರತಿಮೆಗಳ ಎದುರು, ಗಂಟೆ ಮುಂತಾದ ವಾದ್ಯಗಳನ್ನು (ಆಕರ್ಷ
ವಾಗಿ) ಬಾರಿಸುವರು. ಇವೆಲ್ಲವುಗಳಿಂದ ಎಲ್ಲೆಡೆಗಳಲ್ಲಿ ತಮ್ಮ ಸ್ವಪ್ರತಿಷ್ಠೆಯನ
ಅವರು ಬೆಳೆಸಿಕೊಳ್ಳುವರು. ಭಾಗವತಶಾಸ್ತ್ರವನ್ನು ಓದುವಂತೆ ಹೊ
ತೋರಿಸುತ್ತಾರೆ, ಮನಸ್ಸಿನೊಳಗೆ ಮಾತ್ರ, ಮಾನ-ಧನಗಳನ್ನು ಪಡೆಯುವ ಎಣ
ಹಾಕುತ್ತಾರೆ-ಮನೋರಥಗಳನ್ನು ಕಟ್ಟುತ್ತಿರುತ್ತಾರೆ. ಸಂಪತ್ತಿನ ಮದವೇ
ಸಿರಿವಂತರಿಗೆ (ದ್ರವ್ಯದ ಲೋಭದಿಂದ) ಪುರಾಣಾದಿಗಳ ಶ್ರವಣ ಮಾಡಿಸುತ್ತಾ
ಮಾನ ಮರ್ಯಾದೆಗಳಿಗೆ ಸರ್ವದಾ ಹಪಾಪಿಸುವರು; ತಮ್ಮ ದೇವತಾಚ
ಯನ್ನು (ಅಸಗತ್ಯವಾಗಿ) ದೀರ್ಘಕಾಲ ಬೆಳೆಸುತ್ತಾರೆ- ಇವೆಲ್ಲ ದೋಷಗಳಿ
ತುಂಬಿದ ಕುಯೋಗಿಗಳಾದ ಬ್ರಾಹ್ಮಣರು ಮಾಡುವ ( ವಂಚನೆಯ-ಕೈತವ
ಪೂಜೆಯನ್ನು ಶ್ರೀ ಹರಿಯು ಎಂದಿಗೂ ಸ್ವೀಕರಿಸುವದಿಲ್ಲ. ಆದುದರಿಂದ, ಭ
ವತ ಧರ್ಮಗಳನ್ನು ನಿಷ್ಠೆಯಿಂದ ಆಚರಿಸುವ ಮಹಾತ್ಮರಿಗೆ - ತಿರಸ್ಕಾರ, ಅ
ರವಗಳನ್ನು ಮಾಡದಿರುವದೇ ಶ್ರೀ ಹರಿಪೂಜೆಯಲ್ಲಿ ಅಗತ್ಯವಾಗಿ ಅನುಸರಿಸ

ಕಾದ ಕ್ರಮ – ಇತಿ ಕರ್ತವ್ಯತಾ – ಆಗಿರುವದು. ಈ ಕ್ರಮದಿಂದ ಮಾಡುವ ಪೂಜೆಯನ್ನು ಭಗವಂತನು ಸ್ವೀಕರಿಸುವನು.

ಹೀಗೆ ಹೇಳುವರು :– 'ಪುರಾಣ್ಯನೇನ ...... ಹರೇಸ್ತನುಂ' [೭–೧೫–೩೮–೪೫]—ಮಾನವ, ಪಶುಪಕ್ಷಿ, ಋಷಿಗಳು, ದೇವತೆಗಳು – ಈ ರೂಪಗಳ ಶರೀರಗಳನ್ನು ಪರಮಾತ್ಮನು ನಿರ್ಮಿಸಿ, ಅವುಗಳಲ್ಲಿ ಅಂತರ್ಯಾಮಿಯಾದ ಪುರುಷ ರೂಪನಾಗಿ, ಜೀವರೂಪದಿಂದ ಆತನು ನೆಲೆಸಿರುವನು. ಇವೆಲ್ಲ ಶರೀರಗಳಲ್ಲಿ ಭಗವಂತನ ಅಧಿಷ್ಠಾನವು ತಾರತಮ್ಯದಿಂದ ಯುಕ್ತವಾಗಿದೆ. ಭಗವಂತನ ಅಧಿಷ್ಠಾನದ ತಾರತಮ್ಯವನ್ನು ಅರಿತುಕೊಂಡು, ಅದಕ್ಕನುಗುಣವಾಗಿ ತನ್ನ ಪೂಜೆಯನ್ನು ಸಲ್ಲಿಸುವವನೇ ಭಗವಂತನ ಅನುಗ್ರಹಕ್ಕೆ ಪಾತ್ರನಾಗುವನು. (ಕೃತ ಯುಗದ ನಂತರ ಮುಂದಿನ) ತ್ರೇತಾದಿಯುಗಗಳಲ್ಲಿ ಜನರು ಒಬ್ಬರನ್ನೊಬ್ಬರು ದ್ವೇಷಿಸುವದನ್ನು, ಅಸೂಯೆ ಪಡುವದನ್ನು, ಆದರಿಂದ ಅಂತರ್ಯಾಮಿಯಾದ ಪರಮಾತ್ಮನಿಗುಂಟಾಗುವ ಅಗೌರವವನ್ನು ಕಂಡು, ಪೂಜೆಯ ಕ್ರಿಯೆಗೆ (ಅನುಷ್ಠಾನಕ್ಕೆ) ಜ್ಞಾನಿಗಳಾದ ಕವಿಗಳು ಪರಮಾತ್ಮನ ಪ್ರತಿಮೆಗಳಿರಬೇಕೆಂದು ಗೊತ್ತುಪಡಿಸಿದರು. ಅಂದಿನಿಂದ, ಅನೇಕ ಜನರು ಭಗವಂತನ ಪ್ರತಿಮಾರೂಪಗಳನ್ನು, ಅನೇಕ ಪೂಜಾದ್ರವ್ಯಗಳಿಂದ ಶ್ರದ್ಧಾಪೂರ್ವಕ ಪೂಜಿಸುವರು. ॥ ಪರಮಾತ್ಮನಲ್ಲಿ ಭಕ್ತಿಯಿಲ್ಲದೆ, ಆತನ ದ್ವೇಷಿಗಳು ಮಾಡುವ ಪೂಜೆಯಿಂದ ಪುರುಷಾರ್ಥವು ಎಂದಿಗೂ ದೊರೆಯದು. ॥ ತನ್ನ ತಪಸ್ಸು, ವಿದ್ಯೆ, ಯದೃಚ್ಛಾ ಲಾಭದಿಂದ ಸಂತೃಪ್ತಿ, ಇವುಗಳಿಂದ ಶ್ರೀಹರಿಯ ಶರೀರರೂಪವಾದ ವೇದಕ್ಕೆ ಬ್ರಾಹ್ಮಣನು ಆಧಾರನು, ರಕ್ಷಕನು ಆಗಿರುವನು. ಆದುದರಿಂದ ಶರೀರಧಾರಿಗಳಾದ ಸಕಲ ಜೀವಿಗಳಲ್ಲಿ ಬ್ರಾಹ್ಮಣನೇ ಶ್ರೀ ಹರಿಯ ಅನುಗ್ರಹಕ್ಕೆ ಅಧಿಕವಾಗಿ ಪಾತ್ರನಾದವನು ॥ ಮತ್ತು "ಮಯ್ಯರ್ಪಿತಾತ್ಮನಃ ....... ಕರ್ಮಣಃ [೩–೩೦–೩೩] "ನ ಪಶ್ಯಾಮಿ ಪರಂಭೂತಮ್ ....ದರ್ಶನಾತ್ [೩–೩೦–೩೪] (ನನ್ನನ್ನು ಸರಿಯಾಗಿ ತಿಳಿದುಕೊಂಡು) ತನ್ನನ್ನು ನನಗೆ ಸಂಪೂರ್ಣವಾಗಿ ಸಮರ್ಪಣ ಮಾಡುವ ಹಾಗೂ ತಾನು ಮಾಡುವೆನೆಂಬ ಅಹಂಕಾರವನ್ನು ತೊರೆದು ತಾನು ಮಾಡುವ ಸಕಲ ಕರ್ಮಗಳನ್ನು ಫಲಾಪೇಕ್ಷೆಯಿಲ್ಲದೇ ನನಗೆ ಸಮರ್ಪಣ ಮಾಡುವ ಸಮದರ್ಶಿಯಾದ (ಸಕಲ ಪ್ರಾಣಿಗಳಲ್ಲಿ (ಬ್ರಹ್ಮನ) ಪರಮಾತ್ಮನ ಸಾನ್ನಿಧ್ಯವನ್ನು ಯಥಾವತ್ತಾಗಿ ಕಾಣುವ) ತತ್ವವೇತ್ತನಾದ ಬ್ರಾಹ್ಮಣನಿಗಿಂತಲೂ ಶ್ರೇಷ್ಠರಾದವರು ಅನ್ಯರು ಯಾರೂ ಇಲ್ಲ. [ಕಪಿಲದೇವರು ತಾಯಿಗೆ ಹೇಳಿದ ಮಾತು] ಮತ್ತು – 'ಅಹಂ ಸರ್ವೇಷು ಭೂತೇಷು...... ವಿಡಂಬನಂ' [೩–೩೦–೨೧] – ಸಕಲ ಜೀವಿಗಳಲ್ಲಿ ಅಂತರ್ನಿಯಾಮಕನಾಗಿ ಸರ್ವದಾ ನೆಲೆಸಿರುವ

ನನ್ನನ್ನು ಕಡೆಗಣಿಸಿ [ ಮರಣಾಧೀನನಾದ ] ಮಾನವನು ತನ್ನ ಪ್ರತೀಕವಾದ ಪ್ರತಿಮೆ [ಶಿಲಾದಿ ಮೂರ್ತಿಗಳಲ್ಲಿ] ಪೂಜೆಯ ವಿಡಂಬನೆಯನ್ನು [ ತೋರಿಕೆಯ ಪೂಜೆಯನ್ನು] ಮಾಡುವನು. ॥ ಮತ್ತು "ಯೋ ಮಾಂ .....ಜುಹೋತಿ ಸಃ" [೩-೩೦-೨೨] ಸಕಲ ಜೀವಿಗಳಲ್ಲಿಯೂ ಅಂತರ್ನಿಯಾಮಕ ಪ್ರಭುವಾಗಿ ಸಂತತ ವಾಗಿ [ಶಾಶ್ವತವಾಗಿ] ನೆಲೆಸಿರುವ ನನ್ನನ್ನು ಬಿಟ್ಟುಕೊಟ್ಟು, ಅಜ್ಞಾನದಿಂದ ನನ್ನ ಮೂರ್ತಿಯನ್ನು [ನನ್ನನ್ನು ಅದರಲ್ಲಿ ಅನುಸಂಧಾನಮಾಡದೆ] ಪೂಜಿಸುವ ಮಂದಮತಿಗಳು ಬೂದಿಯಲ್ಲಿ ಹೋಮ ಮಾಡಿದಂತೆಯೆ ಸರಿ. ॥"ಅಹಂ ಉಚ್ಚಾ ವಚ್ಛೈಃ......ಭೂತಗ್ರಾಮಾವ ಮಾನಿನಃ" [೩-೩೦-೨೪]

ಸಾಧು ಜೀವಿಗಳನ್ನು ಅನಾದರಿಸಿ, ಹೆಚ್ಚುಕಡಿಮೆ ಮಟ್ಟದ ಪೂಜಾದ್ರವ್ಯ ಗಳಿಂದ ಮಾಡುವ ನನ್ನ ಪ್ರತಿಮೆಗಳ ಪೂಜೆಯಿಂದ ನನಗೆ ಎನಿತೂ ಸಂತೋಷ ವಾಗುವದಿಲ್ಲ' ॥ ಮತ್ತು, 'ದುಷ್ಪ್ರಜ್ಞಾ ......ಅಸೂಯವಃ [೧೦-೯೧-೪೪] ನನ್ನ ಬಗ್ಗೆ ಸರಿಯಾದ ತಿಳುವಳಿಕೆಯಿಲ್ಲದ ಮೂಢಮತಿಗಳು ತಮಗಿಂತಲೂ ಸ್ವೋತ್ತಮರಾದವರನ್ನು, – ಯೋಗ್ಯತೆಯಲ್ಲಿ ಶ್ರೇಷ್ಠರಾದವರನ್ನು ಗೌರವಿಸದೆ ಹಾನಿಗೆ ಒಳಗಾಗುವರು. ॥–ಮತ್ತು – 'ತಸ್ಮಾದ್ ಬ್ರಹ್ಮ .... ಸುವಿಭೂತಿಭಿಃ' [೧೦–೯೧–೪೬] – [ಶ್ರೀ ಕೃಷ್ಣನ ವಚನವಿದು] – ಆದುದರಿಂದ ಬ್ರಹ್ಮನೆ, ಇಲ್ಲಿ ಸನ್ನಿಧರಾಗಿರುವ ಬ್ರಹ್ಮಜ್ಞಾನಿಗಳಾದ ಋಷಿಗಳನ್ನು ಶ್ರದ್ಧೆಯಿಂದ ಸತ್ಕರಿಸು. (ನನ್ನನ್ನು ಅನುಸಂಧಾನಮಾಡಿ, ನನ್ನ ಅಧಿಷ್ಠಾನವನ್ನು ಸಕಲ ಜೀವಿಗಳಲ್ಲಿ ಅರಿತು ಕೊಂಡು) ಈ ರೀತಿಯಲ್ಲಿ ಮಾಡುವ ಪೂಜೆಯನ್ನೇ ನಾನು ಸ್ವೀಕರಿಸುವೆನು, ಹೀಗೆ ಮಾಡದೆ, ಸ್ವೋತ್ತಮರಾದ ಬ್ರಹ್ಮಜ್ಞರನ್ನು ಅನಾದರಿಸುವ ಜನರು ಎಷ್ಟೇ ವೈಭವ ದಿಂದ ಮಾಡುವ ಪೂಜೆಯನ್ನು ನಾನೆಂದಿಗೂ ಸ್ವೀಕರಿಸುವದಿಲ್ಲ.

॥೨೯೮॥ **ಸ ವಾಗ್ವಿಸರ್ಗೋ ಜನತಾಘವಿಪ್ಲವೋ**
**ಯಸ್ಮಿನ್ ಪ್ರತಿಶ್ಲೋಕಮಬದ್ಧವತ್ಯಪಿ ।**
**ನಾಮಾನ್ಯನಂತಸ್ಯ ಯಶೋಽಂಕಿತಾನಿ ಯ-**
**ಚ್ಛೃಣ್ವಂತಿ ಗಾಯಂತಿ ಗೃಣಂತಿ ಸಾಧವಃ ॥** ೧-೫-೧೧

ನಾರದರು ವ್ಯಾಸರಿಗೆ

ಭಾಗವತ ಧರ್ಮಗಳನ್ನೇ ಮುಖ್ಯತಃ ಪ್ರತಿಪಾದಿಸುವ ಹಾಗೂ ಪಾಪ ನಾಶಕವಾದ ಶ್ರೀಮದ್ ಭಾಗವತ ಗ್ರಂಥವನ್ನು ರಚಿಸಲು, ಶ್ರೀ ವೇದವ್ಯಾಸರಿಗೆ ನಾರದರು ಬಿನ್ನವಿಸುವರು.

ಪೂಜೆಯೆಂಬ ಹೆಸರುಳ್ಳ ಇಜ್ಯಾ (೮), ಪ್ರಣಾಮವೆಂದು ಹೇಳಲ್ಪಡುವ 'ಅವನತಿ' (ಸಾಷ್ಟಾಂಗ ಪ್ರಣಾಮ) (೯) ಕೀರ್ತನ, (೧೦) ಶ್ರೀಹರಿ ಮಂದಿರವನ್ನು ಗುಡಿಸುವದು, ಅಥವಾ ಶ್ರೀಹರಿಯ ಪಾದ ಪ್ರಕ್ಷಾಲನ (ಅಭಿಷೇಕ) ಮುಂತಾದವು ಶ್ರೀಹರಿಸೇವೆ. (೧೧) ಶ್ರೀಹರಿಯ ಲೀಲಾ ಕೃತಿಗಳನ್ನು ಶ್ರದ್ಧೆಯಿಂದ ಕೇಳುವದೇ ಅಪೇಕ್ಷಿತ ಫಲವನ್ನು ಪಡೆಯಲು ಸಾಧನವಾಗಿರುವದರಿಂದ, ಮುಕ್ತಿಯನ್ನು ಬಯಸುವವರು ಅಂಥ ಶ್ರದ್ಧೆಯನ್ನು ಅಗತ್ಯವಾಗಿ ಹೊಂದಿರಬೇಕು. ಎಂಬ ಅಭಿಪ್ರಾಯದಿಂದ, (ಶ್ರವಣ ಮಾಡಬೇಕಾದ) ಭಾಗವತ ಶಾಸ್ತ್ರವು ಜನ್ಮಜನ್ಮಾಂತರಗಳಲ್ಲಿ ಮಾಡಿದ ಪಾಪವನ್ನೆಲ್ಲ ತೊಳೆದು, ಮನಸ್ಸಿನ ಮಾಲಿನ್ಯವನ್ನು ದೂರ ಮಾಡುವದು, - ಎಂಬುದನ್ನು ಇಲ್ಲಿ ತೋರಿಸುವರು.

**ಅರ್ಥ:-** ಪ್ರತಿ ಶ್ಲೋಕದಲ್ಲಿಯೂ ಅನುಚಿತ ಶಬ್ದಗಳಿರಬಹುದು. (ಶಬ್ದ ದೋಷದಂತೆ, ಛಂದಸ್ಸಿನ, ವ್ಯಾಕರಣ ದೋಷವೂ ಇರಬಹುದು. ಆದರೆ ಅಂಥ ಗ್ರಂಥದಲ್ಲಿ ಅನಂತನಾಮಕ ಶ್ರೀಹರಿಯ ಕೀರ್ತಿ-ಮಹಿಮೆಗಳನ್ನು ಒಣ್ಣಿಸುವ ಶ್ರೀಹರಿಯ ನಾಮಗಳು ತುಂಬಿದ್ದರೆ,- ಹಾಗಿರುವುದರಿಂದಲೆ, ಸಾಧು ಸ್ವಭಾವದ ಭಾಗವತರು (ಸಜ್ಜನರು) ಅದರಲ್ಲಿ ತುಂಬಿರುವ ಶ್ರೀಹರಿಯ ಲೀಲಾಕೃತಿಗಳನ್ನು (ಶ್ರದ್ಧೆಯಿಂದ) ಶ್ರವಣ ಮಾಡುವರು, ಗಾನ ಮಾಡುವರು, (ಅನ್ಯರಿಗೆ)ಹೇಳುವರು. ಶ್ರೀಹರಿಯ ನಾಮಗಳಿಂದ, ಆತನ ಲೀಲಾಕೃತಿಗಳ ವರ್ಣನೆಯಿಂದ ಯುಕ್ತವಾದ ಗ್ರಂಥವೇ ಸಚ್ಛಾಸ್ತ್ರ (ಶುದ್ಧಶಾಸ್ತ್ರ) ವೆಂದು ಹೊಗಳಲ್ಪಡುತ್ತದೆ. ' ಕುಪಥಂ ತಂ ವಿಜಾನೀಯಾತ್ ಗೋವಿಂದ ರಹಿತಾಗಮಮ್ '- ಎಂದು ಹೇಳಿರುವರು. ಇಂಥ ಸದ್ಗ್ರಂಥವೇ ಶ್ರದ್ಧೆಯಿಂದ ಅದನ್ನು ಕೇಳುವ ಜನರ ಪಾಪವನ್ನು ಬೇರೊರಿಸಿ ಕಿತ್ತಿ ಹಾಕುವದು, ನಿರ್ಮಲ ಮಾಡುವದು. ಆದುದರಿಂದ ಅಂಥ ವರಿಷ್ಠ ಶಾಸ್ತ್ರದಲ್ಲಿಯೆ ಅಚಲವಾದ ಶ್ರದ್ಧೆಯನ್ನಿಡಬೇಕು.

||೨೯|| **ಯತ್ರೋತ್ತಮಶ್ಲೋಕಗುಣಾನುವಾದಃ** ಶುಕರು
**ಸಂಗೀಯತೇಽಭೀಕ್ಷ್ಣಮಮಂಗಲಘ್ನಃ |** ಭಾಗವತ ಮ
**ತಮೇವ ನಿತ್ಯಂ ಶೃಣುಯಾದಭೀಕ್ಷ್ಣಂ**
**ಕೃಷ್ಣೇಽಮಲಾಂ ಭಕ್ತಿಮಭೀಪ್ಸಮಾನಃ ||** ೧೨-೩-೧೫

ಭಗವಂತನಲ್ಲಿ ಭಕ್ತಿಯನ್ನು ಹುಟ್ಟಿಸಿ ಅದನ್ನು ದೃಢಗೊಳಿಸಲು, ಉತ್ತಮವಾದ ಸಾಧನವಾಗಿರುವದರಿಂದಲೂ, ಭಾಗವತ ಶಾಸ್ತ್ರದಲ್ಲಿ ಶ್ರದ್ಧೆಯನ್ನು ತಾಳುವದು ಅಗತ್ಯವಾಗಿದೆ. ಈ ವಿಚಾರದಿಂದ ಭಾಗವತ ಶಾಸ್ತ್ರವು ಹೇಗೆ ಭಕ್ತಿಜನಕವಾಗಿದೆ- ಎಂಬುದನ್ನು ತೋರಿಸುವರು.

**ಅರ್ಥ:-** ಯಾವ ಶಬ್ದಸೃಷ್ಟಿಯಲ್ಲಿ, (ವಾಗ್ವಿಸರ್ಗದಲ್ಲಿ) ಶಬ್ದಗಳಿಂದ ರಚಿತವಾದ ಗ್ರಂಥದಲ್ಲಿ, ಅತ್ಯಂತ ಮಂಗಳಕರವಾದ ಕೀರ್ತಿಯುಳ್ಳ ಭಗವಂತನ ಗುಣ ಹಾಗೂ ಲೀಲಾಕೃತಿಗಳ ವರ್ಣನೆಯು ಮತ್ತೆ ಮತ್ತೆ ಕಂಡುಬರುವದೋ, ಅಂಥ ಶಬ್ದ ಪ್ರಬಂಧವನ್ನೇ (ಗ್ರಂಥರೂಪ ಶಾಸ್ತ್ರವನ್ನೇ) ಬಿಟ್ಟುಬಿಡದೆ, ಮತ್ತೆ ಮತ್ತೆ, ಶ್ರೀಕೃಷ್ಣನಲ್ಲಿ ನಿರ್ಮಲ (ನಿರ್ದೋಷ), ಕಾಮಾದಿ ರಹಿತವಾದ, ನಿಶ್ಚಲವಾದ ಭಕ್ತಿಯುಂಟಾಗಬೇಕೆಂದು ಬಯಸುವವನು ಶ್ರವಣ ಮಾಡಬೇಕು. (ಶ್ರವಣ ಮಾಡತಕ್ಕದ್ದು). ಏಕೆಂದರೆ, ಅಂಥ ಗ್ರಂಥದ ಶ್ರವಣ-ಪಠಣಗಳಿಂದಲೆ ಅಹಿತಕಾರಿಯಾದ ದೋಷಗಳು, ಪಾಪಗಳು ಅಳಿದುಹೋಗುವವು.

ಶ್ರೀಶುಕರು ಶ್ರೀಮದ್ ಭಾಗವತದ ಮಹಿಮೆಯನ್ನು ಹೇಳುತ್ತಾರೆ.

॥೩೦೦॥ **ಯತ್ರೋತ್ತಮಶ್ಲೋಕಗುಣಾನುವಾದಃ**
**ಪ್ರಸ್ತೂಯತೇ ಗ್ರಾಮ್ಯಕಥಾವಿಘಾತಃ ।**
**ನಿಷೇವ್ಯಮಾಣೋಽನುದಿನಂ ಮುಮುಕ್ಷೋ-**
**ರ್ಮತಿಂ ಸತೀಂ ಯಚ್ಛತಿ ವಾಸುದೇವೇ ॥** ೫-೧೨-೧೩

ಜಡಭರತನು ರಹೂಗಣರಾಜನಿಗೆ ಮಾಡಿದ ಉಪದೇಶ:-

(ಮುಮುಕ್ಷುಗಳಾದ ಸಾಧಕರಿಗೆ) ಭಾಗವತ ಶಾಸ್ತ್ರವು ಪರಮಾತ್ಮನ ಬಿಂಬಜ್ಞಾನ ಮಾಡಿಕೊಡಲೂ ಸಾಧನವಾಗಿರುವದು. ಆ ಕಾರಣದಿಂದಲೂ ಭಾಗವತ ಶಾಸ್ತ್ರದಲ್ಲಿ ನಿಶ್ಚಲ ಶ್ರದ್ಧೆಯನ್ನಿಡುವದು ಅಗತ್ಯವಾಗಿದೆ, ಎಂಬುದನ್ನು ತೋರಿಸಿದೆ.

**ಅರ್ಥ:-** (ಮನೆ-ಮಡದಿ ಮುಂತಾದವುಗಳಿಗೆ ಸಂಬಂಧಿಸಿದ ಲೌಕಿಕ ಹಾಳು ಹರಟೆಯಿಂದ ಮನಸ್ಸನ್ನು (ಪರಾವರ್ತಿಸಿ) ತಿರುಗಿಸಿ, ಮಂಗಳ ಕೀರ್ತಿಯುಳ್ಳ ಭಗವಂತನ ಲೀಲಾಕೃತಿಗಳನ್ನು ಕೇಳುವದರಲ್ಲಿ, ಹೇಳುವದರಲ್ಲಿ, ಭಾಗವತ ಶಾಸ್ತ್ರವು ನಮ್ಮ ಮನಸ್ಸನ್ನು ತೊಡಗಿಸುವದು, (ಅವುಗಳತ್ತ) ಮನಸ್ಸು ಹರಿಯುವಂತೆ, ಆವುಗಳಲ್ಲಿ ತಲ್ಲೀನವಾಗುವಂತೆ ಮಾಡುವದು. ಅಂಥ ಭಾಗವತ ಶಾಸ್ತ್ರವನ್ನು ಆಶ್ರಯಿಸುವದರಿಂದ ದಿನದಿನವೂ (ಶ್ರದ್ಧೆಯಿಂದ ಶ್ರವಣ ಪಠಣ ಮಾಡುವದರಿಂದ) ಮೋಕ್ಷಾಪೇಕ್ಷಿಗಳಾದ ಸಾಧಕರಿಗೆ ಭಗವಂತನಲ್ಲಿ ಶುದ್ಧವಾದ (ಕಾಮಾದಿ ದೋಷಗಳಿಂದ ರಹಿತವಾದ) ಬುದ್ಧಿಯು (ಭಾವನೆಯು) ಉಂಟಾಗುವದು.

(೧) 'ಸತೀಮ್ಮತಿ' -ಯೆಂದರೆ, ಭಕ್ತಿಯೆಂಬ ಮಸೆಗಲ್ಲಿನ ಮೇಲೆ ಚೆನ್ನಾಗಿ ತಿಕ್ಕಿ ಹರಿತವಾದ ಬುದ್ಧಿ, ಸದ್ಭಕ್ತಿಯಿಂದ ಕೂಡಿದ ಬುದ್ಧಿ- ಕೊಡುವದು ಎಂದರೆ,

ಭಕ್ತಿಯಿಂದ ಹರಿತ (ಸೂಕ್ಷ್ಮ)ವಾಗಿ ಮಾಡಿದ ಸೂಕ್ಷ್ಮ ಜ್ಞಾನವನ್ನು, ಬಿಂಬನೆಂದು ಹೇಳಲ್ಪಡುವ ವಾಸುದೇವ ನಾಮಕನಾದ ಶ್ರೀಹರಿಯ ವಿಷಯದಲ್ಲಿ ಕೊಡುವದು. ಸಾಧಕನಿಗೆ ಸ್ವಯೋಗ್ಯವಾದ ಜ್ಞಾನವನ್ನು ಕೊಟ್ಟು, ವಾಸುದೇವನ ಬಿಂಬಾ ಪರೋಕ್ಷಕ್ಕೆ ( ಸಾಕ್ಷಾತ್ಕಾರಕ್ಕೆ ) ಸಾಧನವಾದ ದೃಢ ಭಕ್ತಿಯನ್ನು ಹುಟ್ಟಿಸುವದು.

||೩೦೧|| **ಮೃಷಾಗಿರಸ್ತಾ ಹ್ಯಸತೀರಸತ್ಕಥಾ**
**ನ ಕಥ್ಯತೇ ಯದ್ಭಗವಾನಧೋಕ್ಷಜಃ ।**
**ತದೇವ ಸತ್ಯಂ ತದುಹೈವ ಮಂಗಲಂ**
**ತದೇವ ಪುಣ್ಯಂ ಭಗವದ್ಗುಣೋದಯಂ ॥** ೧೨-೧೨-೪೮

ಸೂತರು ಭಾಗವತ ಮಹಿಮೆ

ಸೂತರು ಶ್ರೀಮದ್ ಭಾಗವತದ ಮಹಿಮೆಯನ್ನು ಹೇಳುತ್ತಾರೆ.

**ಅರ್ಥ:–** ಷಡ್ಗುಣೈಶ್ವರ್ಯ ಪರಿಪೂರ್ಣನು. ಸಕಲ ಇಂದ್ರಿಯಗಳಿಗೆ ನಿಯಾಮಕನು, ಮಂಗಳಕರ ಸ್ತೋತ್ರಕ್ಕೆ ಪಾತ್ರನಾದವನು, ಆಗಿರುವ ಶ್ರೀಹರಿಯ ಲೀಲಾಕೃತಿಗಳನ್ನು ವರ್ಣಿಸದಿರುವ ಮಾತುಗಳೆಲ್ಲ (ಶಬ್ದಗಳೆಲ್ಲ) ಅಸತ್ಯ–ನಿರರ್ಥಕವಾದವು. ಅಸಾಧು (ದುಷ್ಟ)ವಾದವು ಅವೆಲ್ಲವು ನಿಷ್ಪ್ರಯೋಜಕವಾದ ಹಾಳು ಹರಟೆಗಳು, ಪರಮಪಾವನ ಚರಿತನಾದ ಶ್ರೀ ಹರಿಯ ಗುಣಗಳನ್ನು ಲೀಲಾಕೃತಿಗಳನ್ನು ವರ್ಣಿಸುವ ನುಡಿಯೆ ಸತ್ಯ (ಸಾರ್ಥಕ) ವಾದುದು, ಅದುವೇ ಮಂಗಳ (ಕಲ್ಯಾಣ) ಕರವಾದುದು, ಅದುವೇ, (ಅಂಥ ನುಡಿಯೆ)ಭಗವಂತನ ಗುಣಗಳಬಗ್ಗೆ ತಿಳುವಳಿಕೆ (ಜ್ಞಾನ) ಯನ್ನು ಉಂಟು ಮಾಡಿಕೊಡುವದು, ಅದುವೆ ಪುಣ್ಯಪ್ರದವಾದುದು, ಮೋಕ್ಷಾದಿ ಪುರುಷಾರ್ಥಕ್ಕೆ ಸಾಧನವಾದ ಶಬ್ದವೇ ಸತ್ಯಶಬ್ದ.

||೩೦೨|| **ತದೇವ ಪುಣ್ಯಂ ರುಚಿರಂ ನವಂ ನವಂ**
**ತದೇವ ಶಶ್ವನ್ಮನಸೋ ಮಹೋತ್ಸವಂ ।**
**ತದೇವ ಶೋಕಾರ್ಣವಶೋಷಣಂ ನೃಣಾಂ**
**ಯತ್ರೋತ್ತಮಶ್ಲೋಕಯಶೋಽನುಗೀಯತೇ ॥** ೧೨-೧೨-೪೯

ಶುಕರು

49

**ಅರ್ಥ :–** ಭಗವಂತನ ಮಹಿಮಾಪ್ರತಿಪಾದಕವಾದ ಶಬ್ದವೇ ಪುಣ್ಯಪ್ರದವಾದುದು, ಕಿವಿಗೆ ಇಂಪಾದುದು, ( ಶ್ರುತಿ ಮನೋಹರವಾದುದು ); ಅದು ನಿತ್ಯನೂತನವಾದುದು. ಕೇಳಿದಂತೆಲ್ಲ ಹೊಸಹೊಸ ಜ್ಞಾನವನ್ನು ಮನಸ್ಸಿನಲ್ಲಿ ತಂದು ಕೊಡುವದು. ಅಂಥ ಶಬ್ದವೇ ಮಹೋತ್ಸವ ( ಹಬ್ಬ ) ದಂತೆ, ಕೇಳುವವರ ಮನಸ್ಸಿಗೆ ನಿರಂತರವೂ ಆನಂದದಾಯಕವಾದುದು, ಮಾನವರಿಗೆ ಒದಗುವ ದುಃಖ

ಸಾಗರವನ್ನೇ ಬತ್ತಿಸಿ ಬಿಡುವದು (ಸಕಲ ದುಃಖಗಳನ್ನು ನಿವಾರಿಸುವದು). (ಶ್ರದ್ಧಾ-೧೨)

ಭಗವನ್ಮಹಿಮಾ ಪ್ರತಿಪಾದಕವಾದ ಸಚ್ಛಾಸ್ತ್ರದ ಶ್ರವಣ-ಮನನಾದಿಗಳನ್ನು ತುಂಬಾ ಶ್ರದ್ಧೆಗಳಿಂದ ಮಾಡಿದರೆ, ಜ್ಞಾನವನ್ನುಂಟು ಮಾಡಿ ಪುರುಷಾರ್ಥದ ಪ್ರಾಪ್ತಿಗೆ ಅದು ಸಾಧನವಾಗುವದು. ಅಂಥ ಶ್ರದ್ಧೆಯು ಕೇವಲ ಜ್ಞಾನಪ್ರಾಪ್ತಿಗೆ ಸಾಧನವಾಗಿಲ್ಲ, ಜ್ಞಾನದ ಮುಖಾಂತರ (ಜ್ಞಾನಬಲದಿಂದ) ಮೋಕ್ಷಪ್ರಾಪ್ತಿಗೂ ಅದು ಸಾಧನವಾಗಿದೆ. ಆದುದರಿಂದ ಭಾಗವತ ಶಾಸ್ತ್ರದಲ್ಲಿ ದೃಢವಾದ ಶ್ರದ್ಧೆಯನ್ನು ವಹಿಸುವದು (ಇಡುವದು) ಅಗತ್ಯವಾದ ಕಾರ್ಯವಾಗಿದೆ ಶ್ರದ್ಧೆಯಿಂದ ಮಾಡುವ ಭಾಗವತ ಶಾಸ್ತ್ರದ ಶ್ರವಣವು ಮುಕ್ತಿಪ್ರದವಾಗಿದೆ ಎಂಬುದನ್ನು (ಇವೆರಡು) ಶ್ಲೋಕಗಳಲ್ಲಿ ತೋರಿಸಿರುವರು. ಇಲ್ಲಿ ಹೇಳಿರುವದು ಶಾಸ್ತ್ರ ಪ್ರಸಿದ್ಧವಾದು, ಸತ್ಯವಾದುದು, ಎಂಬುದು 'ಹ' ಎಂಬುದರಿಂದ ಸೂಚಿತವಾಗಿದೆ.

॥೩೦೩॥ **ಯಸ್ಯಾಂ ನ ಮೇ ಪಾವನಮಂಗ ಕರ್ಮ** ಶ್ರೀಕೃಷ್ಣ ಉದ್ಧವನಿಗೆ
**ಸ್ಥಿತ್ಯುದ್ಭವಪ್ರಾಣನಿರೋಧಮಸ್ಯ ।**
**ಲೀಲಾವತಾರೇ ಹಿತಕರ್ಮ ವಾ ಸ್ಯಾ-**
**ದ್ವಂಧ್ಯಾಂ ಗಿರಂ ತಾಂ ಬಿಭೃಯಾನ್ನ ಧೀರಃ** ॥ ೧೧-೧೧-೨೦

ಶ್ರೀ ಕೃಷ್ಣನು ಉದ್ಧವನಿಗೆ ಹೇಳಿದ ಮಾತು.-

ಶ್ರೀ ಹರಿ ಮಹಿಮಾ ಪ್ರತಿಪಾದಕವಾದ ಭಾಗವತ ಶಾಸ್ತ್ರದಲ್ಲಿ ಅಚಲವಾದ ಶ್ರದ್ಧೆಯನ್ನು ಅಗತ್ಯವಾಗಿ ತಾಳಬೇಕೆಂದು ಹೇಳಿ, ಈಗ್ಗೆ-'ಗೋವಿಂದ ರಹಿತಾಗಮ ವನ್ನು, ಶ್ರೀ ಹರಿಮಹಿಮೆ ಹಾಗೂ ಶ್ರೀ ಹರಿಯ ಗುಣ, ಲೀಲಾಕೃತಿಗಳನ್ನು ನಿವೇದಿಸದ (ವರ್ಣಿಸದ), ಅಂತೆಯೆ ದುಃಶಾಸ್ತ್ರವಾಗಿರುವದನ್ನು ದೂಷಿಸುವರು (ಹಳಿಯುವರು).

**ಅರ್ಥ** :- ಹೇ ಅಂಗ ! ವತ್ಸಾ, ಉದ್ಧವಾ ! ವಿಶ್ವದ ನಿರ್ಮಾಣ, ರಕ್ಷ[illegible] ಹಾಗೂ (ಪಕ್ವ ಕಾಲದಲ್ಲಿ), ಅದರ ನಾಶ, ನಾನು ಈ ದೂರು ಬಗೆಯ ಕಾಯ[illegible] ವನ್ನು ಅದರಂತೆಯೆ, ನನ್ನ ಲೀಲಾ (ಕ್ರೀಡಾ) ರೂಪವಾದ ನನ್ನ ಅಸಂಖ್ಯ ಅ[illegible] ತಾರಗಳಲ್ಲಿ (ದುಷ್ಟರನ್ನು ದಂಡಿಸುವದು, ಸಜ್ಜನರನ್ನು, ಧರ್ಮವನ್ನು ರಕ್ಷಿ[illegible] ಸುವದು) ನನ್ನ ಮಹಿಮಾ ಪ್ರತಿಪಾದಕವಾದ ಇವುಗಳನ್ನೆಲ್ಲ ವರ್ಣಿಸದಿರು[illegible] ನಿರೂಪಿಸದಿರುವ ಶಬ್ದಸಮೂಹ, ಆಡುವ ಮಾತು ಬಂಜೆ ನುಡಿ, ಯಾವ ಪು[illegible] ಷಾರ್ಥದ ಫಲವನ್ನೂ ಕೊಡಲಾರದ ವ್ಯರ್ಥವಾದ ನುಡಿ. ಜ್ಞಾನಿ (ಧೀರನ[illegible]

ಯಾಡವನು ಇಂಥ ನಿರರ್ಥಕ ಮಾತನ್ನು ಎಂದಿಗೂ ಆದರಿಸನು. ಆದರಿಸುವ ದಿಲ್ಲವೇಕೆ ? ಎಂದು ಕೇಳಿದರೆ, ಅಂಥ ನಿರರ್ಥಕ ಮಾತು ಮುಕ್ತಿರೂಪವಾದ ಪುರುಷಾರ್ಥದ ಪ್ರಾಪ್ತಿಗೆ ಎಂದಿಗೂ ಸಾಧನವಾಗಲಾರದು' (ಅದು ಸಂತಾನದ ಭಾಗ್ಯವಿಲ್ಲದ ಬಂಜೆ ಹೆಣ್ಣುಮಗಳಂತಿರುವದು.) ಆದರಿಂದ, ಭಾಗವತಕ್ಕೆ ವಿರುದ್ಧ ವಾದುದು, ಅಂಥ ಮಾತು ( ಕೇಳುವದು ಹಾಗೊ ಹೇಳುವದು ) ಪುರುಷಾರ್ಥ ಪ್ರಾಪ್ತಿಗೆ ಸಹಾಯಕವಾಗದು. ಅಂಥ ಮಾತು ತ್ಯಾಜ್ಯವಾದುದೆಂಬ ಹೇಯ ಭಾವನೆಯಿಂದ ಅದನ್ನು ಸರ್ವಥಾ ಬಿಟ್ಟುಕೊಡತಕ್ಕದ್ದು,

||೩೦೪|| **ಗಾಂ ದುಗ್ಧದೋಹಾಮಸತೀಂ ಚ ಭಾರ್ಯಾಂ**
**ದೇಹಂ ಪರಾಧೀನಮಸತ್ಪ್ರಜಾಂ ಚ |**
**ವಿತ್ತಂ ತ್ವತೀರ್ಥೀಕೃತಮಂಗ ವಾಚಂ**
**ಹೀನಾಂ ಮಯಾ ರಕ್ಷತಿ ದುಃಖದುಃಖೀ ||** ೧೧-೧೧.೧೯

ಪರಮಪುರುಷಾರ್ಥ ಪ್ರಾಪ್ತಿಗೆ ಸಾಧನವಾಗಿರುವದಿಲ್ಲವೆಂಬುದೊಂದೇ ಕಾರಣಕ್ಕಾಗಿ ಗೋವಿಂದರಹಿತಾಗಮವನ್ನು (ಶ್ರೀ ಹರಿಯ ಮಹಿಮಾದಿಗಳನ್ನು ನಿವೇದಿಸದ ದುಃಶಾಸ್ತ್ರವನ್ನು) ತ್ಯಜಿಸಬೇಕೆಂದಲ್ಲ, ಭಾಗವತ ಧರ್ಮಗಳನ್ನು ನಿರೂಪಿಸದ 'ಅಭಾಗವತ ಶಾಸ್ತ್ರ'ವು ಬಹಳ ದುಃಖಗಳಿಗೆ ಕಾರಣವಾಗಿರುವದೆಂಬ ಕಾರಣಕ್ಕಾಗಿಯೂ ಅದನ್ನು ತ್ಯಜಿಸಲೇಬೇಕು.

**ಅರ್ಥ :–** ತನ್ನ (ಕೆಚ್ಚಲಿನ) ಹಾಲನ್ನೆಲ್ಲ ಇನ್ನೊಬ್ಬರ ಮನೆಯಲ್ಲಿದ್ದಾಗ್ಗೆ ವಿಪುಲವಾಗಿ ಕೊಡುತ್ತಿದ್ದು, ಅದೇ ಹಸುವನ್ನು ಕೊಂಡು ತನ್ನ ಮನೆಗೆ ತಂದವ ನಿಗೆ ಹಸಿ ಹಾಲನ್ನೂ ಹಿಂಡದಿರುವ ಆಕಳು, ಸ್ವೇಚ್ಛಾಚಾರಿಯೂ, ಪತಿಗೆ ದುಷ್ಟ ಕರ್ಕಶ ಮಾತುಗಳನ್ನಾಡುವ ಮಡದಿ, ಮುಗದಾಣ ಹಾಕಿದ ಎತ್ತಿನಂತೆ, ಇನ್ನೊ ಬ್ಬರ ಅಧೀನವಾಗಿ, ಅವರು ಹೇಳುವ ಕೆಲಸವನ್ನು ಅನವರತ ಮಾಡುತ್ತಿರುವ ಎತ್ತಿನಂತೆ ಪರಾಧೀನವಾಗಿರುವ ಶರೀರ; ಅಂಥ ಶರೀರವು (ಬಾಳುವೆಯು) ಸ್ವಾಭಿ ಮಾನ ರಹಿತವಾದುದುದು, ತನಗೆ ಹಿತವಾದುದನ್ನು ಮಾಡಲು ಅಸಮರ್ಥವಾ ದುದು – ಇಂಥ ಶರೀರವು; ತಂದೆತಾಯಿಗಳ ಆಕಾಂಕ್ಷೆ–ಆದರ್ಶಗಳಂತೆ ನಡೆಯದ (ತಂದೆ ತಾಯಿಗಳ ನೆರಳನ್ನು ಹಿಂಬಾಲಿಸದ) ದುಷ್ಟರಾದ ಮಕ್ಕಳು ಪರಿವಾರ ಮುಂತಾದವರು, ತೀರ್ಥಯಾತ್ರೆಗಳಿಗಾಗಿ, (ಪುಣ್ಯಪ್ರದವಾದ ಲೋಕ ಕಲ್ಯಾಣದ ಕಾರ್ಯಗಳಿಗಾಗಿ) ವಿನಿಯೋಗಿಸದ (ವೆಚ್ಚಮಾಡದಿರುವ), ಅಂತೆಯೆ ಅಪವಿತ್ರ ವಾದ ಸಂಪತ್ತು; ನನ್ನ ( ಭಗವಂತನ ) ಮಹಿಮೆ ಹಾಗೂ ಲೋಕಕಲ್ಯಾಣದ

ಲೀಲಾಕೃತಿಗಳನ್ನು ಹೊಗಳದ ವಾಕ್‌ಶಕ್ತಿ (ಮಾತು) -ಹೇ ವತ್ಸ! (ಉದ್ಧವಾ !) ಇವೆಲ್ಲವುಗಳನ್ನೂ (ಭಾಗವತ ಧರ್ಮದಂತೆ ನಡೆಯದ) ಮಾನವನು ಬಹಳೇ ಕಷ್ಟ ನಷ್ಟಗಳನ್ನು ಅನುಭವಿಸುತ್ತಲಿ ರಕ್ಷಿಸುತ್ತಿರುವದು. ಅವುಗಳಿಂದ ಮುಂದೆ ಸುಖ ದೊರೆತೀತೆಂಬ ಭ್ರಮೆಯಿಂದ, ಅವುಗಳನ್ನು ಕಾಪಾಡಿಕೊಳ್ಳುವದರಲ್ಲಿಯೆ ಅತೀವ ಕಷ್ಟ-ದುಃಖಗಳಿಗೆ ಒಳಗಾಗುವನು, ಮುಂದೆ ಬರುವ ಕಾಲದಲ್ಲಿಯೂ ಇವುಗಳಿಂದ ಸುಖಲೇಶವು ದೊರೆಯುವದೆಂಬುದನ್ನು ಹಿಂದೆ ಹೇಳಿದ್ದಾರೆ.

ಹೀಗೆ ಹೇಳಿರುವರು :- "ಶಬ್ದಬ್ರಹ್ಮಣಿ ನಿಷ್ಣಾತಃ.... ಧೇನುಮಿವ ರಕ್ಷತಃ" ವೇದ ಶಾಸ್ತ್ರಗಳನ್ನೆಲ್ಲ ಆತ್ಮಸಾತ್ ಮಾಡಿಕೊಂಡಿದ್ದರೂ, ಪರಮಾತ್ಮನಲ್ಲಿ ವಿಶುದ್ಧವಾದ ಶ್ರದ್ಧೆ ಇಲ್ಲದಿದ್ದರೆ, ಹಿಂಡದ ಆಕಳನ್ನು ಹಾಲು ಕೊಡಬಹುದೆಂಬ ಭ್ರಾಂತಿಯಿಂದ ಸಾಕುವವನಂತೆಯೆ, ಆತನು ಮಾಡುವ ವೇದಗಳ ಪಠಣ-ರಕ್ಷಣಗಳು ನಿರರ್ಥಕವಾದವು." (೧೧-೧೧-೧೮)

**||೩೦೫|| ನ ಯದ್ವಚಶ್ಚಿತ್ರಪದಂ ಹರೇರ್ಯಶೋ**
**ಜಗತ್ಪವಿತ್ರಂ ಯದಿ ಕರ್ಹಿಚಿದ್ವದೇತ್ |**
**ತದ್ಧ್ವಾಂಕ್ಷತೀರ್ಥಂ ನ ತು ಹಂಸಸೇವಿತಂ**
**ಯತ್ರಾಚ್ಯುತಸ್ತತ್ರ ಹಿ ಸಾಧವೋಽಮಲಾಃ || ೧೨.೧೨-೫೦**

ಗೋವಿಂದ ರಹಿತಾಗಮವನ್ನು( ಶ್ರೀ ಹರಿಯ ಮಹಿಮಾದಿಗಳನ್ನು ನಿರೂಪಿಸದ ಅಭಾಗವತ ಶಾಸ್ತ್ರವನ್ನು ಶುದ್ಧ ಮನಸ್ಸುಳ್ಳ (ಕಾಮ ಕ್ರೋಧಾದಿ ದೋಷಗಳಿಲ್ಲ ಮನಸ್ಸುಳ್ಳ) ಭಾಗವತರು ಬಹಿಷ್ಕರಿಸುವರೆಂಬ ಕಾರಣದಿಂದಲೂ, ಅದನ್ನು ಬಿಟ್ಟು ಕೊಡತಕ್ಕದ್ದು. ಎಂಬ ಅಭಿಪ್ರಾಯದಿಂದ ಹೇಳುವರು (ಸೂತರು ಹೇಳಿದುದು)

**ಅರ್ಥ** :- (ಗ್ರಂಥದ) ಭಾಷೆಯಲ್ಲಿ ಶಬ್ದಗಳ ಚಮತ್ಕೃತಿ, ಅಲಂಕಾರಗ ಸೊಬಗು ತುಂಬಿರಬಹುದು, ಆದರೆ ಜಗತ್ತನ್ನೇ ಪಾವನಗೊಳಿಸುವ ಶ್ರೀ ಹರಿ ಮಹಿಮಾದಿಗಳು ಆ ಗ್ರಂಥದ ಆದಿ-ಮಧ್ಯ-ಇಲ್ಲವೆ ಕೊನೆಯಲ್ಲಿ, ಗ್ರಂಥದ ಯಾ ಭಾಗದಲ್ಲಿಯಾದರೂ ನಿರೂಪಿತವಾಗಿರದಿದ್ದರೆ (ಹೇಳಿರದಿದ್ದರೆ), ಅಂಥ ಶಾಸ್ತ್ರ ಪಾವಿತ್ರ್ಯವಿಲ್ಲದ ಒಂದು ತೀರ್ಥ (ಯಾತ್ರಾ ಕ್ಷೇತ್ರವಿದ್ದಂತೆ). ಸಾಧು ಸ್ವಭಾ ಭಗವದ್ಭಕ್ತರು ಪಾವನವಾಗಿರದ ಅಂಥ ಕ್ಷೇತ್ರವನ್ನು ಆಶ್ರಯಿಸುವದಿಲ್ಲ, ಅನ್ ಮನೋದೋಷಗಳಿಂದ, "ಚಿತ್ತಶುದ್ಧಿಯಿಲ್ಲ"ದಮಾನವರೆ (ಧ್ವಾಂತ) ಅಂಥ ಕ್ಷೇ (ಶಾಸ್ತ್ರ) ವನ್ನು ಸೇವಿಸಲು ಯೋಗ್ಯರು. ಚಿತ್ತಶುದ್ಧಿ, ಚಿತ್ತನಿಗ್ರಹವಿದ್ದ (ಹಂಸ

ಸಜ್ಜನರು ಅಂಥ ತೀರ್ಥ (ಶಾಸ್ತ್ರ) ವನ್ನು (ಅಭಾಗವತ ಶಾಸ್ತ್ರವನ್ನು) ಎಂದಿಗೂ ಸೇವಿಸುವದಿಲ್ಲ. (ಪರಮ ಹಂಸರು) ಪರಮ ಭಾಗವತರು ಅಚ್ಯುತನ ಮಹಿಮಾದಿಗಳನ್ನು ಪ್ರತಿಪಾದಿಸುವ ಶಾಸ್ತ್ರವನ್ನೇ ಮಾತ್ರ ಸೇವಿಸುವರು (ಆತ್ಮ ಸಾತ್ ಮಾಡಿಕೊಳ್ಳುವರು) ಸಜ್ಜನರು ಅಂಥ ಗ್ರಂಥವನ್ನೇ ಆದರಿಸುವರು. ಕೊಳಚೆ ನೀರಿನಲ್ಲಿ ಕಾಗೆಗಳು ನಲಿಯುವವು, ಹಂಸಪಕ್ಷಿಗಳಲ್ಲ. ಶಾಸ್ತ್ರವೆಂಬು ದಕ್ಕೆ ಪ್ರತಿಪಾದ್ಯವಾದ ವಿಷಯ, ಆ ಶಾಸ್ತ್ರದಿಂದ ಒದಗುವ ಪ್ರಯೋಜನ ಇರಲೆ ಬೇಕು. ಶ್ರೀ ಹರಿಯೆ ಪ್ರತಿಪಾದ್ಯ ವಿಷಯನಾಗಿರದಿದ್ದರೆ, ಮೋಕ್ಷರೂಪ ಪ್ರಯೋಜನ (ಲಾಭ) ವೇ ಅದರಿಂದ ದೊರೆಯದಂತಿದ್ದರೆ, ಅದು ಸಚ್ಛಾಸ್ತ್ರ ವೆನಿಸದು.

'ಹಂಸ, ಪರಮಹಂಸ'ವೆಂಬ ಶಬ್ದಗಳನ್ನು ಭಾಗವತ ಗ್ರಂಥದಲ್ಲಿ (ಹಾಗೂ ಸಾಮಾನ್ಯವಾಗಿ) ಸರ್ವಸಂಗ ಪರಿತ್ಯಾಗ ಮಾಡಿದ ಸನ್ಯಾಸಿಗಳು, ಪರಿವ್ರಾಜಕರು ಎಂಬ ಅರ್ಥದಲ್ಲಿ ಬಳಸುವದುಂಟು. ಈ ಗ್ರಂಥದಲ್ಲಿ ಹಾಗೂ ಭಾಗವತದಲ್ಲಿ ಬರುವ ಹಂಸ. ಪರಮಹಂಸಗಳೆಂಬ ಶಬ್ದಕ್ಕೆ ಸನ್ಯಾಸಿಗಳೆಂಬುದ್ದೊಂದೇ ಅರ್ಥ ವಾಗಿಲ್ಲ ಇಲ್ಲಿ ಹಂಸ-ಪರಮ ಹಂಸರೆಂದರೆ, ಚಿತ್ತಶುದ್ಧಿ, ಚಿತ್ತನಿಗ್ರಹವುಳ್ಳವರು ಎಂಬುದೇ ಅರ್ಥವಾಗಿದೆ. ಹಂಸ-ರೆಂದರೆ, ಸನ್ಯಾಸಿಗಳೇ ಎಂದು ಅರ್ಥಮಾಡಿ ದರೆ, ಪರಮ ಭಾಗವತರಾದ ಜನಕಾದಿರಾಜರು, ಋಷಿಗಳು, ಗೃಹಸ್ಥರು, ಬ್ರಹ್ಮ ಚಾರಿಗಳು ಭಾಗವತ ಶಾಸ್ತ್ರಕ್ಕೆ ಎರವಾಗಬೇಕಾದೀತು. ಅನರ್ಹರಾಗಬೇಕಾ ದೀತು. ಅಂತೆಯೆ, ಹಂಸ-ಪರಮ ಹಂಸರೆಂದರೆ, ಚಿತ್ತಶುದ್ಧಿ, ಚಿತ್ತನಿಗ್ರಹವುಳ್ಳ ವರೆಂತಲೇ ಭಾವಿಸಬೇಕು. ಸನ್ಯಾಸಿಗಳೆಂದು ಗುರುತಿಸುವ ಶಬ್ದವಿರುವಾಗ್ಗೆ ಮಾತ್ರ ಹಂಸರೆಂದರೆ, ಸನ್ಯಾಸಿಗಳೆಂದು ತಿಳಿಯಬೇಕು. ಈ ಶ್ಲೋಕದಲ್ಲಿ 'ಹಂಸಾ' ಎಂದಿಷ್ಟೇ ಹೇಳಬಹುದಿತ್ತು. ಆದರೆ, ಹಾಗೆ ಹೇಳದೆ, 'ಸಾಧವಃ ಅಮಲಾಃ' ವಿಮಲ ಮನಸ್ಸಿನ ಸಜ್ಜನರು'-ಎಂದು ಹೇಳಿರುವದು ಇದೇ ಅಭಿಪ್ರಾಯದಿಂದಲೇ.

||೩೦೬|| **ನ ಯದ್ವಚಶ್ಚಿತ್ರಪದಂ ಹರೇರ್ಯಶೋ** ನಾರದರು
**ಜಗತ್ಪವಿತ್ರಂ ನ ಗೃಣೀತ ಕರ್ಹಿಚಿತ್ ।** ವ್ಯಾಸರಿಗೆ
**ತದ್ವಾಯಸಂ ತೀರ್ಥಮುಶಂತಿ ಮಾನಸಾ**
**ನ ಯತ್ರ ಹಂಸಾ ನ್ಯಪತನ್ನಿಮುಂಕ್ಷಯಾ** ॥ ೧-೫-೧೦

ಶ್ರೀ ವೇದವ್ಯಾಸರಿಗೆ ನಾರದರು ಹೇಳಿರುವರು.

ಭಗವನ್ಮಹಿಮೆಯನ್ನು ನಿರೂಪಿಸದ (ಅಸಾಧುವಾದ-ಅನಾದರಣೀಯವಾದ) ಅಭಾಗವತ ಶಾಸ್ತ್ರವನ್ನು, ಅದರಿಂದ ಯಾವ ಒಳ್ಳೇ ಪ್ರಯೋಜನವು ಇಲ್ಲವೆಂತಲೂ

ಅಷ್ಟು ಮಾತ್ರವಲ್ಲದೆ ಅಂಥ ಅಸತ್ ಶಾಸ್ತ್ರದಿಂದ ಬಹಳ ದುಃಖವೇ ಉಂಟಾಗುವ ದೆಂದು, ವಿವೇಕಿಗಳಾದ ವಿದ್ವಾಂಸರು ಅದನ್ನು ಪೂರ್ಣವಾಗಿ ಬಿಟ್ಟುಕೊಟ್ಟಿರು ವರು, ಹೀಗಿದ್ದರೂ, ಅಂಥ ಕುಶಾಸ್ತ್ರವನ್ನು ಅನೇಕರು ಅಭ್ಯಾಸ ಮಾಡುವರು, ಅನೇಕರಿಗೆ ಅದನ್ನೇ ಅಧ್ಯಯನವನ್ನು ಮಾಡಿಸುವರು. ಅವರು ಹೀಗೆ ಮಾಡುವ ಕಾರಣವೇನು ? ಯಾವ ಆಕಾಂಕ್ಷೆಯಿಂದ ಮಾಡುವರು ? ಎಂಬ ಪ್ರಶ್ನೆಗೆ ಉತ್ತರ ಹೇಳುವರು :- ಅಂಥ ನಿಂದ್ಯವಾದ ಶಾಸ್ತ್ರವನ್ನು ಪಠಿಸುವ ಕೆಲವರಿಗೆ ತಾವು ಅಪೇಕ್ಷಿಸುವ ಪುರುಷಾರ್ಥಗಳು ಮುಂದೆ ಪರಲೋಕದಲ್ಲಿ ದೊರೆಯುವ ದೆಂಬ ಭ್ರಾಂತಿಯಿರುವದು. ಇನ್ನು ಕೆಲವರಿಗೆ, ಅಂತಿಮ (ಶ್ರೇಷ್ಠ) ಪುರುಷಾರ್ಥ ವಾದ ಮೋಕ್ಷದ ವಿಚಾರವೇ ಇರುವದಿಲ್ಲ. ಇಂದ್ರಿಯಗಳನ್ನು ತೃಪ್ತಿಗೊಳಿಸುವ ವಿಷಯಗಳನ್ನೇ ಅವರು ಎಲ್ಲಕ್ಕೂ ಹೆಚ್ಚಾಗಿ ಬಯಸುವರು, ತ್ಯಾಜ್ಯವಾದ ಅಂಥ ಶಾಸ್ತ್ರದ ಸಹಾಯದಿಂದ ವಿಷಯ ಸುಖಗಳು ದೊರೆಯುವವೆಂಬ ಉದ್ದೇಶದಿಂದ ತಾವೇ ಪಂಡಿತರೆಂದು ತಿಳಿದುಕೊಂಡವರು ಅಂಥ ಕುಶಾಸ್ತ್ರವನ್ನು ತಾವೂ ಅಭ್ಯಾಸ ಮಾಡುವರು, ಉಳಿದವರಿಂದಲೂ ಅಭ್ಯಾಸ ಮಾಡಿಸುವರು.

**ಅರ್ಥ** :- ಗ್ರಂಥದ ಭಾಷೆಯು ಶಬ್ದಾರ್ಥಗಳ ಚಮತ್ಕೃತಿಗಳಿಂದ ಮನ ಸ್ಸನ್ನು ಸೆಳೆಯುವಂತಿರಬಹುದು. ಆದರೆ ಅಂಥ ಮನೋಹರ ಶೈಲಿಯಿಂದ ಕೂಡಿ ದ್ದರೂ, ಆ ಗ್ರಂಥದಲ್ಲಿ (ಆದಿ-ಮಧ್ಯ-ಅಂತ್ಯದಲ್ಲಿ) ಜಗತ್ತನ್ನೇ ಪಾವನಗೊಳಿಸುವ ಶ್ರೀ ಹರಿಯ ಮಂಗಳಕರವಾದ ಯಶೋಗಾನವು (ಲೀಲಾಕೃತಿಗಳ ನಿರೂಪಣೆಯು. ಗ್ರಂಥದಲ್ಲಿ ಎಲ್ಲಿಯೂ ಇರದಿದ್ದರೆ, ಅಂಥ ಗ್ರಂಥವು ( ಭಗವಂತನ ಅನುಗ್ರಹಕ್ಕೆ ಸಾಧನವಾಗುವ ) ಸಚ್ಛಾಸ್ತ್ರವು ಎಂದಿಗೂ ಆಗಲಾರದು. ಚಿತ್ತಶುದ್ಧಿ-ಚಿತ್ತ ನಿಗ್ರಹವುಳ್ಳ (ಮಾನಸಾಃ) ಸಾಧು ಸ್ವಭಾವದ ಭಾಗವತರು, ಶ್ರವಣ, ಪಠಣಾದಿ ಗಳ ರೂಪವಾದ ಸ್ನಾನವನ್ನು ಮಾಡಬೇಕೆಂಬ ಅಪೇಕ್ಷೆಯಿಂದ ಅಂಥ ಕುಶಾಸ್ತ್ರ ರೂಪವಾದ ಸರೋವರದಲ್ಲಿ ಎಂದಿಗೂ ಕಾಲಿಡುವದಿಲ್ಲ. ( ಅಂಥ ಶಾಸ್ತ್ರವನ್ನು ಯಾವ ರೀತಿಯಲ್ಲಿಯೂ ಸ್ವೀಕರಿಸುವದಿಲ್ಲ ). ಹೀಗಿದ್ದರೂ ಇಹಪರತ್ರಗಳಲ್ಲಿ ಸುಖ ಲಭಿಸುವದೆಂಬ (ಕೇವಲ) ಭ್ರಾಂತಿಯಿಂದ, ಗ್ರಂಥದ ಮನೋಹರ ಭಾಷೆಗೆ ಮರುಳಾಗಿ, ಅಂಥ ಹೀನಗ್ರಂಥಗಳ ಪಠಣ-ಪಾಠಗಳನ್ನು ಕೆಲವರು ಮಾಡುವರು. ಹೀಗೆ ಮಾಡುವವರು 'ಮಾನಸ'ರಲ್ಲ, ಚಿತ್ತಶುದ್ಧಿಯುಳ್ಳ ಜಿತೇಂದ್ರಿಯರಾದ ಭಾಗವತರಲ್ಲ. ಅವರು ಸೇವಿಸುವ (ಶಾಸ್ತ್ರರೂಪವಾದ) ತೀರ್ಥವು (ಸರೋವ ರವು) ಕಾಗೆಗಳಿಗೆ ಮೆಚ್ಚಿಗೆಯಾದ ಕೊಳಚೆ ನೀರಿನ ಜಲಾಶಯದಂತೆ, ರಾಜ ಹಂಸಗಳು ಪ್ರೀತಿಸುವ ದಿವ್ಯವಾದ ಮಾನಸ ಸರೋವರವಲ್ಲ. ಅಂಥ ಗ್ರಂಥದ

ಭಾಷೆ ಆಲಂಕಾರಿಕ, ಆಕರ್ಷಕವಾಗಿರಬಹು. ಇದುವರೆಗೆ ಯಾರೂ ಕೇಳಿರದ ಹೊಸ ಅರ್ಥವನ್ನು ಹೇಳುತ್ತಿರಬಹುದು. ಆದರೆ ಶ್ರೀ ಹರಿಯ ಗುಣಗಾನವನ್ನೇ ಮಾಡದಿರುವ ( ಎಷ್ಟೇ ಮನೋಹರವಾಗಿದ್ದರೂ ) ಭಾಷೆಯು ಭಾಷೆ (ವಚಃ) ಯೆಂಬ ಹೆಸರಿಗೆ ಪಾತ್ರವಾಗದು, ಶಾಸ್ತ್ರವಂತೂ ಸುತರಾಂ (ಎಂದಿಗೂ) ಆಗದು. ಗ್ರಂಥಕ್ಕೆ (ತ್ರಿಕಾಲಾಬಾಧಿತ) ಸತ್ಯವಸ್ತು (ವಿಷಯ) ವಿದ್ದರೇನೆ ಅದು ಶಾಸ್ತ್ರ ವೆನಿಸುವದು. ಚಿತ್ತಶುದ್ಧಿಯಿಲ್ಲದ, ಅನೇಕ ಮನೋದೋಷಗಳಿಂದ ತುಂಬಿದ ಜನರೇ-ಧ್ವಾಂತರು-ದುರ್ಜನರು. ಅಂಥ ದುರ್ಜನರು ಮಾತ್ರ ಈ ಬಗೆಯ ಕು-ಶಾಸ್ತ್ರದಲ್ಲಿ ಆಸಕ್ತರಾಗುವರು, ಜ್ಞಾನಿಗಳು ಅದರ ಗೊಡವೆಗೆ ಹೋಗುವದಿಲ್ಲ. (ಅಭಾಗವತ ಶಾಸ್ತ್ರನಿಂದಾ-೨೩)

॥೩೦೭॥ ಜರಾಯುಜಂ ಸ್ವೇದಜಮಂಡಜೋದ್ಭವಂ
ಚರಾಚರಂ ದೇವರ್ಷಿಪಿತೃಭೂತಭೇದಂ ।
ದ್ಯೌಃ ಖಂ ಕ್ಷಿತಿಃ ಶೈಲಸರಿತ್ಸಮುದ್ರ-
ದ್ವೀಪಗ್ರಹರ್ಕ್ಷೇತ್ಯಭಿಧೇಯ ಏಕಃ ॥ ೫-೧೮-೩೨

ಈಗ್ಗೆ 'ಮೌನ' ರೂಪವಾದ ಭಾಗವತ ಧರ್ಮವನ್ನು ಇಲ್ಲಿ ಹೇಳುವರು. ಮೌನ (ಮಾತನಾಡದಿರುವದು), ಮೌನವೆಂದರೆ, ಪೂರ್ಣವಾಗಿ ಮಾತನಾಡುವ ದನ್ನೇ ಬಿಟ್ಟುಬಿಡುವದು, ಎಂಬ ಅರ್ಥವಲ್ಲ. ಭಗವಂತನ ಗುಣಗಾನಮಾಡುವ ದಕ್ಕೆ, ಆತನ ನಾಮ ಸಂಕೀರ್ತನೆಗೆ ಬಳಸುವ ನುಡಿಯು ಪರಮ ಪುರುಷಾರ್ಥ ರೂಪವಾದ ಮುಕ್ತಿಯನ್ನು ತಂದುಕೊಡುವ ಶಕ್ತಿಯುಳ್ಳದ್ದಾಗಿದೆ. ಅಂಥ ಶಕ್ತಿ ಯುಳ್ಳ ಶಬ್ದವನ್ನು ಸರ್ವಥಾ (ಪೂರ್ಣತಃ) ಬಿಟ್ಟುಕೊಟ್ಟರೆ, ಪುರುಷಾರ್ಥಪ್ರಾಪ್ತಿಗೆ ಹಾನಿಯುಂಟಾಗುವದು. ಅದನ್ನೇ ಇಲ್ಲಿ ಹೇಳಿದೆ. ಪರಮಾತ್ಮನು ಸರ್ವಶಬ್ದ ವಾಚ್ಯನು. ಸಕಲ ಶಬ್ದಗಳು ಭಗವಂತನ ಅನಂತ ನಾಮಗಳು. ಭಗವದ್ವಿಷ ಯವನ್ನು ಬಿಟ್ಟು, ಬೇರೆ ಯಾವುದೇ ವಿಷಯದ ಬಗ್ಗೆ. ಯಾವದೂ ಶಬ್ದದ ಉಪ ಯೋಗವನ್ನೂ ಮಾಡಕೂಡದು, ಎಂಬ ಅಭಿಪ್ರಾಯದಿಂದಲೆ, ಸಕಲ ಶಬ್ದಗಳೂ ಭಗವಂತನ ಸೊತ್ತು, ಆತನಿಗೇನೆ ಸಂಬಂಧಿಸಿದವು-ಎಂದು ಹೇಳಿರುವರು. ಶಬ್ದ ವನ್ನೇ ಸರ್ವಥಾ ಉಚ್ಚರಿಸದಿರುವದೇ 'ಮೌನ'ವಲ್ಲ. ಭಗವಂತನು ಸರ್ವ ಶಬ್ದ ಗಳ ಮುಖ್ಯಾರ್ಥನಾಗಿರುವನು. ಅನಂತ ಕಲ್ಯಾಣಗುಣಪೂರ್ಣನಾದ ಶ್ರೀಹರಿಯು ಮಾತ್ರ ಸಕಲ ಶಬ್ದಗಳಿಗೆ ಮುಖ್ಯಾರ್ಥವಾಚ್ಯನು - ಪಿತೃಗಣಾಧಿಪನಾದ ಅರ್ಯ ಮನು ಹಿರಣ್ಮಯ ವರ್ಷದಲ್ಲಿ ಶ್ರೀ ಹರಿಯೊಬ್ಬನೇ ಸರ್ವಶಬ್ದವಾಚ್ಯನೆಂದು ಸ್ತುತಿಸುವನು.

**ಅರ್ಥ** ;–ಶಬ್ದಗಳಲ್ಲಿ ಭಿನ್ನಭಿನ್ನವಾದಗುಂಪುಗಳಿರುವವು,–ಅವುಗಳಿಗೆ ಶಬ್ದ ಗಳ ಪ್ರಭೇದಗಳೆನ್ನುವರು:– ದೇವಪ್ರಭೇದ, ಋಷಿಪ್ರಭೇದ, ಪಿತೃಪ್ರಭೇದ, ಭೂ ಪ್ರಭೇದ–ಇವು ಶಬ್ದ ಪ್ರಭೇದಗಳು. ಶಬ್ದಗಳಲ್ಲಿ ಇಂದ್ರಾದಿ ದೇವತೆಗಳ ಹೆಸರುಗಳ ದೇವಪ್ರಭೇದಗಳು. ವಿಶ್ವಾಮಿತ್ರನ್ಮೊದಲಾದ ಋಷಿವಾಚಕ ಶಬ್ದಗಳು ಋಷಿಪ್ರಭೇ ಗಳು. ಅರ್ಯಮಾದಿ ಪಿತೃವಾಚಕ (ಹೆಸರುಗಳಾಗಿರುವ) ಶಬ್ದಗಳು ಪಿತೃಪ್ರಭೇದಗಳ ಜರಾಯುಜ–ತಾಯಿಯ ಗರ್ಭಕೋಶದಲ್ಲಿ ಜನ್ಮತಾಳುವ ಚಲಿಸುವ (ಚರ) ಪ್ರಾಣಿ ಗಳು, ಎಂದರೆ, ಮಾನವ, ಪಶು–ಪಕ್ಷಿ ಮುಂತಾದವುಗಳ ನಾಮುಗಳು, ಇದೇ ಪ್ರಭೇದದ ಒಳಭೇದವಾಗಿರುವ ಬ್ರಾಹ್ಮಣ, ಕುದುರೆ ಮುಂತಾದವುಗಳು, ಮಾನ ವರಲ್ಲಿ ಯತಿ (ಸನ್ಯಾಸಿ) ಮುಂತಾದವರು ಇನ್ನೊಂದು ಒಳಭೇದ. –ಉದ್ಭಿಜ (ಬೀಜ ಒಡೆದು ಹೊರಬರುವ)ಗಳಾದ ಗಿಡಗಂಟೆ ಮುಂತಾದವು. ಉದ್ಭಿಜ ಪ್ರಭೇ ದವು. ಈ ಪ್ರಭೇದದಲ್ಲಿ (ಶ್ರೇಷ್ಠವೆನಿಸುವ) ಅಶ್ವತ್ಥ, ಶಮೀ ಮುಂತಾದವುಗಳು ಒಳಗುಂಪು. ಸ್ವೇದಜ (ಬೆವರಿನ ಬೇಗೆಯಿಂದ ಜನಿಸುವ) ಹೇನು, ಕೂರಿ ಮುಂತಾದವುಗಳ ನಾಮಗಳು. ಅಂಡಜ ತತ್ತಿಯೊಡೆದು ಹೊರಬರುವ (ಜನಿ ಸುವ) ಕೋಳಿ ಮುಂತಾದ ಪಕ್ಷಿ ಪ್ರಾಣಿಗಳ ಹೆಸರುಗಳು. ಇದಲ್ಲದೆ (ದ್ಯೌಃ) ಸ್ವರ್ಗ, (ಖಂ) ಆಕಾಶ, (ಕ್ಷಿತಿ) ಭೂಮಿ, ಬೆಟ್ಟ, ನದಿ, ಸಮುದ್ರ (ದ್ವೀಪ) ನಡುಗಡ್ಡೆ, ಗ್ರಹ, ನಕ್ಷತ್ರ, –ಇವುಗಳೆಲ್ಲರ ನಾಮ (ಹೆಸರು)ಗಳಾದ ಶಬ್ದಗಳೆ ಲ್ಲವೂ ಶ್ರೀಹರಿಯೊಬ್ಬನಿಗೆ (ಮುಖ್ಯಾರ್ಥದಲ್ಲಿ) ಹೆಸರುಗಳು: ಇವುಗಳೆಲ್ಲ ಶ್ರೀ ಹರಿಯ ಅನಂತ ನಾಮಗಳು. ಶ್ರೀಹರಿಗೆ ನಾಮವೆನಿಸದ ಶಬ್ದವೆಂಬುದೇ ಇಲ್ಲ. ಶ್ರೀಹರಿಯೆ, ಸರ್ವಶಬ್ದವಾಚ್ಯನು.

||೩೦೮|| **ಶಬ್ದಸ್ಯ ಹಿ ಬ್ರಹ್ಮಣ ಏಷ ಪಂಥಾ** — ಶುಕರು

**ಯನ್ನಾಮ. ಭಿರ್ಧ್ಯಾಯತಿ ಧೀರಪಾರ್ಥೈಃ |** — ಪರೀಕ್ಷಿತ್

**ಪರಿಭ್ರಮಂಸ್ತತ್ರ ನ ವಿಂದತೇಽರ್ಥಾನ್**

**ಮಾಯಾಮಯೇ ವಾಸನಯಾ ಶಯಾನಃ ||** ೨-೨-೨

ಭಗವದುಪಾಸನಾಕ್ರಮವನ್ನು ಪರೀಕ್ಷಿತ್‌ರಾಜನಿಗೆ ಶ್ರೀಶುಕರು ಉಪದೇ ಶಿಸುವರು.

ಸಕಲ ಶಬ್ದಗಳೆಲ್ಲ ಪರಮಾತ್ಮನ ನಾಮಗಳೇ ಆಗಿರಲಿ. ಆದರಿಂದ ನಮ ಗೇನು ಪ್ರಯೋಜನ? (ನಾವು ಮಾಡಬೇಕಾದುದು ಏನು?) ಎಂದರೆ, ಭಗವಂತ ನನ್ನು ಬಿಟ್ಟು ಉಳಿದೆಡೆಯಲ್ಲಿ ಭಗವಂತನ ನಾಮಗಳಾದ (ಸಕಲ) ಶಬ್ದಗ

ಳನ್ನು ಬಳಸದಿರುವದೇ 'ಮೌನ' ವೆಂಬ ಭಾಗವತಧರ್ಮ. ಮುಕ್ತಿಯನ್ನು ಬಯಸುವವರು ಈ ಬಗೆಯ ಮೌನವೆಂಬ ಭಾಗವತಧರ್ಮವನ್ನು (ಸರ್ವಥಾ) ಪರಿಪೂರ್ಣವಾಗಿ ಪಡೆದುಕೊಳ್ಳಬೇಕು. ಈ ಭಾವನೆಯಿಂದ ಭಗವನ್ನಾಮಗಳನ್ನು (ಭಗವಂತನನ್ನು ಬಿಟ್ಟು) ಅನ್ಯತ್ರ ಮುಖ್ಯಾರ್ಥದಲ್ಲಿ ಬಳಸುವವರನ್ನು ಧಿಃಕರಿಸುತ್ತಾರೆ.

ಅರ್ಥ :- (ಭಗವಂತನ ಮಾಯೆಯಿಂದ)ಅಜ್ಞಾನವನ್ನೇ ಅತ್ಯಧಿಕವಾಗಿ (ಪ್ರಚುರವಾಗಿ) ತುಂಬಿಕೊಂಡ ಜೀವರು, (ಅಜ್ಞಾನದಿಂದ ಜನಿಸುವ ವಾಸನಾಮಯ ದೇಹದಲ್ಲಿರುವ ಜೀವಿಗಳು, ಅನೇಕ ಯೋಚನೆಗಳನ್ನು ಮಾಡುವ ಮನಸ್ಸಿನ ಪ್ರವೃತ್ತಿಯುಳ್ಳವರಾಗಿ, ಇಂದ್ರಾದಿದೇವತೆಗಳನ್ನು ಮುಖ್ಯತಃ ಭಗವಂತನಿಗೇನೇ ಮೀಸಲಾಗಿರುವ (ವಾಚ್ಯ-ಬೋಧಕಗಳಾಗಿರುವ) ಶಬ್ದಗಳಿಂದ ಧ್ಯಾನಾದಿ ಆರಾಧನೆಯನ್ನು ಮಾಡುವರು. ವಾಸ್ತವವಾಗಿ ಭಗವಂತನನ್ನು ಬಿಟ್ಟು ಬೇರೊಬ್ಬರ ವಿಷಯದಲ್ಲಿ ಅಂಥ (ಇಂದ್ರಾದಿ) ಶಬ್ದಗಳಿಗೆ ಮುಖ್ಯತಃ ಪ್ರವೃತ್ತಿಯೆ (ವಾಚ್ಯತ್ವ-ಬೋಧಕತ್ವವೇ) ಇರುವದಿಲ್ಲ. 'ಇಂದ್ರಾಯ ಸ್ವಾಹಾ' ಇತ್ಯಾದಿ ವಿಧಾನಗಳಿಂದ ಇಂದ್ರಾದಿದೇವತೆಗಳನ್ನು ಆವರಿಂದ ಪುರುಷಾರ್ಥವನ್ನು ಪಡೆಯಬೇಕೆಂಬ ಭ್ರಾಂತಿಯಿಂದ ಆರಾಧಿಸುವರು. ಆದರೆ ಮುಖ್ಯತ: ಭಗವನ್ನಾಮಗಳಾಗಿದ್ದುಕೊಂಡು ಇಂದ್ರಾದಿ ವಾಚಕವೆಂಬ ಮಾಯೆಯಿಂದ (ಅಜ್ಞಾನದಿಂದ) ಅವರು ಬಳಲುವರಾದ್ದರಿಂದ ಅಂಥವರಿಗೆ ಮುಕ್ತಿ ರೂಪ ಪುರುಷಾರ್ಥವು ಲಭಿಸುವದಿಲ್ಲ. ಪುರುಷಾರ್ಥ ಏಕೆ ದೊರೆಯುವದಿಲ್ಲವೆಂದರೆ, ಇಂದ್ರಾದಿ ಶಬ್ದಗಳನ್ನು ಅಪಾರ್ಥದಲ್ಲಿ, ಅನುಚಿತವಾದ (ತಪ್ಪಾದ) ಅರ್ಥದಲ್ಲಿ ಆವರು ಉಪಯೋಗಿಸುವದೇ ಕಾರಣ. ತಮ್ಮಲ್ಲಿಯೆ ಇಲ್ಲದ ವಸ್ತುವನ್ನು ಅನ್ಯರಿಗೆ ಇಂದ್ರಾದಿಗಳು ಹೇಗೆ ಕೊಡಬಲ್ಲರು? – 'ಇಂದ್ರ'ನೆಂದರೆ, ಅತ್ಯಧಿಕ (ಅಸಮಾನ) ಐಶ್ವರ್ಯವುಳ್ಳವನು. ತನ್ನಲ್ಲಿಯೇ (ಮುಕ್ತಿದಾಯಕ) ಐಶ್ವರ್ಯವಿಲ್ಲದಿರಲು, ಅನ್ಯರಿಗೆ ಮುಕ್ತಿರೂಪ ಪುರುಷಾರ್ಥವನ್ನು ಇಂದ್ರ (ಇಂದ್ರಾದಿದೇವತೆ) ಹೇಗೆ ಕೊಡಬಲ್ಲರು? ಭಗವಂತನ ಸೊತ್ತಾದ ( ಮುಖ್ಯತ: ಆತನೇ ಬೋಧಕವಾಗಿರುವ ) ಶಬ್ದಗಳನ್ನು ಕದ್ದು, ಮತ್ತೊಬ್ಬರಿಗಾಗಿ ಬಳಸುವದರಿಂದಲೂ, ಅವರಿಗೆ ಸ್ವಂತಕ್ಕಾಗಿ ಯಾವ-ಲಾಭವೂ ಆಗುವದಿಲ್ಲ. ಹೀಗೆ ಮಾಡುವವರು, ಅಚತುರರು, ಬುದ್ಧಿಹೀನರೆಂತಲೇ ಹೇಳಬೇಕು. ಬುದ್ಧಿವಂತರಾದವರು ಭಗವದ್ವಾಚಕ ಶಬ್ದಗಳನ್ನು ಅನ್ಯರ ವಿಷಯದಲ್ಲಿ ಎಂದಿಗೂ ಉಪಯೋಗಿಸರು. ಹಾಗೆ ಬಳಸಬಾರದಿದ್ದರೆ, ಅಂಥ ಶಬ್ದಗಳ ಉಪಯೋಗವನ್ನು ಎಲ್ಲಿಯಾದರೂ ಮಾಡಬೇಕು? –ಎಂದರೆ, ಯಾರಿಗಾಗಿ ಆ ಶಬ್ದಗಳು ಮುಖ್ಯ ವಾಚಕಗಳಾಗಿರುವವೊ, ಆತನಿಗಾಗಿ (ಭಗವಂತನಿಗಾಗಿ)

ಮಾತ್ರ ಅವುಗಳನ್ನು ಬಳಸಬೇಕು. (ಏಷ ಇತಿ) ಸಕಲ ಶಬ್ದಗಳ ಪ್ರಯೋಗಕ್ಕೆ ಭಗವಂತನೇ (ಪಂಥಾ:) ಪಾತ್ರನಾದವನು. ಏಕೆಂದರೆ, ಸಕಲ ಶಬ್ದಗಳಿಂ ಆತನೇ ವಾಚ್ಯ [ಮುಖ್ಯತ:]ನಾಗಿರುವನು. ಆದುದರಿಂದ, ಮುಕ್ತಿರೂಪವಾ ಪುರುಷಾರ್ಥವನ್ನು ಕೊಡುವ ಐಶ್ವರ್ಯಾದಿ ಅದ್ಭುತ ಸಾಮರ್ಥ್ಯವು ಪರಮಾ ತ್ಮನಲ್ಲಿ ಮಾತ್ರ ಇರುವದೆಂಬುದನ್ನು ನೆನಪಿಗೆ ತಂದುಕೊಡಲು, ಭಗವನ್ನಾಮಗ ಳನ್ನು ಇಂದ್ರಾದಿಗಳಲ್ಲಿ ಪ್ರಯೋಗಿಸುವದು ಅಪಾರ್ಥ- ತಪ್ಪುಪ್ರಯೋಗವೆಂಬ ದನ್ನು, ಭಗವಂತನಲ್ಲಿಯೇ [ಮುಖ್ಯತ:] ಸಕಲ ಶಬ್ದಗಳ ಪ್ರವೃತ್ತಿ [ಬಳಕೆ] ಯೆಂಬುದನ್ನೂ ಇಲ್ಲಿ ಸೂಚಿಸಿರುವರು. ಸಕಲ ಶಬ್ದಗಳು ಹೇಳುವ ಗುಣಗಳು, ಇಂದ್ರಾದಿ ಶಬ್ದಗಳು ಹೇಳುವ ಐಶ್ವರ್ಯಾದಿ ಗುಣಗಳು ಅನಂತಗುಣಪರಿ ಪೂರ್ಣನಾದ ಶ್ರೀಹರಿಯಲ್ಲಿಯೆ ನೆಲೆಸಿರುವವು.

**॥೩೦೯॥ ಯಥಾ ಹಿರಣ್ಯಂ ಬಹುಧಾ ಸಮೀಯತೇ**
**ನೃಭಿಃ ಕ್ರಿಯಾಭಿರ್ವ್ಯವಹಾರವರ್ತ್ಮಸು ।**
**ಏವಂ ವಚೋಭಿರ್ಭಗವಾನಧೋಕ್ಷಜೋ**
**ವ್ಯಾಖ್ಯಾಯತೇ ಲೌಕಿಕವೈದಿಕೈರ್ಜನೈಃ ॥** ೧೨-೪-೩೦

ಶುಕರು ಪ. ರಾಜ

ಅನೇಕಾರ್ಥ, ವಿರುದ್ಧಾರ್ಥಗಳಿಂದ ಕೂಡಿದ ಶಬ್ದಗಳು ಒಬ್ಬನೇ ಪರಬ್ರಹ್ಮ ನನ್ನು ಹೇಗೆ ಬೋಧಿಸುವದೆಂಬುದನ್ನು ಸಮರ್ಪಕ ದೃಷ್ಟಾಂತದಿಂದ ಶ್ರೀ ಶುಕರು ತೋರಿಸುವರು.

ಸಕಲ ಶಬ್ದಗಳೂ ಭಗವಂತನ ನಾಮಗಳೇ ಆಗಿರುವದರಿಂದ, ಭಗವಂತನಿ ಗಾಗಿಯೆ ಅವುಗಳನ್ನು ಉಪಯೋಗಿಸಿ, ಸಾಧಕನು ಪುರುಷಾರ್ಥವನ್ನು ಪಡೆಯ ಬೇಕು, ಎಂದು ಹೇಳಿದ್ದಾಯಿತು. ಪೂರ್ವಿಕರಾದ ಜ್ಞಾನಿಗಳೂ ಹೀಗೆಯೆ ಮಾಡಿ ದರೆಂಬುದಕ್ಕೆ ಪರಂಪರೆಯ ಆಧಾರವೂ ಇದೆ. ಭಿನ್ನಾರ್ಥ, ವಿರುದ್ಧಾರ್ಥಗಳುಳ್ಳ ಅನೇಕ ಶಬ್ದಗಳು ಒಬ್ಬನೇ ಆಗಿರುವ ಪರಬ್ರಹ್ಮ-ಪರಮಾತ್ಮನಿಗೆ ಹೇಗೆ ವಾಚ್ಯ ವಾಗಿವೆ ? (ಒಬ್ಬ ಪರಮಾತ್ಮನನ್ನೇ ಅವು ಹೇಗೆ ಬೋಧಿಸುವವು ?) ಎಂಬುದನ್ನು ಉದಾಹರಣೆಯ ಸಹಾಯದಿಂದ ಮನಗಾಣಿಸಿಕೊಡುವರು.

**ಅರ್ಥ** :- ( ಯಥಾ ಹಿರಣ್ಯಂ ):- ( ಮೂಲವಸ್ತು ) ಬಂಗಾರವು ಒಂದೇ ಯಾದರು, ತನ್ನಿಂದ [ಬೇರೆ ಬೇರೆ ವ್ಯವಹಾರಗಳಿಗಾಗಿ] ರಚಿತವಾಗುವ, ಬೇರೆಬೇರೆ ಉಪಕರಣ [ ಸಾಧನ ] ಗಳಿಂದ ನಿರ್ಮಿತವಾಗುವ ಕೈಬಳೆ [ ಕಟಕ ], ಕಿವಿಬಳೆ

[ಕುಂಡಲ] ಗಳಿಗಾಗಿ ಬೇರೆ ಬೇರೆ ಹೆಸರುಗಳನ್ನು ಪಡೆಯುವದು. ಅದರಂತೆಯೆ, ಸರ್ವಶಬ್ದಗಳೂ [ಮುಖ್ಯಾರ್ಥದಲ್ಲಿ] ಒಬ್ಬ ಪರಮಾತ್ಮನ ನಾಮಗಳೆಂದು [ದೃಢ ವಾಗಿ] ತಿಳಿದುಕೊಂಡ ಜ್ಞಾನಿಗಳು ಹಾಗೆಯೆ ನಡೆದುಕೊಳ್ಳುವ ಪೂರ್ವಾಪರ ಸಾಂಪ್ರದಾಯವಿದೆ. ಅನ್ನ, ನೀರು ಮುಂತಾದ ಆಹಾರವಾಚಕ ಶಬ್ದಗಳು, ತಂದೆ ತಾಯಿಗಳೆಂಬ ಸಂಬಂಧಿಕರ ಹೆಸರುಗಳು, ಎಲೆ, ಕಮಂಡಲು, ಇತ್ಯಾದಿ ಸಾಧನಗಳಿಗಾಗಿ ಉಪಯೋಗಿಸಲ್ಪಡುವ ನಿತ್ಯಬಳಕೆಯ ಶಬ್ದಗಳು. ಹೇ ಇಂದ್ರ! ಹೇ ಚಂದ್ರ! ಇತ್ಯಾದಿ, ದೇವತೆಗಳನ್ನು ಅವರ ಹೆಸರುಗಳಿಂದ ಕರೆಯುವ ಶಬ್ದ ಗಳು, ಬತ್ತಗಳು, ತುಪ್ಪ ಮುಂತಾದ (ಯಜ್ಞಗಳಲ್ಲಿ) ಹವಿಸ್ಸಾಗಿ ಅರ್ಪಿಸಲ್ಪಡುವ ಶಬ್ದಗಳು, ಅದರಂತೆಯೇ ಸವಟು ಮುಂತಾದ (ಯಜ್ಞದ) ವೈದಿಕ ಉಪಕರಣಗಳ ಹೆಸರುಗಳು, ಒಟ್ಟಾರೆ, ವೈದಿಕ ಶಬ್ದಗಳಾಗಲಿ, [ನಿತ್ಯಬಳಿಕೆಯ] ಲೌಕಿಕ ಶಬ್ದ ಗಳಾಗಿರಲಿ, ಭಿನ್ನಾರ್ಥವಾಗಿರಲಿ, ವಿರುದ್ಧಾರ್ಥವಾಗಿರಲಿ – ಹೇಗೇ ಇರಲಿ. ಸಕಲ ಶಬ್ದಗಳು ಭಗವಂತನಿಗೇನೆ ಸೇರಿದವು. ಆತನ ಗುಣ-ಕ್ರಿಯೆಗಳನ್ನೇ ಪ್ರತಿಪಾದಿ ಸುವದರಿಂದ [ಮುಖ್ಯಾರ್ಥದಲ್ಲಿ] ಆತನಿಗೇನೆ ಮೀಸಲಾದವುಗಳು.

ಜ್ಞಾನಿಗಳು ಈ ರೀತಿಯಿಂದ ನಡೆದುಕೊಳ್ಳುವ ಪೂರ್ವಾಚಾರ-ಪರಂಪರೆ ಯಿರುವದರಿಂದ, ನೀವಾದರೂ ಅವರ ರೀತಿಯನ್ನೇ ಅನುಸರಿಸಬೇಕೆಂಬುವದು ಅಭಿಪ್ರಾಯವಾಗಿದೆ.

॥೩೦॥ **ಯಥಾ ಹಿರಣ್ಯಂ ಸ್ವಕೃತಂ ಪುರಸ್ತಾ-**
**ತ್ಪಶ್ಚಾಚ್ಚ ಸರ್ವಸ್ಯ ಹಿರಣ್ಮಯಸ್ಯ ।**
**ತದೇವ ಮಧ್ಯೇ ವ್ಯವಹಾರ್ಯಮಾಣಂ**
**ನಾನಾಪದೇಶೈರಹಮಸ್ಮಿ ತದ್ವತ್ ॥** ೧೧-೨೮-೨೦

ಶ್ರೀಕೃಷ್ಣ ಉದ್ಧವಗೆ 19

[ಭಗವಂತನು ಉದ್ಧವನಿಗೆ ಮಾಡಿದ ಉಪದೇಶ]

ಇಲ್ಲಿ ಒಂದು ಪ್ರಶ್ನೆ ಕೇಳಬಹುದು :- ಅದೆಂದರೆ, ಜಗತ್ತಿನಉತ್ಪತ್ತಿಯಾಗುವ ಮೊದಲು ಹಾಗೂ ಜಗತ್ತಿನ ನಾಶವಾದ ನಂತರವೂ [ಬಂಗಾರಕ್ಕೆ] ಕಟಕ, ಕುಂಡಲ ಮುಂತಾದ ಹೆಸರುಗಳಿಂದ ಕರೆಯುವದಿಲ್ಲ. ಜಗತ್ತಿನ ಆದಿ ಹಾಗೂ ಅಂತ್ಯಗಳ ಮಧ್ಯಂತರದ (ನಡುವಿನ) ಅವಧಿಯಲ್ಲಿ ಮಾತ್ರ ಬಂಗಾರವನ್ನು (ಬಂಗಾರವೆಂತಲೇ ಕರೆಯದೆ) ಈ ನಾನಾವಿಧ ಹೆಸರುಗಳಿಂದ ಕರೆಯುವರು. ಇದು ಹೀಗೇಕೆ? ಎಂದು ಪ್ರಶ್ನಿಸುವವರಿಗೆ ನಾವೇ ತಿರುಗಿ ಪ್ರಶ್ನೆ ಕೇಳಬಹುದು. ಜಗತ್ತಿನ ಆದಿ-ಅಂತ್ಯಗಳ ಮಧ್ಯಂತರದಲ್ಲಿ ಅದೇ ಬಂಗಾರವನ್ನೇ ಕಟಕ ಕುಂಡಲಾದಿ ಭಿನ್ನಭಿನ್ನಹೆಸರುಗಳಿಂದ

ಕರೆಯುವದನ್ನು ನೀವು ಒಪ್ಪುವಿರಲ್ಲವೆ ? ಅಥವಾ ಒಪ್ಪುವದಿಲ್ಲವೆ ? ಒಪ್ಪುವದಿ ವೆಂದರೆ, ಕಣ್ಣಿಗೆ ಕಾಣುವದನ್ನು ಒಪ್ಪಲಾರದ ನೀವು ಅರಣ್ಯ ಪಂಡಿತರು (ಮಹ ಮೂರ್ಖರು) ಎಂತಲೆ ಹೇಳಬೇಕಾಗುವದು. ನಡುವಿನ ಅವಧಿಯಲ್ಲಿ ಬಂಗಾರಕ ಪ್ರಾಪ್ತವಾಗುವ ಭಿನ್ನ ಭಿನ್ನ ಹೆಸರುಗಳನ್ನು ಒಪ್ಪುತ್ತೀವೆ, ಎಂದರೆ,

**ಅರ್ಥ** :– (ಯಥಾ ಹಿರಣ್ಯಂ) –ನಿರ್ಮಾಣವಾಗುವ (ಸಿದ್ಧವಾಗುವ ಮೊದಲು ಹಾಗೂ ನಾಶವಾದನಂತರ, (ಕಟಕ ಕುಂಡಲಾದಿಗಳಿಗೆ ಮೂಲ ದ್ರವ ವಾದ) ಬಂಗಾರವು, ನಡುವಿನ ಕಾಲದಲ್ಲಿ (ವಿಕಾರಹೊಂದಿ) ಭಿನ್ನಭಿನ್ನ ಹೆಸರು ಗಳಿಂದ ಕರೆಯಲ್ಪಟ್ಟರೂ ಬಂಗಾರವು ಬಂಗಾರವಾಗಿಯೆ ಉಳಿಯುವದಿಲ್ಲವೆ? ಅದರಂತೆಯೆ (ಭಗವಂತನು) ಸೃಷ್ಟಿಯ ಆದಿಗಿಂತಲೂ ಮುಂಚೆ, ಮತ್ತು ಅದ ನಾಶವಾದನಂತರವೂ, (ನಡುವಿನ ಕಾಲದ ವ್ಯವಹಾರದಲ್ಲಿ ಅನಂತ ಹೆಸರುಗಳಿಗೆ ವಿಷಯನಾಗಿದ್ದರೂ)– ವಿಕಾರರಹಿತ, ಪರಿಣಾಮ ಶೂನ್ಯನಾದ, ಪರಬ್ರಹ್ಮನಾದ ನಾನು ಪರಬ್ರಹ್ಮನಾಗಿಯೇ ಇರುವೆನು. ಇದರಲ್ಲಿ ಏನು ಸೋಜಿಗವಿದೆ ? (ಭಗ ವಂತನು ಉದ್ಧವನಿಗೆ ಹೇಳಿದ ಮಾತು ಇದು) ಕಟಕ ಕುಂಡಲಾದಿ ಆಕೃತಿಗಳ ವಸ್ತುಗಳಿದ್ದಾಗ್ಗೆ ಮಾತ್ರ, ಬಂಗಾರಕ್ಕೆ ಆಯಾ ಒಡವೆಗಳಿರುವ ಅನೇಕ ಹೆಸರು ಗಳು ಪ್ರಾಪ್ತವಾಗುವವು. ಬೇರೆ ಬೇರೆ ರೂಪು-ಆಕೃತಿ–ಉಪಯೋಗವಿರುವ ಬಂಗಾ ರದ ಒಡವೆಗಳಿಗೆಲ್ಲ ಬಂಗಾರವೆಂಬ ಒಂದೇ ಹೆಸರಿನಿಂದ ಕರೆಯದಿರುವುದು ಸರಿ ಯಾದುದೆ; ಬಂಗಾರದಿಂದ ರಚಿತವಾಗಿದ್ದರೂ, ಕಟಕಕುಂಡಲಗಳೆಂದೇ ಅವುಗ ಳಿಗೆಲ್ಲ ಭಿನ್ನಭಿನ್ನ ಹೆಸರುಗಳು, ಈ ಒಡವೆಗಳು ಸಿದ್ಧವಾಗುವ ಮೊದಲು ಹಾಗೂ (ಒಡವೆಗಳ ರೂಪದಲ್ಲಿ) ನಾಶವಾದನಂತರ ಕಟಕ ಕುಂಡಲಾದಿ ರೂಪ ಗಳನ್ನು ತಾಳಿರುವದಿಲ್ಲವಾದ್ದರಿಂದ, ಅವುಗಳಿಗೆ ಆಯಾ ಹೆಸರುಗಳು ಪ್ರಾಪ್ತ ವಾಗಿರುವದಿಲ್ಲ. ನಡುವಿನ ಅವಧಿಯಲ್ಲಿ ಆಯಾ ರೂಪಗಳನ್ನು ಅವು ಹೊಂದಿರುವದರಿಂದ, ಅವುಗಳ ರೂಪು-ಆಕೃಗಳಿಗೆ ಸಮುಚಿತವಾದ ಹೆಸರುಗ ಳನ್ನು ಅವು ಧರಿಸುವದು ಯೋಗ್ಯವಾದುದೇ. (ತದ್ವತ್) ಅದೇ ರೀತಿಯಲ್ಲಿಯೇ ಸೃಷ್ಟಿಯ ಪೂರ್ವದಲ್ಲಿ, ಪ್ರಳಯದ (ನಾಶದ) ನಂತರದಲ್ಲಿ ನಾನು (ವಿಕಾರ ಹೊಂದ ದಿರುವ) ಪರಬ್ರಹ್ಮನೆಂಬ ಒಂದೇ ಹೆಸರಿನಿಂದ ಕರೆಯಲ್ಪಡುವೆನು. ಚರಾಚರಾ ತ್ಮಕ ಅನೇಕ ಬಗೆಯ ಅನೇಕ ಜೀವಿಗಳಲ್ಲಿ ಜಡ ವಸ್ತುಗಳಲ್ಲಿ ಆ ಆ ರೂಪ ದಿಂದ ಅವುಗಳಿಗೆಲ್ಲ ನಿಯಾಮಕನಾಗಿ ನಾನು ನೆಲೆಸಿರುವದರಿಂದ, ಆ ಆ ವಸ್ತುಗಳ ಹೆಸರಿನಿಂದ ನಾನು ಕರೆಯಲ್ಪಡುವದೂ ಅಷ್ಟೇ ಸಯುಕ್ತಿಕವಾಗಿದೆ. ಅಂತರ್ಯಾ ಮಿಯಾದ ನಾನು ಮಾಡಿಸದಿದ್ದರೆ, ಚರಾಚರವಾದ ಈ ಜಗತ್ತು ಕಣ್ಣವೆ ಹಾಕಲೂ

ಅಸಮರ್ಥವಾದುದು. 'ನಾನೇ ಆಡಿಸದಿರಲು ಜಡ ಒನಕೆಯೂ ಬೊಂಬೆ'-ಯಾದುದರಿಂದ, 'ಮನ್ಮಯ' ನನ್ನಿಂದಲೆ ಸಿದ್ಧವಾದುದು, ಎಂದು ಹೇಳಲ್ಪಡುತ್ತದೆ. 'ಮನ್ಮಯಾ ಮಾಮುಪಾಶ್ರಿತಾಃ'- ನನ್ನನ್ನೇ ಆಶ್ರಯಿಸುವವರು, ನನ್ನಿಂದಲೆ ತಮ್ಮ ತಮ್ಮ ಕಾರ್ಯಗಳಲ್ಲಿ ಪ್ರವೃತ್ತಿಯನ್ನು(ಕಾರ್ಯಮಾಡುವ ಶಕ್ತಿಯನ್ನು)ಪಡೆದವರು, ಅವರವರ ಸಕಲಕ್ರಿಯೆಗಳಲ್ಲಿ ನಾನೇ ಪ್ರಧಾನ ಕರ್ತೃನಾದವನು. |ಅಂತೆಯೆ ಕಟಕ ಕುಂಡಲಗಳು (ರಚಿತವಾದವು ಎಂಬ ಅರ್ಥದಲ್ಲಿ) 'ಹಿರಣ್ಮಯಗಳು'. ಚರಾಚರ ವಸ್ತುಗಳೆಲ್ಲ ನನಗೆ ಆಧೀನವಾದವು, ಅವುಗಳ ಕ್ರಿಯೆಗಳಿಗೆಲ್ಲ ನಾನೇ ಮುಖ್ಯ ಪ್ರಧಾನ ಕರ್ತೃ-ಎಂಬ ಅರ್ಥದಲ್ಲಿ, ಅವುಗಳಿಗೆ 'ಮನ್ಮಯಾಃ' ಎಂದು ಹೇಳುವರು.

ಹೀಗೆ ಹೇಳುವರು :- 'ಮನ್ಮಯಾ ಮಾಮುಪಾಶ್ರಿತಾಃ' ಭಗವದ್ಗೀತೆಯಲ್ಲಿಯ ಭಗವದುಕ್ತಿಯನ್ನು ವಿವರಿಸಿ ತಿಳಿಸಿಕೊಡುವರು. 'ಸಕಲ ಜಗತ್ತೂ ಮನ್ಮಯವಾದುದು. ಆದರೆ, (ಜಗತ್ತಿನ) ಉತ್ಪತ್ತಿಯ ಮೊದಲು, ನಾಶದ (ಪ್ರಲಯದ) ನಂತರ, ಜೀವ, ಮಾನವ ಹಾಗೂ ಕೆಳಮಟ್ಟದ ಜೀವಿಗಳ ಹೆಸರುಗಳನ್ನು ಹೊಂದಿರುವಂಥ ನಾನು, ಅವುಗಳೆಲ್ಲರ ವಿಶಿಷ್ಟರೂಪವನ್ನು ಚನ್ನಾಗಿ ಇನ್ನೂ ಪ್ರಕಟಿಸದೆ ( ಹೊರಗೆ ) ತೋರಿಸದೆ ನಾನು ಇರುವದರಿಂದ, ದೇವ-ಮಾನವ ಇತ್ಯಾದಿ ಆ ಆ ರೂಪಗಳಿಗೆ ಅನುರೂಪವಾದ ವಿವಿಧ ಹೆಸರುಗಳನ್ನು ಧರಿಸುವದಿಲ್ಲ. ಜಗತ್ತಿನ ಉತ್ಪತ್ತಿ ಹಾಗೂ ನಾಶಗಳ ನಡುವಿನ ಅವಧಿಯಲ್ಲಿ ದೇವ ಮಾನವಾದಿ ಚರಾಚರ ವಿವಿಧ ಸೃಷ್ಟಿಯನ್ನು ನಿರ್ಮಿಸಿ, ಅವುಗಳಿಂದ ತಮ್ಮತಮ್ಮ ಕಾರ್ಯಮಾಡಿಸಲು, ಅವುಗಳಿಗೆ ಸದೃಶವಾದ ರೂಪಗಳಿಂದಲೆ ಅವುಗಳಲ್ಲಿ ಪ್ರವೇಶಿಸಿ, ಭಗವಂತನು ಅವುಗಳ ವಿಶಿಷ್ಟ ರೂಪಗಳಿಂದ ತನ್ನನ್ನು ತೋರಿಸಿಕೊಳ್ಳುವನು. ಆದುದರಿಂದ, ಈ ಕಾರಣಕ್ಕಾಗಿಯೆ ತಮ್ಮ ರೂಪವಿಶೇಷಕ್ಕಾಗಿ ಅವುಗಳು ಪಡೆದಿರುವ ವಿಶಿಷ್ಟ ಭಿನ್ನ ಭಿನ್ನ ಹೆಸರುಗಳಿಂದ ಭಗವಂತನು ಕರೆಯಿಸಿಕೊಳ್ಳುವನು. ಭಿನ್ನ ಹಾಗೂ ವಿರುದ್ಧಾರ್ಥಗಳಿರುವ ಅನೇಕ ಶಬ್ದಗಳಿಂದ ಒಬ್ಬನೇ ಭಗವಂತನು ಹೇಗೆ ವಾಚ್ಯನಾಗಿರುವನು ? ಅನಂತ ಶಬ್ದಗಳೆಲ್ಲ ಆತನವೇ ಹೇಗೆ ಆಗಿರುವವು ?- ಎಂಬ ಸಂದೇಹವನ್ನು ಈ ರೀತಿಯಾಗಿ ನಿವಾರಿಸಿರುವರು.

ಇಲ್ಲಿ ಇನ್ನೂ ಒಂದು ಆಕ್ಷೇಪ :- ಅನಂತ ಶಬ್ದಗಳನ್ನು ಒಬ್ಬ ಭಗವಂತನಿಗೆ ಹೊಂದಿಸುವಲ್ಲಿ ಬಂಗಾರದ ಉದಾಹರಣೆ (ಸಾದೃಶ್ಯ) ಕೊಡುವದು ಹೇಗೆ ಸಯುಕ್ತಿಕ-ಸಮರ್ಪಕವಾಗುವದು ? ಎಂಬುದು ಪ್ರಶ್ನೆ.— ಈ ಪ್ರಶ್ನೆ ಕೇಳುವವರಿಗೇನೆ

ತಿರುಗಿ ಪ್ರಶ್ನೆ ಕೇಳಬೇಕು,-ಮೂಲ ದ್ರವ್ಯವಾದ ಬಂಗಾರ ಉಪಾದಾನ, ಅದರಿಂದ ಸಿದ್ಧಗೊಳಿಸಿದ ಕಟಕ-ಕುಂಡಲಾದಿ ಭಿನ್ನ ವಸ್ತುಗಳು **ಉಪಾದೇಯ**, ಮಣ್ಣು ಉಪಾದಾನ, ಮಣ್ಣಿನಿಂದ ಸಿದ್ಧವಾದ ಕುಡಿಕೆ-ಮಡಿಕೆಗಳು ಉಪಾದೇಯ.— ಭಗವಂತನನ್ನು ಬಂಗಾರಕ್ಕೆ ಹೋಲಿಸುವಲ್ಲಿ (ಭಗವಂತನಿಗೆ ಬಂಗಾರದ ದೃಷ್ಟಾಂತ ಕೊಡುವದರಲ್ಲಿ) ಭಗವಂತನು (ಮೂಲದ್ರವ್ಯ) ಉಪಾದಾನ ಬಂಗಾರ, ಆತನು ಸೃಷ್ಟಿಸುವ ವಿಧವಿಧದ ಜಗತ್ತು, **ಉಪಾದೇಯ** - (ಮಣ್ಣಿನಿಂದ ಮಾಡಿದ ಮಡಿಕೆ ಯಂತೆ) ಭಗವಂತನೆಂಬ ಮೂಲದ್ರವ್ಯದಿಂದಲೆ ಸಿದ್ಧಗೊಳಿಸಿದ ವಸ್ತು- ಎಂಬುದು ನಿಮ್ಮ ಅಭಿಪ್ರಾಯವೆ ? ಆದಕ್ಕಾಗಿ ಬ್ರಹ್ಮ (ಭಗವಂತ) ಹಾಗೂ ಜಗತ್ತಿಗೆ ಉಪಾದಾನ - ಉಪಾದೇಯ ಸಂಬಂಧವು ಹೇಗೆ ಕೂಡುವದೆಂಬುದು ನಿಮ್ಮ ಆಕ್ಷೇಪವೆ ? ಅಥವಾ ಬ್ರಹ್ಮ ಹಾಗೂ ಜಗತ್ತುಗಳಿಗೆ (ಮೂಲದ್ರವ್ಯ-ಅದರಿಂದಲೆ ಸಿದ್ಧವಾದ ವಸ್ತು) ಬಂಗಾರದ ಉದಾಹರಣೆಯನ್ನೆ ಮಾತ್ರ ಏಕೆ ಕೊಡುವಿರಿ ? ಅಥವಾ ಬಂಗಾರದ ಸಾದೃಶ್ಯ (ದೃಷ್ಟಾಂತ)ವನ್ನು ಹೇಗೆ ಸಮನ್ವಯ ಮಾಡುವಿರಿ? (ಸಮರ್ಪಕವಾಗಿ ಜೋಡಿಸುವಿರಿ?) ಈ ಪ್ರಶ್ನೆಗೆ ಉತ್ತರ ಹೇಳುವರು:- **ಬ್ರಹ್ಮ** (ಭಗವಂತ)ನಿಗೂ (ಆತನು ಸೃಷ್ಟಿಸುವ) ಜಗತ್ತಿಗೂ, (ನೀವು ಶಂಕಿಸುವ) ಉಪಾದಾನ ಉಪಾದೇಯ ಸಂಬಂಧವು ಇರುವದಿಲ್ಲ. ಏಕೆಂದರೆ, **ಜೇಡಹುಳ** [ಊರ್ಣನಾಭಿ] ಹಾಗೂ ಅದರ **ಕಾರ್ಯ**ವನ್ನು, ಭಗವಂತನಿಗೂ ಆತನ ಸೃಷ್ಟಿ **ಕಾರ್ಯ**ಕ್ಕೂ ಹೋಲಿಸಿರುವದು ಅನೇಕ ಸಂದರ್ಭಗಳಲ್ಲಿ ಕಂಡುಬರುವದು. [ಜೇಡಹುಳವು ತನಗೆ ಸ್ವಗತವಾಗಿರುವ [ಸ್ವಾಭಾವಿಕವಾಗಿ ತನ್ನಲ್ಲಿಯೆ ಇರುವ] ದ್ರವ್ಯವನ್ನು ಹೊರತೆಗೆದು ತನ್ನ ಬಲೆಯನ್ನು ನಿರ್ಮಿಸುವದು. ಭಗವಂತನ ಸೃಷ್ಟಿ ಪ್ರಳಯಗಳ ಕಾರ್ಯಗಳೂ ಜೇಡಹುಳದ ಕ್ರಮದಲ್ಲಿಯೇ ನಡೆಯುವವು. ಹೀಗೆ ಹೇಳಿರುವರು :-

" ಯಥಾ ಆತ್ಮಮಾಯಾ ಯೋಗೇನ.... ಯಥೋರ್ಣನಾಭಿ " [೨-೯-೨೭-೨೮]:— ಭಗವಂತಾ ! ನೀನು ನಿನ್ನ ಸ್ವಗತ [ಸ್ವರೂಪಭೂತ] ವಾದ ಮಾಯಾ ಶಕ್ತಿಯ ಬಲದಿಂದ, ಅನೇಕ [ ಅದ್ಭುತ ಅಚಿಂತ್ಯ ] ಶಕ್ತಿಗಳಿಂದ ಅನುಪಮ ಸಾಮರ್ಥ್ಯ ಉಳ್ಳವನಾಗಿರುವೆ. ನಿನ್ನನ್ನೇ ನೀನು ಇಲ್ಲದಂತಾಗಿ ಮಾಡಿಬಿಡುವೆ, ಹುಟ್ಟಿಸುವೆ, ಪೋಷಿಸುವೆ. ನಿನ್ನ ಇಚ್ಛಾಶಕ್ತಿಯು [ಸಂಕಲ್ಪವು] ಎಂದಿಗೂ ಹುಸಿಯಾಗದು; ಜೇಡಹುಳವು ಸ್ವಗತ [ ತನ್ನದೇ ಆಗಿರುವ ] ವಾದ ಪದಾರ್ಥದಿಂದ ತನ್ನ ಮನಸ್ಸಿಗೆ ಬಂದಾಗ್ಗೆ, ವಿಚಿತ್ರವಾದ ಬಲೆಯನ್ನು ರಚಿಸುತ್ತದೆ. ತನಗೆ ಬೇಡವೆನಿಸಿದರೆ ತಾನು ನಿರ್ಮಿಸಿದ್ದನ್ನು ತಾನೇ ನುಂಗಿ ಬಿಡುತ್ತದೆ. ಭಗವಂತನು ಮಾಡುವ ವಿಶ್ವದ ಸೃಷ್ಟಿ ಸ್ಥಿತಿ-ಲಯಗಳ ಕಾರ್ಯವು ಜೇಡ ಹುಳದ ಕಾರ್ಯದ ರೀತಿಯಲ್ಲಿಯೆ! ತನ್ನ **ಸಂಕಲ್ಪಾ**ನುಸಾರವಾಗಿ ಸೃಷ್ಟಿ,ಸ್ಥಿತಿ,ಲಯಗಳ ಕಾರ್ಯವನ್ನು ಸಮಯೋಚಿತವಾಗಿ

ಆತನುಮಾಡುವನು. ಇವೆಲ್ಲಕಾರ್ಯಗಳೂ ಆತನಿಗೆ ಒಂದು(ಮಕ್ಕಳ)ಆಟವಿದ್ದಂತೆ. ಅಪ್ರಾಕೃತ, ತ್ರಿಗುಣಾತೀತನಾದ ಭಗವಂತನಿಗೆ ಇವೆಲ್ಲ ಕಾರ್ಯಗಳಿಂದ ಯಾವ ಬಾಧೆಯೂ ಇಲ್ಲ. ಲೇಪವೂ ಇಲ್ಲ. ಜಗತ್ತಿನಿಂದ ಸರ್ವಥಾ ಭಿನ್ನನಾಗಿ, ಜಗತ್ತಿಗೆ ಸ್ವಾಮಿಯೂ, ನಿಯಾಮಕನೂ ಆಗಿರುವನು. ಜೇಡವು ಸ್ವಗತವಾದ ವಸ್ತುವಿನಿಂದ ಬಲೆಯನ್ನು ರಚಿಸುವಂತೆ, ಜೇಡನ ಕಾರ್ಯವು ಸ್ವೇಚ್ಛಾಪ್ರವೃತ್ತಿಯಾಗಿರುವಂತೆ, ಭಗವಂತನ ಸೃಷ್ಟಿ ಸ್ಥಿತಿ ಲಯಗಳ ಕಾರ್ಯವೂ ಅದೇ ರೀತಿಯದು. (ಬ್ರಹ್ಮದೇವರು ಮಾಡಿದ ಭಗವಂತನ ಸ್ತುತಿ ಇದು).

ಬಂಗಾರದ ಸಾದೃಶ್ಯವನ್ನೇ ಮಾತ್ರ ಏಕೆ ತೆಗೆದುಕೊಳ್ಳಬೇಕು ? ಎಂಬ ಎರಡನೆಯ ಪ್ರಶ್ನೆಗೆ ಉತ್ತರ ಹೇಳುವರು. –ಬಂಗಾರದ ಬಗ್ಗೆ ನಿಮಗೆ ದ್ವೇಷವೆ? ಬಂಗಾರವನ್ನು ಉದಾಹರಣೆಯಾಗಿ ತೆಗೆದುಕೊಳ್ಳಬಾರದೆಂಬುದು ನಿಮ್ಮ ಹಟವೆ? ನೀವು ಮಾಡುವ ಪ್ರಶ್ನೆಗೆ ಬೇರೆ ಯಾವ ಉದ್ದೇಶವಿರದೆ, ಇವೇ ಕಾರಣವಿದ್ದಂತೆ ತೋರುತ್ತಿದೆ.

ಭಗವಂತನ ಸೃಷ್ಟಿಕಾರ್ಯಕ್ಕೆ ನೀವು ಹೇಳುವ ಬಂಗಾರದ ಸಾದೃಶ್ಯವನ್ನು ಹೇಗೆ ಸಮನ್ವಯ ( ಹೊಂದಿಕೆ ) ಮಾಡುವಿರಿ? –ಎಂಬುದು ಮೂರನೆಯ ಪ್ರಶ್ನೆ. ಇದಕ್ಕೆ ಉತ್ತರವೆಂದರೆ, ಹೋಲಿಸುವ ವಸ್ತು,- ದೃಷ್ಟಾಂತ, ಹೋಲಿಸಲ್ಪಡುವ ವಸ್ತು, ದಾರ್ಷ್ಟಾಂತಿಕ. ಇಲ್ಲಿ ಬಂಗಾರವು ದೃಷ್ಟಾಂತವಾಗಿದೆ, ಅದನ್ನು ಸೃಷ್ಟಿಕರ್ತನಾದ ಬ್ರಹ್ಮ ( ಭಗವಂತ ) ನಿಗೆ ಕೊಡಲಾಗಿದೆ. ಇವೆರಡರಲ್ಲಿಯ ಸಾಮ್ಯವನ್ನು-ಹೋಲಿಕೆಯನ್ನು-ಈ ಮೂರನೆಯ ಪ್ರಶ್ನೆಗೆ ಸಮರ್ಪಕವಾದ ಉತ್ತರವಾಗುವಂತೆ, ಮೇಲೆ ವಿವರವಾಗಿ ಹೇಳಿಕೊಟ್ಟಿದೆ.

ಇನ್ನೊಂದು ಆಕ್ಷೇಪ :– ಸೃಷ್ಟಿ ಹಾಗೂ ಲಯಗಳ ನಡುವಿನ ಅವಧಿಯಲ್ಲಿ ಸಕಲ ಜೀವ ಜಡ ವಸ್ತುಗಳಿಗೆಲ್ಲ ದೇವ, ಮಾನವ, ಪಶುಪಕ್ಷಿಯೆಂದು ಅವುಗಳ ಹೆಸರಿನಿಂದಲೇ ನಾವು ವ್ಯವಹಾರ ಮಾಡುವೆವು. ಹೀಗಿರಲು ಅವುಗಳೆಲ್ಲ ಭಗವಂತನ ನಾಮರೂಪಗಳೇ ಯೆಂಬ ನಿಶ್ಚಯವು ಹೇಗಾಗುವದು ? ಎಂದು ಪ್ರಶ್ನೆ. ಹೀಗೆ ಕೇಳುವವರು ಬಂಗಾರದ ಒಡವೆಗಳಾದ ಕಟಕ ಕುಂಡಲ ಮುಂತಾದ ಬಂಗಾರದ ಒಡವೆಗಳು ಅನೇಕ ಹೆಸರುಗಳುಗಳಿಂದ ಹೇಳಲ್ಪಡುತ್ತಿದ್ದರೂ, (ಮೂಲತಃ, ಮುಖ್ಯತಃ) ಅವು ಬಂಗಾರವೆಂತಲೇ ಒಪ್ಪುವರೆ ? ಇಲ್ಲವೆ ? ಒಪ್ಪುವದಿಲ್ಲವೆಂದರೆ, ಕಣ್ಣಿಗೆ ಕಾಣುವ, ಪ್ರತ್ಯಕ್ಷ ಅನುಭವವನ್ನು ಅವರು ಅಲ್ಲಗಳೆದಂತಾಗುವದು, ಅಂಥವರ ಮಾತನ್ನು ಜ್ಞಾನಿಗಳು ಗಮನಿಸಬೇಕಿಲ್ಲ. ಇನ್ನು, (ಆ ಒಡವೆಗಳು ಭಿನ್ನ ಭಿನ್ನ ಹೆಸರು ರೂಪಗಳನ್ನು ತಾಳಿದ್ದರೂ)ಅವು (ಮೂಲತಃ)

ಬಂಗಾರವೆಂದೇ ಒಪ್ಪುತ್ತಿದ್ದರೆ, ಸರಿಯಾಯಿತು. ಅವರ ಅಭಿಪ್ರಾಯವೂ ನಮ್ಮ ತೆಯೆ ಆದಂತಾಯಿತು.

-(ಯಥೇತಿ) ನಿರ್ಮಿತಿಯಾದ ಮೇಲೆ ಹಾಗೂ ನಾಶವಾಗುವವರೆಗಿನ ನಡ ವಿನ ಅವಧಿಯಲ್ಲಿ, (ಕಟಕ ಕುಂಡಲಗಳೆಂಬ) ಭಿನ್ನಭಿನ್ನ ಹೆಸರುಗಳಿಂದ ಕರೆಯಲ್ಪ ಟ್ಟರೂ, ಆ ವಸ್ತು ಬಂಗಾರವೇ ಆಗಿರುವದು. ಅದೇ ಮೇರೆಗೆ ಚರಾಚರ ವಸ್ತು ಗಳು ಭಿನ್ನಭಿನ್ನ ಹೆಸರುಗಳಿಂದ ಕರೆಯಲ್ಪಡುತ್ತಿದ್ದರೂ, ಅವುಗಳೆಲ್ಲ ನಾನೊಬ್ಬನೆ ಆಗಿರುವನು. ಅವೆಲ್ಲ ಹೆಸರು ನನ್ನ ಗುಣರೂಪಗಳ ನಾಮಗಳೇ. -ಇನ್ನೊಂದು ಸಂದೇಹ. ಬಂಗಾರದ ತೇರು, ಶಂಖ ಮುಂತಾದವುಗಳನ್ನು ಯಥೋಚಿತ ರೂಪ ಆಕಾರಗಳನ್ನು ಚನ್ನಾಗಿ ಎದ್ದು ಕಾಣುವಂತೆ ನಿರ್ಮಿಸಿಲ್ಲವೆಂಬ ಕಾರಣದಿಂದ ಅವುಗಳ ನಿರ್ಮಿತಿಯ ( ರಚನೆಯ ) ಮೊದಲು ಮತ್ತು ನಂತರದಲ್ಲಿ ಅವುಗಳ ಗೆಲ್ಲ ಬಂಗಾರವೆಂದು ಸ್ಪಷ್ಟವಾಗಿ ಹೇಳುವದು ಶಕ್ಯವಿದೆ, ಆದರೆ ( ಅವುಗಳ ನಿರ್ಮಿತಿ ಮತ್ತು ನಾಶಗಳ ) ನಡುವಿನ ಅವಧಿಯಲ್ಲಿ, ರಥ ಶಂಖಾದಿಗಳನ್ನು ಒಳ್ಳೇ ಕುಶಲತೆಯಿಂದ, ರಚಿಸಿದಾಗ್ಗೆ, ಅವುಗಳಿಗೆಲ್ಲ (ಬರೀ) ಬಂಗಾರವೆಂಬುದೇ ಹೆಸರಿನಿಂದ ಕರೆಯುವದು ಶಕ್ಯವಾಗದು. ಈ ಕಾರಣದಿಂದಲೇ, ಅವುಗಳಿಗೆ ಬರೀ ಬಂಗಾರವೆಂಬದೊಂದೇ ಹೆಸರಿನಿಂದ ಕರೆಯದೆ,- 'ಇದು ಬಂಗಾರದ ಶಂಖ' 'ಇದು ಬಂಗಾರದ ರಥ' - ಈ ರೀತಿಯಾಗಿ ಅವುಗಳನ್ನು ಉಲ್ಲೇಖಿಸುವದು ರೂಢವಾಗಿದೆ. ಆಗಲೂ ಶಂಖ, ರಥವೆಂದೇ ಅವುಗಳನ್ನು ಕರೆಯಬಹುದಲ್ಲವೇ? ಬಂಗಾರದ ರಥ, ಬಂಗಾರದ ಶಂಖ,- ಎಂದು ಏಕೆ ಹೇಳಬೇಕು? (ಬಂಗಾರ ದಿಂದ ಮಾಡಿದ) 'ಹಿರಣ್ಮಯ' ವೆಂಬ ಶಬ್ದವನ್ನು ಬಿಟ್ಟುಕೊಟ್ಟರೆ ಏನು ಹಾನಿ ಯುಂಟಾಗುವದು? ಹಾಗೆ ಹೇಳದಿದ್ದರೂ ಅವು ಬಂಗಾರದಂತೆ, ಬಂಗಾರವಾ ಗಿಯೆ ಉಳಿಯುವವು. ಅವುಗಳಿಗೆ ಮೂಲ ವಸ್ತುವಾದ ಬಂಗಾರವು ಬದಲಿ ಸುವದಿಲ್ಲ. ಅದಕ್ಕಿಂತಲೂ ಅವುಗಳಿಗೇನೆ, 'ಇದು ಬಂಗಾರದ ಶಂಖ, ಬಂಗಾರದ ಬಳಿ' ಇತ್ಯಾದಿಯಾಗಿ ಹೇಳುವದು ಹೆಚ್ಚು ಸಮಂಜಸ, ಹೆಚ್ಚು ಸಯುಕ್ತಿಕವಾದುದು. ಮೇಲಿನ ಶಂಕೆಗೆ ಇದೇ ಸಮಾಧಾನವಾಗಿದೆ.

- (ಯಥೇತಿ) :- ಬಂಗಾರಕ್ಕೆ (ಕಟಕ ಕುಂಡಲಾದಿ) ಅವುಗಳಿಗೆ ಅನುರೂ ಪಾದ ರೂಪು ಆಕಾರಗಳನ್ನು ಕುಶಲತೆಯಿಂದ ಕೊಡದಿದ್ದರೆ, ಅವುಗಳ ರಚ ನೆಯ ಮೊದಲು ಮತ್ತು ಅನಂತರ, ಅವು ಬಂಗಾರದ ವಸ್ತುವೆಂದು ಲೋಕದಲ್ಲಿ ವ್ಯವಹಾರ ಮಾಡುವದು ಎಲ್ಲರಿಗೂ ಶಕ್ಯವಾಗದು. ತುಂಬಾ ವಿವೇಕಿಗಳಾದ ವರು ಮಾತ್ರ ಅವು ಬಂಗಾರದ ವಸ್ತುವೆಂದು ತಿಳಿದುಕೊಳ್ಳಬಲ್ಲರು. ಅಜ್ಞಾನಿ

ಗಳಿಗೆ ಅದರ ಅರಿವು ಆಗದಿರಬಹುದು. ಅಷ್ಟು ಮಾತ್ರದಿಂದ (ಇದೊಂದೇ ನಿಮಿತ್ತಕ್ಕಾಗಿ), ಅನೇಕ ಹೆಸರುಗಳಿಂದ ಕರೆಯುವ ಬಂಗಾರದ ವಸ್ತುವೆ ಆಗಿರುವದಲ್ಲದೆ ಅದು ಮತ್ತೇನಾದರೂ ಆಗದು, ಅದೇ ರೀತಿಯಲ್ಲಿ, ನಾನಾದರೂ (ಭಗವಂತನಾದರೂ ವಿಶ್ವದ ಉತ್ಪತ್ತಿಯ ಮೊದಲು, ಹಾಗೂ ಅನಂತರ (ಆಯಾ ಚರಾಚರ ವಸ್ತುಗಳಲ್ಲಿ) ಭಗವಂತನೆಂಬ ಸುಸ್ಪಷ್ಟ (ಎದ್ದು ಕಾಣುವ) ರೂಪ ಆಕೃತಿಯಲ್ಲಿ ಕಾಣದಿರುವದರಿಂದ, (ಜ್ಞಾನಿಗಳಲ್ಲದ) ಸಾಮಾನ್ಯ ಜನರು ಅವುಗಳಲ್ಲಿ ಅಂತರ್ಯಾಮಿಯಾಗಿರುವ ನನ್ನನ್ನು ಗುರುತಿಸಲಾರರು; ಅವುಗಳಿಗಿರುವ ಭಿನ್ನಭಿನ್ನ ಹೆಸರುಗಳೆಲ್ಲ ನನ್ನ (ಗುಣ-ರೂಪಗಳ) ಹೆಸರುಗಳೇ ಎಂಬ ಪ್ರಜ್ಞೆಯು ಅವರಿಗೆ (ಸುಲಭವಾಗಿ) ಉಂಟಾಗದು. ನಡುವಿನ ಅವಧಿಯಲ್ಲಿ ವಿಶ್ವದ ಎಲ್ಲ ವಸ್ತುಗಳಲ್ಲಿ ಅವುಗಳಿಗೆ. ಅನುರೂಪವಾದ ಸುಸ್ಪಷ್ಟ ರೂಪು ಆಕೃತಿಯಲ್ಲಿ ನಾನು ಕಾಣಿಸಿಕೊಂಡರೂ, -ಇವೆಲ್ಲ ರೂಪಗಳು (ಭಗವಂತನ) ನನ್ನ ರೂಪಗಳೇ, ಇವೆಲ್ಲ ಭಿನ್ನಭಿನ್ನ ಹೆಸರುಗಳು, (ಭಗವಂತನ) ಹೆಸರುಗಳೇ. ಎಂದು (ಜ್ಞಾನಿಗಳಲ್ಲದ) ಉಳಿದೆಲ್ಲ ಸಾಮಾನ್ಯ ಜನರೂ ಆ ರೀತಿಯಲ್ಲಿ ನಡೆದುಕೊಳ್ಳಲಾರರು. ಆದರೆ ನನ್ನ (ಭಗವಂತನ) ಬಗ್ಗೆ (ನಿರ್ದೋಷ, ನಿಃಸಂದಿಗ್ಧ) ತಿಳುವಳಿಕೆಯುಳ್ಳ ನಿಷ್ಣಾತರಾದ ಜ್ಞಾನಿಗಳು ಮಾತ್ರ ನನ್ನನ್ನು ಸರಿಯಾಗಿ ತಿಳಿದುಕೊಳ್ಳಲು ಸಮರ್ಥರು, ದೇವ, ಮಾನವ, ಪಶು-ಪಕ್ಷಿ ಮುಂತಾದ ಜೀವಿಗಳ ಶರೀರದಲ್ಲಿ ಅಂತರ್ಯಾಮಿಯಾಗಿ ನಿಯಾಮಕನಾದ ಪ್ರಭುವಾಗಿ ನೆಲಿಸಿ, ಅವರೆಲ್ಲರ ಕಾರ್ಯಗಳಿಗೆಲ್ಲ ಪ್ರೇರಕ, ಪ್ರವರ್ತಕನಾದುದರಿಂದ, ಅವರವರ ಹೆಸರುಗಳಿಂದ ಕರೆಯಲ್ಪಡುವವನು ಭಗವಂತನೇ. ಆತನಿಗೆ ಅಧಿಷ್ಠಾನಗಳಾಗಿರುವ ವಿವಿಧ ಸಕಲ ವಸ್ತುಗಳು ಭಗವಂತನ ಪ್ರತೀಕಗಳು, ಆತನ ಕೇವಲ ಪ್ರತಿಮೆಗಳಂತಿರುವವು. ಸಕಲ ವಸ್ತುಗಳ ಬಗ್ಗೆ (ಅವುಗಳಲ್ಲಿ ಪರಮಾತ್ಮನನ್ನೇ ಕಾಣುವ) ತಾತ್ವಿಕ ದೃಷ್ಟಿಯನ್ನು ತಾಳಲಾರದ ಸಾಮಾನ್ಯ ಜನರು ತಾವು ಜೀವನದಲ್ಲಿ ಬಳಸುವ ಸಕಲ ವಸ್ತುಗಳನ್ನು 'ಭಗವಂತನೆಂಬ' (ಒಂದೇ ಹೆಸರಿನಿಂದ ಕರೆಯುವದು ಯೋಗ್ಯವೆನಿಸದು. ಶಂಖರಥಾದಿಗಳನ್ನು ಶಂಖ-ರಥ ಮುಂತಾದ ಅವುಗಳ ಹೆಸರಿನಿಂದ ಕರೆದರೂ, ಅವುಗಳಲ್ಲಿರುವ ಬಂಗಾರವು ಬಂಗಾರವಾಗಿಯೆ ಉಳಿಯುವದು. ಈ ರೀತಿಯಾಗಿ ಲೌಕಿಕ ವಸ್ತುಗಳಿಗಾಗಿ ನಾವು ಬಳಸುವ ಹೆಸರುಗಳು (ಶಬ್ದಗಳು) ಅನೇಕವಾಗಿದ್ದರೂ ಅವೆಲ್ಲ ವಸ್ತುಗಳು ಆ ವಸ್ತುಗಳಲ್ಲಿ ಅಧಿಷ್ಠಾತನಾದ ಭಗವಂತನ ನಾಮಗಳೇ ಆಗಿರುವವು. ಎಂಬುದನ್ನು ತಿಳಿದು ಅನೇಕ ಪೂರ್ವಿಕರು ಆ ರೀತಿಯಲ್ಲಿ ಆಚರಿಸಿದ ಪರಂಪರೆ ಇರುವದು. ಆದುದರಿಂದ, ಸಕಲ ಶಬ್ದಗಳು ಭಗವಂತನಿಗಾಗಿ

ಮೀಸಲು, ಬೇರೆ ಯಾರಿಗಾದರೂ ಅವುಗಳನ್ನು ಬಳಸಕೂಡದೆಂಬದು ಇವೆ
ಆಧಾರ, ವಿವೇಚನೆಗಳಿಂದ ಸಿದ್ಧವಾಯಿತು.

ಹೀಗಿರುವದರಿಂದ, ಭಗವಂತನ ನಾಮಗಳೇ ಆಗಿರುವ ಸಕಲ ಶಬ್ದಗಳನ
ಅನ್ಯತ್ರ (ಬೇರೆ ವಸ್ತುಗಳಿಗಾಗಿ) ಉಪಯೋಗಿಸದಿರುವದೇ 'ಮೌನ'ವೆಂಬುವದು
ಈ ಬಗೆಯ ಮೌನವನ್ನು ಆತ್ಮಸಾತ್ ಮಾಡಿಕೊಳ್ಳುವದು ಅಗತ್ಯವಾಗಿದೆ
ಎಂಬುದು ಇಲ್ಲಿ ಸೂಚಿತವಾಗಿದೆ. ಈ ಅಭಿಪ್ರಾಯದಿಂದಲೇ, ಸಕಲ ವೇದಗಳು
ಭಗವಂತನ ನಾಮಗಳನ್ನೇ ಪ್ರತಿಪಾದಿಸುವವು 'ಸ್ವಾಧ್ಯಾಯ'ವೆಂದು ಹೇಳಲ
ಡುವ ವೇದಾಧ್ಯಯನವು,- ಭಾಗವತ ಧರ್ಮಗಳಲ್ಲಿಯೆ ಸಮಾವೇಶವಾಗುವು
ರಿಂದ, 'ಸ್ವಾಧ್ಯಾಯ' ವೆಂಬ ಭಾಗವತ ಧರ್ಮವನ್ನೂ ಅರಿತುಕೊಂಡು ಅಗ
ವಾಗಿ ಆಚರಿಸಬೇಕು. ಎಂಬುದನ್ನೂ ಇಲ್ಲಿ ಸೂಚಿಸಲಾಗಿದೆ. ಎಂಬುದನ್ನು ತಿಳಿಯ
ಬೇಕು. (ಮೌನ ೧೪)

**||೩೧೧|| ಅತಃ ಕವಿರ್ನಾಮಸು ಯಾವದರ್ಥಃ**
**ಸ್ಯಾದಪ್ರಮತ್ತೋಽವ್ಯವಸಾಯಬುದ್ಧಿಃ ।**
**ಸಿದ್ಧೇಽನ್ಯಥಾರ್ಥೇ ನ ಯತೇತ ತತ್ರ**
**ಪರಿಶ್ರಮಂ ತತ್ರ ಸಮೀಕ್ಷಮಾಣಃ || ೨-೨-೩**

ಶುಕರು
ಕಾಲ[illegible]

ಶ್ರೀ ಶುಕರು ಭಾಗವತ ಶಾಸ್ತ್ರದ ಮುಖ್ಯ ಸಾರವನ್ನು ಸಂಕ್ಷಿಪ್ತವಾ
ಹೇಳುವರು.

ಇಲ್ಲಿ ಒಂದು ಸಂದೇಹ ಉಂಟಾಗುವದು ಏನೆಂದರೆ, ಸಕಲ ಶಬ್ದಗಳನ
ಭಗವಂತನಿಗಾಗಿಯೆ ಮಾತ್ರ ಉಪಯೋಗಿಸಬೇಕೆಂಬ ಭಾಗವತ ಧರ್ಮವಾ
ಮೌನ ವ್ರತದಂತೆ ನಡೆದುಕೊಂಡರೆ, ಶರೀರದ ರಕ್ಷಣೆಗೆ ಜೀವನೋಪಾಯವಾ
ರುವ ಕೊಡ ತೆಗೆದುಕೊಳ್ಳುವ ನಿತ್ಯದ ವ್ಯವಹಾರವು ಹೇಗೆ ನಡೆದೀತು ?

**ಅರ್ಥ:-** (ಈ ಪ್ರಶ್ನೆಗೆ ಉತ್ತರವನ್ನು ಹೇಳುವರು)

- (ಅತಃಕವಿ;) ಒಂದನ್ನೂ ಬಿಡದೆ, ಸಕಲ ಶಬ್ದಗಳೂ ಭಗವಂತ
(ಅನಂತಗುಣ-ಕ್ರಿಯಾ ವಾಚಕಗಳಾದ) ನಾಮಗಳೇ ಆಗಿರುವವೆಂದು ಹಿ
ಹೇಳಿದೆ. ಕೇವಲ ಭಗವಂತನವೇ ಆಗಿರುವ ಆತನ ನಾಮಗಳನ್ನು ಅನ್ಯ ದೆ
ತೆಗಳಿಗಾಗಿ ಭಗವಂತನ ನಾಮಗಳನ್ನು ಉಪಯೋಗಿಸಿದರೆ, (ಅಪಾತ್ರರ
ಅಸಮರ್ಥರೂ, ಆಗಿರುವ)ಅನ್ಯದೇವತೆಗಳು (ಅಪೇಕ್ಷಿತ)ಯಾವ ಫಲವನ್ನೂ ಕೊ

ಲಾರರು. ಆದುದರಿಂದ ಭಗವಂತನನಾಮಗಳನ್ನು ಅವರಿಗಾಗಿ ಉಪಯೋಗಿಸಕೂಡ ದೆಂಬುದು ನಿಶ್ಚಿತವಾದಮಾತು. ಅಂತೆಯೆ ಮಹಾಪುರುಷಾರ್ಥರೂಪವಾದಮೋಕ್ಷದ ಉದ್ದೇಶಕ್ಕಾಗಿ, ಭಗವಂತನಿಗಾಗಿಯೆ ಸಕಲ ಶಬ್ದಗಳನ್ನು ಉಪಯೋಗಿಸಬೇಕೆ ನ್ನುವದೂ ನಿಶ್ಚಿತವಾದ ಮಾತು. ಆದುದರಿಂದ, ಭಗವಂತನನ್ನು ಬಿಟ್ಟು ಅನ್ಯತ್ರ (ಭಗವದ್ವಾಚಕ) ಶಬ್ದಗಳನ್ನು ಉಪಯೋಗಿಸುವದರಿಂದ (ಮುಂದೆ) ಒದಗುವ ಅನರ್ಥಗಳನ್ನು ಮುಕ್ತಿಯನ್ನು ಒದಯಿಸುವ ಸಾಧಕನು ಚನ್ನಾಗಿ ಮನಸ್ಸಿನಲ್ಲಿ ತಂದುಕೊಳ್ಳಬೇಕು. ಆದರೆ ಈ ಮಾತು ಚನ್ನಾಗಿ ಮನಸ್ಸಿನಲ್ಲಿ ಇನ್ನೂ ದೃಢವಾಗಿ ನೆಲಿಸದಿರುವದರಿಂದ (ಮನಸ್ಸು ಆ ಬಗ್ಗೆ ಹೊಯ್ದಾಡುತ್ತಿರುವದ ರಿಂದ), ಭಗವದ್ವಾಚಕ ಶಬ್ದಗಳನ್ನು ಅನ್ಯತ್ರ ಉಪಯೋಗಿಸುವಾಗ್ಗೆ ತಪ್ಪು ಮಾಡದಂತೆ ತುಂಬಾ ಜಾಗರೂಕನಾಗಿರಬೇಕು. ಭಗವದ್ವಾಚಕ ಶಬ್ದಗಳನ್ನು ಅನ್ಯತ್ರ ಅನಿವಾರ್ಯವಾಗಿ ಉಪಯೋಗಿಸಲೇ ಬೇಕಾದರೆ, ತನ್ನ ಶರೀರ ರಕ್ಷ ಣೆಗೆ ಎಷ್ಟು ಅಗತ್ಯವೊ, ಅಷ್ಟೇ ಶಬ್ದಗಳನ್ನು ಮಾತ್ರ ಮಿತಿಯಿಂದ (ಅನ್ಯತ್ರ) ಬಳಸಬೇಕು.

ಹೀಗೆ ಹೇಳಿರುವರು :– ಯಾವ ವಸ್ತು ಯಾವನದು – (ಒಡೆತನದಲ್ಲಿ) ಆಗಿ ರುವದೋ, ಆತನಿಗೇನೆ ಅದನ್ನು ವಿವೇಕಿಯಾದವನು ಕೊಡಬೇಕು. ಎಂಬುದು ಲೋಕದಲ್ಲಿ ಸಿದ್ಧವಾಗಿರುವ ಸಂಗತಿಯಾಗಿದೆ. 'ನಾಮಾನಿ.. ಆವಿಶಂತಿ' ಸಕಲ ಶಬ್ದಗಳೂ ಪರಮಾತ್ಮನಲ್ಲಿ ಸೇರ್ಪಡೆಯಾಗಿರುವವು, ಭಗವದ್ವಾಚಕಗಳಾಗಿರುವ ವೆಂದು ಶ್ರುತಿಗಳು ಘಂಟಾಘೋಷವಾಗಿ ಪ್ರತಿಪಾದಿಸುತ್ತಿವೆ. ವಸ್ತುವಿನ (ನಿಜ ವಾದ) ಒಡೆಯನಿಗೇನೆ ಆ ವಸ್ತುವನ್ನು ಕೊಡಬೇಕೆನ್ನುವ ಲೋಕರೂಢಿಯನ್ನು ಅನುಸರಿಸುವವರು, ಸಕಲ ಶಬ್ದಗಳನ್ನೂ ಅವುಗಳಿಂದ ವಾಚ್ಯನಾದ, (ಅವುಗಳಿಗೆ ಒಡೆಯನಾಗಿರುವ) ಪರಮಾತ್ಮನಿಗಾಗಿಯೆ ಬಳಸುವದು ಯೋಗ್ಯವಾಗಿದೆ. ಹೀಗೆ ಮಾಡಲು ಸರ್ವಶಬ್ದಗಳು ಪರಮಾತ್ಮನವೇ ಆಗಿರುವದೆಂಬುದೇ ಕಾರಣವಲ್ಲ. ಹೀಗೆ ಮಾಡುವದರಿಂದ ಪರಮ ಪುರುಷಾರ್ಥವೂ (ಮೋಕ್ಷವು) ದೊರೆಯುವ ದೆಂದು ಹಿಂದೆ ಹೇಳಿದೆ. ಹೀಗಿರುವಾಗ್ಗೆಯೂ, ಪರಮ ಪುರುಷಾರ್ಥವನ್ನು ಕೊಡುವ ಪರಮಾತ್ಮನನ್ನು ಬಿಟ್ಟು, ಪರಮ ಪುರುಷಾರ್ಥ ಕೊಡಲು ಅಸಮರ್ಥ ರಾದವರಲ್ಲಿ ಭಗವಂತನ ನಾಮಗಳಾದ ಶಬ್ದಗಳನ್ನು ಉಪಯೋಗಿಸಿದರೆ, ಅದರಿಂದ (ಉತ್ತಮವಾದ) ಯಾವ ಪ್ರತಿಫಲವೂ ದೊರೆಯದೆಂದು ಹಿಂದೆ ಹೇಳಿದೆ. ಹೀಗೆ ಮಾಡುವದೆಂದರೆ, ಹೀನ ಜನರ ವಸತಿಯಲ್ಲಿ ಹರಿಯುತ್ತಿರುವ ಬೀದಿಯ ನೀರಿಗೆ 'ಇದು ಗಂಗಾಜಲ' ಎಂದು ಕರೆದಂತಾಗುವದು, ಅನರ್ಥವೆ ಅದರಿಂದ ಉಂಟಾ ದೀತು. ಹೀಗಿರಲು ಭಗವದ್ವಾಚಕ ಶಬ್ದಗಳನ್ನು ಅನ್ಯತ್ರ ಉಪಯೋಗಿಸುವದ

ರಲ್ಲಿ ಪುರುಷಾರ್ಥಪ್ರಾಪ್ತಿಯಿಲ್ಲ, ಅದಲ್ಲದೆ ಅನರ್ಥಕಾರಿಯೂ ಆಗಿರುವದು ಆ
ದರಿಂದ ಹಾಗೆ ಮಾಡಕೂಡದು. ಭಗವಂತನಿಗೇನೆ 'ರಾಜ' (ದೊರೆ) ಯೆ
ಹೆಸರು. 'ನನಗೆ ಅನ್ನಕೊಡು, ಬಟ್ಟೆಕೊಡು', ಎಂದು ರಾಜ ಶಬ್ದವಾಚಕ
ಭಗವಂತನಿಗೆ ನಾವು ಬೇಡಿಕೊಳ್ಳಬೇಕಾಗಿಲ್ಲ. ಜಗತ್ತಿನ ಸೃಷ್ಟಿ ಹಾಗೂ
ಗಳನ್ನು (ಪಕ್ವಕಾಲದಲ್ಲಿ) ಭಗವಂತನು ಮಾಡುವಂತೆ, ಜಗತ್ತಿನ ಯೋಗಕ್ಷೆ
ವನ್ನೂ ಪಾಲನ ಪೋಷಣಗಳನ್ನೂ ನಾವು ಬೇಡಿಕೊಳ್ಳದಿದ್ದರೂ ಆತನು ಮಾ
ಮಾಡುವನು. ಈ ಬಗೆಯ (ದೃಢ) (ಹೊಯ್ದಾಡದ-ನಿಶ್ಚಲ) ಬುದ್ಧಿಯುಳ್ಳ
ಭಗವದ್ವಾಚಕ ಶಬ್ದಗಳನ್ನು ಅನ್ಯತ್ರದಲ್ಲಿ ಎಂದಿಗೂ ಉಪಯೋಗಿಸುವ
ಇಷ್ಟೊಂದು ದೃಢಬುದ್ಧಿ (ಶ್ರದ್ಧೆ)ಯಿಲ್ಲದ ಮೋಕ್ಷಾಪೇಕ್ಷಿಯಾದ ಸಾಧಕ
ಮನೋದೋಷವಾದ ಚಾಂಚಲ್ಯದಿಂದ ಭಗವದ್ವಾಚಕ ಶಬ್ದಗಳನ್ನು ಉಪ
ಗಿಸಬೇಕಾದಲ್ಲಿ ದೇಹಧಾರಣೆಗೆ ಅತ್ಯಗತ್ಯವಿರುವಷ್ಟು ಮಾತ್ರ ಮಿತಿಯಿಂದ
ಸಬೇಕು. ಇದು ಆತನಿಗೆ 'ಇತಿಕರ್ತವ್ಯತಾ' ಮಾಡಲೇಬೇಕಾದ ಕಾ
ಶಬ್ದಗಳ ಬಳಕೆಯಲ್ಲಿ 'ಪ್ರಮಾದ' -ತಪ್ಪು ಆಗದಂತೆ ನೋಡಿಕೊಳ್ಳಬೇ
ಎಂದು ಹೇಳುವಲ್ಲಿ ಇದೇ ಅಭಿಪ್ರಾಯವಿದೆ. ಸರ್ವ ಶಬ್ದಗಳು ಭಗವದ್ವಾ
ವೆಂಬುದನ್ನು ಮರೆಯುವದೇ 'ಪ್ರಮಾದ' (ತಪ್ಪು) ಎನಿಸುತ್ತದೆ. ಕುದುರೆ,
ರಥ, ಛತ್ರ ಚಾಮರ ಮುಂತಾದವುಗಳು. (ಫಲಕ) ಢಾಲುಧಾರಿಗಳು, ಅ
ರಕ್ಷಣೆಗಾಗಿ ಅರಸೊತ್ತಿಗೆ, ರಾಜ್ಯದ ರಕ್ಷಣೆಗಾಗಿ ವೀರರಾದ ಸೈನಿಕರು, ಭ
ದ್ವಾಚಕ ಶಬ್ದಗಳನ್ನು ಇವರಿಗಾಗಿ ಉಪಯೋಗಿಸುವವರಿಗೆ, ಈ ವಸ್ತು
ದೊರೆಯದೆ, ನಿಷ್ಠುರ ಮಾತು ' ಅಪಮಾನಗಳನ್ನು ಎದುರಿಸಬೇಕಾಗುವ
ಒಂದು ವೇಳೆ ದೊರೆತರೆ, ಅವುಗಳನ್ನು ಉಳಿಸಿಕೊಳ್ಳುವದಕ್ಕಾಗಿ ಅತೀವ ಶ್ರ
ಪಡಬೇಕಾಗುವದು. ಆದುದರಿಂದ, ಜ್ಞಾನಿಗಳು (ಶಬ್ದಗಳ ಉಪಯೋಗದ ಬ
ಹೇಳಿಕೊಟ್ಟಿರುವ ಉಪದೇಶವನ್ನು ಸದಾ ಮನಸ್ಸಿನಲ್ಲಿ ತಂದುಕೊಂಡು, ಶರಿ
ಪೋಷಣೆಗೆ ಅತ್ಯಗತ್ಯವಿರುವ ವಸ್ತುಗಳಿಗಾಗಿ ಮಾತ್ರ, (ಅನಿವಾರ್ಯವೆಂ
ಭಗವದ್ವಾಚಕ ಶಬ್ದಗಳನ್ನು ತೀರ ಮಿತವಾಗಿ ಉಪಯೋಗಿಸಬೇಕು. ವಾಸ್ತ
ವಾಗಿ ಮಾಡಬಾರದ ಈ ಕಾರ್ಯವನ್ನು (ಭಗವದ್ವಾಚಕ ಶಬ್ದಗಳನ್ನು ಅ
ಉಪಯೋಗಿಸುವದನ್ನು) ತೀರ ಕಠಿಣ ಆಪತ್ಕಾಲದಲ್ಲಿ ಮಾತ್ರ ಮಾಡಬೇ
ಆಪತ್ಕಾಲವಿರದಿದ್ದರೆ, ಎಂದಿಗೂ ಹಾಗೆ ಮಾಡಬಾರದು. (ಅನ್ಯಥಾ) ಅಂ
ಭಗವದ್ವಾಚಕ ಶಬ್ದಗಳನ್ನು ಅನ್ಯತ್ರ ಉಪಯೋಗಿಸದೆಯೆ ಚರಿತಾರ್ಥ ಸಾಗು
ತಿದ್ದರೆ, (ಜಗತ್ಪಾಲಕನಾದ ಪರಮಾತ್ಮನಿಂದ) ಚರಿತಾರ್ಥದ ವಸ್ತುಗಳು ತಾ
ಗಿಯೆ ದೊರೆಯುತ್ತಿರಲು, ಅವುಗಳಿಗಾಗಿ ಧಡಪಡ (ಸಾಹಸ) ಮಾಡಬಾರ

ಹಾಗೂ ಅವುಗಳನ್ನು ದೊರಕಿಸಲು ಭಗವದ್ವಾಚಕ ಶಬ್ದಗಳನ್ನು ಅನ್ಯತ್ರ ಉಪಯೋಗಿಸಬಾರದು.

॥೩೧೨॥ **ಸತ್ಯಾಂ ಕ್ಷಿತೌ ಕಿಂ ಕಶಿಪೋಃ ಪ್ರಯಾಸೈ-**
**ರ್ಬಾಹೌ ಸ್ವಸಿದ್ಧೇ ಹ್ಯುಪಬರ್ಹಣೈಃ ಕಿಂ ।**
**ಸತ್ಯಂಜಲೌ ಕಿಂ ಪುರುಧಾನ್ನಪಾತ್ರ್ಯಾ**
**ದಿಗ್ವಲ್ಕಲಾದೌ ಸತಿ ಕಿಂ ದುಕೂಲೈಃ ॥ ೨-೨-೪**

ಶುಕರು
ಪ. ರಾಜರಿಗೆ

ಭಗವದುಪಾಸಕರ ಜೀವನ ಕ್ರಮವನ್ನು ಶ್ರೀ ಶುಕರು ವರ್ಣಿಸಿರುವರು. ಪಕ್ವ ಯೋಗಿಗಳಲ್ಲಿಯೇ ಅವರವರ ಸ್ಥಿತಿಗತಿಯಿಂದ ಎರಡು ಪ್ರಕಾರಗಳಿರುವವು. ದೇಹಾಭಿಮಾನವನ್ನು ಪೂರ್ಣವಾಗಿ ಬಿಟ್ಟುಕೊಟ್ಟ (ನಾನು ನನ್ನದೆಂಬುದನ್ನು ಬಿಟ್ಟುಕೊಟ್ಟ) 'ವಿದೇಹಿ'ಗಳು ಮತ್ತು ಕಿಂಚಿತ್(ತುಸುಪುಟ್ಟಿಗೆ) ದೇಹಾಭಿಮಾನ ಉಳ್ಳವರು-ಎಂದು. ದೇಹಾಭಿಮಾನ ರಹಿತರಾದ ಪಕ್ವಯೋಗಿ(ವಿದೇಹಿ)ಗಳಿಗೆ ಭಗವದ್ವಾಚಕ ಶಬ್ದಗಳನ್ನು ಭಗವಂತನನ್ನು ಬಿಟ್ಟು ಅನ್ಯತ್ರ ಉಪಯೋಗಿಸುವ. ಅಗತ್ಯವೇ ಇರುವದಿಲ್ಲ. ಏಕೆಂದರೆ, ದೇಹಪೋಷಣೆಗೆ ಅತ್ಯಗತ್ಯವಿರುವ ವಸ್ತುಗಳು ಅವರಿಗೆ ಯಾವ ಪ್ರಯಾಸವಿಲ್ಲದೆ, ಯತ್ನ ಮಾಡದೆಯೇ ಶ್ರೀ ಹರಿ ಕೃಪೆಯಿಂದ ದೊರೆಯುವವು. ಅದು ಹೇಗೆಂಬುದನ್ನು ಇಲ್ಲಿ ತೋರಿಸುವರು.

**ಅರ್ಥ :-** (ಸತ್ಯಾಂ) (ಶಯ್ಯಾಭೂಮಿತ್ಥಲೇ-ಎಂಬಂತೆ,) ಮಲಗಿಕೊಳ್ಳಲು ಭೂಮಿಯು (ನಿರಾತಂಕ) ಹಾಸಿಗೆಯಿರಲು, ಬೇರೆ ಗಾದಿ-ಸುಪ್ಪತ್ತಿಗೆಯನ್ನು ದೊರಕಿಸಲು ಏಕೆ ಆಯಾಸ ಪಡಬೇಕು ? ದೇಹದೊಡನೆ ಬಂದಿರುವ ತೋಳುಗಳು ಇರಲು, ತಲೆದಿಂಬಿನ ಗೊಡವೆ ಏಕೆ ? ಯಾವಾಗಲೂ ಉಪಯೋಗಕ್ಕಾಗಿ ತಮ್ಮೊಡನೆ ಇರುವ ಬೊಗಸೆಯೆಂಬ ಪಾತ್ರೆಯಿರಲು ಅನ್ಯ (ದೊನ್ನೆ ಮುಂತಾದ) ಪಾತ್ರೆಗಳೇತಕ್ಕೆ ಬೇಕು ? ('ದಿಶೋಽಪಿವಸನಂ) ಶರೀರಕ್ಕೆ ಹೊದಿಕೆಯಾಗಿ (ಮೈಮೇಲೆ ಧರಿಸಲು) ದಶದಿಕ್ಕುಗಳು ಸುತ್ತಲೂ ಇರಲು, ಧರಿಸಲು ರೇಶಿಮೆಯ (ನೂಲಿನ) ಬಟ್ಟೆಗಳೇಕೆ ಬೇಕು ?

ಈ ರೀತಿಯಾಗಿ ಶರೀರ ಪೋಷಣೆಗೆ ಅತ್ಯಗತ್ಯವಿರುವ ವಸ್ತುಗಳು ಪಕ್ವಯೋಗಿಗಳಿಗೆ ಅನಾಯಾಸವಾಗಿ ದೊರೆಯುವದರಿಂದ, ಭಗವಂತನನ್ನು ಬಿಟ್ಟು ಅನ್ಯತ್ರ ಶಬ್ದಗಳ ಉಪಯೋಗವನ್ನು ಅವರು ಮಾಡಲೇಕೂಡದು.

॥೩೧೩॥ **ಚೀರಾಣಿ ಕಿಂ ಪಥಿ ನ ಸಂತಿ ದಿಶಂತಿ ಭಿಕ್ಷಾಂ**
**ನೈವಾಂಘ್ರಿಪಾಃ ಪರಭೃತಃ ಸರಿತೋಽಪ್ಯಶುಷ್ಯನ್ ।**

ಶುಕರು
ರಾಜರಿಗೆ

**ರುದ್ಧಾ ಗುಹಾಃ ಕಿಮುವಧೂತಸುಹೃನ್ನ ಕೃಷ್ಣಃ**
**ಕಸ್ಮಾದ್ಭಜಂತಿ ಕವಯೋ ಧನದುರ್ಮದಾಂಧಾನ್ ॥ ೨-೨-೫**

ಕಿಂಚಿತ್ ( ತುಸು ) 'ನನ್ನದು-ನಾನು' ಎಂಬ ದೇಹಾಭಿಮಾನಗಳುಳ್ (ಎರಡನೆಯ ಪ್ರಕಾರದ)ಪಕ್ವಯೋಗಿಗಳಿಗೂ ಕೂಡ,(ಭಗವನ್ನಾಮಗಳನ್ನು ಉದ ಪೂರ್ತಿಗಾಗಿ ಅನ್ಯತ್ರ ಉಪಯೋಗ ಮಾಡದೆಯೆ) ಕೇವಲ ದೇಹ ರಕ್ಷಣೆಗಾ ಬೇಕಾಗುವ ವಸ್ತುಗಳು ಹೆಚ್ಚಿನ ಪ್ರಯಾಸ - ಪ್ರಯತ್ನಗಳಿಲ್ಲದೆಯೆ ದೊರೆಯು ವೆಂಬುದನ್ನು ಇಲ್ಲಿ ತೋರಿಸುವರು.

**ಅರ್ಥ :-** ಬಹಳ ದಿನಗಳ ವರೆಗೆ ಉಟ್ಟು-ತೊಟ್ಟು - ಮನೆಯ ಹೊರ ಅಥವಾ ಊರ ಅಗಸೆಯ ಮುಂದೆ ಚಲ್ಲಿಕೊಟ್ಟ ಹರಕು ಹಳೆ ಬಟ್ಟೆಗಳು (ಛ ಬಿಸಿಲುಗಳಿಂದ ) ದೇಹವನ್ನು ರಕ್ಷಿಸಲು ದೊರೆಯುವದಿಲ್ಲವೆ ? ಪರೋಪಕಾ ಕ್ಕಾಗಿಯೆ ಬೆಳೆಯುವ (ಹಣ್ಣಿನ) ಗಿಡಗಳು, ಹಣ್ಣನ್ನು ತಾವು ತಿನ್ನದೆಯೆ, ನಮ ತಿನ್ನಲು ಕೊಡುವದಿಲ್ಲವೆ ? ತುಂಬಿ ಹರಿಯುವ ಎಲ್ಲ ನದಿಗಳು ಬತ್ತಿಹೋಗಿರುವವೆ ನಮ್ಮ ನೀರಡಿಕೆಯನ್ನು ಅವು ತಣಿಸಲಾರವೆ ? ಬೆಟ್ಟದ ಗವಿಗಳಿಗೆಲ್ಲ ಬೀಗ ಹಾ ರುವದೆ ? ವಾಸಕ್ಕಾಗಿ ಅವುಗಳಲ್ಲಿ ಆಸರ ದೊರೆಯದೆ ? ದೇಹಾಭಿಮಾನವನ ಸಂಪೂರ್ಣವಾಗಿ ಬಿಟ್ಟುಕೊಟ್ಟು ಪರಮದಯಾಳುವಾದ ಭಗವಂತನಿಗೆ ಅನ ಭಾವದಿಂದ ಮೊರೆಹೋಗುವ ತನ್ನ ಭಕ್ತರಿಗೆ ಶ್ರೀ ಕೃಷ್ಣನು ಸಖನಾಗಿಲ್ಲವೆ ಅನಿಮಿತ್ತ ಬಂಧುವಾಗಿಲ್ಲವೆ ? ಅಂಥವರ ಯೋಗಕ್ಷೇಮವನ್ನು ಆತನ ನೋಡಿಕೊಳ್ಳುವದಿಲ್ಲವೆ ?

ಹೀಗಿರಲು, ಭಗವಂತನ ಅನಂತ ಕಲ್ಯಾಣಗುಣಗಳನ್ನರಿತುಕೊಂಡ (ಕ ಗಳು), ಜ್ಞಾನಿಗಳು ಸಂಪತ್ತಿನ ಮದದಿಂದ ನಡೆಯುತ್ತಿರುವ ಸಿರಿವಂತರ ಮನೆ ಬಾಗಿಲನ್ನು ಏಕೆ ಕಾಯಬೇಕು ? 'ಧನದುರ್ಮದಾಂಧರು' (ಸಂಪತ್ತಿನ ಸೊ ನಿಂದ, ತಮ್ಮ ಸಾರಾಸಾರವಿವೇಕವೆಂಬ ದೃಷ್ಟಿಯನ್ನು ಕಳೆದುಕೊಂಡು ಕುರು ರಂತೆ ಇರುವರು.) ಎಂಬುದನ್ನು ಹಾಗೂ ನಿಜವಾಗಿ ಭಗವದ್ಭಕ್ತರಾದವ ಕೊಡುವ ಅನ್ನಾದಿಗಳನ್ನು ಸ್ವೀಕರಿಸಬಹುದೆಂಬುದನ್ನು ಈ ಶಬ್ದವು ಸೂಚಿ ತ್ತದೆ.

ಹೀಗೆ ಹೇಳಿರುವರು:- 'ಸಾಧೂನಾಂ'...... ವಿಸಿಧ್ಯತಿ' (೧೦-೧೧-೧ ನೋವು, ನಲಿವು, ಚಳಿ ಬಿಸಿಲು ಇತ್ಯಾದಿ ವಿರುದ್ಧ ಅನುಭವಗಳನ್ನು ಸರಿಸಮ ನವಾಗಿ ಕಾಣುವ ಸಮಚಿತ್ತರು (ಅವುಗಳಿಂದ ಚಿತ್ತ ವಿಕ್ಷೇಪವಾಗದಿರುವವ

ಈ ಬಗೆಯ ದ್ವಂದ್ವಾತೀತರು) ಹಾಗೂ ಮುಕ್ತಿಪ್ರದನಾದ ಶ್ರೀ ಮುಕುಂದನ ಚರಣಗಳನ್ನೇ ದೃಢವಾಗಿ ನಂಬಿದ ಮಹಾಯೋಗಿಗಳು, ಸಂಪತ್ತಿನಿಂದ ಸೊಕ್ಕೇರಿದ ನಿಂದ್ಯರಾದ ಸಿರಿವಂತರನ್ನು ಕಡೆಗಣಿಸುವರು. ಅವರನ್ನು ತಮ್ಮ ಗಣನೆಗೆ ತರುವದೇ ಇಲ್ಲ. ಸೊಕ್ಕೆಂಬುದನ್ನರಿಯದ ಬಡ ಭಕ್ತರಿಗೇನೆ, ಸಮದರ್ಶಿಗಳಾದ (ಸರ್ವತ್ರ ಪರಮಾತ್ಮನನ್ನು ಕಾಣುವ) ಸತ್ಪುರುಷರ ಸಮಾಗಮವು ದೊರೆಯುವದು, ಸಜ್ಜನರ ಸಹವಾಸದಿಂದ ಅವರಿಗೆ, ವಿಷಯ ಸುಖದ ಪ್ರಬಲವಾದ ಆಶೆ (ತೃಷೆ) ಉಡುಗಿಹೋಗುವದು. ಬಹುಬೇಗನೆ ಅವರು ಸಿದ್ಧಿ (ಮುಕ್ತಿ)ಯನ್ನು ಪಡೆಯುವರು.

ಅಥವಾ, -ಭಗವಂತನನ್ನು ಬಿಟ್ಟು, ಅನ್ಯತ್ರ (ಅನ್ಯ ವಸ್ತುಗಳಿಗಾಗಿ) ಭಗವನ್ನಾಮಗಳಾದ ಸಕಲ ಶಬ್ದಗಳನ್ನು ಬಳಸಲೇಕೂಡದು. ಎಂದು ಹೇಳಿದೆ.- ಎಂದರೆ, ಈ ರೀತಿಯಲ್ಲಿ ನಡೆದುಕೊಳ್ಳುವವರು ಎಲ್ಲಿಯಾದರೂ ಕಾಣಬರುವರೆ? ಎಂಬ ಪ್ರಶ್ನೆಗೆ ಉತ್ತರ ಹೇಳುವರು:- ಭಗವದ್ವಾಚಕ ಶಬ್ದಗಳನ್ನು ಅನ್ಯತ್ರ ಬಳಸದಂತೆ ಆಚರಿಸುವ ಯೋಗಿಗಳಾದ ಜನರು ಅನೇಕರಿದ್ದಾರೆ. ಆದುದರಿಂದ ಭಗವದ್ವಾಚಕ ಶಬ್ದಗಳನ್ನು ಅನ್ಯತ್ರ ಬಳಸದಂತೆ ನೀವಾದರೂ ಯಥಾಶಕ್ತಿ ನಡೆದುಕೊಳ್ಳಬೇಕು. ಶಬ್ದಗಳ ನಿಯಂತ್ರಿತ ಉಪಯೋಗಕ್ಕೇನೆ 'ಮೌನ' ವೆನ್ನುವರು. ಈ ಬಗೆಯ ಮೌನವನ್ನು ನೀವಾದರೂ ಯಥಾಶಕ್ತಿ ಆಚರಿಸಬೇಕು. ಇಂದ್ರಿಯಗಳನ್ನು ತೃಪ್ತಿಗೊಳಿಸಬೇಕೆಂದು ಸ್ವೇಚ್ಛಾಚಾರಿಗಳಾಗಿ (ಮನಬಂದಂತೆ) ನಡೆಯಬಾರದು. ಭಗವದ್ವಾಚಕ ಶಬ್ದಗಳನ್ನು ಅನ್ಯತ್ರ ಬಳಸದಿರುವದನ್ನು ಬಹುಕಾಲ ರೂಢಿಗೊಳಿಸಬೇಕು. ಒಮ್ಮೆ ಅದು ರೂಢವಾಯಿತೆಂದರೆ, ಕಾಲಾಂತರದಲ್ಲಿ ಅಂಥ ಮೌನವು ಸಿದ್ಧಿಸುವದು. ಎಂಬುದನ್ನೆ ಇಲ್ಲಿ ಸ್ಪಷ್ಟವಾಗಿ ತೋರಿಸಿರುವರು.

ಭಾಗವತ ಧರ್ಮೋಪದೇಶ ಪ್ರಕರಣ ಮುಗಿಯಿತು.



10 ಶ್ಲೋಕಗಳು



# ೨೧ ಬಿಂಬೋಪದೇಶ ಪ್ರಕರಣ

ಕವಿ ವಿದೇಹರಾ

॥೩೧॥ ಮನ್ಯೇऽಕುತಶ್ಚಿದ್ಭಯಮಚ್ಯುತಸ್ಯ
ಪಾದಾಂಬುಜೋಪಾಸನಮತ್ರ ನಿತ್ಯಂ ।
ಉದ್ವಿಗ್ನಬುದ್ಧೇರಸದಾತ್ಮಭಾವಾ-
ದ್ವಿಶ್ವಾತ್ಮನಾ ಯತ್ರ ನಿವರ್ತತೇ ಭೀಃ ॥ ೧೧-೨-೩೩

ಶ್ರೀ ಗೋಪಾಲಕೃಷ್ಣಾಯನಮಃ-

ಬಿಂಬೋಪಾಸನೆಯ ಬಗ್ಗೆ ಆಸ್ಥೆ-ಆದರಗಳನ್ನುಂಟು ಮಾಡಲು, ಈ ಉಪಾಸನೆಯಿಂದ ಸಕಲ ಪುರುಷಾರ್ಥಗಳು ಲಭಿಸುವವೆಂದು ಕವಿಯೆಂಬವನು ವಿದೇಹರಾಜನಿಗೆ ಹೇಳಿದ ಮಾತು.

ಬಿಂಬೋಪಾಸನೆಯನ್ನು ಪಡೆಯಲು ಯಾವ ಸಾಧನಗಳ ಅನುಷ್ಠಾನವನ್ನು ನಾನು ಮಾಡಬೇಕು? ಎಂಬ (ಸಾಧಕನ) ಹನ್ನೆರಡನೆಯ ಸಂದೇಹವನ್ನು ನಿವಾರಿಸಿದ್ದಾಯಿತು. ಈಗ್ಗೆ (ಈ ಪ್ರಕರಣದಲ್ಲಿ) ಬಿಂಬದ ರೂಪವು ಹೇಗೆ ಇರುವದು; ಬಿಂಬವು ಎಲ್ಲಿ ಇರುವದು ? ಹಾಗೂ ಬಿಂಬದ ಉಪಾಸನೆಯನ್ನು ಮಾಡುವ ವಿಧಾನವು ಯಾವ ಬಗೆಯದು ? ಎಂಬ ಒಂಬತ್ತನೇದ್ದನ್ನು ಮೊದಲು ಮಾಡಿಕೊಂಡು ಮೂರು ಶಂಕೆ (ಪ್ರಶ್ನೆ)ಗಳನ್ನು ನಿವಾರಿಸಬೇಕೆಂದು ಬಿಂಬರೂಪದ ತಿಳುವಳಿಕೆಯನ್ನು ಮಾಡಿಕೊಟ್ಟು ಬಿಂಬೋಪಾಸನೆಯನ್ನು ವಿವರಿಸಲು ಮೊದಲು, - ಬಿಂಬೋಪಾಸನೆಯ ಬಗ್ಗೆ ಆಸ್ಥೆ-ಆದರಗಳನ್ನು ಉಂಟುಮಾಡಲು ಅಪೇಕ್ಷಿತವಾದ (ಎಲ್ಲರೂ ಬಯಸುವ) ಸಕಲ ಪುರುಷಾರ್ಥಗಳನ್ನು ಪಡೆಯಲು ಬಿಂಬೋಪಾಸನೆಯು ಸಾಧನವಾಗಿರುವದೆಂಬುದನ್ನು ತೋರಿಸುವರು.

**ಅರ್ಥ:-** (ಮನ್ಯೇ) ಅಮಂಗಳವಾದ, (ಮುಕ್ತಿ ರೂಪವಾದ ಮಂಗಳ ಫಲಪ್ರಾಪ್ತಿಗೆ ಆತಂಕಗಳಾದ) ದೇಹಾದಿಗಳೇ ಆತ್ಮಾ (ನಾನು) ಹಾಗೂ ಅವೆಲ್ಲವೂ ನನ್ನದು ಎಂಬ ಅಹಂಕಾರ, ಮಮಕಾರಗಳ ಅಭಿಮಾನದಿಂದ, ಈ ಅಭಿಮಾನವೇ ಮೂಲ ಕಾರಣವಾಗಿರುವ ಸಂಸಾರದ ಜಂಜಾಟಕ್ಕೆ ನೊಂದುಕೊಂಡು, ಉದ್ವಿಗ್ನನಾಗಿರುವ ( ಮುಕ್ತಿಗೆ-ಉದ್ಧೃತಿಗೆ ) ಅಧಿಕಾರಿಯಾದ (ಯೋಗ್ಯತೆಯುಳ್ಳ) ಸಾಧಕನಿಗೆ, ಈ ಸಂಸಾರದ ಜಂಜಾಟವನ್ನು ದುಃಖವನ್ನು ತಪ್ಪಿಸಿಕೊಳ್ಳಲು ಒಂದೇ ಒಂದು ದಾರಿ. (ಉಪಾಯ)ವಿರುವದೆಂದು ನಾನು ಭಾವಿಸುವೆ, - ಅದೆಂದರೆ, ಶ್ರೀಹರಿಯ ಪಾದಕಮಲದ ಉಪಾಸನೆ, (ಸ್ಮರಣಾದಿ) ಅ

ಧನೆ ಮಾಡುವದು. ಶ್ರೀಹರಿಯ ಪಾದಸೇವನೆಯು ಸುತ್ತಲಿಂದಲೂ ಎರಗುವ ಭಯಗಳನ್ನೆಲ್ಲ ನಿವಾರಿಸುವದು. ಅಚ್ಯುತನ ಪಾದವನ್ನು ಆಶ್ರಯಿಸಿ ಭಜಿಸುವ ಭಕ್ತರಿಗೆ ಭಯವೆಂಬುದೇ ಇಲ್ಲ.

ಈ ಮಾತಿಗೆ ಶಾಸ್ತ್ರಗಳ ಹಾಗೂ ಭಾಗವತ ಶಾಸ್ತ್ರದ ಪ್ರಮಾಣವಿದೆ.

ಸಕಲ ಭಯಗಳೂ ದೂರವಾಗುವವು - ಎಂಬುದನ್ನು ಮನಸ್ಸಿನಲ್ಲಿ ಗಟ್ಟಿ ಮುಟ್ಟಿಯಾಗಿ ಬಿಂಬಿಸಲು, ಸಂಸಾರ ಭಯವೆಂದು ಹೇಳದೆ, ಸಂಸಾರಕ್ಕೆ ಮೂಲ ನಿಮಿತ್ತವಾಗಿರುವ (ಅಸದಾತ್ಮಭಾವಾತ್)ನಾನು, ನನ್ನದೆಂಬ ದುರಹಂಕಾರದಿಂದ ಉಂಟಾಗುವ ಭಯವೆಂದು ಹೇಳಿರುವರು. ಸಂಸಾರವೆಂದು ಹೇಳುವದಕ್ಕಿಂತಲೂ ನಾನು ನನ್ನದೆಂಬ ದುರಹಂಕಾರವು ಭಗವಂತನ ಪಾದವನ್ನು ಆಶ್ರಯಿಸಿ ಆರಾಧನೆ ಮಾಡುವದಕ್ಕೆ ಹೆಚ್ಚು ಸ್ಪಷ್ಟವಾಗಿ ವಿರುದ್ಧವಾಗಿದೆ. -ಸಂಸಾರಕ್ಕೆ ಈ ದುರಹಂಕಾರವೆ ಮೂಲ ಕಾರಣ .. ಮೂಲ ಕಾರಣವನ್ನೇ ಬೇರೂರಿಸಿ ಕತ್ತರಿಸಿ ಬಿಟ್ಟರೆ, ಸಂಸಾರದ ತಾಪತ್ರಯಗಳೆಲ್ಲ ಸುಲಭವಾಗಿ ನಿವಾರಣೆಯಾಗುವವು. 'ಬಿಂಬೋಪಾಸನಾಪ್ರಕರಣ'ದಲ್ಲಿ ಈ ಮಾತನ್ನು ಇನ್ನಷ್ಟು ಸ್ಪಷ್ಟವಾಗಿ ವಿವರಿಸಲಾಗಿದೆ. ಸಕಲ ದುಃಖಗಳನ್ನೂ ನಿವಾರಿಸುವ ಸಾಧನವಾಗಿರುವ ಶ್ರೀಹರಿಚರಣೋಪಾಸನೆಯನ್ನು ಮುಕ್ತಿಯನ್ನು ಬಯಸುವ ಸಾಧಕರು ಅತ್ಯಗತ್ಯವಾಗಿ ಕೈಕೊಳ್ಳಬೇಕು. ಎಂಬುದೇ (ಆಶಯ)

॥೩೧೫॥ **ವಿದ್ಯಾತಪಃಪ್ರಾಣನಿರೋಧಮೈತ್ರೀ-**
**ತೀರ್ಥಾಭಿಷೇಕವ್ರತದಾನಜಪ್ಯೈಃ ।**
**ನಾತ್ಯಂತಶುದ್ಧಿಂ ಲಭತೇಽಂತರಾತ್ಮಾ**
**ಯಥಾ ಹೃದಿಸ್ಥೇ ಭಗವತ್ಯನಂತೇ ॥** ೧೨-೩-೪೮

ಶುಕರು
ರಾಜನಿಗೆ

(ಅನೇಕ ಉದ್ವೇಗಗಳಿಂದ ಬಳಲುವ) ಅಶುದ್ಧ ಮನಸ್ಸೇ ಸಕಲ ದುಃಖಗಳಿಗೂ ಮೂಲ ಕಾರಣವೆಂದು ಶ್ರೀಶುಕರು ಹೇಳುವರು:-

ಇಲ್ಲಿ ಒಂದು ಪ್ರಶ್ನೆ ಭಗವಂತನ ಉಪಾಸನೆ ಆರಾಧನೆ ಮಾಡುವ ಮಾತ್ರದಿಂದಲೆ ಸಕಲ ದುಃಖಗಳ ಸಂಪೂರ್ಣ ನಿವಾರಣೆಯು ಹೇಗೆ ಆಗುವದು ?- ಈ ಪ್ರಶ್ನೆಗೆ ಹೀಗೆ ಉತ್ತರವನ್ನು ಹೇಳುವರು:- ಉದ್ವೇಗಗಳಿಂದ ಬಾಧಿತವಾದ ಅಶುದ್ಧ ಮನಸ್ಸೇ ಸಕಲ ದುಃಖಗಳಿಗೆ ಮೂಲ ಕಾರಣ (ನಿಮಿತ್ತ) ವಾಗಿರುವದು. ಉದ್ವೇಗವೆ (ಕದಡುವದೇ-ಅಸ್ವಸ್ಥವಾಗುವದೇ) ಮನಸ್ಸಿನ ಅಶುದ್ಧಿಯಾಗಿದೆ. ಚಿತ್ತ ವಿಕ್ಷೇಪದಿಂದಲೆ, ಉದ್ವಿಗ್ನತೆಯಿಂದಲೆ ದುಃಖ ಉಂಟಾ

ಗುವದರಿಂದ, ಉದ್ದಿಗ್ನವಾದ ಮನಸ್ಸು ದುಃಖಕ್ಕೆ ದಾರಿ ಮಾಡಿಕೊಡುವದ ಆದರೆ ಮನಸ್ಸು ಭಗವಂತನ ಪಾದಾರವಿಂದದಲ್ಲಿ ದೃಢವಾಗಿ ನೆಲಿಸಿದ ದುಃಖವೂ ಇಲ್ಲಿ, ದುಃಖಕ್ಕೆ ನಿಮಿತ್ತವಾಗಿರುವ ಉದ್ವೇಗವೂ ಮಾಯವಾಗುವದ ಮನೋದೋಷವೇ ನಿರ್ಮೂಲವಾಗುವದರಿಂದ, ಆದರಿಂದ ಒದಗುವ ದುಃಖ ದೂರವಾಗುವದು. ದುಃಖಕ್ಕೆ ಉದ್ವಿಗ್ನತೆಯೆ ಪ್ರಧಾನ ಕಾರಣವೆಂದು ಸೂ ಸಲು, 'ದುಃಖಿತ'ನಾದವನಿಗೆ ಎಂದು ಹೇಳದೆ, ' ಉದ್ವಿಗ್ನಮನಸ್ಸುಳ್ಳವನಿಗೆ ಎಂಬ ಶಬ್ದವನ್ನು ಅರ್ಥಸೂಚಕವಾಗಿ ಉಪಯೋಗಿಸುವರು. ದುಃಖಕ್ಕೆ ಕಾರ ವಾಗಿರುವ ಉದ್ವಿಗ್ನತೆಯನ್ನೇ ಮೊದಲು ಮಾಡಿರುವರು.

ಇನ್ನೊಂದು ಆಕ್ಷೇಪ:- ಉದ್ಬಿಗ್ನತೆಯ ಸೋಂಕಿಲ್ಲದ ನಿರ್ದೋಷ (ಶುದ್ಧ ಮನಸ್ಸಿನ ಮುಖಾಂತರ ಮಾಡುವ ಶ್ರೀಹರಿಯ ಉಪಾಸನೆ ಸಕಲ ದು:ಖ ಳನ್ನು ನಿವಾರಿಸುತ್ತಿದ್ಧರೆ, ವಿದ್ಯಾ (ತಪಸ್ಸು) ಇತ್ಯಾದಿ ಅನ್ಯ ಸಾಧನಗಳಿಂ ಒದಗುವ ಮನಃಶುದ್ಧಿಯನ್ನು ಪಡೆಯುವಂತಿರಲು,- (ಶ್ರೀಹರಿಯ)ಪಾದ ಕಃ ಲದ ಆರಾಧನೆಯಿಂದಲೇನೆ ಮಾತ್ರ ಸಕಲ ದುಃಖಗಳ ಭೀತಿಯು ತೊಲಗು ಡೆಂದು ಭಾವಿಸುವದೇಕೆ? ಈ ಪ್ರಶ್ನೆಗೆ ಉತ್ತರವೆಂದರೆ, –ವಿದ್ಯಾದಿ ಸಾಧನಗಳ ದಲೂ ಮನ:ಶುದ್ಧಿಯು ಒದಗಬಹುದು. ಹೀಗಿದ್ದರೂ ವಿದ್ಯಾದಿ ಸಾಧನಗಳಿಂ ಒದಗುವ ಮನ:ಶುದ್ಧಿಯಿಂದ ಸಕಲ ದುಃಖಗಳ ನಿವಾರಣೆಯಾಗುವದಿಲ್ಲ. ಅ ಮನ:ಶುದ್ಧಿಯಿಂದ ಕೆಲವೊಂದು ಡುಃಖಗಳು ಮಾತ್ರ ದೂರವಾಗುವವು. ಏಕೆ ದರೆ ಪರಿಪೂರ್ಣವಾದ (ಸರ್ವತೋಪರಿಯಾದ) ಮನ:ಶುದ್ಧಿಯಿಂದಲೆ ಸಕ ದುಃಖಗಳ ಭೀತಿಯು ತೊಲಗುವದು. ಶ್ರೀಹರಿ ಪಾದಕಮಲದಲ್ಲಿ ಮನಸ್ಸು ದೃ ವಾಗಿ ನೆಲಿಸುವದರಿಂದಲೆ ಪರಿಪೂರ್ಣವಾದ ಚಿತ್ತ ಶುದ್ಧಿಯು ಪ್ರಾಪ್ತವಾ ವದು. ಸಾಧನಕ್ಕೆ ಅನುಗುಣವಾಗಿ (ಅದಕ್ಕೆ ತಕ್ಕಂತೆ) ಫಲವು ದೊರೆಯುವ ರಿಂದ, ವಿದ್ಯಾದಿ ಸಾಧನಗಳಿಂದ ದೊರೆಯುವ ಚಿತ್ತ ಶುದ್ಧಿಯು ಅಪೂರ್ಣವ ದುದು. ಶ್ರೀಹರಿ ಪಾದ ಸೇವನೆಯಿಂದಲೇನೆ, ಪರಿಪೂರ್ಣ ಚಿತ್ತಶುದ್ಧಿಯಿಂದ ಸಕಲ ಸಾಂಸಾರಿಕ ಭಯಗಳ ಪರಿಪೂರ್ಣ ನಿವಾರಣೆಯಾಗುವದು. ಆದುದರಿಂ ಶ್ರೀಹರಿಪಾದಾಂಬುಜ ಸೇವನೆಯು ಪರಿಪೂರ್ಣವಾಗಿ ಭಯನಿವಾರಕವೆಂದು ಹೇ ಳುವದು ಯಥಾರ್ಥವಾಗಿದೆ.

**ಅರ್ಥ** :– (ವಿದ್ಯಾ ಇತಿ) :– (ನಿರಂತರವಾಗಿ, ನಿಷ್ಠಾಯುಕ್ತವಾಗಿ) ಭ ವಂತನ ಚರಣಕಮಲವನ್ನು ಆರಾಧಿಸುವದರಿಂದ ಮನಸ್ಸು (ಅಂತರಾತ್ಮಾ) ಪ ಯುವ ಅತ್ಯಂತ (ಅತ್ಯಧಿಕ) ವಿಶುದ್ಧಿಯು, ವೇದಾಧ್ಯಯನದಿಂದ, ತಪಸ್ಸಿನಿಂ

(ಪ್ರಾಣಾಯಾಮದ) ವಾಯು ನಿಗ್ರಹದಿಂದ, ಅನಿಮಿತ್ತ (ನಿಃಸ್ವಾರ್ಥ) ಪರೋಪಕಾರದಿಂದ, ತೀರ್ಥಸ್ನಾನಾದಿಗಳಿಂದು (ಕಠಿಣ) ವ್ರತೋಪವಾಸಾದಿಗಳನ್ನು ಆಚರಿಸುವದರಿಂದ – ಇವೆಲ್ಲವುಗಳಿಂದಲೂ ಮನಸ್ಸಿನ ಅತ್ಯಂತ ಪಾವಿತ್ರ್ಯವು ದೊರೆಯಲಾರದು.

॥೩೧೬॥ ತಾವದ್ಭಯಂ ದ್ರವಿಣದೇಹಸುಹೃನ್ನಿಮಿತ್ತಂ
ಶೋಕಸ್ಪೃಹಾಪರಿಭವೋ ವಿಪುಲಶ್ಚ ಲೋಭಃ ।
ತಾವನ್ಮಮೇತ್ಯಸದವಗ್ರಹಆರ್ತಿಮೂಲಂ
ಯಾವನ್ನ ತೇಽಙ್ಘ್ರಿಮಭಯಂ ಪ್ರವೃಣೀತ ಲೋಕಃ ॥ ೩-೧೦-೬

ಬ್ರಹ್ಮದೇವರು ನಾರಾಯಣನಲ್ಲಿ

ನಾನು–ನನ್ನದೆಂಬ (ಅಸತ್–ಅವಗ್ರಹ) ದುರಭಿಮಾನವೇ ಸಕಲ ದುಃಖಗಳಿಗೆ ಜನಕವಾಗಿರುವದೆಂದು ಚತುರ್ಮುಖ ಬ್ರಹ್ಮದೇವರು ನಾರಾಯಣನ ಸ್ತೋತ್ರದಲ್ಲಿ ಹೇಳುವರು.

ಭಗವಂತನ ಉಪಾಸನೆಯನ್ನು ಪ್ರಾರಂಭಿಸಿದ ದಿನವೇ ಸಕಲ ದುಃಖಗಳ ನಿವಾರಣೆಯು ಕೂಡಲೇ ಆಗುವದೆಂಬುದು ನಮ್ಮ ಅಭಿಪ್ರಾಯವಲ್ಲ. ಆದರೆ ಭಗವದುಪಾಸನೆಯನ್ನು ಎಡೆಬಿಡದೆ ನಿತ್ಯವಾಗಿ ಮಾಡುತ್ತ ಹೋದಂತೆ, ನಿತ್ಯ ರೂಢಿಯ ಬಲದಿಂದ ಭಗವಂತನಲ್ಲಿಯೆ ಚಿತ್ತವೃತ್ತಿಯು ಹೆಚ್ಚು ಹೆಚ್ಚು ತಲ್ಲೀನವಾದಂತೆ, ಮನಸ್ಸು (ಉದ್ವೇಗರೂಪ) ದೋಷರಹಿತವಾಗಿ ಪರಿಪೂರ್ಣ ಶುದ್ಧತೆಯನ್ನು ಪಡೆಯುವದು. ಹೀಗೆಯೆ ಮನಸ್ಸಿನ ಶುದ್ಧಿಯು ಆಗುತ್ತಲಿರುವಂತೆಯೆ 'ಇಂದು ಒಂದು ದುಃಖ ತೊಲಗಿತು, ನಾಳೆ ಮತ್ತೊಂದು' ಈ ರೀತಿಯಲ್ಲಿ ಕ್ರಮೇಣ (ಸಕಲ) ದುಃಖಗಳು ಬಿಟ್ಟು ಹೋಗುವವು. ಭಗವಂತನ ಪಾದವನ್ನು ಆಶ್ರಯಿಸದವರಿಗೆ ದಿನಕ್ಕೊಂದು ದಿನಕ್ಕೊಂದು ಹೊಸಪರಿಯ ದುಃಖ ಉಂಟಾಗುವಂತೆ, ಭಗವಂತನ ಪಾದವನ್ನು ದೃಢವಾಗಿ ನಂಬಿದವರಿಗೆ ದುಃಖಗಳು ಕಾಡುವದಿಲ್ಲವೆಂಬುದು ಲೋಕದಲ್ಲಿ ಅನುಭವಸಿದ್ಧ ಸಂಗತಿಯಾಗಿದೆ. ಆ ಬಗ್ಗೆ ಹೇಳಬೇಕಿಲ್ಲ.

ಅರ್ಥ :– (ತಾವದಿತಿ):– ಆಶ್ರಯಿಸುವವರ (ನಂಬಿ ನಡೆಯುವವರ) ಸಕಲ (ದುಃಖಗಳನ್ನು) ಭಯಗಳನ್ನು ನಿವಾರಿಸುವ ನಿನ್ನ (ಭಗವಂತನ) ಪಾದವನ್ನು ಜನರು ಭಕ್ತಿಪೂರ್ವಕವಾಗಿ ಎಲ್ಲಿಯವರೆಗೆ ಆರಾಧಿಸುವದಿಲ್ಲವೊ, ಅಲ್ಲಿಯವರೆಗೆ (ಅಸದವಗ್ರಹಃ) ನಾನು ನನ್ನದೆಂಬ ಅಮಂಗಳವಾದ ದುರಭಿಮಾನವು ಅವರಿಗೆ ತಪ್ಪುವದಿಲ್ಲ. ಈ ದುರಭಿಮಾನವೇ ಸಕಲ ದುಃಖಿಗಳ ಉತ್ಪತ್ತಿಗೆ ಮೂಲ (ಮುಖ್ಯ)

ಕಾರಣವಾಗಿರುವದು. ನಾನು-ನನ್ನದೆಂಬ ದುರಭಿಮಾನವಿರುವವರೆಗೆ, ಧನ-ಸಂಪತ್ತುಗಳ ಹಾನಿ-ನಾಶವಾಗುವದೆಂಬ ಭಯವೂ, ಆಭಯದಿಂದ ಉಂಟಾಗು (ಉದ್ವಿಗ್ನತೆ) ದುಃಖವೂ ತಪ್ಪಿದ್ದಲ್ಲ. ಆದರೆ, ಭಗವಂತನ ಪಾದವನ್ನು ಆಶ್ರಯಿಸಿ ಆತನ ಆರಾಧನೆಯಲ್ಲಿ ತೊಡಗಲು ಅನೇಕ ಭಯುಗಳು, ಅನೇಕ ದುಃಖಗಳ ( ಚಿತ್ತವಿಶುದ್ಧಿಯು ಹೆಚ್ಚಾದಂತೆ ) ಕ್ರಮೇಣ ಕಡಿಮೆಯಾಗುವವು. ಚಿತ್ತವಿಶುದ್ಧಿಯು ಪರಿಪೂರ್ಣವಾಗಿ, ಭಗವಂತನಲ್ಲಿ ಮನೋವೃತ್ತಿಯು ಅಚಲವಾಗಿ ಲೀನವಾದಾಗ್ಗೆ ಸಕಲ ದುಃಖಗಳ ನಿವಾರಣೆಯು ಸಿದ್ಧಿಸುವದು. ನಾನು ನನ್ನದೆಂಬ ಅನರ್ಥಕಾರಿಯಾದ ದುರಭಿಮಾನವಿರುವ ತನಕ, ಸಂಪತ್ತು, ಶರೀರ, ಆಪ್ತೇಷ್ಟರ ಇವರೆಲ್ಲರ ನಿಮಿತ್ತದಿಂದ (ಇವರೆಲ್ಲರ ಬಗ್ಗೆ ಇರುವ ಅಮಂಗಳ ಅಭಿಮಾನದಿಂದ ಅವರೆಲ್ಲರ ಅಳಿವು ಅಗಲಿಕೆಯಿಂದ ವಿಪುಲವಾದ (ಬಹುಬಗೆಯ) ದುಃಖ, ಅತ್ಯಾಶೆ ಸೋಲು, ಲೋಭಗಳು ಅತಿಶಯವಾದ ದುಃಖವನ್ನು ಉಂಟುಮಾಡುವವು. ಭಗವಂತನ ( ನಿನ್ನ ) ಪಾದವನ್ನು ಆಶ್ರಯಿಸಿ, ಆತನನ್ನು ಆರಾಧಿಸುವವರೆಗೆ ಈ ದುಃಖವು ಬಿಟ್ಟಿದ್ದಲ್ಲ.

||೩೧೭|| ಭಕ್ತಿಃ ಪರೇಶಾನುಭವೋ ವಿರಕ್ತಿ-
ರನ್ಯತ್ರ ಚೈಷ ತ್ರಿಕ ಏಕಕಾಲಃ
ಪ್ರಪದ್ಯಮಾನಸ್ಯ ಯಥಾಶ್ನತಃ ಸ್ಯು-
ಸ್ತುಷ್ಟಿಃ ಪುಷ್ಟಿಃ ಕ್ಷುದಪಾಯೋಽನುಘಾಸಂ || ೧೧-೨-೪೨

'ಕವಿ' ಯೆಂಬ ಋಷಿಯು ಜನಕರಾಜನಿಗೆ ಭಗವದುಪಾಸನೆಯಿಂದ ಲಭಿಸುವ ಪ್ರತಿಫಲವನ್ನು ನಿವೇದಿಸುವನು

ನಿರಂತರ ಭಗವದುಪಾಸನೆಯಿಂದ ಸಂಪೂರ್ಣ ಚಿತ್ತಶುದ್ಧಿ, ಚಿತ್ತಶುದ್ಧಿಯಿಂದಲೆ ನೇರವಾಗಿ, ( ಅದೊಂದರಿಂದಲೆ ) ಏಕಕಾಲಕ್ಕೇನೆ ಸಕಲ ದುಃಖಗಳ ನಿವಾರಣೆಯಾಗುವದಿಲ್ಲ, ಅದು-ಭಕ್ತಿ-ವಿರಕ್ತಿ ಜ್ಞಾನಗಳ ಮುಖಾಂತರ ಕ್ರಮಶಃ ಸೂಕ್ತಕಾಲದಲ್ಲಿ ಆಗುವದು. ಭಕ್ತಿ-ವಿರಕ್ತಿ ಜ್ಞಾನಗಳು ಕ್ರಮದಲ್ಲಿ ಒಂದು ಮತ್ತೊಂದು ಅನುಸರಿಸುವದು. ದುಃಖನಿವೃತ್ತಿಯೂ ಅದೇ ಕ್ರಮವನ್ನು ಅನುಸರಿಸಿ ಒದಗುವದು. ಭಕ್ತಿ-ವಿರಕ್ತಿ ಹಾಗೂ ಜ್ಞಾನಗಳ ಉತ್ಪತ್ತಿಯಲ್ಲಿ ಒಂದೊಂದಕ್ಕೂ ಕಾಲಭೇದವಿಲ್ಲ. ಅವು ಮೂರು ಸಮನ್ವಿತವಾಗಿ ಸಂಭವಿಸುವವು ಎಂಬುದು ತಾತ್ಪರ್ಯವಾಗಿದೆ. ಒಂದೇ ತುತ್ತು ಆಹಾರದಿಂದ ಹಸಿವೆ ಹಿಂಗುವದಿಲ್ಲ. ಅಗತ್ಯವಿರುವಷ್ಟು ಸಲ, ಒಂದೊಂದರಂತೆ ಆಹಾರದ ತುತ್ತುಗಳನ್ನು

ಸೇವಿಸಿದ ಹಾಗೆ ಹಸಿವೆಯು ಕಡಿಮೆಯಾಗುತ್ತ ಬಂದು ಕೊನೆಗೊಮ್ಮೆ ಪೂರ್ಣವಾಗ ತೃಪ್ತಿಪಡೆಯುವದು.

ಭಗವದುಪಾಸನೆಯಿಂದ ದೊರೆಯುವ ಫಲವಾದರೂ ಇದೇ ಕ್ರಮವನ್ನೇ ಅನುಸರಿಸುವದು. **ವ್ಯಕ್ತಿ-ವ್ಯಕ್ತಿಯಲ್ಲಿ** ( ಉಪಾಸನೆಯ ಸಾಧಕನಲ್ಲಿ ) ಭಗವದುಪಾಸನೆಯು **ಭಕ್ತಿ - ವಿರಕ್ತಿ - ಜ್ಞಾನಗಳನ್ನು** ( ಕ್ರಮಶ: ) ಪ್ರಕಟಗೊಳಿಸಿ (ಅಂತರಂಗದಲ್ಲಿ ಹುಟ್ಟಿಸಿ) **ಅದೇ ಕ್ರಮದಲ್ಲಿ** ದು:ಖನಿವಾರಣೆಯನ್ನು ಮಾಡುತ್ತ, (ಸಾಕಷ್ಟು ತುತ್ತುಗಳನ್ನು ಹೊಟ್ಟೆಯಲ್ಲಿ ಹಾಕಿದಾಗ್ಗೆ ಹಸಿವು ಹಿಂಗಿ ಪೂರ್ಣ ಸಂತೃಪ್ತಿಯಾಗುವಂತೆ) **ಭಕ್ತಿ-ವಿರಕ್ತಿ-ಜ್ಞಾನ,** ಇವು ಮೂರು ತಮ್ಮ ಪರಮಾವಧಿಯನ್ನು ತಲುಪಿದಾಗ್ಗೆ, ಬೇರೊಂದು ಸಾಧನವನ್ನು ಅಪೇಕ್ಷಿಸದೆಯೆ ಸಮ ಸಮ ಸ್ಥಾನದಲ್ಲಿರುವ ಈ ಮೂರು ಸಂಗತಿಗಳು ಸಕಲ ದು:ಖಗಳನ್ನು ಆತ್ಯಂತಿಕವಾಗಿ, ಒಂದನ್ನೂ ಬಿಡದೆ ನಿವಾರಿಸುವವು.

**ಅರ್ಥ:**- ಪರಮಾತ್ಮನಲ್ಲಿ (ಪರೆ) ಭಕ್ತಿ, (ಸ್ವೇ) ತನ್ನ ಬಿಂಬರೂಪದ ಜ್ಞಾನ, (ಪರಮಾತ್ಮನನ್ನು ಬಿಟ್ಟು) ಉಳಿದ ವಿಷಯಗಳಲ್ಲಿ (ಅನ್ಯತ್ರ) ಅಸಂಗ ರೂಪವಾದ ವೈರಾಗ್ಯ ಇವು ಮೂರೂ ಏಕಕಾಲದಲ್ಲಿ (ಕಾಲಾಂತರವಿಲ್ಲದೆ) ಉತ್ಪನ್ನವಾಗುವವು - (ಇದು ಹೇಗೆ? -ಎಂಬುದಕ್ಕೆ ಉದಾಹರಣೆ ಕೊಡುವರು. ಊಟ ಮಾಡುವವನಿಗೆ ಪ್ರತಿಯೊಂದು ತುತ್ತಿನಿಂದಲೂ ಹಸಿವೆ ಹಿಂಗುವದು. ಹೊಟ್ಟೆ ತುಂಬಿಕೊಳ್ಳುವದು. ಹಸಿವೆಯ ಬಾಧೆ ಕಡಿಮೆಯಾಗುತ್ತಿರುವ ಸಂತೃಪ್ತಿ (ಸಾಕು-ಸಾಕೆಂಬ ಭಾವನೆ), ಇವು ಪ್ರತಿಯೊಂದು ತುತ್ತಿಗೂ ಏಕಕಾಲಕ್ಕೆ ಸಮನ್ವಿತವಾಗಿ ಸಂಭವಿಸಿ ದು;ಖ ನಿವೃತ್ತಿಯನ್ನು ಮಾಡುವವು.

**॥೩೧॥ ಇತ್ಯಚ್ಯುತಾಂಘ್ರಿಂ ಭಜತೋಽನುವೃತ್ತ್ಯಾ** **೩೬**
**ಭಕ್ತಿರ್ವಿರಕ್ತಿರ್ಭಗವತ್ಪ್ರಬೋಧಃ ।**
**ಭವಂತಿ ವೈ ಭಾಗವತಸ್ಯ ರಾಜನ್**
ತತಃ **ಪರಾಂ ಶಾಂತಿಮುಪೈತಿ ಸಾಕ್ಷಾತ್** ॥ ೧೧-೨-೪೩

ಕವಿಯ ಮಾತುಗಳೇ ಮುಂದೊರೆದಿವೆ.

**ಅರ್ಥ** :- (ಇತಿ) ಹಿಂದೆ ಹೇಳುವಂತೆ, ನಿರಂತರವೂ ಪ್ರತಿಯೊಂದು ಸಲ ನಿಷ್ಠೆಯಿಂದ ಮಾಡುವ ಭಗವದುಪಾಸನೆಯು ಭಗವದ್ಭಕ್ತನಿಗೆ ಭಕ್ತಿ-ವಿರಕ್ತಿ

ಹಾಗೂ ಭಗವಂತನ ಬಗ್ಗೆ ಅಧಿಕಾಧಿಕ ಜ್ಞಾನ, ಈ ಮೂರನ್ನು ಒಂದುಗೂಡಿ ಸಿಯೇ ಉತ್ಪಾದಿಸುವ ಭಕ್ತಿ, ವಿರಕ್ತಿ ಹಾಗೂ ಭಗವದ್ವಿಷಯಕ್ಕೆ ಜ್ಞಾನ, ಇವು ಮೂರು ನಿರಂತರವಾದ ಪ್ರತಿ ಉಪಾಸನೆಯಿಂದ ಅಭಿವೃದ್ಧಿಯನ್ನು ಹೊಂದುತ್ತ ತಮ್ಮ ಅತ್ಯಧಿಕ ಪರಿಮಿತಿ (ಪರಿಪಕ್ವತೆ)ಯನ್ನು ಮುಟ್ಟುವ ಭಗವದ್ಭಕ್ತನು (ಭಾಗವತನು) ನಿಃಶೇಷ ದುಃಖ ನಿವೃತ್ತಿ (ಪರಾಶಾಂತಿ) ಯನ್ನು ನೇರವಾಗಿ (ಸಮನ್ವಿತವಾಗಿ) ಪಡೆಯುವನು. ಈ ಮೂರರಲ್ಲಿ ಒಂದೊಂದಕ್ಕಾಗಿ ಆತನು ಬೇರೆ ಬೇರೆ ಸಾಧನವನ್ನು ಉಪಯೋಗಿಸುವ ಅಗತ್ಯವಿಲ್ಲ.

ಒಟ್ಟಾರೆ ಹೀಗೆ ಹೇಳಿದ್ದಾಗಿದೆ:- ಹಸಿದವನು ಉಣ್ಣ ತೊಡಗಲು, ಒಂದೊಂದು ತುತ್ತು ಹೊಟ್ಟೆಯಲ್ಲಿ ಹೋಗಲು, (ಅದಕ್ಕೆ ಅನುಗುಣವಾದ ಪ್ರಮಾಣದಲ್ಲಿ) ಹಸಿವೆ ಹಿಂಗುತ್ತ ಹೋಗುವದು. (ದೇಹಕ್ಕೆ) ಪೋಷಣೆ ಒದಗುವದು. ಸಾಕು ಸಾಕೆನ್ನುವ ಸಂತೃಪ್ತಿ ಉಂಟಾಗುವದು. - ಇವು ಮೂರು ಪರಿಣಾಮಗಳು ಮುಂದಿನ ಪ್ರತಿಯೊಂದು ತುತ್ತು ತೆಗೆದುಕೊಂಡಾಗಲೂ ಸಮನ್ವಿತವಾಗಿ ಸಂಭವಿಸುವವು. ಒಂದೊಂದು ತುತ್ತು ಸೇವಿಸುವಾಗ್ಗೆ ಸಂಪೂರ್ಣವಾಗಿ ಹಸಿವೆಯೂ ಹಿಂಗುವದಿಲ್ಲ. ಸಂಪೂರ್ಣವಾಗಿ ಪುಷ್ಟಿ ತುಷ್ಟಿಗಳೂ ಒದಗುವದಿಲ್ಲ. ಅಂತೆಯೇ ಹಸಿದವನು ಹಸಿವೆ ಪೂರ್ಣವಾಗಿ ಹಿಂಗುವವರೆಗೆ ತುತ್ತುಗಳನ್ನು ತೆಗೆದುಕೊಳ್ಳುತ್ತಲೆ ಇರುವನು. ಹಸಿವೆಯ ಹೆಚ್ಚು ಕಡಿಮೆಗೆ ತಕ್ಕಂತೆ ಸಾಕಷ್ಟು ಪೂರ್ತಿ ಆಹಾರವನ್ನು ತೆಗೆದುಕೊಂಡ ನಂತರವೆ, ಹಸಿವೆಯೂ ಪೂರ್ಣವಾಗಿ ಕೊನೆಗೊಳ್ಳುವದು. ಪೂರ್ಣವಾಗಿ ಪುಷ್ಟಿ ತುಷ್ಟಿಗಳು ಅದೇ ತಾಲಕ್ಕೆ ಏಕತ್ರಿತವಾಗಿ ದೊರೆಯುವವು.

ಭಗವದುಪಾಸನೆಯ ಒಟ್ಟು ಪರಿಣಾಮವೂ ಇದೇ ಕ್ರಮವನ್ನು ಅನುಸರಿಸುವದು. ಉಪಾಸನೆಯಲ್ಲಿ ತೊಡಗಿದ ಪ್ರತಿಯೊಬ್ಬ ವ್ಯಕ್ತಿಯಲ್ಲಿಯೂ ಭಕ್ತಿ-ವಿರಕ್ತಿ-ಜ್ಞಾನಗಳನ್ನು (ಪ್ರಕಟಗೊಳಿಸಿ) ಉದ್ದೀಪಿಸಿ (ಹೊತ್ತಿಸಿ), ದುಃಖ ನಿವೃತ್ತಿಯನ್ನು ಮೆಟ್ಟಲು ಮೆಟ್ಟಲಾಗಿ ಮಾಡುತ್ತ. ಜ್ಞಾನಾದಿಗಳು ತಮ್ಮ ಪರಿಪೂರ್ಣತೆ (ಗರಿಷ್ಠ ಪರಿಮಿತಿ)ಯನ್ನು ಹೊಂದಿದನಂತರ, ಬೇರೊಂದು ಸಾಧನವನ್ನೇ ಅಪೇಕ್ಷಿಸದೆಯೆ, ಸಮಸಮಾನ ಸ್ಥಾನಗಳಲ್ಲಿರುವ ಜ್ಞಾನಾದಿ ಮೂರರಿಂದಲೆ ನೇರವಾಗಿ ನಿ:ಶೇಷವಾದ ದು:ಖನಿವೃತ್ತಿಯನ್ನು ಭಗವದುಪಾಸನೆಯು ತಂದುಕೊಡುವದು.

**॥೩೮॥ ವಿಚಕ್ಷಣಾ ಯಚ್ಚರಣೋಪಸಾದನಾ-**
**ತ್ಸಂಗಂ ವ್ಯುದಸ್ಯೋಭಯತೋಽಂತರಾತ್ಮನಃ ।**

ಶುಕ ಪ್ರ

**ವಿಂದಂತಿ ಹಿ ಬ್ರಹ್ಮಗತಿಂ ಗತಕ್ಲಮಾ-**
**ಸ್ತಸ್ಮೈ ಸುಭದ್ರಶ್ರವಸೇ ನಮೋನಮಃ ॥ ೨-೪-೧೬**

ಭಗವದುಪಾಸನೆಯ ಮಹತಿಯನ್ನು ಶ್ರೀಶುಕರು ಪರೀಕ್ಷಿತ್ ರಾಜನಿಗೆ ವಿವರಿಸುತ್ತಾರೆ.

ಮೇಲೆ ವಿವರಿಸಿದಂತೆ, ಭಕ್ತಿ-ವಿರಕ್ತಿ-ಜ್ಞಾನಗಳ ಮುಖಾಂತರ ಭಗವದುಪಾ ಪಾಸನೆಯನ್ನು ಮಾಡಿ ಸಕಲ ದುಃಖಗಳಿಂದ ಸಂಪೂರ್ಣವಾಗಿ ಮುಕ್ತರಾದವರು ಯಾರಾದರೂ ಇರುವರೆ? ಅಂಥವರು ಇದ್ದರೆ, ಅವರ ದಾರಿಯಲ್ಲಿಯೇ ನಾವೂ ನಡೆಯಬಹುದು, ಎಂದು ಕೇಳುವವರಿಗೆ, – ಈ ಬಗೆಯ ಭಗವದುಪಾಸನೆಯಿಂದ ಸಕಲ ದುಃಖಗಳಿಂದ ಮುಕ್ತರಾದ ಅನೇಕ ಕುಶಲರಾದ ಮಹನೀಯರು ಇರುವ ರೆಂಬುದನ್ನು ಹೇಳುವರು.

**ಅರ್ಥ**:– (ವಿಚಕ್ಷಣಾಇತಿ) :– (ವಿಚಕ್ಷಣ) ಆಧ್ಯಾತ್ಮ ವಿಚಾರವನ್ನು ಚೆನ್ನಾಗಿ ತಿಳಿದುಕೊಂಡವರು, ಮಾಡಬೇಕಾದುದು-ಮಾಡಬಾರದುದು ಯಾವು ದೆಂಬುದನ್ನು ಅರಿತುಕೊಂಡು ಆಚರಿಸುವವರು), ಭಗವಂತನ ಪಾದವನ್ನು ಆರಾಧಿಸಿ (ಭಗವದುಪಾಸನೆಯನ್ನು ಮಾಡಿ) ಈ ಲೋಕದ ಸುಖ ಹಾಗೂ ಪರ ಲೋಕದ ಸುಖಗಳ ಬಗ್ಗೆ ಮನಸ್ಸಿನ ಆಸಕ್ತಿಯನ್ನು ತೊರೆದು (ವೈರಾಗ್ಯವನ್ನು ತಾಳಿ), ಪರಬ್ರಹ್ಮ (ಗುಣಪೂರ್ಣ) ನಾದ ಶ್ರೀಹರಿಯ ಬಗ್ಗೆ ಸರಿಯಾದ ಜ್ಞಾನ ವನ್ನು, ಹಾಗೂ ಜ್ಞಾನದ ವಿಶಿಷ್ಟ ಫಲವಾದ ಭಕ್ತಿಯನ್ನೂ ಪಡೆದುಕೊಳ್ಳುವರು ಸಮನ್ವಿತವಾದ ಜ್ಞಾನ-ಭಕ್ತಿ-ವೈರಾಗ್ಯಗಳ ಮುಖಾಂತರವಾಗಿ ಸಕಲ ಕ್ಲೇಶ (ದುಃಖ)ಗಳಿಂದ ಪೂರ್ಣವಾಗಿ ಬಿಡುಗಡೆಹೊಂದುವರು. ಅಥವಾ, ಇಹಪರ ಸುಖಗಳಲ್ಲಿ ಆಸಕ್ತಿಯನ್ನು ತೊರೆದು, ಜ್ಞಾನ-ಭಕ್ತಿ-ವೈರಾಗ್ಯಗಳಿಗೆ ಉಪಲಕ್ಷಣ (ಸಾಂಕೇತಿಕ)ವಾಗಿರುವ ಬ್ರಹ್ಮ (ಪರಮಾತ್ಮನ) ಸಾನ್ನಿಧ್ಯವನ್ನು (ಮುಕ್ತಿಯನ್ನು) ಪಡೆಯುವರು ಎಂತಲೂ ಅರ್ಥಮಾಡಿಕೊಳ್ಳಬಹುದು. ಜ್ಞಾನಾದಿಗಳ ದ್ವಾರಾ ತನ್ನ ಉಪಾಸನೆಯನ್ನು ಮಾಡುವ ಸಾಧಕರಿಗೆ ಮುಕ್ತಿಯ ಫಲವನ್ನು ಕೊಡುವ ಭಗವಂತನಿಗೆ ಅನಂತ ವಂದನೆಗಳು. ಈ ಬಗೆಯ ಭಗವದುಪಾಸನೆಯಿಂದ ಹಿಂದೆ ಅನೇಕ ಸಾಧಕರು ಮುಕ್ತಿರೂಪ ಫಲವನ್ನು ಪಡೆದಿರುವುದು ಕಂಡುಬಂದಿದೆ. ಆದುದರಿಂದ ಈಗಿನವರೂ ಕೂಡ ಈ ಬಗೆಯ ಭಗವದುಪಾಸನೆಯನ್ನು ಮಾಡ ಬೇಕು ಎಂಬುದೇ ಅಭಿಪ್ರಾಯವಾಗಿದೆ.

**॥೩೨೦॥ ಸ್ಥಿತ್ಯುದ್ಭವಪ್ರಲಯಹೇತುರಹೇತುರಸ್ಯ**
**ಯಃ ಸ್ವಪ್ನಜಾಗರಸುಷುಪ್ತಿಷು ಸನ್ ಬಹಿಶ್ಚ ।**

ಪಿ ಷ್ಣು ಬಾ ಜ ಸ
ಜನಕನೆ

**ದೇಹೇಂದ್ರಿಯಾಸುಹೃದಯಾನಿ ಚರಂತಿ ಯೇನ**
**ಸಂಜೀವಿತಾನಿ ತದವೈ ಹಿ ಪರಂ ನರೇಂದ್ರ ॥ ೧೧-೩-೩೬**

ವಿದೇಹ ( ಜನಕ ) ರಾಜನು ಸ್ವತಃ ಬ್ರಹ್ಮವಿದ್ಯೆಯಲ್ಲಿ ಪಾರಂಗತನ ಆದರೂ ಜನರಿಗೆ ತಿಳಿಯಲೆಂಬ ಪರೋಪಕಾರ ಬುದ್ಧಿಯಿಂದ ವಿದ್ವತ್ ಸಭೆಂ ಲ್ಲಿದ್ದ ಯೋಗೀಶ್ವರರಿಗೆ ಬಿಂಬರೂಪದ ಜ್ಞಾನ ಮಾಡಿಕೊಡಲು ಪ್ರಾರ್ಥಿ ವನು. ಆಗ್ಗೆ ಪಿಪ್ಪಲಾಯನರೆಂಬವರು ಹೀಗೆ ಹೇಳುವರು.

ಬಿಂಬೋಪಾಸನೆಯ ಬಗ್ಗೆ ಆಸ್ಥೆ-ಆದರಗಳನ್ನು ಹುಟ್ಟಿಸಲು ಬಿಂಬೋಪ ಸನೆಯ ಮಹಿಮೆ-ಪ್ರಯೋಜನಗಳನ್ನು ಇದುವರೆಗೆ ಹೊಗಳಿದ್ದಾಯಿತು. ಈ ಬಿಂಬರೂಪವನ್ನು ತಿಳಿಸಿ ಹೇಳುವರು.

ಅರ್ಥ:- (ಸ್ಥಿತಿ-ಇತಿ):- (ಬ್ರಹ್ಮಜ್ಞಾನಿಗಳಲ್ಲಿ) ಶ್ರೇಷ್ಠನಾದ ಜನಕನ ಬ್ರಹ್ಮತತ್ವವನ್ನು ಯಥಾರ್ಥವಾಗಿ ತಿಳಿದವನಾಗಿದ್ದರೂ, ಲೋಕೋಪಕಾರಕ್ಕಾ ಯೋಗೀಶ್ವರರನ್ನು ಆ ಬಗ್ಗೆ ಪ್ರಶ್ನಿಸುವನು. ಹೀಗೆ ಹೇಳಿದೆ "ನಾರಾಯಣಾ ಧಾನಸ್ಯ ಬ್ರಹ್ಮಣಃ- (೧೧-೩-೩೪)ಬ್ರಹ್ಮವಿತ್ತಮಾಃ" ನಾರಾಯಣನೆಂಬ ಹೆ ರುಳ್ಳ ಬ್ರಹ್ಮರೂಪಿಯಾದ ಪರಮಾತ್ಮನ ಸ್ವರೂಪ (ನಿಷ್ಠಾ)ವನ್ನು ನಿರೂಪಿಸಬೆ ಕೆಂದು (ಜನಕನು) ಬಿನ್ನವಿಸುವೆ. ಏಕೆಂದರೆ, ಬ್ರಹ್ಮತತ್ವವನ್ನು ತಿಳಿದವರ ನೀವು ಅತೀವ ಪರಿಣತರು. -ರಾಜನು ಹೀಗೆ ಪ್ರಶ್ನೆ ಮಾಡಲು ಯೋಗಿವಯ ರಾದ ಪಿಪ್ಪಲಾಯನರು ಬಿಂಬರೂಪವನ್ನು ನಿರೂಪಿಸುವರು.

ಹೇ ರಾಜನೆ, ಈ ಜಗತ್ತಿನ ಉತ್ಪತ್ತಿ ರಕ್ಷಣೆ, ನಾಶಗಳಿಗೆ ಮುಖ್ಯ ಕಾರ ನಾದವನು, ಸರ್ವ ಸ್ವತಂತ್ರನಾದ ತನಗೆ (ತನ್ನ ಉತ್ಪತ್ತಿಗೆ) ಅನ್ಯರಾರೂ ಕಾರ ವಿಲ್ಲದವನು, ಸ್ವೇಚ್ಛೆಯಿಂದ ಸಕಲ ಜೀವರಲ್ಲಿ ನೆಲೆಸಿ ಜಾಗೃತಿ ಸ್ವಪ್ನ-ಸುಷು ಗಳೆಂಬ (ಜೀವನ) ಮೂರು ಅವಸ್ಥೆಗಳನ್ನು ಅನುಭವಿಸುತ್ತಿದ್ದರೂ, ಸ್ವತಂ ನಾದುದರಿಂದ ಅವುಗಳ ಉಪಾಧಿಗೆ ಒಳಗಾಗದೆ ನಿರ್ಲಿಪ್ತನಾಗಿರುವವನು, ದೇ ಇಂದ್ರಿಯ ಪ್ರಾಣ ಹಾಗೂ (ಹೃದಯ) ಮನಸ್ಸು, ಇವುಗಳನ್ನು ಸ್ವಶಕ್ತಿಯಿಂ ಸಜೀವಗೊಳಿಸಿ (ಅವುಗಳಿಗೆ ಚೈತನ್ಯವನ್ನು ಕೊಟ್ಟು ಉಜ್ಜೀವಿಸಿ) ತಮ್ಮ ತವ ಕಾರ್ಯಗಳಲ್ಲಿ ಅವುಗಳನ್ನು ತೊಡಗಿಸುವನು, ತನಗೆ ಯಾರೂ ಸರಿಮಿಗಿಲಿಲ್ಲ ವನೂ (ಪರ), ಹೀಗೆಲ್ಲವೂ ಇರುವ. ಹಾಗೂ ನಾರಾಯಣಾದಿ ನಾಮಗಳಿ ಯಥಾರ್ಥವಾಚಕನಾಗಿರುವ ವಸ್ತುವೇ ಬಿಂಬರೂಪವೆಂದು ತಿಳಿದುಕೋ.

ಒಟ್ಟಾರೆ ಅಭಿಪ್ರಾಯವಿದು :- ಕೆಲವಡೆಯಲ್ಲಿ ನಾರಾಯಣನೆಂಬ ಹೆಸರಿ ಭಗವದ್ರೂಪವು ಆರಾಧಿಸಲ್ಪಡುವದು, ['ನಾರಾರಾಯಣಂ ಮಹಾಜ್ಞೇಯಂ'

ಮುಂತಾದ ಶ್ಲೋಕಗಳಲ್ಲಿ'], ಕೆಲವೆಡೆಯಲ್ಲಿ ಭಗವದ್ರೂಪಕ್ಕೆ ಬ್ರಹ್ಮನೆಂಬ ಹೆಸರು [ಬ್ರಹ್ಮವಿದಾಪ್ನೋತಿ ಪರಂ ಮುಂತಾದ ಶ್ಲೋಕಗಳಲ್ಲಿ], [ಬೇರೆ ಕೆಲವಡೆಯಲ್ಲಿ ಭಗವದ್ರೂಪಕ್ಕೆ ಪರಮಾತ್ಮಯೆಂಬ ಹೆಸರು [ತಸ್ಯ ಶಿಖಾಯಾಃ ಮಧ್ಯೆ ಪರಮಾತ್ಮಾ ವ್ಯವಸ್ಥಿತಃ ಮುಂತಾದವುಗಳಲ್ಲಿ]. ಈ ರೀತಿಯಲ್ಲಿ ಭಗವಂತನ ರೂಪಗಳು ಅನಂತವಾಗಿದ್ದರೂ ಕೂಡ, [ಮೇಲೆ ಹೇಳಿದ] ಭಗವಂತನ ಒಂದೇ ಒಂದು ವಿಶಿಷ್ಟ ರೂಪವು ನಾರಾಯಣಾದಿ ಅನೇಕ ಹೆಸರುಗಳನ್ನು ತಾಳಿ ಬಿಂಬರೂಪವೆಂದು ಕರೆಯಲ್ಪಡುತ್ತದೆ, ಎಂಬುದು ಸಿದ್ಧವಾಯಿತು. ಆ ಬಿಂಬರೂಪದ ಸ್ವರೂಪವು ಹೇಗಿರುವದು ? ಎಂಬ ಪ್ರಶ್ನೆಗೆ ಉತ್ತರವನ್ನು ಹೇಳುವರು.– ಜಗತ್ತಿನ ಜನ್ಮಾದಿಗಳಿಗೆ ನಾರಾಯಣನೇ [ಪ್ರಧಾನ] ಕಾರಣನೆಂದು ಸಕಲ ಶಾಸ್ತ್ರಗಳು [ಪ್ರತಿಪಾದಿಸುವವು. ಭಗವಂತನಿಗೆ ಅನಂತ ನಾಮಗಳಿದ್ದರೂ, ಜಗಜ್ಜನ್ಮಾದಿಕಾರಣ ಇತ್ಯಾದಿ ಮೇಲೆ ನಿರೂಪಿಸಿರುವ] ಈ ವಿಶಿಷ್ಟ ರೂಪಗಳಲ್ಲಿ ಮಾಡುವ ತನ್ನ ಉಪಾಸನೆಯಿಂದ ಮುಕ್ತಿಯನ್ನು ಕೊಡುವದಾಗಿ ಭಗವಂತನ ಸತ್ಯ ಸಂಕಲ್ಪವಾಗಿದೆ. ತನ್ನ ಸತ್ಯ ಸಂಕಲ್ಪಕ್ಕನುಗುಣವಾಗಿ ಭಗವಂತನು ಸಕಲ ಜೀವರಲ್ಲಿ ( ಬಿಂಬರೂಪನಾಗಿ ) ನಿಂತುಕೊಂಡು, ಆದಿ–ಅಂತವಿಲ್ಲದ ಕಾಲದಲ್ಲಿ ಜಾಗೃತಿ–ಸ್ವಪ್ನ–ಸುಷುಪ್ತಿಯೆಂಬ ಮೂರು ಅವಸ್ಥೆಗಳ ಅನುಭವವನ್ನು (ಜೀವನೊಡನೆ) ಅನುಭವಿಸುವನಾದರೂ, ಸರ್ವಸ್ವತಂತ್ರನಾದುದರಿಂದ ನಿರ್ಲಿಪ್ತನಾಗಿ ಉಳಿಯುವನು. ಬಿಂಬದ ಸ್ವರೂಪ ವೆಂತಹದು ? ಎಂಬ ಪ್ರಶ್ನೆಗೆ ಇಲ್ಲಿ ಉತ್ತರ ಹೇಳಿದಂತಾಯಿತು. ಒಂಬತ್ತನೆಯ ಶಂಕೆಯ ನಿವಾರಣವೂ ಆಯಿತೆಂದು ತಿಳಿಯಬೇಕು.

||೩೨೧|| **ಜ್ಞಾನಂ ವಿಶುದ್ಧಂ ಪರಮಾರ್ಥಮೇಕ-**
**ಮನಂತರಂ ನ ಬಹಿರ್ಬ್ರಹ್ಮ ಸತ್ಯಂ**
**ಪ್ರತ್ಯಕ್ ಪ್ರಶಾಂತಂ ಭಗವಚ್ಛಬ್ದವಾಚ್ಯಂ |**
**ಯದ್ವಾಸುದೇವಂ ಕವಯೋ ವದಂತಿ ||** ೫-೧೨-೧೧

ಜಡಭರತರು ರಹೂಗಣ ರಾಜ

ಅವಧೂತರಾದ ಜಡಭರತರು ರಹೂಗಣ ರಾಜನಿಗೆ ಬಿಂಬರೂಪವನ್ನು ತಿಳಿಸಿ ಹೇಳುವರು.

ಬಿಂಬನು ಎಲ್ಲಿರುವನು ? – ಎಂಬ ಹತ್ತನೆಯ ಪ್ರಶ್ನೆಗೆ ಉತ್ತರವನ್ನು ಹೇಳುವರು.

**ಅರ್ಥ :–** (ಜ್ಞಾನಮಿತಿ) "ಮೇಣೆಯ ಭಾರವನ್ನು ಹೊತ್ತವನು ನಾನಲ್ಲ, ದಾರಿಯಲ್ಲಿ ಮುನ್ನಡೆಯುವನೂ ನಾನಲ್ಲ'. ಆದರೆ, ಇವೆಲ್ಲ ಕೃತಿಗಳನ್ನು ಮಾಡುವವನು ನನ್ನಲ್ಲಿ ಅಂತರ್ಯಾಮಿಯಾಗಿ ಇರುವ ಶ್ರೀ ಹರಿಯೆ ಆಗಿರುವನು' ಈ

ಅಭಿಪ್ರಾಯವನ್ನೇ ಸೂಚಿಸುವ ಜಡಭರತನ ಮಾತಿದು. 'ಅಯ್ಯೋ ತವಮ್ಮಾ
ಬಹಳ ದಣಿದುಕೊಂಡಿರುವಿ. ದೂರದ ದಾರಿ. ಒಬ್ಬನೇ ಮೇಣೆಯನ್ನು ಹೊತ್ತಿ
ರುವೆ', ರಹೂಗುಣರಾಜನು ಆಡಿದ ಅಣುಕದ ಮಾತಿಗೆ (ಹಾರಿಕೆಯ ಹೀಯಾ
ಕೆಗೆ), ಜಡಭರತರು ಕೊಟ್ಟ ಉತ್ತರವಿದು :-'ತ್ವಯೋದಿತಂ...... ಸ್ಯಾಪಥಿಗವು
ಮಥ್ವಾ' (೫-೧೦-೧೦) 'ರಾಜನಾಥ ನಿನ್ನ ಭಾರವನ್ನು ನಾನೇ (ನಿಜವಾಗಿಯೂ
ಹೊರುತ್ತಿದ್ದರೆ, ಹಾಗೂ ಮೇಣೆಯನ್ನು ಹೊತ್ತು ನಾನೇ (ನಿಜವಾಗಿಯೂ ನಡೆ
ಯುತ್ತಿದ್ದರೆ, ಉಪರೋಧಕವಾದ ಹೀಯಾಳಿಕೆಯು) ನಿನ್ನ ಮಾತು, ಸ್ಪಷ್ಟವು
ನಿರ್ವಂಚಕವೂ ಆಗುತ್ತಿತ್ತು'.

ಜಡಭರತನ ಈ ಅರ್ಥಗರ್ಭಿತವಾದ ಮಾತುಗಳಿಂದ ರಹೂಗುಣ ರಾಜನಿಗೆ
ಜ್ಞಾನೋದಯವಾಗುವದು. ಬ್ರಹ್ಮತತ್ವವನ್ನು ವಿಶೇಷವಾಗಿ ಅರಿತುಕೊಂಡ
ಗುರುವು ( ಶ್ರೀಹರಿ ಕೃಪೆಯಿಂದ ) ಲಭಿಸಿದ ಕಾಲಕ್ಕೆ, ಬ್ರಹ್ಮಜ್ಞಾನವನ್ನು ಅ
ನಿಂದ ವಿಶೇಷವಾಗಿ ಕಲಿತುಕೊಳ್ಳಬೇಕು. ಎಂಬುದು ರಾಜನಿಗೆ ಗೊತ್ತಿದ್ದರಿಂದ
ಜಡಭರತರಿಂದ ಆಧ್ಯಾತ್ಮದ ಅಂತರಂಗವನ್ನು ತಿಳಿದುಕೊಳ್ಳಲು ರಾಜನು ಬಯ
ಸಿದನು. 'ನಾನೇ ನಿಜವಾಗಿ ಭಾರವನ್ನು ಹೊತ್ತಿದ್ದರೆ' ಹೀಗೆ ಜಡಭರತನ
[ನೀನು] ಹೇಳುವ ಮಾತುಗಳಲ್ಲಿ 'ಮೇಣೆಯನ್ನು ಹೊರುವದು, ಮುಂದೆ ದಾ
ನಡೆಯುವದು, – ಇವೆಲ್ಲವೂ ನನ್ನ ಕೃತಿಗಳೇ ಅಲ್ಲ. [ಅಂತರ್ಯಾಮಿಯಾದ
ಶ್ರೀ ಹರಿಯೆ ಎಲ್ಲ ಕೃತಿಗಳನ್ನು ನನ್ನಿಂದ ಮಾಡಿಸುವನು]. ಮುಂತಾದ ನಿನ್ನ
[ಜಡಭರತನ] ಮಾತುಗಳನ್ನು ಕೇಳಿ ನನ್ನ [ರಾಜನ] ಮನಸ್ಸು ವಿಚಾರದಿಂದ
ಚಲಿಸತೊಡಗಿದೆ. [ನೀನು ಹೇಳುವಂತೆ ಶ್ರೀ ಹರಿಯು ಜೀವನಲ್ಲಿ [ಅಂತರ್ಯಾ
ಮಿಯಾಗಿ ನಿಜವಾಗಿಯೂ] ನೆಲಸಿದ್ದರೆ, ಹೃದಯದಲ್ಲಿಯೆ ಆತನು ನೆಲಸಿರಬೇಕು.
ಏಕೆಂದರೆ, 'ಅಂಗುಷ್ಠಮಾತ್ರಃ ಪುರುಷಃ ಮಧ್ಯೇ ಆತ್ಮನಿ ತಿಷ್ಠತಿ' [ದೇಹದ ಮಧ್ಯ
ಪ್ರದೇಶ [ ಹೃದಯ ] ದಲ್ಲಿ ಪರಮಪುರುಷನು [ ಪರಮಾತ್ಮನು ] ಅಂಗುಷ್ಠ
[ಹೆಬ್ಬಟ್ಟು] ದಷ್ಟು ಗಾತ್ರದವನಾಗಿ ನೆಲೆಸಿರುವನು] ಎಂದೇ ಶ್ರುತಿಯು ಹೇಳು
ವದು. ಪರಮಾತ್ಮನು ದೇಹದ ಹೊರಗೆ ಇರುವನೆಂದರೆ, ಅದಂತೂ ಹೆಚ್ಚಿನ
ಸಂತೋಷ. ಪರಮಾತ್ಮನು ಹೃದಯದಲ್ಲಿ ಅಂಗುಷ್ಠ ಪ್ರಮಾಣದ ಗಾತ್ರವುಳ್ಳವನಾ
ಗಿರಲಿ, ಇಲ್ಲವೇ ದೇಹದ ಹೊರಗೆಯೆ ಇರಲಿ. ಇವೆರಡರಲ್ಲಿ ಏನೆ ಇದ್ದರೂ, ಮೇಣೆ
ಯನ್ನು ಹೊರುವ, ಹೊತ್ತು ಮುಂದೆ ಸಾಗುವ ಕೃತಿಗಳು ಪರಮಾತ್ಮನ ಕೃತಿಗ
ಳೆಂದು ಹೇಳಲುಬಾರದು. ನನಗೆ ಹೀಗೆ ಅನಿಸುವದರಿಂದ, ಮೇಣೆ ಹೊರುವದು,
ಮುಂದೆ ಮುಂದೆ ನಡೆಯುವದು ಇತ್ಯಾದಿಗಳೆಲ್ಲ ಅಂತರ್ಯಾಮಿಯಾದ ಪರಮಾ

ತ್ಮನೇ ಮಾಡುವನೆಂಬ ನಿನ್ನ ಮಾತುಗಳಲ್ಲಿ ಹುದುಗಿರುವ] ತತ್ವವನ್ನು ಸರಿಯಾಗಿ ತಿಳಿದುಕೊಳ್ಳಲು ನನ್ನ ಮನಸ್ಸು ಉತ್ಸುಕವಾಗಿದೆ.

ರಹೂಗುಣ ರಾಜನು [ ಬಿಂಬವು – ಪರಮಾತ್ಮನು ನೆಲೆಸಿರುವ ಸ್ಥಾನವು ಯಾವುದು ?] ಎಂದು ಕೇಳಿದ ಪ್ರಶ್ನೆಗೆ ಅವಧೂತನಾದ ಭರತನು ಕೊಟ್ಟ ಉತ್ತರವನ್ನು ಹೇಳುವರು.– ಸರ್ವೋತ್ತಮನೂ, ವಿಶುದ್ಧ ಜ್ಞಾನರೂಪಿಯೂ, ಸತ್ಯನೂ, ನಿತ್ಯನೂ, ಪ್ರಶಾಂತನೂ, ಬ್ರಹ್ಮವೆಂದು ಹೇಳಲ್ಪಡುವನು, ಅದರಂತೆಯೆ ಭಗವತ್ ಶಬ್ದದಿಂದ ಕರೆಯಲ್ಪಡುವನು, ವಾಸುದೇವ ನಾಮಕವಾದವನು ಇತ್ಯಾದಿ ಯಾಗಿ ಜ್ಞಾನಿಗಳು ವರ್ಣಿಸಿರುವ ಪರಾತ್ಪರ ವಸ್ತುವಾಗಿರುವ ಪರಮಾತ್ಮನು ಜೀವನ ದೇಹದಹೊರಗೆ ನೆಲಿಸಿರುವನೆಂದು[ಸರ್ವಥಾ]ತಿಳಿಯಕೂಡದು ಅದರಂತೆಯೆ ಜೀವನಲ್ಲಿ ಒಳಗೆಯೆ, ಆತನ ಹೃದಯದಲ್ಲಿ (ಮಾತ್ರ) ನಿಂತುಕೊಂಡು (ಜೀವ ನೊಡನೆ) ವಿಷಯಗಳ ಉಪಭೋಗವನ್ನು ಪರಮಾತ್ಮನು ಮಾಡುವನೆಂತಲೂ ತಿಳಿಯಕೂಡದು. (ಅನಂತರಮಿತಿ):– ಹಾಗಾಡರೆ, ಬಿಂಬನು ಜೀವನದಲ್ಲಿ ಹೇಗೆ ಯಾವ ರೀತಿಯಲ್ಲಿ ನೆಲೆಸಿರುವನು ? ಅದನ್ನು ತಿಳಿದುಕೊಳ್ಳಲು ರಾಜನಿಗೆ ಕುತೂಹಲವನ್ನುಂಟುಮಾಡಿದ ಈ ವಿಷಯವು (ಎಲ್ಲರಿಗೂ ಹೇಳಬಾರದಷ್ಟು) ಅತಿ ಗೂಢವಾದುದು ಹೀಗಿದ್ದರೂ ಶಿಷ್ಯನ (ರಾಜನ) ಮೇಲಿನ ಕರುಣೆಯಿಂದ ಅದನ್ನು ಜಡಭರತರು ತಿಳಿಸಿಕೊಡುವರು. (ಪ್ರತ್ಯಗ್ ಇತಿ):– ಪ್ರತ್ಯಗ್ ಶಬ್ದವನ್ನು ಜೀವನಿಗಾಗಿ ಉಪಯೋಗಿಸುವದು ಪ್ರಸಿದ್ಧವಿದೆ. ಜೀವನಿಗೆ 'ಪ್ರತ್ಯಗ್' ಎಂದು ಕರೆಯಲು ಕಾರಣವೆಂದರೆ– ಪ್ರತ್ಯಗ್ ಎಂದರೆ ಜೀವನಿಗೆ ಬಿಂಬರೂಪನಾದುದು ಪರಮಾತ್ಮ. ಪರಮಾತ್ಮನ ಪ್ರತಿಬಿಂಬನಾದ ಜೀವನು ಅನಾದಿ ಅನಂತಕಾಲದಲ್ಲಿ ಸರ್ವಕಾಲದಲ್ಲಿಯೂ ಎಂದೆಂದಿಗೂ, ಯಾವುದೇ ನಿಮಿತ್ತದಿಂದಲೂ ಬಿಂಬದಿಂದ ಹೊರಗೆ ಚಲಿಸುವದಿಲ್ಲವಾದುದರಿಂದ 'ಪ್ರತ್ಯಗ್' (ಒಳಗಿನ, ಒಳಗೆ ನೆಲೆಸಿರುವ) ಎನಿಸಿಕೊಳ್ಳುತ್ತದೆ. (ದೇಹದ) ಒಳಗೆಯೆ ನೆಲಿಸಿದ ಇಂಥ ರೂಪಕ್ಕೇನೆ ಬಿಂಬ ಯೆಂಬ ಹೆಸರು. ಜೀವಕ್ಕೆ ಬಿಂಬರೂಪವಾಗಿರುವದೇ ಆ ಬಗೆಯ ವಸ್ತು. ಬಿಂಬವು ಅಗಲಿದರೆ ಜೀವದ ಅಸ್ತಿತ್ವವೇ ಅಳಿದು ಹೋಗುವ ಆಪತ್ತಿಯು ಒದಗುವದು. ಬಿಂಬವು ಜೀವನ ತಲೆಯಲ್ಲಿ ಆತನ ತಲೆಯಾಗಿ, ಮುಖದಲ್ಲಿ ಆತನ ಮುಖ ವಾಗಿ, ಈ ರೀತಿಯಲ್ಲಿ ( ಜೀವನ ಅವಯವಗಳಿಗೆ ಒಂದೊಂದಕ್ಕೂ ಸದೃಶ ಸಮಾನ ಆಕೃತಿಯುಳ್ಳದ್ದಾಗಿ ಜೀವನನ್ನು ಸರ್ವತ್ರ ವ್ಯಾಪಿಸಿ ನೆಲಿಸಿರುವದು. ಜೀವನ ಅವಯವಗಳಲ್ಲಿ ಅಂತರ್ಗತನಾಗಿ ಈ ರೀತಿಯಲ್ಲಿ ತನಗೆ ಸ್ವರೂಪ ಭೂತ ವಾದ ಅವಯುವಗಳನ್ನು ಅಳವಡಿಸಿಕೊಂಡು, (ಅಪ್ರಾಕೃತವಾಗಿರುವ) ತನ್ನ ಅವ

ಯುವಗಳಿಂದ (ತನಗೆ ಗ್ರಾಹ್ಯನಾದ ಸಾರಭೂತ) ವಿಷಯಗಳನ್ನು ಉಪಭೋಗ
ವನು. ಆದುದರಿಂದ ಬಿಂಬರೂಪದ (ನಿಕಟ) ಸಾನಿಧ್ಯವನ್ನು ಪಡೆದಿ
ಜೀವಕ್ಕೆ 'ಪ್ರತ್ಯಗ್' ಯೆಂಬ ಹೆಸರು. ಪ್ರಸಿದ್ಧವಾಗಿದೆ. ಈ ಮಾತಿಗೆ ಹೋ
ಯೆಂದರೆ, ಆತ್ಮರೂಪನಾದ ಜೀವನ (ನಿಕಟ) ಸನ್ನಿಧಾನದಿಂದ, ದೇಹಕ್ಕಾದ
'ಆತ್ಮ'ನೆಂಬ ಹೆಸರನ್ನು ವ್ಯವಹಾರದಲ್ಲಿ ಬಳಸುವದುಂಟು. 'ಪ್ರತ್ಯಕ್' ಶ
ದಿಂದ ಕರೆಯಲ್ಪಟ್ಟ, ಜೀವನನ್ನು ಆಂತರಿಕವಾಗಿ (ಹಿಂದೆ ಹೇಳಿದಂತೆ
ಪೂರ್ಣವಾಗಿ ವ್ಯಾಪಿಸಿ ನೆಲೆಸಿರುವವನು ಪರಮಾತ್ಮನೇ ಆಗಿರುವನ
ಆದುದರಿಂದ ಜೀವನು ಏನೂ ಮಾಡಲಾರನು. ಬಿಂಬರೂಪನಾದ ಪರಮಾತ್ಮ
ಸ್ವತಂತ್ರ ಹಾಗೂ ಮುಖ್ಯ ಕರ್ತೃನಾಗಿ ಸಕಲ ಕಾರ್ಯಗಳನ್ನು ಮಾಡುವನ
(ಜಡಭರತರು ಹೇಳುತ್ತಾರೆ) :- ಮೇಣೆಯನ್ನು ಹೊರುವದು ಮುಂತಾದ ಕಾರ್ಯ
ಗಳನ್ನು ನಾನು ಸ್ವತಂತ್ರನಾಗಿ ಮಾಡುತ್ತಿಲ್ಲ. ಇವೆಲ್ಲ ಕಾರ್ಯಗಳನ್ನು ಬಿಂ
ರೂಪನಾದ ಪರಮಾತ್ಮನು ತಾನೇ (ಮಾಡಿಸಿ) ಮಾಡುತ್ತಿರುವನೆಂದು ನಾ
ಹೇಳುವುದು ಸಯುಕ್ತಿಕ-ಸಮಂಜಸವಾಗಿದೆ.

ಜಡಭರತನು ('ಮೇಣೆ ಹೊತ್ತವನು ನಾನಲ್ಲ') ಇತ್ಯಾದಿಯಾಗಿ ತಾ
ಆಡಿದ ಮಾತುಗಳ ಇಂಗಿತಾರ್ಥವನ್ನು ರಹೂಗುಣರಾಜನಿಗೆ ಪ್ರಕಟಗೊಳಿಸುವ
ದಿಂದ, 'ಜೀವನಲ್ಲಿ ಬಿಂಬರೂಪವು ಹೇಗೆ ನೆಲೆಸಿರುವದು,' ಎಂಬುದನ್ನು ತಿಳಿ
ಬಯಸಿದ ರಾಜನಿಗೆ ಬಿಂಬದ ಜ್ಞಾನವನ್ನು ಮಾಡಿಕೊಟ್ಟನು. ಬಿಂಬನು ಜೀವ
ಹೊರಗೂ ಇರುವದಿಲ್ಲ, ಯಾವ ಕಾಲದಲ್ಲಿಯೂ ಜೀವನನ್ನು ಬಿಟ್ಟು ಅಗಲುವದಿ
ಜೀವನ ಅವಯವಗಳನ್ನೇ ತನ್ನ ಸಚ್ಚಿದಾನಂದಾತ್ಮಕ ಅವಯವಗಳಿಂದ ವ್ಯಾಪಿಸಿ
ಜೀವನ ಅವಯವಗಳಿಗೆ ಪ್ರೇರಕನಾಗಿ (ಪ್ರತಿಬಿಂಬಸ್ವರೂಪನಾದ) ಜೀವನ
ನೆಲಿಸಿರುವನು. ಇಷ್ಟೇ ಹೇಳುವದರಿಂದ ರಾಜನು ಪಡೆಯಬಯಸಿದ (ಭಗವತ
ಕರ್ತೃತ್ವದ) ಜ್ಞಾನವು ರಹೂಗಣ ರಾಜನಿಗೆ ಲಭಿಸಿದಂತಾಗುತ್ತಿತ್ತು. ಹೀ
ದ್ದರೂ ಜೀವನ ಜಾಗ್ರದಾದಿ ಮೂರು ಅವಸ್ಥೆಗಳಲ್ಲಿ ಆತನಿಂದ ಅಗಲದೆ ನೆಲಿಸಿ,
ವಿಷಯ ಭೋಗಗಳನ್ನು ಅನುಭವಿಸುವ ಬಿಂಬನು (ಪರಮಾತ್ಮನು) ಮುಕ್ತಿಯನ್ನು
ಕೊಡಲು ಹೇಗೆ ಶಕ್ತನಾಗುವನು ? ಈ ಶಂಕೆಯನ್ನು ನಿವಾರಿಸಲೆಂದೇ - ಬಿಂಬನು
(ಬಿಂಬರೂಪ ಪರಮಾತ್ಮನು ವಿಶುದ್ಧವಾದ ಜ್ಞಾನಸ್ವರೂಪನು, ಸತ್ಯನು,
ನಿತ್ಯನು ಇತ್ಯಾದಿಯಾಗಿ ಆತನ ಸ್ವರೂಪವನ್ನು ನಿರೂಪಿಸಿರುವರು.)
ಜೀವನಿಂದ ನಿತ್ಯ ಭಿನ್ನವಾದ ಪರಮಾತ್ಮನು ಜೀವನ ಮೇಲಿನ ಕರುಣೆಯಿಂದಲೆ
(ಆತನ ಉದ್ಧಾರಕ್ಕಾಗಿ) ಮುಕ್ತಿಪ್ರದನಾಗಿ ಆತನಲ್ಲಿ ನೆಲಿಸಿರುವನು. ಪರಮಾತ್ಮ

ನಿಗೆ ಜೀವನು ಎಂದಿಗೂ ಸರಿಸಮಾನ ಸ್ಥಾನವನ್ನು ಪಡೆಯಲಾರನು. ಎಂದು ಹೇಳುವದರಿಂದಲೂ, ಸರಿಸಮಾನತೆಯ ಶಂಕೆಯು ಇಲ್ಲದಂತಾಗಿದೆ. ಬಿಂಬನು ಎಲ್ಲಿ ಇರುವನು ? ಆತನ ಸ್ಥಾನವು ಯಾವುದು ? ಎಂಬ ಬಗ್ಗೆ ಸುಸ್ಪಷ್ಟವಾಗಿ ತಿಳಿಸಿ ಹೇಳಿರುವದರಿಂದ, ಹತ್ತನೆಯ ಶಂಕೆಯ ಪರಿಹಾರವಾಯಿತು.

ಜಡಭರತರು

||೩೨|| **ರಹೂಗಣೈತತ್ತಪಸಾ ನ ಯಾತಿ**
**ನ ವಿಧ್ಯಯಾ ನಿರ್ವಪಣಾದ್ಗೃಹಾದ್ವಾ |**
**ನ ಛಂದಸಾ ನೈವ ಜಲಾಗ್ನಿಸೂರ್ಯೈ-**
**ರ್ವಿನಾ ಮಹತ್ಪಾದರಜೋಭಿಷೇಕಾತ್** || ೫-೧೨-೧೨

ರಹೂಗಣರಾಜನಿಗೆ ಜಡಭರತನು ಹೇಳಿದ ಮಾತು.

**ಅರ್ಥ :–** (ಬಿಂಬರೂಪದ (ಬಿಂಬರೂಪ ಪರಮಾತ್ಮನ) ಸ್ವರೂಪ, ಜೀವನಲ್ಲಿ ಆತನು ನೆಲಿಸಿರುವ ಬಗೆ – ಇವುಗಳನ್ನು ನಿರೂಪಿಸಿದ್ದಾಯಿತು. ಬಿಂಬರೂಪದ ಜ್ಞಾನವನ್ನು ಪಡೆಯುವದು ಸುಲಭವಾದುದಲ್ಲ.) ತಪಸ್ಸು, ಪಾಂಡಿತ್ಯ ಮನೆಮಾರುಗಳನ್ನು ತೊರೆದು ಅರಣ್ಯದಲ್ಲಿ ವಾಸ, (ಸನ್ಯಾಸ ಜೀವನ), ವೇದಾಭ್ಯಾಸ, ಭಾಗೀರಥೀತೀರ ಮುಂತಾದ ಪವಿತ್ರ ತೀರ್ಥಸ್ಥಳಗಳಲ್ಲಿ ವಾಸ ಅಗ್ನಿಹೋತ್ರ ಸೂರ್ಯೋಪಾಸನೆ, ಇವೆಲ್ಲವುಗಳ ಅನುಷ್ಠಾನದಿಂದ(ನಾನು ನಿನಗೆ ಉಪದೇಸಿಸಿದ) ಅತಿ ಗೂಢವಾದ ಈ ಬಿಂಬರೂಪದ ಜ್ಞಾನವು ದೊರೆಯಲಾರದು. (ಭಾಗವತೋತ್ತಮ) ಮಹಾತ್ಮರ ಪಾದಧೂಳಿಯಲ್ಲಿ ಮಿಂದುಕೊಂಡೇ –ಅವರ ಸತ್ಸಂಗ ಸೇವೆಗಳಿಂದಲೇ (ಪರಮಾತ್ಮನ) ಬಿಂಬರೂಪ ಜ್ಞಾನವು ಪಡೆಯುವದು ಸಾಧ್ಯವಾದುದು, ಅದೊಂದೇ ಮಾರ್ಗವಾಗಿದೆ.

ಮನು ಧ್ರುವರಾಜಗೆ

||೩೩|| **ತ್ವಂ ಪ್ರತ್ಯಗಾತ್ಮನಿ ಸದಾ ಭಗವತ್ಯನಂತೇ**
**ಆನಂದಮಾತ್ರಉಪಪನ್ನಸಮಸ್ತಶಕ್ತೌ |**
**ಭಕ್ತಿಂ ವಿಧಾಯ ಪರಮಾಂ ಶನಕೈರವಿದ್ಯಾ-**
**ಗ್ರಂಥಿಂ ವಿಭೇತ್ಸ್ಯಸಿ ಮಮಾಹಮಿತಿ ಪ್ರರೂಢಾಂ** || ೪-೧೧-೩೦

ಯುದ್ಧಾಸಕ್ತನಾದ ಧ್ರುವರಾಜನಿಗೆ ಪಿತಾಮಹನಾದ ಮನು ಬಿಂಬಜ್ಞಾನವನ್ನು ಮಾಡಿಕೊಳ್ಳುವದು ಒಂದೇ ಒಂದಾದ ಸಾಧನವಾಗಿದೆ. ಬಿಂಬಜ್ಞಾನದ ವಿನಹ, ಮುಕ್ತಿಯು ಎಂದಿಗೂ ದೊರೆಯಲಾರದು. ಆದುದರಿಂದ ಸದ್ಗುರುಗಳ ಸೇವೆ ಮಾಡಿ ಬಿಂಬಜ್ಞಾನವನ್ನು ಅಗತ್ಯವಾಗಿ ಪಡೆಯಲೇಬೇಕು. ಭಕ್ತಿಯಿಂದ ಭಗವಂತನನ್ನು ಆರಾಧಿಸಿ, ಆತನ ಪರಮಾನುಗ್ರಹವನ್ನು ಪಡೆದು ಮುಕ್ತರಾಗಬೇಕು.

ಇಲ್ಲಿ ಒಂದು ಆಕ್ಷೇಪ:- ಅನಾದ್ಯನಂತ ಸರ್ವಕಾಲದಲ್ಲಿಯೂ ಜೀವನೊಳಗೆ ಅಂತರ್ನಿಯಾಮಕನಾಗಿ ನೆಲಸಿ, ಜೀವನಿಗೆ ಅನುರೂಪವಾದ ಕಾರ್ಯಗಳನ್ನೇ ಮಾಡುತ್ತ, ಜೀವನು ಉಪಭೋಗಿಸುವ ಭೋಗಗಳನ್ನೇ ತಾನೂ ಉಪಭೋಗಿಸುತ್ತಲಿರುವ ಬಿಂಬರೂಪನಾದ ಪರಮಾತ್ಮನು ಜೀವನಿಗೆ ಸಂಸಾರ ಮೋಚಕವಾದ ಮುಕ್ತಿಯನ್ನು ಕೊಡಲು ಹೇಗೆ ಸಮರ್ಥನಾಗುವನು? ಈ ಪ್ರಶ್ನೆಗೆ ಇಲ್ಲಿ ಉತ್ತರವನ್ನು ಹೇಳುವರು.

**ಅರ್ಥ:-** (ತ್ವಮಿತಿ):- ಅಂತರ್ಯಾಮಿಯಾಗಿ ವ್ಯಾಪಿಸಿ ಜೀವನ ಪರಮಾತ್ಮನು ನಿಂತುಕೊಂಡು ಆ ಜೀವನ ಭೋಗಗಳನ್ನೇ ತಾನು ಸೇವಿಸುವ ಕಾರ್ಯವನ್ನು ಮಾಡುತ್ತಿದ್ದರೂ, ಪರಮಾತ್ಮನು ಅಪ್ರಾಕೃತ ಶರೀರವುಳ್ಳವನು, ಜ್ಞಾನಾನಂದ ಮೂರ್ತಿಯು. ಆತನು (ತನಗೆ ಗ್ರಾಹ್ಯವಾದ) ಸಾರವನ್ನಷ್ಟೆ ತೆಗೆದುಕೊಳ್ಳುವನು. ಜೀವನ ಕೃತಿಗಳಿಂದ, ಉಪಭೋಗಗಳಿಂದ ಪರಮಾತ್ಮನು ನಿರ್ಲಿಪ್ತನಾದವನು. ಷಡ್ಗುಣೈಶ್ವರ್ಯ ಸಂಪನ್ನನಾದುದರಿಂದ ಸಕಲ ಶಕ್ತಿಗಳೂ ಪರಮಾತ್ಮನಲ್ಲಿ ಅವಿರೋಧವಾಗಿ ಹೊಂದಿಕೊಳ್ಳುವವು. (ಜೀವಾಂತರ್ಯಾಮಿಯಾದ) ಪ್ರತ್ಯಗಾತ್ಮನಾದ, ಅನಂತ ಕಲ್ಯಾಣ ಗುಣಪೂರ್ಣನಾದ, ಆನಂದ ಸ್ವರೂಪನಾದ ಸರ್ವಶಕ್ತನಾದ ಬಿಂಬರೂಪ ಪರಮಾತ್ಮನಲ್ಲಿ ನೀನು (ಪ್ರಲ್ಹಾದನು) ನಿಸ್ಸೀಮವಾದ ಭಕ್ತಿಯನ್ನಿಡಬೇಕು. ಆಗ್ಗೆ ನಾನು-ನನ್ನದೆಂಬ, ಆಳವಾಗಿ ಬೇರುಬಿಟ್ಟ ಅಜ್ಞಾನದ ಗಂಟನ್ನು ಮೆಲ್ಲನೆಲ್ಲಗೆ ಕತ್ತರಿಸಿ ಚೆಲ್ಲುವೆ.

ಬಿಂಬೋಪದೇಶ ಪ್ರಕರಣವು ಮುಗಿಯಿತು.



# ೨೨ ಬಿಂಬೋಪಾಸನಾ ಪರಪರ್ಯಾಯ
# ಆತ್ಮಸಮರ್ಪಣ ಪ್ರಕರಣ

ಶ್ರೀ ರಂಗನಾಥನಿಗೆ ನಮಸ್ಕಾರವು.

||೩೨೪|| ಯಸ್ಮಾತ್ಪ್ರಿಯಾಪ್ರಿಯವಿಯೋಗಸಂಯೋಗಜನ್ಮ-
ಶೋಕಾಗ್ನಿನಾ ಸಕಲಯೋನಿಷು ದಹ್ಯಮಾನಃ |
ದುಃಖೌಷಧಂ ತದಪಿ ದುಃಖಮತದ್ಧಿಯಾಹಂ
ಭೂಮನ್ ಭ್ರಮಾಮಿ ವದ ಮೇ ತವ ದಾಸ್ಯಯೋಗಂ ||

೭.೯-೧೭

**ಶ್ರೀ ನೃಸಿಂಹದೇವರಿಗೆ ಪ್ರಲ್ಹಾದರ ಪ್ರಾರ್ಥನೆ:-**

ಬಿಂಬ ಸ್ವರೂಪವನ್ನು ತಿಳಿಸಿದ್ದಾಯಿತು, ಈಗ್ಗೆ ಬಿಂಬೋಪಾಸನೆಯನ್ನು ಹೇಗೆ ಮಾಡಬೇಕೆಂಬುವದನ್ನು ಹೇಳಿಕೊಡುವರು. 'ಸ್ವಾಮೀ, ನಾನು ನಿನ್ನವನು, ನಿನ್ನ ದಾಸನು' ಎಂಬ ಮನೋಭಾವದ ಲಕ್ಷಣವುಳ್ಳ ದಾಸ್ಯವು ಎರಡು ಬಗೆಯದಾಗಿದೆ. ಬಹಿರಂಗ (ಹೊರಗಿನಿಂದ ಮಾಡುವ) ದಾಸ್ಯ ಹಾಗೂ ಅಂತರಂಗದ ದಾಸ್ಯ. ಅಂತರ್ಯಾಮಿಯಾದ ಬಿಂಬರೂಪವನ್ನು ಬಿಟ್ಟು ಭಗವಂತನ ಬೇರೊಂದು ತನಗಿಷ್ಟವಾದ ರೂಪಕ್ಕೆ ಮಾಡುವ ದಾಸ್ಯವು ಬಾಹ್ಯ (ಬಿಂಬಾತಿರಿಕ್ತ) ದಾಸ್ಯವು. ಎರಡನೆ ಬಗೆಯ (ಆಂತರಿಕ) ದಾಸ್ಯವು ಬಿಂಬರೂಪವನ್ನು ಕುರಿತು ಮಾಡುವದಾಗಿದೆ. ಬಿಂಬ ವಿಷಯಕ ದಾಸ್ಯದಲ್ಲಿ ಅನುಸಂಧಾನದ ವೈಶಿಷ್ಟ್ಯವಿದೆ, ಎಂತಾಗಲಿ ಅಥವಾ ಅದು ಮುಕ್ತಿಗೆ ಸಾಕ್ಷಾತ್ (ನೇರವಾದ) ಸಾಧನವಾಗಿರುವದು, ಎಂತಾಗಲಿ, ಬಾಹ್ಯದಾಸ್ಯಕ್ಕಿಂತಲೂ ಅದರಲ್ಲಿ ಬೇರೊಂದು ವೈಶಿಷ್ಟ್ಯವಿರುವದೆಂಬುದನ್ನು ನೆನಪಿಗೆ ತಂದುಕೊಡಲು, ಬಾಹ್ಯದಾಸ್ಯದಿಂದ ಅದನ್ನು ಬೇರ್ಪಡಿಸಿ ಪ್ರತ್ಯೇಕವಾಗಿ ಅದನ್ನು ತೆಗೆದುಕೊಳ್ಳಲಾಗಿದೆ. ಒಂದೇ ಕುರುಕುಲ (ವಂಶ)ದವರಾದರೂ ಕೌರವ ಪಾಂಡವರನ್ನು ಅವರವರ ವೈಶಿಷ್ಟ್ಯಗಳಿಗಾಗಿ ಬೇರೆ ಕುಟುಂಬಗಳೆಂದು ಭಾವಿಸುವಂತೆಯೆ ಈ ಭೇದವಾಗಿದೆ. -ಆದುದರಿಂದ ದಾಸ್ಯವನ್ನು ಬಾಹ್ಯ ಹಾಗು ಆಂತರಿಕವೆಂದು ವಿಂಗಡಿಸುವದು ದೋಷವೆನಿಸದು. -ಆಂತರಿಕ ದಾಸ್ಯವೂ ಎರಡು ವಿಧವಾಗಿದೆ. ಬಿಂಬರೂಪ ಪರಮಾತ್ಮನಿಗೆ ಜೀವನು ತನ್ನನ್ನೇ ಸಮರ್ಪಿಸುವದು ಒಂದು ವಿಧ. ತನ್ನದು-ತನ್ನವರೆಂಬುದೆಲ್ಲವನ್ನು ಸಮರ್ಪಿಸುವ ಎರಡನೆಯ ವಿಧ. 'ಸ್ವ' ಎಂದರೆ ಆತ್ಮಾ. ಈ ಶಬ್ದಕ್ಕೆ ತಾನು ಹಾಗೂ ತನ್ನದುಯೆಂಬ ಎರಡೂ

ಅರ್ಥಗಳಿರುವವು. ಬಾಹ್ಯದಾಸ್ಯವೂ ಮೂರು ವಿಧವಾಗಿದೆ. ಅಪೇಕ್ಷಿತವಾದ ದ್ರವ್ಯವನ್ನು ಸಮರ್ಪಿಸುವದು. ಕೃತಿರೂಪ ಸೇವೆಯನ್ನು ಸಮರ್ಪಿಸುವದು. ಸತ್ವರಜಸ್ತಮ ಗುಣಗಳನ್ನು (ಅವುಗಳ ಕಾರ್ಯಗಳನ್ನು) ಸಮರ್ಪಿಸುವದು. ಈ ರೀತಿಯಿಂದ ತನ್ನನ್ನು, ತನ್ನದೆಲ್ಲವನ್ನು, ಗುಣಗಳನ್ನು, ಕೃತಿಗಳನ್ನು ಸಮರ್ಪಿಸುವ ನಾಲ್ಕು ಬಗೆಯ ಆತ್ಮ ಸಮರ್ಪಣೆಗೆ ಬಿಂಬೋಪಾಸನೆಯೆಂದು ಹೇಳುವರು. ದ್ರವ್ಯ ಮುಂತಾದವುಗಳನ್ನು ಸಮರ್ಪಿಸುವ ಹೊರಗಿನ (ಬಿಂಬಾತಿರಿಕ್ತ) ಮೊದಲನೆಯ ದಾಸ್ಯವು ಊಟ ಮಾಡುವ ಮೊದಲು ಜಳಕ ಮಾಡುವದು ಉಪಕಾರಿ (ಉಪಯುಕ್ತ)ಯಾಗಿರುವಂತೆ' ಎರಡನೆಯದಾದ ಬಿಂಬೋಪಾಸನಾ ರೂಪವಾದ ಆಂತರಿಕ (ಒಳಗಿನ) ದಾಸ್ಯಕ್ಕೆ (ಹೊರಗಿನ ದಾಸ್ಯವು) ಉಪಯುಕ್ತವಾದ ಅಂಗವಾಗಿರುವದರಿಂದ, ಹೊರಗಿನ ದಾಸ್ಯವನ್ನು ಕುರಿತು ಮೊದಲು ಹೇಳುವರು.

ಅರ್ಥ :- (ಯಸ್ಮಾದಿತಿ) :- ದೇವ - ಮಾನವ - ಪಶುಪಕ್ಷಿ ಮುಂತಾದ ಸಕಲ ಯೋನಿಗಳಲ್ಲಿ ಜನಿಸಿ, ಆ ಕಾಲದಲ್ಲೆಲ್ಲ ಒದಗುವ ಪ್ರಿಯವಾದುದರ ಅಗಲಿಕೆ ಹಾಗೂ ಅಪ್ರಿಯವಾಗಿರುವ (ಬೇಡವಾಗಿರುವ) ದರಿಂದ ಕೂಡಿಕೊಳ್ಳುವದು, ( ಅವುಗಳನ್ನು ಪಡೆಯುವದು ) ಇವೆರಡು ಸಂಗತಿಗಳಿಂದ ಸಂಭವಿಸುವ ದುಃಖವೆಂಬ ಅಗ್ನಿಯಿಂದ ಬೆಂದುಬೆಂಡಾಗಿರುವೆ. ಈ ದುಃಖದ ನಿವಾರಣೆಗಾಗಿ ಮಾಡುವ ಕಾರ್ಯಗಳೆಲ್ಲವೂ ನನ್ನ ತಿಳಿಗೇಡಿತನದಿಂದ ದುಃಖವನ್ನೇ ಮತ್ತಿಷ್ಟು ಹೆಚ್ಚಿಸಿದವು. ಏಕೆಂದರೆ, ದುಃಖನಿವಾರಣೆಯಾದೀತೆಂದು ನಾನು ಕೈಕೊಂಡ ಸಕಲ ಉಪಾಯಗಳು ದುಃಖಪ್ರದವೇ ಆದವು ನಾನು ಕೈಕೊಳ್ಳುವ ಉಪಾಯಗಳಿಂದ ದುಃಖನಿವಾರಣೆಯಾದೀತೆಂಬ ಭ್ರಾಂತಿಯಿಂದ. ನಾನು ಸಕಲ ಬಗೆಯ ಯೋನಿಗಳಲ್ಲಿ ಮತ್ತೆ ಮತ್ತೆ ಅಲೆದಾಡುತ್ತಿರುದೆ. ಹೀಗೆ ಜನನ ಮರಣ ರೂಪವಾದ ಸಂಸಾರದ ದುಃಖದಲ್ಲಿ ಅಲೆದಾಡುತ್ತಿರುವ ನನಗೆ- ಸ್ವಾಮೀ ನಿನ್ನ ಅಂತರ್ದಾಸ್ಯವಾದ ಬಿಂಬೋಪಾಸನೆಯನ್ನೂ, ಅದರ ಅಂಗದೇ ( ಅಂಶವೇ ) ಆಗಿರುವ ಬಾಹ್ಯದಾಸ್ಯವನ್ನೂ ತಿಳಿಸಿಕೊಡು. ಬಾಹ್ಯ ದಾಸ್ಯದಿಂದ ಯುಕ್ತವಾದ ಆಂತರಿಕ ದಾಸ್ಯವೇ ಮುಖ್ಯತಃ ಭಕ್ತಿಜನಕವೆಂದೂ, ಸಕಲ ಸಾಂಸಾರಿಕ ದುಃಖಗಳ ನಿವಾರಣೆಗೆ ಅದೇ ಮುಖ್ಯವಾದ ಸಾಧನವೆಂದೂ, ನಿನ್ನ ದಾಸರೆಲ್ಲರೂ ನಿಶ್ಚಿತಗೊಳಿಸಿರುವರು. ಆತ್ಯಂತಿಕ ದುಃಖ ನಿವಾರಣೆಗೆ, ನಿನ್ನ ಅಂತರ್ದಾಸ್ಯವೇ (ಬಿಂಬೋಪಾಸನೆಯೆ) ಏಕಮೇವ ಸಾಧನವಾಗಿರುವದರಿಂದ, ಅದನ್ನೂ ಹಾಗೂ ಅದಕ್ಕೆ ಅಂಗಭೂತವಾಗಿರುವ ಬಾಹ್ಯ ದಾಸ್ಯವನ್ನೂ ನನಗೆ ದಯಪಾಲಿಸು ಆಂತರಿಕ ದಾಸ್ಯಕ್ಕೆ (ಬಿಂಬೋಪಾಸನೆಗೆ) ಪಾತ್ರತೆಯನ್ನು ತಂದುಕೊಡಲು ಬಾಹ್ಯ

ದಾಸ್ಯವನ್ನೂ ದಯಪಾಲಿಸು. ಇದರಿಂದ ಬಾಹ್ಯದಾಸ್ಯದ ಸ್ವರೂಪವೇನು ? ಪ್ರಯೋಜನವೇನು ? ಎಂಬುದು ತಿಳಿಯುವದು. (ದಾಸ್ಯಂ. ೩೨)

||೩೨|| ಧರ್ಮಾರ್ಥಕಾಮ ಇತಿ ಯೋಽಭಿಹಿತಸ್ತ್ರಿವರ್ಗ ಪ್ರಹ್ಲಾದರು
ಈಕ್ಷಾತ್ರಯೀ ನಯದಮೌ ವಿವಿಧಾ ಚ ವಾರ್ತಾ | ಬಾಲಕರಿ
ಮನ್ಯೇ ತದೇತದಖಿಲಂ ನಿಗಮಸ್ಯ ಸತ್ಯಂ
ಸ್ವಾತ್ಮಾರ್ಪಣಂ ಸ್ವಸುಹೃದಃ ಪರಮಸ್ಯ ಪುಂಸಃ || ೭-೬-೩೨

ಪ್ರಹ್ಲಾದರು ಅಸುರ ಬಾಲಕರಿಗೆ ಮಾಡಿದ ಉಪದೇಶ–

ಅಂತರ್ದಾಸ್ಯವೆಂಬ ಬೇರೊಂದು ಹೆಸರುಳ್ಳ ಬಿಂಬೋಪಾಸನೆಯಡೇ ಅಂಗವಾಗಿರುವ ಬಹಿರ್ದಾಸ್ಯದ ರೂಪು-ರೀತಿಗಳನ್ನು ಈ ರೀತಿಯಾಗಿ ತೋರಿಸಿಕೊಟ್ಟರು. ಈಗ್ಗೆ (ಅಂತರ್ದಾಸ್ಯವೆನಿಸುವ) ಬಿಂಬೋಪಾಸನೆಯ ರೂಪು ರೀತಿಗಳನ್ನು ಹೇಳುವರು.–

ಅರ್ಥ :– (ಧರ್ಮಾರ್ಥಕಾಮ ಇತಿ)– ಜೀವನಿಗೆ ನಿರಪೇಕ್ಷ (ಅನಿಮಿತ್ತ) ಉಪಕಾರಕರ್ತೃವು ಹಾಗೂ ಪರಮ ಪುರುಷನೂ ಆಗಿರುವ ಪರಮಾತ್ಮನಿಗೆ ತನ್ನನ್ನೂ, ತನ್ನದೆಲ್ಲವನ್ನೂ ಸಂಪೂರ್ಣವಾದ ಸಮರ್ಪಣ ಮಾಡಲು ಜೀವನನ್ನು ಪ್ರೇರಿಸುವದೇ ಶಬ್ದರಾಶಿಯಾದ ಸಕಲ ವೇದಗಳ ಮುಖ್ಯವಾದ ತಾತ್ಪರ್ಯವಾಗಿದೆ, ಪ್ರತಿಪಾದ್ಯವಾದ ಮುಖ್ಯ ವಿಷಯವಾಗಿದೆ. ಅದುವೇ ವೇದಾದಿ ಸಕಲ ಶಾಸ್ತ್ರಗಳಿಗೆ 'ಸತ್ಯ'ವೆನಿಸಿದೆ. 'ಸತ್'- ಎಂದರೆ ದೋಷರಹಿತವಾದುದು (ಭಗವಂತನಿಗೆ) ನಿರ್ದಿಷ್ಟವಾದ ಸ್ವಾತ್ಮಾರ್ಪಣ ಲಕ್ಷಣವಾದ ಪ್ರಮೇಯ (ಜ್ಞಾನ) ವನ್ನು (ಯಮ-ಎಂದರೆ ಯಾಪಯತಿ) ಜೀವನಿಗೆ ತಂದುಕೊಡುವದೇ ಸತ್ಯವಾಗಿದೆ ಸ್ವಾತ್ಮಾರ್ಪಣ ಜ್ಞಾನವನ್ನು ಅಭ್ಯಾಸಿಗಳಲ್ಲಿ ತಂದುಕೊಟ್ಟರೆ ಮಾತ್ರ, ವೇದಾದಿ ಶಬ್ದರಾಶಿಗಳು (ಸಕಲ ಆಧ್ಯಾತ್ಮಿಕ ಶಾಸ್ತ್ರಗಳು) ಸಾರ್ಥಕವೆನಿಸುವವು. ಈ ಮುಖ್ಯ ಪ್ರಯೋಜನವನ್ನೇ ಬಿಟ್ಟುಕೊಟ್ಟರೆ, ಅವೆಲ್ಲವೂ ನಿರರ್ಥಕವೆನಿಸುವವು. ಧರ್ಮ, ಅರ್ಥ- ಕಾಮಗಳೆಂಬ (ತ್ರಿವರ್ಗ) ಮೂರು ಪುರುಷಾರ್ಥಗಳು, ಮೂರು (ಈಕ್ಷಾ) ವೇದಗಳು, ನೀತಿ ಹಾಗೂ ಇಂದ್ರಿಯನಿಗ್ರಹಗಳು, ಬಗೆಬಗೆಯ ಜೀವನೋಪಾಯಗಳು (ವೃತ್ತಿಗಳು) ಇವೆಲ್ಲವುಗಳೂ ಸಾರ್ಥಕ (ಸತ್ಯ) ವಾಗಬೇಕಾದರೆ, ಸಕಲ ವೇದ ಶಾಸ್ತ್ರಗಳಿಗೆ ಮುಖ್ಯ ಪ್ರತಿಪಾದ್ಯ ವಸ್ತುವಾದ ಅನಿಮಿತ್ತ ಬಂಧುವಾದ ಪರಮಾತ್ಮನಲ್ಲಿ ತಾನು-ತನ್ನದೆಂಬುದೆಲ್ಲವನ್ನೂ ಸಂಪೂರ್ಣವಾಗಿ ಸಮರ್ಪಣೆ ಮಾಡುವುದೇ ಅವುಗಳ ಧ್ಯೇಯವಾಗಿರಬೇಕು.

ಒಟ್ಟಾರೆ ಅರ್ಥವೆಂದರೆ, ಭಗವಂತನ ಪ್ರಸಾದ (ಪರಮಾನುಗ್ರಹ) ವನ್ನು ದೊರಕಿಸಿಕೊಟ್ಟು ಜೀವನಿಗೆ ಉಪಯುಕ್ತವಾಗಬೇಕೆಂಬುವ ಉದಾತ್ತ ಉದ್ದೇಶ ದಿಂದಲೆ ವೇದಾದಿ ಸಕಲ ಸಚ್ಛಾಸ್ತ್ರಗಳು ಹೊರಟಿವೆ. ಈ ಉದ್ದೇಶವನ್ನು ಸಾಧಿ ಸಿದರೆ ಮಾತ್ರ ವೇದಾದಿ ಶಾಸ್ತ್ರಗಳು ತಮ್ಮ ಕಾರ್ಯವನ್ನು ನೆರವೇರಿಸಿದಂತಾಗು ವದು. ಹೀಗೆ ಮಾಡುವದರಿಂದಲೆ ಭಗವಂತನು ಪ್ರೀತನಾಗುವನು. ತಾನು ತನ್ನ ದೆಂಬುದೆಲ್ಲದರ ಸಂಪೂರ್ಣ ಸ್ವಾತ್ಮಾರ್ಪಣದಿಂದ ಪಡೆಯುವ ಭಗವತ್ ಪ್ರೀತಿಯು ಬೇರೆ ಯಾವ ಸಾಧನದಿಂದಲೂ ದೊರೆಯಲಾರದು. ಸಂಪೂರ್ಣ ಸ್ವಾತ್ಮಾರ್ಪಣೆ ಯನ್ನು ಪ್ರೇರೇಪಿಸಿ ಜೀವನಿಗೆ ಭಗವಂತನ ಪರಮಾನುಗ್ರಹವನ್ನು ತಂದುಕೊ ಡುವದೇ ವೇದಾದಿ ಸಕಲಸತ್‌ಶಾಸ್ತ್ರಗಳು ಪ್ರತಿಪಾದಿಸುವ ಮುಖ್ಯ ತಾತ್ಪ ರ್ಯವಾಗಿದೆ. ಜೀವನ ಹಿತಕ್ಕಾಗಿ ವೇದಾದಿಗಳು ಈ ಕಾರ್ಯವನ್ನು ಮಾಡಲ ತಪ್ಪಿದರೆ, ಜೀವನಿಗೆ ಅವುಗಳಿಂದ ಯಾವ ಪ್ರಯೋಜನವೂ ಇಲ್ಲದಂತಾಗುವದು ಸ್ವರೂಪತಃ ತಾನು ಪರಮಾತ್ಮನ ದಾಸನೆಂಬ ಶ್ರದ್ಧೆಯಿಂದ ಪ್ರಭುವಾದ ಪ ಮಾತ್ಮನಿಗೆ ತನ್ನನ್ನು, ತನ್ನದೆಲ್ಲವನ್ನೂ(ಸ್ವಾತ್ಮಾಸ್ವಾತ್ಮೀಯ ಸಕಲ ವಸ್ತುಗಳನ್ನು ಸಂಪೂರ್ಣವಾಗಿ ಸಮರ್ಪಿಸಬೇಕೆಂಬುವದನ್ನೇ ಇಲ್ಲಿ ಪ್ರತಿಪಾದಿಸುವರು. ಈ ಬಗೆಯ ಸಮರ್ಪಣಕ್ಕೇನೆ 'ಬಿಂಬೋಪಾಸನೆ' ಎಂದು ಹೇಳುವರು. ಒಮ್ಮೆ ಎಂದ ದರೂ ಭಗವಂತನಿಗೆ ಮಾಡುವ ಅರ್ಪಣಕ್ಕೆ 'ಸಮರ್ಪಣ' ವೆಂದು ಮಾ ಹೇಳುವರು. ಸಮರ್ಪಣವು ಬಿಂಬೋಪಾಸನೆಯಿಂದ ಭಿನ್ನವಾಗಿದೆ. ಪ್ರತಿದಿನವು ಪ್ರತಿಗಳಿಗೆಗೂ ಅವಿಚ್ಛಿನ್ನವಾಗಿ, ನಿರಂತರವಾಗಿ, ಬಿಟ್ಟುಬಿಡದೆ ನಿಯಮಿತವಾ ಮಾಡುವ ಆತ್ಮಸಮರ್ಪಣೆಯೆ 'ಬಿಂಬೋಪಾಸನೆ'ಎನಿಸುವದು. ಉಳಿದ ಭಾಗವ ಧರ್ಮಗಳ ಆಚರಣೆಯಿಂದ ದೊರೆಯುವ ಫಲಕ್ಕಿಂತಲೂ ಬಿಂಬೋಪಾಸನದಿಂ ಲಭಿಸುವ ಫಲವು ಅತಿ ಶ್ರೇಷ್ಠವೆಂದು ಸೂಚಿಸುವದಕ್ಕಾಗಿ ಅದಕ್ಕೆ ಕೊನೆಯಸ್ಥಾ ವಿರುವದೆಂದು ತಿಳಿದುಕೊಳ್ಳಬೇಕು.

|| ೩೨೭ || **ವಿಪ್ರಾದ್ದ್ವಿಷಡ್ಗುಣಯುತಾದರವಿಂದನಾಭ-**

**ಪಾದಾರವಿಂದವಿಮುಖಾತ್ ಶ್ವಪಚಂವರಿಷ್ಠಂ |**

**ಮನ್ಯೇ ತದರ್ಪಿತಮನೋವಚನಾತ್ಮಗೇಹ-**

**ಪ್ರಾಣಃ ಪುನಾತಿ ಸಕಲಂ ನ ತು ಭೂರಿಮಾನಃ||೭-೯-೧೦**

ಭಕ್ತ ಪ್ರಲ್ಹಾದನು ಅಸುರ ಬಾಲಕರಿಗೆ ಹೇಳಿದ ಮಾತು.

ಭಗವಂತನ ಪ್ರೀತಿಯನ್ನು (ಪರಮಾನು ಗ್ರಹವನ್ನು) ಪಡೆಯಲು ಆತ್ಮ ಸಮರ್ಪಣಕ್ಕೆ ಸರಿಸಮವಾದ ಬೇರೆ ಯಾವ ಅನ್ಯ ಸಾಧನವಿಲ್ಲವೆಂಬುದನ್ನು ಮನದಲ್ಲಿ ದೃಢವಾಗಿ ನಾಟಿಸಲು, ಉದಾಹರಣೆ ಕೊಟ್ಟು ತಿಳಿಪಡಿಸುವರು.

**ಅರ್ಥ** :- (ವಿಪ್ರಾದಿತಿ) –ಜ್ಞಾನ, ಸತ್ಯ, ಇಂದ್ರಿಯ ನಿಗ್ರಹ(ದಮ), ಭಗವಂತನಲ್ಲಿ ನಿಷ್ಠೆ (ಶಮ), ಹೊಟ್ಟೆಕಿಚ್ಚು ಪಡದಿರುವದು, ಶಾಲೀನತೆ, ಈರ್ಷೆ ಮಾಡದಿರುವದು, ದಾನ, ಯಜ್ಞ, ತಪಸ್ಸು, ವೇದಾಭ್ಯಾಸ. –ಬ್ರಾಹ್ಮಣರಿಗೆ ಇವು ಹನ್ನೆರಡು ಮಹಾವ್ರತಗಳು. ಇವೆಲ್ಲ ಹನ್ನೆರಡು ಗುಣಗಳಿಂದ ಯುಕ್ತನಾದ ಬ್ರಾಹ್ಮಣನಾಗಿದ್ದರೂ, ಶ್ರೀಹರಿಪಾದ ಕಮಲದಲ್ಲಿ ಆತನ ಮನಸ್ಸು ಆಸಕ್ತವಾಗಿರದಿದ್ದರೆ, ಚಾಂಡಾಲರಲ್ಲಿಯೂ ಅತಿ ಕನಿಷ್ಠನಾದ ಶ್ವಪಚನು (ಶ್ರೀಹರಿ ಪಾದ ಕಮಲದಲ್ಲಿ ಆಸಕ್ತವಾದ ಮನಸ್ಸುಳ್ಳವನಾಗಿದ್ದರೆ) ಅಂಥ ಹನ್ನೆರಡು ಗುಣಯುಕ್ತ ಬ್ರಾಹ್ಮಣನಿಗಿಂತಲೂ ಶ್ರೇಷ್ಠನಾಗಿರುವನು. ಅಂಥ ಶ್ವಪಚನು ಅರವಿಂದ ನಾಭನಾದ ಶ್ರೀಹರಿಯಲ್ಲಿ ತನ್ನ ಮನಸ್ಸು, ವಾಣಿ, ದೇಹ. ಹಾಗೂ ಪ್ರಾಣಗಳನ್ನು (ತನ್ನ ಸರ್ವಸ್ವವನ್ನೂ) ಸಮರ್ಪಣ ಮಾಡಿದವನಾಗಿರುವನು. ಇಂಥವನು ಶ್ವಪಚನಾದರೂ, ತನ್ನ ಕಣ್ಣಿಗೆ ಗೋಚರವಾದುದೆಲ್ಲವನ್ನೂ ಪುನೀತ (ಪವಿತ್ರ) ವನ್ನಾಗಿ ಮಾಡುವನು. ಹೀಗಿರಲು, ತನ್ನ ಮನಸ್ಸು, ಬುದ್ಧಿ ಮುಂತಾದವುಗಳನ್ನು ವಿಶುದ್ಧಗೊಳಿಸುವನೆಂದು ಬೇರೆ ಹೇಳಬೇಕಿಲ್ಲ. ಆದರೆ ತಾನು ತನ್ನದೆಂಬ ಮಮಕಾರ, ಅಹಂಕಾರಗಳಿಂದ ಯುಕ್ತನಾದವನು ('ಭೂರಿ ಮಾನ'ನಾದವನು) ತನ್ನ ವಿಶುದ್ಧಿಯನ್ನೂ ಪಡೆಯಲಾರನು. ಅನ್ಯರಿಗೂ ವಿಶುದ್ಧಿಯನ್ನು ತಂದು ಕೊಡಲಾರನು. ತಾನು ತನ್ನದೆಂಬ ಅಭಿಮಾನವುಳ್ಳವನು ಭಗವಂತನಿಗೆ ಆತ್ಮ ಸಮರ್ಪಣೆ ಮಾಡಲಾರನೆಂಬುದು ಇದರಿಂದ ಸೂಚಿತವಾಗಿದೆ. ಏಕೆಂದರೆ ಮಮಕಾರ ಹಾಗೂ ಅಹಂಕಾರಗಳಿಗೂ, ಆತ್ಮ ಸಮರ್ಪಣೆಗೂ ಎಣ್ಣೆ ಸೀಗೆ ಕಾಯಿಗಳಷ್ಟು ವಿರೋಧವಿರುವದು. ನಾನು ನನ್ನದೆಂಬ ಅಭಿಮಾನದ ಮೂಲಕ. ಶ್ರೀಹರಿ ಪಾದದಲ್ಲಿ ಆಸಕ್ತವಾಗದ ಮನಸ್ಸುಳ್ಳ ಬ್ರಾಹ್ಮಣನು, ಸಕಲವನ್ನು ಪವಿತ್ರಗೊಳಿಸಲಾರನು.

ಇಲ್ಲಿ ಒಂದು ಆಕ್ಷೇಪ :- ಹನ್ನೆರಡು ಗುಣಗಳಲ್ಲಿ 'ಶಮ'ವೂ ಒಂದಾಗಿದೆ. 'ಶಮ' ವೆಂದರೆ ಭಗವನ್ನಿಷ್ಟ ಬುದ್ಧಿ. ಶಮ ಗುಣವುಳ್ಳ ಬ್ರಾಹ್ಮಣನಿಗಿಂತಲೂ ಅತಿ ಚಾಂಡಾಲನಾದ (ಭಗವನ್ನಿಷ್ಠನಾದ) ಶ್ವಪಚನು ಶ್ರೇಷ್ಠನೆಂದು ಹೇಳುವದು ಸಮಂಜಸವಾಗದಲ್ಲವೆ ?

ಈ ಆಕ್ಷೇಪಕ್ಕೆ ಹೀಗೆ ಸಮಾಧಾನ ಹೇಳುವರು. ಅಂಥ ಬ್ರಾಹ್ಮಣನಲ್ಲಿ
ಶಮಗುಣವಿದ್ದರೂ, ಈತನು 'ಭೂರಿಮಾನ', ನಾನು ನನ್ನದೆಂಬ ಅತಿಯಾದ ಅಭಿ
ಮಾನ ಉಳ್ಳವನಾದ್ದರಿಂದ, ಈ ಅಭಿಮಾನವನ್ನು ಬಿಟ್ಟುಕೊಟ್ಟು ಸರ್ವಸ್ವವನ್ನೂ
ಭಗವಂತನಿಗೆ ಸಮರ್ಪಿಸುವ ಭಗವತ್ ಪ್ರೀತಿಯು ಆತನಲ್ಲಿ ಇರುವದಿಲ್ಲ. ಆದ
ದರಿಂದ ಶಮ ಗುಣವಿದ್ದರೂ ಆತನಿಗೆ ಭಗವಂತನ ಪಾದದಲ್ಲಿ ಸಂಪೂರ್ಣವಾ
ಆಸಕ್ತಿಯು ಇರಲಾರದು.

ಒಟ್ಟಾರೆ ಹೀಗೆ ಹೇಳುವರು :- ಯೋಗ್ಯವಾದ ಕುಲದಲ್ಲಿ ಜನ್ಮ (ಸತ್ಕು
ಪ್ರಸೂತಿ), ಮುಂತಾದ ಎಲ್ಲ ಸಾಧನ ಸಾಮಗ್ರಿಯು ಪೂರ್ಣವಾಗಿದ್ದರೂ, ಭ
ವಂತನಪಾದದಲ್ಲಿ ಸಂಪೂರ್ಣವಾದ ಆಸಕ್ತಿಯಿರದಿದ್ದರೆ, ಉಳಿದೆಲ್ಲ ಉತ್ತಮಸಾಧ
ಸಂಪತ್ತೂ, ವ್ಯರ್ಥವಾಗುವದು, ಇದಕ್ಕೆ ಪ್ರತಿಯಾಗಿ ಸಕಲ ಸಾಧನಗಳ ಕೊ
ಯಿದ್ದರೂ ಭಗವತ್ಪಾದದಲ್ಲಿ ಮನಸ್ಸು ಲೀನವಾಗಿದ್ದರೆ, ಹೀನ ಕುಲದಲ್ಲಿ ಜ
ಮುಂತಾದ ಸಕಲ ನ್ಯೂನತೆಗಳನ್ನೂ ಅದು ತುಂಬಿಕೊಳ್ಳುವದು. ಆತ್ಮಾರ್ಪಣೆ
ಪ್ರಶಂಶೆ, ಹಾಗೂ ಆತ್ಮಾರ್ಪಣೆಯಿಲ್ಲದರ ನಿಂದೆಗಳಿಂದ, ಯಾವುದು ನೀಚ
ದುದ್ದು, ಯಾವುದು ಶ್ರೇಷ್ಠವಾದುದು ಯೆಂಬುದನ್ನು ಹೇಳಿಕೊಟ್ಟಿರುವರು.
ವಂತನನ್ನು ಬಿಟ್ಟರೆ, ಭಗವಂತನ ಪ್ರೀತಿಗೆ ಪಾತ್ರವಾಗುವದೇ ಮಹತ್ವ-ಶ್ರೇಷ್ಠ
ಯಾಗಿದೆ. ಭಗವಂತನ ಪ್ರೀತಿಗೆ ಪಾತ್ರರಾಗದಿರುವದೇ ನೀಚತ್ವ. ಸಕಲ ಸಾ
ಗಳಿದ್ದರೂ ಬ್ರಾಹ್ಮಣನಲ್ಲಿ ಭಗವಂತನ ಪ್ರೀತಿಯಿಲ್ಲದಿರುವದೆಂತಲೂ, ಸ
ಸಾಧನಗಳಿಲ್ಲದಿದ್ದರೂ ಶ್ವಪಚನಲ್ಲಿ ಭಗವಂತನ ಪ್ರೀತಿಯಿರುವದೆಂತಲೂ ಹೇಳ
ದರಿಂದ, ಆತ್ಮಾರ್ಪಣೆಯೆ ಭಗವತ್ ಪ್ರೀತಿಗೆ ವಿಶೇಷ ಸಾಧನ ವೆಂಬುದು ತಿಳಿ
ಬರುವದು.

|| ೩೨ || **ಕಿಂಚಿತ್ಕರೋತ್ಯುರ್ವಪಿ ಯತ್ಸ್ವದತ್ತಂ**
**ಸುಹೃತ್ಕೃತಂ ಫಲ್ಗ್ವಪಿ ಭೂರಿಕಾರಿ |**
**ಮಯೋಪನೀತಂ ಪೃಥುಕೈಕಮುಷ್ಟಿಂ**
**ಪ್ರತ್ಯಗ್ರಹೀತ್ ಪ್ರೀತಿಯುತೋ ಮಹಾತ್ಮಾ** || ೧೦-೮೧-೩೫

ಕುಚೇಲನ (ಭಕ್ತಸುಧಾಮನ) ಉದ್ಗಾರವಿದು.

ಮನಸ್ಸು, ವಾಕ್ಕು, ಶರೀರ ಹಾಗೂ ಪ್ರಾಣ, - ಭಗವಂತನಿಗೆ ಸಮ
ಸುವ ಮೊದಲನೆಯ ಪ್ರಕಾರದ ನಾಲ್ಕು ಬಗೆಯ ಆಂತರಿಕ ಸಮರ್ಪಣೆಗಳಲ್ಲಿ
ಸಮರ್ಪಣೆ (ಸ್ವರೂಪತಃ ತಾನು ಭಗವಂತನ ದಾಸನೆಂದು ನಂಬಿ ಭಗವಂ

ಸರ್ವಸ್ವ ಸಮರ್ಪಣೆ) ಆದ್ಯವಾದುದು, ಪ್ರಧಾನವಾದುದು, ಎಂಬುದನ್ನು ತೋರಿಸಿ ಕೊಟ್ಟದ್ದಾಯಿತು, ಈಗ್ಗೆ ಎರಡನೆಯ ಪ್ರಕಾರದ ಬಾಹ್ಯ ಸಮರ್ಪಣೆಗಳಲ್ಲಿ ಆದ್ಯ (ಮುಖ್ಯ) ವಾದುದನ್ನು ತೋರಿಸಿ ಕೊಡುವರು.

**ಅರ್ಥ :-** ( 'ಸು'-ಸಮ್ಯಕ್, ) ಎಂದರೆ, ಸಮೀಚೀನವಾದ ರೀತಿಯಲ್ಲಿ, ಆತ್ಮಾರ್ಪಣಪೂರ್ವಕವಾಗಿ, ( ಅದತ್ತಂ ) ತನಗೆ ಭಕ್ತಿಶ್ರದ್ಧಾಪೂರ್ವಕವಾಗಿ) ಸಮರ್ಪಿಸದ ವಸ್ತು, (ಭೂರಿ) ಗುಣದಲ್ಲಿ, ಪ್ರಮಾಣದಲ್ಲಿ ಅತ್ಯಧಿಕವಾಗಿದ್ದರೂ, ಭಗವಂತನು ಅದನ್ನು ಕಿಂಚಿತ್ತಾಗಿಯೆ, ಅತ್ಯಲ್ಪವಾಗಿಯೆ ಕಾಣುತ್ತಾನೆ, ಅಂಥ ( ಆತ್ಮಾರ್ಪಣೆಯಿಲ್ಲದೆ ಸಮರ್ಪಿಸಿದ ) ವಸ್ತುವಿಗೆ ಭಗವಂತನಿಂದ ದೊರೆಯುವ ಪ್ರತಿಫಲವೂ ಅತ್ಯಲ್ಪವೇ. ಇದಕ್ಕೆ ಪ್ರತಿಯಾಗಿ, ತನಗೆ (ಭಗವಂತನಿಗೆ) ಆತ್ಮ ಸಮರ್ಪಣೆಯನ್ನು ಮಾಡಿದ ತನ್ನ ಪ್ರೀತಿಪಾತ್ರರಾದ ಭಕ್ತರು, ಸಮರ್ಪಿಸುವ ವಸ್ತು (ಬೆಲೆಯಲ್ಲಿ, ಪ್ರಮಾಣದಲ್ಲಿ) ಅತ್ಯಲ್ಪ ( ಫಲ್ಗು ) ಆಗಿದ್ದರೂ, ಅದನ್ನು ( ಭೂರಿ ) ಅತಿ ಹೆಚ್ಚಿನದಾಗಿ ಸ್ವೀಕರಿಸಿ, ಅತ್ಯಧಿಕ ಫಲವನ್ನು ಕೊಡುತ್ತಾನೆ. ಪರಮಾತ್ಮನ ದಯಾಳುತ್ವವು ಇದರಿಂದ ಕಂಡುಬರುತ್ತಿದೆ.

ಪರಮಾತ್ಮನ ದಯಾಲುತ್ವದ ಈ ಗುಣವು ತನಗೆ ಹೇಗೆ ಗೊತ್ತಾಯಿತೆಂಬುದನ್ನು ಸ್ವಾನುಭವದಿಂದಲೆ ಸ್ಪಷ್ಟಗೊಳಿಸುತ್ತಾನೆ. ( ಮಯಾ ) ಭಗವಂತನ ದರ್ಶನಕ್ಕೆಂದು ಮನೆಯಿಂದ ಹೊರಡುವಾಗ್ಗೆ, ಆತನಿಗೆ ಸಮರ್ಪಿಸಲೆಂದು ನನ್ನ ಬಡತನದಲ್ಲಿ ಒಂದೇ ಹಿಡಿ ಅವಲಕ್ಕಿಯನ್ನು ಮಾತ್ರ ನಾನು ತಂದೆನು. ಅದನ್ನೇ, ಅಷ್ಟನ್ನೇ ಪರಮಾತ್ಮನು ಪ್ರೀತಿಪೂರ್ವಕವಾಗಿ ಸ್ವೀಕರಿಸಿದನು, ಅಪೇಕ್ಷೆಗಿಂತಲೂ ಅತ್ಯಧಿಕವಾದ ಐಶ್ವರ್ಯವನ್ನು ಕೊಟ್ಟು, ನನ್ನನ್ನು ಅನುಗ್ರಹಿಸಿದನು.

ಆದುದರಿಂದ, ಮೋಕ್ಷಾಪೇಕ್ಷಿಗಳಾದ ಭಗವಂತನ ಭಕ್ತರು, ನಿತ್ಯದಲ್ಲಿಯೂ ನಿರಂತರವಾಗಿಯೂ, ದಾಸ್ಯಭಾವನೆಯಿಂದ ಆತ್ಮಸಮರ್ಪಣೆಯನ್ನು ಮಾಡಬೇಕು, ಸರ್ವಸ್ವವನ್ನು ಭಗವಂತನಿಗೆ ಸಮರ್ಪಿಸಬೇಕು,

|| ೩೨೮ || **ಕಾಯೇನ ವಾಚಾ ಮನಸೇಂದ್ರಿಯೈರ್ವಾ**
**ಬುದ್ಧ್ಯಾತ್ಮನಾ ವಾನುಸೃತಃ ಸ್ವಭಾವಂ |**
**ಕರೋತಿ ಯದ್ಯತ್ಸಕಲಂ ಪರಸ್ಮೈ**
**ನಾರಾಯಣಾಯೇತಿ ಸಮರ್ಪಯೇತ್ತತ್** || ೧೧-೨-೩೬

ಕಪಿ
ಜನಕನ

ಇಂತು ದ್ರವ್ಯ (ಪದಾರ್ಥ) ಸಮರ್ಪಣ.

ಆತ್ಮಸಮರ್ಪಣೆಯ ಕ್ರಮವನ್ನು ವಿದೇಹರಾಜನಿಗೆ ಕವಿಯು ವಿವರಿಸುವನು-

ಎರಡನೆಯ ಬಗೆಯ (ಆಂತರಿಕ) ಸಮರ್ಪಣೆಯನ್ನು ತಿಳಿಸಿಕೊಡುವ
(ಕಾಯೇನ ಇತಿ)

**ಅರ್ಥ :-** ದೇಹದಿಂದ, ವಾತಿನಿಂದ, ಮನಸ್ಸಿನಿಂದ, ಬುದ್ಧಿಯಿ
ಪ್ರಕೃತಿಧರ್ಮವನ್ನು ಅನುಸರಿಸುವದರಿಂದ (ಅದಕ್ಕೆ ಹೊಂದಿಕೊಂಡು ನಡೆಯು
ರಿಂದ) ಇಂದ್ರಿಯಗಳಿಂದ – ತಾನು ಮಾಡುವ ಸಕಲ ಕಾರ್ಯಗಳನ್ನು ಸವೆ
ತ್ತಮನಾದ ಶ್ರೀಮನ್ನಾರಾಯಣನಿಗೆ (ಫಲಾಪೇಕ್ಷೆಯಿಲ್ಲದೆ–ಸೇವಾಭಾವನೆಯಿ
ಸಮರ್ಪಿಸಬೇಕು.

ತನ್ನ 'ಸ್ವ'ಭಾವಕ್ಕೆ (ಪ್ರಕೃತಿ ಧರ್ಮಕ್ಕೆ) ಅನುಗುಣವಾಗಿಮಾಡುವ
ಎಂಬುದು ಒಂದು ಅರ್ಥ. ಅಥವಾ 'ಸ್ವ'ನೆಂದು ಕರೆಯಲ್ಪಡುತ್ತಿರುವ ಭಗವಂ
ಪ್ರೇರಣೆ (ಪ್ರಚೋದನೆ) ಯಿಂದ ಮಾಡುವಕೃತಿ – ಎಂಬುದು ಇನ್ನೊಂದು ಅ
ಎಂದರೆ, ಬಿಂಬರೂಪನಾದ ಶ್ರೀ ಹರಿಯು ತನ್ನಿಂದ ಬಿಟ್ಟಿಯ ಆಳಿನಂತೆ ಮಾ
ಕೊಳ್ಳುವ ಕೃತಿ–ಎಂಬುದು ಅಭಿಪ್ರಾಯ. ದೇಹದಿಂದ ಮಾಡುವ ಕೃತಿಯಿ
ಮನಸ್ಸಿನಿಂದ ಜರಗುವ ಸಕಲ ಕಾರ್ಯಗಳನ್ನು ಪರಮಾತ್ಮನಿಗೆ ನಿವೇದಿಸಬೆ
ನಿವೇದಿಸುವದಕ್ಕೇನೆ 'ಸಮರ್ಪಣ'ವೆಂಬ ಇನ್ನೊಂದು ಹೆಸರು. 'ಸಮಪ
ಮಾಡುವದೆಂದರೆ ಏನು ? ಎಂಬುದನ್ನು ಸ್ಪಷ್ಟಗೊಳಿಸುವರು.

ದೇಹಾದಿಗಳಿಂದ ಮಾಡುವ ಸಕಲ ವ್ಯಾಪಾರ (ಕಾರ್ಯ) ಗಳನ್ನು
ವಂತನ ಉದ್ದಿಶ್ಯವಾಗಿಯೆ (ಭಗವಂತನ ಪೂಜೆ, ಸೇವೆ) ಎಂಬ ಶ್ರದ್ಧೆಯನ್ನು
ವಾಗಿ ಮನಸ್ಸಿನಲ್ಲಿ ನೆಲೆಸಿಕೊಂಡು ಫಲಾಪೇಕ್ಷೆಯಿಲ್ಲದೆ ಪರಮಪುರುಷ
ಶ್ರೀಮನ್ನಾರಾಯಣನಿಗೆ ಈ ಭಾವನೆಯಿಂದ ಸಮರ್ಪಿಸಬೇಕು.

ಇದುವೆ 'ಸಮರ್ಪಣ' ವೆಂಬುದರ ಇಂಗಿತವಾಗಿದೆ.

ಸದ್ಯಕ್ಕೆ ಮಾಡುತ್ತಿರುದ (ದೇಹಾದಿಗಳ) ಕಾರ್ಯವನ್ನು ಮಾತ್ರ ಭ
ನಿಗೆ ಸಮರ್ಪಿಸಬೇಕೆಂದು ಅಭಿಪ್ರಾಯವಲ್ಲ. ಇದಲ್ಲದೆ ಹಿಂದೆ ಮಾಡಿದ
ಮುಂದೆ ದೂಡಲಿರುವ ಸಕಲ ಕ್ರಿಯೆಗಳನ್ನು ಭಗವಂತನು ಸಮರ್ಪಣ ಶಕ್ತಿ
ಕೊಟ್ಟಿರುವ ಈ(ಮಾನವ) ಜನ್ಮದಲ್ಲಿ, (ಹಿಂದಿನ, ಇಂದಿನ ಹಾಗೂ ಮುಂದಿ
ಮೂರು ಬಗೆಯ ಕೃತಿಗಳನ್ನು ಭಗವಂತನಿಗೆ ಸಮರ್ಪಿಸಬೇಕು. ಹೀಗೆ ಮ
ಹಿಂದಿನ ಜನ್ಮಗಳಲ್ಲಿ ಮಾಡಿದ ಕರ್ಮಗಳ ನೆನಪು (ಈಗ್ಗೆ) ಇರದಿದ್ದರೂ,
ವಂತನಿಗೆ ಇಂದು ಮಾಡಿದ ಸಮರ್ಪಣೆಯಿಂದ) ಅವೆಲ್ಲ ಕೃತಿಗಳು ಸ
(ಭಗವತ್ - ಪ್ರೀತಿಕರ) ವಾಗುತ್ತವೆ.ಇದೇ ಮೇರೆಗೆ, ಮುಪ್ಪಿನಲ್ಲಾಗಲಿ,

ಬಾಧೆಗಳಿಂದ ಬಳಲುತ್ತಿರುವಾಗ, ಸಮರ್ಪಣ ಶಕ್ತಿಯು (ಸಮರ್ಪಣದ ಮನೋ ಭಾವನೆಯು) ತನ್ನಲ್ಲಿ ಉಡುಗಿಹೋಗಬಹುದೆಂಬ ಭಾವನೆಯಿಂದ, ಮುಂದೆ ಭವಿಷ್ಯತ್ತಿನಲ್ಲಿ (ಮುಂಬರುವ ಕಾಲದಲ್ಲಿ) ತನಗೆ ಒದಗಬಹುದಾದ ರೋಗಾದಿಗಳ ಬೇನೆಯ ಕಾಲದಲ್ಲಿ ಮಾಡುವ ಸಕಲ ಕೃತಿಗಳನ್ನೂ, ಅಷ್ಟೇ ಏಕೆ ? ತನ್ನ ಮರಣಾನಂತರದ ಶವದಹನ ಮುಂತಾದ ಸಕಲ ಕ್ರಿಯೆಗಳನ್ನು (ಸಮರ್ಪಣ ಶಕ್ತಿಯು ತನ್ನಲ್ಲಿರುವಾಗಲೇನೆ) ಭಗವಂತನಿಗೆ ಸಮರ್ಪಿಸಬೇಕು. ಈ ಅರ್ಥವನ್ನು ಸೂಚಿಸುವದಕ್ಕಾಗಿಯೆ,-ಹಿಂದೆ ಮಾಡಿದ್ದು, ಈಗ್ಗೆ ಮಾಡುತ್ತಿರುವದು, ಮುಂದೆ ಮಾಡಲಿರುವದು,-ಈ ಮೂರು ಬಗೆಯ ಕೃತಿಗಳನ್ನು ಭಗವಂತನಿಗೆ ಸಮರ್ಪಿಸಬೇಕು. ಎಂದು ಹೇಳಿರುವರು. ಕರ್ಮ ಮಾಡುತ್ತಿರುವಾಗಲೆ, ಭಗವಂತನಿಗೆ ತತ್‌ಕ್ಷಣ ಸಮರ್ಪಿಸಬೇಕೆಂಬುವ ಭಾಗವತ ಧರ್ಮಕ್ಕೆ, ಹಿಂದಿನ ಹಾಗೂ ಮುಂದಿನ ಕರ್ಮಗಳನ್ನೂ ಸಮರ್ಪಿಸುವ ವಿಧಾನವು ವಿಸಂಗತವೆನಿಸಬಹುದು. ಹೀಗಿದ್ದರೂ ಭೂತ-ಭವಿಷ್ಯಕಾಲಗಳಲ್ಲಿ ಸಮರ್ಪಣದ ಪ್ರಜ್ಞೆ ಹಾಗೂ ಅಧಿಕಾರವು ಆತನಿಗೆ ಇರುವದೆಂಬ ನಿಶ್ಚಯವಿಲ್ಲದಿರುವದರಿಂದ. ( ಹಿಂದು ಮುಂದಿನ ಸಕಲ ಕರ್ಮಗಳ ಸಮರ್ಪಣೆಯನ್ನು ಇಂದು ಮಾಡುವದು) ಭಾಗವತ ಧರ್ಮಕ್ಕೆ ವಿರುದ್ಧವೆನಿಸದು. ಅದರಿಂದ ಹೀಗೆ ಮೂರು ಬಗೆಯ ಕರ್ಮಗಳ ಸಮರ್ಪಣೆಯು ಸದೋಷವೆನಿಸದು. ಸಮರ್ಪಣೆಯ ಅಧಿಕಾರವು ನಿಶ್ಚಿತವಾಗಿ ಉಳ್ಳವರೂ ಕೂಡ ಮೂರು ಬಗೆಯ ಕರ್ಮಗಳನ್ನು (ಸಮರ್ಪಣ ಶಕ್ತಿಯಿರುವಾಗಲೆ) ಸಮರ್ಪಿಸುವದರಿಂದ, ಅವರೂ ಕೂಡ ಭಗವಂತನ ವಿಶೇಷ (ಹೆಚ್ಚಿನ) ಅನುಗ್ರಹವನ್ನು ಪಡೆಯುವರು. ಹಾಗೂ ಎಲ್ಲ ಜನರೂ ತಮ್ಮಂತೆಯೇ ಮಾಡಬೇಕೆಂಬ ಒಂದು ಮೇಲ್ಪಂಕ್ತಿಯನ್ನು (ಲೋಕ ಶಿಕ್ಷಣಾರ್ಥವಾಗಿ) ಜನತೆಗೆ ಹಾಕಿಕೊಟ್ಟಂತಾಗುವದು.

॥೩೭॥ **ನೈಷ್ಕರ್ಮ್ಯಮಪ್ಯಚ್ಯುತಭಾವವರ್ಜಿತಂ**
**ನ ಶೋಭತೇ ಜ್ಞಾನಮಲಂ ನಿರಂಜನಂ ।**
**ಕುತಃ ಪುನಃ ಶಶ್ವದಭದ್ರಮೀಶ್ವರೇ**
**ನ ಚಾರ್ಪಿತಂ ಕರ್ಮಯದಪ್ಯಕಾರಣಂ ॥** ೧.೫-೧೨

ನಾರದರು ವ್ಯಾಸರಲ್ಲಿ

ನಾರದರು ಶ್ರೀ ವೇದವ್ಯಾಸರಿಗೆ ಮಾಡಿಕೊಂಡ ವಿಜ್ಞಾಪನೆ.

ಇಲ್ಲಿ ಒಂದು ಆಕ್ಷೇಪ:-ಈ ಬಗೆಯ ಸಮರ್ಪಣೆಯು ಅಗತ್ಯವೇನಿದೆ? ಶ್ರುತಿಗಳೇ ಮುಂತಾದಧರ್ಮಶಾಸ್ತ್ರಗಳು ನಿಷೇಧಿಸಿರುವ(ಮಾಡಕೂಡದು ಎಂದು ಆಜ್ಞಾಪಿಸಿರುವ) ನಿಷಿದ್ಧ ಕರ್ಮಗಳನ್ನು ಮಾಡದೆ, ವಿಹಿತ ಕರ್ಮಗಳನ್ನು ಮಾಡುವದರಿಂದಲೇ (ಅಪೇಕ್ಷಿತ ಫಲ ದೊರೆಯುತ್ತಿರಲು, ಈಗ್ಗೆ ಹೇಳಿರುವ ಸಮರ್ಪಣ ವಿಧಾನವು

ಅನವಶ್ಯಕವಲ್ಲವೆ?- ಎಂಬ ಆಕ್ಷೇಪಕ್ಕೆ ಸಮಾಧಾನವನ್ನು ಹೇಳುವರು. ಮೋ
ಪ್ರಾಪ್ತಿಗೆ ಮುಖ್ಯ ಸಾಧನವೆಂದೂ, ಪಾಪಪರಿಹಾರಕವೆಂದೂ, ಶ್ರುತ್ಯಾದಿ
ಪ್ರಮಾಣಗಳಿಂದ ನಿರೂಪಿಸುವ (ಪವಿತ್ರವೆನಿಸಿದ) ಜ್ಞಾನವೂ ಕೂಡ ಭಗವ
ನಿಗೆ (ನಿಷ್ಕಾಮ-ನಿಷ್ಠೆಯಿಂದ) ಸಮರ್ಪಿತವಾಗದಿದ್ದರೆ, ಬ್ರಹ್ಮವಿದ್ಯಾರಹಿತ
ಬ್ರಾಹ್ಮಣನಂತೆ ಶೋಭಿಸಲಾರದು. ಅಂಥ ಜ್ಞಾನವೂ ಕೂಡ ತನ್ನ ಮಹತಿಯ
ಕಳೆದುಕೊಳ್ಳುವದು. ಅದು ಅಗ್ರಾಹ್ಯವೆನಿಸುವದು. ಹೀಗಿರಲೂ, ಮುಕ್ತಿಗೆ ಮ
ಸಾಧನವಾಗದಿರುವ ಹಾಗೂ ಸ್ವಾಭಾವಿಕವಾಗಿಯೆ ಹೆಚ್ಚಾಗಿ ಪಾಪಮಯ
ಶ್ರುತಿ ವಿಹಿತ ಪಶುಹಿಂಸೆಯಿಂದ ಪಾಪಮಯ ಕರ್ಮವೂ ಭಗವಂತನಿಗೆ ಯ
ಚಿತವಾಗಿ ಸಮರ್ಪಿತವಾಗದಿದ್ದರೆ, ಭಗವಂತನಿಗೆ ಅನರ್ಪಿತವಾದ ಕರ್ಮ
ಕಳೆಗುಂದುವದೆಂದು -ತನ್ನ ಮಹತಿಯನ್ನು (ಫಲ ಕೊಡುವ ಶಕ್ತಿಯನ್ನು) ಕ
ಕೊಳ್ಳುವದೆಂದು, ಅದು ಅಗ್ರಾಹ್ಯವಾಗುವದೆಂದೂ ಬೇರೆಯಾಗಿ ಹೇಳಬೇಕಿಲ್ಲ

ಅರ್ಥ :- ( ಈ ಅಭಿಪ್ರಾಯದಿಂದಲೇನೆ - ನೈಷ್ಕರ್ಮ್ಯಮಪ್ಯಚ್ಯುತ
ಮಾಡಲು ಅಶಕ್ಯವೆಂತಾಗಲಿ, ಅಥವಾ ದೋಷಪೂರ್ಣವೆಂತಾಗ
ಕರ್ಮ ಮಾಡದೆ, ಕರ್ಮ ಬಾಧೆಗೆ ಒಳಗಾಗದಿರುವದೆ (ಕರ್ಮ ರಾಹಿ
ನೈಷ್ಕರ್ಮ್ಯರೂಪವಾದ) ಮುಕ್ತಿಗೆ ಸಾಧನವು. ಇಂಥ ಕರ್ಮರಾ
ವಾಗಲಿ, ಅದರಂತೆಯೆ, ಶ್ರುತ್ಯಾದಿಗಳಲ್ಲಿ ನಿರೂಪಿತವಾಗಿರುವ, (ಅಲಂ-
ಜನಂ) ಸಕಲ ಪಾಪಗಳನ್ನು ನಿವಾರಣೆ ಮಾಡಲು, ಸ್ವಾಭಾವಿಕಶಕ್ತಿಯ
ಜ್ಞಾನವೂ ಕೂಡ, ಯಥೋಚಿತವಾದ ಮನೋಭಾವದಿಂದ (ನಿಷ್ಕಾಮ ಸೆ
ಭಾವನೆಯಿಂದ) ಪರಮಾತ್ಮನಲ್ಲಿ ಸಮರ್ಪಿತವಾಗದಿದ್ದರೆ, ಅಂಥ ಕರ್ಮ ಹ
ಜ್ಞಾನಗಳು ಆದರಣೀಯವಾಗವು, ಗ್ರಾಹ್ಯವೆನಿಸವು. (ಪ್ರವೃತ್ತ) ಕರ
ತ್ಯಾಜ್ಯವಾದುದು, ಮೋಕ್ಷ ಪ್ರಾಪ್ತಿಗೆ ಅದು ಸಾಧನವಾಗದೆಂದು ಶ್ರುತಿ
ಪ್ರತಿಪಾದಿಸುವವು. ಅದು ಸರ್ವದಾ ಅಮಂಗಳವೆಂದೂ, ಅಂಥ ಕರ
ಸ್ವಾಭಾವಿಕವಾಗಿ ತಾನೇ ಪಾಪವೆನಿಸುತ್ತಿರಲೂ. -(ಇವೆಲ್ಲಕ್ಕಿಂತಲೂ ಹೇ
ದರೆ) ಪರಮಾತ್ಮನಿಗೆ ಅದನ್ನು ಸಮರ್ಪಿಸದಿದ್ದರೆ, ಯಾವ ಕಾರಣದಿಂ
ಅಂಥ ಕರ್ಮವು ಸರ್ವಥಾ ಅನಾದರಣೀಯವಾದುದು. ಅಸಹ್ಯವಾದುದು.

ಒಟ್ಟಾರೆ, ಅಭಿಪ್ರಾಯವೆಂದರೆ, - ತನಗೆ ಅಪೇಕ್ಷಿತವಾದ ಪುರುಷ
ವನ್ನು ಪಡೆಯಲು ಸಾಧನ (ಸಹಾಯಕ)ವಾದುದನ್ನೇ ಬುದ್ಧಿವಂತನು (
ಕಿಯು) ಆದರಿಸುತ್ತಾನೆ. ಸ್ವೀಕರಿಸುತ್ತಾನೆ.- ಪುರುಷಾರ್ಥವು (ಅಪೇಕ್ಷಿ
ವಸ್ತು) ಎರಡು ವಿಧವಾಗಿದೆ:- ತನಗೆ ಬಾಧಕವಾಗಿರುವ (ಅನಿಷ್ಟದ)
ರಣೆಯಾಗಬೇಕು, ಅನಿಷ್ಟವು ದೂರವಾಗಬೇಕು, ಎರಡನೆಯದಾಗಿ,

ಅಪೇಕ್ಷಿಸುವದು ( ಹಿತವಾದುದು ) ದೊರೆಯಬೇಕು. ಇವೆರಡರ ಪ್ರಾಪ್ತಿಗಾಗಿ ಮಾಡಲೇಬೇಕಾದ ಕರ್ತವ್ಯದಿಂದ ಯುಕ್ತವಾದುದೆ(ಅವುಗಳನ್ನು ಪಡೆಯಲು) ಸಾಧನವಾಗುವದು. ಇವೆರಡು ಪುರುಷಾರ್ಥಗಳ ಪ್ರಾಪ್ತಿಗಾಗಿ, ಭಗವಂತನಿಗೆ (ಯಥೋಚಿತವಾಗಿ) ಸಮರ್ಪಿತವಾಗದ ಜ್ಞಾನವು ಸಕಲ ಪಾಪಗಳೆಂಬ ಅನಿಷ್ಟವನ್ನೂ ನಿವಾರಿಸಲಾರದು, ಮೋಕ್ಷಪ್ರಾಪ್ತಿಯೆಂಬ ಇಷ್ಟಪ್ರಾಪ್ತಿಯನ್ನು ತಂದುಕೊಡಲಾರದು. ಎರಡೂ ಪುರುಷಾರ್ಥಗಳನ್ನು ಸಾಧಿಸದ (ಭಗವಂತನಿಗೆ ಸಮರ್ಪಿತವಾಗದ) ಇಂಥ ಜ್ಞಾನವನ್ನು ಬುದ್ಧಿವಂತರು [ವಿವೇಕಿಗಳು] ಹೇಗೆ ಸ್ವೀಕರಿಸುವರು ? ತಮ್ಮದಾಗಿ ಮಾಡಿಕೊಳ್ಳುವರು ? ಇಂಥ ಜ್ಞಾನವನ್ನು ಅವರು ಎತ್ತಿಕೊಂಡರೆ, ತಮ್ಮ ಬುದ್ಧಿಮತ್ತೆಯನ್ನೆ [ ಸಾರಾಸಾರ ವಿವೇಕವನ್ನೇ ] ಕಳೆದುಕೊಂಡಂತಾಗುವದು. ಅಂಥ ಜ್ಞಾನವು ಅಗ್ರಾಹ್ಯವಾಗಿರುವಂತೆ, ಭಗವಂತನಿಗೆ ಯಥೋಚಿತವಾಗಿ ಸಮರ್ಪಣ ಮಾಡದ ಕರ್ಮವು ಕೂಡ, ಬುದ್ಧಿವಂತರಿಗೆ ತ್ಯಾಜ್ಯವಾಗಿದೆ. ಏಕೆಂದರೆ, ಮಾಡಲೇಬೇಕಾದ [ಇತಿ ಕರ್ತವ್ಯತಾ] ಭಗವತ್ಸಮರ್ಪಣವೆಂಬ ಕರ್ತವ್ಯವನ್ನು ಅದರಲ್ಲಿ ಬಿಟ್ಟುಕೊಡಲಾಗಿದೆ. ಭಗವಂತನಿಗೆ ಅಸಮರ್ಪಿತವಾದ ಜ್ಞಾನವಾಗಲಿ, ಕರ್ಮವಾಗಲಿ, ಪುರುಷಾರ್ಥವನ್ನು ಪಡೆಯಲು ಸಾಧನವಾಗಲಾರವು. ಆದುದರಿಂದ ಜ್ಞಾನವಾಗಲಿ, ಕರ್ಮವಾಗಲಿ, ನಮ್ಮ ಉದ್ಧಾರದ ಸಾಧನವೆಂದು ಗ್ರಾಹ್ಯವಾಗಬೇಕಾದರೆ, - ಗ್ರಾಹ್ಯವೆನಿಸುವ ಪಾತ್ರತೆಯು ಸ್ಥಿರವಾಗಿ ಅವುಗಳಿಗೆ ಬರಬೇಕಾದರೆ, ಮಾಡಲೇಬೇಕಾದ [ಇತಿ ಕರ್ತವ್ಯತಾ ರೂಪಸವಾದ ] ಭಗವತ್ ಸಮರ್ಪಣೆಯನ್ನು ಯಥಾವತ್ತಾಗಿ ಮಾಡಲೇಬೇಕು.

||೩೩೦|| **ತಪಸ್ವಿನೋ ದಾನಪರಾ ಯಶಸ್ವಿನೋ** ಶುಕರು
**ಮನಸ್ವಿನೋ ಮಂತ್ರವಿದಃ ಸುಮಂಗಲಾಃ |**
**ಕ್ಷೇಮಂ ನ ವಿಂದಂತಿ ವಿನಾ ಯದರ್ಪಣಂ**
**ತಸ್ಮೈ ಸುಭದ್ರಶ್ರವಸೇ ನಮೋ ನಮಃ || ೨-೪-೧೭**

ಮಂಗಳಾತ್ಮಕನಾದ ಶ್ರೀಹರಿಗೆ ಶುಕರು ವಂದಿಸುತ್ತಾರೆ.

ಜ್ಞಾನಕರ್ಮಗಳ ಸಮರ್ಪಣೆಯನ್ನು ಭಗವಂತನಿಗೆ ಮಾಡಬೇಕೆಂಬ [ಇತಿ ಕರ್ತವ್ಯತಾ] ನಿರ್ಧಾರಿತ ಕರ್ತವ್ಯವನ್ನು ಎಲ್ಲಿ ಹೇಳಿದೆ ? ಅಂಥ ಅಗತ್ಯವಾದ ಕರ್ತವ್ಯವಿದ್ದರೆ, ಸಮರ್ಪಣದ ಬಗ್ಗೆ ನೀವು ಹೇಳುವದನ್ನು ಒಪ್ಪಬಹುದಿತ್ತು, ಹೀಗೆ ಪ್ರಶ್ನಿಸುವರಿಗೆ, ಹಾಗೆ ಸಮರ್ಪಣಮಾಡದಿದ್ದರೆ, ಏನು ಅನರ್ಥವಾಗುವದೆಂಬುದನ್ನು ತೋರಿಸಿ, ಸಮರ್ಪಣದ ಅಗತ್ಯವನ್ನು ದೃಢಪಡಿಸುವರು.

ಅರ್ಥ :- (ತಪಸ್ವಿನಃ ಇತಿ):- ತಪೋನಿಷ್ಠರು, ಕೈತುಂಬ ದಾನ ಮಾಡು ವವರು, ಒಳ್ಳೇ ಕೀರ್ತಿಯನ್ನು ತಂದುಕೊಡುವಂಥ - ವಿಶಿಷ್ಟ ಕಾರ್ಯಗಳನ್ನು ಮಾಡುವವರು, ಪ್ರಾಜ್ಞರಾದ ಮಹಾಪುರುಷರು, ( ಮಂತ್ರವೇತ್ತರು ) ವೇದ ಮಂತ್ರಗಳ ಅಭ್ಯಾಸವನ್ನು ಚನ್ನಾಗಿ ಮಾಡುವವರು, ಇಷ್ಟೇ ಏಕೆ ? ಪುರುಷಾರ್ಥ ಪ್ರಾಪ್ತಿಗೆ ಸಾಧನಗಳೆಂದು ಶೃತಿಗಳು ವಿಧಿಸಿರುವ ಸಕಲ ಕರ್ಮಗಳನ್ನೂ ಮಾಡು ವವರು. (ಸುಮಂಗಳಾಃ) ಶೃತಿಗಳಲ್ಲಿ (ಯಜ್ಞಯಾಗಾದಿ) ಕರ್ಮಗಳ ಅಂಗಗ ಳೆಂದು ವಿಧಿಸಿರುವ ಪ್ರಾಯಶ್ಚಿತ್ತ, ದೀಕ್ಷಾಯಜ್ಞದ ಮುಖ್ಯಾಂಗ 'ಪ್ರಯಾಜ' ಮುಂತಾದ ಸಕಲ ವಿಧಿಗಳನ್ನು ಅವುಗಳಿಗೆ ಅಗತ್ಯವಿರುವ ಸಕಲ ಸಾಮಗ್ರಿ-ಸಲಕ ರಣೆಗಳ ಸಹಿತ ಯಥಾ ಸಾಂಗವಾಗಿ ಮಾಡುವವರೂ ಕೂಡ ಭಗವಂತನಿಗೆ ಸರಿ ಯಾಗಿ ಸಮರ್ಪಣ ಮಾಡದಿದ್ದರೆ, ಕ್ಷೇಮವನ್ನು (ಅಪೇಕ್ಷಿತವಾದ ಶ್ರೇಯಸ್ಸನ್ನು) ಪಡೆಯುವದಿಲ್ಲ. ಹೀಗಿರಲು, ದೀಕ್ಷಾ ಮುಂತಾದ ಅಂಗಗಳನ್ನು ಬಿಟ್ಟುಕೊಟ್ಟು ಯಜ್ಞಯಾಗಾದಿ, ದಾನ-ಧರ್ಮ, ತಪಸ್ಸು, ಮುಂತಾ ದವುಗಳನ್ನು ಮಾಡುವವರು ಸಕಲ ಕರ್ಮಗಳನ್ನು ಭಗವಂತನಿಗೆ ಸಮ ರ್ಪಣ ಮಾಡದಿದ್ದರೆ, (ಕ್ಷೇಮವನ್ನು) ಪಡೆಯುವದಿಲ್ಲವೆಂದು ಬೇರೆ ಹೇಳಬೇಕಿಲ್ಲ. ಈ ಭಾವನೆಯಿಂದಲೆ, ಸುಮಂಗಳಾ:- (ಸು-ಅಂದರೆ-ಸಮ್ಯಕ್-ಚೆನ್ನಾಗಿ, ಯಾವ ನ್ಯೂನತೆಯೂ ಇಲ್ಲದೆಯೆ ಶೃತಿ ವಿಹಿತವಾದ ಕರ್ಮಗಳನ್ನು ಮಾಡುವವರು, ಎಂದು ಹೇಳಿರುವರು. ಆದುದರಿಂದ, ಇವೆಲ್ಲ ಕರ್ಮಗಳಿಂದ (ಕ್ಷೇಮ) ಶ್ರೇಯ ಸ್ಸನ್ನು ಪಡೆಯಬೇಕೆನ್ನುವವರು, ಪ್ರತಿಯೊಂದು ಕರ್ಮವನ್ನು ಭಗವಂತನಿಗೆ ಪದೇ ಪದೇ ಸಮರ್ಪಿಸುವದು ಕರ್ತವ್ಯವಾಗಿರುವದೆಂಬ ಅಭಿಪ್ರಾಯದಿಂದ, ಪುಣ್ಯ ಕೀರ್ತಿಯಾದ ಪರಮಾತ್ಮನಿಗೆ ನಮೋನಮಃ, ಎಂದು ಪುನಃ ಪುನಃ ವಂದನೆ ಳನ್ನು ಸಮರ್ಪಿಸುವರು.

||೩೩೦|| **ಯಥಾ ತರೋರ್ಮೂಲನಿಷೇಚನೇನ**
**ತೃಪ್ಯಂತಿ ತತ್ಸ್ಕಂಧಭುಜೋಪಶಾಖಾಃ |**
**ಪ್ರಾಣೋಪಹಾರಾಚ್ಚ ಯಥೇಂದ್ರಿಯಾಣಾಂ**
**ತಥೈವ ಸರ್ವಾರ್ಹಣಮಚ್ಯುತೇಜ್ಯಾ** || ೪-೩೧-೧೪ (೮)

ನಾರದರು ಪ್ರಚೇತಸ

ಪ್ರಚೇತಸರಿಗೆ ನಾರದರು ಮಾಡಿದ ಉಪದೇಶಃ-

ಇಲ್ಲಿ ಒಂದು ಆಕ್ಷೇಪ:- ಸಕಲ ಕರ್ಮಗಳನ್ನೂ ಶ್ರೀಮನ್ ನಾರಾಯಣ ಗೇನೆ ಸಮರ್ಪಿಸಬೇಕೆಂಬುವದು ಇತಿಕರ್ತವ್ಯತಾ- ಮಾಡಲೇಬೇಕಾದ ಕರ್ತ ವಾಗಿದ್ದರೆ, ಶ್ರೀನಾರಾಯಣನ ಹೊರತಾದ ಅನ್ಯ ದೇವತೆಗಳಿಗೆ ಪೂಜೆ, ನೈವೇ

ಮುಂತಾದವುಗಳಿಗೆ ಲೋಪ ಉಂಟಾಗುವದು. ಸಕಲ ಪೂಜಾದಿ ಕರ್ಮಗಳನ್ನು ನಾರಾಯಣನಿಗೇನೆ ಸಮರ್ಪಿಸುವದಾದರೆ, ಅನ್ಯ ದೇವತೆಗಳಿಗೆ ಪೂಜಾದಿಗಳನ್ನು ಯಾರೂ ಮಾಡಲಿಕ್ಕಿಲ್ಲ. ಯಾವ ದೇವತೆಯ ಉದ್ದಿಶ್ಯವಾಗಿ ಪೂಜಾದಿಗಳನ್ನು ಮಾಡುವೆವೋ, ಅವು ಅದೇ ದೇವತೆಗೆ ಸಲ್ಲುವವು; ಆಯಾ ದೇವತೆಗಳ ಪೂಜಾದಿಗಳೆಂದು ಹೇಳಲ್ಪಡುವವು, ಅದರಂತೆಯ ಭಗವಂತನ ಪೂಜೆಯಲ್ಲಿ, ಅಂಗ (ಪರಿವಾರ) ದೇವತೆಗಳ ಪೂಜಾದಿಗಳು ಇರದಿದ್ದರೆ, ಭಗವಂತನಿಗೆ ಮಾಡುವ ಅಂಥ ಪೂಜೆಯು ವಿಶಿಷ್ಟ ಫಲವನ್ನು ತಂದುಕೊಡಲಾರದು. ಸಾಂಗ (ಪರಿವಾರ) ದೇವತೆಗಳ ಸಹಿತ ಮಾಡುವ ಭಗವತ್ಪೂಜೆಯೆ ವಿಶಿಷ್ಟ ಫಲವನ್ನು ತಂದುಕೊಡಬಲ್ಲದು. ಅಂಗದೇವತೆಗಳ ಪೂಜೆಗೆ ಆಗತ್ಯವಿರುವ ಪೂಜಾ ಸಾಮಗ್ರಿಯಿಂದ ಕೂಡಿಕೊಂಡು ಮಾಡುವ ಭಗವತ್-ಪೂಜೆಯೆ ಸಾಂಗ (ವಿಧ್ಯುಕ್ತ)ವೆನಿಸುವದು. ಆದುದರಿಂದ ಸಕಲ ಕರ್ಮಗಳನ್ನು ಭಗವಂತನಿಗೇನೆ ಸಮರ್ಪಣವನ್ನು ಇತಿಕರ್ತವ್ಯತಾ ವಿಧಾನವಾಗಿ, ಮಾಡಲೇಬೇಕಾದ್ದ ಕರ್ತವ್ಯವೆಂದು ನಿರ್ಧರಿಸುವದು ಸಮಂಜಸವೆನಿಸದು.- ಈ ಆಕ್ಷೇಪಕ್ಕೆ ಸಮಾಧಾನ ಹೇಳುವರು.

**ಅರ್ಥ**:- ಗಿಡದ ಬೇರಿಗೇನೆ ನೀರು ಉಣಿಸುವ ಮಾತ್ರದಿಂದ, ಆಗಿಡದ ದೊಡ್ಡ ಟೊಂಗೆಗಳು, ಅದಕ್ಕಿಂತಲೂ ಚಿಕ್ಕ ಟೊಂಗೆಗಳು, ಗಿಡದ ಬೇರಿನಂತೆಯೆ ಇವುಗಳಿಗೆಲ್ಲವೂ ನೀರು ಕೊಟ್ಟು ತಣಿಸಿದಂತಾಗುವದು ಅವೆಲ್ಲ ನೀರುಂಡು ತೃಪ್ತರಾದವೆಂಬುದಕ್ಕೆ, ಅವುಗಳಲ್ಲಿ ಉದಯಿಸುವ ಹೂ ಕಾಯಿಗಳೇ ಸಾಕ್ಷಿ. ಅದೇ ರೀತಿಯಲ್ಲಿ ದೇಹದಲ್ಲಿ ಅಂತರ್ಯಾಮಿಯಾಗಿ ಸಂಚರಿಸುವ ಪ್ರಾಣವಾಯುವನ್ನು ಯೋಗದ (ಶ್ವಾಸೋಚ್ಛ್ವಾಸ ಕ್ರಮದಿಂದ) ನಿಗ್ರಹಿಸಿದರೆ, ದೇಹದ ಸಕಲ ಇಂದ್ರಿಯಗಳನು ವಿಷಯಗಳ ಕಡೆಗೆ ಹರಿಯದಂತೆ ನಿಗ್ರಹಿಸಿ ವಶಪಡಿಸಿಕೊಳ್ಳಬಹುದು. ಅದೇ ರೀತಿಯಲ್ಲಿ, ಶ್ರೀ ಹರಿಗೆ ಅರ್ಪಿಸುವ ಪೂಜಾದಿ ಸೇವೆಗಳೇ ( ಇಜ್ಯೆಯೆ ) ಆತನ ಅಂಗ (ಪರಿವಾರ) ದೇವತೆಗಳಿಗೆ ಅರ್ಪಿಸುವ ಪೂಜೆಯೂ ಆಗುವದು, ಅಂಗದೇವತೆಗಳಿಗೆ ಪ್ರತ್ಯೇಕ ಪೂಜೆಯೆಂಬುದೇ ಇಲ್ಲ.

'ಏವ' ಶಬ್ದದಿಂದ, ಅಂಗ ದೇವತೆಗಳಿಗೆ ಪ್ರಾಧಾನ್ಯತ್ವೇನ, (ಸರ್ವೋತ್ತಮತ್ವೇನ)ಪೂಜೆಯನ್ನು ನಿಷೇಧಿಸಲಾಗಿದೆ, ಅವಾಂತರ ಪೂಜೆಯು ವಿಧಿವಿಹಿತವಾದುದರಿಂದ ಶ್ರೀ ಹರಿಯ ಪರಿವಾರವೆಂದು ಅಂಗದೇವತೆಗಳಿಗೆ ಅವಾಂತರ ಪೂಜೆಯನ್ನು ನಿಷೇಧಿಸಿಲ್ಲ.

ಒಟ್ಟಾರೆ ಹೀಗೆ ಹೇಳಿರುವರು :- ಸಕಲ ಪೂಜಾದಿಕರ್ಮಗಳನ್ನು ಶ್ರೀಮನ್ನಾರಾಯಣನಿಗೇನೆ ಸಮರ್ಪಿಸುವದು ಮಾಡಲೇಬೇಕಾದ ಕರ್ತವ್ಯವೇ ಆಗಿದೆ. ಹೀಗೆ

ಮಾಡುವದರಿಂದ ಅನ್ಯ ದೇವತೆತಳ ಪೂಜೆಯು ತಪ್ಪುವದಿಲ್ಲ, ಇಲ್ಲದಂತಾಗುವದಿಲ್ಲ ಭಗವಂತನಿಗೆ ಮಾಡುವ ಪೂಜೆಯಲ್ಲಿಯೇ, ಅನ್ಯದೇವತೆಗಳ ಪೂಜೆಯೂ ಒಳ ಗೊಂಡಿರುವದು, ಸಮಾವೇಶವಾಗುದದು. ಅನ್ಯ ದೇವತೆಗಳಿಗಾಗಿ ಮಾಡುವ ಪೂಜೆಗಳಿಗೆಲ್ಲ ಭಗವಂತನಿಗೆ ಮಾಡುವ ಪೂಜೆಯೆ 'ಅಧಿಷ್ಠಾನ' ನೆಲೆಯಾಗಿರುವದು, ಆಧಾರವಾಗಿರುವದು. 'ನನ್ನ ಅಧಿಷ್ಠಾನಗಳು – ನನ್ನನ್ನೇ ಆಶ್ರಯಿಸಿದವರು, ಎಂಬ ಶ್ರದ್ಧೆಯಿಂದಲೆ ಅವರನ್ನು ನೀವು ಪೂಜಿಸಬೇಕು'. ಎಂದು ಈ ಮೊದಲೇ ಹೇಳಿದ್ದಾಗಿವೆ. ಅವಯವಗಳಿಂದ ಯುಕ್ತನಾದವನನ್ನು (ಅಂಗೀ) ಪೂಜಿಸುವದ, ರಿಂದ (ತೃಪ್ತಿಪಡಿಸುವದರಿಂದ) ಅವಯವ (ಅಂಗ) ಗಳಿಗೂ ಪೂಜೆ ಸಲ್ಲಿಸಿದಂತಾ. ಗುವದು (ತೃಪ್ತಿಪಡಿಸಿದಂತಾಗುವದು) – ಎಂಬುದನ್ನು ಬೇರುಗಳಿಗೆ ನೀರುಣಿ ಸುವದರಿಂದ ಟೊಂಗೆ ಮುಂತಾದ ಗಿಡದ ಅವಯುವಗಳೆಲ್ಲ ತಣಿದು ಎಲೆ-ಹೂ-ಕಾಯಿಗಳನ್ನು ಬಿಡುವ ಗಿಡದ ದೃಷ್ಟಾಂತ [ ಉದಾಹರಣೆ ] ದಿಂದ, [ಅವಯವಿ ಯಂತಿರುವ] ಭಗವಂತನಿಗೆ ಅರ್ಪಿಸುವ ಪೂಜೆಯಿಂದ, [ ಅವಯುವಗಳಂತಿರುವ ] ಅನ್ಯ ವೇವತೆಗಳಿಗೂ ಪೂಜೆಯನ್ನು ಸಲ್ಲಿಸಿದಂತಾಗುದು. ಅದರಿಂದ ಅಪೇಕ್ಷಿತ ವಾದ ಫಲವೂ ದೊರಕುವದು.

ಇಲ್ಲಿ ಕೊಟ್ಟಿರುವ ಗಿಡ-ಹಾಗೂ ಟೊಂಗೆಗಳ ದೃಷ್ಟಾಂತದಿಂದ [ಹೋಲಿಕೆ ಯಿಂದ] ಭಗವಂತನಿಗೂ, ಅನ್ಯ ದೇವತೆಗಳಿಗೂ 'ಅಂಗಾಂಗಿತ್ವ' ಸಂಬಂಧವಿದೆ. ಅನ್ಯದೇವತೆಗಳು [ಗಿಡಕ್ಕೆ ಟೊಂಗೆಗಳಿರುವಂತೆ] ಭಗವಂತನ ಅವಯವಗಳಾಗಿದ್ದಾರೆ ಎಂದು ತಪ್ಪು ತಿಳಿದುಕೊಳ್ಳಬಾರದು. ಸಕಲ ದೇವತೆಗಳಿಗೂ ಪ್ರಧಾನನಾದ ದೇವದೇವೋತ್ತಮನಾದ ಭಗವಂತನಿಗೆ ಅರ್ಪಿಸುವ ಪೂಜೆಯು ಅಪ್ರಧಾನರಾದ, ಭಗವಂತನಿಗೆ ಆಧೀನರಾದ ಅನ್ಯದೇವತೆಗಳಿಗೂ ತಾನೇ ಸಲ್ಲುವದೆನ್ನುವ ಮಾತ್ರ ದಲ್ಲಿ ಈ ದೃಷ್ಟಾಂತದ ಅಭಿಪ್ರಾಯವಾಗಿದೆ. ಅನ್ಯ ದೇವತೆಗಳು [ಅಪ್ರಧಾನರು] ಭಗವಂತನಿಗೆ ಅಂಕಿತರಾದವರು, ಎಂಬುದಕ್ಕೆ, ' ಅವಯವ – ಅವಯವೀ ಭಾವ (ಸಂಬಂಧ)ವಿಲ್ಲದ ಪ್ರಾಣವಾಯುವಿನ ನಿಗ್ರಹದಿಂದ, ಸಕಲೇಂದ್ರಿಯಗಳ ನಿಗ್ರಹವಾಗುವ ಬೇರೊಂದು ದೃಷ್ಟಾಂತವನ್ನು ಕೊಟ್ಟು ಈ ಮಾತನ್ನು ಸ್ಪಷ್ಟ ಗೊಳಿಸುವರು. ಭಗವಂತನಿಗೆ ಸಂಪೂರ್ಣವಾಗಿ ಆಧೀನವಾಗಿರುವ ಪರಾಧೀನತೆ ಗೇನೆ ಅನ್ಯ ದೇವತೆಗಳು ಭಗವಂತನ ಅಂಗ (ಅವಯವ)ಗಳು ಎಂಬ ಹೋಲಿ ಕೆಯ ಅಭಿಪ್ರಾಯುವಾಗಿದೆ. ಆದುದರಿಂದ, ಮುಖ್ಯತ್ವೇನ (ಸರ್ವೋತ್ತಮತ್ವೇನ) ಭಗವಂತನಿಗೆ ಸಕಲ ಪೂಜಾದಿ ಕರ್ಮಗಳನ್ನು ಸಮರ್ಪಿಸಬೇಕೆಂಬ (ಇತಿಕರ್ತ ವ್ಯತಾ) ಕರ್ತವ್ಯವನ್ನು ಹೇಳಿರುವುದು ವಿಹಿತವೇ ಆಗಿದೆ. ಸಮರ್ಪಕವಾಗಿದೆ ಗುರು-ಹಿರಿಯರಿಗೆ ಸಮರ್ಪಿಸುವ ಪೂಜೆ-ಪುರಸ್ಕಾರಗಳನ್ನಾದರೂ ಇದೇ ಭಾವ

(ಶೃದ್ಧೆ) ಯಿಂದಲೆ ಮಾಡಬೇಕೆಂಬುವದನ್ನು ಮೇಲಿನ ವಿವೇಚನೆಯಿಂದ ತಿಳಿದುಕೊಳ್ಳಬೇಕು.

'ಬಿಂಬೋಪಾಸನಾಪರಪರ್ಯಾಯ - ಆತ್ಮಸಮರ್ಪಣ'ವೆಂಬ ಪ್ರಕರಣವು ಮುಗಿಯಿತು.



# ೨೩. ಭಕ್ತಿಸ್ತುತಿ ಪ್ರಕರಣ

||೩೩.೧|| ವಾಗ್ಗದ್ಗದಾ ದ್ರವತೇ ಯಸ್ಯ ಚಿತ್ತಂ
ರುದತ್ಯಭೀಕ್ಷ್ಣಂ ಹಸತಿ ಕ್ವಚಿಚ್ಚ ।
ವಿಲಜ್ಜ ಉದ್ಗಾಯತಿ ನೃತ್ಯತೇ ಚ
ಮದ್ಭಕ್ತಿಯುಕ್ತೋ ಭುವನಂ ಪುನಾತಿ || ೧೧-೧೪-೨೪

ಶ್ರೀಕೃಷ್ಣ ಉದ್ಧವಗೆ

ಶ್ರೀಕೃಷ್ಣನು ಉದ್ಧವನಿಗೆ ಹೇಳಿದ ಉಪದೇಶ.

ಈ ರೀತಿಯಾಗಿ ಹಿಂದಿನ ಪ್ರಕರಣಗಳಲ್ಲಿ ಮೂವತ್ತೂ ವಿಧವಾದ ಭಾಗವತ ಧರ್ಮಗಳನ್ನು ನಿಷ್ಠೆಯಿಂದ ಆಚರಿಸುತ್ತಿರುವವರಿಗೆ ಭಾಗವತ ಧರ್ಮಗಳಿಗೇ ಶಿರೋರತ್ನದಂತಿರುವ ಬಿಂಬೋಪಾಸನೆಗೆ ಇನ್ನೊಂದು ಹೆಸರಾಗಿರುವ (ಸರ್ವಾ ಆತ್ಮ ಸಮರ್ಪಣೆಯನ್ನು) ನಿತ್ಯನಿರಂತರವೂ ಆದರ ಪೂರ್ವಕವಾಗಿ ಮಾಡುವವರಿಗೆ ಅಂಥ ಭಾಗವತೋತ್ತಮರಿಗೆ ಅಸದೃಶವಾದ ಭಕ್ತಿಯು ಉಂಟಾಗುವದು ಅಂಥ ಭಕ್ತಿಯಿಂದ ಅಭಿವ್ಯಕ್ತವಾಗುವ (ಬಾಹ್ಯ) ಕೃತಿಗಳು ಈ ರೀತಿಯಾಗಿರುವವು. ಭಕ್ತಿಯಿಂದ ಹೊರಹೊಮ್ಮುವ ಈ ಬಗೆಯ ಕೃತಿಗಳನ್ನು ಹಾಗೂ ಭಾಗವತೋತ್ತಮರ ಲೋಕವಿಲಕ್ಷಣವಾದ ನಡೆ ನಡಾವಳಿಗಳನ್ನು ನೋಡಿ, ಮೋಕ್ಷಾಪೇಕ್ಷಿಗಳು ಅವರ ಬಗ್ಗೆ ತಪ್ಪು ತಿಳುವಳಿಕೆಯನ್ನು ಎಂದಿಗೂ ಮಾಡಿಕೊಳ್ಳಬಾರದು. ಆ ಬಗೆಯ ಅಸದೃಶವಾದ ಭಕ್ತಿಯಿಂದ (ಸತ್ವರಜ-ತಮಸ್ಸುಗಳೆಂಬ ಮೂರು ಗುಣಗಳ ಬಂಧನದಿಂದ ಬಿಡುಗಡೆ ಹೊಂದಿ, (ಭಗವಂತನ ಬಂಧಕ ಶಕ್ತಿಯಾದ) ಮಾಯೆಯಿಂದ ಭಾಗವತರು ಪಾರಾಗುವರು. ಮಾಯೆಯನ್ನು ದಾಟಿ ಹೋಗುವರು. ಇವೇ ಮುಂತಾದ ಭಕ್ತಿಯ ಹಿರಿಮೆಯನ್ನು ಮುಂದಿನ ಶ್ಲೋಕಗಳು ನಿರೂಪಿಸ.ವವು. ಹೀಗೆ ಹೇಳಿರುವರು: 'ಇತಿ ಭಾಗವತಾನ್ ... ದುಸ್ತರಾಂ (೧೧-೩-೩೪) - ಈ ಬಗೆಯ ಭಾಗವತ ಧರ್ಮಗಳನ್ನು ಆತ್ಮಸಾತ್ ಮಾಡಿಕೊಂಡು, ಅವುಗಳ ಆಚರಣೆಯಿಂದ ಉಂಟಾಗುವ ಶ್ರೇಷ್ಠ ಭಕ್ತಿಯಿಂದ ಶ್ರೀಮನ್ನಾರಾಯಣನಿಗೆ ತನ್ನನ್ನು ಸಮರ್ಪಿಸಿಕೊಂಡವನು (ಭಗವಂತನ)ಮಾಯಾರೂಪ ಬಂಧನ (ಅಜ್ಞಾನ)ವನ್ನು ಸುಲಭವಾಗಿ ಕಳೆದುಕೊಳ್ಳುವನು.

(ಭಗವಂತನ) ಮಾಯೆಯೆಂಬುದು ಎರಡು ಬಗೆಯದಾಗಿದೆ. ಭಗವಂತನಿಗೆ ಸ್ವರೂಪಭೂತವಾದ ಆತನ ಇಚ್ಛಾಶಕ್ತಿಯು, ಒಂದನೆಯ ಪ್ರಕಾರ. ಭಗವಂತನ ಸ್ವರೂಪಭೂತವಾಗದೆ, ಆತನಿಂದ ಪ್ರತ್ಯೇಕವಾಗಿದ್ದು, ಭಗವಂತನಿಗೆ ಅಧೀನವಾ

ಗಿರುವದು ಎರಡನೆಯ ಪ್ರಕಾರ ಎರಡನೆಯ ಪ್ರಕಾರದ ಮಾಯೆಗೆ ಅವಿದ್ಯಾ, ಪ್ರಕೃತಿ, ವಾಸನಾ, ಮುಂತಾದ ಬೇರೆ ಹೆಸರುಗಳಿರುವವು, ಮೊದಲನೆಯ ಪ್ರಕಾರದ ಮಾಯೆಯು ವಿಶ್ವದ ಉತ್ಪತ್ತಿ ( ಹುಟ್ಟು ) ಮುಂತಾದವುಗಳಿಗೆ ನಿಮಿತ್ತಕಾರಣವಾಗಿರುವದು, ಕುಂಬಾರನು ಮಡಿಕೆಯ ನಿರ್ಮಿತಿಗೆ ನಿಮಿತ್ತಕಾರಣವಿದಂತೆ, ಗಡಿಗೆಯ ನಿರ್ಮಿತಿಗೆ ಮೃತ್ತಿಕೆ, ( ಮಣ್ಣು ) ಮೂಲ ವಸ್ತುವಾಗಿ ಕಾರಣವಾದಂತೆ, ಎರಡನೆಯ ಪ್ರಕಾರದ ಮಾಯೆಯು ಜಗತ್ತಿನ ಉತ್ಪತ್ತಿ ಮುಂತಾದವುಗಳಿಗೆ ಮೂಲ ವಸ್ತುವಿನ ರೂಪದಲ್ಲಿ ಉಪಾದಾನ ಕಾರಣವಾಗಿದೆ. ಭಗವಂತನ ಸ್ವರೂಪಭೂತವಾದ ಮೊದಲನೆಯ ಪ್ರಕಾರದ ಮಾಯೆಯನ್ನು ದಾಟಿ ಹೋಗಲು ಉತ್ಕಟ ಭಕ್ತಿಯಿಂದ ಭಗವಂತನನ್ನು ಪ್ರಸನ್ನೀಕರಿಸಿಕೊಂಡು, ಆತನ ಪರಮಾನುಗ್ರಹವನ್ನು ಪಡೆಯುವದೊಂದೇ ಸಾಧನವಾಗಿದೆ. ಎರಡಯೆಯ ಪ್ರಕಾರದ ಮಾಯೆಯಿಂದ ಪಾರಾಗಲು ಅದನ್ನು ಬಿಟ್ಟುಕೊಡುವದೇ ಉಪಾಯವಾಗಿದೆ,

ಮೂವತ್ತುವಿಧ ಭಾಗವತ ಧರ್ಮಗಳ ( ನಿತ್ಯನಿರಂತರ ) ಆಚರಣೆಯಿಂದ ಒದಗುವ ಉತ್ಕಟ ಭಕ್ತಿಯಿಂದ, 'ಅನಿಷ್ಟ ಪರಿಹಾರ ಹಾಗೂ ಇಷ್ಟಪ್ರಾಪ್ತಿ'ಗಳೆಂಬ ಎರಡೂ ಪ್ರಯೋಜನಗಳೂ ಸಿದ್ಧಿಸುವವು. ಆದುದರಿಂದ ಅಂಥ ಅತ್ಯುತ್ಕಟ ಭಕ್ತಿಯನ್ನು ಅತ್ಯಗತ್ಯವಾಗಿ ಪಡೆಯಬೇಕು, ಎಂಬ ಅಭಿಪ್ರಾಯದಿಂದ ಅಂಥ ಭಕ್ತಿಯ ಮಹಿಮೆಯನ್ನು ಈ ಪ್ರಕರಣದಲ್ಲಿ ಹೊಗಳುವರು.

**ಅರ್ಥ**:- ನನ್ನ (ಭಗವಂತನ) ಭಕ್ತನ ಮಾತು (ವಾಣಿ) ತಡವರಿಸುವದು, ಮನಸ್ಸು ಕರಗುವದು, (ಭಕ್ತಿಯ ಉದ್ರೇಕದಿಂದ) ಭಕ್ತನು ಕೆಲವೊಮ್ಮೆ ಅಳುವನು, ಕೆಲವೊಮ್ಮೆ ಗಟ್ಟಿಯಾಗಿ ನಗುವನು, ಸಂಕೋಚವಿಲ್ಲದೆ ( ಭಗವಂತನ ಮಹಿಮೆಯನ್ನು) ಹಾಡಿಹೊಗಳುವನು, ಕುಣಿಯುವನು. ಭಕ್ತಿಯ ಉದ್ರೇಕದಿಂದ ಹೊರಹೊಮ್ಮುವ ಆತನ ನಡಾವಳಿಯಿಂದ, ಆತನು ನನ್ನ ಶ್ರೇಷ್ಠ ಭಕ್ತನೆಂಬು ತಿಳಿದುಕೊಳ್ಳಬೇಕು. ಉತ್ಕಟ ಭಕ್ತಿಯಿಂದ ಯುಕ್ತನಾದ ಇಂಥ ನನ್ನ ಭಕ್ತನು ತನ್ನ ಸಂಭಾಷಣಾದಿಗಳಿಂದ ಸಮಗ್ರ ಜಗತ್ತನ್ನೇ ಪಾವನಗೊಳಿಸಬಲ್ಲನು, ತನ್ನನ್ನು ಪವಿತ್ರಗೊಳಿಸುವನೆಂದು ಬೇರೆ ಹೇಳಬೇಕಿಲ್ಲ- ಹೀಗೆ ಹೇಳಿರುವರು :-'ಸಾಧೂನಾಂ ದರ್ಶನ .... ಸರ್ವಮೇವ ಹಿ ಪಾವನಂ' [೧೦-೮೭-೫೯] - ಸದ್ಭಕ್ತರ ಸಹವಾಸ, (ಪಾದ) ಸ್ಪರ್ಶ, ಅವರ ನಾಮದ ಕೀರ್ತನ, ಅವರನ್ನು ಸ್ಮರಿಸುವದು (ಧ್ಯಾನ ಮಾಡುವದು) ಇವುಗಳೆಲ್ಲವೂ ಪುಣ್ಯಕ್ಷೇತ್ರಗಳಂತೆ ಪಾವನಕರವಾಗಿರುವವು.

||೩೩|| ತಸ್ಮಿನ್ ಭವಂತಾವಖಿಲಾತ್ಮಯೋನೌ
ನಾರಾಯಣೇ ಕಾರಣಮರ್ತ್ಯಮೂರ್ತೌ |
ಭಾವಂ ವ್ಯಧತ್ತಾಂ ನಿತರಾಂ ಮಹಾತ್ಮನ್
ಕಿಂ ವಾಽವಶಿಷ್ಟಂ ಯುವಯೋಃ ಸುಕೃತ್ಯಂ || ೧೦-೪೬-೩೩

ಶ್ರೀ ಕೃಷ್ಣನಿಗೆ ತಮ್ಮ ಪ್ರೀತಿ ಸರ್ವಸ್ವವನ್ನರ್ಪಿಸಿ, ಆತನಲ್ಲಿಯೆ ತಮ್ಮ ಮನಸ್ಸನ್ನು ಸುದೃಢಪಾಗಿ ನೆಲಿಸಿದ ಯಶೋದಾ-ನಂದಗೋಪರನ್ನು ಕೃಷ್ಣಭಕ್ತನಾದ ಉದ್ಧವನು ಅಭಿನಂದಿಸುತ್ತಾನೆ.

ಜೀವನದಲ್ಲಿ ಪಡೆಯಬಯಸುವ ಸಕಲ ಶ್ರೇಷ್ಠವಸ್ತುಗಳನ್ನು ಶ್ರೀಕೃಷ್ಣ ಭಕ್ತಿಯು ತಂದುಕೊಡುವದು, ಜೀವನಕ್ಕೆ ಕೃತಕೃತ್ಯತೆ, ಸಾರ್ಥಕತೆಯನ್ನು ತಂದುಕೊಡುವದು, ಶ್ರೀ ಕೃಷ್ಣಭಕ್ತಿಯಿಂದ ಪಡೆಯುವ ಈ ಬಗೆಯ ಇನ್ನೊಂದು ವಿಶೇಷ ಮಹಿಮೆಯನ್ನು ಹೇಳಿರುವರು.

**ಅರ್ಥ :-** ಸೃಷ್ಟಿ-ಸ್ಥಿತಿ-ಲಯಗಳೆಂಬ ಸಕಲ ಕಾರ್ಯಗಳಿಗೂ (ಆತ್ಮಯೋನಿ) ಮೂಲಕಾರಣನೂ, ಲೋಕಕಲ್ಯಾಣದ ಅಚಿಂತ್ಯ ಲೀಲೆಗಾಗಿ ಮಾನವರೂಪದಿಂದ ಅವತಾರ ಮಾಡಿದವನೂ, ( ಕಾರಣ ಮರ್ತ್ಯ ಮೂರ್ತಿಃ ) ಆಗಿರುವ ಶ್ರೀಮನ್ನಾರಾಯಣನಲ್ಲಿ ನೀವಿಬ್ಬರೂ (ನಂದಗೋಪ-ಯಶೋದೆಯರು) ಪರಮ ಶ್ರೇಷ್ಠವಾದ ಭಕ್ತಿಯನ್ನು ( ನಿತರಾಂ ಭಾವಂ ) ಮಾಡುತ್ತಿರುವದರಿಂದ, ಇನ್ನು ನಿಮಗೆ ಮಾಡಬೇಕಾದ ಶುಭಕಾರ್ಯ (ಸತ್ಕರ್ಮ)ವೆಂಬುದು ಯಾವುದು ಉಳಿದಿದೆ ? (ಯಾವುದೂ ಉಳಿದಿಲ್ಲವೆಂಬರ್ಥ) ಭಕ್ತಿಸಂಪಾದನೆಯೆ ಸಕಲ ಸತ್ಕರ್ಮಗಳ ಮುಖ್ಯ ಗುರಿಯಾಗಿರುವುದು. ಅಂಥ ಪರಮ ಭಕ್ತಿಯನ್ನು (ಶ್ರೀಕೃಷ್ಣನಲ್ಲಿ) ನೀವಿಬ್ಬರೂ ಈಗಾಗಲೇ ಹೊಂದಿರುವಿರಿ. ಮಾಡಬೇಕಾದ ಯಾವ ಸುಕೃತ್ಯವು ಇನ್ನು ನಿಮಗೆ ಉಳಿದಿರುವದಿಲ್ಲ.

||೩೪|| ಮನ್ಯೇ ಧನಾಭಿಜನರೂಪತಪಃಶ್ರುತೌಜ-
ಸ್ತೇಜಃ ಪ್ರಭಾವಬಲಪೌರುಷಬುದ್ಧಿಯೋಗಾಃ |
ನಾರಾಧನಾಯ ಹಿ ಭವಂತಿ ಪರಸ್ಯ ಪುಂಸೋ
ಭಕ್ತ್ಯಾ ತುತೋಷ ಭಗವಾನ್ನನು ಯೂಥಪಾಯ || ೭-೯-೯

ಪ್ರಲ್ಹಾದರು ಮಾಡಿದ ಶ್ರೀನೃಸಿಂಹಸ್ತುತಿಯು

ಭಗವಂತನ ಪರಮಾನುಗ್ರಹವನ್ನು ಪಡೆಯಲು ಸಹಾಯಕಗಳಾದ ಸಕಲ ಸಾಧನಗಳಲ್ಲಿ ಭಕ್ತಿಯೇ ಅತೀ ಶ್ರೇಷ್ಠವಾಗಿರುವದೆಂಬ ಭಕ್ತಿಯ ಇನ್ನೊಂದು ಮಹಿಮೆಯನ್ನು ಹೇಳುವರು.

**ಅರ್ಥ**:- ದುಡ್ಡು, ಉತ್ತಮ ಕುಲದಲ್ಲಿ ಜನ್ಮ, ದೇಹದ ಸೌಂದರ್ಯ, ತಪಸ್ಸು, ವಿದ್ಯೆ ಕರ್ಮಾಚರಣೆ, ತೇಜಸ್ಸು, ವರ್ಚಸ್ಸು, ದೇಹಶಕ್ತಿ, ಪೌರುಷ, ಬುದ್ಧಿ, (ವಿಚಾರಶಕ್ತಿ) ಇವೇ ಮುಂತಾದ ಉಪಾಯ (ಸಾಧನ)ಗಳು ಪುರುಷೋತ್ತಮನಾದ ಶ್ರೀಹರಿಯ ಪರಮಾನುಗ್ರಹವನ್ನು ಪಡೆಯಲು ಸಮರ್ಥವಾಗಿಲ್ಲ. ಪರಮಾನುಗ್ರಹದ ಭಾವನೆಯನ್ನು ಶ್ರೀಹರಿಯಲ್ಲಿ ಅವು ಹುಟ್ಟಿಸಲಾರವು -ಹೀಗೆ ನಾನು ನಿಶ್ಚಿತವಾಗಿ ತಿಳಿದುಕೊಂಡಿರುವೆ. ಏಕೆಂದರೆ, (ಇವೆಲ್ಲ ಸಾಧನಗಳಿಲ್ಲದಿದ್ದರೂ) ಗಜೇಂದ್ರನಿಗೆ ಶ್ರೀಹರಿಯು ಕೇವಲ ಆತನ ಭಕ್ತಿಗಾಗಿಯೆ ಅನುಗ್ರಹಿಸಿದನು. ಪುರಾಣಗಳ ಪ್ರಮಾಣದಿಂದ ಈ ಮಾತು ನಿರ್ಧಾರವಾಗಿದೆ.

ಒಟ್ಟಾರೆ ಹೇಳಿರುವದೆಂದರೆ, -ಮೊಸಳೆಯನ್ನು ಕೊಂದು ಅದರ ಬಾಯಿಂದ ತನ್ನನ್ನು ಪ್ರಾರ್ಥಿಸಿದ ಗಜೇಂದ್ರನನ್ನು ಶ್ರೀಹರಿಯು ರಕ್ಷಿಸಿದ ಸಂಗತಿಯು ಪುರಾಣದಲ್ಲಿ ಪ್ರಸಿದ್ಧವಾಗಿದೆ. ಗಜೇಂದ್ರನನ್ನು ಶ್ರೀಹರಿಯು ಬಿಡುಗಡೆ ಮಾಡಿದ್ದರಿಂದಲೆ ಶ್ರೀಹರಿಯು ಆತನ ಮೇಲೆ ಪರಮಾನುಗ್ರಹ ಮಾಡಿದನೆಂಬುದು ಸ್ಪಷ್ಟವಾಗಿ ಕಂಡುಬರುತ್ತದೆ. ಗಜೇಂದ್ರನ ಮೇಲೆ ಶ್ರೀಹರಿಯು ಮಾಡಿದ ಈ ಪರಮಾನುಗ್ರಹಕ್ಕೆ, ಮೇಲೆ ಹೇಳಿರುವ (ವಿದ್ಯೆ, ತಪಸ್ಸು, ರೂಪು ಮುಂತಾದ) ಯಾವ ಸಾಧನಗಳೂ ಗಜೇಂದ್ರನಲ್ಲಿ ಕಂಡುಬರುವದಿಲ್ಲ. ಭಗವಂತನನ್ನು ಒಲಿಸಿಕೊಳ್ಳಲು ಗಜೇಂದ್ರನಿಗೆ ಭಕ್ತಿಯೊಂದೇ ಉಪಾಯ (ಸಾಧನ)ವಾಗಿತ್ತು. ಆದುದರಿಂದ, ಧನ, ಕುಲ, ಬಲ ಮುಂತಾದವುಗಳು (ಭಕ್ತಿಯಿಲ್ಲದಿದ್ದರೆ) ಭಗವಂತನ ಪ್ರೀತಿಯನ್ನು (ಅನುಗ್ರಹವನ್ನು) ಸಂಪಾದಿಸಲು ಸಾಧನವಾಗಲಾರವು.

||೩೩|| **ನ ಜನ್ಮನೂನಂ ಮಹತೋ ನ ಸೌಭಗಂ**
**ನ ವಾಂಗ ಬುದ್ಧಿರ್ನಾಕೃತಿಸ್ತೋಷಹೇತುಃ |**
**ತಿರ್ಯಗ್ವಿಸೃಷ್ಟಾನಪಿ ನೋ ವನೌಕಸ-**
**ಶ್ಚಕಾರ ಸಖ್ಯೇ ಬತ ಲಕ್ಷ್ಮಣಾಗ್ರಜಃ ||** ೫-೧೦-೭೭

ಪ್ರಭು ಶ್ರೀ ರಾಮಚಂದ್ರನ ಧ್ಯಾನ-ಭಜನಗಳಲ್ಲಿ ತಲ್ಲೀನರಾದ ಕಿಂಪುರುಷ ಪ್ರದೇಶದಲ್ಲಿ ವಾಸಿಸುವ ಜನರನ್ನು ಪ್ರಶಂಸಿಸುವಾಗ್ಗೆ, ಹನುಮಂತನು ಅರ್ಷ್ಟಿಷೇಣನಿಗೆ ಹೇಳಿದ ಮಾತನ್ನು ಶ್ರೀ ಶುಕರು ಇಲ್ಲಿ (ಭಕ್ತಿಯ ಮಹಿಮೆಯ ಬಗ್ಗೆ) ಸಂದೇಹಬಡಬಾರದೆಂದು ತೋರಿಸಿಕೊಟ್ಟಿರುವರು.

ಅರ್ಥ :- ( ನ ಜನ್ಮ ಇತಿ ):- ವತ್ಸಾ ( ಆರ್ಷ್ಟಿಷೇಣಾ ! ) ಅನ್ಯರಲ್ಲಿಯ ಒಳ್ಳೇ ಗುಣಗಳನ್ನು ಮೆಚ್ಚುವವರಲ್ಲಿ (ಗುಣಗ್ರಾಹಿಗಳಲ್ಲಿ) ಅತಿ ಶ್ರೇಷ್ಠನಾದ ಶ್ರೀ ರಾಮಚಂದ್ರನ ಅನುಗ್ರಹವನ್ನು ಪಡೆಯಲು, ಉತ್ತಮ ಕುಲದಲ್ಲಿ ಹುಟ್ಟುವದಾಗಲಿ, ಶರೀರದ ಸೌಂದರ್ಯವಾಗಲಿ, ಬುದ್ಧಿಮತ್ತೆಯಾಗಲಿ, ಒಳ್ಳೇ ರೂಪವಾಗಲಿ, ನಿಶ್ಚಿತವಾಗಿಯೂ ಸಾಧನವಾಗಿಲ್ಲ. ಏಕೆಂದರೆ, ಲಕ್ಷ್ಮಣನ ಹಿರಿಯಣ್ಣನಾದ ಶ್ರೀ ರಾಮಚಂದ್ರನು, (ಪಶುಪಕ್ಷಿಗಳೆಂಬ) ಕೀಳು ವರ್ಗದಲ್ಲಿ ಹುಟ್ಟಿ, ಕಾಡಿನ ಪ್ರಾಣಿಗಳಾಗಿರುವ ನಮ್ಮೊಡನೆ (ನಮ್ಮ ಭಕ್ತಿಗೋಸ್ಕರ) ಗೆಳೆತನವನ್ನು ಮಾಡಿದನು. ಇದು ಮೆಚ್ಚಿಗೆಯ ಮಾತಲ್ಲವೆ ? ( ಬತ ! ) ಅನುಭವಸಿದ್ಧವಾದುದೂ ಹೌದು.

'ರಾಮಸ್ಯ'- ಎಂದು ಹೇಳಲು ಬರುತ್ತಿದ್ದರೂ, 'ಮಹತಃ' ಎಂದು ಹೇಳಿರುವಲ್ಲಿ ವಿಶೇಷವಾದ ಅರ್ಥವಿದೆ. ಅನ್ಯರಲ್ಲಿಯ ಒಳ್ಳೇ ಗುಣಗಳನ್ನು ಮೆಚ್ಚಿ ಅವರನ್ನು ಪ್ರೀತಿಸಿ ತಮ್ಮ ಗೆಳೆಯರಾಗಿ, ತಮ್ಮವರನ್ನಾಗಿ ಮಾಡಿಕೊಳ್ಳುವದು (ಗುಣಗ್ರಾಹಿಗಳಾದ) ಸಜ್ಜನರ ಸ್ವಭಾವವೇ ಆಗಿದೆ.

||೩೩|| **ಸುರೋಽಸುರೋ ವಾಥ ನರೋಽಥ ವಾನರಃ**
**ಸರ್ವಾತ್ಮನಾ ಯಃ ಸುಕೃತಜ್ಞಮುತ್ತಮಂ |**
**ಭಜೇತ ರಾಮಂ ಮನುಜಾಕೃತಿಂ ಹರಿಂ**
**ಯ ಉತ್ತರಾನನಯತ್ಕೋಸಲಾನ್ ದಿವಂ || ೫-೧೯-೮**

ಇದೆಲ್ಲವೂ ಸರಿ. ಇದನ್ನು ತಿಳಿದುಕೊಂಡು ಮುಂದೆ ನಾವೇನು ಮಾಡಬೇಕು ? ಎಂಬ ಪ್ರಶ್ನೆಗೆ ಉತ್ತರವಿದು. ಅನ್ಯ ಸಾಧನೆಗಳನ್ನು ಅಪೇಕ್ಷಿಸದೆ, ಉತ್ಕಟವಾದ ಶುದ್ಧಭಕ್ತಿಗೆ ಒಲಿಯುವ ಗುಣಗ್ರಾಹಿಯಾದ [ಮಹತಃ] ಭಗವಂತನನ್ನು ಮೋಕ್ಷಾಪೇಕ್ಷಿಗಳು ಅನನ್ಯಭಾವದಿಂದ ಆಶ್ರಯಿಸಬೇಕು. ಇದೇ ಇಲ್ಲಿ ಅಭಿಪ್ರಾಯವಾಗಿದೆ.

ಅರ್ಥ :- ದೇವನಾಗಿರಲಿ, ದಾನವನಾಗಿರಲಿ, ಮಾನವನಾಗಿರಲಿ, ಇಲ್ಲವೆ ವಾನರನಾಗಿರಲಿ, - ಹೆಚ್ಚಿಗೇನು ? ಯಾವುದೇ ಪ್ರಾಣಿವರ್ಗಕ್ಕೆ ಸೇರಿದವನಾಗಿರಲಿ, ಮೋಕ್ಷವೆಂಬ ಶ್ರೇಷ್ಠ ಪುರುಷಾರ್ಥವನ್ನು ಬಯಸುವವನು ಮಾನವರೂಪದಿಂದ ಶ್ರೀ ರಾಮನಾಗಿ ಅವತರಿಸಿದ ಶ್ರೀ ಹರಿಯನ್ನು ಅನನ್ಯ ಭಾವನೆಯಿಂದ ಭಜಿಸಬೇಕು, ಆತನಲ್ಲಿ ಪರಿಪೂರ್ಣವಾದ ಶುದ್ಧಭಕ್ತಿಯನ್ನು ಮಾಡಬೇಕು. ಭಕ್ತರು ತನಗೆ ಮಾಡಿಸ ಸೇವೆಯನ್ನು ಮರೆಯದೆ ಅನುಗ್ರಹ ಮಾಡುವ ರಾಮರೂಪನಾದ ಶ್ರೀ ಹರಿಯು ಪುರುಷೋತ್ತಮ [ ದೇವೋತ್ತಮ ] ನಾಗಿರುವನು-

ಶ್ರೀ ರಾಮನನ್ನು ಭಕ್ತಿಪೂರ್ವಕ ಆಶ್ರಯಿಸುವದರಿಂದ ಏನು ಪ್ರಯೋಜನ ? ಎಂದು ಕೇಳಿದರೆ, ಉತ್ತರ ಹೇಳುವರು. ಅಯೋಧ್ಯೆಯ ಸುತ್ತಲಿನ ಪ್ರದೇಶದಲ್ಲಿ ವಾಸಿಸುತ್ತಿದ್ದ ಪ್ರಜೆಗಳನ್ನೆಲ್ಲ ಪ್ರಭು ಶ್ರೀರಾಮಚಂದ್ರನು ತನ್ನ ದಿವ್ಯ ಸ್ಥಾನವಾದ ವೈಕುಂಠಕ್ಕೆ ತನ್ನೊಡನೆ ತೆಗೆದುಕೊಂಡು ಹೋದನು. ತನ್ನ ಸದ್ಭಕ್ತರಿಗೆಲ್ಲ ಸದ್ಗತಿಯನ್ನು ದಯ ಪಾಲಿಸುವ ಶ್ರೀಹರಿಯನ್ನು ಅನನ್ಯ ಭಾವನೆಯಿಂದ ಸಕಲರೂ ಆಶ್ರಯಿಸಬೇಕು.

||೩೩೭|| ಮನ್ಯೇಽಸುರಾನ್ ಭಾಗವತಾಂಸ್ತ್ರ್ಯಧೀಶೇ　　ಉದ್ಧವ
ಸಂರಂಭಮಾರ್ಗಾಭಿನಿವಿಷ್ಟಚಿತ್ತಾನ್ |　　ವಿದುರನಿಗೆ
ಯೇ ಸಂಯುಗೇಽಚಕ್ಷತ ತಾರ್ಕ್ಷ್ಯಪುತ್ರ-
ಮಂಸೇ ಸುನಾಭಾಯುಧಮಾಪತಂತಮ್ || ೩-೨-೨೪

ಶ್ರೀಕೃಷ್ಣನು ಪರಂಧಾಮಕ್ಕೆ ಬಿಜಯ ಮಾಡಿದ ವೃತ್ತಾಂತವನ್ನು ಉದ್ಧವನಿಗೆ ಹೇಳುವಾಗ್ಗೆ ಶ್ರೀಕೃಷ್ಣನ ಮಹಿಮೆಯನ್ನು (ಭಕ್ತವಾತ್ಸಲ್ಯವನ್ನು) ಕೊಂಡಾಡುವನು.

ಶ್ರೀಹರಿಯಲ್ಲಿ ಭಕ್ತಿಯನ್ನು ಮಾಡಿದ ದಾನವರೂ ಕೂಡ ಸದ್ಗತಿಯನ್ನು ಹೇಗೆ ಪಡೆದರು? ಎಂಬ ಸಂದೇಹ ಬರುವದು. ಏಕೆಂದರೆ, ದಾನವರು ದೇವತೆಗಳ ವೈರಿಗಳು. ಭಗವಂತನ ಕೂಡ ಯಾವಾಗಲೂ ಹೋರಾಡುವದೇ ಅವರ ಸ್ವಭಾವ. ಅವರಲ್ಲಿ ಭಕ್ತಿಯು ಇರಲಾರದು- ಎಂದರೆ, ನೀವು ಹೇಳುವದು ಸರಿ. ಆದರೆ, (ಅನ್ಯ ಕಾರಣಗಳಿಂದ) ದಾನವರಾಗಿ ಹುಟ್ಟಿದವರಲ್ಲಿಯೂ ಕೂಡ ಶ್ರೇಷ್ಠರಾದ ಹರಿಭಕ್ತರು ಇರುವರು. ಶಾಪನಿಮಿತ್ತದಿಂದ ದಾನವರಾಗಿ ಹುಟ್ಟಿದ ವೈಕುಂಠದ ದ್ವಾರ ಪಾಲಕರಾದ ಜಯ-ವಿಜಯರನ್ನು (ಅನುಲಕ್ಷಿಸಿ) ಮನಸ್ಸಿನಲ್ಲಿ ತಂದುಕೊಂಡು ಈ ಮಾತನ್ನು ಹೇಳಿರುವದುಂಟು. ಅಸುರಾವೇಶವು ಅವರಿಗೆ ಶಾಪದ ನಿಮಿತ್ತದಿಂದ ಬಂದುದು. ಅಸುರರ ಸ್ವಭಾವವಾದ ಶ್ರೀಹರಿಯ ಬಗ್ಗೆ ತಮ್ಮ ನಿತ್ಯ ದ್ವೇಷವನ್ನೇ ಶ್ರೀಹರಿಯಲ್ಲಿ ನಿತ್ಯಭಕ್ತಿಯನ್ನಾಗಿ ಮಾರ್ಪಡಿಸಿಕೊಂಡು ಶ್ರೀಹರಿಯ ಅನುಗ್ರಹಕ್ಕೆ ಅವರು ಪಾತ್ರರಾದರು.

**ಅರ್ಥ :**- (ಮನ್ಯೇ ಇತಿ) :- ನಿತ್ಯಕ್ರೋಧ, (ಸಂರಂಭ) ನಿತ್ಯದ್ವೇಷವೆಂಬ ಹೊರವೇಷದಲ್ಲಿ ಭಗವಂತನಲ್ಲಿ ದೃಢ ಭಕ್ತಿ ರೂಪದಿಂದ ತಮ್ಮ ಚಿತ್ತ ವೃತ್ತಿಯನ್ನು ಅವರು ನೆಲೆಸಿಕೊಂಡಿರುವರು. (ಅಸುರಾವೇಶವ) ಅನ್ಯನಿಮಿತ್ತ (ಕಾರಣ)ದಿಂದ ಭಗವಂತನ ಕೂಡ ಮೊದಲು ಮೊದಲು ಯುದ್ಧ ಮಾಡುವಂತೆ ತೋರಿಬಂದರೂ ಆನಂತರ ಅವರು ಭಗವಂತನ ಭಕ್ತರೇ ಆಗುವರು. ಹೇಗೆಂದರೆ, ಯುದ್ಧ

ಭೂಮಿಯಲ್ಲಿ, ತಮ್ಮ ಮೇಲೆ ಎದುರಿನಲ್ಲಿ ಗರುಡವಾಹನನಾಗಿ ಏರಿ ಬರುತ್ತಿರುವ, (ತಮ್ಮ ಆರಾಧ್ಯ ದೇವತೆಯಾದ) ಚಕ್ರಧಾರಿಯಾದ ಮೂರು ಲೋಕಗಳ ಒಡೆಯು ನಾದ ಶ್ರೀಹರಿಯೆ ಅವರಿಗೆ ಕಂಡುಬರುವನು. ದೈತ್ಯ ಜನ್ಮನಿಮಿತ್ತದಿಂದ ಉಂಟಾದ ಹೊರಗಿನ (ತೋರಿಕೆಯ) ದ್ವೇಷವು ಮಾಯವಾಗಿ, (ಶಾಪದ ಪೂರ್ವ ದಲ್ಲಿದ್ದ) ಅವರ ಸ್ವಭಾವಸಿದ್ಧವಾದ ಹರಿಭಕ್ತಿಯೆ ಅವರಲ್ಲಿ ಉದಯವಾಗುವದು. ಆದುದರಿಂದ, ಅಂಥ ದಾನವರನ್ನೂ ನಾನು (ಉದ್ಧವನು) ಭಗವದ್ಭಕ್ತರೆಂದು ಭಾವಿಸುತ್ತೇನೆ. ಈ ರೀತಿಯಲ್ಲಿ ದಾನವರಲ್ಲಿಯೂ ಭಗವದ್ಭಕ್ತರಿರುವರೆಂದು ಇಲ್ಲಿ ಹೇಳಿರುವದು ಸಮಂಜಸವಾಗಿದೆ.

ಇಷ್ಟೆಲ್ಲ ನಿರೂಪಣೆಯಿಂದ, -ಶ್ರೀಹರಿಯ ಅನುಗ್ರಹ ಪ್ರಾಪ್ತಿಗಾಗಿ ಇರುವ ಸಕಲ ಸಾಧನಗಳಲ್ಲಿ ಉತ್ಕಟ ಭಕ್ತಿಯೆ ಅತಿ ಶ್ರೇಷ್ಠವಾದುದು. ಭಗವತ್ ಧರ್ಮಗಳನ್ನು ನಿಷ್ಠೆಯಿಂದ ಆಚರಿಸಿ, ಅಂಥ ಉತ್ಕಟವಾದ ಭಕ್ತಿಯನ್ನು ಮೋಕ್ಷಾಪೇಕ್ಷಿಯು ಅಗತ್ಯವಾಗಿ ಸಂಪಾದಿಸಬೇಕು-ಎಂಬುದು ಸಿದ್ಧವಾಯಿತು.

ಹೀಗೆ ಹೇಳಿರುವರು :- 'ನಾಲಂ ದ್ವಿಜತ್ವಂ.........ನ ಬಹುಜ್ಞತಾ' [೭-೭-೫೧] 'ಹೇ ದೈತ್ಯ ಬಾಲಕರೆ, ದ್ವಿಜನಾಗಿರುವದು, ದೇವನಾಗಿರುವದು, ಋಷಿಯಾಗಿರುವದು, ಒಳ್ಳೇ ವಿದ್ವಾಂಸನಾಗಿರುವದು, [ವೃತ್ತಂ] ಉದ್ಯೋಗ ಇಲ್ಲವೆ ನಡತೆ, ಇಲ್ಲವೆ, ದಾನ, ತಪಸ್ಸು, ಯಜ್ಞಯಾಗಾದಿಗಳು, ಶುಚಿತ್ವ, ವ್ರತಾದಿಗಳು, ['ನ ದಾನಂ .... ಭಕ್ತಿಂ ಕುರುತದಾನವಾ: ೭-೭-೫೨] ಮುಕ್ತಿ ದಾಯಕನಾದ ಶ್ರೀ ಮುಕುಂದನ ಅನುಗ್ರಹವನ್ನು ಪಡೆಯಲು ಸಮರ್ಥರಾಗಿಲ್ಲ. 'ತತಃ.... ದಾನವಾಃ' [೭-೭-೫೫] ಆದುದರಿಂದ, ಅಸುರ ಬಾಲಕರೆ, ಭಗವಂತ ನಾದ ಶ್ರೀ ಹರಿಯಲ್ಲಿ ಭಕ್ತಿಯನ್ನು ಮಾಡಿರಿ. ಶ್ರೀ ಹರಿಯು ನಿರ್ದೋಷವಾದ ಉತ್ಕಟ ಭಕ್ತಿಯಿಂದಲೆ ಸುಪ್ರೀತನಾಗುವನು. [ಭಕ್ತಿರಹಿತವಾದ] ಉಳಿದ ಸಾಧನಗಳೆಲ್ಲವೂ ಕೇವಲ ವಿಡಂಬನ [ವಂಚನೆ] ವೆನಿಸುವವು. 'ದೇವೋ....... ಯಥಾವಯಂ' [೭-೭-೫೩] ದೇವನಾಗಿರಲಿ, ದಾನವನಾಗಿರಲಿ, ಯಕ್ಷ-ಗಂಧ ರ್ವರೆ ಆಗಿರಲಿ, ಮುಕ್ತಿದಾಯಕ ಶ್ರೀ ಮುಕುಂದನ ಪಾದವನ್ನು ಆಶ್ರಯಿಸುವದ ರಿಂದಲೆ ಶ್ರೇಯಸ್ಸನ್ನು ಪಡೆಯುವರು. ಈ ಮಾತಿಗೆ ನಾವೇ [ಶ್ರೀ ಪ್ರಲ್ಹಾದರೇ] ಸಾಕ್ಷಿಯಾಗಿರುವೆವು. 'ದೈತೇಯಾಃ...... ಅಚ್ಯುತತಾಂ ಗತಾಃ' [೭-೭-೫೬] ದೈತ್ಯ ಬಾಲಕರೇ, ಯಕ್ಷರು, ರಾಕ್ಷಸರು. ಸ್ತ್ರೀ-ಶೂದ್ರರು, ಅರಣ್ಯದಲ್ಲಿ ವಾಸಿ ಸುವ ಪಶು-ಪಕ್ಷಿಗಳು, ಪಾಪಾಚರಣೆಯುಳ್ಳವರು, ಶ್ರೀ ಮುಕುಂದನ ಚರಣವನ್ನು ಆಶ್ರಯಿಸಿ, [ನಾಶವಿಲ್ಲದ] ಅಚ್ಯುತನ ಸ್ಥಾನವನ್ನು ಹೊಂದುವರು'.

'ಏತಾವಾನೇವಲೋಕೆ...... ತದೀಕ್ಷಣಂ' [೭-೭-೫೭]

ಗೋವಿಂದನಲ್ಲಿ [ಅನನ್ಯ ಭಾವದ] ಏಕಾಂತ ಭಕ್ತಿ, ಹಾಗೂ ಚರಾಚರಾತ್ಮಕ ಸಕಲ ವಸ್ತುಗಳಲ್ಲಿ ಪರಮಾತ್ಮನ ಸಾನ್ನಿಧ್ಯವನ್ನು ಕಾಣುವದು, ಪ್ರಪಂಚದಲ್ಲಿಯ ಜನರಿಗೆ, ಇವೆರಡೇ ಸಂಗತಿಗಳು ಮಾನವರಿಗೆ ಅತಿ ಶ್ರೇಷ್ಠವಾದ ಪುರುಷಾರ್ಥವೆನಿಸುವವು.

ಭಕ್ತಿಸ್ತುತಿ ಪ್ರಕರಣವು ಮುಗಿಯಿತು.



೬ ಶ್ಲೋಕಗಳು

# ೨೪ ಭಕ್ತಿಕಾರ್ಯ ಪ್ರಕರಣ

॥೩೩೮॥ ಏವಂ ವ್ರತಃ ಸ್ವಪ್ರಿಯನಾಮಕೀರ್ತ್ಯಾ
ಜಾತಾನುರಾಗೋ ದ್ರುತಚಿತ್ತ ಉಚ್ಚೈಃ ।
ಹಸತ್ಯಥೋ ರೋದಿತಿ ರೌತಿ ಗಾಯ-
ತ್ಯುನ್ಮಾದವನ್ನೃತ್ಯತಿ ಲೋಕಬಾಹ್ಯಃ ॥ ೧೧-೨-೪೦

ಕವಿ ಜನಕರಾಜ

ಕವಿಯೆಂಬ ಋಷಿಯು ವಿದೇಹ ರಾಜನಿಗೆ ಹೇಳಿದುದು.

ಈ ರೀತಿಯಲ್ಲಿ ಭಕ್ತಿಯ ಹಿರಿಮೆಯನ್ನು ಹೇಳಿಕೊಟ್ಟು, ಆ ಬಗೆಯ ಭಕ್ತಿ ಯುಕ್ತರಾದ ಭಗವದ್ಭಕ್ತರ ನಡವಳಿಯು ಹೀಗಿರುವದು, ಎಂಬುದನ್ನು ನೆನಪಿಗೆ ತಂದುಕೊಡಲು ಹಿಂದೆ ಹೇಳಿರುವ ಭಕ್ತಿದ್ಯೋತಕವಾದ ಕೃತಿಗಳನ್ನು ಇನ್ನಷ್ಟು ಸ್ಪಷ್ಟಗೊಳಿಸುವರು. ಈ ಪ್ರಕರಣದಲ್ಲಿ ಮೊದಲು ಭಕ್ತಿಯಿಂದ ಪರವಶರಾದವರ ಕೃತಿಗಳು ಲೋಕವಿಲಕ್ಷಣ-ಅಸಾಮಾನ್ಯವಾದವುಗಳೆಂಬುದನ್ನು ತೋರಿಸುವರು.

**ಅರ್ಥ :-** (ಏವಂ ವ್ರತಃ)- ಹಿಂದೆ ಹೇಳಿದಂತೆ ಭಗವಂತನ ಗುಣ-ಲೀಲಾ ಕೃತಿಗಳ ಶ್ರವಣ - ಸ್ಮರಣಾದಿಗಳನ್ನೇ ಜೀವನದಲ್ಲಿ ಒಂದು ವ್ರತ (ಧಾರ್ಮಿಕ ನಿರ್ಬಂಧ) ದಂತೆ ಆಚರಿಸುತ್ತಿರುವ (ವ್ರತ) ನಾಗಿ, ಅಂದರೆ ಶ್ರವಣಾದಿ ಭಾಗವತ ಧರ್ಮಗಳನ್ನು ತತ್ಪರತೆಯಿಂದ ಪಾಲಿಸುವವನಾಗಿ, ನಡೆಯುತ್ತಿರುವ ಸಾಧಕನಿಗೆ ಭಗವಂತನಲ್ಲಿ ಉತ್ಕಟವಾದ ಭಕ್ತಿಯು ಹುಟ್ಟುವದು. ಭಗವಂತನ ಸರಿಮಿಗಿಲಿಲ್ಲದ ಅಸಾಮಾನ್ಯವಾದ ಗುಣ ಕರ್ಮಗಳನ್ನು ನಿರೂಪಿಸುವ ನಾಮ (ಶಬ್ದ) ಗಳನ್ನು ಬೇರೆಯವರು ಹಾಡಿಹೊಗಳುವದನ್ನು ಕೇಳಿದಾಕ್ಷಣ- (ಕೇಳುವ ನಿಮಿತ್ತ ಮಾತ್ರದಿಂದ) ಭಕ್ತನ ಮನಸ್ಸು ಕರಗುವದು. ಆತನ ಚಿತ್ತವೃತ್ತಿಯು ಭಗವಂತನತ್ತ ಧಾವಿಸುವದು. ಅನಂತರ ಭಕ್ತಿಯ ಉದ್ರೇಕದಿಂದ ಆತನು (ಜನರು ಅಪಹಾಸ ಮಾಡುವಂತೆ) ಗಟ್ಟಿಯಾಗಿ, ವಿಲಕ್ಷಣವಾಗಿ ನಗುವನು. ಉಳಿದ ಜನರೂ ನಗುವರು. ಹೀಗಿರಲು ಭಕ್ತನು ನಕ್ಕರೆ ಏಕೆ ಅಸಹ್ಯ ಪಡಬೇಕು ? ಎಂದರೆ (ಉಚ್ಚೈಃ) ಆತನ ನಗೆಯು ಎಲ್ಲರ ನಗೆಯಂತೆ ಇರುವದಿಲ್ಲ. ಆತನ ನಗೆಯ ರೀತಿಯು ಉನ್ಮಾದ ರೋಗಿಯ ನಗೆಯಂತೆ ಇರುವದು. ಆತನ ನಗೆಯೊಂದೇ ಲೋಕ ವಿಚಿತ್ರವಾದುದಲ್ಲ, ಭಕ್ತಿಯ ಉದ್ರೇಕದಲ್ಲಿ ಆತನು ಮಾಡುವ ಸಕಲ ಕೃತಿಗಳೂ ಅಷ್ಟೇ ವಿಲಕ್ಷಣವಾದವುಗಳು. ಉನ್ಮಾದ ಅವಸ್ಥೆಯಲ್ಲಿರುವ ರೋಗಿಯಂತೆ, ಆತನು ದೊಡ್ಡ ದನಿಯಿಂದ ಅಳುವನು, ಆತನಂತೆಯೆ ಒದರಿ ಹಾಡುವನು, (ಹುಚ್ಚೆದ್ದು) ಕುಣಿಯುವನು. ಈ ಬಗೆಯ ವಿಚಿತ್ರ ಕೃತಿಗಳಿಂದಲೆ ಭಕ್ತಿ

ಪರವಶನಾದ ಭಕ್ತನು 'ಲೋಕಬಾಹ್ಯ'ನಾಗಿ, ಲೋಕವಿಲಕ್ಷಣನಾಗಿ ಕಾಣುವನು. ಅಂತೆಯೆ ಜನರ ಅಪಹಾಸಕ್ಕೆ ಗುರಿಯಾಗುವನು. ಭಕ್ತನ ಚಿತ್ತವೃತ್ತಿಯು ಕರಗಿ ಭಗವಂತನತ್ತ ಧಾವಿಸುವದು. ಎಂಬ ಮಾತನ್ನು ಇಲ್ಲಿ ಸ್ಪಷ್ಟಗೊಳಿಸಿರುವರು.

**॥೩೯॥ ಕ್ವಚಿದ್ರುದಂತ್ಯಚ್ಯುತಚಿಂತಯಾ ಕ್ವಚಿ-**
**ದ್ಧಸಂತಿ ನಂದಂತಿ ವದಂತ್ಯಲೌಕಿಕಾಃ ।**
**ನೃತ್ಯಂತಿ ಗಾಯಂತ್ಯನುಶೀಲಯಂತ್ಯಜಂ**
**ಭವಂತಿ ತೂಷ್ಣೀಂ ಪರಮೇತ್ಯ ನಿರ್ವೃತಾಃ ॥ ೧೧-೩-೩೨**

ಭಕ್ತಿಯ ಉದ್ರೇಕದಲ್ಲಿ ಹೊರಹೊಮ್ಮುವ ಭಕ್ತನ ಉಳಿದ ಕೃತಿಗಳೂಕೂಡ ಲೋಕ ವಿಲಕ್ಷಣ-ಅಸಾಮಾನ್ಯಪಾಗಿಯೆ ಇರುವವು. ಎಂಬುದನ್ನು ಇಲ್ಲಿ ತೋರಿಸುವರು.

**ಅರ್ಥ :-** ( ಕ್ವಚಿದ್-ಇತಿ )- ಭಗವಂತನಾದ ಅಚ್ಯುತನನ್ನು ಹೇಗೆ ಕಂಡೇನು ? ಎಂದು ಕಂಡೇನು ? ಎಂಬ ಚಿಂತೆಯಿಂದ ಭಕ್ತರು ಒಮ್ಮೆ ಅಳುವರು (ದುಃಖಿಸುವರು). ಪರಮಾತ್ಮನ ಒಂದೊಂದು ಲೀಲಾವತಾರದ (ಅದ್ಭುತ) ಕೃತಿಗಳನ್ನು ನೆನೆದುಕೊಂಡು (ತಮ್ಮಷ್ಟಕ್ಕೆ ತಾವೇ ನಗುವರು, ಸಂತೋಷಿಸುವರು. ಇನ್ನೊಂದು ಸಮಯ, ಜನರು ತಮಗೆ ಪ್ರಶ್ನೆ ಮಾಡದಿದ್ದರೂ, ಅವುಗಳ ಬಗ್ಗೆ ಆಸ್ಥೆ - ಆದರಗಳಿರದಿದ್ದರೂ, ಭಗವಂತನ ಚರಿತ್ರೆಯನ್ನು ತಾವಾಗಿಯೇ ಅವರಿಗೆ ಹೇಳುವರು. ಭಗವಂತನ ಲೀಲಾಕೃತಿಗಳನ್ನು ತಾವೇ ಅಭಿನಯಿಸಿ ತೋರಿಸುವರು. ಮತ್ತೊಂದು ಸಮಯ. ಯಾರು ಎಷ್ಟೇ ಪ್ರಶ್ನೆ ಕೇಳಿದರೂ ಉತ್ತರವನ್ನೀಯದೆ, ತಮ್ಮ ಮನಸ್ಸಿನಲ್ಲಿಯೆ ಭಗವಂತನನ್ನು ಸನ್ನಿಧವಾಗಿ ಮಾಡಿಕೊಂಡು ಸಂತೋಷಭರಿತರಾಗಿ ಮೌನದಿಂದಲೆ ಆತನನ್ನು ಆರಾಧಿಸುವರು. ಲೋಕದ ರೀತಿಯನ್ನು ಬಿಟ್ಟುಕೊಟ್ಟು, ವಿಚಿತ್ರವಾಗಿ ನಡೆಯುವ ಭಕ್ತಿಯ ಈ ಕೃತಿಗಳು ಲೋಕ-ವಿಲಕ್ಷಣ-ಅಲೌಕಿಕವಾದವುಗಳು.

**॥೪೦॥ ನಿಶಮ್ಯ ಕರ್ಮಾಣಿ ಗುಣಾನತುಲ್ಯಾನ್**
**ವೀರ್ಯಾಣಿ ಲೀಲಾತನುಭಿಃ ಕೃತಾನಿ ।**
**ಯದಾತಿಹರ್ಷೋತ್ಪುಲಕಾಶ್ರುಗದ್ಗದಃ**
**ಪ್ರೋತ್ಕಂಠ ಉದ್ಗಾಯತಿ ರೌತಿ ನೃತ್ಯತಿ ॥ ೭-೭-೩೪ (೩)**

? ಪ್ರಬುದ್ಧನೆಂಬ ಋಷಿಯು ವಿದೇಹ ರಾಜನಿಗೆ ಉನ್ನತ ಭಕ್ತರ ವಿಲಕ್ಷಣಗಳನ್ನು ವಿವರಿಸಿ ಹೇಳುತ್ತಾನೆ.

ಭಕ್ತಿಗೆ ಮೂರು (ಅವಸ್ಥೆ) ಮೆಟ್ಟಲುಗಳಿರುವವು. ಅಪಕ್ವ; ಪಕ್ವಕಲ್ಪ. ಪಕ್ವ ಎಂಬವು. ಭಕ್ತಿಯ ಅಭಿವ್ಯಕ್ತಿ (ಹೊರಗಿನ ಲಕ್ಷಣ)ಗಳಾದ ನಗುವದು, ಅಳುವದು ಮುಂತಾದ ಕೃತಿಗಳು ಚಿಕ್ಕ ಮಗುವಿನ ಅಳು-ನಗುಗಳಂತೆ ಮನಸ್ಸಿನ ಉದ್ರೇಕ (ಆವೇಶ)ವಿಲ್ಲದೆ ನಡೆಯುವದಕ್ಕೆ, ಭಕ್ತಿಯ ಅಪಕ್ವ ಅವಸ್ಥೆಯೆನ್ನುವರು. ಬೇನೆಯ ಉನ್ಮಾದ (ಪರವಶತೆ)ದಲ್ಲಿ ನಡೆಯುವ ಅಳು-ನಗುಗಳಂತೆ ಭಕ್ತನ ಅಳು-ನಗುಗಳು ಉದ್ರೇಕದಿಂದ ಉಕ್ಕಿಬರುವದು, ಭಕ್ತಿಯ ಪಕ್ವಕಲ್ಪ (ಪಕ್ವವನ್ನು ಹೋಲುವ) ಭಕ್ತಿಯ ಮೆಟ್ಟಲು ಎನ್ನುವರು. ಪಿಶಾಚಿ ಬಡೆದವನು (ಸ್ವಂತದ ಅರಿವು ಪ್ರಜ್ಞೆಯಿಲ್ಲದೆ) ಆತ್ಮಾವೇಶದಿಂದ ಅಳುವಂತೆ, ನಗುವಂತೆ ಭಕ್ತಿ ಪರವಶನಾದವನು (ತನ್ನನ್ನೇ ಪೂರ್ಣವಾಗಿ ಮೈಮರೆತು) ಅಳುವದಕ್ಕೆ, ನಗುವದಕ್ಕೆ (ಅತ್ಯುನ್ನತವಾದ) ಮೂರನೆಯ ಮೆಟ್ಟಲು ಪಕ್ವಭಕ್ತಿಯೆನಿಸುವದು. ಅಪಕ್ವಭಕ್ತಿಯಿಂದ ಪ್ರಕಟವಾಗುವ ಕೃತಿಗಳು ಒಡೆದು ತೋರುವದಿಲ್ಲ, ಅಲಕ್ಷಣಗಳನ್ನು ಚನ್ನಾಗಿ ತಿಳಿದುಕೊಂಡಿದ್ದರೆ ಮಾತ್ರ ಅಪಕ್ವ ಭಕ್ತಿಯ ಅಳು-ನಗು ಮುಂತಾದವುಗನ್ನು ಗುರುತಿಸಬಹುದು. ಪಕ್ವಕಲ್ಪ ಮೆಟ್ಟಲಿನ ಭಕ್ತಿಯಿಂದ ನಡೆಯುವ ಕೃತಿಗಳನ್ನೇ ಇಲ್ಲಿರುವ ಎರಡು ಶ್ಲೋಕಗಳಲ್ಲಿ ತೋರಿಸಿಕೊಟ್ಟಿರುವರು. ಇನ್ನು ಮುಂದಿನ ಮೂರು ಶ್ಲೋಕಗಳಲ್ಲಿ ಪಕ್ವಭಕ್ತಿಯಿಂದ ಹೊರಹೊಮ್ಮುವ ಕೃತಿಗಳನ್ನು ತೋರಿಸುವರು. ಆದರಪೂರ್ವಕವಾಗಿ (ನಿಷ್ಠೆಯಿಂದ) ಭಾಗವತ ಧರ್ಮಗಳನ್ನು ಬಿಟ್ಟುಬಿಡದೆ ಆಚರಿಸುವದರಿಂದ ಭಕ್ತಿಯು ಸಂತತವಾಗಿ ಅಭಿವೃದ್ಧಿಯನ್ನು (ಹೆಚ್ಚಳವನ್ನು) ಪಡೆಯುತ್ತ ಪಕ್ವಭಕ್ತಿಯ ಅವಸ್ಥೆಯನ್ನು ಹೊಂದುವದು. ಆಗ್ಗೆ ಪರಮಾತ್ಮನ ಸಾಕ್ಷಾತ್ಕಾರ (ಅಪರೋಕ್ಷ) ಸಿದ್ಧಿಸುವದು. ಅಂಥ ಪಕ್ವ ಭಕ್ತಿಯನ್ನು ಗುರುತಿಸಲು ಸಹಾಯವಾಗುವಂತೆ ಅವರ ಅಭಿವ್ಯಕ್ತಿ (ಹೊರಗೆ ನಡೆಯುವ ಕೃತಿ)ಗಳು ಹೇಗಿರುವವೆಂಬುದನ್ನು ಇಲ್ಲಿ ತೋರಿಸುವರು.

**ಅರ್ಥ** :- (ನಿಶಮ್ಯ...) ಭಗವಂತನ ಅಸಾಮಾನ್ಯ ಕೃತಿಗಳನ್ನು, ಅಷ್ಟೇ ಅಸದೃಶ್ಯವಾದ ಆತನ ಗುಣಗಳನ್ನು, (ಕಿರು ಬೆರಳಿನಿಂದ ಗೋವರ್ಧನ ಬೆಟ್ಟವೆತ್ತುವದು, ತನ್ನ ಲೀಲೆಗಾಗಿ ಮಾನವ ವೇಷದಲ್ಲಿ ಆತನು ಮಾಡಿದ ಅದ್ಭುತ ಕೃತಿಗಳನ್ನು ಯಾರಾದರೂ ಇವುಗಳನ್ನು ಹಾಡಿ ಹೊಗಳುವದನ್ನು ಕೇಳಿದಾಕ್ಷಣ ಪಕ್ವಭಕ್ತಿಯ ಭಕ್ತನಿಗೆ ಆನಂದದ ಉದ್ರೇಕವಾಗುವದು. ಆನಂದವು ಉಕ್ಕೇ

ಬರುವದು. ವೈವರ್ಣವಿರೇಳುವದು, ಆನಂದದ ಕಣ್ಣೀರು ಸುರಿಯುವದು. ಕಂಠವು ಗದ್ಗದಿತವಾಗುವದು. ಮಾತು ತಡೆತಡೆಯಾಗಿ ತೊದಲಿಸುವದು. ಆಗ್ಗೆ ತನ್ನ ಧ್ವನಿಯನ್ನು ಎತ್ತರಿಸಿ, ದೊಡ್ಡ ದನಿಯಲ್ಲಿ ಆತನು ಹಾಡುವನು ಅಳುವನು, ಹುಚ್ಚೆದ್ದು ಕುಣಿಯುವನು.

ಕೆಲವು ಪಕ್ವಭಕ್ತರು ಹುಚ್ಚೆದ್ದು ಮನಬಂದಂತೆ ಕುಣಿಯುವರು, ಹಾಡುವರು. ಕೆಲವರು ಭಕ್ತಿಯ ಪರವಶತೆಯಲ್ಲಿ (ಅಳು-ನಗು) ಯಾವುದನ್ನೂ ಮಾಡದೆ ಮೌನದಿಂದ ಪರಮಾತ್ಮನನ್ನು ಆರಾಧಿಸುವರು. ಕೆಲವರು ಇವೆರಡನ್ನೂ ತಮಗೆ ಬೇಕಾದಂತೆ ಮಾಡಬಹುದು.

||೩೪೦|| ಯದಾ ಗ್ರಹಗ್ರಸ್ತ ಇವ ಕ್ವಚಿದ್ಧಸಂ-
ತ್ಯಾಕ್ರಂದತೇ ಧ್ಯಾಯತಿ ವಂದತೇ ಜನಂ |
ಮುಹುಃ ಶ್ವಸನ್ವಕ್ತಿ ಹರೇ ಜಗತ್ಪತೇ
ನಾರಾಯಣೇತ್ಯಾತ್ಮಗತಿರ್ಗತತ್ರಪಃ || ೭-೭-೩೭ (ಳ)

ಪ್ರಹ್ಲಾದ ಮಿತ್ರರಿಗೆ

ಉತ್ಕಟ ಭಕ್ತಿಯಿಂದ ಹೊರಹೊಮ್ಮುವ ಇನ್ನು ಬೇರೆ ಕೃತಿಗಳನ್ನು ಹೇಳುವರು.

**ಅರ್ಥ** :- (ಯದಾಇತಿ):- (ಭಕ್ತಿಯ ಉನ್ಮಾದದಲ್ಲಿ) ಭೂತ ಪಿಶಾಚಿಗಳ ಬಾಧೆಗೆ ಒಳಗಾದವನಂತೆ (ಅವುಗಳ ಪ್ರಭಾವಕ್ಕೆ ಅಂಕಿತನಾದವನಂತೆ) ಪಕ್ವ ಭಕ್ತಿಯ) ಭಕ್ತನು ಗಟ್ಟಿಯಾಗಿ ಚೀರುವನು, ಒಮ್ಮೊಮ್ಮೆ ನಗುವನು. ಒಮ್ಮೊಮ್ಮೆ ಭಗವಂತನ ಧ್ಯಾನದಲ್ಲಿ ಮಗ್ನನಾಗುವನು. ಕಂಡಕಂಡವರಿಗೆ (ಅವರಲ್ಲಿಯ ಭಗವದ್ರೂಪದ ಅನುಸಂಧಾನ ಮಾಡಿಕೊಂಡು) ಮತ್ತೆ ಮತ್ತೆ ಕೈಮುಗಿಯುವನು. ಆಗಾಗ್ಗೆ (ಪರಮಾತ್ಮನ ಅನುಸಂಧಾನಕ್ಕೆ ಆತಂಕವಾಗಲು) ವ್ಯಥೆಗೊಂಡು ನಿಟ್ಟುಸುರು ಬಿಡುವನು. ತಾನು ಸ್ವತಂತ್ರನಲ್ಲ. ಸೂತ್ರಧಾರಕನಾದ ಪರಮಾತ್ಮನು ನಡೆಸಿದಂತೆ ನಡೆಯುವವನು ( ಆತ್ಮಗತಿಃ ), ಎಂಬ ನಂಬಿಕೆಯಿಂದಲೆ, ಜನರ ಅಪಹಾಸದ ಭೀತಿಯಿಲ್ಲದೆ, ಇವುಗಳನ್ನೆಲ್ಲ ನಿಃಸಂಕೋಚವಾಗಿ ಮಾಡುವನು, 'ನಾರಾಯಣಾ' ಎಂದು ಲಜ್ಜಾ ( ದೇಹಾಭಿಮಾನ ) ರಹಿತನಾಗಿ ಮತ್ತೆ ಮತ್ತೆ ಗಟ್ಟಿಯಾಗಿ ಹೇಳಿಕೊಳ್ಳುವನು.

||೩೪೧|| ತದಾ ಪುಮಾನ್ಮುಕ್ತಸಮಸ್ತಬಂಧನ-
ಸ್ತದ್ಭಾವಭಾವಾನುಕೃತಾಶಯಾಕೃತಿಃ |
ನಿರ್ದಗ್ಧಬೀಜಾನುಶಯೋ ಮಹೀಯಸಾ
ಭಕ್ತಿಪ್ರಯೋಗೇಣ ಸಮೇತ್ಯಧೋಕ್ಷಜಂ || ೭-೭-೩೬

ಪ್ರಹ್ಲಾದನು ಮಿತ್ರರಿಗೆ

3[6]

ಅರ್ಥ :- (ತದ್ಭಾವೇ) - ಪಕ್ವ ಭಕ್ತಿಯ ಭಕ್ತನ ಮನಸ್ಸು ಆತನ ಅತ್ಯು
ಭಕ್ತಿಗೆ ಅನುಗುಣವಾದ ಅನುಸಂಧಾನದಿಂದ (ಸಕಲ ಕೃತಿಗಳನ್ನು ಶ್ರೀ
ಹರಿಯೆ ಮಾಡಿಸುವನೆಂಬ ಭಾವನೆಯಿಂದ) ಯುಕ್ತವಾಗಿರುತ್ತದೆ. ಅಥವಾ
(ಭವತಿ-ಇತಿ ಭಾವಃ-ಆಗುವದೇ ಭಾವವು) ಶ್ರೀ ಹರಿಯಿಂದ ಏನು ಆಗುವದೊ,
ಅದೇ ನನ್ನಿಂದ ಆಗುವದು, - ಆತನ ಮನಸ್ಸಿನ (ಆಕೃತಿ) ರಚನೆಯೆ ಈ ಬಗೆಯ
ಅನುಸಂಧಾನದಿಂದ ರೂಪುಗೊಂಡಿರುವದು. ಅಂದರೆ, (ಲಾಕ್ಷಣಿಕವಾಗಿ
ಶ್ರೀ ಹರಿಯು ನಡೆದರೆ, ನಾನು ನಡೆಯುವೆನು, ಆತನು ನುಡಿದರೆ ನಾನು ನುಡಿ
ಯುವೆನು. ಆತನು ಇಚ್ಛಿಸಿದರೆ, ಅದೇ ನನ್ನ ಇಚ್ಛೆ. ಹೀಗೆ (ಶ್ರೀ ಹರಿಯ
ಸಕಲ ಕರ್ತೃತ್ವವನ್ನೇ) ಮನಸ್ಸಿನಲ್ಲಿ ಅನುಸಂಧಾನ ಮಾಡಿಕೊಂಡು, ಪಕ್ವಭಕ್ತನ
ಸಕಲ ಕಾರ್ಯಗಳನ್ನು ಮಾಡುವನು 'ಆತ್ಮಗತಿಃ' ಎಂಬುದರ ವಿಶೇಷ ಅರ್ಥವ
ಇಲ್ಲಿ ವಿವರಿಸಲ್ಪಟ್ಟಿದೆ. ಈ ಬಗೆಯ ದೃಢ ಭಾವನೆಯಿಂದ ನಡೆಯುವ ಪಕ್ವ
ಭಕ್ತನಿಗೆ, ಸಂಸಾರ ಬಂಧನಕ್ಕೆ ಮೂಲ ಕಾರಣವಾಗಿರುವ ಕರ್ಮದ ಬೀಜವೆ
ನಿಃಶೇಷವಾಗಿ (ಏನೂ ಉಳಿಯದಂತೆ) ನಾಶವಾಗುವದು. ಆಗ್ಗೆಯೇ ತನ
ಅತ್ಯುತ್ಕಟವಾದ ಭಕ್ತಿಯ ಬಲದಿಂದ, ಬಾಹ್ಯ ಇಂದ್ರಿಯಗಳಿಗೆ ಅಗೋಚರನಾ
ರುವ ಅಧೋಕ್ಷಜನನ್ನು ತನಗೆ ಬಿಂಬರೂಪನಾಗಿರುವ ಶ್ರೀ ಹರಿಯನ್ನು (ಭಕ್ತಿಯ
ಬಲದಿಂದ ಪಡೆದ) ದಿವ್ಯದೃಷ್ಟಿ (ಅಂತರ್ದೃಷ್ಟಿ) ಯಿಂದ ಕಾಣುವನು. ಆಗ್ಗೆಯೆ
(ಮಾಯೆಯ) ಸಕಲ ಬಂಧನಗಳಿಂದ ಬಿಡುಗಡೆ ಹೊಂದಿ, (ಸಂಸಾರದಲ್ಲಿ) ಜೀ
ಸಿದರೂ ಜೀವನ್ಮುಕ್ತ-ಮುಕ್ತನಂತೆಯೆ ಆಗುವನು.

॥೩೪೩॥ ತದಶ್ಮಸಾರಂ ಹೃದಯಂ ಬತೇದಂ ಸೂತರು
ಯದ್ಗೃಹ್ಯಮಾಣೈರ್ಹರಿನಾಮಧೇಯೈಃ । ಶೌನಕಾದಿಗ
ನ ವಿಕ್ರಿಯೇತಾಥ ಯದಾ ವಿಕಾರೋ
ನೇತ್ರೇ ಜಲಂ ಗಾತ್ರರುಹೇಷು ಹರ್ಷಃ ॥ ೨.೩-೨೪

ಸರ್ವೇಂದ್ರಿಯಗಳು ಭಗವಂತನಲ್ಲಿಯೆ ಪ್ರವೃತ್ತವಾಗಬೇಕು, 'ಭಗವತ್ಪ
ವಾಗಬೇಕು. ಹೀಗೆ ಆಗದವರ ಜೀವನ ವ್ಯರ್ಥವಾದುದೆಂದು ಸೂತರು ಶೌನಕಾ
ಗಳಿಗೆ ಉಪದೇಶಿಸಿರುವರು.

ಭಗವಂತನಲ್ಲಿ ವಿಶುದ್ಧಭಕ್ತಿಯುಳ್ಳವನ ಜೀವನವೇ ಸಫಲ-ಸಾರ್ಥಕವಾ
ದುದು, ಭಕ್ತಿಯಿಲ್ಲದವನ ಬಾಳು ನಿರರ್ಥಕವಾದುದು, ವ್ಯರ್ಥವಾದುದು
ಅಭಿಪ್ರಾಯದಿಂದ ಹೀಗೆ ಹೇಳಿರುವರು.

**ಅರ್ಥ :**– (ತದಶ್ಮಸಾರಂ)– ಶ್ರೀ ಹರಿಯ ಕಲ್ಯಾಣ ಗುಣಗಳನ್ನು, ಆತನ ಅದ್ಭುತ ಲೀಲಾಕೃತಿಗಳನ್ನು ಕೇಳಿದಾಕ್ಷಣ (ಕಿವಿಗೆ ಬಿದ್ದ ಕೂಡಲೆ), ಯಾರ (ಹೃದಯ) ಮನಸ್ಸು (ಅಂತಃಕರಣ) ಕರಗಿ ನೀರಾಗುವದಿಲ್ಲ, ಭಕ್ತಿಯ ಉದ್ರೇಕ (ಹೆಚ್ಚಳ) ದಿಂದ ಒದಗುವ ಆನಂದಾತಿಶಯವು ಯಾರ ಮುಖದಲ್ಲಿ ತೋರಿಬರುವದಿಲ್ಲ. ಯಾರ ಕಣ್ಣುಗಳು ಆನಂದದ ಕಣ್ಣೀರನ್ನು ಸುರಿಸುವದಿಲ್ಲ, ಯಾರ ಮೈಯಲ್ಲಿ ನವಿರೇಳುವದಿಲ್ಲ (ರೋಮಾಂಚಿತವಾಗುವದಿಲ್ಲ) – ಒಟ್ಟಾರೆ ಭಕ್ತಿಯನ್ನು ಹೊರ ಸೂಸುವ ಈ ಬಗೆಯ ಭಕ್ತಿಯ ಬಾಹ್ಯ ಲಕ್ಷಣಗಳು ಯಾರಲ್ಲಿ ಕಂಡುಬರುವದಿಲ್ಲ. –ಅಂಥವರ ಹೃದಯವು (ಅಂತಃಕರಣವು) ಕಲ್ಲಿನಂತೆ ಕಠಿಣವಾದುದು, ಕಠಿಣತೆಯಲ್ಲಿ ಕಲ್ಲನ್ನೇ ಹೋಲುವದು. ಶ್ರೀ ಹರಿಯ ಗುಣ ಹಾಗೂ ಲೀಲಾಕೃತಿಗಳ ಶ್ರವಣದಿಂದ ಜನಿಸುವ ಭಕ್ತಿಯಿಂದ ಪ್ರಭಾವಿತವಾಗದ (ಪರಿಣಾಮವನ್ನು ಹೊಂದದ) ಮಾನವನ ಮನಸ್ಸು ಕಲ್ಲಿಗೆ ಸಮವಾದುದು. ಆದರೆ, ಶ್ರೀ ಹರಿಯ ಗುಣ ಹಾಗೂ ಲೀಲಾಕೃತಿಗಳ ಶ್ರವಣದಿಂದ, ಭಕ್ತಿಯುಂಟಾಗಿ, ಭಕ್ತಿಯ ಲಕ್ಷಣಗಳಿಂದ ಯುಕ್ತನಾಗುವನು ನಿಜವಾಗಿಯೂ ವಂದ್ಯನಾಗಿರುವನು. ಭಕ್ತಿಯಿಲ್ಲದ ಮಾನವನ ಜೀವನಕ್ಕೆ ಧಿಃಕ್ಕಾರವು. ಆದರೆ, ಉತ್ಕಟ ಭಕ್ತಿಯ ಉದ್ರೇಕವನ್ನು ಹಗು–ಅಳು–ನೃತ್ಯ ಮುಂತಾದ ಬಾಹ್ಯಲಕ್ಷಣಗಳಿಂದ ವ್ಯಕ್ತಗೊಳಿಸದ ಎಷ್ಟೋ ಭಾಗವತೋತ್ತಮರೂ ಇರುವರು.

ಭಕ್ತಿಕಾರ್ಯ ಪ್ರಕರಣ ಮುಗಿಯಿತು.



# ೨೫. ಅನ್ಯಥಾಮತ್ಯಕರಣ ಪ್ರಕರಣ

||೪೪|| ನ ವೇದವಾದಾನನುವರ್ತತೇ ಮತಿಃ
ಸ್ವ ಏವ ಲೋಕೇ ರಮತೇ ಮಹಾಮುನೇಃ ।
ಯಥಾ ಗತಿರ್ದೇವಮನುಷ್ಯಯೋಃ ಪೃಥಕ್
ಸ್ವ ಏವ ಧರ್ಮೇ ನ ಪರಂ ಕ್ಷಿಪೇತ್ ಸ್ಥಿತಃ || ೪-೪-೧೯ (೧)

ಸತೀದೇವಿಯು ಶಿವದ್ವೇಷಿಯಾದ ದಕ್ಷನಿಗೆ ಹೇಳಿದ ಮಾತು. –ಲೋಕ ವಿಲಕ್ಷಣ ನಡೆವಳಿಕೆಯುಳ್ಳ ಭಗವದ್ಭಕ್ತರ ಬಗ್ಗೆ (ಅನ್ಯಥಾಮತಿಯನ್ನು) ವಿಪರೀತ ಭಾವನೆಯನ್ನು ತಾಳಬಾರದು ಎಂದು.

ಉತ್ಕಟ ಭಕ್ತಿಯ ಉದ್ರೇಕದಲ್ಲಿ ಹೊರಹೊಮ್ಮುವ ಭಗವದ್ಭಕ್ತರ ಅಳು–ನಗು ಮುಂತಾದ ಲೋಕವಿಲಕ್ಷಣ ರೀತಿ ನಡವಳಿಕೆಯನ್ನು ಕಂಡು ವಿಪರೀತ ಭಾವನೆಯನ್ನು ತಾಳುವವರು. ಅಪಹಾಸ ಮಾಡುವವರು, ಶ್ರೀ ಹರಿದ್ರೋಹ ವನ್ನು ಮಾಡಿದಂತಾಗುವದು. ಅವರು (ನರಕಾದಿ) ಅನರ್ಥಗಳಿಗೆ ಗುರಿಯಾಗು ವರು. ಆದುದರಿಂದ, ಸಂಸಾರ ಬಂಧನದಿಂದ ಬಿಡುಗಡೆಹೊಂದಲು ಬಯಸು ವರು ಪಕ್ವಭಕ್ತಿಯ ಭಗವದ್ಭಕ್ತರ ಲೋಕವಿಲಕ್ಷಣ ಕೃತಿಗಳನ್ನು ಎಂದಿಗೂ ಅಪಹಾಸ ಮಾಡಬಾರದು, ಎಂಬುದನ್ನು ಈ ಪ್ರಕರಣದಲ್ಲಿ ಹೇಳುವರು. ಭಗವ ದ್ಭಕ್ತರ ರೀತಿ ನಡತೆಗಳು ಏಕೆ ವಿಲಕ್ಷಣವಾಗಿರುವವೆಂಬುದಕ್ಕೆ ಕಾರಣವನ್ನು ಮೊದಲು ತೋರಿಸಿಕೊಡುವರು.

ಅರ್ಥ:– (ನವೇದ-ಇತಿ):– (ಸಂದರ್ಭಾನುಸಾರವಾಗಿ, ಇಲ್ಲಿ ಹೇಳಿರುವದು ಸತೀದೇವಿಯ ಪತಿಯಾದ ಮಹಾದೇವರಿಗೆ ಅನ್ವಯಿಸುವದು. ಈ ಶ್ಲೋಕದ್ದು ಹೇಳಿದುದು ಸತೀದೇವಿ ಮಾಡಿದ್ದು ) ಮುನಿಶ್ರೇಷ್ಠರು (ಮಹಾದೇವರು) ಯಥಾ ರ್ಥವನ್ನು ತಿಳಿದುಕೊಂಡು ಮಾಡುವ ಕಾರ್ಯಗಳು ವೇದಗಳಲ್ಲಿ ಹೇಳಿದ (ಮೇ ತೋರುವ) ವಿಧಿ ನಿಷೇಧಗಳನ್ನು (ಯಾವಾಗಲೂ) ಅನುಸರಿಸುವದಿಲ್ಲ. ಏಕೆ ದರೆ, ತಮ್ಮ ಬಿಂಬರೂಪನಾದ ಪರಮಾತ್ಮನೆ ತಾವು ಮಾಡುವ ಸಕಲ ಕೃತಿ ಳನ್ನು ಮಾಡಿಸುವನೆಂಬ ಅನುಸಂಧಾನದಿಂದ ( ಭಾವನೆಯಿಂದ ), ತಾ ಮಾಡುವದನ್ನೆಲ್ಲ ಬಿಂಬರೂಪ ಪರಮಾತ್ಮನಿಗೆ ಸಮರ್ಪಿಸಿ ಅವರು ಸಂತೋ ಬಡುವರು. ಯಾವುದೇ ಕೃತಿಯನ್ನೇ ಮಾಡುವಾಗ್ಗೆ (ಅದನ್ನು ಮಾಡಿಸು ತಮ್ಮಲ್ಲಿಯ ಬಿಂಬರೂಪ ಪರಮಾತ್ಮನನ್ನೇ ಮನಸ್ಸಿನಲ್ಲಿ ಸ್ಮರಣ ಮಾಡುವರ

ಇಲ್ಲಿ ಒಂದು ಆಕ್ಷೇಪ- ಅವರು ಮಾಡುವ ಕೃತಿಗಳು ವೇದಗಳಲ್ಲಿ ಹೇಳಿರುವದಕ್ಕೆ ವ್ಯತ್ಯಾಸವಾಗಿದ್ದರೆ, ಅವು ನಿಂದ್ಯವಾಗುವದಿಲ್ಲವೆ? ಎಂಬ ಪ್ರಶ್ನೆಗೆ ಉತ್ತರ ಹೇಳುವರು. (ವೇದವಾದಾನ್ ಇತಿ)- 'ಹೆಣ್ಣುಕೊಟ್ಟ ಮಾವ ಮುಂತಾದ ಹಿರಿಯರಿಗೆ ವಂದಿಸಬೇಕು' - ಈ ಬಗೆಯ ಮೇಲೆ ಮೇಲೆ ( ಆಪಾತತಃ ) ತಿಳಿದುಬರುವ ಅರ್ಥವುಳ್ಳ (ವಿಧಿನಿಷೇಧಗಳು) ವೇದೋಕ್ತಿಗಳು ಇರುವವು. ಇಂಥ ತೋರಿಕೆಯ (ಮೇಲಿನಿಂದ ಕಾಣಬರುವ) ಅರ್ಥವುಳ್ಳ ವೇದೋಕ್ತಿಗಳನ್ನ ಮಾತ್ರ ಮುನಿಯು (ಮಹಾದೇವರು) ಅನುಸರಿಸುವದಿಲ್ಲ. ಅವುಗಳನ್ನು ಆಚರಿಸುವದಿಲ್ಲ. ಉಪಕ್ರಮಾದಿ ಪ್ರಮಾಣಗಳಿಂದ ವೇದೋಕ್ತಿಗಳ ಅರ್ಥವನ್ನು ಸಮರ್ಪಕವಾಗಿ ನಿರ್ಣಯಿಸಿ, ಮುನಿಗಳು ಆ ನಿರ್ಣಯದಂತೆ ನಡೆದುಕೊಳ್ಳುವರು. ತೋರಿಕೆಯ ಮೇಲ್ಮಿನ ಅರ್ಥವನ್ನೇ ಮಾತ್ರ ಅವರು ಅನುಸರಿಸುವದಿಲ್ಲ. ಅಂತರ್ಯಾಮಿಯಾದ ಬಿಂಬರೂಪನು ಸಕಲ ಕರ್ಮಗಳನ್ನು ಮಾಡಿಸುವನೆಂಬ ಅನುಸಂಧಾನವನ್ನು ಅವರು ಮನಸಾ ಮಾಡಿಕೊಳ್ಳುವರು. ಸಾಮಾನ್ಯ ಜನರು ಉಪಕ್ರಮಾದಿ ಪ್ರಮಾಣ (ಒರೆಗಲ್ಲು)ದಿಂದ, ವೇದೋಕ್ತಿಗಳನ್ನು ನಿರ್ಣಯಿಸುವ ತೊಂದರೆಯನ್ನು ತೆಗೆದುಕೊಳ್ಳುವದಿಲ್ಲ. ಕಾರ್ಯ ಮಾಡುವಾಗ್ಗೆ ಬಿಂಬರೂಪ ಪರಮಾತ್ಮನ ಸರ್ವ ಕರ್ತೃತ್ವವನ್ನೂ ಗಮನದಲ್ಲಿಟ್ಟುಕೊಳ್ಳುವದಿಲ್ಲ. ಅಂತೆಯೆ ಮಹಾ ಮುನಿಗಳ ಕೃತಿಗಳು ಸರ್ವೇಸಾಮಾನ್ಯ ಜನರ ಕೃತಿಗಳಿಗಿಂತಲೂ ವಿಲಕ್ಷಣ (ವಿಚಿತ್ರ) ವಾಗಿ ಕಾಣಬರುವವು./ ಉದಾಹರಣೆ ಕೊಟ್ಟು ಈ ಮಾತನ್ನೇ ದೃಢಗೊಳಿಸುವರು. (ಯಥೇತಿ) ದೇವ ಹಾಗೂ ಮಾನವರ ನಡೆನಡವಳಿಗಳು ಪರಸ್ಪರ ವಿರುದ್ಧವಾಗಿರುವವು. ದೇವತೆಗಳ ಕೃತಿಗಳೇ ಬೇರೆ. ಮಾನವ ಕೃತಿಗಳೇ ಬೇರೆ, ಅದೇ ರೀತಿಯಲ್ಲಿ ಮಹಾಮುನಿಗಳ (ಪಕ್ವಭಗದ್ಭಕ್ತರ) ಹಾಗೂ ಸರ್ವೇ ಸಾಮಾನ್ಯ ಜನರ ಕೃತಿಗಳು ವಿಭಿನ್ನವಾಗಿರುವವು.

ಇಲ್ಲಿ ಒಂದು ವಿಚಾರಣೆ:- ಭಗವದ್ಭಕ್ತರಾದ ಜ್ಞಾನಿಗಳ ಲೋಕ ವಿಲಕ್ಷಣ ಕೃತಿಗಳನ್ನು ಕಂಡು ಶ್ರೇಯಃಕಾಂಕ್ಷಿ (ಮೋಕ್ಷಾರ್ಥಿ)ಗಳಾದ ನೀವು ಅವುಗಳ ಬಗ್ಗೆ ತಪ್ಪು ತಿಳುವಳಿಕೆಯನ್ನು, ವಿಪರೀತ ಭಾವನೆಯನ್ನು ಮಾಡಿಕೊಂಡು, ಅವರಿಗೆ ಅಪಹಾಸವನ್ನು ಸರ್ವಥಾ ಮಾಡಕೂಡದು. ಅವರ ರೀತಿಗಳು ತಪ್ಪೆಂಬ, ಸದೋಷವೆಂಬ ವಿಚಾರವನ್ನು ಮನಸ್ಸಿನಲ್ಲಿಯೂ ತರಕೂಡದು ಇದು ಮಾತ್ರವಲ್ಲದೆ, ಸಾಮಾನ್ಯ ಜನರಾದ ನಾವು ಮಹಾಮುನಿಗಳ ವಿಲಕ್ಷಣ ರೀತಿಯಂತೆ ಎಂದಿಗೂ ನಡೆದುಕೊಳ್ಳಬಾರದು. ಈ ಅಭಿಪ್ರಾಯದಿಂದಲೆ, 'ಸ್ವೇ ಏವ ಧರ್ಮೆ ಸ್ಥಿತಃ' ಎಂದು ಹೇಳಿರುವರು. ನಮ್ಮ ನಮ್ಮ ಸ್ವಾಭಾವಿಕ ಶಕ್ತಿ ಪಾತ್ರತೆಗಳಿಗೆ ಅನುಗುಣವಾಗಿಯೆ ನಾವು ನಡೆದುಕೊಳ್ಳಬೇಕು; -ಒಟ್ಟಾರೆ ಹೀಗೆ ಹೇಳಿ

ರುವರು. ಜ್ಞಾನಿಗಳ ಹಾಗೂ ಸರ್ವೇ ಸಾಮಾನ್ಯ ಜನರ ರೀತಿ ನಡತೆಗಳು
ಭಿನ್ನವಾಗಿರಲು ಕಾರಣವೆಂದರೆ - ವಿಧಿನಿಷೇಧಗಳನ್ನು ಹೇಳಿಕೊಡುವ ಶಾಸ್ತ್ರ
ಮತಿತಾರ್ಥ (ಗೂಢಾರ್ಥ-ಇಂಗಿತ)ವನ್ನು ಉಪಕ್ರಮಾದಿ ಪ್ರಮಾಣಗಳಿ
ಜ್ಞಾನಿಗಳು ನಿರ್ಣಯಿಸುವರು. ಹೀಗೆ ಅರ್ಥವನ್ನು ನಿರ್ಣಯಿಸುವ (ಬೌದ್ಧಿ
ಶಕ್ತಿಯು ಸಾಮಾನ್ಯ ಜನರಿಗೆ ಇರುವದಿಲ್ಲ. ಜ್ಞಾನಿಗಳಲ್ಲಿ ಇರುವ ಅ
ಶಕ್ತಿಯು ತಮ್ಮಲ್ಲಿ ಇರುವದಿಲ್ಲವೆಂಬುದನ್ನು ತಿಳಿದುಕೊಂಡು ಸಾಮಾನ್ಯ ಜನ
ತಮ್ಮ ತಮ್ಮ ಸ್ವಾಭಾವಿಕ ಶಕ್ತಿಸಾತ್ರತೆಗಳಿಗೆ ಅನುಗುಣವಾಗಿ ನಡೆದುಕೊ
ಬೇಕು. ಇದು ಮಾತ್ರವಲ್ಲದೆ ಜ್ಞಾನಿಗಳ ಕೃತಿಗಳು ಧರ್ಮಬಾಹಿರವೇ
ಸರ್ವಥಾ ಭಾವಿಸಬಾರದು. ದೇವತೆಗಳು ಮಾಡಿದಂತೆ ಮಾಡಲು ಮಾನವ
ಪ್ರವೃತ್ತರಾಗಬಾರದು. ಅಷ್ಟಲ್ಲದೆ ದೇವತೆಗಳು ಮಾಡಿದ ಕಾರ್ಯ ಅಧಾರ್ಮಿ
ವೆಂಬ ಭಾವನೆಯನ್ನೂ ತಾಳಬಾರದು. ಭಗವದ್ಭಕ್ತರ ಲೋಕವಿಲಕ್ಷಣ ಕೃ
ಗಳ ವಿಷಯದಲ್ಲಿಯೂ ಹೀಗೆಯೇ ನಡೆದುಕೊಳ್ಳಬೇಕು. ಈರೀತಿಯಲ್ಲಿ ಭಗವದ್ಭಕ್
ಲೋಕವಿಲಕ್ಷಣ ಕೃತಿಗಳ ಬಗ್ಗೆ ವಿಪರೀತ ಭಾವನೆಯನ್ನು ತಳೆಯದಿದ್ದರೆ ಮಾ
ಶ್ರೇಯಸ್ಸನ್ನು (ಪರಮ ಪುರುಷಾರ್ಥವನ್ನು) ಬಯಸುವವರು ಅದನ್ನು ಪಡೆ
ವರು, ಹೀಗೆ ಮಾಡದೇ ಹೋದರೆ, ಅವರು ಅನರ್ಥಕ್ಕೆ ಗುರಿಯಾಗುವರು.

||೩೪|| ಪ್ರತ್ಯುದ್ಗಮಪ್ರಶ್ರಯಣಾಭಿವಾದನಂ
ವಿಧೀಯತೇ ಸಾಧುಮಿಥಃ ಸುಮಧ್ಯಮೇ |
ಪ್ರಾಜ್ಞೈಃ ಪರಸ್ಮೈ ಪುರುಷಾಯ ಚೇತಸಾ
ಗುಹಾಶಯಾಯೈವ ನ ದೇಹಮಾನಿನೇ || ೪-೩-೨೨

ಈ ಶ್ಲೋಕದಲ್ಲಿ ( ತಾನು ಮಾವನಾದ ದಕ್ಷಪ್ರಜಾಪತಿಗೆ ಏಕೆ ವಂ
ಲಿಲ್ಲ ವೆಂಬ ಬಗ್ಗೆ) ಶಿವನು ಸತೀದೇವಿಗೆ ಹೇಳುವನು.

ಉಪಕ್ರಮಾದಿ ಪ್ರಮಾಣ ಲಕ್ಷಣಗಳಿಂದ ಶಾಸ್ತ್ರಗಳು ವಿಧಿಸುವದ
( ಅವುಗಳ ಇಂಗಿತಾರ್ಥವನ್ನು ) ಯಥಾರ್ಥವಾಗಿ ತಿಳಿದುಕೊಳ್ಳಲಾರದ ಅ
ಜನರು ಮಾಡುವ ಕೃತಿಗಳಿಗಿಂತಲೂ ಇಂಗಿತಾರ್ಥ (ಗೂಢಾರ್ಥ) ವನ್ನು ತಿಳಿ
ಕೊಳ್ಳಲು ಶಕ್ತರಾದ ಜ್ಞಾನಿಗಳು ಮಾಡುವ ಕೃತಿಗಳು ವಿಲಕ್ಷಣವಾಗಿರುವ
ನಿಜ. ಜ್ಞಾನಿಗಳ ಕೃತಿಗಳು ಏಕೆ ವಿಲಕ್ಷಣವಾಗಿರುದೆಂಬುದನ್ನು ಸರಿಯ
ತಿಳಿದುಕೊಳ್ಳದೆ, ಅವುಗಳ ಬಗ್ಗೆ ವಿಪರೀತ ಭಾವನೆಯನ್ನು ಶ್ರೇಯೋಭಿಲಾಷಿಗ
ಎಂದಿಗೂ ಮಾಡಿಕೊಳ್ಳಬಾರದೆಂಬುವದೂ ಸರಿಯಾದುದೇ. ಮಾವ ಮುಂತಾ
ಹಿರಿಯರಿಗೆ ವಂದಿಸಬೇಕು - ಇತ್ಯಾದಿಯಾಗಿ ವೇದಗಳಲ್ಲಿ ವಿಹಿತವಾದ ವಿಧಿನಿ

ಧಗಳಿಗೆ ಮೇಲೆ ಮೇಲೆ ಕಂಡುಬರುವ ತೋರಿಕೆಯ ಅರ್ಥವೂ ಇರಲಿ. ಹಾಗಾದರೆ, ವೇದೋಕ್ತಿಗಳಿಗೆ ಉಪಕ್ರಮಾದಿ ಲಕ್ಷಣಗಳಿಂದ ನಿರ್ಣೀತವಾಗುವ, ಇಂಗಿತಾರ್ಥವಾದರೂ ಯಾವುದು ? ಎಂದು ಕೇಳಿದರೆ, ಉತ್ತರ ಹೇಳುವರು.

**ಅರ್ಥ** :- (ಪ್ರತ್ಯುದ್ಗಮ) ಸುಮಧ್ಯಮೆ ! (ಸುಂದರವಾದ ಕಟಿಯುಳ್ಳವಳೆ) (ಸತೀದೇವಿಗೆ ಮಹಾದೇವರು ಹೇಳುವರು) ಬುದ್ಧಿವಂತರಾದವರು ಒಬ್ಬರೊಬ್ಬರ ಮನೆಗೆ ಹೋದರೆ, ಆದರದಿಂದ ಎದಿರುಗೊಳ್ಳುವದು; ಬಾಗಿ ನಮಸ್ಕರಿಸುವದು, ಸೌಜನ್ಯ ತೋರಿಸುವದು, ಇವೆಲ್ಲವುಗಳನ್ನು (ಗುಹಾಶಯನಾದ) ಹೃದಯದಲ್ಲಿ ಅಂತರ್ಯಾಮಿಯಾಗಿ ನೆಲಿಸಿರುವ ಪುರುಷೋತ್ತಮನಿಗಾಗಿ ಮಾಡುವೆನೆಂದು ಮನಸ್ಸಿನಲ್ಲಿ ಭಾವನೆಯನ್ನು ತಂದುಕೊಂಡು, ( ಹೀಗೆ ಅನುಸಂಧಾನ ಮಾಡಿಕೊಂಡು) ಆಚರಿಸುವರಲ್ಲವೆ, ದೇಹವೇ ತಾನೆಂಬ ದೇಹಾಭಿಮಾನಿಯಾದ ಜೀವಿಗೋಸುಗವಾಗಿ ಅವುಗಳನ್ನು ಮನಸ್ಸಿನಿಂದ ಮಾಡುವದಿಲ್ಲ.

ತಾತ್ಪರ್ಯವೆಂದರೆ, - 'ಮಾವ ಮುಂತಾದ ಹಿರಿಯರಿಗೆ ವಂದಿಸಬೇಕು'- ಇತ್ಯಾದಿ ವೇದೋಕ್ತಿಗಳಿಗೆ, ಉಪಕ್ರಮಾದಿ ಪ್ರಮಾಣ ಲಕ್ಷಣಗಳಿಂದ ನಿರ್ಣೀತವಾಗುವ ಅರ್ಥವೇನಂದರೆ, - ಮಾವ, ತಂದೆ ಮುಂತಾದ ಶಬ್ದಗಳಿಂದ ಕರೆಯಲ್ಪಡುವವನು (ಸರ್ವ ಶಬ್ದವಾಚ್ಯನಾದ), ಅಂತರ್ಯಾಮಿಯಾಗಿ ಆತನಿಗೆ ಬಿಂಬರೂಪನಾಗಿರುವ ಶ್ರೀ ಹರಿಯೇ ಆಗಿರುವನು. ಮಾವ ಮುಂತಾದ ಹಿರಿಯರಿಗೆ ಮಾಡುವ ನಮಸ್ಕಾರಾದಿಗಳು ( ಜ್ಞಾನಿಗಳ ದೃಷ್ಟಿ ( ಭಾವನೆ ) ಯಲ್ಲಿ ಅವರಿಗೆ ಬಿಂಬರೂಪನಾಗಿರುವ ಶ್ರೀಹರಿಯಗೋಸುಗವಾಗಿಯೆ ಇರುವವು. ಆದುದರಿಂದ, ಮಹಾಜ್ಞಾನಿಯಾದ ಶಿವನು ಈ ಬಗೆಯ ಬಿಂಬಾನುಸಂಧಾನವನ್ನು ಮಾಡಿಕೊಂಡು, ದಕ್ಷ ಪ್ರಜಾಪತಿಯ ಬುದ್ಧಿಮತ್ತೆಯನ್ನು (ಜ್ಞಾನವನ್ನು) ಪರೀಕ್ಷಿಸಬೇಕೆಂದು ಆತನಿಗೆ ಸತ್ಕಾರ-ನಮಸ್ಕಾರಗಳನ್ನು (ಹೊರಗೆ ಆತನಿಗೆ ಕಾಣುವಂತೆ) ಮಾಡಲಿಲ್ಲ. ಆದರೆ ಜ್ಞಾನಿಗಳಿಗೆ ಅಭಿಮತವಾದ (ಒಪ್ಪಿಗೆಯಾಗಿರುವ) ಈ ಅಭಿಪ್ರಾಯವನ್ನು, ಆಚರಣೆಯನ್ನು ದೇಹಾಭಿಮಾನಿಯಾದ ದಕ್ಷನು ತಿಳಿದ್ಕೊಳ್ಳಲಾರದಾದನು. ಒಳಗಿನ ಬಿಂಬಕ್ಕಲ್ಲ, ಹೊರಗಿನ ದೇಹವಾದ ತನಗೆ ಮಹಾದೇವರು ನಮಸ್ಕಾರ ಮಾಡಲಿಲ್ಲವೆಂದು ಶಿವನ ಮೇಲೆ ಸಿಟ್ಟಾದನು. ನಾನು ಮಾವನಾಗಿದ್ದು, ಅಳಿಯನಾದ ಶಿವನು ತನಗೆ ವಂದಿಸಲಿಲ್ಲವೆಂಬುದು ಆತನ ಸಿಟ್ಟಿಗೆ ಕಾರಣ. ಮಹಾಜ್ಞಾನಿಗಳಾದ ಮಹಾದೇವರ ಕೃತಿಯ ಇಂಗಿತವನ್ನು ತಿಳಿದುಕೊಳ್ಳದೆ, ದಕ್ಷನು ವಿಪರೀತ ತಿಳುವಳಿಕೆಯನ್ನು ಮಾಡಿಕೊಂಡು

ಅನರ್ಥಕ್ಕೆ ಗುರಿಯಾದನು. ಆದುದರಿಂದ ಶ್ರೇಯಸ್ಸನ್ನು ಬಯಸುವವರು, ಪಕ್ವ ಭಕ್ತರಾದ ಜ್ಞಾನಿಗಳ ಲೋಕವಿಲಕ್ಷಣ ನಡೆ-ನಡವಳಿಗಳ ಬಗ್ಗೆ ತಪ್ಪುತಿಳುವಳಿಕೆಯನ್ನು (ಅನ್ಯಥಾ ಮತಿಯನ್ನು) ಎಂದಿಗೂ ಮಾಡಕೂಡದು.

**||೩೪೬|| ಶ್ರಿಯಾ ವಿಭೂತ್ಯಾಭಿಜನೇನ ವಿದ್ಯಯಾ**
**ತ್ಯಾಗೇನ ರೂಪೇಣ ಬಲೇನ ಕರ್ಮಣಾ |**
**ಜಾತಸ್ಮಯೇನಾಂಧಧಿಯಃ ಸಹೇಶ್ವರಾ-**
**ನ್ಸತೋಽವಮನ್ಯಂತಿ ಹರಿಪ್ರಿಯಾನ್ ಖಲಾಃ || ೧೧-೫-೯**

ಚಮರಸನೆಂಬ ಋಷಿಯು ವಿದೇಹ ರಾಜನಿಗೆ ಹೇಳಿದ ಮಾತಿದು.

ಪಕ್ವ ಭಕ್ತಿಯ ಜ್ಞಾನಿಗಳ ನಡೆ ನಡವಳಿಗಳ ಬಗ್ಗೆ ವಿಪರೀತ (ಸಲ್ಲದ) ತಿಳುವಳಿಕೆಯನ್ನು ಮಾಡಿಕೊಳ್ಳುವದರಿಂದ ಶ್ರೀಹರಿಯ ಕೋಪವುಂಟಾಗಿ (ನರಕಾದಿ) ಕೆಡಕು ಒದಗುವದು. ಆದುದರಿಂದ, ಅಂಥ ತಪ್ಪು ತಿಳುವಳಿಕೆಯನ್ನು ಎಂದಿಗೂ ಮಾಡಕೂಡದೆಂದು ಕೊನೆಯದಾಗಿ ಎಚ್ಚರಿಸುವರು.

**ಅರ್ಥ:-** (ಶ್ರಿಯಾ) ಅಂದವಾದ ಮೈಬಣ್ಣದಿಂದ, ಸಂಪತ್ತಿನಿಂದ, ಉತ್ತಮ ಕುಲದಲ್ಲಿ ಹುಟ್ಟಿ ಬಂದಿರುವದರಿಂದ, ಪಾಂಡಿತ್ಯ, ದಾನ ಮಾಡುವುದರಿಂದ, ಚೆಲುವಿನಿಂದ, ದೇಹಶಕ್ತಿಯಿಂದ, ಒಳ್ಳೇ ಕೃತಿಗಳನ್ನು ಮಾಡುವದರಿಂದ, -ಇವುಗಳಿಂದ ಒದಗುವ ಸೊಕ್ಕಿನಿಂದ ತಮ್ಮ ಬುದ್ಧಿ (ವಿವೇಕ ಶಕ್ತಿ)ಯನ್ನು ಕುರುಡಾಗಿ ಮಾಡಿಕೊಂಡವರು (ಶಾಸ್ತ್ರದಲ್ಲಿ ಹೇಳಿದುದನ್ನೆಲ್ಲ ಕಣ್ಮರೆಯಾಗಿ ಮಾಡಿಕೊಂಡವರು) ಅಂತೆಯೆ (ಖಲರು) ದುರ್ಜನರಾದವರು, -ಶ್ರೀಹರಿಗೆ ಪ್ರೀತ್ಯಾಸ್ಪದರಾದ ಭಗವದ್ಭಕ್ತರನ್ನು ಹೀಯಾಳಿಸುವರು. ಶ್ರೀ (ಸಹೇಶ್ವರಾನ್) ಶ್ರೀಹರಿ ಭಕ್ತರನ್ನು ಹೀಯಾಳಿಸುವದೆಂದರೆ, ಪ್ರತ್ಯಕ್ಷ ಶ್ರೀಹರಿ ನಿಂದೆಯನ್ನೇ ಮಾಡುವಂತಾಗುವದು. ಏಕೆಂದರೆ, ಪರಮ ಭಗವದ್ಭಕ್ತರಾದ ಶ್ರೀಹರಿಯ ಉಪಾಸಕರು ತಮಗೆ ಮಾಡುವ ಅಪನಿಂದೆಯನ್ನು ತಮ್ಮ ಅಂತರ್ಯಾಮೀ ಬಿಂಬರೂಪ ಪರಮಾತ್ಮನಿಗೇನೆ ಸಮರ್ಪಿಸಿಬಿಡುವರು. ಆದುದರಿಂದ, ಭಾಗವತರ ನಿಂದೆಯು ಶ್ರೀಹರಿ ಕೋಪಕ್ಕೆ ಕಾರಣವಾಗುವದರಿಂದ ಶ್ರೇಯೋಭಿಲಾಷಿಗಳು ಹಾಗೆ ಎಂದಿಗೂ ಮಾಡಬಾರದು.

ಅನ್ಯಥಾಮಥ್ಯಕರಣ ಪ್ರಕರಣ ಮುಗಿಯಿತು.



I ೫೬೬

# ಶ್ರೀ ಗುರುವಿಚಾರ ಪ್ರಕರಣ

॥೩೪೭॥ ನೈವೋಪಯಂತ್ಯಪಚಿತಿಂ ಕವಯಸ್ತವೇಶ-
ಬ್ರಹ್ಮಾಯುಷಾಪಿ ಕೃತಮೃದ್ಧಮುದಃ ಸ್ಮರಂತಃ । ಉದ್ಧವ ಶ್ರೀಕೃಷ್ಣನಿಗೆ
ಯೋಽಂತರ್ಬಹಿಸ್ತನುಭೃತಾಮಶುಭಂ ವಿಧುನ್ವ-
ನ್ನಾಚಾರ್ಯಚೈತ್ಯವಪುಷಾ ಸ್ವಗತಿಂ ವ್ಯನಕ್ತಿ ॥ ೧೧-೨೯-೬

ಉದ್ಧವನು ಶ್ರೀ ಕೃಷ್ಣನಿಗೆ ಮಾಡಿದ ವಿಜ್ಞಾಪನೆ :-

ಹಿಂದೆ ಹೇಳುವ ರೀತಿಯಲ್ಲಿ ಬಿಂಬೋಪಾಸನೆಯನ್ನು ನಿರಂತರವಾಗಿ ನಿಷ್ಠೆಯಿಂದ ಮಾಡುವದರಿಂದ ಪಕ್ವಭಕ್ತಿಯು ಅಭಿನುವದು. ಪಕ್ವಭಕ್ತಿಯಿಂದ ಅಂತರ್ಯಾಮಿ ಬಿಂಬರೂಪ ಪರಮಾತ್ಮನ ಸಾಕ್ಷಾತ್ಕಾರ (ಅಪರೋಕ್ಷ) ವಾಗುವದು. ಗುರು ಸ್ವರೂಪನಾದ ಭಗವಂತನ ಪರಮಾನುಗ್ರಹವಿಲ್ಲದೆ, ಬಿಂಬದ ಸಾಕ್ಷಾತ್ಕಾರವು ಎಂದಿಗೂ ಆಗುವದಿಲ್ಲವೆಂಬುದನ್ನು ತಿಳಿಸಿ ಹೇಳುವದೇ ಈ ಪ್ರಕರಣದ ವಿಷಯವಾಗಿದೆ.

ಇಲ್ಲಿ ಒಂದು ಸಂದೇಹ :- ಸಾಮಾನ್ಯತಃ ಬ್ರಹ್ಮೋಪದೇಶವನ್ನು ಮಾಡುವ ಒಬ್ಬ ಗುರುವಿನ ಬಗ್ಗೆ ಹೇಳಿದ್ದಾಗಿದೆ. ಆ ಗುರುವಿನಲ್ಲಿ ಭಕ್ತಿಯನ್ನು ಮಾಡಿ, ಆತನ ಅನುಗ್ರಹವನ್ನು ಪಡೆದುದಾಗಿದೆ. ಅದೇ ಮೇರೆಗೆ, ಬ್ರಹ್ಮೋಪದೇಶವನ್ನು ವಿಶಿಷ್ಟ ರೂಪದಲ್ಲಿ ಉಪದೇಶ ಮಾಡುವ ಗುರುವಿನ ಬಗ್ಗೆಯೂ ಹಿಂದೆ ಹೇದ್ದಾಗಿದೆ ವಿಶೇಷವಾದ ಬ್ರಹ್ಮೋಪದೇಶವನ್ನು ಮಾಡುವ ಗುರುವಿನಲ್ಲಿಯೂ ಭಕ್ತಿಯನ್ನು ವಹಿಸಿ, ಆತನಿಂದ ಬಿಂಬೋಪದೇಶವನ್ನು ಪಡೆದು, ಬಿಂಬರೂಪ ಶ್ರೀ ಹರಿಯ ಆರಾಧನೆಯನ್ನು ಮಾಡಿ, ವಿಶಿಷ್ಟವಾದ ಪಕ್ವಭಕ್ತಿಯನ್ನು ಸಂಪಾದಿಸಿಕೊಂಡಿರುವ ಸಾಧಕನಿಗೆ ಗುರುವಿನ ಅನುಗ್ರಹವು ತನ್ನಷ್ಟಕ್ಕೆ ತಾನೆ ದೊರಕಲೆ ಬೇಕಲ್ಲವೆ ? ಹೀಗಿರಲು ( ಬಿಂಬಸಾಕ್ಷಾತ್ಕಾರಕ್ಕೆ ) ಗುರುವಿನ ಅನುಗ್ರಹವನ್ನು ಪಡೆಯಲೇ ಬೇಕೆಂದು ( ಪ್ರತ್ಯೇಕವಾಗಿ ) ಮತ್ತೇಕೆ ಇಲ್ಲಿ ಹೇಳುವಿರಿ ? ಸಾಧಕನಿಗೆ ಇಬ್ಬರೇಗುರುಗಳು, ಸಾಮಾನ್ಯ ಬ್ರಹ್ಮೋಪದೇಶಮಾಡುವವನು ಒಬ್ಬನಾದರೆ, ವಿಶಿಷ್ಟ ಬ್ರಹ್ಮೋಪದೇಶವನ್ನು ಮಾಡುವವನು ಮತ್ತೊಬ್ಬನು. ಇವರಿಬ್ಬರನ್ನು ಬಿಟ್ಟು ಸಾಧಕನಿಗೆ ಬೇರೊಬ್ಬ ಗುರು ಇರುವದಿಲ್ಲ. ಅಂಥ ಬೇರೊಬ್ಬ ಗುರು ಇರುವದಾದರೆ, ಅವನ ಅನುಗ್ರಹವನ್ನೂ ಪಡೆಯಬೇಕೆಂದು ಹೇಳುವದಕ್ಕಾಗಿ ಈ ಪ್ರಕರಣವನ್ನು ಪ್ರಾರಂಭಿಸುವದು ಸರಿಯಾಗುತ್ತಿತ್ತು.

ಎಂದು ಶಂಕೆಯನ್ನು ಮಾಡುವವರಿಗೆ ಉತ್ತರವನ್ನು ಹೇಳುವರು. ಸಾಮಾನ
ಹಾಗೂ ವಿಶೇಷ ಬ್ರಹ್ಮೋಪದೇಶಕರಲ್ಲದೆ, ಬೇರೊಬ್ಬ ಮೂರನೆಯ ಗುರುವ
ಇರುವನು. ಮೊದಲಿನ ಇಬ್ಬರು ಗುರುಗಳು ಅಸಾಧಾರಣ ಗುರುಗಳು. ಮೂರನೆ
ಗುರು ಸಾಧಾರಣ ಗುರು. ಆತನ ಅನುಗ್ರಹವಿಲ್ಲದೆ, ಬಿಂಬರೂಪದ ಸಾಕ್ಷಾತ
ರವು ಆಗದು. ಈ ಮೂರನೆಯ ಗುರುವಿನ ಬಗ್ಗೆ ವಿವೇಚಿಸುವದೇ ಈ ಪ್ರಕ
ಣದ ವಿಷಯವಾಗಿದೆ. ಇದುವೆ ಈ ಪ್ರಕರಣದ ಪ್ರಯೋಜನವಾದುದರಿಂ
ಅದು ಸಮಂಜಸವಾಗಿದೆ. ಈಗ್ಗೆ ತಿಳಿಯಿತು. – ಮೊದಲು ಹೇಳಿರುವ ಇಬ್ಬ
ಗುರುಗಳು – 'ಅಸಾಧಾರಣ ಗುರುಗಳು' – (ಎಲ್ಲರಿಗೂ ಅನ್ವಯಿಸುವ ಗುರುಗಳ
ಅವರಲ್ಲ). ಇವರಿಬ್ಬರಲ್ಲದೆ ( ಎಲ್ಲರಿಗೂ ಅನ್ವಯಿಸುವ ) 'ಸಾಧಾರಣ' ಗು
ಗಳಿಬ್ಬರು ಬೇರೆಯಾಗಿರುವರು. ಹೇಗೆಂದರೆ, ಬ್ರಹ್ಮದೇವರಿಂದ ಉಪದೇಶ ಪಡೆ
ನಂತರವೆ ಮುಕ್ತಿ ಯಾಗುವದೆಂಬುದು ಸಾರಿಸಾರಿ ಹೇಳಿದ ಮಾತು. ಅದುದರಿಂ
ಮುಕ್ತಿಗೆ ಪೂರ್ವದಲ್ಲಿ ಉಪದೇಶಕರಾದ ಬ್ರಹ್ಮದೇವರು, ಒಬ್ಬರನ್ನೂ ಬಿಡದೆ ಎ
ಸಾಧಕರಿಗೂ ಅನ್ವಯಿಸುವ ಇಬ್ಬರು ಸಾಧಾರಣ ಗುರುಗಳಲ್ಲಿ ಒಬ್ಬರು, ಎರ
ನೆಯ ಸಾಧಾಧಾರಣ ಗುರು ಭಗವಂತನೇ ಆಗಿರುವನು, ಜಗದ್ಗುರುವೆಂದ
ಆತನು ವಿಖ್ಯಾತನಾಗಿರುವನು. ಅಧ್ಯಾತ್ಮ ಪ್ರಕರಣದಲ್ಲಿ ಭಗವಂತನೆ ಜಗದ್ಗುರ
ವೆಂಬುದನ್ನು ವಿವರಿಸಲಾಗಿದೆ.

ಹೀಗಿದ್ದರೂ ಈ ಮಾತು (ದುರ್ಘಟವೇ), ಅತೀವ ಕಠಿಣವೆಂದೇ ತೋರ
ವದು. ಈ ಬಗ್ಗೆ ಉಪನಿಷತ್ತಿನಲ್ಲಿ ಒಂದು ಕಥೆ ಇದೆ :– ದೇವದಾನವರ ಕಾಳ
ದಲ್ಲಿ, ದೇವತೆಗಳಿಗೆ ಅಂತರ್ಯಾಮಿಯಾಗಿ ನಿಂತು ಶ್ರೀ ಹರಿಯು ಅವರಿಗೆ ಗೆಲ
ವನ್ನು ತಂದುಕೊಟ್ಟನು. ( ತಮಗೆ ಗೆಲುವನ್ನು ತಂದುಕೊಟ್ಟವನು ಶ್ರೀ ಹ
ಯೆಂಬುದನ್ನು ದುರ್ಲಕ್ಷಿಸಿ ) ದೈತ್ಯರನ್ನು ತಮ್ಮ ಸ್ವಂತದ ಬಲದಿಂದಲೆ ತಾ
ಗೆದ್ದೆವೆಂಬ ಗರ್ವವು ದೇವತೆಗಳಲ್ಲಿ ಉಂಟಾಯಿತು. ದೇವತೆಗಳಿಗೆ ಉಂಟಾದ ಈ
ಗರ್ವವನ್ನು ಕಳೆಯಬೇಕೆಂದು ಶ್ರೀ ಹರಿಯು ಯಕ್ಷರೂಪವನ್ನು ಧರಿಸಿಕೊಂಡ
ಬ್ರಹ್ಮಾದಿದೇವತೆಗಳೊಡನೆ ಅಲ್ಲಿಗೆ ಬಂದನು. ಯಕ್ಷರೂಪನಾದ ಪರಮಾತ್ಮ
ನನ್ನು ಅರಿತುಕೊಳ್ಳಲು (ತದ್ವೇದನಾಯ) ಇಂದ್ರನು ಅಗ್ನಿಯನ್ನು, ವಾಯುವನ್ನು
ಬ್ರಹ್ಮಾದಿಗಳಿರುವಲ್ಲಿಗೆ ಕಳಿಸಿಕೊಟ್ಟನು. ಅವರಿಬ್ಬರೂ ( ಅಗ್ನಿ–ವಾಯುಗಳು )
ಈ ಕಾರ್ಯವನ್ನು ಮಾಡಲು ಶಕ್ತರಾಗಲಿಲ್ಲ. ಅದನ್ನು ಕಂಡು ಸ್ವಯಂ ಇಂದ್ರನೆ
ಅಲ್ಲಿಗೆ ಬಂದನು. ಇಂದ್ರನೇ ಬಂದದ್ದನ್ನು ತಿಳಿದುಕೊಂಡು ಇಂದ್ರನಿಗೆ (ಪರಮಾ
ತ್ಮನನ್ನು ಅರಿತುಕೊಳ್ಳಲು] ಬ್ರಹ್ಮೋಪದೇಶಮಾಡಲು [ ರುದ್ರಪತ್ನಿ ] ಉಮಾ

ದೇವಿಯೆ ಯೋಗ್ಯರಾದವಳೆಂದು, ಉಮಾದೇವಿಯನ್ನೆ ತನ್ನ ಸ್ಥಾನದಲ್ಲಿ ನಿಲ್ಲಿಸಿ, ಯಕ್ಷರೂಪನಾದ ಶ್ರೀ ಹರಿಯು ಬ್ರಹ್ಮ-ಧುವ್ರರೊಡನೆ ಅಲ್ಲಿಯೇ ಅದೃಶ್ಯನಾದನು ಇಂದ್ರನಿಗೆ ರುದ್ರನಿಂದ, ಬ್ರಹ್ಮನಿಗೆ ಶ್ರೀ ಹರಿಯಿಂದ ಸಾಕ್ಷಾತ್ ಉಪದೇಶವನ್ನು ಪಡೆಯಲು ಅಪಾತ್ರತೆ ಇರುತ್ತಿರಲು, ಉಳಿದೆಲ್ಲ ಸಾಧಕರು ಶ್ರೀ ಹರಿಯಿಂದ ಸಾಕ್ಷಾತ್ ಉಪದೇಶ ಪಡೆಯಲು ಅಪಾತ್ರರು [ಯೋಗ್ಯತೆ ಇಲ್ಲದವರು] ಎಂದು ಬೇರೆ ಬಿಡಿಸಿ ಹೇಳಬೇಕಿಲ್ಲ. ಬ್ರಹ್ಮೋಪದೇಶದ ವಿಷಯವು ಸುಗಮವಾದ ಸಾಮಾನ್ಯ ಜ್ಞಾನವಾದುದಲ್ಲ. ಇಂದ್ರಾದಿಗಳಿಗೆ ಬ್ರಹ್ಮದೇವರಾಗಲಿ, ಅಥವಾ ನಾರದಾದಿ ಮಹರ್ಷಿಗಳಾಗಲಿ ಆಗಾಗ್ಗೆ [ ಸಮಯಾನುಸಾರವಾಗಿ ] ಮಾಡುತ್ತಿರುವ ಉಪದೇಶಕ್ಕಿಂತಲೂ ಬ್ರಹ್ಮೋಪದೇಶವು ಅತೀವ ಉನ್ನತ ಮಟ್ಟದ್ದಾಗಿರುವದು, ಅದು ಅಸಾಮಾನ್ಯವಾದುದು. ನಾರದಾದಿಗಳು ಸಾಮಾನ್ಯ ವಿಷಯಗಳ ಬಗ್ಗೆ ಇಂದ್ರಾದಿಗಳಿಗೆ ಉಪದೇಶಮಾಡುವದು ಯುಕ್ತವಾಗಿದೆ. ಆದರೆ ಬಿಂಬಸ್ವರೂಪದ ಜ್ಞಾನವನ್ನು [ಸಾಧಕನಿಗೆ] ಮಾಡಿಕೊಡುವ ಬ್ರಹ್ಮೋಪದೇಶವು ಅತೀವ ರಹಸ್ಯದ ವಿಷಯವಾಗಿದೆ. ಏಕೆಂದರೆ, ಭವಬಂಧನದಿಂದ ಬಿಡುಗಡೆ ಹೊಂದಲು ಬ್ರಹ್ಮೋಪದೇಶವು ಸಾಕ್ಷಾತ್ ನೇರವಾದ ದಾರಿಯಾಗಿದೆ. ಆದುದರಿಂದ ಈ ಬಗೆಯ ಗುಹ್ಯತಮ ( ಅತಿಗೂಢ ) ವಾದ ಉಪದೇಶವನ್ನು ಸ್ವಯಂ ಶ್ರೀ ಹರಿಯಾಗಲಿ, ಬ್ರಹ್ಮದೇವರಾಗಲಿ, ಅಲ್ಪ ಯೋಗ್ಯತೆಯುಳ್ಳ ಸಾಮಾನ್ಯ ಮಾನವ ಸಾಧಕನಿಗೆ ಮಾಡುವರೆಂದು ಹೇಳುವದು ಸಮಂಜಸನಿವೆಸದು. ಆದುದರಿಂದ ಅವರಿಗೆ ಇಂಥ ಬ್ರಹ್ಮೋಪದೇಶವು ದುಸ್ಸಾಧ್ಯ – ಅಪ್ರಾಪ್ಯವೆಂತಲೆ ತೋರುವದು. ಇದಲ್ಲದೆ, ಶ್ರೀ ಹರಿ ಹಾಗೂ ಬ್ರಹ್ಮದೇವರು ಏಕಕಾಲಕ್ಕೆ ಉಪದೇಶ ಮಾಡುವರೆ ? ಅಥವಾ ಮೊದಲು – ಹಿಂದುಗಡೆಯೆಂಬ ಕ್ರಮದಿಂದ ಮಾಡುವರೆ ? ಮೊದಲು ಉಪದೇಶ ಮಾಡುವದರು ಯಾರು ? ಶ್ರೀ ಹರಿಯೋ. ಇಲ್ಲವೆ ಬ್ರಹ್ಮದೇವರೊ ? ಬ್ರಹ್ಮೋಪದೇಶವು ಹೇಗೆ ನಡೆಯುವದು ? ಇವೆಲ್ಲ ಪ್ರಶ್ನೆಗಳಿಗೆ ಇಲ್ಲಿ ಉತ್ತರವನ್ನು ಹೇಳುವರು.

**ಅರ್ಥ** :– (ನೈವೇತಿ):– ಪ್ರಭುವೆ ! ಉದ್ಧವನ ಮಾತುಗಳು) ಬ್ರಹ್ಮೋಪದೇಶಕನಾದ ಬ್ರಹ್ಮನು (ಸಾಧಕನಿಗೆ) ಚಿತ್ತಾಭಿಮಾನಿಯಾಗಿ (ಆತನ) ಚಿತ್ತದಲ್ಲಿ ನೆಲೆಸಿರುವನು. (ಬ್ರಹ್ಮನು ಆಚಾರ್ಯ ಚೈತ್ಯನು) ಭಗವಾನ್, ನೀನು ಸಕಲ ಜೀವರ ಚಿತ್ತದಲ್ಲಿ, ವಾಸುದೇವನೆಂಬ ಹೆಸರಿನ ರೂಪದಿಂದ ಬ್ರಹ್ಮದೇವರಲ್ಲಿ ಅಂತರ್ಯಾಮಿಯಾಗಿ ( ಆಚಾರ್ಯ ಚೈತ್ಯ ವಪುಷಾ ) ನೆಲೆಸಿರುವಿ. ಹೀಗೆ ನೆಲೆಸಿಕೊಂಡು, ಮಾನವ ಶರೀರಧಾರಣಮಾಡಿದ ಅಧಿಕಾರಿಗಳು ಮನಸ್ಸಿನಿಂದ, ಮಾತಿ

ನಿಂದ, ಕೃತಿಯಿಂದ ಮಾಡುವ, ಬ್ರಹ್ಮಜ್ಞಾನಕ್ಕೆ ಆತಂಕವಾಗಿರುವ ಮೂ
ವಿಧವಾದ ಪಾಪಗಳನ್ನು ದೂರಮಾಡಿ (ನಾಶಮಾಡಿ) ಸ್ವಬಿಂಬರೂಪದ ಜ್ಞಾ
ವನ್ನು ಅವರಿಗೆ ನೀನು ಮಾಡಿಕೊಡುವಿ. ಮೂರು ಬಗೆಯ ಪಾಪಗಳನ್ನು ಸ್ವ
ಗೊಳಿಸಿ ಸ್ವಬಿಂಬರೂಪದ ಜ್ಞಾನವನ್ನು ಮಾಡಿಕೊಡುವದರಲ್ಲಿ ನೀನು ಮಾಡು
ಈ ಮಹದುಪಕಾರವನ್ನು ಬ್ರಹ್ಮಾದಿಗಳೂಕೂಡ ನಿನಗೆ ಎಂಥ ಪೂಜೆಯನ
ಸಲ್ಲಿಸಿಯಾದರೂ ತೀರಿಸಲಾರರು. ಹೀಗಿದ್ದರೂ ಭಗವದ್ಭಕ್ತರು ಮಾಡಲೇ
ಕಾದ ಒಂದು ಕರ್ತವ್ಯವೆಂದರೆ, (ಬ್ರಹ್ಮಾಂತರ್ಯಾಮಿಯಾಗಿ ಚಿತ್ತದಲ್ಲಿ ನೆಲಿ
ಪಾಪಗಳನ್ನೆಲ್ಲ ಪರಿಹರಿಸಿ, ಬ್ರಹ್ಮೋಪದೇಶವನ್ನು ಮಾಡುವ ಪರಮಾತ್ಮ
ಅನಂತ ಉಪಕಾರವನ್ನು ಹೆಚ್ಚು ಹೆಚ್ಚುತ್ತಿರುವ ಆನಂದದಿಂದ, ಅವರು ಸರ್ವ
ನೆನೆಯುತ್ತಿರಬೇಕು. ತಾನು ಪ್ರತಿಯಾಗಿ ಏನನ್ನೂ ಅಪೇಕ್ಷಿಸದೇ, ಅನಿಮಿ
ಬಂಧುವಾಗಿ ಭಕ್ತರಿಗೆ ಶ್ರೇಯಸ್ಸನ್ನು ತಂದುಕೊಡುವ ಪರಮಾತ್ಮನ ಈ ಮಹ
ಪಕಾರವನ್ನು ಭಕ್ತಿ-ಕೃತಜ್ಞತೆಗಳಿಂದ ಸ್ಮರಿಸುವದು ಭಗವದ್ಭಕ್ತರ ಕರ್ತ
ವಾಗಿದೆ.

ಒಟ್ಟು ಅಭಿಪ್ರಾಯವೆಂದರೆ, ಅಧಿಕಾರಿಗಳಾದವರಿಗೆ (ಪಾತ್ರತೆ ಉಳ್ಳವರಿ
ಮಾತ್ರ, ಶ್ರೀ ಹರಿ ಹಾಗೂ ಬ್ರಹ್ಮದೇವರಿಂದ ಬಿಂಬಸ್ವರೂಪದ ಜ್ಞಾನವು ಆಗಿಯೆ
ಆಗುವದು. ನೀವು ಹೇಳುವಂತೆ, ಅದು ದುಃಸಾಧ್ಯವಾದುದಲ್ಲ. ಏಕೆಂದ
ಶ್ರೀ ಹರಿಯಾಗಲಿ, ಬ್ರಹ್ಮನಾಗಲಿ ತಮ್ಮ ರೂಪದಿಂದ ಬಹಿರಂಗವಾಗಿ ಬಿಂ
ಬಿಂಬೋಪದೇಶ ಮಾಡುವರೆಂಬುದು ನಮ್ಮ ಅಭಿಪ್ರಾಯವಾಗಿಲ್ಲ, ಹಾಗೆ ಮಾ
ವದು ದುಃಸಾಧ್ಯವೆಂದು ನಾವು ಒಪ್ಪಿಕೊಳ್ಳುವೆವು. ಚಿತ್ತದಲ್ಲಿ ಅಂತರ್ಯಾ
ಮಿಯಾಗಿ ನೆಲಿಸಿ ಪರೋಕ್ಷ (ನಮ್ಮ ಕಣ್ಣಿಗೆ ಕಾಣದಂತೆ) ವಾಗಿ ಉಪದೇಶವ
ಅವರು ಮಾಡುವರೆಂಬುದು ಒಪ್ಪತಕ್ಕ ಮಾತಾಗಿರುವದು. ಅವರು ಹೀಗೆ ಮಾ
ದಿದ್ದರೆ, ಬ್ರಹ್ಮೋಪದೇಶದಿಂದಲೇ ಮುಕ್ತಿಯೆಂಬ ಸಿದ್ಧಾಂತವು ಅಸಮಂಜಸ
ಅರ್ಥಹೀನವಾಗಿ ಬಿಟ್ಟೀತು. ಚತುರ್ಮುಖ ಬ್ರಹ್ಮನಲ್ಲಿ ವಾಸುದೇವ ನಾಮ
ಶ್ರೀ ಹರಿಯು ಅಂತರ್ಯಾಮಿಯಾಗಿರುವನು. ಆತನು ಮಹತ್ ತತ್ವದ
ಪ್ರವೇಶಿಸುವನು. ಆತನೇ ಮಹತ್ ತತ್ವವಾದ ಚಿತ್ತಕ್ಕೆ ಅಭಿಮಾನಿಯಾಗಿರುವ
ಬ್ರಹ್ಮನಲ್ಲಿ ಅಂತರ್ಯಾಮಿಯಾಗಿ ನಿಂತು ಸಕಲ ಜೀವಿಗಳ ಚಿತ್ತಕ್ಕೆ ನಿಯಾಮ
ನಾಗಿ ಚಿತ್ತವೆಂಬ ಹೆಸರಿನಿಂದಲೆ ಕರೆಯಿಸಿಕೊಳ್ಳುವನು. ಚಿತ್ತನಾಮ
ಶ್ರೀ ಹರಿಯೇ ಚಿತ್ತವನ್ನು ನಿಯಂತ್ರಿಸಿ, ಭಕ್ತರಿಗೆ ಸ್ವಬಿಂಬರೂಪದ ದರ್ಶನವನ್ನ
ಮಾಡಿಸುವನು. ಆದುದರಿಂದ, ಸಾಧಕರಾದ ಸಕಲ ಭಕ್ತರಿಗೂ ಶ್ರೀ ಹರಿಯ
'ಸಾಧಾರಣ ಗುರು' ಎನಿಸುವನು. ಆದರಂತೆ ಬ್ರಹ್ಮನು ಶ್ರೀ ಹರಿಗೆ ಅಧಿಷ್ಠಾ

ವಾಗಿರುವದರಿಂದ, ಬ್ರಹ್ಮನೂ ಇನ್ನೊಬ್ಬ ಸಾಧಾರಣ ಗುರುವೆನಿಸುವನು. ಈ ರೀತಿಯಲ್ಲಿ ಶ್ರೀ ಹರಿಯೂ ಚತುರ್ಮುಖ ಬ್ರಹ್ಮನೂ (ಬ್ರಹ್ಮೋಪದೇಶಕ್ಕಾಗಿ) ಇಬ್ಬರೂ 'ಸಾಧಾರಣ ಗುರುಗಳು' ಎನಿಸುವರು; ಮೊದಲು ಹೇಳಿಕೊಟ್ಟ ಸಾಮಾನ್ಯ ಹಾಗೂ ವಿಶಿಷ್ಟ ಜ್ಞಾನಗಳನ್ನು ಮಾಡಿಕೊಡುವ ಇಬ್ಬರು ಗುರುಗಳು 'ಅಸಾಧಾರಣ ಗುರುಗಳು' ಆದುದರಿಂದ ಶ್ರೀ ಹರಿ-ಬ್ರಹ್ಮರಿಂದ ಉಪದೇಶವಾಗು ವದು ದುಸ್ಸಾಧ್ಯ ಸಂಗತಿಯೆನಿಸದು.

ಅಥವಾ, 'ಹಶೌಗುಶೌ ... ಗುರ್ವಾತ್ಮದೈವತಃ', ಹಾಗೂ 'ತತ್ರ ಭಾಗವ ತಾನ್ ....ಗುರ್ವಾತ್ಮದೈವತಃ' ಗುರುವಾಗಿರುವ ಶ್ರೀ ಹರಿಯಾದ ನನ್ನಲ್ಲಿ, ಏಕಾಂತ ಭಕ್ತಿಯಿಂದ, ಹಾಗೂ ಆತ್ಮಗುರುವಾದ ಪರಮಾತ್ಮನಿಂದ ಭಾಗವತ ಧರ್ಮಗಳನ್ನು ತಿಳಿದುಕೊಳ್ಳಬೇಕು'. ಎಂದು ಹೇಳಿರುವಲ್ಲಿ ಶ್ರೀ ಹರಿಗೂ-ಗುರು ತ್ವಕ್ಕೂ ಏಕರೂಪತೆಯು ತೋರಿಸಲ್ಪಟ್ಟಿದೆ. ಇದು ಹೇಗೆ ? ಎಂದು ಕೇಳಿದರೆ (ನೈವೇತಿ)-ಸಕಲ ಜೀವಿಗಳ ಚಿತ್ತವೃತ್ತಿಗೆ ನಿಯಾಮಕನಾಗಿರುವದರಿಂದ ವಾಸು ದೇವನಾಮಕನಾದ, ಪರಮದೈವತನಾದ ಶ್ರೀ ಹರಿಗೆ ಗುರುತ್ವವು ಏಕರೂಪವಾಗಿ ಹೊಂದಿಕೊಳ್ಳುವದು. ಆದುದರಿಂದ ಶ್ರೀ ಹರಿಯೆ ಗುರುವೆಂಬ ಐಕ್ಯವು ಸರಿಯಾ ಗಿರುವದು. ಇದೇ ಅಭಿಪ್ರಾಯದಿಂದಲೆ ಮೇಲೆ ಉದಹರಿಸಿದ ವಾಕ್ಯಗಳಲ್ಲಿ ಶ್ರೀ ಹರಿಗೂ-ಗುರುತ್ವಕ್ಕೂ ಐಕ್ಯವನ್ನು ಹೇಳಿರುವರು. 'ಅಧ್ಯಾತ್ಮಕ ಪ್ರಕರಣ' ದಲ್ಲಿ ಶ್ರೀ ಹರಿಗೆ ಗುರುತ್ವದ ಸಂಬಂಧವನ್ನು ಜೋಡಿಸಿದ್ದಾದರೂ ಇದೇ ಅಭಿಪ್ರಾ ಯದಿಂದಲೇ ಎಂಬುದು ಸ್ಪಷ್ಟವಾಗುವದು.

'ಗುರುವಿಚಾರ' ಪ್ರಕರಣವು ಮುಗಿಯಿತು.



 ೭ ಸ್ಲೋಕಗಳು

# ೨೭- ಅಪರೋಕ್ಷ ಪ್ರಕರಣ

ಶುಕರು

||೩೮|| **ಯಸ್ಯ ಸ್ವರೂಪಂ ಕವಯೋ ವಿಪಶ್ಚಿತೋ**
**ಗುಣೇಷು ಯೋನಿಷ್ವಿವ ಜಾತವೇದಸಂ |**
**ಮಥ್ನಂತಿ ಮಥ್ನಾ ಮನಸಾ ದಿದೃಕ್ಷವೋ**
**ಗೂಢಂ ಕ್ರಿಯಾರ್ಥೈರ್ನಮ ಈರಿತಾತ್ಮನೇ ||** ೫-೧೮-೩೬

ಶ್ರೀ ಹರಿಯ ಮಹಿಮೆಯನ್ನು ವರ್ಣಿಸುವಾಗ್ಗೆ, ಬಿಂಬರೂಪ ಪರಮಾತ್ಮ ಸಾಕ್ಷಾತ್ಕಾರವು ಸಾಧಕರಿಗೆ ಹೇಗೆ ಆಗುವದೆಂಬುದನ್ನು ಶ್ರೀ ಶುಕ ನಿರೂಪಿಸುವರು.

ಮೇಲೆ ಹೇಳಿದ ರೀತಿಯಲ್ಲಿ ಯಥಾಯೋಗ್ಯ ಗುರುವಿನ ಅನುಗ್ರಹವನ ಪಡೆಯುವದರಿಂದ ಬಿಂಬ ಸಾಕ್ಷಾತ್ಕಾರವಾಗುವದು, ಎಂಬ ಅಭಿಪ್ರಾಯದಿಂ ಅದನ್ನು ಹೇಳಿರುವರು.

**ಅರ್ಥ** :- (ಯಸ್ಯ ಇತಿ) :- ಆಧ್ಯಾತ್ಮ ಸಾಧನೆಯಲ್ಲಿ ಪೂರ್ಣ ಶ್ರ ಯುಳ್ಳ ಜ್ಞಾನಿಗಳು ( ಸತ್ವಾದಿ ಗುಣಗಳ ಕಾರ್ಯದಿಂದ ಒದಗುವ ) ಮಾನ ದೇಹಗಳಲ್ಲಿ ಇದ್ದುಕೊಂಡು ಬಿಂಬರೂಪ ಪರಮಾತ್ಮನ ಸಾಕ್ಷಾತ್ಕಾರ ಮಾ ಕೊಳ್ಳುವ ಅಪೇಕ್ಷೆಯುಳ್ಳವರಾಗಿ, ಮನಸ್ಸಿನಿಂದ – (ಧ್ಯಾನ, ಚಿಂತನ ಮುಂತಾ ವಿಚಾರರೂಪ ಸಾಧನದಿಂದ) ಪರಮಾತ್ಮನ ಸ್ವರೂಪದ ಬಗ್ಗೆ ಧ್ಯಾನ-ಚಿಂತನರೂ ವಾದ ವಿಚಾರವನ್ನು (ನಿಷ್ಠಾ-ಭಕ್ತಿ-ಏಕಾಗ್ರತೆಗಳಿಂದ) ನಿರಂತರವಾಗಿ ಮಾ ವರು. ಯಜ್ಞಕಾರ್ಯದಲ್ಲಿ ಕಟ್ಟಿಗೆಯೊಳಗಿನ ಗುಪ್ತವಾದ ಅಗ್ನಿಯನ್ನು, (ಅ ಯನ್ನು ಹೊತ್ತಿಸುವ) ಕಟ್ಟಿಗೆಯ ಸಾಧನದಿಂದ ಮಂಥನದಲ್ಲಿ (ಕಡೆಯುವದರಿಂ ಉತ್ಪಾದಿಸುವಂತೆ, ತಮ್ಮ ವಿಚಾರರೂಪ ಮಂಥನದಿಂದ (ಅಂತರ್ಯಾಮಿಯಾ ದ್ದರೂ (ಅಗೋಚರ) ಗೂಢನಾಗಿದ್ದುದರಿಂದ ಇದುವರೆಗೆ ತಾವು ಅರ್ಚಿಸದಿರು ಬಿಂಬರೂಪ ಪರಮಾತ್ಮನ ಸಾಕ್ಷಾತ್ಕಾರವನ್ನು ಮಾಡಿಕೊಳ್ಳುವರು. (ಮನಸ್ಸು ಮಾತ್ಮನ ಬಗ್ಗೆ ವಿಚಾರ ಮಾಡುವದಾದರೂ ಪರಮಾತ್ಮನ ಪ್ರೇರಣೆಯಿಂದ ವಿಚಾರ ಮಾಡಲು ಮನಸ್ಸಿಗೆ ಪ್ರೇರಕನಾಗಿರುವ ಪರಮಾತ್ಮನಿಗೆ ಪ್ರಣಾಮಗಳ

ಯಜ್ಞಾದಿ ಕರ್ಮಗಳಲ್ಲಿ ತುಪ್ಪ, ಬತ್ತರಳು ಮುಂತಾದ ಪೂಜಾದ್ರವ್ಯಗಳ ವಿಧಾನಪೂರ್ವಕವಾಗಿ ಅರ್ಪಿಸಿ ಪೂಜೆಗೊಳ್ಳುವ ಅಗ್ನಿಯನ್ನು ಕಾಣಲು ಮ ಕಾರ್ಯದಲ್ಲಿ ಕುಶಲರಾದ ಋತ್ವಿಜರು ಉತ್ಸುಕರಾಗಿರುವರು. ಅದೇ ರೀತಿ

ತಮ್ಮ ಪ್ರಾಕೃತ (ಸತ್ವಾದಿ ಗುಣ ನಿರ್ಮಿತ) ದೇಹದಲ್ಲಿ ಅಂತರ್ನಿಯಾಮಕನಾಗಿ (ಗುಪ್ತನಾಗಿರುವ) ಬಿಂಬರೂಪ ಪರಮಾತ್ಮನನ್ನು ವಿಚಾರರೂಪವಾದ ಮಂಥನ ದಿಂದ ಸಾಕ್ಷಾತ್ಕರಿಸಿಕೊಳ್ಳಲು ಆಧ್ಯಾತ್ಮನಿಷ್ಠರಾದ ಜ್ಞಾನಿಗಳೂ ಉತ್ಸುಕರಾಗಿರು ವರು. ಇಲ್ಲಿ ಒಂದು ಸಂದೇಹ-ಪ್ರಾಕೃತ ವಸ್ತುವಾಗಿದ್ದು, ಕಣ್ಣಿಗೆ ಕಾಣುವ ರೂಪ ವುಳ್ಳ ಅಗ್ನಿಯನ್ನು ಕಾಣಬಯಸುವವರು ಅದನ್ನು ಕಾಣಬಹುದು. ಆದರೆ ಪರಮಾ ತ್ಮನು ಅಪ್ರಾಕೃತನು. ಪ್ರಾಕೃತ-ಪಾಂಚಭೌತಿಕ (ಪೃಥ್ವೀ, ನೀರು ಮುಂತಾದ) ಪದಾರ್ಥಗಳ ಸಂಬಂಧವು ಆತನಿಗೆ ಇರುವದಿಲ್ಲ ಪರಮಾತ್ಮನಿಗೆ (ಇಂಥದೇ ಎಂಬ ನಿರ್ದಿಷ್ಟ, ಒಂದೇ ರೂಪವಿರುವದಿಲ್ಲ). ಈ ಬಗೆಯ ಅಪ್ರಾಕೃತ ಪರಮಾತ್ಮನ ರೂಪವನ್ನು ನೋಡಲು ಹೇಗೆ ಶಕ್ಯವಿದೆ ?- ಉತ್ತರವೆಂದರೆ, - ಪರಮಾತ್ಮನನ್ನು ನಾವು ಮನಸ್ಸಿನಿಂದಲೆ ನೋಡುವೆವು, (ಚಿಂತನೆಯಿಂದ) ಅಂತರಂಗದಲ್ಲಿಯೆ ಆತನು ಪ್ರಕಟನಾಗುವನು. ಪರಮಾತ್ಮನನ್ನು ಕಾಣಬೇಕೆಂಬ ಅಪೇಕ್ಷೆ ಈ ಮೊದಲೇ ಇರುತಿರಲು, ಅದಕ್ಕಾಗಿ ಈಗೇಕೆ ಯತ್ನಮಾಡಬೇಕಾಗುತ್ತದೆ ? ಯತ್ನ ಮಾಡುವ ದಿದ್ದರೆ, ಈ ಮೊದಲೇ ಯತ್ನಮಾಡಲು ಶಕ್ಯವಿತ್ತು. ನೀವು ಹೇಳುವದು ಸರಿ! ಆದರೆ ಯತ್ನ ಮಾಡುವ ಸ್ವಾತಂತ್ರ್ಯವು (ಅಸ್ವತಂತ್ರರಾದ) ಜೀವಿಗಳಿಗೆ ಇದ್ದರೆ ಮೊದಲೆ ಯತ್ನಮಾಡಬಹುದಿತ್ತು. ಆದರೆ ಜೀವನಿಗೆ ಅಂಥ ಸ್ವಾತಂತ್ರ್ಯವೇ ಇರುವದಿಲ್ಲ. 'ದಿದೃಕ್ಷಾ' ನೋಡಲು ಮಾಡುವ ಪ್ರಯತ್ನ. ನೋಡುವದು ಕೇಳುವದು-ಮುಂತಾದ ಕ್ರಿಯೆಗಳಲ್ಲಿ ಮನಸ್ಸು ಪ್ರವರ್ತಿಸುವಂತೆ ಮಾಡಲು, ಪರಮಾತ್ಮನ ಪ್ರೇರಣೆಯೆ ಕಾರಣವಾಗಿರುವದು. ಈ ಅಭಿಪ್ರಾಯದಿಂದಲೆ, 'ಮನಸ್ಸಿಗೆ ಪ್ರೇರಕನಾದ ಶ್ರೀ ಹರಿಗೆ ಪ್ರಣಾಮಗಳು' ಎಂದು ಹೇಳಿರುವರು. ವಿಚಾರ ಮಾಡಲು ಪರಮಾತ್ಮನಿಂದ ಪ್ರೇರಿತವಾದ ಮನಸ್ಸಿನಿಂದ ಬಿಂಬದ ಸಾಕ್ಷಾತ್ಕಾರವಾಗುವದು - ಎಂದು ಹೇಳಿದೆ.

॥೩೪॥ ದ್ರವ್ಯಕ್ರಿಯಾಹೇತ್ವಯನೇಶಕರ್ತೃಭಿ-
ರ್ಮಾಯಾಗುಣೈರ್ವಸ್ತುನಿರೀಕ್ಷಿತಾತ್ಮನೇ ।
ಅನ್ವೀಕ್ಷಯಾಂಗಾತಿಶಯಾತ್ಮಬುದ್ಧಿಭಿ-
ರ್ನಿರಸ್ತಮಾಯಾಕೃತಯೇ ನಮೋ ನಮಃ ॥ ೫-೧೮-೩೭

(ಅಪ್ರಾಕೃತ) ಬಿಂಬರೂಪ ಪರಮಾತ್ಮನ ದರ್ಶನವು (ಪ್ರಾಕೃತರಾದ ನಮಗೆ ಹೇಗೆ ಆದೀತು - ಎಂಬ ಸಂದೇಹದಿಂದ, ಬಿಂಬರೂಪದ ಸಾಕ್ಷಾತ್ಕಾರ ಕ್ಕಾಗಿ, ಹಾಗೂ ಅದರ ಸಾಧನೆಗಾಗಿ (ಹೆದರಿಕೆಯಿಂದ) ತಡಮಾಡಕೂಡದು. ಎಂಬ ಅಭಿಪ್ರಾಯದಿಂದ ಹೀಗೆ ಹೇಳುವರು.

ಅರ್ಥ :- (ದ್ರವ್ಯೇತಿ):- ಬಿಂಬಸಾಕ್ಷಾತ್ಕಾರಕ್ಕೆ, ಮಂಥನದಿಂದ ಜನಿಸು ಅಗ್ನಿಯ ಸಾದೃಶ್ಯ (ಉದಾಹರಣೆ) ಯನ್ನು ಕೊಟ್ಟ ಮಾತ್ರಕ್ಕೆ, ಅಗ್ನಿಯಂತೆ ಬಿಂಬರೂಪವು ಪ್ರಾಕೃತ ರೂಪವುಳ್ಳದ್ದೆಂದು ಸರ್ವಥಾ ತಿಳಿಯಕೂಡದು. ಬಿ ರೂಪವು ಗೂಢ (ಅಂತರ್ಹಿತ) ವಾಗಿದೆ, [ಅಗೋಚರವಾಗಿದೆ]. [ವಿಚಾರರೂ ಮಂಥನದಿಂದ, [ಅಗ್ನಿಯಹಾಗೆ] ಅದು ಪ್ರಕಟವಾಗುತ್ತದೆ – ಈ ಸಂಗತಿಗಳ ಸೂಚಿಸುವದಕ್ಕಾಗಿ ಮಾತ್ರ (ಮಂಥನದಿಂದ ಪ್ರಕಟನಾಗುವ) ಅಗ್ನಿಯ ದೃಷ್ಟಾ ವನ್ನು (ಹೋಲಿಕೆಯನ್ನು) ಇಲ್ಲಿ ಹೇಳಿದೆ. ಅದಕ್ಕೆ ಪ್ರತಿಯಾಗಿ, ಬಿಂಬರೂ ಪಾಂಚಭೌತಿಕವಾದುದಾಗಿಲ್ಲ, ಅದು ಅಪ್ರಾಕೃತವಾದ (ಅಲೌಕಿಕವಾದ) ಮೂರ್ತಿಯಾಗಿದೆ, ( ಪ್ರಾಕೃತವಸ್ತುವಿನಲ್ಲಿ ಇರುವ ) ಸಕಲದೋಷಗಳಿಂದ ಅದು ದೂರ (ರಹಿತ) ವಾಗಿದೆ, ಬಿಂಬರೂಪವನ್ನು ನಮ್ಮ ಚರ್ಮಚಕ್ಷು (ಹೊ ಗಿನ ಕಣ್ಣು) ವಿನಿಂದ ನೋಡಲಾರೆವು. ಅದರ ದರ್ಶನಕ್ಕೆ ಮನಸ್ಸೊ (ಧ್ಯಾನ-ಚಿಂತನ ಮುಂತಾದ ಮನೋವ್ಯಾಪಾರಗಳೇ) ಏಕಮೇವ ಸಾಧನಗಳಾ ಎಂಬ ಅಭಿಪ್ರಾಯವನ್ನೇ ಇಲ್ಲಿ ಹೇಳಿರುವರು. (ನಿರಸ್ತಮಾಯಾಕೃತ ಶಾಶ್ವತವಾಗಿ (ಎಂದೆಂದಿಗೂ) ಪ್ರಾಕೃತ ವಸ್ತುವಿನ ದೋಷಗಳಿಂದ ಸುತ ರಹಿತವಾದುದು, ಇಂಥ ಬಿಂಬರೂಪಕ್ಕೆ ನಮೋನಮಃ, ಎಂದು ಹೇಳಿರು ಈ ವಿಶೇಷಾರ್ಥಕ್ಕಾಗಿಯೆ.

ಬಿಂಬರೂಪದ ಸಾಕ್ಷಾತ್ಕಾರವು ಅಶಕ್ಯವೆಂಬ ಭೀತಿಯನ್ನು (ಸಂದೆ ವನ್ನು) ಬಿಟ್ಟುಕೊಡಲು –ಕಾರಣವನ್ನೂ ಹೇಳುವರು. ಬಿಂಬರೂಪ ದ ವನ್ನು ಪಡೆಯುವವರೆ ಇಲ್ಲವೆಂದು ತಿಳಿಯಬೇಡಿ. ಅಂಥವರು ಅನೇಕರಿರು ಅವರಾದರೂ ನಮಗೆ ತಿಳಿಯದಂತೆ ಅಜ್ಞಾತರಾಗಿ ಎಲ್ಲಿಯೋ ದೂರದ ನಿತ್ಯ ಬಿಂಬಾಪರೋಕ್ಷಿಗಳಾದ ಅನುಕ್ತ ತತ್ತ್ವಾಭಿಮಾನಿಗಳಾದ ದೇವತೆ ಈ ನಮ್ಮ (ಪ್ರಾಕೃತ) ದೇಹದಲ್ಲಿಯೆ ನೆಲೆಸಿರುವರು. ಆದುದರಿಂದ ಬಿಂಬಾಪ ಕ್ಷವು ಹೇಗೆ ಆದೀತೆಂದು ಚಿಂತೆಯಿಂದ ಭಯಪಡಬಾರದು. (ದ್ರವ್ಯ, ಕ್ರಿ ಹೇತು, ಅಯನು) ದ್ರವ್ಯಕ್ಕೆ (ಈಶ) ಅಭಿಮಾನಿಯು ಶಂಕರನು, ಕ್ರಿಯೆಗೆ ಡನು, ಹೇತುವಿಗೆ ಬ್ರಹ್ಮನು, ಅಯನ (ಸ್ಥಾನ) ಕ್ಕೆ ವಾಯು –ಇವರೆಲ್ಲ ತತ ಮಾನಿಗಳಾದ ದೇವತೆಗಳು. ಈ ದೇವತೆಗಳು ಯಾವ ಪ್ರಯೋಜನಕ್ಕಾಗಿ ನೆ ವರು? ಎಂದರೆ, ಮಾಡುವ ದೇಹದ(ವ್ಯಾಪಾರ)ಕ್ರಿಯೆಗಳೆಲ್ಲ ಅವರ ಮುಖಾಂತ ನಡೆಯುವವು. ಈ ಕೃತಿಗಳಿಂದ ಲಭಿಸುವ ಪುರುಷಾರ್ಥವೇ ಅವರಿಗೆ ಪ್ರಯೊ (ಲಾಭ)ವಾಗಿದೆ. ಏಕೆಂದರೆ ದ್ರವ್ಯ, ಕ್ರಿಯಾ, ಹೇತು ಹಾಗೂ ಅಯನ (ಸ

ಗಳಿಗೆ ಅವರು ಒಂದೊಂದಕ್ಕೆ ಸ್ವಾಮಿಗಳಾಗಿರುವರು. ಹಾಗೂ ಅವುಗಳಿಂ ಕಾರ್ಯ ಮಾಡಿಸುವರೂ ಆಗಿರುವರು. ಹಾಗಿದ್ದರೆ, ಈ ತತ್ವಾಭಿಮಾನಿ ದೇವತೆ ಗಳೂಕೂಡ ಭಗವಂತನಂತೆಯೆ ಅಪ್ರಾಕೃತ ಶರೀರ ಉಳ್ಳವರೆ? -ಎಂದರೆ, ಸರ್ವಥಾ ಆಗಿಲ್ಲವೆಂದು ಉತ್ತರ. ಭಗವಂತನೊಬ್ಬನೇ ಅಪ್ರಾಕೃತನು ಉಳಿದವರೆಲ್ಲರೂ ಪ್ರಾಕೃತ ಶರೀರವುಳ್ಳವರು. ಅಂತೆಯೆ, 'ಮಾಯಾಗುಣೈಃ' ಪ್ರಕೃತಿಯ (ಸತ್ವಾದಿ ಗುಣಗಳಿಂದ) ಯುಕ್ತರಾದವರು ಎಂದು ಉಳಿದ ದೇವತೆಗಳ ಬಗ್ಗೆ ಹೇಳಿರುವರು. ಇದು ಮಾತ್ರವಲ್ಲದೆ, (ದೇಹದಲ್ಲಿ ನೆಲೆಸಿ ಭಗವದಾಜ್ಞೆಯಿಂದ) ಅವರು ಮಾಡುವ ಕಾರ್ಯಕ್ಕೆ ಅವರಿಗೆ ದೊರೆಯುವ ಪ್ರತಿಫಲವು (ನಮಗೆ ದೊರೆಯುವದಕ್ಕಿಂತಲೂ) ಅತ್ಯಧಿಕವಾದುದು, ಅಸಾಮಾನ್ಯವಾದುದು. ಏಕೆಂದರೆ, ಮಾಡುವ ಸಾಧನೆಯ ಹೆಚ್ಚುಕಡಿಮೆ ಪ್ರಮಾಣಕ್ಕೆ ಅನುಗುಣವಾಗಿ, (ಅದಕ್ಕೆ ತಕ್ಕಂತೆ) ದೊರೆಯುವ ಪ್ರತಿ-ಫಲವೂ ಹೆಚ್ಚು ಕಡಿಮೆಯಾಗಿರುವದು. ಉದಾಹರಣೆಗಾಗಿ, ಹದವರಿತು ಹಾಗೂ ಬೇಸಾಯದ ಕ್ರಿಯೆಗಳನ್ನೆಲ್ಲ ಸರಿಯಾಗಿ ಮಾಡಿಕೊಂಡು ಬೀಜಬಿತ್ತುವ ಒಕ್ಕಲಿಗನಿಗೆ (ಉಳಿದವರಿಗಿಂತಲೂ) ಅಧಿಕ ಫಲ ದೊರೆಯುವಂತೆ ತತ್ವಾಭಿಮಾನಿ ದೇವತೆಗಳಿಗೂ ಅತ್ಯಧಿಕ, ಅಸಾಧಾರಣ ಫಲ ದೊರೆಯುವದು. ಏಕೆಂದರೆ, (ಸಾಮಾನ್ಯರಾದ) ನಮಗಿಂತಲೂ ಅತ್ಯಧಿಕವಾದ ಭಕ್ತಿ ಶ್ರದ್ಧೆಗಳಿರುವವು. ಅಪರೋಕ್ಷ ಪ್ರಾಪ್ತಿಗಾಗಿ ಅವರು ನಮಗಿಂತಲೂ ಅತ್ಯಧಿಕ ಶ್ರದ್ಧೆ ಭಕ್ತಿಗಳಿಂದ ಸಾಧನವನ್ನು ಮಾಡುವರು. ಹೀಗಿರುವದರಿಂದ, ಬಿಂಬಾಪರೋಕ್ಷವನ್ನು ಪಡೆದಿರುವ ಅನೇಕ ಜ್ಞಾನಿಗಳ ಉದಾಹರಣೆಗಳು ನಮ್ಮ ಮುಂದಿರಲು ಬಿಂಬಾಪರೋಕ್ಷದ ಪ್ರಾಪ್ತಿಗಾಗಿ, ಅದನ್ನು ನಿಜವಾಗಿ ಬಯಸುವರೆಲ್ಲರೂ, ಭಕ್ತಿ ಶ್ರದ್ಧೆಗಳಿಂದ ಕೂಡಿಕೊಂಡು ನಿಶ್ಶಂಕರಾಗಿ, ಸಂದೇಹದ ಭಾವನೆಯಿಲ್ಲದಲೇ ಸಮುಚಿತವಾದ ಸಾಧನೆಯನ್ನು ಮಾಡಬೇಕು. ಎಂಬುದೇ ಈ ಶ್ಲೋಕದ ಆಶಯವಾಗಿದೆ. ನಾಶರಹಿತನೂ, ವಿಕಾರ ಶೂನ್ಯನೂ ಆದ ಶ್ರೀಹರಿಯು ಸರ್ವಥಾ ಅಗೋಚರನಾಗಿಲ್ಲ. ತನ್ನ ಇಚ್ಛೆಯಿಂದಲೆ ಮಾತ್ರ ಸಾಧಕರಿಗೆ ಕಾಣಿಸಿಕೊಳ್ಳುವನು. ಅನುಕ್ತ ತತ್ವಾಭಿಮಾನಿ ದೇವತೆಗಳು ನಮ್ಮ ದೇಹದಲ್ಲಿ ನೆಲಿಸಿ, ಕರ್ಮ ಪ್ರೇರಕರಾಗಿದ್ದರೂ ನಿತ್ಯಾಪರೋಕ್ಷಿಗಳಾಗಿ, ಪರಮಾತ್ಮನ ದಿವ್ಯ ರೂಪವನ್ನು ನೋಡುತ್ತಿರುವರು.



# ೨೮. ಗುಣನಿವೃತ್ತಿ ಪ್ರಕರಣ

||೩೫೦|| ಅವಿದ್ಯಮಾನೋಽಪ್ಯವಭಾತಿ ಹಿ ದ್ವಯೋ
ರ್ಧ್ಯಾತುರ್ಧಿಯಾ ಸ್ವಪ್ನಮನೋರಥೋ ಯಥಾ |
ತತ್ಕರ್ಮಸಂಕಲ್ಪವಿಕಲ್ಪಕಂ ಮನೋ
ಬುಧೋ ನಿರುಂಧ್ಯಾದಭಯಂ ತತಃ ಸ್ಯಾತ್ || ೧೧-೨-೩೮

ನಿಮಿರಾಜನಿಗೆ, ಕವಿಯೆಂಬ ಹೆಸರಿನ ಋಷಿಗಳು ಹೇಳಿದ ಉಪದೇಶ.

(ಹಿಂದೆ ಹೇಳಿದ ರೀತಿಯಲ್ಲಿ) ಬಿಂಬರೂಪ ಪರಮಾತ್ಮನ ಸಾಕ್ಷಾತ್ಕಾ[ರ]ವನ್ನು ಪಡೆದು, ಪರಮಾತ್ಮನಲ್ಲಿ ದಿನದಿನವೂ ಭಕ್ತಿಯನ್ನು ಹೆಚ್ಚುಹೆಚ್ಚಾಗಿ ಬೆಳೆ[ಸಿ]ಕೊಳ್ಳುವ ಅಧಿಕಾರಿಯಾದ ಸಾಧಕನಿಗೆ, ಸತ್ವಾದಿ ಗುಣಗಳ ಬಂಧನರೂಪವಾ[ದ] ಸಂಸಾರದಿಂದ ಬಿಡುಗಡೆಯು ಉಂಟಾಗುವದು, ಅದೇಮುಕ್ತಿಯು. ಈ ಮುಕ್ತಿಯು ಯಾವ ರೀತಿಯಿಂದ ದೊರೆಯುವದೆಂಬುದರ ವಿಚಾರವೇ ಈ ಪ್ರಕರಣ[ದ] ವಿಷಯವಾಗಿದೆ.

ನಿಜವಾಗಿಯೂ ಯೋಗ್ಯ ಜೀವನು, ದೋಷವಿಲ್ಲದ ಜ್ಞಾನಾನಂದ ಸ್ವರೂಪನು. ಜ್ಞಾನ-ಆನಂದಾದಿಗಳೆ ಜೀವನ ಸ್ವರೂಪ. ಹೀಗಿದ್ದರೂ, ಅಜ್ಞಾನ ಮಿಥ್ಯಾಜ್ಞಾನಗಳು ಜೀವನ ಈ ಸ್ವರೂಪವನ್ನು ಹೊರಗಿನಿಂದ ಮುಚ್ಚಿಬಿಡುವವು. ಇವೇ ಜೀವನ ಸ್ವರೂಪಕ್ಕೆ ಹೊರಗಿನ ಆಚ್ಛಾದಿಕ (ಮುಸುಕು) ಆಗಿರುವವು. ಅಜ್ಞಾನ-ವಿಪರೀತ ಜ್ಞಾನಗಳಿಗೆ ಸತ್ವಾದಿ ಮೂರು ಗುಣಗಳಿಂದ ಕೂಡಿದ ಪ್ರಕೃತಿಯೆ ಜನಕವಾಗಿದೆ, ನೆಲೆಯಾಗಿದೆ. ಭಗವದಿಚ್ಛಾರೂಪವಾದ ಪ್ರಕೃತಿಗೇ[] ಮಾಯಾ, ಅವಿದ್ಯಾ, ಪ್ರಕೃತಿ ಮುಂತಾದ ಬೇರೆ ಹೆಸರುಗಳು. ತ್ರಿಗುಣಾತ್ಮ[ಕ] ಪ್ರಕೃತಿಯು ಭಗವದಿಚ್ಛೆಯಿಂದ ಜೀವನ (ನಿಜವಾದ) ಸ್ವರೂಪವನ್ನು ಅಡಗಿಸಿ ವಾಸನಾತ್ಮಕವಾದ ಮನಸ್ಸಿನಿಂದಲೆ ಸಕಲ ಕಾರ್ಯಗಳನ್ನು ಮಾಡಿಸುತ್ತದೆ. ಆದುದರಿಂದ ಸಂಸಾರದ ಅನೇಕ ಮುಖವಾದ ಆಡಂಬರಗಳಿಗೆ, ಚಟುವಟಿಕೆಗಳಿ[ಗೆ] ವಾಸನಾತ್ಮಕ ಮನಸ್ಸೇ ನೆಲೆಯಾಗಿದೆ, ಮೂಲ ಕಾರಣವಾಗಿದೆ. ಅದು ಹೇಗೆಂದ[ರೆ] ಭಗವತ್ತತ್ವವನ್ನು (ಭಗವಂತನ ಸರ್ವಕರ್ತೃತ್ವ, ಸರ್ವ ಸ್ವಾಮಿತ್ವವನ್ನು) ತಿಳಿದ[ು]ಕೊಳ್ಳದೆ, ಸಕಲ ಕರ್ಮಗಳನ್ನು ಭಗವಂತನೆ ಮಾಡಿಸುವನು, ಮನೆ, ಮಡ[ದಿ] ಮುಂತಾದ ಸಕಲ ವಸ್ತುಗಳಿಗೂ ಭಗವಂತನೇ ಒಡೆಯನು, ಎಂಬುವದರ ಪರಿಜ್ಞಾನವಿಲ್ಲದೆ, ಅನುಸಂಧಾನವಿಲ್ಲದೆ, ತನ್ನ ಶರೀರ, ಇಂದ್ರಿಯಗಳು – ಮುಂತಾ[ದ]

ವಿಷಯಗಳ ಬಗ್ಗೆ 'ನನ್ನವು, ನಾನೇ ಒಡೆಯನು, ನಾನೇ ಮಾಡುವವನು,' ಎಂಬ ಸಟೆಯಾದ ಅಭಿಮಾನವನ್ನು (ಪ್ರಕೃತಿಯ ಮುಸುಕಿನಿಂದ) ಜೀವನು ತಾಳುವನು. ಸತ್ವಾದಿ ಗುಣಗಳು (ತಮ್ಮ ಸಮತೂಕವನ್ನು ಕಳೆದುಕೊಂಡು) ಹೆಚ್ಚುಕಡಿಮೆ ಯಾಗಿ ಕೂಡಿಕೊಳ್ಳಲು, (ನಾನು ಮಾಡುವವನು, ನನ್ನದು) ಎಂಬ ಮಮಕಾರ ಅಹಂಕಾರಗಳು ಜನಿಸುವವು. ಸತ್ವಾದಿ ಗುಣಗಳು ಚಿತ್ತವೃತ್ತಿಯಲ್ಲಿ (ಮನಸ್ಸಿನ ಲ್ಲಿಯೆ) ಪ್ರಕಟವಾಗುವವು. ( ಹರಿಕರ್ತೃತ್ವದ ಅನುಸಂಧಾನವಿಲ್ಲದೆ ) ಪ್ರವೃತ್ತ ಧರ್ಮದಲ್ಲಿ ಧರ್ಮ, ಅರ್ಥ, ಕಾಮ ಈ ಪುರುಷಾರ್ಥಗಳನ್ನು ದೊರಕಿಸಲು ಕೈಕೊಳ್ಳುವ ಕಾಯಿಕ (ದೇಹದಿಂದ), ವಾಚಿಕ ( ವಾಕ್‌ದಿಂದ ), ಮಾನಸಿಕ ( ಮನಸ್ಸಿನಿಂದ ) ಮಾಡುವ ಸಕಲ ಕಾರ್ಯಗಳಿಗೆಲ್ಲ ಮಮಕಾರ, ಅಹಂಕಾರಗಳೆಂಬ ಅಭಿಮಾನಗಳೇ ಕಾರಣವಾಗುವವು. ಸತ್ವ, ರಜ, ತಮ, ( ಪ್ರಕೃತಿಯ ) ಈ ಮೂರು ಗುಣಗಳಲ್ಲಿ, ಯಾವುದೇ ಒಂದು ಗುಣವು ಪ್ರಬಲವಾದರೆ, ಉಳಿದೆರಡು ಗುಣಗಳನ್ನು ಹತ್ತಿಕ್ಕಿ ತನಗೆ ಸಹಜವಾಗಿರುವ ಕಾರ್ಯವನ್ನೇ ಅದು ಮಾಡುವದು. ಸತ್ವಗುಣವು ಊರ್ಜಿತವಾದ ಕಾಲದಲ್ಲಿ ತನ್ನಿಂದ ಭಿನ್ನವಾಗಿರುವ ಉಳಿದೆರಡು ( ರಜ, ತಮ ) ಗುಣಗಳನ್ನು ಹತ್ತಿಕ್ಕಿ (ಪ್ರತಿಬಂಧಿಸಿ) ಪರಮಾತ್ಮನಿಗೆ ಅಭಿಮತವಾದ ನಿವೃತ್ತಧರ್ಮ ಮುಂತಾದ ಸದ್ವಿಷಯಗಳಲ್ಲಿ ಸದಭಿಲಾಷೆಯನ್ನು ಹುಟ್ಟಿಸುವದು. ಚಿತ್ತ ವೃತ್ತಿಯನ್ನು ಪ್ರಶಾಂತಗೊಳಿಸುವದು. ದುರ್ವಿಷಯಗಳ ಬಗೆ ಆಸಕ್ತಿಯನ್ನು ತೆಗೆದುಹಾಕು ವದು. ಜ್ಞಾನ ಹಾಗೂ ಸುಖ ಸಮಾಧಾನಗಳನ್ನು ತಂದುಕೊಡುವದು. ರಜೋ ಗುಣವು ಊರ್ಜಿತವಾಗಲು, ಉಳಿದೆರಡು ( ಸತ್ವತಮ ) ಗುಣಗಳನ್ನು ತಡೆ ಹಿಡಿದು ಲೌಕಿಕ ಸಂಪತ್ತು ಹಾಗೂ ಕೀರ್ತಿಗಳಿಗಾಗಿ ಅದು ಹಂಬಲವನ್ನು ಹುಟ್ಟಿಸುವದು. ಸಂಕಲ್ಪ ವಿಕಲ್ಪಗಳಿಂದ (ಅದೋ-ಇದೋ ಎಂಬ ಸಂಶಯಾ ತ್ಮಕ ಭಾವನೆಯಿಂದ) ಮನಸ್ಸಿನಲ್ಲಿ ವಿಕಾರವನ್ನು ಉಂಟುಮಾಡುವದು, ಮನ ಸ್ಸನ್ನು ಕದಡಿಬಿಡುವದು. ತಮೋಗುಣವು ಊರ್ಜಿತವಾಗಲು, ಆಗ್ಗೆ ಉಳಿದೆ ರಡು (ಸತ್ವ-ರಜ) ಗುಣಗಳು ತಮ್ಮ ಕಾರ್ಯ ಮಾಡದಂತೆ, ತಡೆದು ನಿಲ್ಲಿಸಿ, ಗ್ಲಾನಿಯನ್ನುಂಟು ಮಾಡುವದು, ಯಾವುದನ್ನು ಮಾಡಬೇಕು. ಯಾವುದನ್ನು ಮಾಡಬಾರದು ಎಂಬ ಕರ್ತವ್ಯ ಬುದ್ಧಿಯನ್ನು ಮಂಕುಗೊಳಿಸುವದು. ಬಗೆಬಗೆಯ ಚಿಂತೆಗಳಿಗೆ ದಾರಿ ಮಾಡಿಕೊಡುವದು. ಆದುದರಿಂದ, ಈ ರೀತಿಯಲ್ಲಿ 'ನಾನು ಮಾಡುವೆನು' ಎಂಬ ಮಮಕಾರ ಅಹಂಕಾರ ಭಾವನೆಯಿಂದ, ಹಾಗೂ ರಾಗ ದ್ವೇಷಗಳಿಂದ ಮಾಡುವ ಸಕಲ ಕೃತಿಗಳು ಬಂಧಕವಾಗುವವು. ಬಂಧಕವಾದ ಕರ್ಮಫಲದಿಂದ, ಜನನ ಮರಣಗಳ ಚಕ್ರದಲ್ಲಿ ಸುತ್ತಾಡಿ ಅನೇಕ ಯೋನಿಗ

ಅಗಲಿಸುವಷ್ಟೇ ಈ ಕಾರ್ಯವು ಕಠಿಣವಾಗಿದೆ. ಹೀಗೆ ಹೇಳುವರು-"ಗುಣೇಷ್ವಾ ವಿಶತೆ ಚೇತೋ .. ಸಂತಿತೀರ್ಷತಿ" [೧೧-೧೩-೧೭]:- ಎಂದರೆ, (ಪ್ರಕೃತಿಯ 'ಸತ್ವ-ರಜ-ತಮ ಗುಣಗಳು ಚಿತ್ತದಲ್ಲಿ ಹಾಸು ಹೊಕ್ಕಾಗಿ ಒಳಸೇರುವವು ಚಿತ್ತವು ಈ ಗುಣಗಳಲ್ಲಿ ಒಳಸೇರುವದು. ಭವಸಾಗರವನ್ನು ದಾಟಿ ಮುಕ್ತಿಯನ್ನು ಬಯಸುವವನು ಚಿತ್ತ ಹಾಗೂ ಈ ತ್ರಿಗುಣಗಳ ಅನ್ಯೋನ್ಯ ಬೆಸುಗೆಯನ್ನು ಹೇಗೆ ಬಿಡಿಸಬಲ್ಲನು ?'

**ಅರ್ಥ** :- (ಅವಿದ್ಯಮಾನ:)-ಸ್ವಯಃ, ದ್ವಿತೀಯಃ (ಆತ್ಮನಿಂದ) ಭಿನ್ನವಾಗಿರುವ ದೇಹ, ಮನೆಮಾರುಗಳು, ಜೀವನಿಗೆ ನಿಜವಾಗಿಯೂ ತನ್ನದಾಗಿರುವದಿಲ್ಲ ತನ್ನವುಗಳೆಂದು ಆತನಿಗೆ ತೋರುವ ದೇಹ, ಮನೆಮಾರುಗಳು (ಧಿಯಾ) ಈಶ್ವರೇಚ್ಛೆಯಿಂದಲೆ ಆತನಿಗೆ ಪ್ರಾಪ್ತವಾದವುಗಳು. ಅವುಗಳಿಗೆಲ್ಲ ಪರಮಾತ್ಮನೆ ಸ್ವಾಮಿಯಾಗಿರುವದರಿಂದ, ಅವು ಪರಮಾತ್ಮನ ಒಡೆತನಕ್ಕೇನೆ ಸೇರಿದವುಗಳು. ಅವು ಜೀವನಿಗೆ ಸ್ವಕೀಯ (ತನ್ನವು) ಆಗಿರುವದಿಲ್ಲ; ಅವುಗಳ ಒಡೆತನವು (ಸ್ವೀಯತ್ವವು) ಜೀವನದಾಗಿರುವದಿಲ್ಲ. ಹೀಗಿದ್ದರೂ ಅವುಗಳೆಲ್ಲ ತನ್ನವುಗಳೆಂದು, ಅವುಗಳಿಗೆ ತಾನೇ ಒಡೆಯನೆಂದು ಜೀವಿಗೆ ಭ್ರಮೆಯಾಗುತ್ತದೆ, ಭಗವದಿಚ್ಛೆಯಿಂದಲೆ ನಿರ್ಮಿತವಾಗಿ, ಭಗವಂತನೇ ಒಡೆಯನಾಗಿರುವ ದೇಹ, ಮನೆಮಾರುಗಳಬಗ್ಗೆ, ಅವುಗಳೆಲ್ಲ ತನ್ನವು, ಅವುಗಳಿಗೆಲ್ಲ ತಾನೇ ಒಡೆಯನು, ಎಂಬಭಾವನೆಯು ಜೀವನಿಗೆ ಉಂಟಾಗಲು, ಕೇವಲ ಆತನ ಭ್ರಾಂತಿಯೆ (ಅಜ್ಞಾನದ ಕಲ್ಪನೆಯೆ) ಕಾರಣವಾಗಿದೆ. ಈ ಅಭಿಪ್ರಾಯವನ್ನೇ ಇಲ್ಲಿ ಹೇಳಿದ್ದಾಗಿದೆ.- (ಧ್ಯಾತು: ಅನ್ಯಥಾ) ತಾನು ಒಡೆಯನಾಗದಿರುವ ಹಾಗೂ ತನ್ನದು ಇಲ್ಲದಿರುವ (ಅವಿದ್ಯಮಾನ) ಮಡದಿ, ಮನೆಮಾರು ರೂಪವಾದ ಈ ಸಂಸಾರವನ್ನು ತಂದುಕೊಡುವ ಭ್ರಾಂತಿಯು ಜೀವನಿಗೆ ಬಹಳೇ ದುಃಖವನ್ನು ಏಕೆ ಉಂಟು ಮಾಡುವದು? ಎಂಬಪ್ರಶ್ನೆಗೆ,-( ಧಿಯಾ ಮನಸಾ ಏವ ) ಎಂಬುದೇ ಉತ್ತರವಾಗಿದೆ.-ತನ್ನ (ಸ್ವೀಯ) ದಾಗದ್ದನ್ನು ತನ್ನದೇ ಎಂದು ತಿಳಿಯುವ ಬುದ್ಧಿಯೆ ಮಹಾನ್ ದುಃಖಕ್ಕೆಕಾರಣವಾಗಿದೆ.-ಅಂಥ ದುಃಖವು ನಮಗೆ ಎಲ್ಲಿಕಂಡುಬರುವದು? ಎಂದರೆ, (ಸ್ವಪ್ನೇ)-ಕನಸಿನ ಅನುಭವದಲ್ಲಿ ಅಂಥ ದುಃಖವನ್ನು ನಾವು ಕಾಣುವೆವು.-ಉದಾಹರಣೆಗಾಗಿ, ಕನಸಿನಲ್ಲಿ ನಾವು ಕಾಣುವ ಕುದುರೆ, ರಥ ಮುಂತಾದವು ನಮ್ಮದಾಗಿರುವದಿಲ್ಲ, ಅವುನಮಗೆ ಸ್ವಾಧೀನವಾಗಿರುವದಿಲ್ಲ. ನಮ್ಮದಾಗಿರದ, ನಮ್ಮ ಸ್ವಾಧೀನವಾಗಿರದ ಕನಸಿನ ರಥ ಕುದುರೆಗಳಬಗೆ (ಕನಸಿನಲ್ಲಿಯೆ ಸಂಭವಿಸುವ ಅವುಗಳ ಏಳು ಬೀಳುಗಳ, ನಾಶನಷ್ಟಗಳ ಬಗ್ಗೆ) ನಾವು ಅವುಗಳೆಲ್ಲ ನಮ್ಮವೆಂಬ ಭ್ರಾಂತಿಯಿಂದ ಬಹಳೇ ದುಃಖಪಡುವೆವು.

ಸಮ್ಮತವಾಗಿರದ ಕೇವಲ ಕನಸಿನ ವಸ್ತುಗಳೇ ಇಷ್ಟೊಂದು ದುಃಖಪ್ರದವಾಗಿರಲು) ನಮ್ಮ ಸ್ವಾಮಿತ್ವ, ಆಧೀನತ್ವವಿಲ್ಲದ ಪ್ರಪಂಚದಲ್ಲಿಯ ಪ್ರತ್ಯಕ್ಷ ವಸ್ತುಗಳ ಬಗ್ಗೆ ನಮ್ಮವು ನಾವು ಒಡೆಯರು. ಎಂಬ ಭ್ರಾಂತಿಯಿಂದ (ಅಜ್ಞಾನದಿಂದ) ಅತೀವ ದುಃಖ ಉಂಟಾದರೆ ನಾವು ಆಶ್ಚರ್ಯ ಪಡಬೇಕಿಲ್ಲ. ಕನಸಿನಲ್ಲಿಯ (ವಾಸನಾಮಯ) ವಸ್ತುಗಳು ಪರಮೇಶ್ವರನಿಂದ ಸೃಷ್ಟ (ಉತ್ಪನ್ನ)ವಾದವು. ಅವುಗಳನ್ನು ಜಾಗೃದಾವಸ್ಥೆಯಲ್ಲಿಯ (ಎಚ್ಚರವಾದಾಗಿನ) ಸತ್ಯ ವಸ್ತುಗಳೆಂದು ತಿಳಿದು, ಅವುಗಳ ಬಗ್ಗೆ 'ನನ್ನವು, ನಾನು ಒಡೆಯನು' ಎಂಬ ಅಭಿಮಾನವನ್ನು ತಾಳುವದರಿಂದ ಜೀವನಿಗೆ ಇಷ್ಟೊಂದು ದುಃಖವಾಗುತ್ತಿರಲು, -ಜೀವನು ತಾನೇ ತನ್ನ ಕಲ್ಪನೆಯಿಂದ ಕಟ್ಟಿಕೊಂಡ ಕಾಲ್ಪನಿಕ ವಸ್ತುಗಳ (ಗಾಳಿ ಗೋಪುರಗಳ) ಬಗ್ಗೆ 'ನನ್ನವು' ಎಂಬ ಅಭಿಮಾನ ಮಾತ್ರದಿಂದ ಆತನಿಗೆ, ಸ್ವಾಪ್ನ ವಸ್ತುಗಳಂತೆ ಕಾಲ್ಪನಿಕ ವಸ್ತುಗಳ ಬಗ್ಗೆಯೂ (ಅಹಂಕಾರ, ಮಮಕಾರಗಳಿಂದ) ಅತೀವ ದುಃಖ ಉಂಟಾಗುವದೆಂಬುದನ್ನು (ಕಾಲ್ಪನಿಕ ವಸ್ತುಗಳ) ಬೇರೊಂದು ದೃಷ್ಟಾಂತದಿಂದ ಸೂಚಿಸುತ್ತಾರೆ. ಈ ದುಃಖಕ್ಕೆಲ್ಲ ಮನಸ್ಸೇ ಕಾರಣವು ಹೇಗೆ ? ಎಂಬುದನ್ನು ಸೂಚಿಸಲು, ಮನಸ್ಸು 'ಸಂಕಲ್ಪ ವಿಕಲ್ಪ' ವಾಗಿದೆ. ಎಂದು ಹೇಳಿರುವದು. 'ಈ ಕೆಲಸ ಮಾಡುವೆ, ಇನ್ನೊಂದನ್ನು ಬಿಡುವೆ' ಇತ್ಯಾದಿ ಸಂಕಲ್ಪ ವಿಕಲ್ಪಗಳನ್ನು ಕಟ್ಟಿಕೊಂಡು ಮನಸ್ಸು ಸಂಸಾರದ ಆಡಂಬರವನ್ನು ಹೂಡುವದು. ಸಂಕಲ್ಪ ವಿಕಲ್ಪಗಳ ಮನಸ್ಸಿನ ಕಾರ್ಯವೇ ಸಂಸಾರಕ್ಕೆ ನೆಲೆಯಾಗಿದೆ. ಮೂಲಾಧಾರವಾಗಿದೆ, ಎಂಬ ಸಂಗತಿಯು ಪ್ರಮಾಣ(ಶಾಸ್ತ್ರ) ಸಿದ್ಧವಾಗಿದೆ. 'ಹಿ' ಎಂಬುದರಿಂದ ಇದು ಸೂಚಿತವಾಗುತ್ತದೆ. ಸಂಸಾರಕ್ಕೆ ಜನಕವಾಗಿರುವುದೇ ಮನಸ್ಸು ಅಂತೆಯೆ ಮನಸ್ಸಿನ ವಿಷಯ ಹಾಗೂ ಕಾರ್ಯಗಳೆಲ್ಲ ಸಂಸಾರಕ್ಕೇನೆ ಸಂಬಂಧಿಸಿದವು.

ಆದುದರಿಂದ ಜ್ಞಾನಿ (ವಿವೇಕಿ) ಯಾದವನು, 'ನಾಹಂಕರ್ತಾ, ಶ್ರೀಹರಿಃ ಕರ್ತಾ', ಎಂಬ ಶ್ರದ್ಧೆಯಿಂದ ಸರ್ವಕರ್ತೃತ್ವ ಸ್ವಾಮಿತ್ವಗಳನ್ನು ಶ್ರೀಹರಿಯಲ್ಲಿ ಒಪ್ಪಿಸಬೇಕು. ಶ್ರೀಹರಿ ಪಾದದಲ್ಲಿ ತನ್ನ ಮನಸ್ಸನ್ನು ಸ್ಥಿರವಾಗಿ ನಿಲ್ಲಿಸಬೇಕು. ಸಂಸಾರಕ್ಕೆ ಮನಸ್ಸೇ ಕಾರಣವಾಗಿರುವದರಿಂದ, ಮನಸ್ಸನ್ನು ಶ್ರೀಹರಿ ಪಾದದಲ್ಲಿ ನಿಲ್ಲಿಸಿದರೆ, ಸಂಸಾರದ ಭೀತಿಯೆ ಇಲ್ಲದಂತಾಗುವದು.

ಒಟ್ಟಾರೆ ಹೀಗೆ ಹೇಳಿರುವದು:- ಸಂಸಾರದ ಆಡಂಬರಕ್ಕೆಲ್ಲ, ಮನಸ್ಸೇ ಮೂಲವಾಗಿರುವದು ದಿಟವಾಗಿದೆ. ಅದರಂತೆಯೆ, ಮನಸ್ಸು ವಿಷಯಗಳಲ್ಲಿ, ವಿಷಯಗಳು ಮನಸ್ಸಿನಲ್ಲಿ ತಳಕುಗೊಂಡಿರುವದೂ, ಅಷ್ಟೇ ಸತ್ಯ ಸಂಗತಿ. ಹೀಗಿ

ದ್ಧರೂ, ಮೋಕ್ಷಾಪೇಕ್ಷಿಯಾದ, ಭಗವದ್ಭಕ್ತನಾದ ಸಾಧಕನು (ಸಂಸಾರಕೆ
ಕಾರಣವಾಗಿರುವ)ಪ್ರಕೃತಿಯ ಮೂರು ಗುಣಗಳ ಬಂಧನದಿಂದ ಬಿಡುಗ
( ಮುಕ್ತಿ ) ಯನ್ನು ಪಡೆಯಬಲ್ಲನು. ಮನಸ್ಸು ಹಾಗೂ ವಿಷಯಗಳ
ಒಂದಕ್ಕೊಂದು ಬಿಗಿಯಾಗಿ ಅಂಟಿಕೊಂಡಿದ್ದರೂ, ಮನಸ್ಸು ಹಾಗೂ ವಿಷಯ
ಗಳೆರಡನ್ನೂ ಸರ್ವಸಮರ್ಪಣ ಭಾವದಿಂದ ಪರಮಾತ್ಮನಿಗೆ ಸಮರ್ಪಣ ಮಾ
ದರೆ, ಒಂದಕ್ಕೊಂದು ಕೀಲಿಸಿಕೊಂಡ ಮನಸ್ಸು ಹಾಗೂ ವಿಷಯಗಳನ್ನು ಬೇಪ
ಡಿಸುವದು, ವಿಷಯಗಳ ತೊಡಕಿನಿಂದ ಮನಸ್ಸನ್ನು ಬಿಡುಗಡೆ ಮಾಡುವದ
ಸುಲಭ ಕಾರ್ಯವಾಗಿದೆ. -ಹೀಗೆ ಹೇಳಿರುವರು: 'ಗುಣೇಷು ವಿಶೇಚಿತ್ತಂ.... .
ಮದ್ರೂಪೇ ಉಭಯಂ ತ್ಯಜೇತ್' - ( ೧೧-೧೩-೨೬ ) ಇಂದ್ರಿಯವಿಷಯಗ
(ಗುಣಗಳ) ನಿರಂತರ ಸೇವನೆಯಿಂದ, ಮನಸ್ಸು ವಿಷಯಗಳೊಡನೆ ಒಂದಾ
ಬಿಡುವದು. ಇಂದ್ರಿಯವಿಷಯಗಳ ಉತ್ಪತ್ತಿಯು ಮನಸ್ಸಿನಲ್ಲಿಯೆ ಆಗುವದು
ಮನಸ್ಸೇ ಅವುಗಳಿಗೆ ಮೂಲವಾಗಿದೆ. ವಿಷಯಗಳನ್ನೂ, ವಿಷಯಗಳಿಗೆ ನೆ
ಯಾಗಿರುವ ಮನಸ್ಸನ್ನೂ ನನ್ನಲ್ಲಿಯೆ (ಶ್ರೀಹರಿಯಲ್ಲಿಯೇ) ಸಮರ್ಪಿಸಬೇಕ
ಈ ವಿಷಯವು ಶ್ರೀ ವಿಷ್ಣುತೀರ್ಥರಿಂದಲೇ ರಚಿತವಾದ 'ಅಧ್ಯಾತ್ಮಾಮೃತರಸ
ಜಿನೀ' ಎಂಬ ಬೇರೊಂದು ಗ್ರಂಥದಲ್ಲಿ ವಿಸ್ತಾರವಾಗಿ ವಿವೇಚಿಸಲ್ಪಟ್ಟಿದೆ.

ಈ ಸಂದರ್ಭದಲ್ಲಿ ತಿಳಿದುಕೊಳ್ಳಬೇಕಾದ ಸಂಗತಿಯು ಇದು:- ಈ ರೀ
ಯಲ್ಲಿ ಮನಸ್ಸು ಹಾಗೂ ವಿಷಯಗಳೆರಡನ್ನೂ ಪರಮಾತ್ಮನಲ್ಲಿ ಸಮರ್ಪಿಸು
ದರಿಂದ, (ಪ್ರಕೃತಿಯ) ಗುಣಗಳ ಬಂಧನದಿಂದ ಶೀಘ್ರವಾಗಿ ಬಿಡುಗಡೆಯಾ
ವದು. ಹೀಗೆ ಅನುಸಂಧಾನ ಮಾಡುವವನಿಗೂ, ಆತನ ಸಾಧನ ಸಾಮಗ್ರಿಗ
'ನಿರ್ಗುಣ' ವೆಂದೇ ಕರೆಯುವರು. ಅಂತೆಯೇ ಶ್ರೀಮದ್ಭಾಗವತದಲ್ಲಿ ಹೀ
ಹೇಳಿರುವರು- 'ಸಾತ್ವಿಕಃ .. ಮದಪಾಶ್ರಯಃ' ( ೧೧-೨೫-೨೬ );- ವಿಷಯ
ಆಸಕ್ತಿಯನ್ನು ತೊರೆದವನು ಸಾತ್ವಿಕ ಕರ್ತೃ; ಆಸಕ್ತಿಯಿಂದ ಕುರುಡನಾದವ
ರಾಜಸಕರ್ತೃ; ಆಸಕ್ತಿಯಿಂದ ತನ್ನ ನೈಜ ಕರ್ತವ್ಯವನ್ನು ಮರೆತವನೇ ತಾಮ
ಕರ್ತೃ ಮನಸ್ಸು. ಹಾಗೂ ವಿಷಯಗಳೆರಡನ್ನೂ ಭಗವಂತನಲ್ಲಿ ಸಮರ್ಪಿಸು
ನಿಗೆ 'ನಿರ್ಗುಣ' ನೆಂಬ ಹೆಸರು.-ಈ ರೀತಿಯಲ್ಲಿ (ಭಾಗವತದೊಳಗೆ) ನಾ
ಬಗೆಯ 'ಕರ್ತೃ' ಗಳೆಂದು ಹೇಳಿರುವರು.- ಅದರಂತೆಯೆ,-"ವನಂ ತು ಸಾತ್ವಿ
ವಾಸಃ ... ಮನ್ನಿಕೇತನಂ ತು ನಿರ್ಗುಣಂ'-(೧೧-೨೫-೨೫)-(ಮನೆಮಾರುಬಿಟ
ಅರಣ್ಯದಲ್ಲಿ ವಾಸಮಾಡುವದು-ಸಾತ್ವಿಕಸಾಧನ. ಊರಿನಲ್ಲಿಯೆ (ಗೃಹಸ್ಥನಾ
ವಾಸಿಸುವದು ರಾಜಸ ಸಾಧನ. (ಯಾವದೇ ಆಧ್ಯಾತ್ಮಿಕ ಸಾಧನೆಯಿಲ್ಲ
ಜೂಜಿನ ಮನೆಯಲ್ಲಿ ವಾಸಿಸುವದು- ತಾಮಸ ಸಾಧನ, ಸಾಧನವು ಸಾತ್ವಿಕಾ

ಭೇದದಿಂದ ನಾಲ್ಕು ವಿಧವಾಗಿರುವದೆಂದು ಹೇಳಿದೆ. ಅಧಿಕಾರಿಗಳ ಅವಸ್ಥಾ (ಸ್ಥಿತಿಗತಿಯ) ವ್ಯತ್ಯಾಸದಿಂದ ಈ ಬಗೆಯ ನಾಲ್ಕು ವರ್ಗಗಳನ್ನು ಮಾಡ ಲಾಗಿದೆ. ಆದರೆ ನಿಜವಾಗಿ ನೋಡಿದರೆ, ಅಧಿಕಾರಿ ( ಕರ್ತೃ ) ಗಳಲ್ಲಿ ಹಾಗೂ (ಆಧ್ಯಾತ್ಮ) ಸಾಧನಗಳಲ್ಲಿ ಮೂರೇ ಪ್ರಕಾರಗಳಿರುವವು. ಇಲ್ಲಿ ಹೇಳಿ ರುವ ನಾಲ್ಕುವರ್ಗಗಳು ಅಧಿಕಾರಿಗಳ ವೈಶಿಷ್ಟ್ಯವನ್ನು ಎತ್ತಿತೋರಿಸುವದಕ್ಕಾಗಿ, ಉಳಿದವರಲ್ಲಿ ಅವರ ಬಗ್ಗೆ ಆದರವನ್ನು ಹುಟ್ಟಿಸುವದಕ್ಕಾಗಿ.

'ಗುಣನಿವೃತ್ತಿ'-ಪ್ರಕರಣವು ಮುಗಿಯಿತು.



|| ಶ್ಲೋಕ ೧೪

# ೨೯. ನಾಮಪ್ರಶಂಸಾ ಪ್ರಕರಣ

ಶ್ಲೋಕ ಪ್ರ. ಶಾ. ೨...

||೩೫೧|| ತಸ್ಮಾತ್ ಪುರೈವಾಶ್ವಿಹ ಪಾಪನಿಷ್ಕೃತೌ
ಯತೇತ ಮೃತ್ಯೋರವಿಪದ್ಯತಾತ್ಮನಃ |
ದೋಷಸ್ಯ ದೃಷ್ಟ್ವಾ ಗುರುಲಾಘವಂ ಯಥಾ
ಭಿಷಕ್ ಚಿಕಿತ್ಸೇತ್ ರುಜಾಂ ನಿದಾನವಿತ್ || ೬-೧-೮

ಶ್ರೀ ಶುಕರು ಪರೀಕ್ಷಿತ್ ರಾಜನಿಗೆ ಮಾಡಿದ ಉಪದೇಶ.

ಈ ರೀತಿಯಿಂದ ಮೂವತ್ತು ಪ್ರಕಾರಗಳ ಭಾಗವತ ಧರ್ಮಗಳನ್ನು ಆಚರಿಸುವದರಿಂದ ಭಗವದ್ಭಕ್ತನಿಗೆ ಭಗವಂತನಲ್ಲಿ ಅತ್ಯುತ್ಕಟವಾದ ಭಕ್ತಿಯು ಉಂಟಾಗುವದು. ತನಗೆ ಲಭಿಸಿದ ಯೋಗ್ಯ ಗುರುಗಳ ಕೃಪೆಯಿಂದ ಬಿಂಬಸಾಕ್ಷಾತ್ಕಾರವಾಗಲು ಭಗವದ್ಭಕ್ತಿಯು ಮತ್ತಿಷ್ಟು ಅಧಿಕವಾಗುವದು. ಅಂಥ ಭಕ್ತಿಯ ಬಲದಿಂದ (ತ್ರಿಗುಣಾತ್ಮಕ ಪ್ರಕೃತಿಯ) ಮೂರುಗುಣಗಳ ಬಂಧನದಿಂದ ಆತನು ಬಿಡುಗಡೆ ಹೊಂದುವನು.-ಎಂದು ಪ್ರತಿಪಾದಿಸಿದ್ದಾಯಿತು. ಸಕಲ ಭಾಗವತ ಧರ್ಮಗಳ ಸರಿಯಾದ ಉಪಾಸನೆ (ಅನುಷ್ಠಾನ) ಯನ್ನು ಮಾಡಲು ಶಕ್ತರಿಲ್ಲದ ಜನರು ಇರುವರು. ಅಂಥವರಿಗೆ ಒಂದೇ ಒಂದಾದ ಭಾಗವತ ಧರ್ಮವು ದೊಡ್ಡ ಆಧಾರವಾಗಿದೆ-ಅದೆಂದರೆ, ಭಗವಂತನ ಮಂಗಳನಾಮಗಳ ಸಂಕೀರ್ತನೆಯು. ನಾಮಸಂಕೀರ್ತನೆಯಿಂದ, ಉಳಿದ ಭಾಗವತಧರ್ಮಗಳನ್ನು ಕೂಡ ಆಚರಿಸಲು ಕ್ರಮೇಣ ಶಕ್ತಿಉಂಟಾಗಿ, ಕೊನೆಗೆ ಅಂತಿಮ ಪುರುಷಾರ್ಥವಾದ ಮೋಕ್ಷವು ಲಭಿಸುವದು. ಈ ವಿಷಯವೇ ಈ ಪ್ರಕರಣದಲ್ಲಿ ಹೇಳಲ್ಪಟ್ಟಿದೆ. ನಾಮ-ಸಂಕೀರ್ತನೆಯಲ್ಲಿ ಆಸ್ಥೆ-ಆದರಗಳನ್ನು ಹುಟ್ಟಿಸಲು, ನರಕದಲ್ಲಿ ಒದಗುವ ಯಾತನೆಗಳನ್ನೂ ಭಗವನ್ನಾಮ-ಸಂಕೀರ್ತನೆಯು ನಿವಾರಿಸುವದೆಂಬ ಅದರ ಮಹಿಮೆಯನ್ನು ಪ್ರಾರಂಭದಲ್ಲಿ ಹೇಳುವರು.

**ಅರ್ಥ:**- (ತಸ್ಮಾತ್-ಇತಿ):- ತಾನು ಮಾಡುವ ಪಾಪಕೃತ್ಯಗಳಿಗೆ ತಾನು ಜೀವಿಸುವಾಗಲೆ, ಯೋಗ್ಯವಾದ [ ವಿಹಿತವಾಗಿರುವ] ಪ್ರಾಯಶ್ಚಿತ್ತಗಳನ್ನು [ಪಾಪ ನಿವಾರಣೆಯ ಉಪಾಯಗಳನ್ನು] ಮಾಡಿಕೊಳ್ಳದಿದ್ದರೆ, ನರಕದಲ್ಲಿ ಅವುಗಳಿಗಾಗಿ ವಿವಿಧ ಶಿಕ್ಷೆ-ಯಾತನೆಗಳನ್ನು ನಿಶ್ಚಿತವಾಗಿ ಅನುಭವಿಸಲೇಬೇಕಾಗುವದು. ಆದುದರಿಂದ, ತನ್ನ ಪಾಪಕೃತ್ಯಗಳಿಗಾಗಿ, ಜೀವಿಸುವಾಗಲೇ ಮಾನವನು ಯೋಗ್ಯ ಪ್ರಾಯಶ್ಚಿತ್ತಗಳನ್ನು ಮಾಡಿಕೊಳ್ಳಲು ಯತ್ನಿಸಬೇಕು. ಅದರಲ್ಲಿಯೂ (ಗೃಹೀತ ಇವ ಕೇಶೇಷು

ಮೃತ್ಯುನಾ), ಸದಾ ಮೃತ್ಯುವಿನ ದವಡೆಯಲ್ಲಿರುವ ಮಾನವನು, ಮರಣವು ತನ್ನ ಮೇಲೆ ಎರಗುವ ಮೊದಲೇ, ರೋಗಾದಿಗಳಿಗೆ ತುತ್ತಾಗುವ ಮುಂಚೆಯೆ, ತನ್ನಪಾಪಪರಿಹಾರಕ್ಕಾಗಿ ಯೋಗ್ಯಪ್ರಾಯಶ್ಚಿತ್ತವನ್ನು ಮಾಡಿಕೊಳ್ಳುವದು ಅಗತ್ಯವಾದುದು. [ಅನಿಶ್ಚಿತವಾದ ಅಲ್ಪ ಆಯುಷ್ಯದಲ್ಲಿ] ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಲು, ಕಿಂಚಿತ್ತು ವಿಳಂಬ [ತಡ] ಮಾಡಬಾರದು. [ಆಶು]. ಹೀಗೆ ಹೇಳಿರುವರು:- 'ಪ್ರಾಯೇಣಾಲ್ಪಾಯುಷೊ ......ಮಂದಭಾಗ್ಯಾಹ್ಯುಪದ್ರುತಾಃ [೧-೧-೯] ಈ ಕಲಿಯುಗದಲ್ಲಿ ಜನರು ಅಲ್ಪಾಯುಷಿಗಳು, ಆಲಸಿಗಳು, ಮಂದ ಬುದ್ಧಿಯವರು, ಅನೇಕ ಉಪದ್ರವ [ಪೀಡೆ]ಗಳಿಂದ ಬಳಲುವವರು. -ಪ್ರಾಯಶ್ಚಿತ್ತವನ್ನು ಹೇಗೆಹೇಗೆ ಮಾಡಿಕೊಳ್ಳಬೇಕೆಂಬುದನ್ನು ತಿಳಿಸುತ್ತಾರೆ.(ಯಥಾಭಿಷಗ್ ಇತಿ,ರೋಗದ ನಿದಾನದಲ್ಲಿ ರೋಗದ ಮೂಲ ಕಾರಣವನ್ನು ಕಂಡುಹಿಡಿಯುವ ಕುಶಲ ಚಿಕಿತ್ಸಕನಾದ ವೈದ್ಯನು, ಬೇನೆಯ ಬಲಾಬಲಗಳನ್ನು ತಿಳಿದುಕೊಂಡು, ಅದಕ್ಕೆ, ಅನುಗುಣವಾದ ಔಷಧೋಪಚಾರವನ್ನು ಮಾಡುವಂತೆಯೆ, ಪಾಪಕೃತ್ಯದ ಹಿರಿಮೆ ಕಿರಿಮೆಗಳನ್ನು ತಿಳಿದು, ಅದಕ್ಕೆ ಸಮುಚಿತವಾದ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಬೇಕು, ಎಂಬುದೇ ಅಭಿಪ್ರಾಯ.

||೩೫೨|| **ಯಚ್ಛಕ್ತಯೋ ವದತಾಂ ವಾದಿನಾಂ ವೈ**
**ವಿವಾದಸಂವಾದಭುವೋ ಭವಂತಿ|**
**ಕುರ್ವಂತಿ ಚೈಷಾಂ ಮುಹುರಾತ್ಮಮೋಹಂ**
**ತಸ್ಮೈ ನಮೋಽನಂತಗುಣಾಯ ಭೂಮ್ನೇ ||** ೬-೪-೩೧

ಶ್ರೀಶುಕರು ಪರೀಕ್ಷಿತರಾಜನಿಗೆ ಮಾಡಿದ ಉಪದೇಶ.

ಮನಸ್ಸಿನಿಂದ, ಮಾತಿನಿಂದ, (ಕೈಯಿಂದ) ಶರೀರದಿಂದ ಮಾಡಿದ ಪಾಪಕೃತ್ಯಗಳಿಗೆ, ತಾನು ಇಲ್ಲಿ (ಈ ಲೋಕದಲ್ಲಿ) ಬದುಕಿ ಇರುವಾಗಲೆ, ಪಾಪಕೃತ್ಯಗಳ ತಾರತಮ್ಯಕ್ಕೆ (ಸಣ್ಣದು - ದೊಡ್ಡುದಕ್ಕೆ) ಅನುಗುಣವಾಗಿ ಯೋಗ್ಯವಾದ ಪ್ರಾಯಶ್ಚಿತ್ತವನ್ನು (ನಿವಾರಣೋಪಾಯವನ್ನು) ಅಗತ್ಯವಾಗಿ ಮಾಡಿಕೊಳ್ಳಬೇಕು. ಇಲ್ಲವಾದರೆ ಮುಂದೆ ಆತನಿಗೆ ನಿಶ್ಚಿತವಾಗಿಯೂ ದುಃಖ ಉಂಟಾಗುವದು. ಮುಂಬರುವ ಯಾವ ದುಃಖದ ಭೀತಿಯಿಂದ ಜೀವಿಸುವಾಗಲೆ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಬೇಕೆಂಬುವದನ್ನು ಹೇಳುವರು. (ನ ಚೇತ್ ಇತಿ ಮನಸ್ಸಿನಿಂದ, ಮಾತಿನಿಂದ, (ಪ್ರಾಣಿ) ಶರೀರದಿಂದ ಮಾಡಿದ ಪಾಪಕೃತ್ಯಗಳಿಗೆ ಅವುಗಳ ತಾರತಮ್ಯಕ್ಕನುಗುಣವಾಗಿ ಪ್ರಾಯಶ್ಚಿತ್ತವನ್ನು(ಅಪಚಿತಿ)ಮಾಡಿಕೊಳ್ಳದ

ಮಾನವನು ಮರಣದನಂತರ, ಕೇವಲ ಕುಟುಂಬ ಪೋಷಕನು ಅನುಭವಿಸಬೇಕಾಗುವದೆಂದು ನಾನು ನಿಮಗೆ ಹೇಳಿಕೊಟ್ಟ ನರಕದ ಯಾತನೆಗಳನ್ನೆಲ್ಲ ಅನುಭವಿಸಬೇಕಾಗುವದು. ನರಕದ ಈ ಯಾತನೆಗಳು [ತಿಗ್ಮ] ತೀಕ್ಷ್ಣ ನೋವನ್ನುಂಟು ಮಾಡುವಂಥವುಗಳು.

ಪಾಪಕೃತ್ಯಕ್ಕೆ ಅನುಗುಣವಾಗಿರುವ ನರಕದ ಯಾತನೆಗಳನ್ನು ನಿರೂಪಿಸಿರುವರು- (೧) ಸ್ವಾರ್ಥಿಯಾದ ಕೇವಲ ಕುಟುಂಬ ಪೋಷಕನು ಮನೆಗೆ ಬರುವ ಅತಿಥಿ ಅಭ್ಯಾಗತರನ್ನು ಅನಾದರಿಸಿ, ಎರಡನೆಯವರ ಸೊತ್ತನ್ನು ಅಪಹರಿಸಿ, ತನ್ನ ಸಂಪತ್ತನ್ನು ಹೆಚ್ಚಿಸುವದರಲ್ಲಿ ನಿರತನಾದವನಿಗೆ ' ಸೂಚೀಮುಖ (ಸೂಜಿಗಳಿಂದ ಚುಚ್ಚುವದು)ವೆಂಬ ಯಾತನೆ; (ವೈಂ) (೧) ತಾನು ಗಳಿಸಿದ ದ್ರವ್ಯವನ್ನು ಸತ್ಪಾತ್ರರಿಗೆ ಕೊಡದೆ, ಸದ್ವಿನಿಯೋಗ ಮಾಡದೆ, ತಾನೇ ಉಪಭೋಗಿಸುವ ಲೋಭಿಗೆ ಕ್ರಿಮಿಭೋಜನವೆಂಬ ಯಾತನೆ (೧) ಹೆರವರ ನಿಂದೆಮಾಡಿ ತನ್ನನ್ನೇ ಹೊಗಳಿಕೊಳ್ಳುವವನಿಗೆ ಉಪ್ಪು-ಸವಳಿನ ಕೆಸರಿನಲ್ಲಿ ಹೊರಳಾಡುವದು. (೧) ಇಂದ್ರಿಯಗಳನ್ನು ಅಂಕಿತದಲ್ಲಿ ಇಟ್ಟುಕೊಳ್ಳದೇ ಪರಸ್ತ್ರೀ ಇತ್ಯಾದಿ ಅನೈತಿಕ ಭೋಗ ಮಾಡುವವನಿಗೆ ತಪ್ತಲೋಹಸ್ತ್ರೀ ಆಲಿಂಗನ, ಕೆಂಪಗೆ ಕಾದ ಕಬ್ಬಿಣದ ಸ್ತ್ರೀ ಪ್ರತಿಮೆಯನ್ನು ಆಲಂಗಿಸುವದು. (೧) (ಇಂ) -ವೇದದಲ್ಲಿ ನಿರೂಪಿತವಾದ ಧರ್ಮಮಾರ್ಗವನ್ನು ಬಿಟ್ಟುಕೊಟ್ಟು, ವೇದವಿರುದ್ಧವಾದ ನಾಸ್ತಿಕ (ಪಾಖಂಡ) ಮತವನ್ನು ಅನುಸರಿಸುವವನಿಗೆ,- 'ಅಸಿಪತ್ರ' (ತೀಕ್ಷ್ಣಧಾರೆಯ (ಹದನವಾದ) ಖಡ್ಗಗಳ ಮೇಲೆ ಮಲಗುವದು). (ಬ್ರಂ) ೧ ಕೇವಲ ತನ್ನ ಉದರ ಪೋಷಣೆಗಾಗಿ, ಪ್ರಾಣಿ ಹಿಂಸೆಯಿಂದ ಕೂಡಿದ (ಡಂಭಾಚಾರದ) ಯಜ್ಞ ಮಾಡಿದೆನೆಂದು ಹೆಮ್ಮೆ ಪಡುವವನಿಗೆ 'ವೈಶಸ'ವೆಂಬ ಯಾತನೆ. (೧) (ಮಂ) -ಅಕಾರಣವಾಗಿ ಪ್ರಾಣಿಗಳನ್ನು ಪೀಡಿಸುವವನಿಗೆ, ದಂದಶೂಕ [ಸರ್ಪಗಳಿಂದ ಕಚ್ಚಿಸುವದು]ವೆಂಬ ಯಾತನೆ. (೧) (ಪೂಂ)- ಸದ್ಧರ್ಮವನ್ನು ನಾಶ ಮಾಡುವವನಿಗೆ 'ವೈತರಣಿ' (ರಕ್ತ-ಮಾಂಸಾದಿಗಳಿಂದ ತುಂಬಿ ಹರಿಯುವ ನದಿಯಲ್ಲಿ ತೇಲುವದು) ಎಂಬ ಯಾತನೆ; [೧] [ಬಿಂ] -"ಕಸ್ತತ್ವಮಿತ್ಯೇವಮಾದಿರೂಪೇಣಕಥಿತಾಃ"... ಇವೇ ಮುಂತಾದ ನರಕದ ಯಾತನೆಗಳನ್ನು ತನ್ನ ಪಾಪಕೃತ್ಯಕ್ಕನುಗುಣವಾಗಿ, ಇಲ್ಲಿಯೇ ಪ್ರಾಯಶ್ಚಿತ್ತ ಮಾಡಿಕೊಳ್ಳದಿರುವವನು ಮರಣಾನಂತರ ಅನೇಭೋಗಿಸಬೇಕಾಗುವದು.

ಹೀಗೆ ಹೇಳಿರುವರು- [೧] " ಯಸ್ತ್ವಿಹ...... ಪ್ರಸಹ್ಯೋರುಬಲಾದು ತ್ಪಾಟಯಂತಿ " [೫-೨೬-೩೭] -ಅತಿಥಿ, ಅಭ್ಯಾಗತರನ್ನು ಕಣ್ಣಿನಿಂದ ಸುಡು

ವನೋ ಎಂಬಂತೆ, ಕೆಟ್ಟ ಕಣ್ಣಿನಿಂದ ಯಾವಾಗಲೂ ಅನಾದರಿಸುವ ಮನೆಯ ಯಜಮಾನನಿಗೆ, ನರಕದಲ್ಲಿಯೂ ಆತನ ಪಾಪದ ಕಣ್ಣುಗಳನ್ನು ಹದ್ದು, ಬಕ ಮುಂತಾದ ಪಕ್ಷಿಗಳು ಬಲಾತ್ಕಾರದಿಂದ ಕಿತ್ತಿ ಹರಿದು ಚೆಲ್ಲುವವು. – (೨)

"ಯಸ್ತ್ವಿಹ ...... ಸೂತ್ರೈಃಪರಿವಯಂತಿ" [೫-೨೬-೩೮] –ದುಡ್ಡೇ ದೊಡ್ಡಪ್ಪ ನೆಂದು ತಿಳಿದು, ಅಹಂಕಾರಿಯಾಗಿ ಎಲ್ಲರನ್ನೂ ಕಡೆಗಣ್ಣಿನಿಂದ ನೋಡುವವನು ಎಲ್ಲದರಲ್ಲಿಯೂ ಸಂಶಯ ತಾಳುವವನು, ತನ್ನ ದುಡ್ಡು ಖರ್ಚಾದೀತು ನಾಶವಾದೀತು ಎಂಬ ಚಿಂತೆಯಿಂದ ಬಾಡಿದ ಮುಖವುಳ್ಳವನಾಗಿ, ಸುಖವನ್ನು ಪಡೆಯಲಾರದೆ, [ವಿರಕ್ತಿಯನ್ನು ತಾಳದೆ] ಮನೆಯಲ್ಲಿಯೆ ನಿಂತುಕೊಂಡು ತನ್ನ ದುಡ್ಡನ್ನೆ ರಕ್ಷಿಸುತ್ತಿರುವವನು [ದುಡ್ಡಿನ ಸಂಪಾದನೆ] ದುಡ್ಡನ್ನು ಹೆಚ್ಚಿಸುವದು, ರಕ್ಷಿಸುವದು ಮುಂತಾದ ಕಾರ್ಯಗಳಲ್ಲಿ ಒದಗುವ ಪಾಪದಿಂದ ಯುಕ್ತನಾಗಿ, ಮರಣಾನಂತರ 'ಸೂಚಿಮುಖ'ವೆಂಬ ನರಕದಲ್ಲಿ ಬೀಳುವನು. ದುಡ್ಡಿನ ಲೋಭಿಯಾದ ಈ ಪಾಪಿಷ್ಠನನ್ನು ಈ ನರಕದಲ್ಲಿ ಯಮನ ಅಧಿಕಾರಿಗಳು, [ನೇಕಾರರು ಬಟ್ಟೆಯನ್ನು ನೇಯುವಂತೆ] ಹಗ್ಗಗಳಿಂದ ಸೂತ್ರಲೂ ಬಿಗಿಯುವರು.

೩) "ಯಸ್ತ್ವಿಹ .... ನಿಷ್ಕಾಲಯಂತಿ" [೫-೬-೨೧]. ತನಗೆ ಆಪತ್ಕಾಲವು ಇಲ್ಲದಿದ್ದರೂ, ಬ್ರಾಹ್ಮಣರ ಚಿನ್ನರತ್ನಗಳನ್ನು ಕಳವು ಮಾಡುವವನು, ಇಲ್ಲವೇ ಬಲಾತ್ಕಾರದಿಂದ ಎತ್ತಿಹಾಕುವವನು, ಅಂಥ ಪಾಪಿಯ ತೊಗಲನ್ನು ಯಮದೂತರು ಕಾದ ಕಬ್ಬಿಣದ ಇಕ್ಕಳಿನಿಂದ ಕಿತ್ತಿಕಿತ್ತಿ ಹಾಕುವರು. –

[೪] "ಯಸ್ತ್ವಿಹ ವಾ ..... ದುರಂತಾ ಯಾತನಾಹ್ಯಶ್ನುತೆ" [೫-೨೬-೩೨]: [ಅತಿಥಿ ಅಭ್ಯಾಗತರಿಗೆ, ಹಸಿದು ಬಂದವರಿಗೆ] ಅನ್ನವನ್ನು ನೀಡದೆ, ತಾನೊಬ್ಬನೇ ಉಣ್ಣುವವನು, [ಯತ್ಕಿಂಚನೋಪ] ತನ್ನ ಪಾಪನಿವಾರಣೆಗಾಗಿ ಯಜ್ಞಾದಿ ಉಪಾಯಗಳನ್ನು ಮಾಡದವನು, ಸಂಸ್ಕಾರಹೀನನು,– ಪರಲೋಕದಲ್ಲಿ ಅತಿ ನೀಚ ನರಕದಲ್ಲಿ ಬೀಳುವನು, ಅಲ್ಲಿ ಕ್ರಿಮಿಗಳೇ ಆತನಿಗೆ ಆಹಾರ. ಲಕ್ಷ ಯೋಜನ ವಿಸ್ತಾರವಾದ ಕ್ರಿಮಿಕುಂಡದಲ್ಲಿ ತಾನೂ ಬಂದು ಕ್ರಿಮಿಯಾಗಿಯೇ ನೆಲೆಸಿ ಕ್ರಿಮಿಗಳಿಗೆ ಆಹಾರವಾಗುವನು. [ಯಾವನಪ್ರತ್ತಾಕೃತನಿವೇಶಮ್ ಆತ್ಮಾನಂ ಪಾತಯತಿ) ಇದಕ್ಕೂ ಕೀಳು ಆಹಾರವನ್ನು ಭುಂಜಿಸಬೇಕಾದ ನರಕದ ಸ್ಥಾನಗಳದ ಕೆಡಹುವನು.

ತಾನು ಸ್ವತಃ ಅಧಮ (ಹೀನ) ನಾಗಿದ್ದರೂ, ದೊಡ್ಡವನೆಂಬ ಹೆಮ್ಮೆಯಿಂದ, ಸತ್ಕುಲ, ತಪಸ್ಸು, ಸದಾಚಾರ, ವರ್ಣ ಹಾಗೂ ಆಶ್ರಮಗಳಲ್ಲಿ ತನಗಿಂತಲೂ ಶ್ರೇಷ್ಠರಾದವರನ್ನು ಆದರಿಸದ ಪಾಪಿಯು ಸತ್ತಂತೆಯೆ ಸರಿ. ಮರಣಾ

[೫] " ಯಸ್ತ್ವಿಹ .. ಪಾಷಂಡಾನುಗತಃ ಫಲಂ ಭುಂಕ್ತೆ " [೫-೨೬-೧೭]- ಆ
ತ್ಕಾಲವಿಲ್ಲದಿದ್ದರೂ, ಸತ್ಯಸಿದ್ಧಾಂತವಾದ ವೇದ ಮಾರ್ಗವನ್ನು ಬಿಟ್ಟುಕೊಟ
ಪಾಖಂಡಿಗಳ ದುರ್ಮಾರ್ಗದ ಬೆನ್ನುಹತ್ತುವನು. ಅಂಥ ಪಾಪಿಯನ್ನು ಹರಿ
ವಾದ ಖಡ್ಗದ ಪಾತಿಗಳುಳ್ಳ ವನದಲ್ಲಿ ನೂಕುವರು. ಆತನು ಅಲ್ಲಿಂದ ಹೊರ
ಬರಲು ಯತ್ನಿಸಲು, ಯಮದೂತರು ಬಾರುಕೋಲಿನಿಂದ ಥಳಿಸುವರು. ಖಡ್ಗ
ಹರಿತ ಪಾತಿಗಳು ಆತನ ಮೈಯೆಲ್ಲ ಚುಚ್ಚಿ ಗಾಯಗೊಳಿಸುವವು. ' ಅಯ್ಯೊ
ಸತ್ತೆ ' ಎಂದು ಕೂಗುತ್ತ ನೋವಿನಿಂದ ಅತನಿಗೆ ಎಚ್ಚರ ತಪ್ಪುವದು, ಹೆಜ
ಹೆಜ್ಜೆಗೆ ಕುಸಿದುಬೀಳುವನು. ಸತ್ಯ ಸಿದ್ಧಾಂತದ ಸ್ವಧರ್ಮವನ್ನು ತ್ಯಜಿಸಿ ಪಾಷಂ
ಗಳ ಅವೈದಿಕ ಮತವನ್ನು ಎತ್ತಿಕೊಳ್ಳುವವನಿಗೆ ಈ ದುರ್ದಶೆಯು ಒದಗ
ವದು.- [೬] " ಯೇ ತ್ವಿಹ ದಾಂಭಿಕಾಃ .. ವಿಶಸಂತಿ " [೫-೨೬-೨೭] ಡಂಭ
ಚಾರಕ್ಕಾಗಿ [ತೋರಿಕೆಗಾಗಿ] ಡಂಭಾಚಾರದ [ಒಣ ಆಡಂಬರದ] ಯಜ್ಞಗಳನ
ಜರುಗಿಸಿ ಪಶು ಹಿಂಸೆಯನ್ನು ಮಾಡುವ ಡಾಂಭಿಕರನ್ನು ಪರಲೋಕದಲ್ಲಿ 'ವೈಶಸ
ವೆಂಬ ನರಕಕ್ಕೆ ಅಟ್ಟಿ ನರಕದ ಅಧಿಕಾರಿಗಳು ಅವರಿಗೆ ಚಿತ್ರಹಿಂಸೆಯನ
ಕೊಡುವರು. (೭) " ಯೆತ್ವಿಹ ಯಥಾಬಿಲೇಶಯಾಃ " (೫-೨೬-೩೩) ಪ್ರಾಣ
ಗಳಿಗೆ ದುಃಖವನ್ನುಂಟು ಮಾಡುವ, ಹಾವಿನಂತೆ ಕ್ರೂರಿಗಳಾದವರು ' ದಂ
ಶೂಕವೆಂಬ ನರಕದಲ್ಲಿ ಬೀಳುವರು. ಹೇ ರಾಜನೇ (ಪರಿಕ್ಷಿತನೇ), ಆ ನರಕ
ದಲ್ಲಿ ಐದು ಹೆಡೆ, ಏಳು ಹೆಡೆಗಳ ಸರ್ಪಗಳು ಹೋರುಗಳಲ್ಲಿ ವಾಸಿಸುವ ಇಲಿ
ಗಳನ್ನು ಮುಕ್ಕಿಬಿಡುವಂತೆ, ಆ ಪಾಪಿಯನ್ನು ತಿಂದು ಬಿಡುವವು. (೮) ಯೇ ತ್ವಿಹ
ರಾಜನ್ .. ವಾಹಿನ್ಯಾಮುಪ ತಪಂತಿ (೫-೨೬-೨೬)- ಧರ್ಮದ ಕಟ್ಟಳೆಗಳನ್ನು
ಮುರಿದು ಹಾಕುವ (ಮೀರಿ ನಡೆಯುವ) ಪಂಖಂಡ (ನಾಸ್ತಿಕ) ರಾದ ಕ್ಷತ್ರಿಯ
ರಾಜರು ಇಲ್ಲವೆ ಅವರ ಅಧಿಕಾರಿಗಳು ಮರಣದ ನಂತರ ವೈತರಣಿಯೆಂಬ
ನದಿಯಲ್ಲಿ ಬೀಳುವರು. ಆ ನದಿಯು ನರಕಕ್ಕೆ ಸುತ್ತಲಿನ ಕಂದಕದಂತಿದೆ.
ಆದರಲ್ಲಿಯ ಜಲಚರ ಪ್ರಾಣಿಗಳು ಈ ಪಾಪಿಗಳನ್ನು ತಿನ್ನುತ್ತಿದ್ದರೂ, ಸಜೀವಿ
ಗಳಾಗಿಯೆ ಉಳಿದು ನದಿಯ ಪ್ರವಾಹದಲ್ಲಿ ತೇಲುತ್ತ ಮುಳಗುತ್ತ ಅವರು
ಸಾಗುವರು. ತಮ್ಮ ದುಷ್ಕರ್ಮದ ಪರಿಣಾಮವನ್ನು ನೆನಿಸಿಕೊಳ್ಳುವರು. ಮಲ
ಮೂತ್ರ, ಕೀವು-ರಕ್ತ, ಉಗುರು, ಎಲುಬು, ಕೂದಲು, ನೆಣ, ಮಾಂಸ ಚರಬಿ
ಗಳಿಂದ ತುಂಬಿದ ಆ ನದಿಯ ಪಾತ್ರದಲ್ಲಿ ತೇಲುತ್ತಿರುವ ಈ ಪಾಪಿಗಳು ತುಂಬಾ
ತಳಮಳಿಸುವರು.

||೩೫|| ಏತಾವತಾಲಮಘನಿರ್ಹರಣಾಯ ಪುಂಸಾಂ
ಸಂಕೀರ್ತನಂ ಭಗವತೋ ಗುಣಕರ್ಮನಾಮ್ನಾಂ |

ವಿಕ್ರುಶ್ಯ ಪುತ್ರ ಮಘವಾನ್ಯದಜಾಮಿಳೋsಪಿ
ನಾರಾಯಣೇತಿ ಮ್ರಿಯಮಾಣ ಇಯಾಯ ಮುಕ್ತಿಂ ॥
೬-೩-೨೪

ಅಜಾಮಿಳನನ್ನು ಪಾತಕಿಯೆಂದು ನರಕಕ್ಕೆ ತರಲು ಹೋದ ತನ್ನ ದೂತರಿಗೆ ಯಮನು ಬದ್ಧಿವಾದವನ್ನು ಹೇಳುವಾಗ್ಗೆ, ಶ್ರೀಹರಿಯು ನಾಮಸಂಕೀರ್ತನದ ಮಹಿಮೆಯನ್ನು ವರ್ಣಿಸುವನು.

ನರಕದ ಈ ಬಗೆಯ ಘೋರ ಯಾತನೆಗಳನ್ನೂ, ಅವುಗಳಿಗೆ ಕಾರಣವಾದ ಪಾಪಪ್ರವೃತ್ತಿಯನ್ನು ತಪ್ಪಿಸಿಕೊಳ್ಳಲು, ಶ್ರೀ ಹರಿನಾಮ ಸಂಕೀರ್ತನೆಯು ಏಕಮೇವ ಉಪಾಯವಾಗಿದೆ. ಕಾಯಿಕ, ವಾಚಿಕ, ಮಾನಸಿಕವೆಂಬ ಮೂರು ಬಗೆಯ ಪಾಪಗಳ ಪರಿಹಾರಕ್ಕೆ ಅದೊಂದೇ ಬಹು ದೊಡ್ಡ ಪ್ರಾಯಶ್ಚಿತ್ತವಾಗಿದೆ. ಆದುದರಿಂದ ಶ್ರೀ ಹರಿನಾಮ ಸಂಕೀರ್ತನೆಯನ್ನು ನಿರಂತರ ಭಕ್ತಿಪೂರ್ವಕವಾಗಿ ಮಾಡಬೇಕು. (ಅದೇ ಸುಲಭ ಸಾಧನ)ಸಮಗ್ರ ಭಾಗವತ ಧರ್ಮಗಳ ಅನುಷ್ಠಾನವು ನಮ್ಮಿಂದ ಹೇಗಾದೀತೆಂಬ ಚಿಂತೆ ಮಾಡಬೇಕಿಲ್ಲ ಶ್ರೀ ಹರಿನಾಮ ಸಂಕೀರ್ತನೆಯಿಂದಲೆ ನರಕದ ಅನರ್ಥಗಳು ದೂರವಾದವೆಂಬುದು ಪುರಾತನರ ಚರಿತ್ರೆಯಲ್ಲಿ ಕಂಡು ಬರುತ್ತಿದೆ.

**ಅರ್ಥ** :- [ಏತಾವದಾಲಂ] ಭಗವಂತನ ಅನಂತ ಮಂಗಳಕರವಾದ ಗುಣ, ನಾಮ ಹಾಗೂ ಕೃತಿಗಳನ್ನು ಪಾಡಿ ಪೊಗಳುವದೇ ಒಂದು ಭಾಗವತ ಧರ್ಮ. ಮಾನವರ ಪಾಪಗಳನ್ನು ಹಾಗೂ ಪಾಪಪ್ರವೃತ್ತಿಯನ್ನು ನಿವಾರಿಸಲು ಭಗವನ್ನಾಮ ಸಂಕೀರ್ತನವೆಂಬದೊಂದೇ ಭಾಗವತ ಧರ್ಮವು ಸಾಕು, ಈ ಕಾರ್ಯಕ್ಕೆ ಅದು ಸಮರ್ಥವಾಗಿದೆ. ಯಾವ ಆಧಾರದಿಂದ ನೀವು ಹೀಗೆ ನಿಶ್ಚಿತವಾಗಿ ಹೇಳುವಿರಿ ? - ಎಂದರೆ, [ವಿಕ್ರುಶ್ಯ], ಪಾತಕಿಗಳಲ್ಲಿ ಅತ್ಯಧಮ ಪಾಪಿಯೆಂದು ಪ್ರಸಿದ್ಧನಾದ ಅಜಾಮಿಳನೆಂಬ ಬ್ರಾಹ್ಮಣನು ತನ್ನ ದಾಸಿಯಲ್ಲಿ ಹುಟ್ಟಿದ ನಾರಾಯಣನೆಂಬ ಹೆಸರಿನ ತನ್ನ ಮಗನನ್ನು ಮರಣ ಕಾಲದಲ್ಲಿ ಒಮ್ಮೆ ಮಾತ್ರ ಕೂಗಿ ಕರೆಯುವದರಿಂದಲೆ ತನ್ನ ಘೋರ ಪಾಪಗಳ ಪರಿಹಾರ ಮಾಡಿಕೊಂಡ ಸಂಗತಿಯೆ ಈ ಮಾತಿಗೆ ಆಧಾರವಾಗಿದೆ.

ಒಟ್ಟಿನಲ್ಲಿ ಹೀಗೆ ಹೇಳಿದೆ:- ಅಜಾಮಿಳನೆಂಬ ಬ್ರಾಹ್ಮಣನು ಸದಾಚಾರಗಳನ್ನೆಲ್ಲ ಬಿಟ್ಟುಬಿಟ್ಟಿದ್ದನು. ತನ್ನ ದಾಸಿಯ ಸಂಗದಲ್ಲಿಯೆ ನಿರತನಾಗಿದ್ದನು. ಕಳವು, ಕೊಲೆ ಮುಂತಾದ ಕೆಟ್ಟ ಕೃತಿಗಳಿಂದ ಉಪಜೀವಿಸುತ್ತಿದ್ದನು. ತನ್ನ

ದಾಸಿಯಲ್ಲಿ ಹತ್ತು ಮಕ್ಕಳನ್ನು ಹಡೆದನು; ಮುಪ್ಪಿನ ಕಾಲಕ್ಕೆ ಹುಟ್ಟಿದ ಹತ್ತನೆಯ ಮಗನಿಗೆ ನಾರಾಯಣನೆಂಬ ಹೆಸರು. ಮುದ್ದು ಮಾತುಗಳಿಂದ ಮನೋಹರನಾದ ನಾರಾಯಣನಲ್ಲಿ ಆತನಿಗೆ ಬಹಳೇ ಪ್ರೀತಿ. ಊಟ ಮುಂತಾದ ಕಾರ್ಯಮಾಡುವಾಗ್ಗೆ ನಾರಾಯಣನ ಮೇಲಿನ ಮಮತೆಯಿಂದ ಯಾವಾಗಲೂ ಆತನನ್ನು ಬಿಟ್ಟಿರುತ್ತಿರಲಿಲ್ಲ. ಸಾಯುವ ಗಳಿಗೆಯಲ್ಲಿ ದೂರದಲ್ಲಿ ಆಟದೊಳಗೆ ತೊಡಗಿದ ಆ ಬಾಲಕನನ್ನು 'ನಾರಾಯಣಾ' ಎಂದು ಗಟ್ಟಿಯಾಗಿ ಕೂಗಿಕರೆದನು. –ಪಾಪಿಯಾದ, ನಾಮಮಾತ್ರದ, ಆ ಬ್ರಾಹ್ಮಣನನ್ನು ತಮ್ಮ ಪಾಶ(ಹಗ್ಗ) ಗಳಿಂದ ಬಿಗಿದು ಯಮಲೋಕಕ್ಕೆ ಒಯ್ಯಲು ಯಮದೂತರು ಸನ್ನದ್ಧರಾಗಿದ್ದರು. ಆದರೆ, ಅಷ್ಟರಲ್ಲಿಯೆ 'ನಾರಾಯಣಾ' ಎಂಬ ನಾಮವು ಅಜಾಮಿಳನ ಬಾಯಿಯಿಂದ ಹೊರ ಬಂದುದರಿಂದ, ವಿಷ್ಣುದೂತರು ಅಲ್ಲಿಗೆ ಬಂದು, ಆ ಪಾಪಿಯನ್ನು ನರಕಕ್ಕೆ ಒಯ್ಯಲು ಸನ್ನದ್ಧರಾದ ಯಮದೂತರನ್ನು ತಡೆದು ನಿಲ್ಲಿಸಿದರು. ಆ ನಂತರ ಅಜಾಮಿಳನು ಪಶ್ಚಾತ್ತಾಪಬಟ್ಟು ಪಾಪಕರ್ಮಗಳನ್ನು ಮಾಡುವದನ್ನು ಬಿಟ್ಟುಕೊಟ್ಟನು. ಮುಂದೆ ಭಗವಂತನಲ್ಲಿ ಚಿತ್ತವೃತ್ತಿಯನ್ನು ನಿಲ್ಲಿಸಿ ಮರಣಹೊಂದಿದನು. ಆಗ್ಗೆ ವಿಷ್ಣುದೂತರು ಬಂದು ಆತನನ್ನು ವಿಷ್ಣುಲೋಕಕ್ಕೆ ತೆಗೆದುಕೊಂಡುಹೋದರು. –ಹೀಗಿರಲು, ಮಗನ ಮೇಲಿನ ಪ್ರೀತಿಯಿಂದ 'ನಾರಾಯಣ'ನೆಂದು ಹೆಸರಿಟ್ಟ ಭಗವಂತನ ನಾಮ ವನ್ನು ಉಚ್ಚರಿಸಿದ ಮಾತ್ರದಿಂದ, ಯಮಪಾಶದಿಂದ ಅಜಾಮಿಳನು ಬಿಡುಗಡೆ ಹೊಂದಿದನು. ಅಂದ ಮೇಲೆ, ಭಗವಂತನ ಮಂಗಳಕರ ಗುಣಕರ್ಮಗಳಿಂದ ಬಂದಿರುವ ಭಗವನ್ನಾಮಗಳನ್ನು ಭಕ್ತಿಪೂರ್ವಕ ಉಚ್ಚಾರ ಮಾಡುವವನಿಗೆ ನರ ಕದ ಯಾತನೆಗಳ ಭೀತಿಯು ತೊಲಗುವದೆಂದು ಬೇರೆ ಹೇಳಬೇಕಿಲ್ಲ. ಈ ಅಜಾ ಮಿಳನಿಗೆ ಆದಂತೆ, ಭಗವಂತನ ನಾಮ ಸಂಕೀರ್ತನೆಯು ಪಾಪಗಳ ನಿವಾರಣೆ ಮಾತ್ರ ಮಾಡುವದಲ್ಲದೇ, ಭಗವಂತನಲ್ಲಿ ಭಕ್ತಿಯನ್ನು ಹುಟ್ಟಿಸಿ, ಭಕ್ತಿಯಿಂದ ಮುಕ್ತಿಯನ್ನೂ ತಂದುಕೊಡುವದು.

ಹೀಗೆ ಹೇಳಿರುವರು:– "ಸ್ತೇನಃ ಸುರಾಪೊ ..... ವಿಷ್ಣೋರ್ಯತಸ್ತದ್ವಿ ಷಯಾಮತಿಃ (೬–೨–೯,೧೦) ಕಳ್ಳನು, ಕುಡುಕನು, ಗೆಳೆಯನಿಗೆ ಎರಡು ಬಗೆ ದವನು, ಬ್ರಾಹ್ಮಣನನ್ನು ಕೊಂದವನು, ಗುರುಪತ್ನಿಯ ಸಮಾಗಮ ಮಾಡಿದ ವನು ಸ್ತ್ರೀ, ರಾಜ, ತಂದೆ ಹಾಗೂ ಆಕಳು ಕೊಂದವನು, –ಈ ಬಗೆಯ ಇನ್ನೂ ಬೇರೆ ಪಾತಕಿಗಳು, ಎಲ್ಲ ಬಗೆಯ ಪಾಪಿಗಳಿಗೆ ಭಗವಂತನ ನಾಮ ಸಂಕೀರ್ತನ ಹಾಗೂ ಭಗವಂತನಲ್ಲಿ ತನ್ನ ಚಿತ್ತವೃತ್ತಿಯನ್ನು ನಿಲ್ಲಿಸುವದು, ಇದೊಂದೆ ಶ್ರೇಷ್ಠವಾದ ಪ್ರಾಯಶ್ಚಿತ್ತವಾಗಿದೆ. –ಮತ್ತೂ "ಅಯಂ ಹಿ ಕೃತನಿರ್ವೇಶೊ......

ಸ್ವಸ್ತ್ಯಯನಂ ಹರೇಃ" (೬-೨-೭) ಬುದ್ಧಿಪೂರ್ವಕವಾಗಿರದೆ, ತಿಳಿಯದೆಯೂ ಕೂಡ ಈತನು ಶ್ರೀಹರಿಯ ಮಂಗಳಕರ ನಾಮವನ್ನು ಉಚ್ಚರಿಸಿರುವನು. ಆದುದರಿಂದ ಕೋಟಿಜನ್ಮಗಳ ಪಾಪಗಳಿಗೆ ಈತನು ಪ್ರಾಯಶ್ಚಿತ್ತವನ್ನು ಮಾಡಿಕೊಂಡಂತಾಯಿತು. ಮತ್ತೂ "ಅಥೈನಂ ಮಾಪನಯತ.... ವೈಕುಂಠ ನಾಮಗ್ರಹಣಮಶೇಷಾಘಹರಂ ವಿದುಃ" ಮತ್ತೂ "ಪತಿತಃ, ಪುಮಾನ್ನಾಹರ್ತಿ ಯಾತನಾಂ" (೬-೨-೧೩,೧೪,೧೫)- ಮರಣ ಕಾಲದಲ್ಲಿ ಭಗವಂತನ ನಾಮೋಚ್ಚಾರಣ ಮಾಡುವದರಿಂದ, ತನ್ನ ಸಕಲ ಪಾಪಗಳಿಗೂ ಪ್ರಾಯಶ್ಚಿತ್ತವನ್ನು ಮಾಡಿಕೊಂಡಿರುವ ಈತನನ್ನು (ಯಮಲೋಕಕ್ಕೆ) ತೆಗೆದುಕೊಂಡು ಹೋಗಬೇಡಿರಿ" ಗುರುತಿಗಾಗಿಯೆ ಇರಲಿ, ಚೇಷ್ಟೆಗಾಗಿರಲಿ, ಅನಾದರದಿಂದಾಗಲಿ, ಅಪಮಾನಕ್ಕಾಗಲಿ, --ವೈಕುಂಠ ಪತಿಯಾದ ಶ್ರೀಹರಿಯ ನಾಮೋಚ್ಚಾರವು ಸಕಲ ಪಾಪಗಳನ್ನು ಪರಿಹರಿಸುವದೆಂದು (ಜ್ಞಾನಿಗಳು) ತಿಳಿದುಕೊಂಡಿರುವರು. ಬೀಳುವಾಗ್ಗೆ ಎಡಹುವಾಗ್ಗೆ ಕಚ್ಚಲ್ಪಟ್ಟಾಗ, ಪೆಟ್ಟು ತಿಂದಾಗ, -ಅಸಹಾಯನಾಗಿ ತಿಳಿಯದೆಯೂ 'ಶ್ರೀಹರಿ' ಎಂದು ಕೂಗುವ ಮಾನವನು ಯಮಯಾತನೆಗೆ ಎಂದೂ ಗುರಿಯಾಗನು. ಮತ್ತೂ- "ಮ್ರಿಯಮಾಣೋಪಿ ಶ್ರದ್ಧಯಾ ಗೃಣನ್" ಮತ್ತೂ "ಕೃತೆ ಯದ್ಧ್ಯಾಯತೋ ವಿಷ್ಣುಂ .... ತದ್ಧರಿ ಕೀರ್ತನಾತ್" (೬-೨-೫೨ ಹಾಗೂ ೧೧-೩-೫೨) ಮಗನ ನಿಮಿತ್ತ ಮಾಡಿಕೊಂಡು ಮರಣ ಕಾಲಕ್ಕೆ ಅಜಾಮಿಳನು ಶ್ರೀ ಹರಿಯ ನಾಮವನ್ನು ಉಚ್ಚರಿಸಿ ಮುಕ್ತಿಯನ್ನು ಪಡೆದನು. ಅಂದಮೇಲೆ ಶ್ರದ್ಧಾ-ಭಕ್ತಿಗಳಿಂದ ಶ್ರೀ ಹರಿಯ ನಾಮ ಸಂಕೀರ್ತನ ಮಾಡುವವರಿಗೆ ಮುಕ್ತಿಯು ಆಗದೇ ಇದ್ದೀತೆ ? ಮತ್ತು ಕೃತಯುಗದಲ್ಲಿ ಶ್ರೀ ವಿಷ್ಣುವಿನ ಧ್ಯಾನ ಮಾಡುವದು, ತ್ರೇತಾಯುಗದಲ್ಲಿ ಆತನನ್ನು ಕುರಿತು ಯಜ್ಞ-ಯಾಗಗಳನ್ನು ಮಾಡುವದು, ದ್ವಾಪರದಲ್ಲಿ ಆತನ ಪೂಜಾದಿ ಸೇವೆಯನ್ನು ಮಾಡುವದು, ಕಲಿಯುಗದಲ್ಲಿ ಶ್ರೀ ಹರಿನಾಮಸಂಕೀರ್ತನವನ್ನು ಮಾಡುವದರಿಂದ ಇವೆಲ್ಲ ಫಲ ದೊರೆಯುವವು.

**॥ ೫೪॥ ಪ್ರಾಯೇಣ ವೇದ ತದಿದಂ ನ ಮಹಾಜನೋಽಯಂ**
**ದೇವ್ಯಾ ವಿಮೋಹಿತಮತಿರ್ಬತ ಮಾಯಯಾಲಂ ।**
**ತ್ರಯ್ಯಾಂ ಜಡೀಕೃತಮತಿರ್ಮಧುಪುಷ್ಪಿತಾಯಾಂ**
**ವೈತಾನಿಕೇ ಮಹತಿ ಕರ್ಮಣಿ ಯುಜ್ಯಮಾನಃ ॥** ೬-೩-೨೫ (ಬ)

'ಭಗವನ್ನಾಮ ಸಂಕೀರ್ತನ' ರೂಪವಾದ ಸುಲಭವಾದ ಭಾಗವತ ಧರ್ಮಾನುಷ್ಠಾನಕ್ಕೆ ಇಷ್ಟೊಂದು ಮಹತಿಯು ಇರುತ್ತಿರಲು, ಜನರು (ನಾಮ ಸಂಕೀರ್ತನೆ ಮಾಡದೆ) ನರಕದ ದುಃಖಗಳನ್ನು ಏಕೆ ಅನುಭವಿಸುತ್ತಿರುವರು ? ಎಂದರೆ ನೀವು ಹೇಳುವದು ನಿಜ. ಆದರೆ ಭಗವನ್ನಾಮ ಸಂಕೀರ್ತನೆ ಮಾಡುವ ಭಾಗವತ

ಧರ್ಮವು ಎಲ್ಲರಿಗೂ ಲಭಿಸುವದಿಲ್ಲ. ಹಿಂದಿನ ಅನೇಕ ಜನ್ಮಗಳಲ್ಲಿ (ಭಾಗವ ಶಿರೋಮಣಿಗಳಾದ) ಮಹಾತ್ಮರ ಪಾದಧೂಳಿಯಿಂದ ಪುನೀತರಾದವರಿಗೆ (ದೀರ್ಘ ಕಾಲ ಅವರ ಸೇವೆಯನ್ನು ಮಾಡಿ ಜ್ಞಾನ ಭಕ್ತಿ ವೈರಾಗ್ಯಗಳನ್ನು ಪಡೆದವರಿ ಭಾಗವತ ಧರ್ಮಾನುಷ್ಠಾನದ ಮರ್ಮವನ್ನು ಚನ್ನಾಗಿ ತಿಳಿದುಕೊಂಡವರಿ ಮಾತ್ರ, ಭಗವನ್ನಾಮಸಂಕೀರ್ತನೆಯ ಮಹಿಮೆಯು ತಿಳಿಯುವದು. ಅದನ ಅವರು ಕೈಕೊಳ್ಳುವರು. ಭಗವದ್ಭಕ್ತರಾದ ಭಾಗವತರ ಸುದೀರ್ಘವಾದ ಸನ್ನಿಧಿ ಸೇವೆ ದೊರೆಯದಿರುವ ಹತಭಾಗ್ಯರ ಬುದ್ಧಿಯು ಭಗವಂತನ ಮಾಯೆಯಿಂ ಮಂಕಾಗುವದು. ಭಗವನ್ನಾಮ ಸಂಕೀರ್ತನೆಯನ್ನು ಬಿಟ್ಟು ಬೇರೆ ವಿಷಯ ಕಡೆಗೆ ಅವರು ಶ್ರದ್ಧೆಯನ್ನು ತಾಳಿ ನಾಮ ಸಂಕೀರ್ತನೆಯನ್ನು ಕಡೆಗಣಿಸುವರ ಆದುದರಿಂದ ಒಳ್ಳೇ ದುರ್ಲಭವಾಗಿರುವ ಭಗವನ್ನಾಮ ಸಂಕೀರ್ತನ ರೂಪವಾ ಭಾಗವತ ಧರ್ಮವನ್ನು ಅಗತ್ಯವಾಗಿ ಅಳವಡಿಸಿಕೊಳ್ಳಬೇಕು, ಎಂಬುದೆ ಇ ಆಶಯವಾಗಿದೆ.

**ಅರ್ಥ :–** ( ಪ್ರಾಯೇಣ ಇತಿ ) ಸಂಸಾರದಬಂಧನ ಹಾಗೂ ಅದರಿಂ ಬಿಡುಗಡೆಯ ವಿಷಯದಲ್ಲಿ ಸರಿಯಾದ ತಿಳುವಳಿಕೆಯಿಲ್ಲದ ಸಾಮಾನ್ಯ ಜನ ( ಮಹಾಜನ ) ಪರಮಾತ್ಮನ ಬಂಧಕ ಶಕ್ತಿಯಾದ ( ದೇವ್ಯಾ ) ಮಾ ಯಿಂದ ಮಂಕಾದ ಬುದ್ಧಿಯುಳ್ಳವರಾಗಿ ( ತದಿದಂ ) ಭಾಗವತ ಧರ್ಮಾ ನುಷ್ಠಾನದ ಮಹಿಮೆಯನ್ನು ಸಾಕಷ್ಟು ತಿಳಿದುಕೊಂಡಿರುವದಿಲ್ಲ. ಅದಲ್ಲ ಸ್ವರ್ಗಾದಿ ಸುಖಗಳನ್ನು ಕೊಡುವೆವೆಂಬ ತೋರಿಕೆಯ ( ಆಪಾತತಃ ) ಅರ್ಥ ವುಳ್ಳ ( ಮಧು ಪುಷ್ಪಿತ ) ವೇದಗಳ ವಚನಗಳಲ್ಲಿ ನಂಬಿಕೆಯಿಟ್ಟು, ಅ ಗಳಲ್ಲಿಯೆ ಆಸಕ್ತಿಯನ್ನು ವಹಿಸುವರು. ಆದುದರಿಂದ, ಬಹಳೇ ಆಯಾ ದಿಂದ ಯಜ್ಞ ಸಾಮಗ್ರಿಯನ್ನು ಕಲೆಹಾಕಿ, ಪ್ರಾಣಿ ಹಿಂಸೆಯ ಅಡಂಬರ ಯಜ್ಞ ಕಾರ್ಯಗಳಲ್ಲಿ ಅವರು ತೊಡಗುವರು.

||೩೫|| **ಏವಂ ವಿಮೃಶ್ಯ ಸುಧಿಯೋ ಭಗವತ್ಯನಂತೇ** ಎಮ್‌ಕಾ
**ಸರ್ವಾತ್ಮನಾ ವಿದಧತೇ ಖಲು ಭಾವಯೋಗಂ |** ದ್ಯಾತಿ
**ತೇ ಮೇ ನ ದಂಡಮರ್ಹಯತ್ಯಥ ಯದ್ಯಮೀಷಾಂ**
**ಸ್ಯಾತ್ಪಾತಕಂ ತದಪಿ ಹಂತ್ಯುರುಗಾಯವಾದಃ || ೬-೩-೨೬**

ಭಗವನ್ನಾಮಸಂಕೀರ್ತನೆ ಯೆಂಬ ಭಾಗವತ ಧರ್ಮದ ಮಹಿಮೆಯ ಸಾಮಾನ್ಯ (ಬಹುಸಂಖ್ಯಾಕ) ಜನರಿಗೆ ಗೊತ್ತಿಲ್ಲವೆಂದು ಹೇಳಿರುವದರಿಂದ, ಮಹಿಮೆಯನ್ನು ಬಲ್ಲವರಾದ ಕೆಲ ಜನರು ಇರುವರೆಂಬುದು ಸೂಚಿತವಾಗಿ

ಅವರು ಯಾರೆಂದರೆ, ಮಹಾತ್ಮರ (ಭಾಗವತೋತ್ತಮರ) ಸತ್ಸಂಗ ಹಾಗೂ ಸೇವೆಗಳಿಂದ ಭಾಗವತಧರ್ಮದ ಅನುಷ್ಠಾನದಲ್ಲಿ ತಮ್ಮ ಬುದ್ಧಿಯನ್ನು ಪೂರ್ಣವಾಗಿ ನೆಲಿಸಿದವರು-ಎಂಬುದೆ ಅಭಿಪ್ರಾಯ.

**ಅರ್ಥ :-** (ಏವಂ)-ಹಿಂದೆ ಹೇಳಿರುವ (ನಾಮಸಂಕೀರ್ತನಾದಿ) ಭಾಗವತ ಧರ್ಮಗಳ ಅನುಷ್ಠಾನದ (ಆಚರಿಸುವ) ಮಹಿಮೆಯನ್ನು ಆಲೋಚಿಸಿ ಚನ್ನಾಗಿ ತಿಳಿದುಕೊಂಡು, ಅನಂತನಾಮಕ ಭಗವಂತನಲ್ಲಿ (ದೇಹ, ವಾಕ್ಕು ಹಾಗೂ ಮನಸ್ಸುಗಳೆಂಬ) ತ್ರಿಕರಣ ಪೂರ್ವಕವಾಗಿ ಭಕ್ತಿ (ಭಾವ) ರೂಪವಾದ ಯೋಗವನ್ನು (ಆಧ್ಯಾತ್ಮಿಕಸಾಧನೆಯನ್ನು) ಅನುಷ್ಠಾನಮಾಡುವರು - ಭಗವಂತನಲ್ಲಿ ಸರ್ವಾತ್ಮನಾ ಭಕ್ತಿಯೋಗವನ್ನಾಚರಿಸುವ (ಅತ್ಯುತ್ಕಟ ಭಕ್ತಿಯುಳ್ಳ) ಅಂಥ ಭಗವದ್ಭಕ್ತರು ನನ್ನ (ಯಮರಾಜನ) ಶಿಕ್ಷೆಗೆ ಎಂದಿಗೂ ಗುರಿಯಾಗುವದಿಲ್ಲ. ಒಂದುವೇಳೆ, ಅವರು ಪಾಪಕೃತ್ಯಗಳನ್ನು ಮಾಡಿದ್ದರೂ, ಅವರು ಮಾಡುವ (ಉರುಗಾಯನಾದ) ಶ್ರೀಹರಿಯ (ವಾದ) ಗುಣ-ಕೃತಿಗಳ ಸಂಕೀರ್ತನೆಯು ಅವರು (ಅಜ್ಞಾನದಿಂದ) ಮಾಡಿದ ಪಾಪಗಳನ್ನೆಲ್ಲ ನಾಶಮಾಡುವದು.-ಆದುದರಿಂದ ಅಂಥ ಭಗವದ್ಭಕ್ತರನ್ನು ನರಕಕ್ಕೆ ತರಬೇಡಿರಿ, ಎಂಬುದು ಯಮನ ಆದೇಶ.

**||೩೫೬|| ಭೂತಾನಿ ವಿಷ್ಣೋಃ ಸುರಪೂಜಿತಾನಿ**
**ದುರ್ದರ್ಶಲಿಂಗಾನಿ ಮಹಾದ್ಭುತಾನಿ ।**
**ರಕ್ಷಂತಿ ತದ್ಭಕ್ತಿಮತಃ ಪರೇಭ್ಯೋ**
**ಮತ್ತಶ್ಚ ಮರ್ತ್ಯನಥ ಸರ್ವತಶ್ಚ ||** ೬-೩-೧೮

ಯಮರಾಜರು ಸಾತೀಗೆ

ಇದು ಮಾತ್ರವಲ್ಲದೆ, ಸಾಮಾನ್ಯಜನರ ಕಣ್ಣಿಗೆ ಕಾಣದಂತೆ, ಭಗವಂತನ (ಪಾರ್ಷದರು) ಸೇವಕರು ಅಂಥ ಭಕ್ತರ ಕಾವಲಿಗಾಗಿ ಅವರ ಸನಿಹದಲ್ಲಿ ಯಾವಾಗಲೂ ಇರುವರು. "ನನ್ನ (ಭಗವಂತನ) ಭಕ್ತರು (ಮರಣಾಧೀನವಾದ) ಮಾನವ ಜನ್ಮ ತಾಳಿರುವರು. (ಮಾನವರಾಗಿ ಹುಟ್ಟಿರುವರು). ಮಾನವ ಜನ್ಮದಲ್ಲಿ ಗಳಿಗೆ ಗಳಿಗೆಗೂ ಅನೇಕ ಆಪತ್ತುಗಳು ಎರಗುವವು. ಕೆಲವು ಆಪತ್ತುಗಳಿಗೆ ಹೊರಗಿನ ಸಂಗತಿಗಳು ಕಾರಣ; ಕೆಲವು ಆಪತ್ತುಗಳಿಗೆ ಆಂತರಿಕ (ತನ್ನೊಳಗಿನ) ಸಂಗತಿಗಳೆ ಕಾರಣ. ಯಮನು ನಿಮಿತ್ತಕ್ಕಾಗಿ ತನ್ನ ದೂತರೆಂದು ಕಳುಹುವ ರೋಗಾದಿಗಳು ಆಂತರಿಕ ಕಾರಣಗಳು. ನಾನು ಕ್ಲಪ್ತ (ಗೊತ್ತು) (ಮಾಡಿದ) ಸಮಯವನ್ನು ಬಿಟ್ಟು ಬೇರೆ ಸಮಯದಲ್ಲಿ ಎರಡು ಬಗೆಯ ಆಪತ್ತುಗಳೂ ನನ್ನ ಭಕ್ತರಿಗೆ ಎಂದಿಗೂ ಒದಗದಿರಲಿ" ಎಂದು ಭಗವಂತನು ಆಜ್ಞೆ

ಮಾಡಿರುವದರಿಂದ, ಇನ್ನು ಮೇಲಾದರೂ ಭಗವದ್ಭಕ್ತರ ಸಮೀಪಕ್ಕೆ ನೀವು ( ಯಮದೂತರು ) ಅಪ್ಪಿತಪ್ಪಿಯಾದರೂ ಹೋಗಕೂಡದು ಎಂಬ ಅಭಿಪ್ರಾಯವನ್ನೇ ಇಲ್ಲಿ ಹೇಳಿರುವರು.

**ಅರ್ಥ** :– ( ಭೂತಾನಿ ಇತಿ ) .. ( ಯಮಧರ್ಮನ ಮಾತುಗಳಿವು, – (ಭೂತಾನಿ) ವಿಷ್ಣುವಿನ ಸೇವಕರು ವಿಷ್ಣುಭಕ್ತರನ್ನು ನನ್ನಿಂದಲೂ, ಉಳಿದವರಿಂದಲೂ, ಸರ್ವ ಪರಿಯಾಗಿ ಕಾಪಾಡುವರು. ವಿಷ್ಣುವಿನ ಸೇವಕರು, ತಮ ವಿಶಿಷ್ಟ ಚಿನ್ಹ (ಗುರುತು)ಗಳನ್ನು ಯಾರಿಗೂ ತೋರಗೊಡರು, ಅವರು (ಉಳಿದ) ದೇವತೆಗಳಿಂದ ಪೂಜಿಸಲ್ಪಡುವರು.

॥೬೫೭॥ **ತಾನಾಯುಧ್ವಮಸತೋ ವಿಮುಖಾನ್ಮುಕುಂದ-** ಭಾ.ಪು.
**ಪಾದಾರವಿಂದಮಕರಂದರಸಾದಜಸ್ರಂ ।**
**ನಿಷ್ಕಿಂಚನೈಃ ಪರಮಹಂಸಕುಲೈಃ ರಸಜ್ಞೈ-**
**ರ್ಜುಷ್ಟಾದ್ಗೃಹೇ ನಿರಯವರ್ತ್ಮನಿ ಬದ್ಧತೃಷ್ಣಾನ್** ॥ ೬-೩-೨೮

ಹೀಗಿದ್ದರೆ (ಭಗವನ್ನಾಮ ಸಂಕೀರ್ತನದಿಂದ ನರಕದ ಭಯವೇ ತಪ್ಪುತ್ತಿದ್ದರೆ, ಎಲ್ಲರೂ ಭಗವಂತನ ನಾಮ ಸಂಕೀರ್ತನವನ್ನು ಮಾಡುವರು. ಆದರಿಂದ ಅವರು ಯಮನ ಶಿಕ್ಷೆಯಿಂದ ಪಾರಾಗಿ ಬಿಡುವರು. ಆನಂತರ, ಪಾಪಿಗಳಿಗೆ ದಂಡನೆ ವಿಧಿಸಬೇಕೆಂದು ಬ್ರಹ್ಮದೇವರು ನಮಗೆ ನೇಮಿಸಿಕೊಟ್ಟ ಉದ್ಯೋಗವೆ ಕಟ್ಟಾಗುವದು' –ಎಂಬ ಯಮದೂತರ ಸಂದೇಹವಿದು. ಭಗವನ್ನಾಮ ಸಂಕೀರ್ತನದ ಯೋಗವು ಸಕಲರಿಗೂ ದೊರೆಯುತ್ತಿದ್ದರೆ, ನಿಮ್ಮ ಸಂದೇಹವು ದಿಟವಾದೀತು. ಆದರೆ ಆ ಯೋಗವು ಸಕಲರಿಗೂ ದೊರೆಯುವದೇ ಇಲ್ಲ. ಆದುದರಿಂದ ಭಗವಂತನ ನಾಮ ಸಂಕೀರ್ತನೆಯನ್ನು ಮಾಡದವರು, ಭಗವದಾರಾಧನೆಯ (ವಿಮುಖ) ಆಸ್ಥೆ–ಆಸಕ್ತಿಯಿಲ್ಲದವರು, ವಿಷಯ ಸುಖವನ್ನೇ ಮೆಚ್ಚಿ–ಕೊಂಡವರು ನಿಮ್ಮ ಶಿಕ್ಷೆಗೆ ಪಾತ್ರರಾಗಿರುವರು. ಆದುದರಿಂದ ನಿಮ್ಮ ವೃತ್ತಿಗೆ ಭಂಗ ಬರುದಿಲ್ಲ. ಈ ಅಭಿಪ್ರಾಯದಿಂದ ಇಲ್ಲಿ ಹೇಳುವರು:–

**ಅರ್ಥ**:– (ತಾನ್ ಇತಿ)– ವೇದಶಾಸ್ತ್ರದ ಸಾರವನ್ನು ತಿಳಿದುಕೊಂವರು (ರಸಜ್ಞರು) ಶ್ರೇಷ್ಠವಾದುದನ್ನೇ ತಗೆದುಕೊಳ್ಳುವವರು ಹಾಗೂ ಅ ನಿರ್ಮಲ ( ದೋಷರಹಿತ ) ಮನಸ್ಸುಳ್ಳವರೂ ( ಪರಮಹಂಸರು ) ಹಾಗ ಕಿಂಚಿತ್ತೂ ಧನದ ಲೋಭವಿಲ್ಲದವರು – ಅಥವಾ-ಭಗವಂತನನ್ನೇ ಸಂಪೂರ್ಣವಾಗಿ ಆಶ್ರಯಿಸಿರುವ (ನಿಷ್ಕಿಂಚನ) ಭಾಗವತ ಶಿರೋಮಣಿಗಳು (ಶ್ರೇಷ್ಠ ಭ

ದ್ಭಕ್ತರು) ನಿತ್ಯವೂ ಸೇವಿಸುತ್ತಿರುವ, ಮುಕ್ತಿದಾಯಕ ಮುಕುಂದನ ಪಾದ ಕಮಲದೊಳಗಿನ ಮಕರಂದ ರಸ (ಅಮೃತರಸ)ದಲ್ಲಿ ಅಭಿರುಚಿ - ಆಸಕ್ತಿಯಿಲ್ಲದವರು, ದುರ್ಜನರು, ಹಾಗೂ ಯಾವಾಗಲೂ ನರಕಕ್ಕೆ ದಾರಿಯಂತಿರುವ ಕೌಟುಂಬಿಕ ಸುಖದಲ್ಲಿ ಅತ್ಯಾಸಕ್ತಿಯನ್ನು ತಾಳುವವರು ಇಂಥ ಜೀವರನ್ನು (ನರಕಕ್ಕೆ) ತೆಗದುಕೊಂಡು ಬನ್ನಿರಿ.

**||೩೯|| ಜಿಹ್ವಾ ನ ವಕ್ತಿ ಭಗವದ್ಗುಣನಾಮಧೇಯಂ**
**ಚೇತಶ್ಚ ನ ಸ್ಮರತಿ ತಚ್ಚರಣಾರವಿಂದಂ |**
**ಕೃಷ್ಣಾಯ ನೋ ನಮತಿ ಯಚ್ಛಿರ ಏಕದಾಪಿ**
**ತಾನಾನಯಧ್ವಮಸತೋಽಕೃತವಿಷ್ಣುಕೃತ್ಯಾನ್ || ೬-೩-೨೯**

(ನನು) ನೀವು ಹೇಳುವದರಲ್ಲಿ ಒಂದು ಸಂದೇಹ ಉಂಟಾಗುತ್ತದೆ. 'ಭಗವನ್ನಾಮ ಸಂಕೀರ್ತನ ಮುಂತಾದವುಗಳಿಂದ ಸಕಲ ಜನರು ಭಗವಂತನ ವಿಷಯ ಯದಲ್ಲಿ ಆಸಕ್ತರಾಗುವದಿಲ್ಲ ಎಂಬ ಮಾತು ನಿಜ. ಅದರಿಂದ ಯಮದೂತರ ಕಾರ್ಯವೇ ನಿಂತುಹೋಗುವದಿಲ್ಲವೆಂಬುದೂ ನಿಜ. ಆದರೆ, ಭಗವನ್ನಾಮ ಸಂಕೀರ್ತನಾದಿಗಳನ್ನು ಮಾಡದೆ, ಭಗವದ್ವಿಷಯದಲ್ಲಿ ಆಸಕ್ತಿಯಿಲ್ಲದವರು (ವಿಮುಖರಾದವರು) ಮಾತ್ರ ನಿಮ್ಮ ಶಿಕ್ಷೆಗೆ ಒಳಪಡುತ್ತಾರೆ' ಎಂಬ ನಿಮ್ಮ ಹೇಳಿಕೆಗೆ ನಮ್ಮ ಮನಸ್ಸು ಒಪ್ಪುವದಿಲ್ಲ. ಏಕೆಂದರೆ, ಭಗವನ್ನಿಷ್ಠರಾದ ಕೆಲವು ಸಜ್ಜನರೂ ಕಾಲಾಂತರದಲ್ಲಿ ಭಗವತ್ಸೇವೆಯನ್ನು, ಭಗವಂತನಿಗೆ ಪ್ರಿಯವಾಗಿರುವ ಧರ್ಮಾಚರಣೆಯನ್ನು ಬಿಟ್ಟುಕೊಡುವದು ಕಂಡಿದೆ. ಅಜಾಮಿಳನೇ ಇದಕ್ಕೆ ಉದಾಹರಣೆ. ಅದರಂತೆಯೆ ಮೊದಲು ದುರಾಚಾರಿಗಳಾಗಿ ಮುಂದೆ ಭಗವನ್ನಾಮ ಸಂಕೀರ್ತನಾದಿಗಳಿಂದ ಭಗವನ್ನಿಷ್ಠರಾದ ಕೆಲ ಜನರೂ ಕಂಡುಬರುವರು. ಸಜ್ಜನರು, ದುರ್ಜನರೆಂಬುದು ನಿಶ್ಚಿತವಾದುದಲ್ಲ. ಹೀಗಿರಲು ಸಜ್ಜನರ ಗೊಡವೆಗೆ ಹೋಗದೆ, ಭಗವದ್ವಿಮುಖರಾದ ದುರಾಚಾರಿಗಳನ್ನು ನರಕಕ್ಕೆ ಎಳೆದು ತನ್ನಿರಿ' ಎಂಬ ಯಮದೇವರ ಮಾತಿನ ಅರ್ಥವು ನಮಗೆ ಚನ್ನಾಗಿ ತಿಳಿಯದಂತಾಗಿದೆ. ಎಂದು ಸಂಶಯಪಡುವವರಿಗೆ, ಈ ಮೊದಲು ಹೇಳಿದ್ದನ್ನೇ ಹೆಚ್ಚು ಸ್ಪಷ್ಟಗೊಳಿಸುವರು.

**ಅರ್ಥ :-** (ಜಿಹ್ವಾ ಇತಿ):- (ಈ ಶ್ಲೋಕದಲ್ಲಿ 'ಏಕದಾ ಅಪಿ' 'ಒಮ್ಮೆಯಾದರೂ ಕೂಡ'- ಎಂಬ ಪದವನ್ನು ಇಲ್ಲಿ ಹೇಳಿರುವ ಸಕಲ ಕ್ರಿಯೆಗಳಿಗೂ ಹೊಂದಿಸಿಕೊಳ್ಳಬೇಕು. ಈ ಕ್ರಿಯೆಗಳೆಲ್ಲ 'ಭಗವದಾರಾಧನೆ' ಯೆಂಬುದಕ್ಕೆ ಲಾಕ್ಷಣಿಕಗಳಾಗಿವೆ. 'ಭಗವದಾರಾಧನೆ'ಯೆಂಬ ಅರ್ಥವನ್ನೇ ಸೂಚಿಸುತ್ತವೆ. ಯಾರು

ತಮ್ಮ ನಾಲಿಗೆಯಿಂದ ಭಗವಂತನ ಅನಂತಗುಣ-ಲೀಲಾಕೃತಿಗಳ ಹೆಸರುಗಳ
ಒಮ್ಮೆಯಾದರೂ ನುಡಿಯುವದಿಲ್ಲ; ಭಗವಂತನ ಪಾದಕಮಲಗಳನ್ನು ಯಾ
ಮನಸ್ಸು ಭಕ್ತಿಯಿಂದ ಸ್ಮರಿಸುವದಿಲ್ಲ; ಯಾರ ತಲೆಯು ಭಗವಂತನ ಪಾ
ಕಮಲಗಳಿಗೆ ಒಮ್ಮೆಯಾದರೂ ಭಕ್ತಿಯಿಂದ ಬಾಗುವದಿಲ್ಲ. ಈ ರೀತಿಯಾ
ಶ್ರೀ ವಿಷ್ಣುವಿನ ಆರಾಧನೆಯನ್ನು ಮಾಡದಿರುವ ದುರ್ಜನರನ್ನು ನರಕ
ಎಳೆದು ತನ್ನಿರಿ.

ಯಮಧರ್ಮನು ತನ್ನ ದೂತರಿಗೆ ಕೊಟ್ಟ ಆದೇಶವಿದು.

ಭಗವದ್ಭಕ್ತರು ಮಾಡುವ ನಾಮಸಂಕೀರ್ತನಾದಿಗಳು ಸಫಲವಾಗುವ
ಭಗವಂತನಲ್ಲಿ ನಿರ್ದೋಷ ಭಕ್ತಿಯಿಲ್ಲದವರು ಮಾಡುವ ಭಗವದಾರಾಧನೆ ನಿರರ್ಥ
ಕವೆಂಬುದು ನಿಶ್ಚಿತವಾದ ಸಿದ್ಧಾಂತ.

ಹೀಗೆ ಹೇಳಿರುವರು :- "ಪ್ರಾಯಶ್ಚಿತ್ತಾನಿ ಚೀರ್ಣಾನಿ .... ಸುರಾಕುಂ
ಮಿವಾಪಗಾ " -ಸೆರೆ ತುಂಬಿದ ಪಾತ್ರೆಯು (ಯಾವುದೇ) ನದಿಯ ನೀರಿನಿಂದಲ
ಪವಿತ್ರವಾಗಲಾರದು, ಅದರಂತೆಯೇ, ಭಗವದ್ಭಕ್ತಿಯಿಲ್ಲದ ಜನರು ಕೈಕೊಳ್ಳ
(ಸಕಲ) ಪ್ರಾಯಶ್ಚಿತ್ತಗಳೂ ಅವರ ಪಾಪಗಳನ್ನು ಕಳೆಯಲಾರವು. ನಿಷ್ಠೆಯು
ವಾದ ಭಕ್ತಿಯು ಸದಾಚಾರಿಗಳಾದ ಸಜ್ಜನರಿಗೆ ಲಭಿಸುವದು, ಭಗವಂತನಿ
ವಿಮುಖರಾದ ದುರ್ಜನರು ಅಂಥ ಭಕ್ತಿಯನ್ನೂ ಎಂದಿಗೂ ಪಡೆಯಲಾರರ
ಯಾವುದೇ ಕ್ಷಣಿಕ ನಿಮಿತ್ತದಿಂದ, ಸಜ್ಜನರು ತಮ್ಮ ಭಗವನ್ನಿಷ್ಠೆಯನ್ನು ಕಳೆದ
ಕೊಂಡಿದ್ದರೆ, ತಂದೆಯು ತನ್ನ ಮಗನ ತಪ್ಪನ್ನು ಕ್ಷಮಿಸುವಂತೆ, ಅಜಾಮಿ
ನನ್ನು ಕ್ಷಮಿಸಿದಂತೆ, ಕರುಣಾಳುವಾದ ಭಗವಂತನು ತನ್ನ ಭಕ್ತ
ತಪ್ಪನ್ನು ತಾನಾಗಿಯೆ ಕ್ಷಮಿಸುವನು. ಆದುದರಿಂದಲೇ, 'ಒಮ್ಮೆಯ
ಹರಿನಾಮವನ್ನು ನುಡಿಯದವನು' ಎಂದರೆ, ಸದ್ಯದ ಜನ್ಮದಲ್ಲಿಯಾಗ
ಮುಂಚಿನ ಜನ್ಮಗಳಲ್ಲಿಯಾಗಲಿ, ಒಮ್ಮೆಯಾದರೂ ಎಂದೆಂದಿಗೂ
ಶ್ರೀಹರಿನಾಮೋಚ್ಚಾರ ಮಾಡದವನು, ಎಂಬರ್ಥವಾಗಿದೆ. ಅದರಂತೆಯೇ ಒಮ
ಯಾದರೂ ಭಗವದಾರಾಧನೆಯನ್ನು ಮಾಡದ (ಭಗವದ್ಭಕ್ತಿರಹಿತರಾದ) ದುರ್ಜ
ನರ ಬಗ್ಗೆ ಹೇಳಿದಮಾತು. ಇಂಥ ದುರ್ಜನರು, (ಭಕ್ತಿಯಿಲ್ಲದೆ) ಯಾವಾಗಲ
ಒಮ್ಮೆ ಮಾಡುವ ಭಗವದಾರಾಧನೆ ನಿರರ್ಥಕವೆಂದು ಹೇಳಿದೆ. ಆದುದರಿಂ
ಯಮರಾಜನು ತನ್ನ ದೂತರಿಗೆ ಹೇಳಿದುದು. - 'ಶ್ರೀ ಹರಿಭಕ್ತರಿಗೆ ಕೈಹಚ್ಚ
ಡಿರಿ. ಅಭಕ್ತರಾದ ದುರ್ಜನರನ್ನು ಮಾತ್ರ (ನರಕಕ್ಕೆ) ಎಳೆದು ತನ್ನಿರಿ' -ಏಕೆ
ದರೆ, "ರಕ್ಷಂತಿ...... ಮೃತ್ಯುಶ್ಚ" (೬-೩-೧೮) ಶ್ರೀಹರಿಯ (ಪಾರ್ಷದರು) ಅ

ಚರರು ಹರಿಭಕ್ತರನ್ನು ಉಳಿದವರಿಂದಲೂ, ನನ್ನಿಂದಲೂ ( ಕೂಡ ) ರಕ್ಷಿಸುತ್ತಿರುವರು. ಇಲ್ಲಿ ಒಂದು ಆಕ್ಷೇಪಃ- ಮುಕ್ತಿಯೋಗ್ಯ ಜೀವರಿಗೆ ಮಾತ್ರ 'ನಿರಯ' ವಾಗುವದಿಲ್ಲವೆಂಬ ಹೇಳಿಕೆಯೂ, ಅವರಿಗೆ ಯಮದಂಡನೆಯಾಗುವದಿಲ್ಲವೆಂಬ ಇಲ್ಲಿಯ ಹೇಳಿಕೆಯೂ ವಿಸಂಗತವಾಗುವದಿಲ್ಲವೆ? ಎಂದು ಕೇಳಿದರೆ, -ನಿರಯ ಶಬ್ದಕ್ಕೆ ಪಶುಪಕ್ಷಿ ಮುಂತಾದ, ನೀಚ ಯೋನಿಗಳು, (ಭಗವದ್‌ಜ್ಞಾನದ ಅರಿವೇ ಇಲ್ಲದ ತೀರ ಕೆಳಮಟ್ಟದ ಜೀವಿಗಳು) ಎಂಬ ಅರ್ಥವಿದೆ. ಅಂತೆಯೆ, 'ಮಾತ್ರಾತ್ಮ ಕತ್ವಾನ್ನಿರಯೆ ಸುಸಂಗಮಃ' -ಇಂದ್ರಿಯಜನ್ಯ ಸುಖಗಳು 'ನಿರಯ'ದಲ್ಲಿ (ಪಶು ಮುಂತಾದ ಕೀಳು ತರಗತಿಯ ಪ್ರಾಣಿಗಳಲ್ಲಿ) ದೊರೆಯುವವು. 'ಯತ್ ಸ್ಪರ್ಶಜಂ ನರಕೇಪಿ ನೃಣಾಂ' ಇಂದ್ರಿಯಜನ್ಯ ಸುಖಗಳು 'ನರಕ'ದಲ್ಲಿಯೂ ದೊರೆಯುವವು "ಯೇ ನಾರಕಾಣಾಮಪಿ ಸಂತಿ ದೇಹಿನಾಂ"- ನರಕವಾಸಿಗಳಿಗೂ ಇಂದ್ರಿಯಜನ್ಯ (ವೈಷಯಿಕ) ಸುಖಗಳು ಲಭಿಸುವವು.

ಇತ್ಯಾದಿ ವಾಕ್ಯಗಳಲ್ಲಿ, ಕೆಳಮಟ್ಟದ (ಭಗವತ್‌ಜ್ಞಾನದ ಸಂಬಂಧವೇ ಇಲ್ಲದ) ಪ್ರಾಣಿಗಳು ಎಂಬ ಅರ್ಥದಲ್ಲಿಯೆ 'ನಿರಯ' ಶಬ್ದವನ್ನು ಹೆಚ್ಚಾಗಿ ಬಳಸಿರುವದು ಕಂಡುಬರುವದು. ಇದರಂತೆಯೆ, 'ಅಜ್ಞಾನ' ವೆಂಬ ಶಬ್ದವನ್ನು 'ಅಂಧಂತಮ' ವೆಂಬುದಕ್ಕೆ ಪ್ರತಿಯಾಗಿ ಉಪಯೋಗಿಸಿರುವದು ಕಂಡುಬರುವದು. ಆದರೆ ಇಷ್ಟುಮಾತ್ರಕ್ಕೆ 'ಅಜ್ಞಾನ' ವೆಂದರೆ, 'ಅಂಧಂತಮಸ್ಸು' -ಎಂಬ ಅರ್ಥ ವನ್ನು ತೆಗೆದುಕೊಳ್ಳುವದು ಶಕ್ಯವಾಗದು. ಆದುದರಿಂದ ಭಗವದ್ಭಕ್ತರಿಗೆ ನರಕದ ಯಾತನೆಗಿಂತಲೂ (ಭಗವದ್ವಿಷಯಕ) ಅಜ್ಞಾನವೇ ಹೆಚ್ಚು ಕ್ಲೇಶವನ್ನುಂಟು ಮಾಡುವದು. 'ತ್ವತ್ಪಾದಾಂಬುಜಸ್ಮೃತಿಶ್ಚೇತ್ ನಿರಯೋಪ್ಯಸ್ತು' ನಿನ್ನ (ಪರಮಾ ತ್ಮನ) ಪಾದಕಮಲಗಳ ಸ್ಮರಣೆಯೊಂದಿದ್ದರೆ, ನಮಗೆ 'ನಿರಯ'ವೂ (ಕೆಳಮಟ್ಟದ ಪ್ರಾಣಿಗಳಲ್ಲಿ ಜನ್ಮವೂ) ಇರಲಿ,' ಎಂದು ಸನಕಾದಿಗಳು ಶ್ರೀಹರಿಗೆ ಬೇಡಿಕೊಂ ಡಿರುವರು, " ಕಾಮಂ ಭವೇಮ .. ಪದಯೋ ರಮೇತ್), ' ನಮ್ಮ ಮನಸ್ಸು ನಿನ್ನ (ಭಗವಂತನ) ಪಾದಕಮಲದಲ್ಲಿ ಭ್ರಮರದಂತೆ ನಲಿಯುವಂತಾದರೆ, ಪಾಪ ಕರ್ಮಗಳಿಂದ ಕೆಟ್ಟುಹೋಗಿ ನಮಗೆ 'ನಿರಯ'ವು, (ಕೀಳು ಯೋನಿಗಳಲ್ಲಿ ಜನ್ಮವು ಬಂದರೂ ಪರವಾ ಇಲ್ಲ' ಇತ್ಯಾದಿ ಹಿಂದಿನ ಶ್ಲೋಕಗಳಲ್ಲಿ 'ನಿರಯ' ಶಬ್ದವನ್ನು ಇದೇ ಅರ್ಥದಲ್ಲಿ ಬಳಸುವದು ಕಂಡುಬರುವದು.

ಭಗವಂತನು ಕೊಡುವ ಶಿಕ್ಷೆ ಅವರವರ ಯೋಗ್ಯತೆಗೆ (ಸ್ಥಾನಮಾನಗಳಿಗೆ) ಅನುಗುಣವಾಗಿಯೆ ಇರುವದೆಂಬುದಕ್ಕೆ ಜನರಿಗೆ ಚೆನ್ನಾಗಿ ಗೊತ್ತಿರುವ ಉದಾಹ ರಣೆಯನ್ನು ಕೊಡುವರು. ಮಂತ್ರಿ, ಅಧಿಕಾರಿ, ರಾಜಪುತ್ರ ಕಳ್ಳ, - ಇವರು

ಮಾಡುವ ಸಮಾನವಾದ ಒಂದೇ ಅಪರಾಧಕ್ಕೆ ಅವರವರ ಸ್ಥಾನಮಾನಕ್ಕೆ
ಅನುಗುಣವಾಗಿ ಶಿಕ್ಷೆಯಾಗುವದು. ಅದರಂತೆಯೆ ಭಗವದ್ಭಕ್ತರ ಸ್ವರೂಪಭೂ
(ಸ್ವಾಭಾವಿಕ)ವಾದ ಭಕ್ತಿ ಜ್ಞಾನಾದಿಗಳನ್ನು ಕಡೆಗಣಿಸಿ, ಯಾವುದೋ ಕ್ಷಣಿ
(ತಾತ್ಕಾಲಿಕ) ನಿಮಿತ್ತದಿಂದ ಅವರು ಮಾಡುವ (ಮೂಲ ಸ್ವರೂಪಕ್ಕೆ ವಿರುದ್ಧ
ವಾದ) ಪಾಪಕೃತ್ಯವನ್ನೇ ಎತ್ತಿಕೊಂಡು, ಅಭಕ್ತರಂತೆಯೆ ಅವರನ್ನು ಪರಿಗಣಿ
(ಭಾವಿಸಿ), ಸುಡುವದು, ಹೊಡೆಯುವದು ಮುಂತಾದ ಕಠಿಣ ಶಿಕ್ಷೆಗಳನ್ನು ಕರ
ಣಾಳುವಾದ ಯಮಧರ್ಮನು ಭಗವದ್ಭಕರಿಗೆ ಹೇಗೆ ಮಾಡುವನು ? ಎಂದಿಗ
ಮಾಡುವದಿಲ್ಲ. ಭಗವದ್ಭಕ್ತರಾದ ಸಜ್ಜನರ ಮನಸ್ಸು ಬಹುಶಃ ಸ್ವಾಭಾವಿಕವಾ
ಗಿಯೆ) ಪಾಪಕೃತ್ಯಕ್ಕೆ ಹರಿಯುವದಿಲ್ಲ. ಕ್ಷಣಿಕ ನಿಮಿತ್ತದಿಂದಲೂ ಮುಂದ
ಎಂದಾದರೂ ಅವರ ಮನಸ್ಸು ಪಾಪಕೃತ್ಯದ ಕಡಗೆ ಹರಿಯಬಾರದು. ಹಾಗೆ
ಹರಿದರೆ, ಯಾವ ಅನರ್ಥವು ಒದಗುವದೆಂಬುದನ್ನು ಅವರ ದೃಷ್ಟಿಗೆ ತರುವದ
ಕ್ಕಾಗಿಯೆ . 'ನರಕಾದಿ ಅನರ್ಥಗಳು ಒದಗುವವು' ಎಂದು ಹೇಳುವುದರ ಉದ್ದೇ
ಶವಾಗಿದೆ. -ಉದಾಹರಣೆಗಾಗಿ,- ' ಈ (ಕೆಟ್ಟ) ಕೆಲಸವನ್ನು ನೀವು ಮಾಡಬಾ
ರದು. ಮಾಡಿದರೆ ನೀವು ಬಡಿಗೆಯ ಏಟು ತಿನ್ನಬೇಕಾಗುವದು' ಹೀಗೆ ತಂದೆಯು
ಮಗನಿಗೆ, ಗುರುವು ತನ್ನ ಶಿಷ್ಯನಿಗೆ ಹೇಳುವನು. ಸ್ವತಃ( ಸ್ವಭಾವದಿಂದಲೆ
ಸದಾಚಾರಿಗಳೂ, ಸುಶೀಲರೂ ಆಗಿರುವ ಮಕ್ಕಳಾಗಲಿ, ಶಿಷ್ಯರಾಗಲಿ, ಅಕಾರ್ಯ
ದಲ್ಲಿ ಎಂದಿಗೂ ತೊಡಗುವದಿಲ್ಲ. ಅವರು ಈ ಮೊದಲು ಹೀಗೆ ಅಕಾರ್ಯವನ್ನು
ಮಾಡಿದ್ದನ್ನು ಕುರಿತೇ ಈ ಬೆದರಿಕೆಯ ಮಾತುಗಳು. ಹಿಂದೆ ಮಾಡಿದ ಅಕಾ
ರ್ಯದ ಸಂಸ್ಕಾರದಿಂದ, ಮತ್ತೆ ಅಕಾರ್ಯಕ್ಕೆ ಅವರು ಪ್ರವೃತ್ತರಾದರೆ, ಗುರು
ತಂದೆಗಳ ಹಿತವಚನವನ್ನು ಕೇಳಿಯೂ ಹೀಗೆ ಮಾಡಿದರೆ, ಅಂಥ ಮಕ್ಕಳನ್ನು
ತಂದೆಯು, ಅಂಥ ಶಿಷ್ಯರನ್ನು ಗುರು ತನ್ನ ಹಿತೋಕ್ತಿಯನ್ನು ಮೀರಿ ನಡೆಯುವ
ದಕ್ಕಾಗಿ ಸಿಟ್ಟಿಗೆದ್ದು ಶಿಕ್ಷಿಸಿಯೆ ಬಿಡುವನು. -ಗುರು ತಂದೆಗಳು ಹೀಗೆ ಮಾಡುವ
ಶಿಕ್ಷೆಯನ್ನು ನೋಡಿಕೊಂಡು, ಒಳ್ಳೇ ಸ್ವಭಾವದ ಮಕ್ಕಳು ಹಾಗೂ ಶಿಷ್ಯರ
ಹೆದರಿಕೊಂಡು ಅಕಾರ್ಯದಿಂದ ದೂರ ಉಳಿಯುವದು, ಏಕೋ ಕಾಲು ಜಾರಿ
ಯಾವುದೋ ಕ್ಷಣಿಕಕಾರಣದಿಂದ, ಸುಶೀಲರಾದ ಮಕ್ಕಳು, ಶಿಷ್ಯರು ಕಿಂಚಿತ
ತಪ್ಪು ಮಾಡಬಹುದು. ಅಂಥ ಸನ್ನಿವೇಶದಲ್ಲಿ, ಅವರ ಒಳ್ಳೇ ಸ್ವಭಾವವನ್ನರಿತವ
ರಾದ ತಂದೆ ಇಲ್ಲವೆ ಗುರು – 'ಅಕಾರ್ಯಮಾಡುವದು ಇವರ ಸ್ವಭಾವವಾಗಿಲ್ಲ
ಅಜ್ಞಾನದಿಂದೇ ತಪ್ಪಾಗಿದೆ' – ಎಂದು ಭಾವಿಸಿ, ಅವರ ಸ್ವಾಭಾವಿಕ ಗುಣದ
ಕಡೆಗೆ ದೃಷ್ಟಿಯನ್ನಿಟ್ಟು ಅವರನ್ನು ಕ್ಷಮಿಸುವರು. ಈ ದೃಷ್ಟಿಯಿಂದಲೇ ಭಗವಂ
ನಾದರೂ ತನ್ನ ಸದ್ಭಕ್ತರು ಪ್ರಮಾದದಿಂದ ಮಾಡುವ ಕ್ಷಣಿಕ ಅಪರಾಧಗಳನ್ನು

ಕ್ಷಮಿಸಿಬಿಡುವನು, ಅಂತೆಯೆ, 'ತೇ ಮೇ ನ ದಂಡಂ ...... ಉರುಗಾಯವಾದಃ' (೬-೨-೨), ಭಗವಂತನ (ಉರುಗಾಯ) ನಾಮ ಸಂಕೀರ್ತನೆಯನ್ನು ಮಾಡುವವರು ನನ್ನ ಶಿಕ್ಷೆಗೆ ಪಾತ್ರರಾಗುವದಿಲ್ಲ' ಎಂದು ಯಮಧರ್ಮನು ಹೇಳಿರುವನು. ಒಂದು ವೇಳೆ (ಅಕ್ಷಮ್ಯವಾದ) ಘೋರ ಅಪರಾಧವನ್ನು ಅವರು ಮಾಡಿದರೆ, ಅದಕ್ಕೆತಕ್ಕುದಾದ ಶಿಕ್ಷೆಯನ್ನು ಅವರು ಅನುಭವಿಸಬೇಕಾಗುವದು. ಹೀಗೆಯೆ, ಭಗವತ್ ಸಾಕ್ಷಾತ್ಕಾರ (ಅಪರೋಕ್ಷ) ವಾದ ನಂತರ ಹಾಗೂ ಅದಕ್ಕೂ ಮೊದಲು ಭಗವಂತನ ನೈಜ ಭಕ್ತರಿಗೆ ಯಮದಂಡನೆಯ ಪ್ರಸ್ತಾಪವೇ ಇರುವದಿಲ್ಲ-ಆದುದರಿಂದ 'ಕದಾಪಿ ... ಆನಯಧ್ವಂ' ಯಾರು ಒಮ್ಮೆಯಾದರೂ ಭಗವನ್ನಾಮ ನುಡಿಯುವದಿಲ್ಲವೋ, ಅಭಕ್ತರಾದ ಅಂಥ ದುರ್ಜನರನ್ನು ನರಕಕ್ಕೆ ಎಳೆದುತನ್ನಿರಿ' ಎಂದು ಈ ಶ್ಲೋಕದಲ್ಲಿ ಹೇಳಿದುದು ಸಮರ್ಪಕವಾಗಿದೆ.

**||೩೭|| ತತ ಕ್ಷಮ್ಯತಾಂ ಸ ಭಗವಾನ್ ಪುರುಷಃ ಪುರಾಣೋ**
**ನಾರಾಯಣಃ ಸ್ವಪುರುಷೈರ್ಯದಸತ್ಕೃತಂ ನಃ |**
**ಸ್ವಾನಾಮಹೋ ನ ವಿದುಷಾಂ ರಚಿತಾಂಜಲೀನಾಂ**
**ಕ್ಷಾಂತಿರ್ಗರೀಯಸಿ ನಮಃ ಪುರುಷಾಯ ಭೂಮ್ನೇ || ೬-೩-೩೦**

ಯಮ ಶ್ರೀಹರಿಯ ಕ್ಷಮೆ

ತನ್ನ ದೂತರು ಅಜಾಮಿಳನನ್ನು ನರಕಕ್ಕೆ ತರಲು ಹೋದ ತಪ್ಪಿಗಾಗಿ ಯಮನು ಪಶ್ಚಾತ್ತಾಪ ಪಟ್ಟು, ಶ್ರೀ ಹರಿಯಲ್ಲಿ ಕ್ಷಮೆ ಕೇಳುತ್ತಾನೆ.

**ಅರ್ಥ :-** ( ಭಗವದ್ಭಕ್ತರು ಶಿಕ್ಷೆಗೆ ಪಾತ್ರರಲ್ಲ-ಆದಕಾರಣ ಭಗವದ್ಭಕ್ತನಾದ ಅಜಾಮಿಳನನ್ನು ನರಕಕ್ಕೆ ತರಲು ಹೋದುದು) ನಮ್ಮಿಂದ ಅಯೋಗ್ಯ-ಅನುಚಿತ ಕಾರ್ಯವಾಯಿತು. (ನನ್ನಿಂದಾಗಲಿ, ಅನ್ಯರಿಂದಾಗಲಿ ತನ್ನ ಭಕ್ತರನ್ನು ಕಾಪಾಡಲು ಪುರಾಣಪುರುಷನಾದ, ಕರುಣಾಳುವಾದ ಶ್ರೀ ಮನ್ನಾರಾಯಣನು ಎಲ್ಲೆಡೆಯಲ್ಲಿಯೂ ತನ್ನ ಪರಿಚಾರಕರನ್ನು ನೇಮಿಸಿರುವನು.) ನನ್ನ ದೂತರು ತಿಳಿಯದೇ ಮಾಡಿದ ಅಪರಾಧವನ್ನು ಭಗವಂತನು ಕೃಪೆಯಿಂದ ಕ್ಷಮಿಸಲಿ. ಅಜ್ಞಾನದಿಂದ ಒಮ್ಮೆ ಮಾಡಿದ, ಈಗ್ಗೆ ಕೈಜೋಡಿಸಿ ಕ್ಷಮೆಯನ್ನು ಬೇಡಿಕೊಳ್ಳುವ ನನ್ನ ದೂತರ ಅಪರಾಧವನ್ನು ಕ್ಷಮಿಸಲಿ. ಗುಣಪೂರ್ಣನೂ, ಪುರುಷೋತ್ತಮನೂ ಆದ ನಾರಾಯಣನಿಗೆ ಪ್ರಣಾಮಗಳು.

ಯಮರಾಜನು ತಾನೇನು ಸ್ವತಃ ತಪ್ಪು ಮಾಡಿಲ್ಲ. ಹೀಗಿರಲು, ಆತನು ಕ್ಷಮೆಯನ್ನೇಕೆ ಯಾಚಿಸುವನು ? ಎಂದರೆ,- ಸ್ವಕೀಯರು (ತನ್ನವರು) ಹಾಗೂ ತನ್ನ ಸೇವಕರು ಮಾಡಿದ ತಪ್ಪು, ಅವರಿಗೆ ಯಜಮಾನರಾದವರೇ ಆ ತಪ್ಪು

ಮಾಡಿದಂತಾಗುಸದು. ಹೀಗೆ ಹೇಳುವರು, "ತದ್ವ: ಪ್ರಸಾದಯಾಮಿ......
ತ್ವಚಮಿವಾಮಯಃ" (೩-೧೬-೪)

ತನ್ನ ದ್ವಾರಪಾಲಕರಾದ ಜಯವಿಜಯರು ಮಾಡಿದ ಅಪರಾಧಕ್ಕಾ ಶ್ರೀಹರಿಯು ಸನಕಾದಿಗಳ ಅನುಗ್ರಹವನ್ನು ಯಾಚಿಸುವನು.) ಆದುದರಿಂದ ನಿವ ಅನುಗ್ರಹವನ್ನು ಇಂದು ನಾನು ಯಾಚಿಸುವೆ. ನಿಜವಾಗಿಯೂ ಬ್ರಾಹ್ಮಣರೆ ನನ ದೈವತ. ಅದಕ್ಕಾಗಿಯೆ, ನನ್ನವರಾದವರು ಅನೇಕಸಲ ಮಾಡಿದ ಅಪರಾಧ ನಾನು ಮಾಡಿದಂತೆಯೆ ಎಂದು ನಾನು ಭಾವಿಸುವೆ. ಸೇವಕರು ಅಪರಾಧವನ ಮಾಡಿದರೆ ಯಜಮಾನನ ಹೆಸರಿನಿಂದಲೆ ಜನರು ಅದನ್ನು ಹೇಳುವರು. (ಕುಷ್ಟ ರೋಗವು ಮೈಚರ್ಮವನ್ನು ಅಂದಗೆಡಿಸುವಂತೆ, ಜನರ ತೆಗಳಿಕೆಯು ಯಜಮಾನ ಕೀರ್ತಿಗೆ ಕಲಂಕವನ್ನುಂಟು ಮಾಡುವದು. ಮತ್ತೂ ಸಂದೇಹಪಡಬಹುದು ಯಮದೂತರಾದರೂ, ಭಗವಂತನ ವಿಷಯದಲ್ಲಿ ಯಾವ ಅಪರಾಧವನ್ನೂ ಮಾಡಿಲ್ಲ. ಅಂದಮೇಲೆ ಭಗವಂತನ ಕ್ಷಮೆಗಾಗಿ ಏಕೆ ಪ್ರಾರ್ಥನೆ? ಎಂದರೆ ಭಗವಂತನ ಭಕ್ತರಿಗೆ ಮಾಡಿದ ಅಪರಾಧವು ಸ್ವತಃ ಭಗವಂತನಿಗೇನೆ ಮಾಡಿದಂ ತೆಯೆ ಎಂಬುದು ಅಭಿಪ್ರಾಯವಾಗಿದೆ. ಯಾರಲ್ಲಿ ಕ್ಷಮಾಗುಣವಿರುವದೋ, ಅವ ರಿಗೇನೆ ಕ್ಷಮೆಯನ್ನು ಬೇಡಿಕೊಳ್ಳಬೇಕು. ಭಗವಂತನು "ಕ್ಷಮಿಣಾಂವರಃ"- ಕ್ಷಮಾಗುಣವುಳ್ಳವರಲ್ಲಿ ಅತಿ ಶ್ರೇಷ್ಠನು, ಕ್ಷಮಾಸಾಗರನು. ಆದುದರಿಂದ (ಯಮನು) ನಾನು ಭಗವಂತನಿಗೆ ಕ್ಷಮಾಯಾಚನೆ ಮಾಡಿದುದು ತುಂಬಾ ಯುಕ್ತವಾಗಿದೆ. ತನ್ನ ಭಕ್ತರು ತಿಳಿಯದೆ ಮಾಡಿದ ಅಪರಾಧವನ್ನು ಕ್ಷಮಾ ಸಾಗರನಾದ ಭಗವಂತನು ಕ್ಷಮಿಸದೆ ಇರಲಾರನು. ಎಂಬುದು ಯಮಧರ್ಮನ ಅಭಿಪ್ರಾಯವಾಗಿದೆ. ಮಾಡಿದ ತಪ್ಪಿಗೆ ಶಿಕ್ಷೆಯನ್ನು ತಪ್ಪಿಸಲು, ಕ್ಷಮೆ ಕೇಳುವ ದೊಂದೇ ಉಪಾಯವಾಗಿದೆ

||೩೬೦|| **ಇತ್ಥಂ ಸ್ವಭರ್ತೃಗದಿತಂ ಭಗವನ್ಮಹಿತ್ವಂ**
**ಸಂಶ್ರುತ್ಯ ವಿಸ್ಮಿತಧಿಯೋ ಯಮಕಿಂಕರಾಸ್ತೇ ।**
**ತೇನಾಚ್ಯುತಾಶ್ರಯಜನಂ ಪ್ರತಿಶಂಕಮಾನಾ**
**ದ್ರಷ್ಟುಂ ಚ ಬಿಭ್ಯತಿ ತತಃ ಪ್ರಭೃತಿ ಸ್ಮ ರಾಜನ್ ॥** ೬-೩-೩೪

ಶುಕರು ವಾಕ್ಯ

ಶ್ರೀ ಶುಕರು ಪರೀಕ್ಷಿತ ರಾಜನಿಗೆ ಹೇಳುತ್ತಾರೆ.

ಭಗವದ್ಭಕ್ತರನ್ನು ನೋಡಲು ಕೂಡ ಯಮದೂತರಿಗೆ ಎಷ್ಟೂ ಸಾಮರ್ಥ್ಯ (ಧೈರ್ಯ) ವಿಲ್ಲ, ಹೀಗಿರಲು, ಅವರನ್ನು ತಮ್ಮ ಪಾಶದಿಂದ ಬಿಗಿಯುವದು, ಶಿಕ್ಷಿ

ಸುವದು ತೀರ ಅಶಕ್ಯ (ದುರಪಾಸ್ತ) ವೆಂದು ಹೇಳಬೇಕಿಲ್ಲ. ಭಗವಂತನ ಪ್ರಭಾವವೇ ಈ ಬಗೆಯದು. ಮೋಕ್ಷವನ್ನು ಬಯಸುವ ನೀವೆಲ್ಲರೂ (ಶ್ರೋತೃಗಳು) ಭಗವಂತನಲ್ಲಿಯೆ ಶ್ರದ್ಧೆ-ಭಕ್ತಿಗಳನ್ನು ಇರಿಸಬೇಕು. ಎಂಬುದು ಈ ಶ್ಲೋಕದ ಅಭಿಪ್ರಾಯ.

**ಅರ್ಥ** :- (ಇತ್ಥಮ್ ಇತಿ)—("ನಾಮೋಚ್ಚಾರಣ ಮಾಹಾತ್ಮ್ಯಂ ..... ಮೃತ್ಯುಪಾಶಾದ ಮುಚ್ಯತ" (೬-೩-೨೩) ಮಕ್ಕಳೆ, ಭಗವಂತನ ನಾಮೋಚ್ಚಾರದ ಮಹಿಮೆ ಎಷ್ಟು ಅಗಾಧವಾಗಿದೆ! ನೋಡಿರಿ. ಆದರ ಬಲದಿಂದ (ಅತಿ ಪಾಪಿಯಾದ) ಅಜಾಮಿಳನು ಕೂಡ ಮೃತ್ಯುಪಾಶದಿಂದ (ಯಮನ ಶಿಕ್ಷೆಯಿಂದ) ಪಾರಾದನು. ತಮ್ಮ ಪ್ರಭುವಾದ ಯಮರಾಜನು ಹೇಳಿದ ಭಗವಂತನ ಅಗಾಧ ಮಹಿಮೆಯನ್ನು ಆದರದಿಂದ ಕೇಳಿಕೊಂಡು, ಯಮದೂತರು ಆಶ್ಚರ್ಯಪಟ್ಟರು. ಅಂದಿನಿಂದ ಭಗವನ್ಮಹಿಮೆಯನ್ನು ಅರಿತುಕೊಂಡವರಾಗಿ, ಭಗವದ್ಭಕ್ತರನ್ನು ಕಣ್ಣೆತ್ತಿ ನೋಡಲು ಕೂಡ ಅವರು ಹೆದರುವರು.

ಹಿಂದಿನ ಜನ್ಮಗಳಲ್ಲಿ ಭಗವದ್ಭಕ್ತರು ಸಾಧಿಸಿದ ಜ್ಞಾನ-ಭಕ್ತಿಗಳ ಕಾರ್ಯವನ್ನು ಕೂಡ ತಮ್ಮ ಗಮನದಲ್ಲಿ ಇಟ್ಟುಕೊಂಡು, ಅಂಥ ಭಗವದ್ಭಕ್ತರ ಗೊಡವೆಗೂ ಕೂಡ ಯಮದೂತರು. ಹೋಗುವದಿಲ್ಲ.—ಅವರಿಂದ ದೂರವಾಗಿಯೇ ಇರುವರು. ಅಂತಿರಲು, ಸ್ವರೂಪಭೂತವಾದ ಜ್ಞಾನ-ಭಕ್ತಿಗಳುಳ್ಳ ಭಗವದ್ಭಕ್ತರನ್ನು ಯಮದೂತರು ಗೌರವಿಸುವದರಲ್ಲಿ ಆಶ್ಚರ್ಯವೇನಿದೆ?—ಈ ವಿಚಾರದಿಂದಲೆ-'ಅಚ್ಯುತಾಶ್ರಯಜನಂ' ಎಂದು ಹೇಳಿರುವರು—ಅಚ್ಯುತನೆ ಪರಮಗತಿಯಾಗಿರುವ ಭಗವದ್ಭಕ್ತರು—ಅಂಥಭಗವದ್ಭಕ್ತರನ್ನು ಅವರು ಆದರಿಸುವರು. ಅಂಥ ಭಕ್ತರ ವಿಷಯದಲ್ಲಿ ಅವರಿಗೆ ಭೀತಿ-ಆದರಗಳಿರುವವು. ತಪ್ಪುತಿಳುವಳಿಕೆ (ಅಜ್ಞಾನ) ಯಿಂದ ಅಂಥ ಭಕ್ತರವಿಷಯದಲ್ಲಿ ತಮ್ಮ ಪಾಶದಿಂದ ಬಿಗಿಯುವದೇ ಮುಂತಾದ ಅಗೌರವದ-ಅನಾದರದ-ಕೃತಿಗಳು ಆಕಸ್ಮಿಕವಾಗಿ ಘಟಿಸಿದರೆ, ಭಗವಂತನ ಕೋಪಕ್ಕೆ ಒಳಗಾಗಿ ಅನರ್ಥಕ್ಕೆ ಗುರಿಯಾಗುವೆವು-ಎಂಬ ಭೀತಿಯು ಇರುವದು. ಈ ಭೀತಿಯಿಂದಲೆ ಭಗವದ್ಭಕ್ತರ ಕಡೆಗೆ ಕಣ್ಣೆತ್ತಿನೋಡಲೂ ಹೆದರುವರು; ತಮ್ಮ ಪಾಶದಿಂದ ಅವರನ್ನು ಕಟ್ಟುವದೇ ಮುಂತಾದ ಕೃತಿಗಳಂತೂ ತೀರ ಅಸಂಭವನೀಯವಾದವುಗು.

||೩೬೧|| **ಅಹೋಬತ ಶ್ವಪಚೋऽತೋ ಗರೀಯಾನ್**
**ಯಜ್ಜಿಹ್ವಾಗ್ರೇ ವರ್ತತೇ ನಾಮ ತುಭ್ಯಂ ।**

**ತೇಪುಸ್ತಪಸ್ತೇ ಜುಹುವುಃ ಸುರಾದ್ಯಾನ್**
**ಬ್ರಹ್ಮಾನೂಚುರ್ನಾಮ ಗೃಣಂತಿ ಯೇ ತೇ ॥ ೩-೩೩-೭**

ಕಪಿಲ ನಾಮಕ ಪರಮಾತ್ಮನಿಂದ ಉಪದೇಶವನ್ನು ಕೇಳಿಕೊಂ
ಶ್ರೀಹರಿನಾಮೋಚ್ಚಾರಣೆಯ ಮಹಿಮೆಯನ್ನು ಜ್ಞಾಪಿಸಿಕೊಳ್ಳುತ್ತಾಳೆ.

ಭಗವನ್ನಾಮ ಸಂಕೀರ್ತನದಲ್ಲಿ ತಡಮಾಡದೆ, ಬೇಗನೆ ತೊಡಗಬೇಕೆಂ ಪ್ರೇರಿಸಲು,-ಭಗವನ್ನಾಮ ಸಂಕೀರ್ತನೆಯನ್ನು ಮಾಡದೇ ಇರುವ ಜನರ ತೆಗಳುತ್ತಾರೆ, ಧಿಃಕರಿಸುತ್ತಾರೆ.

**ಅರ್ಥ** :- (ಅಹೋ ಇತಿ) ನಾಲಿಗೆಯ ಮೇಲೆ ಭಗವಂತನ ನಾಮವು ದಾಡುವವರು,-ಭಕ್ತಿಯಿಂದ ಭಗವಂತನ ನಾಮಸಂಕೀರ್ತನೆಯನ್ನು ಮಾಡು ವರು, ಅಂಥವರು ಶ್ವಪಚರಾಗಿದ್ದರೂ-(ಅತ್ಯಂತ ಹೀನ ಹೊಲಸು ಕರ್ಮ ಡುವವರಾಗಿದ್ದರೂ)-ಭಗವಂತನ ನಾಮಸಂಕೀರ್ತನೆಯನ್ನು (ಎಂದಿಗೂ) ಮ ದಿರುವ (ಶ್ರೇಷ್ಠವರ್ಣದ) ಬ್ರಾಹ್ಮಣನಿಗಿಂತಲೂ ಮಿಗಿಲಾದವರು, ಉತ್ತಮ (ಶ್ವಪಚ) ಚಾಂಡಾಲನಲ್ಲಿ ತಪಸ್ಸು, ಜ್ಞಾನ ಮುಂತಾದ ಸಾಧನಗಳಿರದಿದ್ದ ಆತನು ಹೇಗೆ ಶ್ರೇಷ್ಠನು?-ಎಂದರೆ, ತಪಸ್ಸು, ವೇದಾಧ್ಯಯನ ಮುಂತ ಸಾಧನೆಗಳಿಂದ ಲಭಿಸುವ ಸಮಗ್ರಪುಣ್ಯವೂ ಭಗವಂತನ ನಾಮ ಸಂಕೀರ್ತ ದಿಂದ ಲಭಿಸುವದು. ಈ ಅಭಿಪ್ರಾಯದಿಂದ ಭಗವನ್ನಾಮ ಸಂಕೀರ್ತನ ಮಾ ವವರನ್ನು ಹೊಗಳುವರು (ತೇಪು:)-(ಯಾರು ನಿನ್ನ (ಭಗವಂತನ) ನಾ ಸಂಕೀರ್ತನ ಮಾಡುವರೊ, ಅವರು ನಿನ್ನ ಪ್ರೀತಿಗಾಗಿ ತಪಸ್ಸು ಮಾಡಿದಂ ದೇವತೆಗಳ ಉದ್ದಿಶ್ಯ ಯಜ್ಞಯಾಗಾದಿಗಳನ್ನು ಮಾಡಿದಂತೆ;-ಗುರು ಮುಖಾಂತರ ವೇದಗಳ ಅಧ್ಯಯನ ಮಾಡಿದಂತೆ. ಭಗವನ್ನಾಮ ಸಂಕೀರ್ತ ಮಾಡದವರ ಜನ್ಮ ಅಸಾರ್ಥಕ, ವ್ಯರ್ಥವಾದುದು. ಆದುದರಿಂದ ಭಗವನ್ನಾ ಸಂಕೀರ್ತನೆಯನ್ನು ಅಗತ್ಯವಾಗಿ ಮಾಡಲೇಬೇಕು.

ನಾಮಪ್ರಶಂಸಾ ಪ್ರಕರಣವು ಮುಗಿಯಿತು.



# ೩೦. ಗುರುದಕ್ಷಿಣಾ ಪ್ರಕರಣ

||೬೭|| ಜ್ಞಾನಂ ತದೇತದಖಿಲಂ ದುರವಾಪಮಾಹ
ನಾರಾಯಣೋ ನರಸಖಃ ಕಿಲ ನಾರದಾಯ ।
ಏಕಾಂತಿನಾಂ ಭಗವತಸ್ತದಕಿಂಚನಾನಾಂ
ಪಾದಾರವಿಂದರಜಸಾಽಽಪ್ಲುತದೇಹಿನಾಂ ಸ್ಯಾತ್ ೭-೬-೩೩

ಪ್ರಲ್ಹಾದನು ದೈತ್ಯ ಬಾಲಕರಿಗೆ ತತ್ತ್ವೋಪದೇಶ ಮಾಡುವನು.

ಬಿಂಬಾಪರೋಕ್ಷಕ್ಕೆ (ಬಿಂಬರೂಪ ಪರಮಾತ್ಮನ ದರ್ಶನಕ್ಕೆ) ಸಾಧನವಾಗಿ ಧ್ರುವ ಭಾಗವತ ಧರ್ಮಾನುಷ್ಠಾನವು ಮುಕ್ತಿಗೂ ಸಾಧನವಾದುದು. ದುಡ್ಡು ಮುಂತಾದ ಐಹಿಕ ವಸ್ತುಗಳಬಗ್ಗೆ ಸಂಪೂರ್ಣವಾಗಿ ಲೋಭವನ್ನು ತ್ಯಜಿಸಿದವರಾದ (ನಿಷ್ಕಿಂಚನರಾದ) (ಭಗವಂತನ ಪ್ರೀತಿಗೆ ಪಾತ್ರರಾದವರಾದ) ಪರಮ (ಶ್ರೇಷ್ಠ) ಭಾಗವತರ ಸೇವೆಯನ್ನು ಮಾಡಿದ ವಿನಹ, ಅನೇಕ ಜನ್ಮಗಳಲ್ಲಿ ಬಹುವಿಧ ಸಾಧನೆ ಗಳನ್ನು ಎಷ್ಟೇ ಮಾಡಿದರೂ ಕೂಡ, (ಶ್ರೇಷ್ಠ ಭಗವದ್ಭಕ್ತರ ಸೇವೆ ಮಾಡದಿದ್ದರೆ) ಭಾಗವತ ಧರ್ಮಗಳ ಅನುಷ್ಠಾನವು ( ಆಚರಣೆಯು ) ಸರ್ವಥಾ ಸಿದ್ಧಿಸದು. ಆದುದರಿಂದ, ಪರಮ ಪುರುಷಾರ್ಥರೂಪವಾದ ಮುಕ್ತಿಯನ್ನು ಬಯಸುವವರು ಭಾಗವತ ಧರ್ಮಗಳನ್ನು ನಿರಂತರವೂ ಆದರ ಪೂರ್ವಕವಾಗಿ ಆಚರಿಸಬೇಕು. ಭಾಗವತ ಧರ್ಮಾನುಷ್ಠಾನವೆಂದರೆ, ಸಾಮಾನ್ಯ ಜನರು ಪರಂಪರೆಯಾಗಿ ಹೇಳುತ್ತ ಬಂದಿರುವ ಸಾಮಾನ್ಯ ಉಪದೇಶವಾಗಿಲ್ಲ. ಆದರೆ ಬದರಿಕಾಶ್ರಮದಲ್ಲಿ ವಾಸ ಮಾಡುತ್ತಿರುವ ಶ್ರೀಮನ್ನಾರಾಯಣನು ಭಾಗವತೋತ್ತಮರಾದ ಶ್ರೀ ನಾರದರಿಗೆ ಸ್ವತಃ ನಿರೂಪಿಸಿದ (ಹೇಳಿಕೊಟ್ಟಿರುವ) ಧರ್ಮವಾಗಿದೆ. ಹೀಗೆ ಹೇಳಿರುವರು "ಪುರಾಣ ಸಂಹಿತಾ ಮೇತಾಂ ... ... ಪುರಾ ಪ್ರಾಹ"– ಆದ್ಯಂತ ರಹಿತನು, ವಿಕಾರ ರಹಿತನು ಆದ ಋಷಿರೂಪನಾದ ಶ್ರೀ ಮನ್ನಾರಾಯಣನು ಭಾಗವತ ಪುರಾಣ ಸಂಹಿತಾ ರೂಪವಾದ ಈ ಭಾಗವತ ಧರ್ಮವನ್ನು ಮೊದಲು ನಾರದನಿಗೆ ಉಪ ದೇಶಿಸಿದನು. ನಾರದರಿಂದ ಅದು ಪರಮ ಭಗವದ್ಭಕ್ತರಾದ ಪ್ರಲ್ಹಾದರೆ ಮೊದ ಲಾದವರಿಗೆ ಉಪದೇಶ ಮಾಡಲ್ಪಟ್ಟಿತು. ಹೀಗೆ ಹೇಳಿರುವರು ;- "ಶ್ರುತಮೇತ ನ್ಮಯಾ ...... ನಾರದಾದ್ದೇವದರ್ಶನಾತ್" ಜ್ಞಾನ ವಿಜ್ಞಾನಗಳಿಂದ ಭರಿತವಾದ ಶುದ್ಧವಾದ (ಕಿಂಚಿತ್ತೂ ದೋಷವೆಂಬುದಿಲ್ಲದ. ಭಾಗವತ ಧರ್ಮವನ್ನು, ಶ್ರೀಮನ್ನಾ ರಾಯಣನ ದರ್ಶನ ಮಾಡಿಕೊಂಡು ಬಂದ ನಾರದರ ಮುಖದಿಂದ ಈ ಭಾಗವತ

ಧರ್ಮವನ್ನು ನಾನು ಮೊದಲು ಕೇಳಿ ತಿಳಿದುಕೊಂಡೆನು. ಆದುದರಿಂದ ಈ ಭಾಗ
ವತ ಧರ್ಮವು ಅದರಲ್ಲಿ ಶ್ರದ್ಧೆಯನ್ನಿಡಲು ಅತ್ಯಂತ ಸತ್ಪಾತ್ರವಾಗಿದೆ.

ಅರ್ಥ :- ನರನೆಂಬ ಋಷಿಯ ಸಖ (ಜೊತೆಗಾರ) ನಾದ ನಾರಾಯಣನ
ಅತೀವ ದುರ್ಲಭವಾದ (ಭಾಗವತ ಧರ್ಮದಬಗ್ಗೆ)ಸಕಲ ಜ್ಞಾನವೆಲ್ಲವನ್ನು ನಾರ
ನಿಗೆ ಹೇಳಿದನು. ಭಗವಂತನಾದ ಬಿಂಬರೂಪ ಪರಮಾತ್ಮನ ಬಗ್ಗೆ ಜ್ಞಾನಮಾ
ಕೊಳ್ಳಲು ಹಿಂದಿನ ಪ್ರಕರಣಗಳಲ್ಲಿ ಹೇಳಿರುವ ಜ್ಞಾನಸಾಧನವೆಲ್ಲವನ್ನು ನಾರಾಯ
ಣನು ನಾರದರಿಗೆ ಹೇಳಿದನು. (ನಾರಾಯಣವೆಂಬುದು ಮೂಲರೂಪವು. ಆದ
ಯಮರಾಜನ ಮಕ್ಕಳಾಗಿ ಅವತರಿಸಿದ ನಾಲ್ಕು ಮಕ್ಕಳಲ್ಲಿ ಒಬ್ಬನು – ಎಂಬ
ದನ್ನು ನೆನಪಿಗೆ ತರಲು, 'ನರಸಖಃ'- ನರನೆಂಬ ಋಷಿಗೆ ಜೊತೆಗಾರನು-ಎಂದ
ಹೇಳಿದೆ ). 'ಕಿಲ'-ವೆನ್ನುವದರಿಂದ ಈ ಮಾತು ಲೋಕವಿಖ್ಯಾತವಾದುದೆಂದ
ಸೂಚಿಸುತ್ತಿದೆ). ಭಗವಂತನೇ ಕೇವಲ ಗತಿ (ಆಶ್ರಯ-ಆಧಾರ) ವಾಗಿರುವವ
'ಅಕಿಂಚನರು', ಏಕಾಂತ ಭಕ್ತರು. ಮಕ್ಕಳು ಮುಂತಾದವರು ಶಾಶ್ವತವ
ಆದರೆ ಪರಮಾತ್ಮನ ಆಧಾರವು ಅಖಂಡವಾದುದು. ಜೀವನು ಯಾವುದೇ ಯೋ
ಯಲ್ಲಿ ಜನಿಸುತ್ತಿದ್ದರೂ, ಪರಮಾತ್ಮನೊಬ್ಬನೆ ಜೀವನಿಗೆ ಅಲ್ಲಲ್ಲಿ ನಿರ್ನಿಮಿ
ಬಂಧುವಾಗಿ ಆತನನ್ನು ಕಾಪಾಡುವನು. ಹೀಗೆ ಮನಸ್ಸಿನಿಂದ ದೃಢವಾಗಿ ನಂ
ದವರಾದ (ಅನುಸಂಧಾನ ಮಾಡಿಕೊಳ್ಳುವರಾದ) ಭಗವದ್ಭಕ್ತರ ಪಾದಕಮಲಗ
ಧೂಳಿಯಿಂದ ಪೂರ್ಣವಾಗಿ ಮುಚ್ಚಿದ ದೇಹ ಉಳ್ಳವರು. (ಅವರ ಪಾದಧೂ
ಯನ್ನು ನಖಶಿಖಾಂತ ಧರಿಸಿದವರು – ಪಾದಧೂಳಿಯ ಅಭಿಷೇಕ (ಸ್ನಾನ) ಮಾ
ಕೊಂಡವರು – ಇಂಥವರಿಗೆ ಮಾತ್ರ ಸಾಕ್ಷಾತ್ ನಾರಾಯಣನು ಉಪದೇ
ಮಾಡಿದ ಭಾಗವತ ಧರ್ಮದ ಜ್ಞಾನವು ಲಭಿಸುವದು, ಉಳಿದವರು ಆ ಜ್ಞಾ
ವನ್ನು ಪಡೆಯಲಾರರು.

'ನರ ಹಾಗೂ ನಾರಾಯಣ' ರೆಂಬ ಎರಡು ರೂಪಗಳು ಯಮರಾಜನಿಂ
ಉದಿಸಿದ ಎರಡು ಅವತಾರಗಳು. ನಾರಾಯಣರೂಪನಿಂದಲೆ ಭಾಗವತವು ಉ
ದೇಶಿಸಲ್ಪಟ್ಟಿತು. ಹಾಗೂ ಶೇಷ ದೇವರಿಂದ ಸನಕಾದಿಗಳಿಗೂ, ಸನಕಾದಿಗಳಿಂ
ಸಾಂಖ್ಯಾಯನರಿಗೂ- ಈ ಉಪದೇಶವು ಕ್ರಮೇಣ ಮುಂದೆ ಸಾಗಿತು. ಎಂಬುದ
ಸೂಚಿಸಲು, ನಾರಾಯಣನಿಗೆ 'ನರಸಖಃ' – ಎಂಬ ವಿಶೇಷಣವನ್ನು ಜೋಡಿಸಿ
ವರು. 'ನರ'ನು ಶೇಷಾವತಾರನು, ನರನಾಮಕ ಶ್ರೀ ಹರಿಯ ಆವೇಶವು 'ನ
ನಲ್ಲಿ ಇರುವದು. ಈ ಕಾರಣದಿಂದಲೆ, ನರ-ನಾರಾಯಣ ಋಷಿಗಳು ಭಗವಂ
ಅವತಾರಗಳೆಂದು ಹೇಳುವರು. ನರನೇ ಬಲರಾಮ, ನಾರಾಯಣನೇ ಶ್ರೀಕೃಷ್ಣ
ಇವರೇ 'ರಾಮಕೃಷ್ಣರು'.

||೩೩|| ಯೈರೀದೃಶೀ ಭಗವತೋ ಗತಿರಾತ್ಮವಾದ
ಏಕಾಂತತೋ ನಿಗಮಿಭಿಃ ಪ್ರತಿಪಾದಿತಾ ನಃ |
ತುಷ್ಯಂತ್ವದಭ್ರಕರುಣಾಃ ಸ್ವಕೃತೇನ ನಿತ್ಯಂ
ಕೋ ನಾಮ ತತ್ಪ್ರತಿಕರೋತಿ ವಿನೋದಪಾತ್ರಂ || ೪-೨೨-೪೭

47

ಪೃಥು ರಾಜನು ಸನತ್ಕುಮಾರರಿಂದ ಜ್ಞಾನೋಪದೇಶವನ್ನು ಪಡೆದು, ಅವರಿಗೆ ಬಿನ್ನವಿಸಿಕೊಳ್ಳುತ್ತಾನೆ.

ಈ ವಿಧವಾಗಿ, ಆಗತ್ಯವಾಗಿ ಹೇಳಬೇಕೆಂದಿರುವ ವಿಷಯುಗಳನ್ನೆಲ್ಲ ಹೇಳಿಬಿಟ್ಟು ಇಲ್ಲಿಯ ವರೆಗೆ ವಿವೇಚಿಸಿದ ಉಪದೇಶಗಳನ್ನೆಲ್ಲ ಮಾಡಿದ ಸ್ವರೂಪೋದ್ಧಾರಕ (ಬಿಂಬಸಾಕ್ಷಾತ್ಕಾರಕ್ಕೆ ನಮ್ಮನ್ನು ಕರೆದೊಯ್ಯುವ) ಗುರುವಿಗೆ, ಆತನು ನಮಗೆ ಮಾಡಿದ ಮಹತ್ತಮ ಉಪಕಾರಕ್ಕಾಗಿ, (ನಮ್ಮ ಕೃತಜ್ಞತೆಯ ದ್ಯೋತಕವಾಗಿ) ಗುರುದಕ್ಷಿಣೆಯನ್ನು ಕೊಡಬೇಕಾಗುವದು. ಅಂಥ ಗುರುದಕ್ಷಿಣೆಯನ್ನು ಹೇಗೆ ಯಾವ ರೂಪದಲ್ಲಿ ಕೊಡಬೇಕೆಂಬುವದನ್ನು ಇಲ್ಲಿ ಹೇಳುವರು.

ಅರ್ಥ :- (ಯೈರೀದೃಶೀ) - ಗುರುಗಳು ನಮಗೆ ಹೇಳಿಕೊಟ್ಟ ಜ್ಞಾನವು ಸಾಮಾನ್ಯವಾದುದಲ್ಲ. ವೇದೋಪನಿಷದಗಳ ಸಾರವನ್ನು (ಅವುಗಳಲ್ಲಿಯ ಅತಿ ಮುಖ್ಯವಾದುದನ್ನು) ತಿಳಿಸಿ ಹೇಳುವದರಲ್ಲಿ (ಆತ್ಮವಾದದಲ್ಲಿ) ಗುರುಗಳು ಚತುರರು (ನಿಷ್ಣಾತರು). ಆತ್ಮೋದ್ಧಾರದ ದಾರಿಯನ್ನು ತೋರಿಸುವದೇ ವೇದೋಪನಿಷದಗಳ ವಿಷಯ. ಈ ವಿಷಯವು (ಏಕಾಂತತಃ) ಅತಿ ಮುಖ್ಯವಾದುದು ಹಾಗೂ ಅತಿ ಗೋಪ್ಯವಾದುದು. (ಅಧಿಕಾರಿಗಳಿಗೆ ಮಾತ್ರ ಹೇಳಬೇಕಾದುದು) ಇಂಥ ಮಹತ್ವದ ಹಾಗೂ ಗೂಢವಾಗಿರುವ ಜ್ಞಾನವನ್ನು ಗುರುಗಳು ನಮಗೆ ಕರುಣೆಯಿಂದ ಉಪದೇಶ ಮಾಡಿರುವರು. ತತ್ವಬೋಧಕರಾದ (ಸ್ವರೂಪೋದ್ಧಾರಕರಾದ) ಈ ಗುರುಗಳು ತಮಗೆ ಸ್ವಂತದ ಯಾವ ಫಲಾಪೇಕ್ಷೆಯಿಲ್ಲದೆ, ನಿರಪೇಕ್ಷ ಬುದ್ಧಿಯಿಂದ, ನಮ್ಮ ಮೇಲಿನ ಅಪಾರ ಕರುಣೆಯಿಂದಲೆ, (ಅದಭ್ರಕರುಣಾಃ) ನಮಗೆ ತತ್ವೋಪದೇಶ ಮಾಡುವರು. ಧನ, ಮನೆ, ಸಂಪತ್ತುಗಳ ಆಶೆಯು ಕಿಂಚಿತ್ತಾದರೂ ಅವರಿಗೆ ಇರುವದಿಲ್ಲ. ಇಂಥ ಕರುಣಾಳುಗಳು, ನಿತ್ಯನಿರಪೇಕ್ಷ ಗುರುಗಳಿಗೆ ಮನೆಮಾರು ದ್ರವ್ಯ ರೂಪವಾದ ಲೌಕಿಕ ವಸ್ತುಗಳನ್ನು (ಅವರು ಮಾಡುವ ತತ್ವೋಪದೇಶಕ್ಕೆ ಪ್ರತಿಯಾಗಿ) ಕಾಣಿಕೆಯಾಗಿ ಕೊಟ್ಟು ತನ್ನ ಗುರುಗಳ ಉಪಕಾರ ತೀರಿಸುವೆನೆಂಬ ಹುಚ್ಚು ಹವ್ಯಾಸವು (ವಿನೋದಪಾತ್ರಮ್) ನಗೆಗೀಡು, ಹಾಸ್ಯಾಸ್ಪದವಾಗುವದು. ( ಸರ್ವಸ್ವವನ್ನು ಅರ್ಪಿಸುವ ) ತಮ್ಮ

ಆತ್ಮಾರ್ಪಣೆಯಿಂದಲೆ (ಸ್ವಕೃತೇನ) ಸತ್ಪಾತ್ರರಾದ ಶಿಷ್ಯರು ತಮ್ಮ ಗುರುಗಳನ
ಸಂತೋಷಗೊಳಿಸುವರು.

ಹೀಗೆ ಹೇಳಿರುವರು :- "ಯಂಃ ಏತನ್ಮಮ.......... ದದಾಮಿ ಆತ್ಮಾ
ಮಾತ್ಮನಃ" (೧೧-೯-೩೬) ಭಗವಂತನ ಮಾತು, - ಶುದ್ಧವಾದ ಭಾಗವ
ತತ್ವವನ್ನು ನನ್ನ ಭಕ್ತರಲ್ಲಿ ಬಹುವಾಗಿ ಪ್ರಚಾರಮಾಡುವ, ಬ್ರಹ್ಮಜ್ಞಾನವನ
ಮಾಡಿಕೊಡುವ ಗುರುವಿಗೆ ನನ್ನನ್ನೇ ನಾನು ಕೊಟ್ಟುಬಿಡುತ್ತೇನೆ. ಮತ್ತ
"ಜ್ಞಾನಮಜ್ಞಾತತತ್ವಾಯ.......... ದೇವಾಸ್ತಸ್ಯಾನು ಗೃಹ್ಣತೆ" (೪-೧೨-೫
ಕರುಣಾಳು ಹಾಗೂ ಅನಾಥರಕ್ಷಕನೂ ಆಗಿರುವ ಭಗವಂತನ ವಿಷಯದಲ್ಲಿ ಪರ
(ಶ್ರೇಷ್ಠ) ತತ್ವವನ್ನು ತಾನು ತಿಳಿದುಕೊಂಡು, ಅಂಥ ತತ್ವದ ಜ್ಞಾನವೀ
ಅಜ್ಞಾನಿಗಳಿಗೆ, ಅದನ್ನು ತಿಳಿಸಿಕೊಡುವವನು ದೇವತೆಗಳ ಅನುಗ್ರಹವನ್ನು
ಯುವನು. ಅಂಥ ಗುರುಗಳು ತಾವು ಮಾಡುವ ಕಾರ್ಯದಿಂದಲೆ ಪರ
ಸಂತೋಷವನ್ನು ಸರ್ವಥಾ ಪಡೆಯುವರು. ಅಂಥ ಗುರುಗಳಿಗೆ ಯಾವ ಲೌ
ವಸ್ತುವಿನ ದಕ್ಷಿಣೆಯೂ ಯೋಗ್ಯವಾದುದಲ್ಲ. ಸಂಪೂರ್ಣ ಆತ್ಮಸಮರ್ಪಣೆಯೊಂ
ಅವರಿಗೆ ಸಮುಚಿತವಾದ ಗುರುದಕ್ಷಿಣೆಯಾಗಿರುವದು. ಹೀಗೆ ಹೇಳಿರುವರು
"ಇಯದೇವ.. ಸರ್ವಥಾತಾತ್ಮಾರ್ಪಣಂ ಗುರೌ" (೧೦.೮೦-೪೧) -ಬಿಂಬೋ
ದೇಶ ಮಾಡುವ ಗುರುವಿಗೆ, ಪರಿಶುದ್ಧ (ನಿಷ್ಕಪಟ) ಭಕ್ತಿಯಿಂದ, ಸಮ
ವಾದ ಆತ್ಮಸಮರ್ಪಣೆಯನ್ನು ಮಾಡುವದೊಂದೇ ಕೃತಜ್ಞತೆಯ ಕಾಣಿಕೆಂ
ಗಿದೆ. ಹೀಗಿರಲು, ಗುರುವಿನ ಋಣವನ್ನು (ಮಾಡಿದ ಉಪಕಾರವನ್ನು) ಲೌ
ಸಂಪತ್ತನ್ನು ಕೊಟ್ಟು ತೀರಿಸಲು ಯಾರು ಶಕ್ತರಾಗಿರುವರು? [ಯಾರಿಗೂ ಶಕ್ಯವಿ
ವಸ್ತುಸ್ಥಿತಿಯು ಹೀಗಿದ್ದರೂ, (ದ್ರವ್ಯ ಮುಂತಾದ್ದನ್ನು ಕೊಟ್ಟು) ಗುರು
ಉಪಕಾರವನ್ನು ನಾನು ತೀರಿಸಿದೆನು- ಎಂದು ಭಾವಿಸುವ ಮೂರ್ಖನು
ನರ ಸಭೆಯಲ್ಲಿ ಅಪಹಾಸಕ್ಕೆ ಗುರಿಯಾಗುತ್ತಾನೆ. ಹೀಗೆ ಹೇಳಿರುವರ
'ನಿಷ್ಪಾದಿತಂ....ಕಿಂ ದದೆ' (೪-೨೨-೪೬) ಕರುಣಾಳು, ಪೂಜ್ಯರು ಆದ ನಿ
(ಗುರುಗಳು) ಎಲ್ಲವನ್ನು (ಆಧ್ಯಾತ್ಮಿಕ ಸಂಪತ್ತನ್ನು) ಪಡೆದುಕೊಂಡಿರುವಿರಿ. ಸ
ವಾಗಿರುವ (ಶ್ರೇಯಸ್ಕರವಾಗಿರುವ) ಸರ್ವಸ್ವವನ್ನೂ ನನಗೆ ನೀಡಿರುವಿರಿ ...ನಿ
ನಾನು ಏನು ಕೊಡಲಿ ? -'ಪ್ರಾಣಾಃ .. ನಿವೇದಿತಮ್' (೪-೨೨-೪೭) ನನ್ನ
ಪ್ರಾಣಗಳು, ಸತೀಸುತರು, ಸಕಲ ಸಾಮಗ್ರಿಗಳಿಂದ ಸುಸಜ್ಜಿತವಾದ ಮನೆ
ಸಂಪತ್ತು, ಸೈನ್ಯ, ರಾಜ್ಯ, ಖಜಾನೆ ಮುಂತಾಗಿ ಎಲ್ಲವನ್ನೂ ನಿಮಗೆ ಸಮ
ಸಿರುವೆ. -"ಸೇನಾಪತ್ಯಂಚ .. ವೇದಶಾಸ್ತ್ರವಿದರ್ಹತಿ" ಸೇನಾಪತಿಯ
ಕಾರ, ರಾಜ್ಯ, ಶಿಕ್ಷೆ ಕೊಡುವ ಹೆಚ್ಚಿನ ಅಧಿಕಾರ- ಈ ಬಗೆಯ ಲೌಕಿಕ

ಅಧಿಕಾರ, ಸ್ಥಾನಮಾನಗಳೆಲ್ಲಕ್ಕೂ ವೇದಶಾಸ್ತ್ರಪಾರಂಗತನಾದ ಬ್ರಹ್ಮಜ್ಞಾನಿಯು ಅರ್ಹನಾಗಿರುವನು. ದಯಾಳುಗಳು, ಪೂಜ್ಯರೂ ಆಗಿರುವ ನೀವು [ಕಾರ್ತ್ಸ್ನ್ಯೇನ ಅಪಿ) ನೀವು ಪಡೆದ ಸರ್ವಸ್ವವನ್ನು, ಎಂದರೆ ನನಗೆ ಕೊಡಲು ಯೋಗ್ಯವಾದುದೆಲ್ಲ ವನ್ನು ಕೊಟ್ಟುಬಿಟ್ಟಿರುವಿರಿ. ತೀರಿಸಲಾರದ ಇಷ್ಟೊಂಡು ಮಹದುಪಕಾರವನ್ನು ಮಾಡಿರುವ ಗುರುಗಳಿಗೆ ಗುರು ದಕ್ಷಿಣೆಯನ್ನು ಖಂಡಿತವಾಗಿಯೂ ಕೊಡಲೇ ಬೇಕು. ಇದೆಲ್ಲ ಸರಿ! ಆದರೆ ಯಾವ ಗುರು ದಕ್ಷಿಣೆಯನ್ನು ಕೊಡಲಿ! ಕೊಡ ಬೇಕಾದುದು ಹೊಸದೇನಾದರು ಇಲ್ಲವೆಂಬುದೇ ಅಭಿಪ್ರಾಯ. ಏಕೆಂದರೆ, ವೇದ ಶಾಸ್ತ್ರ ಪಾರಂಗತನಾದ ಬ್ರಹ್ಮಜ್ಞಾನಿಯು ರಾಜ್ಯ, ಸೇನಾಪತಿ ಮುಂತಾದ ಪ್ರಭುತ್ವದ ಸಕಲ ಸ್ಥಾನಗಳನ್ನು ನಿರ್ವಹಿಸಲು ಅರ್ಹನಾಗಿರುವನು. ಅಂದಮೇಲೆ ನಾವು ನಿವೇದಿಸುವ ನಮ್ಮ ಪ್ರಾಣ, ಆತ್ಮದಿಂದೊಡಗೂಡಿದ ದೇಹ. ಮುಂತಾದ ಸಕಲ ವಸ್ತುಗಳೂ ಆತನವೇ ಆಗಿರುವವು.

||೩೬೪|| **ಮತ್ತೋಽಪ್ಯನಂತಾತ್ಪರತಃ ಪರಸ್ಮಾತ್**
**ಸ್ವರ್ಗಾಪವರ್ಗಾಧಿಪತೇರ್ನ ಕಿಂಚಿತ್ ।**
**ಯೇಷಾಂ ಕಿಮು ಸ್ಯಾದಿತರೇಣ ತೇಷಾ-**
**ಮಕಿಂಚನಾನಾಮಪಿ ಭಕ್ತಿಭಾಜಾಂ ॥** ೫-೫-೨೫

ಭಗವಂತ

ಭಗವಂತನು ಹೇಳಿದ ಮಾತು.

ಕಾಲತ್ರಯದಲ್ಲಿಯೂ (ನಿಷ್ಕಪಟ) ವಿಶುದ್ಧವಾದ ಮನಸ್ಸಿನಿಂದ (ಭಾವನೆ ಯಿಂದ) ಮಾಡುವ ಸಮಗ್ರವಾದ ಆತ್ಮಸಮರ್ಪಣೆಯ ವಿನಹ, ಬ್ರಹ್ಮಜ್ಞಾನೋ ಪದೇಶಕನಾದ ಗುರುವಿಗೆ ಕೊಡಲು ಬೇರೆ ಉಚಿತವಾದ ಗುರು ದಕ್ಷಿಣೆಯೆ ಇಲ್ಲ ವೆಂದು ಹೇಳಿದೆ. ಅಂಥ ಗುರುಗಳನ್ನು ಕೇವಲ ಹೊಗಳಬೇಕೆಂದು ಈ ಮಾತನ್ನು ಹೇಳಿಲ್ಲ. ಜೀವನದಲ್ಲಿ ಕೇವಲ ಭಗವದ್ಭಕ್ತಿಯೊಂದನ್ನೇ ಬಯಸುವ ಗುರುಗಳು ಭಗವಂತನಿಂದಲೂ ಕೂಡ ಬೇರೆ ಯಾವುದೇ ವಸ್ತುವನ್ನು ಅಪೇಕ್ಷಿಸುವದಿಲ್ಲ. ಉಳಿದ ಮಾನವರಿಂದ ಅವರು ಏನು ಬೇಡಬಹುದು? ಯಾರಿಂದಲೂ ಏನನ್ನೂ ಬಯಸದಿರುವದು, ಬೇಡದಿರುವದು -ನಿರಪೇಕ್ಷಿಗಳಾದ ಅವರ ಸ್ವಭಾವವೇ,- ಸ್ವಾಭಾವಿಕ ಪ್ರವೃತ್ತಿಯೆ ಎಂಬುವದು ಸಿದ್ಧವಾಗಿದೆ. ಈ ಅಭಿಪ್ರಾಯದಿಂದಲೇ ಹೀಗೆ ಹೇಳಿರುವರು.

**ಅರ್ಥ:-** (ಇದು ಭಗವಂತನ ನುಡಿ) -ಅನಂತ ಗುಣ ಪರಿಪೂರ್ಣನು, ಸರ್ವೋತ್ತಮನು, ಸ್ವರ್ಗ ಮೋಕ್ಷಗಳನ್ನು ಕೊಡುವ ಪ್ರಭುವು (ಬೇಡಿದ್ದನ್ನು

ಕೊಡಲು ಸಮರ್ಥನೂ ) ಆಗಿರುವ ನನ್ನಿಂದಲೂ ಕೂಡ ಅವರು (ಬ್ರಹ್ಮಜ್ಞ ಸೋಪದೇಶ ಮಾಡುವ ಗುರುಗಳು) ಏನನ್ನೂ ಬೇಕೆಂದು ಕೇಳುವದಿಲ್ಲ. ಭಗವ ತನಲ್ಲಿ ಏಕಾಂತ ಭಕ್ತಿಯುಳ್ಳವರು, ಭಗವಂತನೊಬ್ಬನನ್ನೇ ನೆರೆ ನಂಬಿದವರ ಆಗಿರುವ ಅಂಥ ಗುರುಗಳು ಉಳಿದವರಿಂದ ಏನು ಪಡೆಯಬೇಕಾಗಿದೆ ? ಉಳಿ ವರು ಕೊಡುವದಾದರೂ ಏನು ?

– ' ಗುರುದಕ್ಷಿಣಾ ಪ್ರಕರಣ ' ಪ್ರಕರಣ ( ೩೦ ) ಮುಗಿಯಿತು. –



# — ಸಾರೋದ್ಧಾರದ ಉಪಸಂಹಾರ —

||೩೬೫|| ಯ ಇದಮನುಶೃಣೋತಿ ಶ್ರಾವಯೇದ್ವಾ ಮುರಾರೇ-
ಶ್ಚರಿತಮಮೃತಕೀರ್ತೇರ್ವರ್ಣಿತಂ ವ್ಯಾಸಪುತ್ರೈಃ ।
ಜಗದದಘುಭಿದಲಂ ತದ್ಭಕ್ತಕರ್ಣಾವತಂಸಂ
ಭಗವತಿ ಕೃತಚಿತ್ತೋ ಯಾತಿ ತತ್ ಕ್ಷೇಮಧಾಮ ॥ ೧೦-೧೦೩-೪೨

ಸೂತರು ಶೌನಕಾದಿಗಳಿಗೆ

ಶ್ರೀಕೃಷ್ಣ ಚರಿತ್ರೆಯನ್ನು ಭಕ್ತಿಯಿಂದ ಕೇಳುವದರಿಂದ ಪಡೆಯುವ ಮಹಾ ಪುಣ್ಯವನ್ನು – ದಶಮಸ್ಕಂದದ ಶ್ರೀ ಭಾಗವತ) ಉಪಸಂಹಾರದಲ್ಲಿ ಸೂತರು ಶೌನಕಾದಿ ಋಷಿಗಳಿಗೆ ಹೇಳುವರು.

ಇದುವರೆಗೆ, ಭಾಗವತವು ಸಾಗಿಬಂದ ಪರಂಪರೆಯನ್ನು ('ಭಾಗವತಾಗತಿ') ಯನ್ನು ಹೇಳುವ ಮೊದಲನೆಯ ಪ್ರಕರಣದಿಂದ ಪ್ರಾರಂಭಿಸಿ 'ಗುರುದಕ್ಷಿಣಾ' ವಿವೇಚನದವರೆಗೆ ಮೂವತ್ತು ಪ್ರಕರಣಗಳಿಂದ ಯುಕ್ತವಾದ– 'ಶ್ರೀಮದ್ಭಾಗವತ ಸಾರ' (ಸಾರೋದ್ಧಾರ)ವೆಂಬ ಗ್ರಂಥವನ್ನು ರಚಿಸಿದ್ದಾಯಿತು. ಮೊದಲು ವಂದಿಸಿದ ಶ್ರೀಹರಿಗೆ ಕೊನೆಯಲ್ಲಿಯೂ ವಂದಿಸುವಾಗ್ಗೆ ಗ್ರಂಥಕರ್ತರಾದ ಶ್ರೀವಿಷ್ಣು ತೀರ್ಥರು ಹೀಗೆ ಸೌಜನ್ಯದಿಂದ ಹೇಳುವರು. 'ಈ ನಮ್ಮ ಕೃತಿಯು ಎಲ್ಲಿಂದಲೋ ಎತ್ತಿಕೊಂಡದ್ದಲ್ಲ, ಶ್ರೀಮದ್ಭಾಗವತದಲ್ಲಿಯೆ ಇರುವ ಪದ್ಯಗಳನ್ನೇ ಮಾತ್ರ ವಿಶಿಷ್ಟ ಆನುಪೂರ್ವಿಯಿಂದ (ಪೂರ್ವಾಪರ ಸಂಬಂಧದಿಂದ) ಹೊಂದಿಸಿಕೊಂಡು ಮಾಡಿದ ಸಂಕಲನವೇ ಈ ನಮ್ಮ ಕೃತಿಯಾಗಿದೆ. ಆದುದರಿಂದ, ಪರಮ ಪುರುಷಾರ್ಥವಾದ ಮೋಕ್ಷವನ್ನು ಬಯಸುವವರು ಈ ನಮ್ಮ ಕೃತಿಯಬಗ್ಗೆ ಅನಾದರದ (ತಾತ್ಸಾರದ) ಭಾವನೆಯನ್ನು ಸರ್ವಥಾ ತಾಳಬಾರದು. ಈ ಅಭಿಪ್ರಾಯದಿಂದ, ಪ್ರಾರಂಭದಲ್ಲಿ ಭಾಗವತದ ಶ್ಲೋಕವನ್ನು ಮಂಗಲಾಚರಣ ಶ್ಲೋಕವಾಗಿ ಕೊಟ್ಟಂತೆ, ಫಲಶ್ರುತಿಯನ್ನಾದರೂ ಭಾಗವತದ ಶ್ಲೋಕದಿಂದಲೇ ಹೇಳಿದ್ದಾಗಿದೆ.

**ಅರ್ಥ:–** (ಯ ಇದಮಿತಿ) ಅಖಿಲ ಜಗತ್ತಿನ ಪಾಪವನ್ನೇ ಪರಿಹರಿಸುವ, ಕೇಳುವ ಭಕ್ತರ ಕಿವಿಗೆ ಆಲಂಕಾರವೆನಿಸುವ, ವ್ಯಾಸ ಪುತ್ರರಾದ ಶುಕಮುನಿಗಳಿಂದ ನಿರೂಪಿತವಾದ, ಅಜರಾಮರ ಕೀರ್ತಿಯುಳ್ಳ, ಶ್ರೀಕೃಷ್ಣ ಚರಿತ್ರೆಯನ್ನು ಭಗವಂತನಲ್ಲಿಯೆ ತಮ್ಮ ಚಿತ್ತವೃತ್ತಿಯನ್ನು ಲೀನಗೊಳಿಸಿ, ಕೇಳುವವರಿಗೆ, ಅನ್ಯರಿಗೆ ಶ್ರವಣ ಮಾಡಿಸುವರಿಗೆ ಮಂಗಳಕರವಾದ ವಿಷ್ಣುಲೋಕವು ಲಭಿಸುವದು. 'ವ್ಯಾಸ ಪುತ್ರೈಃ' ಎಂದು ಹೇಳುವದರಿಂದ, ಶ್ರೀಶುಕರ ಗುರುತ್ವವನ್ನು ನೆನಪಿಗೆ ತಂದುಕೊಡುವದು.

||೩೬|| ತಮುಹವ ಜಮುನಂತಮಾತ್ಮತಂತ್ರಂ ಸ್ತೋತ್ರಕು

ಜಗದ ದಯುಸ್ಥಿತಿಸಂಯುಮಾತ್ಮಶಕ್ತಿಂ |

ದ್ಯುಪತಿಭಿರಜಶಕ್ರಶಂಕರಾದ್ಯೈಃ

ದುರವಸಿತಸ್ತವಮಚ್ಯುತಂ ನತೋಽಸ್ಮಿ || ೧೨-೧೨-೩೬

ಈ ರೀತಿಯಲ್ಲಿ ಗ್ರಂಥದ ಫಲಶ್ರುತಿಯನ್ನು ಹೇಳಿ, ಪ್ರಾರಂಭದಲ್ಲಿ ಭಗ ವಂತನಿಗೆ ಅರ್ಪಿಸಿದ ಪ್ರಣಾಮದ ಬಲದಿಂದಲೆ (ಭಗವಂತನ ಕೃಪೆಯಿಂದಲೆ ಗ್ರಂಥವು ಕೊನೆಗೊಂಡದ್ದರಿಂದ, ಮುಕ್ತಾಯದಲ್ಲಿಯೂ ಕೃಪಾಳು ಭಗವಂತನಿ ಮತ್ತೆ ಪ್ರಣಾಮಗಳನ್ನು ಅರ್ಪಿಸುವರು.

**ಅರ್ಥ:**– (ತಮಿತಿ)ಜಗತ್ತಿನ ನಿರ್ಮಾಣ, ಪಾಲನ, ಸಂಹಾರ, ಈ ಮೂರ ಶಕ್ತಿಗಳು ಭಗವಂತನಿಗೆ ಸ್ವಕೀಯ–ಸ್ವರೂಪಭೂತವಾದವುಗಳು. (ಹೊರಗಿನಿಂ ಪಡೆದವುಗಳಾಗಲಿ, ಮತ್ತೊಬ್ಬರು ಕೊಟ್ಟವುಗಳಾಗಲಿ ಆಗಿರುವದಿಲ್ಲ.) (ಗ್ರಹೀತ ಶಕ್ತಿತ್ರಯೇನ) ಎಂಬ ಪದದಿಂದ ಈ ಮೂರು ಶಕ್ತಿಗಳು ಪರಮಾತ್ಮನಿಗೆ ಅಂ ಸ್ಥವಾದವುಗಳು. ಸ್ವರೂಪಭೂತವಾದವುಗಳು ಎಂಬುದು ವ್ಯಕ್ತವಾಗುತ್ತದೆಂಬ ದನ್ನು ತಿಳಿದುಕೊಳ್ಳಬೇಕು. ಉನ್ನತವಾದ ದೇವಲೋಕಗಳಿಗೆ ಪ್ರಭುಗಳಾ ಬ್ರಹ್ಮಾದಿ ಶ್ರೇಷ್ಠದೇವತೆಗಳೂ ಕೂಡ ಪರಮಾತ್ಮನ ಮಹಿಮೆಯನ್ನು ಸಾ ಲ್ಯೇನ (ಸಮಗ್ರವಾಗಿ) ತಿಳಿಯಲು ಅಸಮರ್ಥರು. ಹೀಗಿರಲು, ಮಾನವ ಪಾಡೇನು ? (ಪರಮಾತ್ಮನ ಮಹಿಮೆಯನ್ನು) ಸಮಗ್ರವಾಗಿ ತಿಳಿದುಕೊಳ್ಳಲ ಮಾನವರು ಸುತರಾಂ ಅಸಮರ್ಥರೆಂಬುದು ಸ್ಪಷ್ಟವಾಗುತ್ತದೆ. ದೇಹಿನಾಮಂ ಧ್ರುವಾಯ' - (ಮಾನವರಿಗೆ ಅಂತರ್ನಿಯಾಮಕನು' ಅಂತೆಯೆ 'ಅನುಪಲಭ್ಯ ಶ್ಮನೆ' –ಬಾಹ್ಯೇಂದ್ರಿಯಗಳಿಂದ ಪಡೆಯಲಾರದ ಜ್ಞಾನವುಳ್ಳವನು – ಎಂಬ ಭ ವನ್ಮಹಿಮೆಯು ಸೂಚಿತವಾಗುತ್ತದೆ ಜಗತ್ತಿನ ಉತ್ಪತ್ತಿ ಮೊದಲಾದವುಗಳಿ ಪರಮಾತ್ಮನೇ ಕರ್ತೃ (ಮಾಡುವವನು) ಆಗಿರಲಿ ಆದರೆ, ಪರಮಾತ್ಮನನ್ನೆ ಹುಟ್ಟಿಸುವವರು. ರಕ್ಷಿಸುವವರು, ಸಂಹರಿಸುವವರು ಯಾರಾದರೂ ಇರುವರೆ ಎಂಬ ಪ್ರಶ್ನೆಗೆ ಉತ್ತರ ಹೇಳುವರು. ಪರಮಾತ್ಮನು ಅಜನು, ಅನಂತನು, ಆತನು ಅನಾದಿ–ಅನಂತನು, ಹುಟ್ಟು ಸಾವುಗಳೆಂಬ ಆದಿ–ಕೊನೆಯಿಲ್ಲದವನು ಹುಟ್ಟು ಸಾವುಗಳಿಲ್ಲದಿರಲಿ, ಪರಮಾತ್ಮನಿಗೆ ರಕ್ಷಕನಾದರೂ ಇರುವನೆ? –ಎಂದ ಕೇಳಿದರೆ,– ಆತನು– 'ಆತ್ಮತಂತ್ರನು', ಸರ್ವತಂತ್ರಸ್ವತಂತ್ರನು - ಸಕಲ ಲೋ ಗಳ ರಕ್ಷಕನಾದ ಪರಮಾತ್ಮನಿಗೆ ಬೇರೊಬ್ಬ ರಕ್ಷಕರಿಲ್ಲ. 'ಪರಸ್ಮೈ ಪುರುಷಾಂ ಪರಮಾತ್ಮನು ಪುರುಷೋತ್ತಮನೆಂಬುದು ಇದರಿಂದ ತಿಳಿಯುತ್ತದೆ. ತಾ

ಅನ್ಯಾಧೀನನಾದವನು, ಸೃಷ್ಟಿ-ಸ್ಥಿತಿ ಲಯಾದಿ ಮಹಾಕಾರ್ಯಗಳನ್ನು ಮಾಡಲಾರನು. ಅಂತೆಯೆ, ಪರಮಾತ್ಮನು 'ಆತ್ಮತಂತ್ರನು', ಸಂಪೂರ್ಣ ಸರ್ವತಂತ್ರ ಸ್ವತಂತ್ರನು ಇದರಿಂದ 'ಭೂಯಸೇ', ಎಂದರೆ ಸ್ವಾತಂತ್ರ್ಯವುಳ್ಳವನು, ಎಂಬುದು ಉಪಕ್ರಮ, ಉಪಸಂಹಾರಗಳಲ್ಲಿ, ಆದಿ-ಅಂತಗಳಲ್ಲಿ ಸ್ತುತಿಸಿದ ಪರಮಾತ್ಮನ ಮಹಿಮೆಯಿಂದ ಇದೆಲ್ಲವೂ ಸ್ಪಷ್ಟವಾಗುತ್ತಿದೆ. ಇಂಥ ಪರಮಾತ್ಮನಿಗೆ ವಂದಿಸುವೆನು.

॥೬೭॥ **ಉಪಚಿತನವಶಕ್ತಿಭಿಃ ಸ್ವ ಆತ್ಮ** ಸೂತರು
**ನ್ಯುಪರಚಿತ ಸ್ಥಿರಜಂಗಮಾಲಯಾಯ ।**
**ಭಗವತ ಉಪಲಬ್ಧಿಮಾತ್ರಧಾಮ್ನೇ**
**ಸುರಋಷಭಾಯ ನಮಃ ಸನಾತನಾಯ ॥** ೧೨-೧೧-೬೭
67

ಶ್ರೀಹರಿಗೆ ಪ್ರಣಾಮಗಳನ್ನರ್ಪಿಸಿ, ಸೂತರು ಮಂಗಳಾಚರಣವನ್ನು ಮಾಡುವರು.

ಭಕ್ತಿಯು ಉಕ್ಕಿ ಬಂದು, ಶ್ರೀಹರಿಗೆ ಮತ್ತೆ ಮತ್ತೆ ನಮಿಸುವರು.

**ಅರ್ಥ :-** ( ಉಪಚಿತ ನವಶಕ್ತಿಭಿಃ ):- ಮೂಲ ಪ್ರಕೃತಿ, ಮಹತ್ತತ್ವ, ಅಹಂಕಾರ ತತ್ವ, ಮನಸ್ಸು ಮತ್ತು ಪೃಥ್ವೀ ಮುಂತಾದ ಪಂಚ ಮಹಾಭೂತಗಳು – ಒಟ್ಟು ಒಂಬತ್ತು ಶಕ್ತಿಗಳನ್ನು ಉಪದಾನಕಾರಣವಾಗಿ ತೆಗೆದುಕೊಂಡು, ತಾನು ನಿಮಿತ್ತ ಕಾರಣನಾಗಿ ತನ್ನ ಸ್ವರೂಪಭೂತವಾದ ಶಕ್ತಿಯಿಂದ ಚರಾಚರ (ಜೀವಜಡ) ಸೃಷ್ಟಿಯನ್ನು ರಕ್ಷಿಸುವವನು – (ಜಗತ್ತಿನ ಉತ್ಪತ್ತಿ ಮುಂತಾದವು ಭಗವಂತನದೇ ವಿಕಾರಗಳೆಂಬ ಭ್ರಮೆಯನ್ನು ನಿವಾರಿಸಲು, ಪ್ರಕೃತಿಯು ವಿಕಾರ ಹೊಂದುವದು, ಭಗವಂತನು ಅವ್ಯಯ, ಅವಿಕಾರಿ. ಆತನಿಗೆ ವಿಕಾರ (ಬೇರೆ ವಸ್ತುವಾಗಿ ಪರಿಣಮಿಸುವದು) ವೆಂಬುದೇ ಇಲ್ಲ. ಜಗತ್ತಿನ ಸೃಷ್ಟ್ಯಾದಿ ಕಾರ್ಯಗಳಿಗೆ ಭಗವಂತನು ನಿಮಿತ್ತ ಕಾರಣನು, ಆಧಾರಭೂತನಾದವನು. ಸೃಷ್ಟಿ-ಸ್ಥಿತಿ ಲಯಗಳೆಂಬ ಸ್ವರೂಪಭೂತವಾದ ಮೂರು ಶಕ್ತಿಗಳಿಂದಲೂ ಭಿನ್ನವಾದ ಬೇರೆ ಒಂಬತ್ತು ಶಕ್ತಿಗಳು ಭಗವಂತನದಾಗಿರುವವು (ಉಪಚಿತ ನವಶಕ್ತಿಭಿಃ) ಎಂದು ಹೇಳಿರುವದರಿಂದ ಸೃಷ್ಟ್ಯಾದಿಗಳು ಭಗವಂತನ ವಿಕಾರಗಳಲ್ಲವೆಂಬುದು ಸ್ಪಷ್ಟವಾಗುತ್ತದೆ. ಇಲ್ಲಿ ಇನ್ನೊಂದು ಪ್ರಶ್ನೆಯನ್ನು ಕೇಳುವರು :- ಭಗವಂತನಿಂದ ಭಿನ್ನವಾಗಿರುವ ಉಪಾದಾನ ಕಾರಣವು ವಿಕಾರವನ್ನು ಹೊಂದಲಿ. ಆದರೆ, ಪರಮಾತ್ಮನ ಸ್ವರೂಪವು ಎಂತಹದು ? ಎಂದರೆ, 'ಉಪಲಬ್ಧಿಮಾತ್ರಧಾಮ್ನೇ' ಪೂರ್ಣ

ಜ್ಞಾನಾನಂದಾದಿ ಅನಂತ ಕಲ್ಯಾಣ ಗುಣಗಳಿಂದ ಯುಕ್ತನಾದುದೇ ಭಗವತ
ಸ್ವರೂಪವಾಗಿದೆ.

ಎರಡನೆಯ ಶ್ಲೋಕದಲ್ಲಿರುವ 'ಅಖಿಲ ಸತ್ವಮೂರ್ತಯೆ' ಎಂಬ ವಿಶೇಷಣ
ಅರ್ಥವು ಇದರಿಂದಲೆ ಸ್ಪಷ್ಟವಾಗುತ್ತದೆ ಇಲ್ಲಿ ಒಂದು ಆಕ್ಷೇಪ :- ಭಗವಂತ
ಜಗತ್ತಿನಿಂದ ಶ್ರೇಷ್ಠನಾಗಿರಲಿ. ಆತನು ಮಿಕ್ಕ ದೇವತೆಗಳಿಗಿಂತಲೂ ಶ್ರೇಷ್ಠನ
ಏಕೆಂದರೆ, ದೇವತೆಗಳು ಬಹು ದೀರ್ಘಕಾಲದಿಂದಲೂ ತಮ್ಮ ತಮ್ಮ ಅಧಿಕಾರ
ಸ್ಥಾನಗಳಲ್ಲಿ ನೆಲಿಸಿರುವರು ಈ ಆಕ್ಷೇಪಕ್ಕೆ ಉತ್ತರವೇಂದರೆ, ಸಕಲ ದೇವ
ಗಳಿಗೆ ಭಗವಂತನೆ ಅವರವರ ಅಧಿಕಾರ ಸ್ಥಾನಗಳನ್ನು ದಯಪಾಲಿಸಿರುವನ
'ಸುರಋಷಭಾಯ ಸನಾತನಾಯ' ದೇವೋತ್ತಮನು, ಆದ್ಯಂತ ರಹಿತನು, ಶಶ್ವ
ಏಕಸ್ವರೂಪ ಎಬದಂನ ದೇವತೆಗಳಿಂತಲೂ ಭಗವಂತನು ಶ್ರೇಷ್ಠನ
ಉತ್ತಮನು, ಎಂಬುದನ್ನು ಸ್ಪಷ್ಟಗೊಳಿಸಿರುವರು. 'ಭೂಯಸೇ', ಗುಣಪೂರ್ಣ
ಎಂಬುದೂ ಇದರಿಂದಲೆ ಸ್ಪಷ್ಟವಾಗುತ್ತದೆ.

ಅಥವಾ, 'ಸ್ವೇ ಉಪಚಿತಶಕ್ತಿಭಿಃ', (ಸ್ಥಿರಾಃ) ಏಕನಿಷ್ಠವಾದ ಮನಸ್ಸಿನಿ
ತನ್ನನ್ನು ಆರಾಧಿಸುವ ಶಕ್ತಿಯನ್ನು ಕರುಣಿಸಿ, ಅವರಿಗೆ ಜ್ಞಾನಾದಿಗಳನ
ಕೊಟ್ಟು ಕಾಪಾಡುವವನು, ಈ ಉದ್ದೇಶದಿಂದ ತನ್ನ ಸ್ವರೂಪಭೂತವಾ
ಒಂಬತ್ತು ಶಕ್ತಿಗಳನ್ನು - ನಾರಾಯಣ, ಪರಬ್ರಹ್ಮ, ವಾಸುದೇವ, ಸಂಕರ್ಷಣ
ಪ್ರದ್ಯುಮ್ನ, ಅನಿರುದ್ಧ, ನರಸಿಂಹ, ವರಾಹ, ಪರಂಜ್ಯೋತಿ-ಎಂಬ ಒಂಬತ
ರೂಪಗಳನ್ನಾಗಿ, ತನ್ನ ಲೀಲೆಯಿಂದಲೆ ತನ್ನ ಪೂಜೆಗೆಂದು ಪ್ರಕಟಗೊಳಿಸುವನ
ಈ ಮೂರ್ತಿಗಳ ರೂಪದಲ್ಲಿ ತನ್ನನ್ನು ಪೂಜಿಸುವವರಿಗೆ ಅಪೇಕ್ಷಿತ ಪುರುಷಾರ್ಥ
ವನ್ನು ಕೊಡುವವನು ( ಅನುಮೃಗ್ಯದಾನಾಯ ) ಆಗಿರುವ ಪರಮಾತ್ಮನಿ
ಪ್ರಣಾಮಗಳು.

ಹೀಗೆ ಹೇಳಿರುವರುಃ- 'ಸಾತ್ವನಾಂ ..... 'ಪುರಾ' (೧೧-೧೬-೩೨) ಸ
ಗುಣಯುಕ್ತವಾದ (ನಾರಾಯಣಾದಿ) ನವಮೂರ್ತಿಗಳಿಗೆ ಆದಿಯಲ್ಲಿ ನಾ
ಮೂಲರೂಪನಾಗಿರುವನು. ಅಥವಾ- 'ಸ್ವೇ - ಅಂದರೆ ಆತ್ಮನಿ' - 'ಪರಮಾತ್ಮ
ಪರಮಾತ್ಮನೇ ತಮಗೆ ಏಕಮೇವ ಗತಿಯೆಂಬ ಅನನ್ಯ ಪರಾಯಣಯುತೆಯನ್ನ
ಶ್ರೀಹರಿ ಕೃಪೆಯಿಂದಲೇ ತಾಳಿದವರು. ಅವರಂತೆ ಶ್ರೀಹರಿಯಲ್ಲಿ ದೃಢ ಮನಸ
ಳ್ಳವರೂ ಆದ ಮಾನವರಿಗೆ ಅಪೇಕ್ಷಿತ ಪುರುಷಾರ್ಥವನ್ನು ಕೊಡುವವನು.

'ಪರಮ ಹಂಸ' ನೆಂದರೆ ಪರಮಾತ್ಮನೆ, ಭಗವಂತನ (ಆಶ್ರಯೇ) ಕೃಪೆ ಡಲ್ಲಿಯೆ ದೃಢವಾದ ಚಿತ್ತ ಉಳ್ಳವರಿಗೆ ಅಪೇಕ್ಷಿತ ಪುರುಷಾರ್ಥ ಕೊಡುವವನು ಎಂಬುದು ಇನ್ನೊಂದು ಅರ್ಥವು.

ವಿಶುದ್ಧವಾದ ಮನಸ್ಸುಳ್ಳವರಿಗೆ, ಭಾಗವತ ಶಾಸ್ತ್ರದಲ್ಲಿ ಬರುವ 'ಹಂಸ ಪರಮಹಂಸ'ರೆಂಬ ಶಬ್ದಗಳು – ಭಗವತ್ಪರವೂ (ಸಂದರ್ಭಾನುಸಾರವಾಗಿ) ಭಗವಂತನನ್ನು ಕುರಿತೇ ಉಪಯೋಗಿಸಿದವುಗಳು. ಎಂಬುದು ಸ್ಪಷ್ಟವಾಗಿ ತಿಳಿಯುವದು. ಈ ಬಗ್ಗೆ, ವಿಸ್ತೃತವಾಗಿ ಹಿಂದೆಯೇ ಹೇಳಿದೆ. ಇಲ್ಲಿ ಸೂಚನೆ ಮಾತ್ರ ಮಾಡಿದೆ.

**ನ ವಿದ್ಯಾಮದತೋ ನಾಪಿ ಪ್ರತಿಷ್ಠಾಕಾಮತಃ ಕ್ವಚಿತ್ |**
**ಕಿಂತು ಶ್ರೀಹರಿಪಾದಾಬ್ಜರತಿಃ ಸ್ಯಾದಿತ್ಯಯಂ ಶ್ರಮಃ ||**

ಭಾಗವತೋತ್ತಮರಾದ ಶ್ರೀವಿಷ್ಣುತೀರ್ಥರು ತಮ್ಮ ಅಪಾರ ಸೌಜನ್ಯ ಶಾಲೀನತೆಗಳಿಂದ ಗ್ರಂಥ ರಚನೆಯನ್ನು ಮುಕ್ತಾಯಗೊಳಿಸಿರುವರು.

ಪಾಂಡಿತ್ಯದ ಅಹಂಕಾರದಿಂದಲಾಗಲಿ, ಮಾನ ಮರ್ಯಾದೆಗಳನ್ನು ಪಡೆಯಬೇಕೆಂಬ ಆಕಾಂಕ್ಷೆ (ಬಯಕೆ) ಯಿಂದಲೂ ಕೂಡ ನಾನು ಈ ಗ್ರಂಥವನ್ನು ಬರೆದಿಲ್ಲ. ಶ್ರೀಹರಿಯ ಪಾದ ಕಮಲಗಳಲ್ಲಿ ದೃಢವಾದ ಆಸಕ್ತಿಯು ನನಗೆ ಉಂಟಾಗಲಿ ಎಂಬುದೊಂದೇ ಉದ್ದೇಶವು ಈ ನನ್ನ ಪರಿಶ್ರಮಕ್ಕೆ ಕಾರಣವಾಗಿದೆ.

ಶ್ರೀವಿಷ್ಣು ತೀರ್ಥರಿಂದ ರಚಿತವಾದ ಸಾರೋದ್ಧಾರದ ಟೀಕೆಯು ಸಮಾಪ್ತವಾಯಿತು.

ಶ್ರೀಕೃಷ್ಣಾರ್ಪಣ ಮಸ್ತು - ಶ್ರೀಮಹಿದಾಸಾರ್ಪಣಮಸ್ತು



# ತಾತ್ಪರ್ಯ

ಓಮ್ಮೆ ಕಣ್ಣು ಹಾಯಿಸುವದರಿಂದ, ಅಲ್ಪಾವಧಿಯಲ್ಲಿಯೆ ಭಾಗವ ಸಾರೋದ್ಧಾರದಲ್ಲಿಯ ವಿಷಯಗಳೆಲ್ಲವೂ ಕಣ್ಮುಂದೆ ನಿಲ್ಲಬೇಕು, ಹಿಂದೆ ಓದಿದ ಮನಸ್ಸಿನಲ್ಲಿ ಮತ್ತೆ ಮೂಡಿಬರಬೇಕು. ಎಂಬ ಉದ್ದೇಶದಿಂದ ಮೂವತ್ತು ಪ್ರಕರ ಗಳಲ್ಲಿ ಬಂದಿರುವ ಸಾರವನ್ನು ಸುಸಂಗತವಾಗಿ ಸಂಕ್ಷೇಪಿಸಿ. 'ತಾತ್ಪರ್ಯ'ವೆಂ ಇಲ್ಲಿ ಕೊಡಲಾಗಿದೆ, ನಿತ್ಯ ಪಠಣಕ್ಕೂ ಅನುಕೂಲವಾಗುವಂತಿದೆ.

ಶ್ರೀಮದ್ಭಾಗವತದ (೧೨ ಸ್ಕಂಧಗಳಲ್ಲಿಯ) ಹದಿನೆಂಟು ಸಾವಿರ ಶ್ಲೋ ಗಳಿಂದ ೩೬೭ ಶ್ಲೋಕಗಳನ್ನು ಆಯ್ದುಕೊಂಡು 'ಅನುಪೂರ್ವೀವಿಶೇಷ'ದಿಂ ಅಂದರೆ ವಿವಿಧ ವಿಷಯಗಳನ್ನು ತೇಪೆ ಹಚ್ಚಿದಂತೆ ಜೋಡಿಸದೆ, ಸುಸಂಗತವಾ ಹೊಂದಿಕೆಯಿಂದ ೩೦ ಪ್ರಕರಣಗಳಲ್ಲಿ ಸುಬೋಧ ಹಾಗೂ ಸುತರ್ಕಬದ್ಧವಾ ಟಿಪ್ಪಣೆ ಸಹಿತ ಸಂಗ್ರಹಿಸಲಾಗಿದೆ.

ಮಂಗಲಾಚರಣದ ಆದಿ ಶ್ಲೋಕದಲ್ಲಿ, ಸರ್ವ ಜೀವರ 'ಅಂತಸ್ಥ'ನಾ ಅಂತರ್ಧ್ರುವಪದೋಕ್ತ ಬಿಂಬರೂಪಕ್ಕೆ ವಂದಿಸಿ, ಎರಡನೆಯ ಶ್ಲೋಕದ 'ಬಹಿಷ್ಠ' (ಹೊರಗಿನ) ಕಾಲನಾಮಕ ರೂಪವನ್ನು, ಬ್ರಹ್ಮಾಂಡದಲ್ಲಿಯ ಅಖಿ ಸತತ್ತ್ವಾತ್ಮಕ ರೂಪಗಳನ್ನು ಧ್ಯಾನಮಾಡುತ್ತಾರೆ. ಬಿಂಬರೂಪವೇ ಆದ್ಯ, ಬಿಂ ವಿಷಯಕ ಜ್ಞಾನವೇ ಮುಖ್ಯವು. ಜಗತ್ತಿನ ಜನ್ಮಾದಿ ಕಾರಣನಾದ, ಗು ಪೂರ್ಣನಾದ, ಸರ್ವದೋಷರಹಿತನಾದ, ಜ್ಞೇಯನಾದ, ಗಮ್ಯನಾದ ಶ್ರೀ ವಿಷ ವಿಗೆ ವಂದನೆ ಸಲ್ಲಿಸಿದ್ದಾರೆ. ಅಂತಸ್ಥ, ಬಹಿಷ್ಠರೂಪಗಳ ಸಾಮಾನ್ಯ ಜ್ಞಾ ಗಳಿಸಲು ಮೋಕ್ಷಾಪೇಕ್ಷಿಗಳು ಯತ್ನಿಸಬೇಕು.

ಮೊದಲಿನ ನಾಲ್ಕು ಪ್ರಕರಣಗಳಲ್ಲಿ, (೧) ಚತುಃಶ್ಲೋಕೀ ಭಾಗವತಸಹಿ ಭಾಗವತದ ಮೂಲೋತ್ಪತ್ತಿ, (೨) ಲೋಕದಲ್ಲಿ ಭಾಗವತದ ಆಗತಿ (ಸಾಗಿಬಂ ರೀತಿ), (೩) ಭಾಗವತದ ಮಹತಿ, (೪) ಕಲಿಯುಗದಲ್ಲಿ ಕಲಿಬಾಧೆಯ ನಿವಾರ ಗಾಗಿ ಪರೀಕ್ಷಿತ ರಾಜನು ಮಾಡಿದ ಕಲಿನಿಗ್ರಹದ ಕಥೆಯ ಶ್ರವಣದ ಫ (೫) ಪರೀಕ್ಷಿತ ರಾಜನ ವೈರಾಗ್ಯ, (೬) ಭಗವದ್ಭಕ್ತರ ಸಮಾಗಮದ ಅಗತ್ಯ ಭಗವತ್ಕಥಾ ಶ್ರವಣ ಮನನಗಳಿಗಾಗಿ (೭) ಸ್ಥಾವರ ಹಾಗೂ ಜೀವರುಗಳ ಮನೋ ಭಿಮಾನಿಗಳಾಗಿ, ಅಂತರ್ಬಾಹ್ಯ ಗುರುಗಳಾದ ಶುಕ ಮುನಿಗಳ ಧ್ಯಾನ, ಕ್ರ ಹಾಗೂ ಮಹತ್ವ, (೮) ಯೋಗ್ಯ ಗುರುಗಳು ಲಭಿಸಿದಾಗ್ಗೆ, ಅವರಿಂದ ಪ್ರಾರ್ಥ

ಪೂರ್ವಕ ಜ್ಞಾನಾರ್ಜನೆ, (೯) ಶ್ರೀ ಹರಿಯ ರೂಪ ಗುಣ ಕ್ರಿಯೆಗಳ ಶ್ರವಣದ ಮಹತ್ವ, (೧೦) ಪರಮಾತ್ಮನಲ್ಲಿಯೆ 'ರತಿ' ( ಆಸಕ್ತಿ ), ಅನ್ಯತ್ರ ಅನಾಸಕ್ತಿ, (೧೧) ಸುಜೀವರಿಗೆ ಜ್ಞಾನ ವೈರಾಗ್ಯಗಳು ಅಭಿವೃದ್ಧಿಯಾಗಿ, ಬಿಂಬರೂಪೀ ಶ್ರೀಹರಿ ಚರಣದಲ್ಲಿ ಚಿತ್ತಸ್ಥಿರವಾಗಿ ನೆಲಿಸಿ, ಭಕ್ತಿಪಕ್ವವಾದ ಮೇಲೆ ಶ್ರೀ ಹರಿಯ ಅಪರೋಕ್ಷ ದರ್ಶನ, ಕೊನೆಗೆ ಮೋಕ್ಷ ಪ್ರಾಪ್ತಿ. ಇದುವೆ ಸಾಧನ ಕ್ರಮ, ಬೇರೊಂದಿಲ್ಲ.

ಜಿಜ್ಞಾಸೆಯ ಮಹತ್ವವನ್ನು ತಿಳಿಸಿ, ಸಾಧಕನು ವೈರಾಗ್ಯಾದಿ ಅಧಿಕಾರ ಪಡೆಯಬೇಕೆಂಬ, 'ಅಧಿಕಾರ ಪ್ರಾಪ್ತಿಯ' ವಿವೇಚನೆಯು ಮುಂದಿನ ನಾಲ್ಕು ಪ್ರಕರಣಗಳಲ್ಲಿದೆ. ಈ ಸಂದರ್ಭದಲ್ಲಿ, ಮುಚಕುಂದ, ಅಂಬರೀಷ, ಧ್ರುವ ಮುಂತಾದ ಸಾರ್ವಭೌಮರ, ಹಾಗೂ ಪಿಂಗಳಾ ವೇಶ್ಯೆಯ ವೈರಾಗ್ಯವನ್ನು ಮಾದರಿಯಾಗಿ ಹೇಳಿದ್ದಾರೆ. ಆನಂತರ, ಮಹತ್ಸಮಾಗಮ, ಮಹತ್ಸೇವಾ, ಮಹನ್ನಿಂದಾ ಹಾಗೂ ಆತ್ಮಪ್ರಶಂಸಾ ವರ್ಜನ, ಇಂದ್ರಿಯ ಜಯಗಳ ವಿವೇಚನೆ ೫ ರಿಂದ ೧೦ ರ ವರೆಗಿನ ಪ್ರಕರಣಗಳಲ್ಲಿ ನಿರೂಪಿಸಿದ್ದಾರೆ.

ಈ ಪ್ರಕಾರವಾಗಿ, ವೈರಾಗ್ಯವನ್ನು ಪಡೆದು ಜಿತೇಂದ್ರಿಯನಾದ ಸಾಧಕನಿಗೆ ಯೋಗ್ಯ ಗುರುಗಳು ಪರಬ್ರಹ್ಮನನ್ನು ಕುರಿತು ಮಾಡುವ ಉಪದೇಶವನ್ನು ೧೧ ನೆಯ ಪ್ರಕರಣದಲ್ಲಿ ವಿವರಿಸುವರು. ಈ ಉಪದೇಶದ ಪ್ರಯೋಜನವು, ಇಷ್ಟ ಪ್ರಾಪ್ತಿ, ಅನಿಷ್ಟ ನಿವೃತ್ತಿಗಳ ರೂಪವಾದ ಮೋಕ್ಷವನ್ನು ಪಡೆಯುವದೇ ಆಗಿದೆ,

'ಬ್ರಹ್ಮೋಪದೇಶ' ವೆಂಬ ೧೧ನೆಯ ಪ್ರಕರಣದಲ್ಲಿ, ಶ್ರೀ ವಿಷ್ಣುವಿನ ಜಗಜ್ಜನ್ಮಾದಿಕಾರಣತ್ವ, ಗುಣಪೂರ್ಣತ್ವ, ಸರ್ವದೋಷದೂರತ್ವ, ಇವುಗಳನ್ನು ಪ್ರತಿಪಾದಿಸಿ, ಶ್ರೀವಿಷ್ಣುವಿನಲ್ಲಿ ಸರ್ವಗುಣ ಸಮನ್ವಯ, ಅಪ್ರಾಕೃತ ಆನಂದಾದಿ ಅಲೌಕಿಕ ಗುಣಗಳಿರುವದು. –ಇತ್ಯಾದಿಗಳನ್ನು ಭಾಗವತ ಶ್ಲೋಕಗಳಿಂದಲೇ ವಿವರಿಸಿದ್ದಾರೆ. ಸೃಷ್ಟಿ, ಸಂಹಾರಾದಿ ವಿರುದ್ಧ ವ್ಯಾಪಾರಗಳನ್ನು ಮಾಡಿದರೂ, ಸ್ವ-ಭಾವದಲ್ಲಿ ವಿರೋಧವಿಲ್ಲ. ಆತನು ಪ್ರಕೃತಿಯ ಸತ್ವಾದಿ ಗುಣಗಳನ್ನು ನಿಮಿತ್ತೀಕರಿಸಿ, ಭಿನ್ನಕಾಲ ವಿಶೇಷಗಳಲ್ಲಿ ಸೃಷ್ಟ್ಯಾದಿ ಕಾರ್ಯಗಳನ್ನು ಲೀಲೆಯಿಂದ ಮಾಡುತ್ತಾನೆ. 'ಜಗಜ್ಜನ್ಮಾದಿ ಕಾರಣ'ವೆಂಬ ವಸ್ತು ಒಂದೇ, ಅನೇಕವಲ್ಲ. ಬೇರೆಬೇರೆ ಮತದರ್ಶನಗಳಲ್ಲಿ, ಬ್ರಹ್ಮ, ನಾದ, ಧರ್ಮ, ಸತ್ ಅಥವಾ ಅಸತ್, ನವಶಕ್ತಿಯುತ ಮಹಾಪುರುಷ, ಅವ್ಯಯ, ಆತ್ಮತಂತ್ರ,–ಎಂಬ ಅನೇಕ ವಿಧ ಶಬ್ದಗಳಿಂದ ಕರೆಯಲ್ಪಡುವವನು ಶ್ರೀವಿಷ್ಣುವೇ.

'ಹಿರಣ್ಯಗರ್ಭ'ನಾಗಿ ಸೃಷ್ಟಿಸುವವನು, 'ನಾರಾಯಣ'ನಾಗಿ ಪಾಲಿ ವವನು, 'ಶಿವ'ನಾಗಿ ಸಂಹರಿಸುವವನೂ ಶ್ರೀವಿಷ್ಣುವೇ. ಯಜ್ಞಿಯ ಅಗ್ನಿದ್ವಾ ಕರ್ಮನಿಷ್ಠರಾಗಲಿ, ಅಧ್ಯಾತ್ಮಜ್ಞಾನದ್ವಾರಾ ಜ್ಞಾನಯೋಗಿಗಳಾಗಲಿ, ಧ್ಯಾ ಸುವದು ಶ್ರೀವಿಷ್ಣುವನ್ನೇ. ಶಕ್ತಿ, ಶೂನ್ಯ, ನಿರಾಕಾರ, ಅವ್ಯಕ್ತಂ, ಆದ್ಯಂ, ಬ್ರಹ ಜ್ಯೋತಿ, ನಿರ್ಗುಣ, ನಿರ್ವಿಕಾರ, ನಿರ್ವಿಶೇಷ, ನಿರೀಹ, ಅಧ್ಯಾತ್ಮದೀಪ, ಎಂ ಎಲ್ಲ ಪದಗಳೂ ಪರಬ್ರಹ್ಮಪದವಾಚ್ಯನಾದ ಶ್ರೀವಿಷ್ಣುವನ್ನೇ ಬೋಧಿಸುತ್ತ ಆಕಾಶದ ದೃಷ್ಟಾಂತದಿಂದ ಶ್ರೀವಿಷ್ಣುವಿಗೆ ದೇಶ-ಕಾಲ-ಗುಣಗಳ ತ್ರಿವಿ ವ್ಯಾಪ್ತಿಯನ್ನು ಹೇಳಿದ್ದಾರೆ. ಶ್ರೀವಿಷ್ಣುವಿನ ರೂಪ, ಗುಣ, ಕ್ರಿಯೆಗಳ ಮಹಿ ಯನ್ನು ಈಶಕೋಟಿ ಪ್ರವಿಷ್ಟಳಾದ ರಮಾದೇವಿಯೂ ಕೂಡ ಸಾಕಲ್ಯೇನ ತಿಳಿಂ ಲಾರಳು. ಸೃಷ್ಟಿ ಸಂಹಾರಾದಿ ವಿರುದ್ಧ ಕ್ರಿಯೆಗಳು ಪರಮಾತ್ಮನಿಂದ ನಡೆಯ ತ್ತಿರುವುದು ಆತನ ಅಘಟಿತ ಘಟನಾ ಪಟುತ್ವದ ನಿದರ್ಶನವಾಗಿದೆ.

ಸೃಷ್ಟ್ಯಾದಿಗಳಿಂದ ಶ್ರೀಹರಿಗೆ ಸ್ವಂತದ ಯಾವ ಪ್ರಯೋಜನವೂ ಸತ್ವಾ ತ್ರಿಗುಣಗಳ ಲೇಪವೂ ಇಲ್ಲ. ಆದ್ದರಿಂದ ಪರಮಾತ್ಮನಿಗೆ ಯಾವ ಜೀವರ ವಿ ಯುಕ್ಕೂ ಆದರ ಉಪೇಕ್ಷೆಗಳಿಲ್ಲ. ಹೀಗಿದ್ದರೂ ಭಕ್ತರ ಪ್ರಯೋಜನವೇ ತನ ಪ್ರಯೋಜನವೆಂದು, ಸಕಲ ಜೀವರಿಗೆ ಅವರವರ ಗತಿ ನೀಡಲೋಸುಗವೇ ಆತ ಅಷ್ಟವಿಧ ಲೀಲಾ ವ್ಯಾಪಾರಗಳು 'ಶ್ರೀವಿಷ್ಣುವೇ ಭಕ್ತಾನುಕಂಪಿಯು, ಸಮ ಅಧಿಕರಹಿತನು, ಮುಕ್ತಿಪ್ರದನು: ವಿಷ್ಣುವಿನ ಸರ್ವೋತ್ತಮತ್ವವನ್ನು ಸಮು ಮಂಥನ ಸಂದರ್ಭದಲ್ಲಿ ಅನ್ಯ ಸಕಲ ದೇವತೆಗಳ ದೋಷಗಳನ್ನು ಕಂಡುಕೊಂಡು ನಿರ್ದೋಷ, ಗುಣಪೂರ್ಣನಾದ ಶ್ರೀವಿಷ್ಣುವಿನನ್ನೇ, ಶ್ರೀ ಲಕ್ಷ್ಮೀದೇವಿಯು ವ ಸಿದ್ದರಿಂದ ತೋರಿಸಿಕೊಟ್ಟಿರುವರು. ರಮಾದೇವಿಯು, ನಾರಾಯಣನಂತರ ಗು ಪೂರ್ಣಳು, ದೋಷರಹಿತಳು, ಭಕ್ತವತ್ಸಲಳು, ಈಶಕೋಟಿ ಪ್ರವಿಷ್ಟಳು. ನಾರಾ ಯಣನಿಗೆ ಅವಳು 'ರತಿಪಾತ್ರಳು' ಮಾತ್ರ ಆದರೆ ಅವಳಿಗೆ 'ರತಿದಾತೃತ್ವ ವಿಲ್ಲ.

ಮುಂದಿನ ೧೫ ಪ್ರಕರಣಗಳಲ್ಲಿ (೧೨ ರಿಂದ ೨೬ ರ ವರೆಗೆ) ಸಾಧನಾಂ ಗಳು, ಸಾಧನ ವಿಷಯಗಳ ವಿವೇಚನೆ ಇದೆ. ಗುರು ಪ್ರಸಾದದಿಂದ ಸಾಮಾ ಬ್ರಹ್ಮೋಪದೇಶದಿಂದ ಇತರ ಐಹಿಕ ವಿಷಯಗಳ ಬಗ್ಗೆ ಯತ್ನಿಸದೆ, ಶ್ರೀಹರಿಂ ಉಪಾಸನೆಗೋಸುಗ ಯತ್ನಿಸಬೇಕು. ಪುರುಷಾರ್ಥದ ಸಾಧನಕ್ಕೆ ವೈರಾಗ್ಯ ಪ್ರಥಮ ಮೆಟ್ಟಿಲು. ಕರ್ಮವು ಎರಡು ವಿಧ:- ಪ್ರವೃತ್ತ ಹಾಗೂ ನಿವೃತ್ತ ಪ್ರವೃತ್ತ ಕರ್ಮದ ಫಲಗಳು ನಶ್ವರವಾದವು, ದುಃಖ ಪ್ರದವಾದವು: ಸಂಸಾ ಗಳಲ್ಲಿ ಮತ್ತೆಮತ್ತೆ ಸುತ್ತಾಡಿಸುವವು. ಆದುದರಿಂದ, ಸ್ವರ್ಗಾದಿಸುಖಗಳನ

ಕೊಟ್ಟರೂ, ಪ್ರವೃತ್ತಕರ್ಮವು ತ್ಯಾಜ್ಯವಾದುದು. ಸಾಧನಕ್ಕೆ ಇದರಿಂದ ವೈರಾಗ್ಯದ ತಿರುಳನ್ನೇ ಹೇಳುತ್ತಾರೆ. ನಿವೃತ್ತ ಕರ್ಮದಿಂದ ಶಾಶ್ವತಸುಖವು ಸಿಗುವದರಿಂದ ಅದನ್ನೇ ಅನುಸರಿಸಬೇಕು.

ದೇಶ (ಭಾರತ), ಕಾಲ (ಕಲಿಯುಗ), ದೇಹ (ಮಾನವ), ಈ ಮೂರು ಸಾಧನಾಂಗಗಳನ್ನು (೬-೧೫-೧೬) ಪ್ರಕರಣಗಳಲ್ಲಿ ವಿವರಿಸಿದ್ದಾರೆ. ಜಂಬೂ ದ್ವೀಪದಲ್ಲಿ ಭಾರತವೇ ಶ್ರೇಷ್ಠ ಕರ್ಮಭೂಮಿ. ಕಲಿಯುಗದಲ್ಲಿ ಶ್ರೀಕೃಷ್ಣನಾಮ ಸಂಕೀರ್ತನೆಯೊಂದೇ ಸಾಕು. ಉದ್ಧೃತಿಗೆ, ಪುರುಷಾರ್ಥ ಸಾಧನೆಗೆ ಮನಷ್ಯ ದೇಹವೆ ಸಾಧನ.

ಉಪಾಸನೆಯ ಬಗೆಯನ್ನು ಮುಂದಿನ ಪ್ರಕರಣಗಳಲ್ಲಿ ಹೇಳುವರು, ಅಣಿಷ್ಟವಾದ ಬಿಂಬರೂಪದ ಉಪಾಸನೆಯೊಂದೇ ಮುಕ್ತಿಗೆ ಸಾಧನ. ಸಹಸ್ರಾರು ಬೇರೆ ಸಾಧನಗಳಿಂದ ಮುಕ್ತಿಯು ಎಂದಿಗೂ ದೊರೆಯಲಾರದು. 'ಉಪಾಸನೆ'- ಎಂದರೆ, ಮನಸ್ಸನ್ನು ಮುಖ್ಯವಾಗಿ ಪರಮಾತ್ಮನಲ್ಲಿ ನಿಲ್ಲಿಸುವದು, ಏಕಪ್ರಕಾರವಾಗಿ ಪರಮಾತ್ಮನ ಚಿಂತನೆ ಮಾಡುವದು. ಅಣಿಷ್ಟ (ತೀರ ಚಿಕ್ಕ) ರೂಪದಲ್ಲಿ ಮನಸ್ಸನ್ನು ನಿಲ್ಲಿಸುವದು ಪ್ರಾರಂಭದಲ್ಲಿಯೆ ಎಲ್ಲರಿಗೂ ಸಾಧ್ಯವಿಲ್ಲ, ಆದ್ದರಿಂದ, ಮಾನಸಿಕವಾಸನಾ ನಿರ್ಮಿತ (ಸ್ಥೂಲ) ಪ್ರತಿಮೆಯೊಂದರಲ್ಲಿ, ಅಥವಾ ಆಕಾಶ ಮುಂತಾದ ವಿಭೂತಿರೂಪಗಳಲ್ಲಿ ಮನಸ್ಸನ್ನು ನಿಲ್ಲಿಸಲು ಮೊದಲು ಯತ್ನಿಸಬೇಕು ಈ ವಾಸನಾಮಯ ರೂಪವು ಸಚ್ಛಾಸ್ತ್ರದ ಶ್ರವಣ-ಮನನಗಳಿಂದಲೆ ಜನ್ಯವಾದುದರಿಂದ, ಅವೆರಡೂ ಉಪಾಸನೆಯ ಅಂಗಗಳೇ. ಸರ್ವಶಾಸ್ತ್ರಗಳ ಅಭ್ಯಾಸದಲ್ಲಿ ಶ್ರವಣ-ಮನನ-ಪ್ರವಚನಗಳು ಸಮಾವೇಶವಾಗುವವು.

'ಧ್ಯಾನ'-ಎಂದರೆ 'ಗುಣೋಪಸಂಹಾರ'.-ಅದರಲ್ಲಿ ಖಂಡಧ್ಯಾನ (ಧಾರಣಾ) ಅಖಂಡಧ್ಯಾನ (ಧ್ಯಾನ), ನಿರಾಯಾಸ (ಅಪ್ರಯತ್ನ) ದಿಂದ ಲಭಿಸುವ ಧ್ಯಾನ (ಸಮಾಧಿ)-ಇವು ಒಂದಕ್ಕಿಂತಲೂ ಇನ್ನೊಂದು ಹೆಚ್ಚು ಉತ್ತಮವಾದುದು. ಕೆಲವು ಅಧಿಕಾರಿಗಳಿಗೆ ಶಾಸ್ತ್ರಾಭ್ಯಾಸಕ್ಕೆ ಹೆಚ್ಚು ಪ್ರಾಧಾನ್ಯ, ಕೆಲವರಿಗೆ ಕಡಿಮೆ ಪ್ರಾಧಾನ್ಯ. ಏಕಾಗ್ರತೆಯಿಂದ ಶಾಸ್ತ್ರಾಭ್ಯಾಸಕ್ಕೆ 'ಧ್ಯಾನ'ದ ಸ್ವರೂಪವೇ ಬರುವದು-ಇವೆರಡರಲ್ಲಿ ಅಂಗಾಂಗಿಭಾವ; ಒಂದನ್ನು ಬಿಟ್ಟು ನಡೆಯುವಂತಿಲ್ಲ. ಪರಮಾತ್ಮನ ಉಗ್ರರೂಪನ್ನು ಧ್ಯಾನಿಸಕೂಡದು, ಮಂಗಲ ರೂಪವನ್ನೇ ಧ್ಯಾನಿಸಬೇಕು.

ಉಪಾಸಕರಲ್ಲಿ, ಮೂರು ಪ್ರಕಾರಗಳು: (೧) (ಸರ್ವಗುಣೋಪಾಸಕರು (ಚತುರ್ಮುಖ ಬ್ರಹ್ಮ); (೨) ಬಹುಗುಣೋಪಾಸಕರು, (ದೇವ-ಗಂಧರ್ವ-ಋಷಿ

ಗಳು), ಚತುರ್ಗುಣೋಪಾಸಕರು (ಮನುಷ್ಯರು). ಅಜ್ಞಾನ, ವಿಪರೀತ ಜ್ಞಾನಗ ನಿವಾರಣೆಯಾಗಲು 'ಮನನ' ಅಗತ್ಯ. ಶ್ರವಣ ಮನನಗಳು ಪುನಃ ಪು (ಆವೃತ್ತಿ) ನಡೆಯಬೇಕು.

ಧ್ಯಾನೋಪಾಸನೆಯಲ್ಲಿ, ಸ್ಥೂಲರೂಪದ ಉಪಾಸನೆಯು ಮೊದಲ ಹೆಜ್ಜೆ ನದೀ ಬೆಟ್ಟ ಮುಂತಾದವು, ಬಾಹ್ಯದೇಹದ ಅಳತೆಯ ಪ್ರತಿಮೆಗಳು ಸ್ಥೂ ರೂಪಗಳು. ಅವುಗಳಲ್ಲಿ ತದಂತರ್ಯಾಮಿಯಾಗಿ, ತದಾಕಾರನಾಗಿರುವ ಶ್ರೀವಿಷ ವಿನ ರೂಪವು 'ಮಹತ್' ರೂಪವಿಶೇಷ. ಕ್ರಮೇಣ, ಪ್ರಾದೇಶ ಮಾ (ಹೆಬ್ಬೆಟ್ಟಿಗೂ ತೋರಬೆರಳಿಗೂ ಇರುವಷ್ಟು ಅಂತರದಷ್ಟರಿಂದ) ಪ್ರಾರಂಭಿ ಸ್ವದೇಹಾಂತಸ್ಥ ಅಣಿಷ್ಟ ಸ್ವರೂಪದ ವರೆಗಿನ ಸೂಕ್ಷ್ಮರೂಪಗಳನ್ನು ಧ್ಯಾನಿಸಬೇಕ ಇಂದ್ರಿಯಗಳನ್ನು ಅತ್ತಿತ್ತ ಚಲಿಸಗೊಡದೆ, ಭಗವಂತನ ರೂಪವನ್ನೇ ಖಂ ಅಖಂಡ, ಸಮಾಧಿ ರೂಪಗಳಲ್ಲಿ ಧ್ಯಾನಿಸಬೇಕು. ಎಲ್ಲ ಅವಯವಗಳನ್ನು ಕ ಕಾಲಕ್ಕೆ (ಸಮಗ್ರವಾಗಿ) ಧ್ಯಾನಿಸಲು ಅಶಕ್ತರಾದವರು ತಮಗೆ ಶಕ್ಯವಿ ವಷ್ಟು, ಕನಿಷ್ಠ ಒಂದೇ ಅವಯವದಲ್ಲಿ ಚಿತ್ತವನ್ನು ಸ್ಥಿರಗೊಳಿಸಬೇಕು. ಪರಮ ತ್ಮನ ಮಂಗಳ ರೂಪ-ಗುಣಗಳ ಚಿಂತನೆಯೇ ಧ್ಯಾನವಾಗಿದೆ. ಪರಮಾತ ಅನಂತ ಗುಣ ಕ್ರಿಯೆಗಳೆಲ್ಲವೂ ಅಲೌಕಿಕ, ಅಪ್ರಾಕೃತವೆಂಬ ಅನುಸಂಧಾನ ಯಾವಾಗಲೂ ಇರಬೇಕು. ಅಂಥ ಅಪ್ರಾಕೃತ ರೂಪವು ಮನೋಮಯ ಮೂ ಯಲ್ಲಿ ಅಂತಸ್ಥವಾಗಿರುವದೆಂಬ ಅನುಸಂಧಾನವಿರಬೇಕು. ಉಪಾಸನೆಯ ಮೂ ವಿಧಾನಗಳಲ್ಲಿ 'ಅಂಗಾಂಗಿ' ಭಾವವಿರುವದರಿಂದ, ಒಂದನ್ನು ಬಿಟ್ಟು ಇನ್ನೊ ದನ್ನು ಎತ್ತಿಕೊಳ್ಳಬಾರದು.

ಯಥಾಯೋಗ್ಯ ಅಧಿಕಾರ ಹಾಗೂ ಬ್ರಹ್ಮೋಪದೇಶವನ್ನು ಪಡೆದು ಸಾ ಮಾರ್ಗದಲ್ಲಿ ಬರುವ ಎಡರುಗಳನ್ನು ನಿವಾರಿಸಬಲ್ಲ 'ಅಸಾಧಾರಣ' ಗುರು ಲಕ್ಷಣಗಳನ್ನು ೧೮ನೆಯ ಪ್ರಕರಣದಲ್ಲಿ ಹೇಳಿದೆ. ಸಾಧಕನಿಗೆ ಮನಃಶ ಹೇಗಾದೀತು ? ವಿಘ್ನಗಳು ಹೇಗೆ ದೂರವಾಗುವವು ? ವೈರಾಗ್ಯ ಹೇಗೆ ಉಂ ಗುವದು? ಬಿಂಬರೂಪವೆಂದರೇನು ? ಹೇಗಿದೆ? ಎಲ್ಲಿದೆ ? ಯೋಗ್ಯ ಸಾಧನ ಯಾವು ? ಇತ್ಯಾದಿ ವಿಷಯಗಳನ್ನು ತಿಳಿಸುವ ಗುರುವಿನ ಲಕ್ಷಣಗಳೇನ ಗುರುವಿನಕೂಡ ಹೇಗೆ ವರ್ತಿಸಬೇಕು? ಈ ಮುಂತಾದ ಸಂಗತಿಗಳನ್ನು ಬಿಂಬ ಪಾಸಕ ಗುರುಪ್ರಾಪ್ತಿ ಮತ್ತು ಮುಂದಿನ ಪ್ರಕರಣಗಳಲ್ಲಿ ಹೇಳಿದೆ. ಶ್ರೀಹರಿ ಭಕ್ತಿಮಾಡುವಂತೆಯೇ, ಇಂಥ ಗುರುಗಳಲ್ಲಿಯೂ ಭಕ್ತಿ ಮಾಡುವದು ಅಗತ್ಯ

ಭಗವಂತನ ನಾಮಸ್ಮರಣೆಯನ್ನು ನಿರಂತರ ನಿಷ್ಠೆಯಿಂದ ಮಾಡುವದರಿಂದ ಜ್ಞಾನ ಭಕ್ತಿ ವೈರಾಗ್ಯಗಳು ಹೆಚ್ಚಾಗುವವು. 'ಪರಬ್ರಹ್ಮ' ವೆಂಬ ಸೂಕ್ಷ್ಮ ತತ್ವವನ್ನು ಕಾಣಲು ಉಪಾಸಕನು ಶಕ್ತನಾಗುವನು. ಜೀವ ಪಿಂಡಾಂಡದಲ್ಲಿಯ ಭಗವತ್ ಸ್ವರೂಪವನ್ನು, ಜೀವ ಹಾಗು ಪರಮಾತ್ಮರ ಸಂಬಂಧವನ್ನು ತಿಳಿಸಿ, ಅಧ್ಯಾತ್ಮ ಪ್ರಾವೀಣ್ಯದ ಅಗತ್ಯವನ್ನು ಅಧ್ಯಾತ್ಮ ಪ್ರಕರಣದಲ್ಲಿ ತೋರಿಸಿದ್ದಾರೆ.

ಪರಮಾತ್ಮನು ಪರಮಕೃಪಾಳು, ಪರಮದೈವತ, ಪರಮಗುರು. ಆತನು ತಂದೆ ತಾಯಿ, ಆಪ್ತ, ಅನಿಮಿತ್ತ ಬಂಧು(ಗೆಳೆಯ). ಎಲ್ಲ ಅವಸ್ಥೆಗಳಿಗೆ ಶ್ರೀಹರಿಯೆ ಪ್ರೇರಕ, ನಿಯಾಮಕ. ಆತನು ವೈಷಮ್ಯಾದಿ ರಹಿತನು. ವಿಶ್ವಪಾಲಕನು. ಅವರವರ ಸೇವೆಗೆ ತಕ್ಕಂತೆ (ಕಲ್ಪತರುವಿನಂತೆ) ಫಲ ಕೊಡುವನು. ಆತ್ಮತಂತ್ರನು ಸೃಷ್ಟ್ಯಾದಿ ಕಾರ್ಯಗಳಿಂದ ಆತನಿಗೆ ಸ್ವಂತದ ಯಾವ ಪ್ರಯೋಜನವೂ ಇಲ್ಲ. ಭಕ್ತರ ಪ್ರಯೋಜನವೇ ಆತನ ಪ್ರಯೋಜನ. ತ್ರಿವಿಧ ಜೀವಿಗಳಿಗೆ ಯಥಾಯೋಗ್ಯ ತ್ರಿವಿಧ ಗತಿಯನ್ನು ಕೊಡುವದೇ ಆತನ ಲೀಲಾಕಾರ್ಯ. ಆದುದರಿಂದ ಆತನ ಯಾವ ಕಾರ್ಯವೂ ವ್ಯರ್ಥವಾದುದಲ್ಲ. ಆತನೇ, ಶ್ರೀವಾಸುದೇವನೇ ಬಂಧಮೋಚಕ, ಅಂತೆಯೇ ಪರದೈವತ. ಭಗವದಿಚ್ಛೆಯೆ ನಮಗೆ ಶುಭಕರ. ಅನುಗ್ರಹ. ಇದೆಲ್ಲ ಅನುಸಂಧಾನವೇ ಭಕ್ತಿವಿಶೇಷ. ಜೀವನ ( ಅನಿರುದ್ಧ ) ಸ್ವರೂಪ ಹಾಗೂ ಸ್ಥೂಲ ದೇಹಗಳಲ್ಲಿ ನಡೆಯುತ್ತಿರುವ ಶ್ರೀಹರಿಯ ಅಚಿಂತ್ಯಾದ್ಭುತ ವ್ಯಾಪಾರಗಳನ್ನು ತಿಳಿಯುವದೆ ಬಿಂಬವಿಷಯಕ ಜ್ಞಾನ. ಜೀವ-ಪರಮಾತ್ಮರ ಸಂಬಂಧವನ್ನು ವಿವರಿಸುವದೇ ಅಧ್ಯಾತ್ಮಿಕ ಶಾಸ್ತ್ರ.

ಬಿಂಬೋಪಾಸನೆಯು ಫಲಪ್ರದವಾಗಲು, ಭಕ್ತಿಯು ಪಕ್ವವಾಗಬೇಕು. ಭಕ್ತಿಗೆ ಸಾಧನವಾಗಿರುವ ಭಾಗವತ ಧರ್ಮಗಳನ್ನು ನಿಷ್ಠೆಯಿಂದ ಆಚರಿಸಬೇಕು. ಭಾಗವತದಲ್ಲಿ ಪ್ರತಿಪಾದಿತವಾಗಿರುವ ಮೂವತ್ತು ಭಾಗವತ ಧರ್ಮಗಳನ್ನು 'ಧರ್ಮೋಪದೇಶ' ಪ್ರಕರಣದಲ್ಲಿ ವಿವರಿಸಿ ಹೇಳಿದ್ದಾರೆ. ದೇವತೆಗಳಿಗೂ ಗುಹ್ಯವಾಗಿರುವ ಈ ಭಾಗವತ ಧರ್ಮಗಳನ್ನು ತಮ್ಮತಮ್ಮ ಯೋಗ್ಯತೆಗೆ ಅನುಗುಣವಾಗಿ ತ್ರಿಕರಣ ಪೂರ್ವಕ ಆಚರಿಸಬೇಕು. ಕರ್ತೃತ್ವ, ಭೋಕ್ತೃತ್ವ, ಸ್ವಾಮಿತ್ವಗಳ ಅಭಿಮಾನವನ್ನು ತೊರೆದು ಸಕಲ ಧರ್ಮಗಳನ್ನು ಶ್ರೀವಿಷ್ಣು ಪ್ರೀತಿಗಾಗಿ ಆಚರಿಸುವದರಿಂದ, ಕರ್ಮಗಳು ಬಂಧಕವಾಗದೆ, ಅಕ್ಷಯ ಫಲವನ್ನು ತಂದುಕೊಡುವವು. ಹೀಗೆ ಆಚರಿಸುವ ಕರ್ಮಗಳು ನಿವೃತ್ತ ಕರ್ಮಗಳೆನಿಸಿ, ಮೋಕ್ಷಕ್ಕೆ ಸಾಧನಗಳಾಗುವವು. ಕೇವಲ ಭಾಗವತ ಧರ್ಮಗಳನ್ನು ಆಚರಿಸುವದರಿಂದ ಒದಗುವ ಜ್ಞಾನದ ದ್ವಾರಾ ಮೋಕ್ಷ ಪ್ರಾಪ್ತಿ ಎಂಬುದನ್ನು ನೆನಪಿನಲ್ಲಿಡಬೇಕು.

ಭಾಗವತ ಧರ್ಮಗಳಲ್ಲಿಯ ಕೆಲವೊಂದು ಮಹತ್ವದ ಪ್ರಮೇಯಗಳು:-
೧) ಮೋಕ್ಷವು ತಾರತಮ್ಯೋಪೇತವಾಗಿದೆ. ೨) 'ಭಗವತ್' - ಹಾಗೂ 'ಮುಕುಂದ' ಶಬ್ದಗಳು ವಿಷ್ಣುವಾಚಕಗಳು ೩) ಜೀವ-ಪರಮಾತ್ಮರು ಅತ್ಯಂ ಭಿನ್ನರೆಂಬ 'ವಿವಿಕ್ತದೃಷ್ಟಿ' ಇರಬೇಕು. (೪) ಪ್ರಾಧಾನ್ಯತೆಯಿಂದ ಅನ್ಯದೇ ತೋಪಾಸನೆಯು ಅನಿಷ್ಟಫಲಪ್ರದ. (೫) ಮೋಕ್ಷದಲ್ಲಿ ಅಧಿಕಾರಿಗಳಿಗನುಗುಣವಾ ಆನಂದ ತಾರತಮ್ಯ. ೬) ಅಪರೋಕ್ಷದಿಂದ ಸಕಲ ಪುರುಷಾರ್ಥಗಳ ಪ್ರಾಪ್ತಿ ಯಾಗುವದರಿಂದ, ಉಳಿದ ವಿಷಯಗಳನ್ನು ಭಗವತ್ ಸೇವೆಯೆಂದು ನಿಷ್ಕಾಮ ವಾಗಿ ಮಾಡಬೇಕು. ೭) ಸ್ಥೂಲ ಹಾಗೂ ಸೂಕ್ಷ್ಮ ರೂಪಗಳ ಉಪಾಸನೆಯು ಧ್ಯಾನ, ನಮನ, ಸ್ತೋತ್ರ, ಪ್ರಾರ್ಥನೆ ಇವು ಉಪಾಸನೆಗೆ ನಿಕಟವಾದ ಅಂ ಗಳು. ೮) ಭಕ್ತರ ಪೂಜೆಯನ್ನೇ ಪರಮಾತ್ಮನು ಸ್ವೀಕರಿಸುವನು. ೯) ಸವ ಶಬ್ದಗಳೂ ಭಗವದ್ವಾಚಕಗಳು, ಅವುಗಳನ್ನು ಅನ್ಯತ್ರ ಬಳಸದಿರುವದೇ 'ಮೌನ (೧೦) ಶಮದಮಾದಿಗಳು (ವೈರಾಗ್ಯ), ಸಚ್ಛಾಸ್ತ್ರಾಭ್ಯಾಸ, ಭಗವನ್ಮಹಿಮೆಯ ಜ್ಞಾನ, ಭಗವದ್ಧ್ಯಾನ, ಪೂಜಾ, ನಮನ, ಸ್ತೋತ್ರ, ಪ್ರಾರ್ಥನೆ-ಎಂಬ ಷಡಂಗ ಸೇವಾಚರಣೆ-ಇತ್ಯಾದಿಗಳು-'ಧರ್ಮೋಪದೇಶ ಪ್ರಕರಣದಲ್ಲಿ ಸಮಾವೇಶವಾಗಿವೆ

ಬಿಂಬೋಪಾಸನೆಗೆ ಆವಶ್ಯವಾದ ಸಾಧನಗಳನ್ನು ವಿವರಿಸಿ,-ಇನ್ನು ಬಿಂಬ ರೂಪ, ಅದರಸ್ಥಾನ, ಉಪಾಸನೆ, ಇವುಗಳನ್ನು 'ಬಿಂಬೋಪಾಸನಾ'. ಪ್ರಕ ಣದಲ್ಲಿ ಹೇಳುವರು. ಕೇವಲ ಶ್ರೀಹರಿಪಾದಾಂಬುಜೋಪಾಸನೆಯಿಂದ ನೇರವಾ ದುಃಖದ ನಿವೃತ್ತಿಯಾಗುವದಿಲ್ಲ. ಅದರಿಂದ ವಿರಕ್ತಿ, ಜ್ಞಾನ, ಭಕ್ತಿಗಳ (ಪ್ರತಿ ತುತ್ತಿಗೆ ಹಸಿವೆಯುಶಾಂತಿ, ತುಷ್ಟಿ, ಪುಷ್ಟಿಗಳು ಏಕಕಾಲಕ್ಕೆ ಉಂಟಾ ಗುವಂತೆ, ಹೆಚ್ಚುತ್ತ, ತದ್ವಾರಾ ದುಃಖನಿವೃತ್ತಿಯೆಂಬುದನ್ನು ಸ್ಪಷ್ಟಗೊ ಸಿದ್ದಾರೆ). ಅದುಕೂಡ ತತ್‌ಕ್ಷಣವಲ್ಲ, ಕ್ರಮೇಣವಾಗಿ.

ಬಿಂಬೋಪಾಸನೆಯ ಮಹತ್ವವನ್ನು ಹೇಳಿ, ಬಿಂಬದ ರೂಪದ ಬಗ್ಗೆ ಹೇಳುವರು ಅನಂತ ಬ್ರಹ್ಮಾಂಡಗಳ ಸೃಷ್ಟ್ಯಾದಿಗಳಿಗೆ ಕಾರಣನು, ಸ್ವತಂತ್ರನು, ಜಾಗೃತಾದಿ ಅವಸ್ಥೆಗಳಲ್ಲಿ ಜೀವರಲ್ಲಿ ನೆಲಿಸಿ ಭೋಗಿಸುತ್ತಿದ್ದರೂ ನಿರ್ಲಿಪ್ತನು ದೇಹೇಂದ್ರಿಯಾದಿಗಳನ್ನು ಕಾರ್ಯಪ್ರವೃತ್ತ ಮಾಡುವವನು, ಅನಂತರೂಪನಾಗಿ ದ್ದರೂ, ಸುಜೀವರಿಗೆ ಮುಕ್ತಿಯನ್ನು ಕೊಡುವ ವಿಶೇಷ ರೂಪನಾದವನು,-ಈ ಬಗೆಯ ಜೀವಾಂತಸ್ಥ ಶ್ರೀವಾಸುದೇವನೇ 'ಬಿಂಬರೂಪ'.

ಬಿಂಬನ ಸ್ಥಾನವನ್ನು ಹೇಳುವರು-ಜೀವನದ ಒಳಗೂ ಹೊರಗೂ ಅಲ್ಲ. ಇಂಥದೇ ಸ್ಥಾನ ಮಾತ್ರದಲ್ಲಿ ಇರುವವನಲ್ಲ. ಜೀವನನ್ನು ಎಂದೆಂದಿಗೂ ಬಿಟ್ಟು

ಹೋಗುವವನಲ್ಲ-ಪ್ರಳಯ ಹಾಗೂ ಮೋಕ್ಷಕಾಲದಲ್ಲಿಯೂಕೂಡ. ಜೀವನ ಪ್ರತಿ ಅವಯುವದಲ್ಲಿ, ರೋಮ ರೋಮದಲ್ಲಿ, ಶಿರದಲ್ಲಿ ಶಿರನಾಗಿ, ಮುಖದಲ್ಲಿ ಮುಖ ನಾಗಿ,.........ತನ್ನ ಸಮಾನ ಆಕೃತಿಯಿಂದ ಸಚ್ಚಿದಾನಂದ ಅವಯುವಗಳಿಂದ ವ್ಯಾಪಿಸಿ, ಜೀವನ ಇಂದ್ರಿಯಗಳಿಗೆ ಪ್ರೇರಕನಾಗಿ, ಆದರೆ ತಾನು ಮಾತ್ರ ನಿರ್ಲಿಪ್ತನಾಗಿ, ಭಿನ್ನನಾಗಿ ಇದ್ದುಕೊಂಡು, ಸ್ವ-ಅವಯವಗಳಿಂದ ಭೋಗಗಳನ್ನು ಅಲೌಕಿಕವಾಗಿ ಬಿಂಬನು ಭೋಗಿಸುವವನು. ಹೆಚ್ಚಿಗೇನು? ಜೀವನಲ್ಲಿ ಸಮಗ್ರ ವ್ಯಾಪ್ತನಾಗಿರುವದೇ ಬಿಂಬಸ್ಥಾನ. ಗುರುಭಕ್ತಿ-ಗುರುಸೇವೆಗಳಿಂದಲೆ ಮಾತ್ರ ಬಿಂಬರೂಪದ ಜ್ಞಾನ. ಸ್ವಬಿಂಬರೂಪದ ಜ್ಞಾನದಿಂದ ಭಕ್ತಿಯು ಪಕ್ವವಾಗಿ, ವಾಸುದೇವನ ಪ್ರಸಾದದಿಂದ ಅಪರೋಕ್ಷ ಮತ್ತು ಮುಕ್ತಿ.

ಬಿಂಬೋಪಾಸನೆಯ ಪ್ರಕಾರವನ್ನು ಅನಂತರ ಹೇಳುವರು-'ಬಿಂಬೋಪಾಸನಾಪರಪರ್ಯಾಯ ಆತ್ಮ-ಸಮರ್ಪಣ'-ಪ್ರಕರಣದಲ್ಲಿ, ಬಿಂಬೋಪಾಸನೆ ಯೆಂದರೇನೆ ಆತ್ಮಸಮರ್ಪಣೆ. ಅದು ಎರಡುವಿಧ:- (೧) ಆತ್ಮ ಸಮರ್ಪಣೆ- (೨) ಆತ್ಮೀಯ ಸಮರ್ಪಣೆ. ಆತ್ಮೀಯ ಸಮರ್ಪಣೆಯಲ್ಲಿ (ಅ) ದ್ರವ್ಯ (ಬ) ಕ್ರಿಯಾ, (ಕ) ಗುಣ-ಗಳೆಂಬ ಮೂರು ವಿಧಗಳು. ಒಟ್ಟಾಗಿ ಈ ನಾಲ್ಕು ಬಗೆಯ ಆತ್ಮಸಮರ್ಪಣೆಯೆ ಬಿಂಬೋಪಾಸನೆ. ಆಗಾಗ್ಗೆ ಬಿಟ್ಟುಬಿಟ್ಟು ಸಮರ್ಪಿಸುವದು ಬರೀ-'ಸಮರ್ಪಣೆ'. ಸಕಲಕರ್ಮಗಳ ಅಖಂಡವಾದ ಸಮರ್ಪಣೆಯೆ ಆತ್ಮಸಮರ್ಪಣೆ'-ಅದೇ ಬಿಂಬೋಪಾಸನೆ. ಕುಚೇಲನ (ಸುದಾಮನ) ಹಿಡಿ ಅವು ಲಕ್ಕಿಯ ಸಮರ್ಪಣೆ 'ದ್ರವ್ಯಸಮರ್ಪಣೆ'ಗೆ ಉದಾಹರಣೆ, ಎಲ್ಲಕ್ರಿಯೆಗಳ ಸಮರ್ಪಣೆ 'ಕ್ರಿಯಾ ಸಮರ್ಪಣೆ, ಒಟ್ಟಾಗಿ ಸರ್ವಸ್ವದ ಸಮರ್ಪಣೆಯು ಆತ್ಮಸಮರ್ಪಣೆ. ಭಗವದರ್ಪಣಾರಹಿತವಾದ ಯಾವುದೂ ಮೋಕ್ಷಪ್ರದವಾಗದು. ಭಗವದರ್ಪಣ ಬುದ್ಧಿಯೇ ಇತಿಕರ್ತವ್ಯತಾ. ಆತ್ಮೀಯ ಸಮರ್ಪಣೆ 'ಬಹಿರಂಗದಾಸ್ಯ', ಆತ್ಮಸಮರ್ಪಣೆ 'ಅಂತರಂಗದಾಸ್ಯ'. ಪರಿವಾರದೇವತೆಗಳ, ಹಾಗೂ ಗುರುಗಳ ಪೂಜೆಯನ್ನು ಅಪ್ರಧಾನರೀತ್ಯಾಮಾಡಬೇಕು.

ಈ ರೀತಿಯ ಬಿಂಬೋಪಾಸನೆಯಿಂದ ಭಕ್ತಿಯು ಪಕ್ವವಾಗಿ, ಭಗವಂತನ ಪ್ರಸಾದದಿಂದ ಅಪರೋಕ್ಷದರ್ಶನ, ಭವಬಂಧದಿಂದ ಬಿಡುಗಡೆ-ಮೋಕ್ಷ ನಿಶ್ಚಿತವಾಗಿ ಲಭಿಸುವವು-ಪಕ್ವಭಕ್ತಿಯು ಹಾಗೂ ಪಕ್ವಭಕ್ತರ ಲಕ್ಷಣಗಳನ್ನು ಮುಂದಿನ ಎರಡು ಪ್ರಕರಣಗಳಲ್ಲಿ ಹೇಳಿರುವರು ಪಕ್ವ ಭಕ್ತಿಯಿಂದ ಸುಪ್ರೀತನಾದ ಬಿಂಬರೂಪಿ ವಾಸುದೇವನು ಅಪರೋಕ್ಷದರ್ಶನ-ಮೋಕ್ಷವನ್ನುದಯಪಾಲಿಸುವನು. ಕೆಲವು ಪಕ್ವಭಕ್ತರಲ್ಲಿ ಕಾಣಬರುವ ಲೋಕವಿಲಕ್ಷಣ ವ್ಯಾಪಾರಗಳನ್ನು ಕಂಡು,

ಅನ್ಯಥಾ ಭಾವಿಸಬಾರದು. 'ರಂಗಾ ನಿನ್ನ ಕೊಂಡಾಡುವ'.. ಎಂಬ ಕೀರ್ತ ಯಲ್ಲಿ ದಾಸವರ್ಯರು ಅಂಥವರನ್ನು ವರ್ಣಿಸಿರುವರು. ಅ-ಭಕ್ತರಾದ ಡಾಂ ಕರಲ್ಲಿಯೂ ಇಂಥ ಲಕ್ಷಣಗಳಿರಬಹುದು.

ಭಕ್ತಿಯು ಪರಿಪಕ್ವವಾಗಲು, ಚಿತ್ತಾಭಿಮಾನಿ, ಚತುರ್ಮುಖ ಬ್ರಹ್ಮಾ ತರ್ಗತ, ಚಿತ್ತನಿಯಾಮಕ ಶ್ರೀವಾಸುದೇವನು ಬಿಂಬಾಪರೋಕ್ಷವನ್ನು ಕರು ಸುವನು. ಸಾಮಾನ್ಯ ಬ್ರಹ್ಮೋಪದೇಶ ಮಾಡುವ, ದೈವವಶಾತ್ ದೊರೆಯು ಸ್ವರೂಪೋದ್ಧಾರಕ ಬಿಂಬೋಪದೇಶಕ ಗುರುಗಳು 'ಅಸಾಧಾರಣ' ಗುರುಗಳ ಲಿಂಗದೇಹ ಭಂಗವಾಗುವ ಕಾಲದಲ್ಲಿ ಜೀವನಿಗೆ ಉಪದೇಶ ಮಾಡುವ ಚತ ರ್ಮುಖ ಬ್ರಹ್ಮದೇವರ ಅಂತರ್ಯಾಮಿ ವಾಸುದೇವನು 'ಸಾಧಾರಣಗುರು ಹಾಗೂ ಆತನಿಗೆ ಅಧಿಷ್ಠಾನವಾಗಿರುವ ಬ್ರಹ್ಮದೇವನೂ 'ಸಾಧಾರಣಗುರು ವೆನಿಸುವರು. ಆದರೆ, ಶ್ರೀವಾಸುದೇವನೇ 'ಪರಮ ಮುಖ್ಯ' ಗುರು. ಅಸಾಧ ರಣ ಗುರುಗಳ ಅಂತರ್ಯಾಮಿಯಾಗಿಯೂ ಆತನೇ ಇರುವ ವಿವಕ್ಷೆಯಿಂದ 'ಗುರ್ವಾತ್ಮದೈವತಂ' ಎಂದು ಇಬ್ಬರಲ್ಲಿಯೂ ಐಕ್ಯದೃಷ್ಟಿಯಿಂದ ಹೇಳಿದೆ.

ದಿವ್ಯ ಅಪರೋಕ್ಷ ದರ್ಶನವು ಸಾಧಕನ ಪ್ರಾಕೃತಿಕ ಮನಸ್ಸಿಗೇನೆ ಆಗ ತ್ತದೆ. ಅಪರೋಕ್ಷ ಪ್ರಕರಣದಲ್ಲಿ ಈ ವಿಷಯದ ವಿವೇಚನೆಯಿದೆ. ಅಪರೋಕ್ಷ ದರ್ಶನದ ಬಗ್ಗೆ ಚಿಂತೆ ಸಂದೇಹಗಳು ಬೇಡವೆಂಬ ಆಶ್ವಾಸನೆಯನ್ನು ಕೊಟ್ಟಿ ದ್ದಾರೆ. ಅಪರೋಕ್ಷಿಗಳಾದ ಬ್ರಹ್ಮ-ವಾಯು-ಗರುಡಾದಿಗಳು ದೇಹದಲ್ಲಿ ನೆಲೆ ಶ್ರೀಶನ ಆಜ್ಞೆಯಂತೆ ಆತನ ಸಂಕಲ್ಪಾನುಸಾರವಾಗಿ ಉಪಾಸಕನಿಂದ ಸಾಧ ವನ್ನು ಮಾಡಿಸುತ್ತಾರೆ. ಅಪರೋಕ್ಷ ದರ್ಶನದ ಬಹುಭಾಗ ಫಲವು ಈ ದೇವ ಗಳಿಗೆ ಸಲ್ಲುವದು.

ಕಲಿಯುಗದಲ್ಲಿ ಇಂಥ ಉಪಾಸನೆಯು ಸಾಧ್ಯವಿಲ್ಲದ ದುರ್ಬಲ ಜನರಿಗೆ, ಕೃಷ್ಣಕಥಾಶ್ರವಣ, ಕಥನ, ಸಂಕೀರ್ತನಾದಿಗಳಿಂದಲೇ ಭಗವಂತನ ಪ್ರೀತಿಯನ್ನು ಸಂಪಾದಿಸಬಹುದು. ಎಂದು 'ನಾಮ ಪ್ರಶಂಸಾ ಪ್ರಕರಣ'ದಲ್ಲಿ ಹೇಳಿದ್ದಾರೆ. ಇಂ ಅಶಕ್ತರು ಕನಿಷ್ಠ ಭಗವದ್ಗುಣ ರೂಪ ಕ್ರಿಯೆಗಳ ಸಂಕೀರ್ತನವನ್ನಾದರೂ ಸಾ ಸಬೇಕು. ಅದರಿಂದ ಜ್ಞಾನಭಕ್ತಿ ವೈರಾಗ್ಯಗಳ ದಾರ್ಢ್ಯವು ಹೆಚ್ಚಿ ಬಿಂಬೋಪ ಸನೆಯನ್ನು ಆಚರಿಸಲು ಅವರು ಶಕ್ತರಾಗುವರು. ನಾಮ ಸಂಕೀರ್ತನೆಯು ಸುಲಭವೆಂದು ತೋರಿದರೂ, ಎಲ್ಲರಿಗೂ ಅದರಲ್ಲಿ ಆಸಕ್ತಿ ಹುಟ್ಟುವದಿಲ್ಲ. ಜನ್ಮಾ ತರಗಳಲ್ಲಿ ಮಹಾತ್ಮರ ಪಾದ-ಸೇವಾದಿಗಳಿಂದ ಭಾಗವತ ಧರ್ಮಾನುಷ್ಠಾನದಲ್ಲಿ ಶ್ರದ್ಧೆ ಆಸಕ್ತಿ ಹುಟ್ಟಿದವರಿಗೆ ಮಾತ್ರ ಶ್ರೀ ಹರಿನಾಮ ಸಂಕೀರ್ತನದಲ್ಲಿ ಮನಸ್ಸು

ನೆಲಿಸುವದು. ಎಲ್ಲರಿಗೂ ಅಲ್ಲ. ನಾಮ ಸಂಕೀರ್ತನವನ್ನು ಮಾಡದಿರುವವನ ಜನ್ಮವು ವ್ಯರ್ಥ. ಅಸಾರ್ಥಕ. ಭಕ್ತಿಯಿಂದ ಮಾಡುವ ಸಂಕೀರ್ತನೆಯಿಂದ ಯಮ ದೂತರ- ನರಕದ- ಭಯವು ತಪ್ಪುವದು. ಕಲಿಯುಗದಲ್ಲಿ ಅದೇ ತಾರಕವಾಗಿದೆ.

'ಗುರುದಕ್ಷಿಣೆ'ಯೆಂಬ ಕೊನೆಯ ಪ್ರಕರಣದಲ್ಲಿ, ಸಾಧಕನು ತನ್ನ ಸ್ವರೂಪೋದ್ಧಾರಕನಾದ ಗುರುಗಳಿಗೆ ಅರ್ಪಿಸಬೇಕಾದ ಗುರುದಕ್ಷಿಣೆಯ ಪರಿಯನ್ನು ಹೇಳಿರುವರು. ದೈವವಶಾತ್ ದೊರೆಯುವ ಇಂಥ (ಅಸಾಧಾರಣ) ಗುರು ನಿತ್ಯ ನಿರಪೇಕ್ಷನು, ಶ್ರೀಹರಿಪಾದಾಬ್ಜರತಿಯನ್ನುಳಿದು ಅನ್ಯಾಪೇಕ್ಷೆಯಿಲ್ಲದವನು, ಅದ್ದರಿಂದ ಇಂಥ ಗುರುಗಳಿಗೆ ತನ್ನ ಸಕಲ ಕರ್ಮಗಳನ್ನು ಗುರ್ವಂತರ್ಗತ ಬಿಂಬ ರೂಪಿ ಶ್ರೀವಾಸುದೇವನಲ್ಲಿ ಶುದ್ಧಮನಸ್ಸಿನಿಂದ 'ಆತ್ಮಸಮರ್ಪಣೆ'ಯಾಗಿ ಅರ್ಪಿಸುವದೇ ಶ್ರೇಷ್ಠ ಗುರುದಕ್ಷಿಣೆ. ಅದರಿಂದ ಗುರುಗಳೂ ಪ್ರಸನ್ನರಾಗುವರು. ಆತ್ಮೋದ್ಧಾರವೂ ಸಾಧಿಸುವದು.

ಫಲಶ್ರುತಿಯಲ್ಲಿ (ಉಪಸಂಹಾರದ ಕೊನೆಯ ಪ್ರಕರಣದಲ್ಲಿ) ವ್ಯಾಸಪುತ್ರ ಶ್ರೀಶುಕರಿಂದ ನಿರೂಪಿತವಾದ ಭಾಗವತಶಾಸ್ತ್ರವನ್ನು ಪುನಃಪುನಃ ಶ್ರವಣ ಮಾಡಬೇಕು. ಇತರರಿಗೆ ಶ್ರವಣ ಮಾಡಿಸಬೇಕು. ಅದರಂತೆಯೇ ನಡೆಯುವಂತೆ ಯೋಜಿಸಬೇಕು. ಹೀಗೆ ಮಾಡುವದರಿಂದ ಭಗವದ್ಭಕ್ತನ ಸಕಲ ಪಾಪಗಳೂ ನಾಶಹೊಂದಿ. ಆತನ ಮನಸ್ಸು ಬಿಂಬರೂಪೀ ಶ್ರೀಹರಿಯಲ್ಲಿಯೆ 'ರತಿ' (ಆಸಕ್ತಿ) ಅನ್ಯತ್ರ 'ಅ-ರತಿ' (ಅನಾಸಕ್ತಿ-ವಿರಕ್ತಿ) ಉಳ್ಳದ್ದಾಗುತ್ತ, ಆತನಿಗೆ ಕ್ರಮೇಣ ಪ್ರಶಸ್ತ ವೈರಾಗ್ಯ ಜ್ಞಾನ ಭಕ್ತಿದ್ವಾರಾ, ಶ್ರೀಹರಿಯ ಪ್ರಸಾದದಿಂದ ಅಪರೋಕ್ಷ ಹಾಗೂ ಕೊನೆಯಲ್ಲಿ ಮೋಕ್ಷಪ್ರಾಪ್ತಿಯಾಗುವದೆಂದು, ಗ್ರಂಥಾರಂಭದಲ್ಲಿ (೬ನೇಯಶ್ಲೋಕದಲ್ಲಿ ಪರೀಕ್ಷಿತ ರಾಜನ ಪ್ರಶ್ನೆಗೆ ಶ್ರೀಶುಕರು ಸಂಕ್ಷಿಪ್ತ ಉತ್ತರದಲ್ಲಿ ಹೇಳಿದ್ದನ್ನು (ಸಂಕ್ಷೇಪ-ವಿಸ್ತಾರಾಭ್ಯಾಂ-ಎಂಬ ರೀತಿಯಿಂದ) ಈವರೆಗೆ ವಿವರಿಸಿ ಫಲಶ್ರುತಿಯನ್ನು ಹೇಳಿದ್ದಾರೆ. ಮುಂದಿನ (೩೬೬-೩೬೭) ಎರಡು ಶ್ಲೋಕಗಳಲ್ಲಿ ಗ್ರಂಥಾರಂಭದಲ್ಲಿಯ ಮಂಗಲಾಚರಣದ ಎರಡು ಶ್ಲೋಕಗಳ ಅಭಿಪ್ರಾಯವನ್ನು ವಿವರಿಸುವ, ಗ್ರಂಥ ಸಮಾಪ್ತಿಯ ನಮನವನ್ನು ಮಾಡುತ್ತಾರೆ.

ಇಂತು ಭಾಗವತದ ಸಾರಭೂತ ವಿಷಯಗಳ ಗೂಢಾರ್ಥದ ನಿರೂಪಣೆಯೆ 'ಭಾಗವತ ಸಾರೋದ್ಧಾರ' ವಾಗಿದೆ.



ಭಾಗವತ ಸಾರೋದ್ಧಾರದ ಈ ತಾತ್ಪರ್ಯವನ್ನು ಸಂಗ್ರಹಿಸುವಲ್ಲಿ ಶ್ರೀವ್ಯಾಸ್ ಹ. ಗೋ. ಡಂಬಳ ರವರ ಇದೇ ವಿಷಯದ ಬಗ್ಗೆ ಬರೆದ ಲೇಖದ ಸಹಾಯವನ್ನು ಕೃತಜ್ಞತೆಯಿಂದ ತೆಗೆದು ಕೊಂಡಿದೆ.

# ಶುದ್ಧ ಪಡೆ

| ಪುಟ | ತಪ್ಪು | ಸರಿಯಾದುದು |
|---|---|---|
| ೨ | ಭಾಗವತನ್ನು | ಭಾಗವತವನ್ನು |
| ೩ | ತತ್ವ-ಪ್ರರ್ತಕರನ್ನು | ಪ್ರವರ್ತಕರನ್ನು |
| ” | ಅಗ್ರುಗೆಚ | ಅಗ್ರೇಚ |
| ೬ | ಪ್ರಾಯೋಹವೇ | ಪ್ರಾಯೋಪವೇಶ |
| ೧೯ | ಗೌರಯುತ | ಗೌರವಯುತ |
| ೨೧ | ಸ್ಪ್ರಶಿ | ಸ್ಪರ್ಶ |
| ೨೭ | ಮಾದನಿಯು | ಮಾರ್ದನಿಯು |
| ೩೯ | ಶ್ಲೋಕ ೪೭ ದವೃತ | ದವೃತ |
| ೪೨ | ಗುಣಪೂಣ | ಗುಣಪೂರ್ಣ |
| ೫೭ | ಸೇಹ ಪಾಶ | ಸ್ನೇಹಪಾಶ |
| ” | ಶ್ಲೋಕ ೬೧ ಅಭ್ಯಕ್ಷ್ಯಮಾಣಾ | ಅಭಕ್ಷ್ಯಮಾಣಾ |
| ೫೮ | ಹಿಂಸ | ಹಿಂಸ್ರ |
| ೫೯ | ೬೬ ಪ್ರೋಕ್ಷಾಯ | ಪ್ರೋಷಾಯ |
| ” | ” ಪ್ರಮತ್ತ | ಪ್ರಮತ್ತಃ |
| ೬೦ | ತಿಳಿದುಕೊಳ್ಳುದಿದ್ದಿಲ್ಲಿ | ತಿಳಿದುಕೊಳ್ಳುವದಿಲ್ಲ |
| ” | ಅದರಿ | ಅಡರಿ |
| ” | ೬೬ ವಿದ್ಯಾಂಶ್ಚ | ವಿದ್ವಾಂಶ್ಚ |
| ” | ” ಚಾತಾಪ್ಯ | ಚಾಥಾಪ್ಯ |
| ೬೪ | ದುಃಕ್ಕೆ | ದುಃಖಕ್ಕೆ |
| ೬೩ | ೮೨ ತ್ವಗದರು | ತ್ವಗುದರಂ |
| ೭೪ | ದೃಡಪಡಿಸು | ಧಡಪಡಿಸಿ |
| ೭೬ | ೮೭ ಅಚಲತಾಃ | ವಿಚಾಲಿತಾಃ |
| ೭೯ | ರಹೂಗುಣ | ರಹೂಗಣ |
| ೮೦ | ಯಾವ | ಯಾದ |
| ೮೧ | ಸಮಂಜಸವಾಗುದ | ಸಮಂಜಸವಾಗದ |
| ೮೩ | ರತಿಪದಂ | ರತಿ-ಪ್ರದಂ |
| ೯೦ | ಆದಂದವು | ಆನಂದವು |
| ೯೧ | ಮೂಳೆವಾಗಿ | ಮೂಢವಾಗಿ |
| ೯೫ | ೧೦೬ ವತ್ಮನಿ | ವರ್ತ್ಮನಿ |
| ೯೮ | ೧೦೯ ಯಶದ್ | ಯದ್ |
| ೧೦೩ | ೧೧೫ ಗಹಾಶ್ರಯಃ | ಗುಹಾಶ್ರ |
| ೧೦೮ | ಶುದ್ಧಾ | ಶ್ರದ್ಧಾ |
| ೧೦೯ | ವಿಶೇಶ | ವಿಶೇಷ |
| ೧೧೨ | ಯಯಂಚ | ಯೂಯಂಚ |
| ೧೨೪ | ೨೯ ಗುಣ್ಯೈ | ಗುಣ್ಯೈಃ |
| ೧೪೪ | ೧೪೬ ದಾನಾದಿಬಿ | ದಾನಾದಿಶ್ಚ |
| ೧೫೮ | ಬೃಹ್ಮನ | ಬ್ರಹ್ಮನ |
| ೧೫೯ | ಮೂಡ | ಕೂಡ |
| ೧೬೦ | ಚತುರ್ಭುಜಂ | ಚತುರ್ಭುಜ |
| ” | ಯತ್ವಿಜರು | ಋತ್ವಿಜರು |
| ೧೬೧ | ಸರಿಸುವಂತೆ | ಸ್ಮರಿಸುವಂ |
| ” | (ಶ್ರೀಮನ್ನಾ ಣನಿಗೆ) | ಶ್ರೀಮನ್ನಾರಾಯ |
| ೧೭೫ | ವಿಸ್ವಚೇತ್‌ಪ್ ಮಾನ್ | ವಿಸ್ವಜಿತ್‌ಪ್ರ ವ |
| ೧೮೦ | ೧೭೦ ರಜಃತತ್ವ | ರಜಃಸತ್ವ |
| ೧೮೨ | ವಿಷ್ಣೋಃ ನ್ಯಚ್ಚ | ವಿಷ್ಣೋರನ್ |
| ೧೪೭ | ಹೀಗೆ ಮಾದರೆ | ಹೀಗೆ ಮಾ |
| ೧೮೮ | ಪ್ರವೃ ಮಾರ್ಗ | ಪ್ರವೃತ್ತ |
| ೧೯೩ | ೧೯೭ 'ಅರ್ಥ' | × |
| ೨೦೭ | (ವೈದಿಕ-ನಾಸ್ತಿಕ) | (ವೈದಿಕ-ನಾ |
| ೨೧೨ | ದೊಂಚುಹಾಕಿ | ಹೊಂಚುಹಾ |
| ೨೨೩ | (ಚೀರಿನಾತೆ) | (ಚಿಗುರಿನಂತೆ |
| ” | ಬರವಣೆಯು | ಭರವಸೆಯು |
| ೨೩೦ | ೨೧೧ ಕ್ಷಿಣೇತ ಭದ್ರಾಣಿ | ಕ್ಷಿಣೋತ್ಯ ಭದ |
| ೨೩೬ | ಯಥೋಯಾತಂ | ಯಥೋಪಯ |
| ೨೪೨ | ಸಾಧದಃ | ಸಾಧವಃ |
| ೨೫೮ | ಯತಗಿರಃ | ಋತಗಿರಃ |

| ಪುಟ | ತಪ್ಪು | ಸರಿಯಾದುದು |
|---|---|---|
| ೭೬ | ತದು | ಇದು |
| ೩೦೦ | ಅಭ್ಯುದಯ | ಅಭ್ಯು[illegible]ಯ |
| ೩೦೨ | ೬ಕಾಕಿ | ಏಕಾಕಿ |
| ೩೧೦ | ನಿರ್ಗುಗತ್ವವನ್ನು | ನಿರ್ಗುಣತ್ವವನ್ನು |
| ೩೧೬ | ನೃಣಾಃ ವಿಪಯಯಃ | ನೃಣಾಂ ವಿಪರ್ಯಯ: |
| ೩೧೯ | ಮತಿ | ಯತಿ |
| ೩೨೭ | ಏತರ ಧಮು ? | ಏತರ ದಮು ? |
| ೩೩೧ ೨೪೧ | ವಿಷಮತಿಃ | ವಿಷಮಮತಿಃ |
| ೩೩೨ ೨೪೨ | ಧಮಃ | ಧರ್ಮಃ |
| ೩೪೨ | ದುಲಭ | ದುರ್ಲಭವಾದ |
| " ೨೫೧ | ದ್ರುಕ್ಟರಣ್ಯೈಃ | ದೃಕ್ಕರಣ್ಯೈಃ |
| ೩೪೪ " | ವಿಮೋಕ್ತಮ್ | ವಿಮೋಕ್ತುಮೀಶ |
| ೩೪೬ | ಮಾಡುವದರ | ಮಾಡುವದು |
| ೩೪೬ | ಣ ಪೊದಲು | ? |
| " | ಭೂವೇತ್ | ಭೂವೌ |
| ೩೪೮ | ಚಕ್ರಪ್ರಾಣಿ | ಚಕ್ರಪಾಣಿ |
| ೩೫೨ | ಅಪಹಾಸಕ್ಕೆ | ಅಪಹಾಸಕ್ಕೆಗುರಿ |
| ೩೫೪ ೨೫೮ | ಕಥಂಯಾಂ | ಕಥಾಯಾಂ |
| ೩೫೭ " | ತಸ್ಯೋನಿಯ | ತಸ್ಯೋಭಯ |
| ೩೫೮ ೨೬೨ | ತ್ಕಥೋದಯೆ | ಸತ್ಕಥೋದಯೆ |
| " " | ಪಾದಕಮರಿ | ಪಾದಕಮಲ |
| " ೨೬೩ | ಶ್ರೀವತ್ತು | ಶ್ರೀಮತ್ತು |
| ೩೬೦ ೨೬೬ | ಸಗಾಯತ್ಯುರ | ಪ್ರಗಾಯತ್ಯುರು |
| ೩೬೩ | ಭಗವತ್ಕದಗಳ | ಭಗವತ್ಕಥೆಗಳ |
| ೩೬೭ ೨೭೨ | ಪಾಣವೃತ್ತ್ಯಾ | ಪ್ರಾಣವೃತ್ತ್ಯಾ |
| ೩೬೮ ೨೭೩ | ಘೋಷಶ | ಷೋಡಶ |
| ೩೬೯ | ಮಾಡುವದಿನ | ಮಾಡುವದಿಲ್ಲ |
| ೩೭೪ ೨೭೭ | ಸೃಣಾಂ | ನೃಣಾಂ |
| ೩೮೧ | ಮಾಡಬೇಕ | ಸ್ಮರಣಮಾಡಬೇಕು |
| ೩೯೪ | ‘ಅಖಿಲಶಕ್ತಿ ಧತನು’ | ‘ಅಖಿಲಶಕ್ತಿ ಧೃತನು’ |
| ೪೨೩ | ದೊರೆಯುವ ದೆಂಬುದನ್ನು | ದೆರೆಯುದೆಂಬ ದನ್ನು |
| ೪೨೭ | ಕ್ರ್ಯಾಃ | ದ್ರ್ಯಾಃ |
| ೪೪೫ | ಇಲ್ಲಿ– | ಇಲ್ಲ. |
| ೪೫೧ | ಚೈತತ್ಯ | ಚೈತನ್ಯ |
| ೪೫೭ | ಜೀವನ | ಜೀವನಲ್ಲಿ |
| ೬೮೦ (ಪುಟ) | | ೪೮೦ |
| ೪.೧ ೩೩೮ | ನಾವ | ನಾಮ |
| ೪೮೨ ೩೪೦ | ಲೀಲತಾನುಭಿ: | ಲೀಲಾತನುಭಿಃ |
| ೪೮೩ | ಅಲಕ್ಷಣಗಳನ್ನು | ಆ ಲಕ್ಷಣಗಳನ್ನು |
| ೪೮೫ | ಅತ್ಯುಭಕ್ತಿಗೆ | ಅತ್ಯುಚ್ಚ ಭಕ್ತಿಗೆ |
| ೬೮೦ | | ೪೯೦ |
| ೪೯೨ | ಮಾವನು | ಮಾಡುವವನು |
| ೪೯೭-೩೪೮ | ವಥ್ನಂತಿ | ಮಥ್ನಂತಿ |
| ೫೦೦ | ದೇದತೆಗಳಿಗೂ | ದೇವತೆಗಳಿಗೂ |
| ೫೦೧-೩೫೦ | ಧ್ಯಾತರ್ಧಿಯಾ | ಧ್ಯಾತುರ್ಧಿಯಾ |
| ೫೦೭ | ನಿವಾಣೆಯ | ನಿವಾರಣೆಯು |
| ೫೧೦ | ಸಂಪಾರಣೆ | ಸಂಪಾದನೆ |
| ೫೧೦ | ಸ್ಥಾನಗಳದ | ಸ್ಥಾನಗಳಲ್ಲಿ |

